ಪೂರ್ಣಪ್ರಜ್ಞಸಂಶೋಧನಮಂದಿರ

ಭಾರತಸರ್ಕಾರದ ಮಾನವ ಸಂಪನ್ಮೂಲ ಮತ್ತು ಅಭಿವೃದ್ಧಿ ಸಚಿವಾಲಯದ,
ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದಿಂದ 'ಆದರ್ಶ ಶೋಧ ಸಂಸ್ಥೆ' ಎಂದು ಮಾನ್ಯತೆ ಪಡೆದಿರುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಶ್ರೀವಿಷ್ಣುತತ್ತ್ವವಿನಿರ್ಣಯ

ಶ್ರೀಜಯತೀರ್ಥಕೃತ ಟೀಕಾ ಸಹಿತ

(ಕನ್ನಡಾನುವಾದ)

ಅನುವಾದಕರು

ವಿ। ಬಿದರಹಳ್ಳಿ ಕೃಷ್ಣಾಚಾರ್ಯ





ಪ್ರಕಾಶಕರು :

ಪೂರ್ಣಪ್ರಜ್ಞಸಂಶೋಧನ ಮಂದಿರ

ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು - 28

2017

ಪೂರ್ಣಪ್ರಜ್ಞಸಂಶೋಧನಮಂದಿರ
ಭಾರತಸರ್ಕಾರದ ಮಾನವ ಸಂಪನ್ಮೂಲ ಮತ್ತು ಅಭಿವೃದ್ಧಿ ಸಚಿವಾಲಯದ,
ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದಿಂದ 'ಆದರ್ಶ ಶೋಧ ಸಂಸ್ಥೆ' ಎಂದು ಮಾನ್ಯತೆ ಪಡೆದಿರುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಶ್ರೀವಿಷ್ಣುತತ್ತ್ವವಿನಿರ್ಣಯ

ಶ್ರೀಜಯತೀರ್ಥಕೃತ ಟೀಕಾ ಸಹಿತ

(ಕನ್ನಡಾನುವಾದ)

ಅನುವಾದಕರು
ವಿ। ಬಿದರಹಳ್ಳಿ ಕೃಷ್ಣಾಚಾರ್ಯ

ಪ್ರಕಾಶಕರು :
ಪೂರ್ಣಪ್ರಜ್ಞ ಸಂಶೋಧನ ಮಂದಿರ
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 28

ಶ್ರೀವಿಶ್ವೇಶತೀರ್ಥಗ್ರಂಥಮಾಲಾ - 12

# ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ
# ಶ್ರೀವಿಷ್ಣುತತ್ತ್ವವಿನಿರ್ಣಯ
# ಶ್ರೀಜಯತೀರ್ಥಕೃತ ಟೀಕಾ ಸಹಿತ (ಕನ್ನಡಾನುವಾದ)

ISBN : 978-93-81275-55-9

ಅನುವಾದಕರು : ವಿ। ಬಿದರಹಳ್ಳಿ ಕೃಷ್ಣಾಚಾರ್ಯ

ಪ್ರಕಾಶಕರು : ಪೂರ್ಣಪ್ರಜ್ಞ ಸಂಶೋಧನ ಮಂದಿರ
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 28

ಮೊದಲ ಆವೃತ್ತಿ : 2017

ಪ್ರತಿಗಳು : 500



ಬೆಲೆ : ರೂ. 400

ಪುಟಗಳು : xxxii + 696

ರಕ್ಷಾಕವಚ ವಿನ್ಯಾಸ : ಶ್ರೀ ಕೆ.ಎಮ್.ಶೇಷಗಿರಿ, ಬೆಂಗಳೂರು

ಮುದ್ರಕರು : ಲಾವಣ್ಯ ಮುದ್ರಣಾಲಯ
ಬೆಂಗಳೂರು

**श्रीश्रीविश्वेशतीर्थश्रीपादाः**

**पर्यायश्रीपेजावराधोक्षजमठः,**

**जगद्गुरु श्रीमध्वाचार्यमहासंस्थानम्**

**उडुपि-५७६१०१, कर्णाटक**

**Date : 18-04-2017**

# ಅನುಗ್ರಹ ಸಂದೇಶ

ನಮ್ಮ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ನ್ಯಾಯ-ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿ, ನಮ್ಮಲ್ಲಿ ನ್ಯಾಯಸುಧಾಮಂಗಳವನ್ನು ಮಾಡಿಕೊಂಡು ಅನೇಕ ವರ್ಷಗಳ ಕಾಲ ಹೊನ್ನಾಳಿಯಲ್ಲಿ ಪಾಠ-ಪ್ರವಚನದಲ್ಲಿ ನಿರತರಾಗಿದ್ದ ವಿ। ಬಿದರಹಳ್ಳಿ ಕೃಷ್ಣಾಚಾರ್ಯರು ಇದೀಗ ವಿಷ್ಣುತತ್ವವಿನಿರ್ಣಯ ಪ್ರಕರಣಗ್ರಂಥದ ಭೇದಘಟ್ಟದ ವರೆಗೆ ಟೀಕಾಸಹಿತ ಕನ್ನಡ ಅನುವಾದವನ್ನು ಮುದ್ರಣಕ್ಕೆ ಸಿದ್ಧಪಡಿಸಿರುವುದು ನಮಗೆ ತುಂಬಾ ಸಂತಸ ನೀಡಿದೆ. ಇವರ ತಂದೆಯವರಾದ ದಿ। ಬಿದರಹಳ್ಳಿ ಶ್ರೀನಿವಾಸಾಚಾರ್ಯರು ನಮ್ಮ ಪ್ರಾತಃಸ್ಮರಣೀಯ ಗುರುಗಳಾದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರ ನೆಚ್ಚಿನ ಅಂತೇವಾಸಿಗಳಾಗಿದ್ದರು. ಶ್ರೀನಿವಾಸತೀರ್ಥರ ವಂಶಸ್ಥರಾದ ಶ್ರೀ ಶ್ರೀನಿವಾಸಾಚಾರ್ಯರು ನಾವು ಪೂರ್ಣಪ್ರಜ್ಞ ವಿದ್ಯಾಪೀಠವನ್ನು ಆರಂಭಿಸಿದ ದಿನಗಳಲ್ಲಿ ಇಲ್ಲಿ ಅಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿದ್ದರು. ಅವರ ಹೆಚ್ಚಿನ ಸಮಯವನ್ನು ಪಾಠ-ಪ್ರವಚನದಲ್ಲಿ ವಿನಿಯೋಗಿಸಿದ ಸದಾಚಾರನಿಷ್ಠರು ಇವರಾಗಿದ್ದರು. ಇವರಂತೆ ಇವರ ಚಿರಂಜೀವಿಯಾದ ಬಿದರಹಳ್ಳಿ ಕೃಷ್ಣಾಚಾರ್ಯರೂ ಕೂಡ ಆಚಾರನಿಷ್ಠರಾಗಿ ಪಾಠ-ಪ್ರವಚನಗಳ ಜೊತೆಗೆ ಕಠಿನವಾದ ಶಾಸ್ತ್ರೀಯ ಗ್ರಂಥಗಳ ಅನುವಾದದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ನಮಗೆ ಹೆಚ್ಚಿನ ಆನಂದವನ್ನು ನೀಡಿದೆ.

ಪ್ರಕೃತ ಇವರು ನಮ್ಮ ಆದೇಶದಂತೆ ಪೂರ್ಣಪ್ರಜ್ಞ ಸಂಶೋಧನ ಮಂದಿರದಲ್ಲಿ ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಹದಿನೆಂಟು ಪುರಾಣಗಳ

ವಿಶ್ವಕೋಶವನ್ನು ಸಿದ್ಧಪಡಿಸುವುದರಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದರ ಜೊತೆಗೆ, ಪಾರ್ಥನಂತೆ ಪ್ರತಿವಾದಿಭಯಂಕರವಾದ ವಿಷ್ಣುತತ್ತ್ವವಿನಿರ್ಣಯ ಗ್ರಂಥವನ್ನು ಅನುವಾದ ಮಾಡಿರುವುದು ನಮಗೆ ಹೆಚ್ಚಿನ ಸಂತಸ ನೀಡಿದೆ.

ಇವರ ಅನುವಾದವನ್ನು ಅಲ್ಲಲ್ಲಿ ಗಮನಿಸಿದ್ದೇವೆ. ಸರಳವಾಗಿ ಟೀಕೆಯ ಆಶಯವನ್ನು ಸ್ಪಷ್ಟಪಡಿಸುವುದರ ಜೊತೆಗೆ ಅಗತ್ಯವಿರುವಲ್ಲಿ ಅನೇಕ ಟಿಪ್ಪಣಿಗಳ ಆಶಯವನ್ನೂ ತಮ್ಮ ಅನುವಾದದಲ್ಲಿ ಸಂಯೋಜಿಸಿದ್ದಾರೆ. ಗುರುಮುಖದಿಂದ ಶಾಸ್ತ್ರಗ್ರಂಥಗಳ ಪಾಠವನ್ನು ಕೇಳಿದ ಜಿಜ್ಞಾಸುಗಳಿಗೆ ಆ ವಿಷಯಗಳನ್ನು ಬುದ್ಧಿಯಲ್ಲಿರಿಸಿಕೊಳ್ಳಲು ಹಾಗೂ ಮನನಗೈಯಲು ಇಂತಹ ಅನುವಾದಗಳು ಅತ್ಯಂತ ಉಪಯುಕ್ತವಾಗುವುದರಲ್ಲಿ ಸಂದೇಹವಿಲ್ಲ.

ಶ್ರೀಕೃಷ್ಣಾಚಾರ್ಯರು ಇಂತಹ ಸಾರಸ್ವತಸೇವೆಯನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಸುತ್ತಾ ಆಚಾರ್ಯರ ಪ್ರೀತಿಗೆ ಪಾತ್ರರಾಗಲೆಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮದಾಚಾರ್ಯಕರಾರ್ಚಿತ ಶ್ರೀಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.

ಈ ಗ್ರಂಥಪ್ರಕಾಶನಕ್ಕೆ ಅಗತ್ಯವಿರುವ ಸಂಪನ್ಮೂಲವನ್ನು ಸಂಪೂರ್ಣವಾಗಿ ನೀಡಿದ ಕರ್ನಾಟಕ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಶ್ರೀ ವಿ. ಜಗನ್ನಾಥನ್‌ರವರ ಈ ಶಾಸ್ತ್ರಸೇವೆಯನ್ನು ತುಂಬ ಸಂತೋಷದಿಂದ ಅಭಿನಂದಿಸುತ್ತೇವೆ.

ಈ ಹೊತ್ತಗೆಯನ್ನು ಪ್ರಕಾಶಿಸುತ್ತಿರುವ ಪೂರ್ಣಪ್ರಜ್ಞ ಸಂಶೋಧನ ಮಂದಿರದಲ್ಲಿ ಸೇವೆಗೈಯುತ್ತಿರುವ ನಮ್ಮೆಲ್ಲ ಪ್ರಿಯ ಶಿಷ್ಯರನ್ನು ಈ ಸಂದರ್ಭದಲ್ಲಿ ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

**ಶ್ರೀ ಶ್ರೀವಿಶ್ವೇಶತೀರ್ಥಶ್ರೀಪಾದರು**

ಪರ್ಯಾಯ ಶ್ರೀಪೇಜಾವರ ಅಧೋಕ್ಷಜ ಮಠ, ಉಡುಪಿ

# ನಿದೇಶಕರ ನುಡಿ

ಪರಮಪೂಜ್ಯ ಗುರುಗಳಾದ ಶ್ರೀಪೇಜಾವರ ಮಠಾಧೀಶರಾದ ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರ ಅನುಗ್ರಹ ಹರಕೆಯೊಂದಿಗೆ ಹಾಗೂ ಅನೇಕ ಪೀಠಾಧೀಶರ ಅನುಗ್ರಹಸಂದೇಶದೊಂದಿಗೆ ಶ್ರೀಮದ್ ವಿಷ್ಣುತತ್ವವಿನಿರ್ಣಯ ಟೀಕಾಗ್ರಂಥದ (ಭೇದಘಟ್ಟದ ವರೆಗೆ) ಕನ್ನಡಾನುವಾದವನ್ನು ಸುಜನರ ಕರಕಮಲಗಳಿಗೆ ಅರ್ಪಿಸುತ್ತಿರುವುದು ನಮಗೆ ಮುದ ನೀಡುತ್ತಿದೆ.

ಪರಮಪೂಜ್ಯ ಗುರುಗಳಾದ ಶ್ರೀವಿಶ್ವೇಶತೀರ್ಥ ಶ್ರೀಪಾದರು ಟೀಕೆಯ ಸಾರವನ್ನು ಒಳಗೊಂಡ ವಿಷ್ಣುತತ್ವವಿನಿರ್ಣಯ ಗ್ರಂಥವನ್ನು ಕನ್ನಡದಲ್ಲಿ ಕರುಣಿಸಿರುವುದು ಜಿಜ್ಞಾಸುಗಳಿಗೆಲ್ಲ ವಿದಿತವೇ ಆಗಿದೆ. ಆಚಾರ್ಯರ ವಾಕ್ಯಗಳಿಗೆ ಸರಳ ಅನುವಾದದ ಜೊತೆಗೆ ಟೀಕಾಗ್ರಂಥದ ಸಾರವನ್ನೂ ಒಳಗೊಂಡ ಪೂಜ್ಯ ಗುರುಗಳ ಪ್ರವಚನರೂಪವಾದ ಪ್ರತಿಪ್ರಕರಣದ ಅನುವಾದವು ವಿದ್ವಾಂಸರು ಹಾಗೂ ವಿದ್ಯಾರ್ಥಿಗಳಿಗೆ ಆಯಾ ಪ್ರಕರಣದ ನಿರ್ಮಥಿತಾರ್ಥವನ್ನು ಬುದ್ಧಿಯಲ್ಲಿರಿಸಿಕೊಳ್ಳಲು ಪರಮೋಕಾರಿಯಾಗಿದೆ. ಅದನ್ನೂ ಪೂರ್ಣಪ್ರಜ್ಞ ಸಂಶೋಧನ ಮಂದಿರವು ಪ್ರಕಟಗೊಳಿಸಿದ್ದನ್ನು ಹೆಮ್ಮೆಯಿಂದ ಉಲ್ಲೇಖಿಸಬಯಸುತ್ತೇನೆ.

ಗುರುಮುಖದಿಂದ ಶಾಸ್ತ್ರಪಾಠ ವನ್ನು ಕೇಳುವ ಜಿಜ್ಞಾಸುಗಳಿಗೆ ಪ್ರತಿಯೊಂದು ಟೀಕಾಪಂಕ್ತಿಯ ಅರ್ಥವನ್ನು ಪ್ರತ್ಯೇಕಿಸಿ ತಿಳಿಯ-ಬಯಸುವವರಿಗೆ ಟೀಕಾನುವಾದದ ಅಗತ್ಯವಿದೆ. ಆ ಕಾರ್ಯವನ್ನು ಗುರುಗಳ ಕರುಣೆಯಿಂದ ವಿ। ಕೃಷ್ಣಾಚಾರ್ಯ ಬಿದರಹಳ್ಳಿಯವರು ಸಂಪನ್ನಗೊಳಿಸಿರುವುದು ಅಭಿಮಾನಾಸ್ಪದವಾಗಿದೆ.

ವಿ। ಬಿದರಹಳ್ಳಿ ಕೃಷ್ಣಾಚಾರ್ಯರು ಗುರುಗಳ ಆದೇಶದಂತೆ ಪೂರ್ಣಪ್ರಜ್ಞ ಸಂಶೋಧನ ಮಂದಿರವು ಹಮ್ಮಿಕೊಂಡ, ಕನ್ನಡದ ಕನ್ನಡಿಯಲ್ಲಿ ಸಿದ್ಧವಾಗುತ್ತಿರುವ ಪುರಾಣವಿಶ್ವಕೋಶ ಯೋಜನೆಯಲ್ಲಿ ಅದ್ವಿತೀಯ ಸೇವೆಯನ್ನು ಸಲ್ಲಿಸಿದ್ದಾರೆ. ಜೊತೆಜೊತೆಗೆ ಆಸಕ್ತ ಜಿಜ್ಞಾಸುಗಳಿಗೆ ಶ್ರೀಮನ್ನ್ಯಾಯಸುಧಾದಿ ಗ್ರಂಥಗಳ ಪಾಠ-ಪ್ರವಚನವನ್ನೂ ನಡೆಸುತ್ತಿದ್ದಾರೆ.

ಇದೀಗ ಜಿಜ್ಞಾಸುಗಳಿಗೆ ಉಪಯುಕ್ತವಾಗುವ ತತ್ವನಿರ್ಣಯ ಪ್ರಕರಣ ಗ್ರಂಥದ ಕನ್ನಡಾನುವಾದವನ್ನು ಟೀಕಾಸಹಿತವಾಗಿ ಸಿದ್ಧಪಡಿಸಿ ಪ್ರಕಾಶನಕ್ಕೆ ನೀಡಿರುವುದು ಅವಿಸ್ಮರಣೀಯವಾದ ಶಾಸ್ತ್ರಸೇವೆಯಾಗಿದೆ.

ಮಂಗಲವಾದ, ಚಾರ್ವಾಕಮತನಿರಾಸ, ವೇದಾಪೌರುಷೇಯತ್ವವಾದ ಹಾಗೂ ಸಾಕ್ಷಿಸ್ವರೂಪ ಮೊದಲಾದ ಎಲ್ಲ ಪ್ರಕರಣಗಳು ಆರಂಭವಾಗುವ ಮೊದಲು ವಿ। ಕೃಷ್ಣಾಚಾರ್ಯರು ಕೆಲವೇ ವಾಕ್ಯಗಳಲ್ಲಿ ಆ ಪ್ರಕರಣದ ಸಾರವನ್ನು ನೀಡಿರುವುದು ಈ ಹೊತ್ತಗೆಯ ವೈಶಿಷ್ಟ್ಯವಾಗಿದೆ.

ಕನ್ನಡದ ಕನ್ನಡಿಯಲ್ಲಿ ಅನುವಾದವನ್ನು ನೀಡಿರುವುದರ ಜೊತೆಗೆ ಸಂದರ್ಭೋಚಿತವಾಗಿ ಟಿಪ್ಪಣಿಗಳ ಗಂಭೀರವಿಷಯಗಳನ್ನು ಸಂಯೋಜಿಸಿರುವುದು ಚಿನ್ನಕ್ಕೆ ಪುಟವಿತ್ತಂತಾಗಿದೆ.

ಮೂಲ ಹಾಗೂ ಟೀಕಾಗ್ರಂಥಗಳಲ್ಲಿ ಉಲ್ಲಿಖಿತವಾದ ಪ್ರಮಾಣಗಳ ಸಮರ್ಪಕ ವಿವರಣೆಯನ್ನು ನೀಡಿರುವುದು ಜಿಜ್ಞಾಸುಗಳಿಗೆ ಉಪಕಾರಕ-ವಾಗಿದೆ.

ಟೀಕಾವಾಕ್ಯದಲ್ಲಿ ಅಗತ್ಯವಿರುವ ವಿವರಣೆಗಳನ್ನು ಅಡಿಟಿಪ್ಪಣಿಗಳಲ್ಲಿ ವಿವರಿಸಿ ಟೀಕಾಚಾರ್ಯರ ಆಶಯವನ್ನು ಸ್ಫುಟಪಡಿಸಿರುವುದು ವಿಸ್ತಾರವಾಗಿ ತಿಳಿಯಬಯಸುವವರಿಗೆ ಆನುಕೂಲ್ಯವನ್ನು ಕಲ್ಪಿಸಿದೆ.

ವಿ। ಕೃಷ್ಣಾಚಾರ್ಯರು ಅವರ ತಂದೆಯವರಾದ ಬಿದರಹಳ್ಳಿ ಶ್ರೀನಿವಾಸಾಚಾರ್ಯರಂತೆ ಕರ್ಮಠರೂ ಹಾಗೂ ನಿರಂತರ

ಶ್ರೀಮದಾಚಾರ್ಯರ ಶಾಸ್ತ್ರಗ್ರಂಥಗಳ ಪಾಠ-ಪ್ರವಚನಗಳಲ್ಲಿ ನಿರತರೂ ಆಗಿದ್ದಾರೆ.

ಪ್ರಸಕ್ತ ಈ ಸಂಪುಟವು ಭೇದಘಟ್ಟದ ವರೆಗಿನ ಅನುವಾದವನ್ನು ಒಳಗೊಂಡಿದೆ. ಗುರುಕರುಣೆಯಿಂದ ಇವರು ಸಮಗ್ರ ತತ್ತ್ವನಿರ್ಣಯ ಟೀಕೆಯ ಅನುವಾದವನ್ನು ಸಂಪೂರ್ಣಗೊಳಿಸಿ ಗುರುಗಳಿಗೆ ಅರ್ಪಿಸುವಂತೆ ಆಗಲಿ ಎಂದು ಗುರು-ದೇವತೆಗಳಲ್ಲಿ ಪ್ರಾರ್ಥಿಸುತ್ತೇನೆ.

ಪೂರ್ಣಪ್ರಜ್ಞ ಸಂಶೋಧನ ಮಂದಿರದ ಎಲ್ಲ ಜ್ಞಾನಕಾರ್ಯಗಳಿಗೂ ಮೂಲಸ್ಫೂರ್ತಿಯಾಗಿರುವ, ಇಲ್ಲಿರುವ ಎಲ್ಲ ವಿದ್ವಾಂಸರಿಗೆ ಬ್ರಹ್ಮವಿದ್ಯೆ ಕರುಣಿಸಿ, ವಾತ್ಸಲ್ಯದ ಮಹಾಪೂರವನ್ನು ಪರಮಪೂಜ್ಯ ಗುರುಗಳಾದ ಪೇಜಾವರ ಮಠಾಧೀಶ ಶ್ರೀವಿಶ್ವೇಶತೀರ್ಥ ಹರಿಸಿದ ಶ್ರೀಪಾದರಲ್ಲಿ ಭಕ್ತಿ-ಶ್ರದ್ಧಾ ಪೂರ್ವಕವಾದ ಅನಂತ ನಮನಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥಪ್ರಕಾಶನಕ್ಕೆ ವಾತ್ಸಲ್ಯದಿಂದ ಅನುಗ್ರಹಸಂದೇಶವನ್ನಿತ್ತು ತಮ್ಮ ವಾತ್ಸಲ್ಯವನ್ನು ಪ್ರಕಟಪಡಿಸಿದ ಎಲ್ಲ ಪೀಠಾಧೀಶರಿಗೆ ನಮ್ಮ ಹೃತ್ಪೂರ್ವಕ ಅನಂತ ಪ್ರಣಾಮಗಳು.

ನನ್ನ ನೆಚ್ಚಿನ ಮಿತ್ರರಾದ ಪಂಡಿತವರ್ಯ ಬಿದರಹಳ್ಳಿ ಕೃಷ್ಣಾಚಾರ್ಯರು ಪುರಾಣವಿಶ್ವಕೋಶದ ಹೊಣೆಗಾರಿಕೆಯ ಸಮರ್ಥ ನಿರ್ವಹಣೆಯ ಜೊತೆಗೆ ಕನ್ನಡದ ಕನ್ನಡಿಯಲ್ಲಿ ತತ್ತ್ವನಿರ್ಣಯ ಟೀಕೆಯನ್ನು ಮುದ್ರಣಕ್ಕೆ ಸಿದ್ಧಪಡಿಸಿರುವುದು ಹಾಗೂ ಅದನ್ನು ಗುರುಗಳ ಮೂಲಕ ಲೋಕಾರ್ಪಣ ಗೊಳಿಸುತ್ತಿರುವುದು ಅಭಿಮಾನದ ಸಂಗತಿಯಾಗಿದೆ. ಅವರ ಈ ಶಾಸ್ತ್ರಸೇವೆಗೆ ನನ್ನ ಆದರದ ಅಭಿನಂದನೆಗಳು ಹಾಗೂ ವಂದನೆಗಳು.

ಈ ಗ್ರಂಥಪ್ರಕಾಶನಕ್ಕೆ ಅಗತ್ಯವಿರುವ ಸಂಪೂರ್ಣ ಆರ್ಥಿಕ ವೆಚ್ಚವನ್ನು ನೀಡಿದ ಮಹನೀಯರು ಕರ್ನಾಟಕ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಶ್ರೀ ವಿ. ಜಗನ್ನಾಥನ್‌ರವರು. ಸುಸಂಸ್ಕೃತರೂ ಧರ್ಮನಿಷ್ಠರೂ ಆದ ಇವರ ಈ ಶಾಸ್ತ್ರಸೇವೆಯು ಅನುಕರಣಾರ್ಹ

ವಾದುದು. ಅವರ ಈ ವಿಶಿಷ್ಟ ಶಾಸ್ತ್ರಸೇವೆಯನ್ನು ಗೌರವ-ಆದರಗಳೊಂದಿಗೆ ಉಲ್ಲೇಖಿಸುತ್ತ ಅವರಿಗೆ ನಮ್ಮ ಸಂಸ್ಥೆಯ ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿದ ಲಾವಣ್ಯ ಮುದ್ರಣದವರಿಗೂ ಆಭಾರಿಯಾಗಿದ್ದೇವೆ.

**ಡಾ। ಎ.ವಿ. ನಾಗಸಂಪಿಗೆ**
ನಿದೇಶಕರು,
ಪೂರ್ಣಪ್ರಜ್ಞ ಸಂಶೋಧನ ಮಂದಿರ, ಬೆಂಗಳೂರು

# ನಿವೇದನೆ

ಶ್ರೀವಿಷ್ಣುತತ್ತ್ವನಿರ್ಣಯವು ಶ್ರೀಮದಾಚಾರ್ಯರ ಕೃತಿಗಳಲ್ಲಿ ಪ್ರಸಿದ್ಧವಾದ ಪುಟ್ಟಕೃತಿ. ಪಂಡಿತಾಚಾರ್ಯರು ಆಚಾರ್ಯರ ಕೃತಿಗಳನ್ನು ಸ್ತುತಿಸುವಾಗ ಈ ಗ್ರಂಥವನ್ನೂ ಕಂಠತಃ ಸ್ತುತಿಸಿರುವರು ಎನ್ನುವುದು ತಿಳಿದಸಂಗತಿ. ಪ್ರಾಚೀನ ಟೀಕಾಕಾರರಾದ ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು ಹಾಗೂ ನಾರಾಯಣಪಂಡಿತಾಚಾರ್ಯರು ತಮ್ಮ ಸೇವೆಗಳಿಂದ ಈ ಗ್ರಂಥದ ಮಹಿಮೆಯನ್ನು ವಿಶದಪಡಿಸಿರುವರು. ಶ್ರೀಜಯತೀರ್ಥರ ವಿಸ್ತೃತಟೀಕೆಯು ಇದ್ದು ನಿರಂತರ ಪಾಠಪ್ರವಚನಗಳಲ್ಲಿ ಬಳಕೆಯಲ್ಲಿದೆ.

ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ವಿಷಯ ಒಂದನ್ನು ಮಂಡಿಸಿ, ಅದನ್ನು ಯುಕ್ತಿಯಿಂದ ಜಾಲಿಸಿ ಜಾಲಿಸಿ ಮನದಟ್ಟುಮಾಡಿಕೊಡುವರು. ಮನದಟ್ಟಾದ ವಿಷಯವನ್ನು ಶ್ರುತಿಸ್ಮೃತಿಗಳಿಂದ ಮತ್ತು ಶ್ರುತಿಸ್ಮೃತಿಗಳಲ್ಲಿ ಪ್ರಸ್ತಾಪಿತವಾದ ಯುಕ್ತಿಗಳಿಂದಲೂ ಪುಷ್ಟೀಕರಿಸುವರು. **'ಕೇವಲ ಯುಕ್ತಿಯು ವಿಷಯವನ್ನು ಸಾಧಿಸಲಾರದು, ಹಾಗೆಯೇ ಯುಕ್ತಿವಿರುದ್ಧವಾದದ್ದು ಮಂಡನೆಗೆ ಅಯೋಗ್ಯವಾಗಿದೆ'** ಎನ್ನುವುದು ಆಚಾರ್ಯರ ಉಯಿಲು. ಇದನ್ನು ಈ ಗ್ರಂಥದಲ್ಲಿ ಪ್ರತಿ ಪ್ರಘಟ್ಟಗಳಲ್ಲಿ ಮನಗಾಣಬಹುದಾಗಿದೆ. ವೇದದ ಅಪೌರುಷೇಯತ್ವ, ಪ್ರಾಮಾಣ್ಯದ ಉತ್ಪತ್ತಿ ಜ್ಞಪ್ತಿಗಳಲ್ಲಿ ಸ್ವತಸ್ತ್ವ, ಈಶ್ವರನು ಆಗಮಗಳಿಂದಲೇ ವೇದ್ಯ, ಆಗಮಗಳು ಮುಖ್ಯವಾಗಿ ಆತನನ್ನೇ ತಿಳಿಸುತ್ತವೆ, ಪ್ರಮಾಣ-ಪ್ರಮೇಯಗಳ ವಿವೇಚನೆ, ಭೇದವಾಕ್ಯಗಳು ಪ್ರಬಲ, ಪ್ರಮಾಣಗಳಲ್ಲಿ ಉಪಜೀವ್ಯಪ್ರಮಾಣವು ಪ್ರಬಲ, ಪ್ರತ್ಯಕ್ಷಸಿದ್ಧವಾದದ್ದನ್ನು ಪ್ರಬಲವಾದ ಮತ್ತೊಂದು ಪ್ರತ್ಯಕ್ಷವೇ ನಿರಾಕರಿಸಲು ಸಮರ್ಥ ಹೊರತಾಗಿ ಅನ್ಯಪ್ರಮಾಣಗಳು ಪ್ರತ್ಯಕ್ಷಕ್ಕೆ ಬಾಧಕವಾಗಲಾರವು, ಭೇದವು ಆಯಾ ವಸ್ತುಸ್ವರೂಪವಾಗಿದೆ ಈ ಮುಂತಾದ ಅನೇಕ ತತ್ತ್ವಗಳನ್ನು ಉಪದೇಶಿಸಿರುತ್ತಾರೆ.

ಈ ಗ್ರಂಥಕ್ಕೆ ಸಮರ್ಥವಾದ ಟೀಕೆಯನ್ನು ಶ್ರೀಜಯತೀರ್ಥರು ರಚಿಸಿರುತ್ತಾರೆ. ಶ್ರೀಜಯತೀರ್ಥರ ಕೃತಿಗಳಲ್ಲಿ ಇದಕ್ಕೆ ವಿಶಿಷ್ಟಸ್ಥಾನವಿದೆ. ಅವರ ಶ್ರೀಮನ್ನ್ಯಾಯಸುಧೆಯ ನಂತರದ ಸ್ಥಾನವನ್ನು ಈ ಗ್ರಂಥವು ಹೊಂದಿದೆ ಎಂದರೆ ತಪ್ಪಾಗಲಾರದು. ಎಲ್ಲ ಗ್ರಂಥಗಳಂತೆ ಈ ಗ್ರಂಥದಲ್ಲೂ ಶ್ರೀಜಯತೀರ್ಥರು ವಾದವನ್ನು ಮಂಡಿಸುವಾಗ ಆಚಾರ್ಯರಿಂದ ಪೂರ್ವೀಕರ ಮತ್ತು ಅರ್ವಾಚೀನರ ಎಲ್ಲ ಪ್ರತಿವಾದಿಗಳ ವಾದಗಳನ್ನು ಪ್ರಸ್ತುತಪಡಿಸಿ ಉತ್ತರಿಸಿದ್ದಾರೆ.

ವೇದಾಪೌರುಷೇಯತ್ವದ ಸಮರ್ಥನೆಯ ಸಂದರ್ಭದಲ್ಲಿ 'ವೇದಗಳ ಕರ್ತೃವಿನ ಪ್ರಸಿದ್ಧಿಯಿಲ್ಲ,ಹಾಗಾಗಿ ಕರ್ತೃವನ್ನು ಕಲ್ಪಿಸುವುದು ತರವಲ್ಲ' ಎಂದು ವಾದವನ್ನು ಪ್ರಸ್ತಾಪಿಸಲಾಗಿದೆ. ಈ ಸಂದರ್ಭದಲ್ಲಿ 'ಕೇನಚಿತ್ ಕೃತ್ವಾ ವೇದ ಇತ್ಯುಕ್ತಂ ವೇದಸಮಮ್?- ಯಾರೋ ಒಬ್ಬನು ಗುಟ್ಟಾಗಿ ವಾಕ್ಯವೊಂದನ್ನು ರಚಿಸಿ 'ಇದು ವೇದ' ಎಂದು ಹೇಳಿದಲ್ಲಿ ಅದು ವೇದವಾಗಲು ಶಕ್ಯವೇ? ಎನ್ನುವ ಸಂದೇಹಕ್ಕೆ ಆಚಾರ್ಯರು 'ಪರಂಪರಾಭಾವಾತ್' ಎಂದು ಉತ್ತರಿಸಿರುವರು. ಆ ವಾಕ್ಯದ ಮೂಲವನ್ನು ಗವೇಷಣಮಾಡಲು, ಈ ವಾಕ್ಯಕ್ಕೆ ಅಧ್ಯಯನದ ಪರಂಪರೆಯು ಇಲ್ಲದಿರುವುದರಿಂದ ಈ ಹೊಸವಾಕ್ಯವು ವೇದವಲ್ಲ ಎಂದು ನಿಶ್ಚಿಯಸಬಹುದು ಎಂದು ಭಾವ. ಆದರೆ ಇಲ್ಲಿ ಈ ಸಂದೇಹಕ್ಕೆ ಎಡೆಯೇ ಇಲ್ಲ- 'ವೇದಗಗಳು ರಚಿತವಾದದ್ದು' ಎಂಬುವುದು ಅಪ್ರಸಿದ್ಧ, ಹೊರತಾಗಿ 'ವೇದದ ಕರ್ತೃವು ಯಾವನೋ ಇರುವನು ಆತನು ಅಪ್ರಸಿದ್ಧ' ಎಂದಲ್ಲ. ಪ್ರಕೃತದಲ್ಲಾದರೋ ಗೂಢಕರ್ತೃಕವಾಕ್ಯಕ್ಕೆ ಕರ್ತಾ ಅಪ್ರಸಿದ್ಧ. ಅಂದರೆ ಈ ವಾಕ್ಯವನ್ನು ರಚಿಸಿದ ವ್ಯಕ್ತಿಯು ಯಾರು ಎನ್ನುವುದು ತಿಳಿದಿಲ್ಲ. ಹಾಗಾದಲ್ಲಿ ಗೂಢಕರ್ತೃಕವಾಕ್ಯದಲ್ಲಿ ಕರ್ತೃಕತ್ವಪ್ರಸಿದ್ಧ್ಯಭಾವಾತ್ ಎಂಬ ಹೇತುವೇ ಇಲ್ಲದಿರಲು, ಸಂದೇಹ ಮತ್ತು ಉತ್ತರ ಎರಡೂ ಅಸಂಗತ ಎಂಬ ಸಂದೇಹಕ್ಕೆ ಅವಕಾಶವಿದೆ. ಆದುದರಿಂದ ಟೀಕೆಯಲ್ಲಿ 'ಕೇನಚಿತ್ ಕೃತ್ವಾ' ಎನ್ನುವದಕ್ಕೆ 'ಯಾರಿಂದಲೋ ರಚಿತವಾದ' ಎಂದು ಅಷ್ಟೇ ಅರ್ಥೈಸದೇ 'ಗುಟ್ಟಾಗಿ ರಚಿಸಿ,

ಅಕರ್ತೃಕವೆಂದೇ ಪ್ರಸಿದ್ಧಿಗೊಳಿಸಿದ' ಎಂದು ಅರ್ಥೈಸಲಾಗಿದೆ. ಹಾಗಾಗಿ ಸಂದೇಹಕ್ಕೆ ಅವಕಾಶವಿದೆ, ಉತ್ತರಿಸಿದ್ದು ಯೋಗ್ಯವಾಗಿದೆ. ಶ್ರೀಜಯತೀರ್ಥರ ಟೀಕೆಯ ಗುಣಗಳಲ್ಲಿ ಒಂದಾದದ್ದು ಮೂಲದ ಭಾವವನ್ನು ಹೊರಗೆಡುವುದು, ಮತ್ತು ಅದರ ಭಾವವನ್ನು ಸಮರ್ಥರೀತಿಯಲ್ಲಿ ಸಮರ್ಥಿಸುವುದು. ಈ ಗುಣವನ್ನು ಗ್ರಂಥದ ಉದ್ದಕ್ಕೂ ಕಾಣಬಹುದಾಗಿದೆ.

ಇದೇ ಸಂದರ್ಭದಲ್ಲಿಯೇ ಗಮನಿಸಬೇಕಾದ ಮತ್ತೊಂದು ಸಂಗತಿ– 'ವಶಿಷ್ಠಾದಿಗಳು ಗುರೂಪದೇಶವಿಲ್ಲದೆ ತಮ್ಮ ಯೋಗಶಕ್ತಿಯಿಂದ ಸಾಕ್ಷಾತ್ಕರಿಸಿ- ಕೊಂಡ ಮಂತ್ರಗಳಿಗೂ ಪರಂಪರೆಯು ಇಲ್ಲ, ಆಧುನಿಕರ ಕವಿತೆಗೂ ಪರಂಪರೆಯು ಇಲ್ಲ . ಈ ಕವಿತೆಗಳಂತೆ ಅವೂ ವೇದವಾಗದಿರಲಿ' ಎಂಬ ಸಂದೇಹವು ಪುನಃ ಪ್ರಾಪ್ತವಾಗಲು, ಆಚಾರ್ಯರು ಬ್ರಹ್ಮಾಂಡಪುರಾಣದ ವಾಕ್ಯವನ್ನು ಉದಾಹರಿಸಿದ್ದಾರೆ. ಆ ವಾಕ್ಯಗಳು– ಪರಂಪರೆಯಿಂದ ಸಿದ್ಧವಾದ ವೇದವಾಕ್ಯಕ್ಕೆ ಅನುಸಾರಿಯಾದುದರಿಂದ, ಮತ್ತು 'ನಾನು ಕಂಡ ವಾಕ್ಯಗಳು ವೇದಗಳೇ ಆಗಿವೆ' ಎಂದು ಆ ಮಹರ್ಷಿಯು ಹೇಳುತ್ತಿರುವುದರಿಂದಲೂ' ಎಂದು ತಿಳಿಸಿವೆ. ಆದರೆ ಸಂದೇಹವು ಪೂರ್ಣವಾಗಿ ನಿರಸಿತವಾಗಲಿಲ್ಲ. ಆಧುನಿಕನು ವೇದಾನುಸಾರಿಯಾಗಿಯೇ ಕವಿತೆಯೊಂದನ್ನು ರಚಿಸಿ 'ಇದು ವೇದವೇ ಆಗಿದೆ' ಎಂದು ಸುಳ್ಳನ್ನು ಹೇಳಿದಲ್ಲಿ, ಅಂತಹ ಕವಿತೆಗಳು ವೇದವಾಗಬಹುದೆ? ಅಥವಾ ವಶಿಷ್ಠಾದಿಗಳು ಸುಳ್ಳನ್ನು ಹೇಳಿಲ್ಲ ಎನ್ನಲು ಗಮಕವೇನು? ಎನ್ನುವ ಅತಿ ಮುಖ್ಯವಾದ ಸಂದೇಹಕ್ಕೆ ಉತ್ತರವೇನು? ಆದುದರಿಂದ ಟೀಕೆಯಲ್ಲಿ ಈ ಬ್ರಹ್ಮಾಂಡಪುರಾಣವು ಏನನ್ನು ತಿಳಿಸುತ್ತಿದೆ ಎಂದು ವಿವರಿಸಿರುವರು– ಇಲ್ಲಿ ವೇದಜ್ಞರ ಲಕ್ಷಣವನ್ನು ತಿಳಿಸಿದೆ, ನಾವೆಲ್ಲರೂ ತಿಳಿಯಬಹುದಾದ ಈ ಲಕ್ಷಣವನ್ನು ಹೊಂದಿದ ವ್ಯಕ್ತಿಯು ಸುಳ್ಳನ್ನಾಡನು. ಆಧುನಿಕ ಕವಿಯಲ್ಲಿ ಈ ಲಕ್ಷಣಗಳಿರದ ಪ್ರಯುಕ್ತ ಆತನು ಸುಳ್ಳುಗಾರ ಎಂದು ನಿಶ್ಚಯಿಸಲು ಅವಕಾಶವಿದೆ ಎಂದು ಪುರಾಣದ ವಾಕ್ಯದ ಭಾವವನ್ನು ಆವಿಷ್ಕರಿಸಲಾಗಿದೆ.

ಧರ್ಮಾದಿಗಳ ಸಿದ್ಧಿಗಾಗಿ ಅಪೌರುಷೇಯವಾದ ವಾಕ್ಯದ ಅಸ್ತಿತ್ವವು ಅನಿವಾರ್ಯ ಎಂಬುವುದು ಆಚಾರ್ಯರ ವಾದ. ಸರ್ವಜ್ಞಪುರುಷನನ್ನು

ಒಪ್ಪಿ, ಆತನ ವಚನಗಳಿಂದ ಧರ್ಮಾದಿಗಳನ್ನು ನಿಶ್ಚಯಿಸಬಹುದಲ್ಲವೇ? ಎಂದು ಅನ್ಯಮತೀಯರು ವಾದಿಸುವರು. ಆ ಸಂದರ್ಭದಲ್ಲಿ ಆಚಾರ್ಯರು ಈ ರೀತಿಯಲ್ಲಿ ಉಪದೇಶಿಸಿರುವರು 'ಅನ್ಯತ್ರಾಽದೃಷ್ಟಸ್ಯ ಸರ್ವಜ್ಞತ್ವಸ್ಯ ಕಲ್ಪನಂ.....ಕಲ್ಪನಾಗೌರವಾಪತ್ತೇಃ' ಎಂದು. ಈ ಸಂದರ್ಭದಲ್ಲಿ ಶ್ರೀಜಯತೀರ್ಥರು 'ಅನ್ಯತ್ರಾಽದೃಷ್ಟಸ್ಯ' ಎನ್ನುವದನ್ನು ಹತ್ತಾರು ಸಂದೇಹವಾರಕ ಎಂಬುವದಾಗಿ ವಿಶದಪಡಿಸುತ್ತಾ ಅನೇಕಬಗೆಯಲ್ಲಿ ವ್ಯಾಖ್ಯಾನಿಸಿರುವರು. 'ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ' ಎಂದು ತಿಳಿಸಿದ ಟೀಕಾಚಾರ್ಯರು, ಅನುವ್ಯಾಖ್ಯಾನ ಎನ್ನುವುದು ಉಪಲಕ್ಷಣ ಆಚಾರ್ಯರ ಎಲ್ಲ ಮಾತುಗಳು ಬಗೆದೆಷ್ಟು ಮಧುವನ್ನು ನೀಡುವದು ಎಂದು ಸೂಚಿಸಿರುವರು ಎಂದು ತಿಳಿಯುತ್ತದೆ. ನಮಗೆ ಅಭಿತನಾದ ವ್ಯಕ್ತಿಯಲ್ಲಿ ಸರ್ವಜ್ಞತ್ವವು ಯಾವಪ್ರಮಾಣದಿಂದ ಸಿದ್ಧವಾಗುವುದು? ಎಂದು ಪ್ರಶ್ನಿಸಿಕೊಂಡು ಯಾವಪ್ರಮಾಣಗಳೂ ಇಲ್ಲ ಎನ್ನುವುದನ್ನು 'ಅನ್ಯತ್ರಾದೃಷ್ಟಸ್ಯ' ಎನ್ನುವ ಈ ಒಂದೇ ಹೇತುವು ತಿಳಿಸಿದೆ ಎಂದು ವಿಶದಪಡಿಸಿರುವರು- ಬುದ್ಧಾದಿಗಳು ಸರ್ವಜ್ಞರು ಎನ್ನಲು ಪ್ರತ್ಯಕ್ಷವು ಪ್ರಮಾಣವಾಗದು. ಅನ್ಯತ್ರ ಅದೃಷ್ಟಸ್ಯ- ನಮ್ಮಲ್ಲಿ ಯಾರಲ್ಲಿಯೂ ಕಾಣದಿರುವ ಸರ್ವಜ್ಞತ್ವವನ್ನು, ಬುದ್ಧಾದಿಗಳಲ್ಲೂ ಕಾಣಲಾರದು. ಈ ವಿಷಯದಲ್ಲಿ ಅನುಮಾನಪ್ರಮಾಣವೂ ಇಲ್ಲ, ಅನ್ಯತ್ರ ಅದೃಷ್ಟಸ್ಯ- ಎಲ್ಲೂ ಅನುಭವಕ್ಕೆ ಬಾರದ ಸರ್ವಜ್ಞತ್ವಕ್ಕೆ ಉದಾಹರಣವೇ ಎಲ್ಲೂ ಕಾಣದಿರುವುದರಿಂದ. ಆಗಮಪ್ರಮಾಣವಿಲ್ಲ, ಅನ್ಯತ್ರ ಅದೃಷ್ಟಸ್ಯ-ನಮ್ಮ-ನಿಮ್ಮ ವಾಕ್ಯಗಳಿಂದ ಬೇರೇ ಎಲ್ಲೂ ಸಿದ್ಧವಾಗದ ಸರ್ವಜ್ಞತ್ವವನ್ನು, ಮತ್ತೊಂದು ಮಾತಿನಿಂದ ಸಾಧಿಸಲು ಆಗದು. ಉಪಮಾನಪ್ರಮಾಣವೂ ಇಲ್ಲ, 'ಅನ್ಯತ್ರ ಅದೃಷ್ಟಸ್ಯ' -ಮತ್ತೆಲ್ಲೂ ಕಾಣದಿರುವುದರಿಂದ ಉಪಮಾನದಿಂದಲೂ ಸರ್ವಜ್ಞತ್ವವನ್ನು ತಿಳಿಯಲಾಗು-ವುದಿಲ್ಲ. ಅಭಾವಪ್ರಮಾಣವೂ ಇಲ್ಲ, 'ಅನ್ಯತ್ರ ಅದೃಷ್ಟಸ್ಯ'- ಮತ್ತೆಲ್ಲೂ ಅಭಾವ ಪ್ರಾಮಾಣದಿಂದ ಭಾವಪದಾರ್ಥವು ಸಿದ್ಧವಾಗದಿರು- ವುದರಿಂದ ಭಾವಪದಾರ್ಥವಾದ ಸರ್ವಜ್ಞತ್ವವನ್ನು ತಿಳಿಯಲು ಆಗದು. ಹೀಗೆ ಸುಮಾರು

ಹದಿನೈದಕ್ಕೂ ಹೆಚ್ಚಿನ ಸಂದೇಹಗಳಿಗೆ ಈ ಒಂದೇ ವಾಕ್ಯದಿಂದ ಉತ್ತರಿಸುತ್ತಾ ಬೌದ್ಧ, ಜೈನ, ನ್ಯಾಯ ಮುಂತಾದವರ ಅಭಿಮತಗಳನ್ನು ನಿರಾಕರಿಸುವರು.

ಅನ್ವಿತಾಭಿಧಾನವಾದವನ್ನು ಮಂಡಿಸುವ ಮೀಮಾಂಸಕರು ಪ್ರಾಥಮಿಕ ವ್ಯುತ್ಪತ್ತಿಯು ಮಕ್ಕಳಿಗೆ ಹೇಗೆ ಪ್ರಾಪ್ತವಾಗುವುದು? ಎಂಬ ಜಿಜ್ಞಾಸೆಯಲ್ಲಿ, ಆ ವೃದ್ಧವ್ಯವಹಾರ, ಆ ಎಲ್ಲ ವ್ಯವಹಾರಗಳನ್ನು ಮಗುವು ಗಮನಿಸುವುದು, ಆ ಸಂದರ್ಭದಲ್ಲಿ ಅತಿಕ್ಲಿಷ್ಟವಾದದ್ದನ್ನು ಆ ಪುಟ್ಟಮಗುವು ಊಹಿಸುವುದು ಇತ್ಯಾದಿಯಾಗಿ ತಿಳಿಸಿರುತ್ತಾರೆ. ಆಗ ಶ್ರೀಜಯತೀರ್ಥರು 'ಶಬ್ದಾದ್ವಿಸ್ಮರಣ-ಶೀಲಸ್ಯ ...' ಎಂದು ಉತ್ತರಿಸುತ್ತಾರೆ. ಶಾಲೆಗಳಲ್ಲಿ ಅ- ಅರಸ, ಇ-ಇಲಿ ಎಂದು ಕಣ್ಣಿಗೆಕಾಣುವ ಸಿದ್ಧ ಪದಾರ್ಥಗಳನ್ನೇ ಅಕ್ಷರಮಾಲೆಯ ಪಾಠದಲ್ಲಿ ತಿಳಿಸಿರುವುದು ನಮ್ಮೆಲ್ಲರ ಅನುಭವದಲ್ಲಿದೆ. ಮರಗುಳಿ ಮಕ್ಕಳು ತಮಗೆ ಅನಗತ್ಯವಾದ, ಕಾಲದ ವ್ಯವಧಾನವಿರುವ ಆ ಹಿರಿಯರ ವ್ಯವಹಾರಗಳನ್ನು ಗಮನಿಸಿ ವ್ಯುತ್ಪನ್ನರಾಗುವರು ಎಂದು ಊಹಿಸುವುದು ಅವೈಜ್ಞಾನಿಕ ಎನ್ನುತ್ತಾರೆ. ಹೀಗೆಯೇ ಪ್ರತಿಯೊಂದು ವಾದವನ್ನು ತುಂಬಾ ತಾರ್ಕಿಕ ನೆಲಗಟ್ಟಿನಲ್ಲಿ ವಿಶ್ಲೇಶಿಸಿರುವರು.

ಅತಿದೀರ್ಘವಾದ ವಿಮರ್ಶೆಯು ಭೇದವಾದವು ಇಲ್ಲಿದೆ- ದೋಷಯುಕ್ತವಾದ ಅರಿವು ಅಪ್ರಮಾಣ. ಶುಕ್ತಿಯಲ್ಲಿ ರಜತವು ತೋರುವುದು ಈ ರಜತದ ಅರಿವು ದೋಷಜನ್ಯವಾದದ್ದು, ಆದ್ದರಿಂದ ಅಪ್ರಮಾಣ. ಹಾಗೆಯೇ ಪ್ರಕೃತ ಭೇದದ ಅರಿವಿನಲ್ಲೂ ಕೆಲವು ಅನುಪಪತ್ತಿಗಳಿವೆ, ಆದುದರಿಂದ ಈ ಅರಿವನ್ನೂ ಅಪ್ರಮಾಣ ಎಂದು ಒಪ್ಪುವುದೇ ಯೋಗ್ಯ ಎನ್ನವರು. 'ಘಟದಿಂದ ಪಟವು ಭಿನ್ನವಾಗಿದೆ' ಅಥವಾ 'ಘಟಪಟಗಳು ಭಿನ್ನವಾಗಿವೆ' ಹೀಗೆಯೇ ಭೇದದ ಅರಿವು ಪ್ರಾಪ್ತವಾಗುವುದು. ಘಟದಿಂದ ಪಟವು ಎಂದು ನಾವು ಉಚ್ಚರಿಸಬೇಕಾದಲ್ಲಿ ಮೊದಲು ಘಟಪಟಗಳಲ್ಲಿನ ಭೇದದ ಅರಿವು ಬೇಕು. ಅಥವಾ ಘಟಪಟಗಳು ಭಿನ್ನ ಎಂಬ ಅರಿವು ಪ್ರಾಪ್ತವಾಗುವ ಮುನ್ನ ಘಟಪಟಗಳು ಎಂಬ ಅರಿವು ಬೇಕು. ಈ ಎರಡು

ಪದಾರ್ಥಗಳನ್ನು ಪ್ರತ್ಯೇಕವಾಗಿ ನಿರ್ದೇಶಿಸಬೇಕಾದರೆ ಭೇದದ ಪರಿಚಯ ಬೇಕಲ್ಲವೆ? ಹೀಗೆ ಭೇದದ ಅರಿವು ಪ್ರಾಪ್ತವಾಗಲು ಆ ಮೊದಲೇ ಭೇದದ ಅರಿವನ್ನು ಅಪೇಕ್ಷಿಸುವುದು. ಇದನ್ನು ಶಾಸ್ತ್ರಗಳಲ್ಲಿ ಅನ್ಯೋನ್ಯಾಶ್ರಯ ಅಥವಾ ಅನವಸ್ಥಾ ಎಂಬ ದೋಷ ಎಂದೆನ್ನುವರು. ಆದುದರಿಂದ ಇದು ಅಪ್ರಾಮಾಣಿಕ. ಹೀಗೆ ಭೇದ ಸಾಮಾನ್ಯದ ಅರಿವೇ ಅಪ್ರಾಮಾಣಿಕವಾದಮೇಲೆ ಭೇದವಿಶೇಷದ ಅರಿವಾದ ಜೀವೇಶ್ವರರ ಭೇದದ ಅರಿವು ಪ್ರಾಮಾಣಿಕವಾಗಲು ಶಕ್ಯವೆ?

ಇನ್ನು 'ದ್ವಾಸುಪರ್ಣಾ..' ಇತ್ಯಾದಿಯಾಗಿ ವೇದಗಳಲ್ಲೇ ಜೀವೇಶ್ವರರ ಭೇದವು ಉಕ್ತವಾಗಿರುವಾಗ ಅಂತಹ ಭೇದವನ್ನು ಅಲ್ಲಗಳೆಯಲು ಆಗುವುದೇ? ಎಂದು ಪ್ರಶ್ನಿಸಿದಲ್ಲಿ ಉತ್ತರಿಸುವರು– ಈ ಭೇದವು ಸಾಕ್ಷಾತ್ತಾಗಿಯಾಗಲಿ, ಅರ್ಥತಃ ಆಗಲಿ ವೇದಗಳಲ್ಲಿ ಉಕ್ತವಾಗಿರಬಹುದು, ಆದರೆ ಅಂತಹ ವಾಕ್ಯಗಳನ್ನು ಅನುವಾದಕ ಎಂದು ತಿಳಿಯಬೇಕೇ ಹೊರತು, ಅದು ವೇದದ ಹೃದಯ ಎಂದು ತಿಳಿಯಬಾರದು. 'ನೇಹ ನಾನಾಸ್ತಿ ಕಿಂಚನ' ಮತ್ತು ' ಸ ಆತ್ಮಾ ತತ್ತ್ವಮಸಿ' ಇತ್ಯಾದಿವಾಕ್ಯಗಳಲ್ಲಿ ತಿಳಿಸಿರುವುದೇ ವೇದದ ಹೃದಯ ಎಂದು ತಿಳಿಯಬೇಕು. ವಿರುದ್ಧವಾದದ್ದು ಎರಡೂ ವೇದದ ಭಾವವಾಗಲಾರದು. ಒಂದು ಅಪ್ರಮಾಣವಾಗಿರಲೇ ಬೇಕು. ಇವುಗಳಲ್ಲಿ ಯಾವುದು ವೇದದ ಹೃದಯ ಎಂದು ವಿಮರ್ಶಿಸಲಾಗಿ ಐಕ್ಯವೇ ವೇದದ ಹೃದಯ ಎಂಬುವುದು ತಿಳಿಯುವುದು. ಒಂದು ಪ್ರಮಾಣಕ್ಕೆ ಪ್ರಾಮಾಣ್ಯವು ಪ್ರಾಪ್ತವಾಗಲು ಅನೇಕ ನಿಮಿತ್ತಗಳಿವೆ, ಅವುಗಳಲ್ಲಿ ಅಪೂರ್ವತಾ ಎನ್ನುವುದು ಒಂದು. ಭೇದವಾದರೋ ಪ್ರತ್ಯಕ್ಷದಿಂದಲೋ, ಅನುಮಾನದಿಂದಲೋ ತಿಳಿದ ಸಂಗತಿ. ಅದನ್ನೇ ವೇದವು ಪುನಃ ತಿಳಿಸಿದಲ್ಲಿ ವೇದಕ್ಕೆ ಅಪೂರ್ವತಾರೂಪ-ಗುಣವಿಲ್ಲದೆ, ಅನಧಿಗತಾರ್ಥಗಂತೃತ್ವರೂಪ ಪ್ರಾಮಾಣ್ಯವನ್ನು ಹೊಂದಲಾರದು ಎಂದು ಅದ್ವೈತಿಗಳು ತಮ್ಮ ವಾದವನ್ನು ಮಂಡಿಸುವರು.

ಶ್ರೀಮದಾಚಾರ್ಯರು ಉತ್ತರಿಸುತ್ತಾರೆ. ಭೇದಾದಿಗಳು ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿದ್ದರೂ 'ದ್ವಾಸುಪರ್ಣಾ' ಇತ್ಯಾದಿವಾಕ್ಯಗಳು ಅನುವಾದಕವಾಗ-

ಲಾರದು. ಅನುವಾದಕ ಎಂದು ಸೂಚಕವಾದ ಯಾವ ಶಬ್ದಗಳೂ ಈ ವಾಕ್ಯಗಳಲ್ಲಿ ಕಾಣದಿರುವುದರಿಂದ. ಹಾಗಾಗಿ 'ದ್ವಾಸುಪರ್ಣಾ' ಇತ್ಯಾದಿ ವಾಕ್ಯಗಳು ಸ್ವತಂತ್ರವಾಗಿಯೇ ಭೇದವನ್ನು ತಿಳಿಸುತ್ತಿವೆ. 'ದ್ವಾಸುಪರ್ಣಾ' ಇತ್ಯಾದಿವಾಕ್ಯಗಳು ಮತ್ತು 'ತತ್ತ್ವಮಸಿ' ಇತ್ಯಾದಿವಾಕ್ಯಗಳು ಪರಸ್ಪರ ವಿರುದ್ಧವಾಗಿ ತಿಳಿಸುತ್ತಿರುವುದರಿಂದ ಯಾವುದಾದರೂ ಒಂದಕ್ಕೆ ಅರ್ಥಾಂತರಿಸಬೇಕು. ಹಾಗಾದಲ್ಲಿ ಯಾವ ವಾಕ್ಯವನ್ನು ಅರ್ಥಾಂತರಿಸಬೇಕು? ಎಂಬ ಜಿಜ್ಞಾಸೆಯಲ್ಲಿ 'ತತ್ತ್ವಮಸಿ' ಇತ್ಯಾದಿವಾಕ್ಯಗಳ ಭಾವವನ್ನೇ ಬೇರೆ ರೀತಿಯಾಗಿ ಹೇಳುವುದು ಯುಕ್ತ. 'ದ್ವಾಸುಪರ್ಣಾ' ಇತ್ಯಾದಿ ವಾಕ್ಯಗಳು ಪ್ರತ್ಯಕ್ಷಾದಿಗಳು ಸಂವಾದವನ್ನು ಹೊಂದಿರುವುದರಿಂದ. ಸಂವಾದ ರಹಿತವಾದ 'ತತ್ತ್ವಮಸಿ' ಇತ್ಯಾದಿವಾಕ್ಯಗಳು ದುರ್ಬಲವಾದ್ದರಿಂದ. ಅಪೂರ್ವತೆ (ಮತ್ತೊಂದು ಪ್ರಮಾಣವು ತಿಳಿಸದ ವಿಷಯವನ್ನು ಬೋಧಿಸುವುದು) ಎಂಬ ಗುಣವು 'ತತ್ತ್ವಮಸಿ' ಇತ್ಯಾದಿವಾಕ್ಯಗಳಲ್ಲಿದೆ. ಹಾಗಾಗಿ 'ತತ್ತ್ವಮಸಿ' ಇತ್ಯಾದಿಗಳೇ ಪ್ರಬಲ, ಅಪೂರ್ವತೆಯಿಲ್ಲದ 'ದ್ವಾಸುಪರ್ಣಾ' ಇತ್ಯಾದಿಗಳು ದುರ್ಬಲ ಎಂದೆನ್ನುವುದು ತರವಲ್ಲ. ಕೇವಲ ಅಪೂರ್ವತೆಯನ್ನೇ ಗುಣ ಎಂದು ಪರಿಗಣಿಸಿದಲ್ಲಿ 'ಅಸತಃ ಸದಜಾಯತ' ಇತ್ಯಾದಿವಾಕ್ಯಗಳೂ ಪ್ರಬಲ ಎಂದು ಒಪ್ಪಿ, ಈ ಜಗವು ಶೂನ್ಯದಿಂದ ಉತ್ಪನ್ನವಾಯಿತು ಎಂದು ಒಪ್ಪಬೇಕಾದೀತು. ಈ ವೇದವಾಕ್ಯದಲ್ಲೂ ಅಪೂರ್ವತೆಯು ಇರುವುದರಿಂದ. ಇಲ್ಲಿ ಅಪೂರ್ವತೆಯು ಇದ್ದರೂ ಅನೇಕ ಪ್ರಮಾಣಗಳಿಂದ ವಿರುದ್ಧವಾದ ಈ 'ಅಸತಃ ಸದಜಾಯತ' ಎನ್ನುವ ವಾಕ್ಯಕ್ಕೆ ಅರ್ಥಾಂತರಿಸುವುದಾದಲ್ಲಿ, ಪ್ರತ್ಯಕ್ಷಾದಿ ಸಕಲ ಮಾನವಿರುದ್ಧವಾದ 'ತತ್ತ್ವಮಸಿ' ಇತ್ಯಾದಿ ವಾಕ್ಯಕ್ಕೂ ಅರ್ಥಾಂತರಿಸುವುದೇ ಸೂಕ್ತ ಎನ್ನುತ್ತಾರೆ ಆಚಾರ್ಯರು.

'ಈ ಜಗವು ಮಿಥ್ಯಾ ಗೋಚರವಾದುದರಿಂದ, ಶುಕ್ತಿರಜತದಂತೆ' ಎಂದು ಅದ್ವೈತಿಗಳು ವಾದಿಸುವರು. ಮಿಥ್ಯಾ ಎಂದರೇನು? ಎಂಬ ಪ್ರಶ್ನೆಗೆ 'ಸದಸದ್ವಿಲಕ್ಷಣ' ಎಂದುತ್ತರಿಸುವರು. ಈ ಜಗದಲ್ಲಿ ಸತ್‌ಆದ ಮತ್ತು ಅಸತ್ತಾದ

ವಸ್ತುಗಳ ಅರಿವಿದೆ ಹೊರತು ಈ ಎರಡರಿಂದ ವಿಲಕ್ಷಣವಾದ ವಸ್ತುವಿನ ಅರಿವಿಲ್ಲ. ಹಾಗಾಗಿ ಈ ಅನುಮಾನಕ್ಕೆ ವಿಶೇಷಣದ- ಸಾಧ್ಯದ ಅಪ್ರಸಿದ್ಧ ಎಂದು ಶಂಕಿಸಿದಲ್ಲಿ, ಉತ್ತರಿಸುವರು ಅರ್ಥಾಪತ್ತಿಯಿಂದ ಮಿಥ್ಯಾತ್ವವು ಸಿದ್ಧವಾಗುವುದು ಎಂದು. ಅಸತ್ತಾದ ಶಶವಿಷಾಣವು ತೋರದು, ಆದರೆ ಶುಕ್ತಿಯಲ್ಲಿ ರಜತವು ತೋರುವುದು, ತೋರಿದ್ದರಿಂದ ಅದು ಶಶವಿಷಾಣದಂತೆ ಅಸತ್ತಲ್ಲ, ಸತ್ತಾದ ಬ್ರಹ್ಮನಿಗೆ ಬಾಧವಿಲ್ಲ. ಆದರೆ ಶುಕ್ತಿರಜತಕ್ಕೆ ಬಾಧವಿದೆ ಹಾಗಾಗಿ ಸತ್ತಲ್ಲ. ಸತ್ತೂ ಅಲ್ಲದ ಅಸತ್ತೂ ಅಲ್ಲದ ಈ ಶುಕ್ತಿರಜತವು ಸದಸದ್ವಿಲಕ್ಷಣ, ಅದರಂತೆ ಈ ಜಗವು ಮಿಥ್ಯಾ ಎಂದು ಅವರ ಅಭಿಮತ. ಆಚಾರ್ಯರು ಉತ್ತರಿಸುತ್ತಾರೆ- ಅಸತ್ತಿಗೆ ಭಾನವಿಲ್ಲ ಎನ್ನುವುದು ಸರಿಯಾದುದಲ್ಲ. ಶುಕ್ತಿಯಲ್ಲಿ ತೋರಿದ ರಜತವು ಅಸತ್ತಾಗಿರುವುದರಿಂದ ಅಸತ್ತಿಗೂ ಭಾನವಿದೆ ಎಂದು. ಅಥವಾ ಶುಕ್ತಿಯಲ್ಲಿ ರಜತವು ತೋರುವುದು, ಕಂಡ ವ್ಯಕ್ತಿಯು ರಜತಕ್ಕಾಗಿ ಪ್ರವೃತ್ತನಾಗುವನು. ಪ್ರವೃತ್ತನಾಗಬೇಕಾದಲ್ಲಿ ರಜತದಲ್ಲಿ ಇಲ್ಲದ ವ್ಯಾವಹಾರಿಕಸತ್ ಕಾಣಬೇಕು ತಾನೆ? ಹಾಗಾಗಿ ಅಸತ್ತಿಗೆ ಭಾನವಿಲ್ಲ ಎನ್ನುವುದು ಸರಿಯಾದ ಮಾತಾಗದು. ಆದುದರಿಂದ ಶುಕ್ತಿರಜತದಂತೆ ಈ ಜಗವು ಸದಸದ್ವಿಲಕ್ಷಣ ಎಂದು ವಾದಿಸಕೂಡದು ಎಂದು.

ಈ ವಾದದ ವಿಶ್ಲೇಷಣವು ಹೀಗಿದೆ- ಈ ಜಗದಲ್ಲಿ ಎರಡುವಿಧವಾದ ಸತ್ತನ್ನು ಒಪ್ಪಿರುವರು ಅದ್ವೈತವಾದಿಗಳು. ಒಂದು ವ್ಯಾವಹಾರಿಕಸತ್ತು, ಮತ್ತೊಂದು ಪ್ರಾತಿಭಾಸಿಕ ಸತ್ತು ಎಂದು. ಈ ಎರಡೂ ಕಣ್ಣಿಗೆ ತೋರುವವು. ಇವುಗಳಲ್ಲಿ ವ್ಯಾವಹಾರಿಕ ಸತ್ತಿಗೆ ಅರ್ಥಕ್ರಿಯಾಕಾರಿತ್ವವು ಇದೆ. ಅಂದರೆ ಈ ಪದಾರ್ಥಗಳಿಂದ ನಾವು ವ್ಯವಹರಿಸಬಹುದು. ಅದು ಈ ಪರಿದೃಶ್ಯಮಾನವಾದ ಜಗದಲ್ಲಿದೆ. ಇನ್ನೊಂದು ಪ್ರಾತಿಭಾಸಿಕಸತ್, ಇದು ಕೇವಲ ತೋರುವುದೇ ಹೊರತು ವ್ಯವಹಾರಕ್ಕೆ ಬಾರದು. ಶುಕ್ತಿರಜತಾದಿಗಳಲ್ಲಿ ಈ ಪ್ರಾತಿಭಾಸಿಕಸತ್ವವು ಇದೆ. ಆದುದರಿಂದ ಶುಕ್ತಿರಜತವು ತೋರಬಹುದು, ಅಸತ್ತಾದ ಶಶವಿಷಾಣಾದಿಗಳು ತೋರದು, ಅಸತ್ತಿಗೆ ಪ್ರತಿಭಾಸವಿಲ್ಲ ಎಂದು. ಆದರೆ 'ಇದಂ ರಜತಂ' ಎಂದು ಭ್ರಾಂತನಾದ ವ್ಯಕ್ತಿಯು ರಜತಕ್ಕಾಗಿ

ಪ್ರವೃತ್ತನಾಗುವನು. ತೋರಿದ ರಜತದಲ್ಲಿ ವ್ಯಾವಹಾರಿಕಸತ್ವ ತೋರಿದಲ್ಲಿ ಮಾತ್ರ ರಜತಾರ್ಥಿಯು ಪ್ರವೃತ್ತನಾಗುವನು. ಪ್ರಾತಿಭಾಸಿಕಸಿಕಸತ್ ಪ್ರವೃತ್ತಿಗೆ ಕಾರಣವಲ್ಲ ಹಾಗಾಗಿ. ಶುಕ್ತಿರಜತದಲ್ಲಾದರೋ ವ್ಯಾವಹಾರಿಕಸತ್ವವು ಇಲ್ಲ. ಅಸತ್ತಿಗೆ ಭಾನವಿಲ್ಲ ಎನ್ನುವುದು ಅದ್ವೈತಿಗಳ ಆಗ್ರಹ. ಈ ಪ್ರವೃತ್ತಿಗಾಗಿ ಶುಕ್ತಿರಜತದಲ್ಲಿ ವ್ಯಾವಹಾರಿಕ ಸತ್ತು ತೋರಿದೆ ಎಂದು ಒಪ್ಪಲೇಬೇಕು, ಆದರೆ ಅವರ ಸಿದ್ಧಾಂತದಂತೆ ಅಸತ್ತಿಗೆ ಭಾನವಿಲ್ಲ. ಈ ರೀತಿಯಾದ ಉಭಯಸಂಕಟವು ಅವರಿಗೆ. ಆದಕ್ಕಾಗಿ ಅವರು ಈರೀತಿಯಾಗಿ ವಾದಿಸುವರು- 'ಇದಂ ರಜತಂ' ಎಂದು ಭ್ರಮಾತ್ಮಕವಾದ ಅರಿವು. ಈ ಅರಿವಿನಲ್ಲಿ ತೋರಿದ ಇದಂ ಅಂಶದಲ್ಲಿ ವ್ಯಾವಹಾರಿಕಸತ್ವವು ಇದೆ, ರಜತಾಂಶದಲ್ಲಿ ಪ್ರಾತಿಭಾಸಿಕ ಸತ್ವವು ಇದೆ. ಇದಮಂಶದಲ್ಲಿ ಇರುವ ವ್ಯಾವಹಾರಿಕಸತ್ವವು ರಜತದಲ್ಲಿ ಆರೋಪಿತವಾಗಿದೆ, ಹಾಗಾಗಿ ವ್ಯಾವಹಾರಿಕಸತ್ವವು ತೋರಿದ್ದರಿಂದ ರಜತಾರ್ಥಿಯು ಪ್ರವೃತ್ತನಾಗುವನು ಎಂದು. ವಸ್ತುತಃ ರಜತವು ಪ್ರಾತಿಭಾಸಿಕ, ಅದರಲ್ಲಿ ವ್ಯಾವಹಾರಿಕಸತ್ವವು ಆರೋಪಿತವಾಗಿದೆ. ಆ ಆರೋಪಿತವಾದ ವ್ಯಾವಹಾರಿಕಸತ್ವವು ಪ್ರಾತಿಭಾಸಿಕ ಎಂದು ತೋರಿದಲ್ಲಿ ಪುನಃ ರಜತಾರ್ಥಿಯು ಪ್ರವೃತ್ತನಾಗಲಾರ. ಪ್ರವೃತ್ತಿಗಾಗಿ ಆ ಆರೋಪಿತವಾದ ವ್ಯಾವಹಾರಿಕಸತ್ವವು ವ್ಯಾವಹಾರಿಕ ಎಂದೇ ತೋರಬೇಕು. ಆದರೆ ಆರೋಪಿತವಾದ ವ್ಯಾವಹಾರಿಕಸತ್‌ನಲ್ಲಿ ಪ್ರಾತಿಭಾಸಿಕಸತ್ವವು ಇದೆ. ಹೀಗೆ ಆರೋಪಪರಂಪರೆ-ಯನ್ನು ಒಪ್ಪಬೇಕು, ಆದುದರಿಂದ ಅನವಸ್ಥಾ ಎಂಬ ದೋಷ ಎಂದು ಪುಟ 634ರಲ್ಲಿ ತಿಳಿಸಲಾಗಿದೆ. ಇದು ಶಾಸ್ತ್ರಪ್ರವೇಶವಿಲ್ಲದವರಿಗೆ ಸುಲಭದಲ್ಲಿ ಬುದ್ಧ್ಯಾರೂಢವಾಗದ ಸೂಕ್ಷ್ಮ ಸಂಗತಿ. ಈ ಪ್ರಮೇಯವನ್ನು ಒಂದು ಚಿತ್ರದ ಮುಖಾಂತರ ತಿಳಿಸುವ ಪ್ರಯತ್ನವನ್ನು ನಡೆಸಿರುವೆ. ಪ್ರಮೇಯದ ಅರಿವಿಗೆ ಸಹಕಾರಿಯಾದಲ್ಲಿ ನನ್ನ ಪ್ರಯತ್ನ ಸಾರ್ಥಕ. ಈ ಕೆಳಗೆ ಆವರಣದಲ್ಲಿ ತಿಳಿಸಿದ್ದು ಆರೋಪಿತ ಎಂದು, ನೇರವಾಗಿ ತಿಳಿಸಿದ್ದು ಇರುವ ಸತ್ ಎಂದು ತಿಳಿಯುವುದು. 'ವ್ಯಾ' ಎಂದರೆ ವ್ಯಾವಹಾರಿಕಸತ್ ಎಂದು, 'ಪ್ರಾ' ಅಂದರೆ ಪ್ರಾತಿಭಾಸಿಕಸತ್ ಎಂದು. ಇದರ ಮೇಲೆ ಸಂಖ್ಯೆಯಿಂದ ಸೂಚಿಸಿರುವುದು ಆರೋಪದ ಹಂತಗಳು ಎಂದು ತಿಳಿಯುವುದು.

| ವಸ್ತು | ಇರುವ ಸತ್ | ಆರೋಪಿತಸತ್ | |
|---|---|---|---|
| 1) ಶುಕ್ತಿರಜತ- | ಪ್ರಾ- | (ವ್ಯಾ) | ಅರೋಪಿಸದಿದ್ದಲ್ಲಿ ಪ್ರವೃತ್ತಿಯು ಸಂಗತವಾಗದು. |
| 2) (ವ್ಯಾ)- | ಪ್ರಾ- | (ವ್ಯಾ1) | ............,, ............. |
| 3) (ವ್ಯಾ1)- | ಪ್ರಾ- | (ವ್ಯಾ2) | ............,, ............. |
| 4) (ವ್ಯಾ2)- | ಪ್ರಾ- | (ವ್ಯಾ3) | ............,, ............. |

ಹೀಗೆ ಕಲ್ಪನಾ ಪರಂಪರೆಯನ್ನು ಒಪ್ಪಬೇಕಾದುದರಿಂದ ಅನವಸ್ಥಾ ದೋಷವು ಈ ಕಲ್ಪನೆಯಲ್ಲಿ ಎಂದು ಭಾವ. ಹೀಗೆ ಪರಮತವನ್ನು ಕೂಲಂಕಷವಾಗಿ ವಿಮರ್ಶಿಸಿ, ಸ್ವಮತದ ಸ್ಥಾಪನೆಯನ್ನು ಸಪ್ರಮಾಣವಾಗಿ ಮಾಡಿರುತ್ತಾರೆ.

ಶ್ರೀವಿಷ್ಣತತ್ವವಿನಿರ್ಣಯವನ್ನು ಕನ್ನಡದಲ್ಲಿ ಅನುವಾದಿಸಲು ಅವಕಾಶವು ಪ್ರಾಪ್ತವಾದದ್ದು ನನ್ನ ಪೂರ್ವಜನ್ಮದ ಸುಕೃತ ಎಂದೇ ಭಾವಿಸಿದ್ದೇನೆ. ನನಗೆ ಈ ಗ್ರಂಥವನ್ನು ಅನುವಾದಿಸುವ ಸಾಮರ್ಥ್ಯವಿಲ್ಲ. ಆದರೆ ನನ್ನ ಗುರುಗಳಾದ ಪೇಜಾವರ ಮಠಾಧೀಶ ಪರಮಪೂಜ್ಯ ಶ್ರೀವಿಶ್ವೇಶತೀರ್ಥ ಶ್ರೀಪಾದರು ಈಗಾಗಲೇ ಶ್ರೀವಿಷ್ಣುತತ್ವವಿನಿರ್ಣಯದ ಸಾರವನ್ನು ಸಂಗ್ರಹಿಸಿರುವುದು, ಸಕಲ ಜಿಜ್ಞಾಸುಗಳು ಅದರ ಲಾಭವನ್ನು ಹೊಂದಿರುವುದು ತಿಳಿದ ಸಂಗತಿ. ಅವರ ಈ ಕೃತಿಯು ನನಗೆ ಈ ಕರ್ಮದಲ್ಲಿ ಹಿಂಬಲವಾಗಿ ಇರುವುದನ್ನು ಮರೆಯಲು ಶಕ್ಯವೇ? ನನ್ನ ಪರಮಪೂಜ್ಯರಾದ ಗುರುಗಳು ಸರ್ವವಿಧದಲ್ಲೂ ನನಗೆ ಅನುಗ್ರಹಿಸಿರುವರು. ಮಾತಿನಲ್ಲಿ ಅವರ ಅನುಗ್ರಹ ಇಷ್ಟು ಎಂದು ಸೆರೆ ಹಿಡಿಯಲು ಆಗದು. ನನ್ನಿಂದ ಮಾಡಿಸಿದ ಈ ಅನುವಾದವನ್ನು ತಮ್ಮ ಸಂಸ್ಥೆಯಿಂದಲೇ ಪ್ರಕಟಿಸುವ ಕೃಪೆತೋರಿರುವರು. ತಮ್ಮ ಮಕ್ಕಳ ಬೆನ್ನನ್ನು ಆ ಪಾಲಕರು ತಟ್ಟದೇ ಅನ್ಯರಿಂದ ನಿರೀಕ್ಷಿಸಲಾದೀತೆ? ಎಲ್ಲರನ್ನೂ ಅಪ್ಪುವ ಉದಾರಚರಿತರಾದ ಪೂಜ್ಯರು ನನಗೆ ಅನುಗ್ರಹಿಸಿದ್ದು ಆಶ್ಚರ್ಯದ ಸಂಗತಿಯಲ್ಲ. ಇಂತಹ ಪೂಜ್ಯರ ನೆರಳಲ್ಲಿ ಬಾಳುತ್ತಿರುವುದು ನಮ್ಮ ಹಿರಿಯರ

ತಪದ ಫಲ ಎಂದೇ ಭಾವಿಸಿರುವೆ. ಈಹೊತ್ತಿಗೆಗೆ ಆಶೀರ್ವಚನವನ್ನು ಇತ್ತು ಅನುಗ್ರಹಿಸಿದ ಶ್ರೀಚರಣರಿಗೆ ಭಕ್ತಿಯುತ ನಮನಗಳ ಹೊರತಾಗಿ ಮತ್ತೇನನ್ನು ನೀಡಲಾರೆ.

ಶ್ರೀಪೂರ್ಣಪ್ರಜ್ಞಸಂಶೋಧನಮಂದಿರದ ನಿದೇಶಕರೂ, ವಿಮರ್ಶಕರೂ, ನಿರಂತರ ಶಾಸ್ತ್ರಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು, ಪ್ರಥಿತ-ಕೀರ್ತಿಶಾಲಿಗಳಾದ ಡಾ|| ಆನಂದತೀರ್ಥನಾಗಸಂಪಿಗಿಯವರು ತಮ್ಮ ಸಂಸ್ಥೆಯಿಂದ ಈ ಅನುವಾದವನ್ನು ಪ್ರಕಾಶನಗೊಳಿಸುವ ಮುಖಾಂತರ ಮಹದುಪಕಾರವನ್ನು ಮಾಡಿರುವರು, ಅವರಿಗೆ ಚಿರಋಣಿ.

ನನ್ನ ಅನುವಾದದ ಅಲ್ಪಭಾಗವನ್ನು ಗಮನಿಸಿ, ಅತಿಮೌಲ್ಯಯುತವಾದ ಮಾರ್ಗದರ್ಶನವನ್ನು ಮಾಡಿದ ವಿದ್ವಾಂಸರಾದ ಡಾ|| ಸಿ.ಹೆಚ್. ಶ್ರೀನಿವಾಸಮೂರ್ತಿಯವರಿಗೆ, ಈ ಅನುವಾದದ ಬಹುಭಾಗವನ್ನು ಪರಿಶೀಲಿಸಿದ ವಿ| ಸಿ.ಹೆಚ್. ಬದರೀನಾಥಾಚಾರ್ಯರಿಗೆ, ಕೆಲವು ಭಾಗಗಳನ್ನು ಪರಿಶೀಲಿಸಿ ಸೂಕ್ತಸಲಹೆಗಳನ್ನು ನೀಡಿದ ವಿದ್ವಾಂಸರುಗಳಾದ ಡಾ|| ರಂಗನಾಥಾಚಾರ್ಯ ಕಟ್ಟಿ, ಡಾ|| ಗುರುರಾಜಾಚಾರ್ಯ ಉಪಾಧ್ಯಾಯ, ಡಾ|| ಮಾಧವಾಚಾರ್ಯ ಪಾಂಡುರಂಗಿ, ಡಾ|| ಶ್ರೀಕಾಂತಾಚಾರ್ಯ ಬಾಯರಿ, ವಿ| ಸೀತಾರಾಮಾಚಾರ್ಯ ಬೆಮ್ಮತ್ತಿ, ಡಾ|| ಎಲ್. ಸುಧೀಂದ್ರಾಚಾರ್ಯ, ವಿ| ರಂಗಾಚಾರ್ಯ ಗಾಣಾಚಾರಿ, ವಿ| ವ್ಯಾಸಮುನಿ ಆಚಾರ್ಯ, ಡಾ|| ಧನಂಜಯಾಚಾರ್ಯ, ವಿ| ಭೀಮಸೇನಾಚಾರ್ಯ ಗುತ್ತಲ್, ವಿ| ವೇಣುಗೋಪಾಲಾಚಾರ್ಯ ಪುರೋಹಿತ್ ಈ ಎಲ್ಲ ವಿದ್ವಾಂಸರುಗಳನ್ನು ಅತ್ಯಂತ ಗೌರವದಿಂದ ಸ್ಮರಿಸುತ್ತೇನೆ.

ಸಮಗ್ರ ಕರಡನ್ನು ತಿದ್ದಿ ವಿಶಿಷ್ಟವಾಗಿ ಸಹಕರಿಸಿದ ಶ್ರೀಯುತರಾದ ಆನಂದತೀರ್ಥಾಚಾರ್ಯ ಜೋಶಿಯವರನ್ನು ವಿಶೇಷವಾಗಿ ಹರಸುತ್ತೇನೆ.

ಮುಖಪುಟವಿನ್ಯಾಸವನ್ನು ಸುಂದರವಾಗಿ ಮಾಡಿದ ಶ್ರೀ ಕೆ.ಎಂ. ಶೇಷಗಿರಿ ಇವರಿಗೆ ಧನ್ಯವಾದಗಳು.

ಡಿ.ಟಿ.ಪಿ ಕೆಲಸದಲ್ಲಿ ಸಹಾಯವನ್ನು ಮಾಡಿದ ವಿ। ವ್ಯಾಸರಾಜ ಜೋಷಿ ಮತ್ತು ಅಂಜನಾಪ್ರಸಾದರ ಉಪಕಾರವನ್ನು ಸ್ಮರಿಸುತ್ತೇನೆ.

ಈ ಪುಸ್ತಕದ ಮುದ್ರಣದ ಸಮಗ್ರ ವೆಚ್ಚವನ್ನು ಭರಿಸಿದ ಕರ್ನಾಟಕ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ಶ್ರೀಯುತರಾದ ವಿ.ಜಗನ್ನಾಥನ್ ಇವರಿಗೆ ಹರಿವಾಯುಗಳ ಅನುಗ್ರಹವು ಪೂರ್ಣಮಾನದಲ್ಲಿ ಪ್ರಾಪ್ತವಾಗಲಿ ಎಂದು ಹರಸುತ್ತೇನೆ.

ಮೊದಲು ಮೂಲ, ಅದಕ್ಕೆ ಟೀಕೆಗೆ ಅನುಗುಣವಾಗಿ ಅನುವಾದ, ನಂತರ-ದಲ್ಲಿ ಟೀಕೆ, ಟೀಕೆಯ ಸರಳ ಅನುವಾದ. ಅದರ ಅಡಿಯಲ್ಲಿ ವಿಶೇಷವಿಷಯ-ಗಳನ್ನು ಸೇರಿಸಲಾಗಿದೆ. ಪರಿಶಿಷ್ಟಭಾಗದಲ್ಲಿ ಪಾರಿಭಾಷಿಕಶಬ್ದಗಳ ವಿವರಣೆ, ಪ್ರಮಾಣಗಳ ಆಕರ ಮುಂತಾದವುಗಳನ್ನು ನೀಡಲಾಗಿದೆ. ಪಾರಿಭಾಷಿಕ ಭೂಯಿಷ್ಠವಾದ ಶಾಸ್ತ್ರಗ್ರಂಥಗಳ ಅನುವಾದ ಒಂದು ಸವಾಲೇ ಆಗಿದೆ. ಮತ್ತು ದೇಶಕ್ಕೆ ವ್ಯಕ್ತಿಗೆ ಭಾಷೆಯು ಬದಲಾಗುವುದು. ಹಾಗಾಗಿ ಈ ಅನುವಾದದ ಲಾಭವು ವಾಚಕರಿಗೆ ಎಷ್ಟರ ಮಟ್ಟಿಗೆ ಎಂದು ಊಹಿಸುವುದು ಕಷ್ಟವೇ ಆಗಿದೆ. ಬುದ್ಧ್ಯಾದಿ ಸಕಲ ಪ್ರೇರಕ ಶ್ರೀಹರಿ, ಅವನನ್ನು ಅನುಸರಿಸಿ ತತ್ತ್ವಾಭಿಮಾನಿಗಳು. ಅವರು ಅನುಗ್ರಹಿಸಿದಷ್ಟು ಸಾಧಿಸಿರುವೆ ಎಂದು ನಂಬಿರುವೆ.

ಶಾಸ್ತ್ರಗ್ರಂಥದ ಅಭ್ಯಾಸವು ಇದಂ ಪ್ರಥಮತಃ ಎಂಬುವವರನ್ನು ಉದ್ದೇಶಿಸಿ ಅನುವಾದಿಸಲಾಗಿದೆ. ಮತ್ತು ಈ ಪುಸ್ತಕದಲ್ಲಿನ ಅಡಿಟಿಪ್ಪಣಿಗಳು ಪ್ರಾಯಿಕ-ವಾಗಿ ಟಿಪ್ಪಣೀವಾಕ್ಯಗಳ ಅನುವಾದವೇ ಆಗಿವೆ. ಟೀಕಾಪಂಕ್ತಿಯನ್ನು ಅರ್ಥೈಸುವಲ್ಲಿ ಹೆಚ್ಚಿನ ಸಹಕಾರವನ್ನು ನೀಡುವವು ಎಂದು ಭಾವಿಸಿರುವೆ. ಈ ಕೃತಿಯಿಂದ ಜಿಜ್ಞಾಸು ಬಳಗಕ್ಕೆ ಕಿಂಚಿತ್ ಉಪಕಾರವಾದಲ್ಲಿ ನನ್ನ ಶ್ರಮ ಸಾರ್ಥಕ ಎಂದು ಭಾವಿಸುವೆ. ಈ ಕರ್ಮದಿಂದ ಏನಾದರೂ ಆಚಾರ್ಯರ ಸೇವೆಯಾಗಿದ್ದಲ್ಲಿ, ಆ ಪುಣ್ಯದಿಂದ ಮುಂದಿನ ಭಾಗದ ಅನುವಾದದ ಕೆಲಸವೂ ನಿರ್ವಿಘ್ನವಾಗಿ ನಡೆಯಲಿ ಎಂದು ಬಯಸುವೆ.

ಇತಿ ವಿದ್ವಜ್ಜನವಿಧೇಯ

**ವಿ। ಬಿದರಹಳ್ಳಿ ಕೃಷ್ಣಾಚಾರ್ಯ**

# ಪ್ರಘಟ್ಟಕಗಳ ಅನುಕ್ರಮಣಿಕಾ

# ಪ್ರಘಟ್ಟಕಗಳಲ್ಲಿನ ವಿಷಯಾನುಕ್ರಮಣಿಕಾ

| ವಿಷಯಗಳು | ಪುಟ ಸಂಖ್ಯೆ |
|---|---|

| ವಿಷಯಗಳು | ಪುಟ ಸಂಖ್ಯೆ |
|---|---|

★ ★ ★

ಏಕಾಕೀ ಕಿಲ ಯಶ್ಚಕ್ರೇ ಪದಂ
ಮೌಲಿಷು ವಿದ್ವಿಷಾಮ್ ।
ತತ್ವನಿರ್ಣಯಪಾರ್ಥೋಽಯಂ
ಕೇನ ನಾಮ ನ ಪೂಜ್ಯತೇ ॥

॥ ಶ್ರೀಃ ॥

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಶ್ರೀವಿಷ್ಣುತತ್ವವಿನಿರ್ಣಯ

## ಶ್ರೀಜಯತೀರ್ಥಕೃತ ಟೀಕಾ ಸಹಿತ

### ಕನ್ನಡಾನುವಾದ

### ಮಂಗಲಾಚರಣಪ್ರಕರಣಮ್

ಯಾವುದೇ ಮಂಗಲಕಾರ್ಯಾರಂಭದಲ್ಲಿ ಇಷ್ಟದೇವತೆಗಳ, ಉಪಕಾರಿಗಳ ಸ್ಮರಣೆ ಸನಾತನಧರ್ಮಿಗಳಾದ ನಮ್ಮೆಲ್ಲರ ಕರ್ತವ್ಯ , ಇದನ್ನು ಮಂಗಲಾಚರಣ ಎನ್ನುವರು . ಹಾಗೂ ಇದು ಆರಂಭವಾದ ಶುಭಕಾರ್ಯದ ಎಲ್ಲ ವಿಧವಾದ ಅಡೆ-ತಡೆಗಳ ವಾರಕ ಹಾಗೂ ಇನ್ನೂ ಅನೇಕ ಫಲಗಳು ಇವೆ ಎಂದು ತಿಳಿಸಲಾಗಿದೆ. ಈ ವಿಷಯದಲ್ಲಿ ಎಲ್ಲ ಸನಾತನಿಗಳೂ ಏಕಕಂಠರು.

**ಗ್ರಂಥಪ್ರತಿಪಾದ್ಯನಿಗೆ ನಮನ**

ಈ ಜಗವ ನಿರ್ಮಿಸಿ, ತ್ರಾಣವೀಯುವನು<br>
ಶ್ರುತಿತತಿಯನಿತ್ತು ಸುಖವ ತೋರುವನು<br>
ದುಃಖವಡಗಿಸುವ, ಕೊನೆಗೆ ಸುಖ-ಸ್ವಾಪ ನೀಡುವನು<br>
ದೇವನಿವ ಗುರು, ಸ್ವಾಮಿ, ತಂದೆ ಎಂದೆಂದು ॥ 1 ॥

**ಮನೋನಿಯಾಮಕಳಿಗೆ ನಮನ**

'ನನ್ನ ಭಕುತನ್ನೆಂದೆಂದು ಸಲಹುವೆ'<br>
ಎಂಬ ಆ ನಿನ್ನ ನುಡಿಗೆ ಮರುಳಾಗಿ ।<br>
ಬಂದ ಈ ಭಕುತಗೆ ಮತಿ ಇತ್ತು ಸಲಹಿಂದು<br>
ನತಿಯ ಹೊರತಾಗಿ ಮತ್ತೇನು ಇರದು ॥ 2 ॥

**ಶ್ರೀಮಧ್ವಗುರುವರ್ಯರಿಗೆ ನಮನ**

ನಾನೇ ಬ್ರಹ್ಮನೆಂಬ ರಕ್ಕಸರಲಡಗಿದ್ದ
ವೇದ ಸೀತೆಯ ಕಂಡ ನೀ ಹನುಮನಹುದು ।
ಧರ್ಮವೇ ಇಲ್ಲೆಂಬ ಕಡುಕೀಚಕರಾಹಿಂಡು
ಮೆಟ್ಟನಿಂತಾ ನೀ ಬಲ ಭೀಮನಹುದು ॥ 3 ॥

ಭಕ್ತಿಮಾರ್ಗವ ತೋರಿ ಸನ್ಮತಿಯನೂ ನೀಡಿ
ಮುದವಿತ್ತ ಸಜ್ಜನಕೆ ಪರಮ ಕರುಣಾಳು
ನಿನ್ನ ಮಾತೇ ಹಿತವು ನಿನ್ನ ದಾರಿಯೇ ದಾರಿ
ಶ್ರೀಪೂರ್ಣಮತಿಯೇ ಇದೋ ನಿನಗೆ ನಮನ ॥ 4 ॥

**ತತ್ತ್ವಾಭಿಮಾನಿಗಳಿಗೆ ನಮನ**

ಚಿತ್ತಾದಿತತ್ತ್ವಪತಿತತಿಗೆ ನಮಿಪೆ
ನಿಮ್ಮನುಗ್ರಹದಿ ನನ್ನ ಈ ನುಡಿಯು ।
ಹಿರಿಯರಾಭಿಮತಕೆ ಎರಗಲೆಂದೆಂದು
ಇದೇ ಎನ್ನ ಬೇಡಿಕೆ ಮತ್ತೇನು ಒಲ್ಲೆ ॥ 5 ॥

**ಜಯಮುನಿಗಳಿಗೆ ನಮನ**

ಇದಿರಿಲ್ಲ ವಾದದಲಿ ಈ ವಾದಿಮಲ್ಲನಿಗೆ
ಅಂತೆಯೇ ಕರೆದರು ಜಯತೀರ್ಥ ಎಂದು ।
ನಿನ್ನ ನಾಮವೆ ಸಕಲ ದುರಿತ ತಾರಕ ಮಂತ್ರ
ವರ್ಷಪುರ ಗುರುವರ್ಯ ಸಲಹೋ ಎಂದೆಂದು ॥ 6 ॥

ಶ್ರೀಸುಧೆಯಲ್ಲಿ ಅಣು-ಮಹತ್ತುಂಟೆ
ನಿನ್ನ ವಾಣಿಯು ಮಹತಿಗೂ ಮಹತು ।
ನಿನ್ನ ವಾಕ್‌ಶರಧಿಯ ಬಳಿ ಸಾಗಲೀ ತೊರೆಯು,
ಜಲಹೀನ ಬಲಹೀನ ನಾ ಬಲ್ಲೆ ಗುರುವೆ ॥ 7 ॥

**ಶ್ರೀರಘೂತ್ತಮತೀರ್ಥರಿಗೆ ನಮನ**

ವೇದೇಶಮುನಿಪನಾ ಪೂಜ್ಯಗುರುವರ್ಯ
ಗ್ರಂಥಕಾರರಾ ಪಡೆಯಿತ್ತ ಯತಿವರ್ಯ ।
ಟೀಕೆಯಾ ಭಾವವನು ಎನಗಿನಿತು ಅರುಹು
ಪಿನಾಕಿನೀತೀರದ ಗುರುವರ್ಯ ನಮಿಪೆ ॥ 8 ॥

**ಶ್ರೀವೇದೇಶತೀರ್ಥರಿಗೆ ನಮನ**

ಎನ್ನ ಕುಲದಾ ಹಿರಿಯ ವೇದೇಶ ಮುನಿಪ
ಎರಗುವೇ ನಿನ್ನ ಪಾದಕೋಮಲಕೆ ।
ನಿನ್ನ ಮಾತೇ ವರ್ತಿ ನಿನ್ನನುಗ್ರಹವೇ ತೈಲ
ಎಂದರಿತು ಬೆಳಗುತಿದೆ ಈ ಸಣ್ಣ ಮಿಣುಕು ॥ 9 ॥

**ಶ್ರೀರಾಘವೇಂದ್ರತೀರ್ಥರು ಮತ್ತು ವ್ಯಾಸತತ್ತ್ವಜ್ಞತೀರ್ಥರಿಗೆ ನಮನ**

ಗ್ರಂಥದಾ ಒಳಪರಿಯ ತೋರಿದಾ ಮಹಿಮರಿಗೆ
ಇಷ್ಟಪ್ರದಾತೃವಿಗೆ ಶ್ರೀರಾಘವೇಂದ್ರರಿಗೆ ।
ಶ್ರೀವ್ಯಾಸತತ್ತ್ವರಿಗೆ ಪರಮವಿರಕ್ತರಿಗೆ
ನಮಿಪೆ ಎಂದೆಂದು ದಾಸ ನಾನೆಂದು ॥ 10 ॥

**ಪರಮಗುರುಗಳಿಗೆ ನಮನ**

ವಿ- ವಿದ್ಯೆಯಲಿ ನಿನ್ನ ಸಹವರ್ತಿಯಾರು?
ದ್ಯಾ- ದ್ಯಾವಾ-ಪೃಥ್ವಿಯಲಿ ಹರಡಿಹುದು ಕೀರುತಿ ।
ಮಾ- ಮಾನ್ಯರಿಗೆ ಮಾನ್ಯನು ನನ್ನ ಈ ಗುರುವರ್ಯ
ನ್ಯ- ನ್ಯಾಸಿಗಳಿಗೆ ಮಾದರೀ ಮತ್ತಾರು ಈ ಧರೆಗೆ? ॥ 11 ॥

**ಗುರುಗಳಿಗೆ ನಮನ**

ಚಿತ್ತಕೆ ವಿತ್ತಿಯ, ಹಸ್ತಕೆ ವಿತ್ತವ
ಇತ್ತಿತ್ತು ಸಲಹಿದ ಈ ಯತಿಪತಿಯು ।
ಈತನ ಸರಿ ಮತ್ತಾರನೂ ಕಾಣೆ
ಯತಿವರ ಗುರುವರ ಸಿರಿವಿಶ್ವೇಶ ॥ 12 ॥

**ಕುಲಗುರುಪೀಠದ ಗುರುವಿಗೆ ನಮನ**

ಎನ್ನ ಕುಲಗುರುಪೀಠದಾ ಒಡೆಯ
ಅಹುದೂ ನೀ ಎಲ್ಲ ಜ್ಞಾನಿಗಳ ಒಡೆಯ ।
ಶ್ರೀಸತ್ಯಆತ್ಮರೆ ನಾ ನಿತ್ಯ ನಮಿಪೆ
ನಿಮ್ಮ ಹರಕೆಯೇ ಎನಗೆ ನಿತ್ಯ ಶ್ರೀರಕ್ಷೆ ॥ 13 ॥

**ಶ್ರೀನಾರಾಯಣಪಂಡಿತರಿಗೆ ನಮನ**

ಮೂರುಗೆದ್ದವನ ಸುತ ಆರುಗೆದ್ದವನೆ
ಮಧ್ವ-ಮಾಧವರನ್ನು ಸ್ತುತಿಸಿದಾ ಸಿದ್ಧ ।
ನಿನ್ನ ಪದದ್ವಂದಕೆ ವಂದಿಸುವೆ ಎಂದೆಂದು
ಹರಿ-ಮಧ್ವರಾ ಕರುಣೆ ಒದಗಿಸೆನಗಿನಿತು ॥ 14 ॥

**ಶ್ರೀಯಾದವಾರ್ಯರಿಗೆ ನಮನ**

ಮೃತ್ಯುಮೋಚಕ ಶ್ರೀನರಸಿಂಹ ಪೂಜಕಗೆ
ಶ್ರೀಸುಧೆಯ ತಿರುಳಿತ್ತ ಸಾಧಕಾಗ್ರಣಿಗೆ ।
ಕುಲದ ಹಿರಿಯನಿಗೆ ಹಿರಿತತ್ತ್ವವೇತ್ತೃವಿಗೆ
ಬಿಡದೆ ಆನಮಿಪೆ ಖ್ಯಾತ ಯದುಪತಿಗೆ ॥ 15 ॥

**ಶ್ರೀಶ್ರೀನಿವಾಸತೀರ್ಥರಿಗೆ ನಮನ**

ನಿನ್ನ ನಾಮವೆ ಎನಗೆ ಊರುಗೋಲಾಗಿ
ಸಲಹಿತೊ ಗುರುವೆ, ಮಹಿಮೆ ಎಂತುಂಟೊ ।
ಅತ್ರಿ-ಮಿತ್ರಾರಂತೆ ಗೋತ್ರ (ಪ್ರ)ವರ್ತಕ ನೀನು
ಎಂದೆಂದು ನಾ ನಿನ್ನ ದಾಸಾನುದಾಸ ॥ 12 ॥

**ವಾಕ್ಯಾರ್ಥವಿವೃತಿಕಾರರಿಗೆ ನಮನ**

ಶ್ರೀಕೇಶವಾರ್ಯರೇ ನಿಮಗೆ ಈ ನಮನ
ನಿಮ್ಮುಪದೇಶವು ಎಮಗಹದು ದೀವಿಗೆಯು ।

ಗ್ರಂಥದಾ ಓದುಗಗೆ ಒದಗುವಾ ಸಂದೇಹ-
ಕೆಡೆಯಿಲ್ಲದಂತೆ ಮಾಡಿರುವ ಮಹನೀಯ ॥ 13 ॥

**ಮಾತಾಪಿತೃಗಳಿಗೆ ನಮನ**

ತನು-ವಿದ್ಯೆಗಳನಿತ್ತು, ಇಳೆಯೊಳೂ ನಿಲುವಿತ್ತು
ಸಲಹಿತೆನ್ನನಾ ಶ್ರೀಪೂಜ್ಯಪಾದ
ಪಂಚಧಾ ಪಿತೃವೆನಿಪ ಆ ದಿವ್ಯ ಚರಣಕೆ
ಇದೊ ಎನ್ನ ಈ ಕು-ಸುಮದಾ ಮಾಲೆ ॥ 14 ॥

ನೀ ಬಯಸಿದೆತ್ತರವ ಏರದೀ ಹೇಡಿ
ಬಯಸಿದಾ ಎಡೆಯ ತರದ ಈ ತಿಳಿಗೇಡಿ
ನಿಮ್ಮೊಳಪರಿಯ ಅರಿತಿರುವೆ ಹೊಣೆಗೇಡಿ
ಕ್ಷಮೆಯಿರಲಿ ತಂದೆ ಹರಸು ನೀ ಎಂದೆಂದು ॥ 15 ॥

**ಶ್ರೀವಿಷ್ಣುತತ್ತ್ವನಿರ್ಣಯದ ಉಪದೇಶಕರಿಗೆ ನಮನ**

ತತ್ತ್ವನಿರ್ಣಯವನುಪದೇಶಿಸಿದ ಶ್ರೀ-
ಕೇಶವಾರ್ಯನಿಗೆ ಇದೋ ಎನ್ನ ನಮನ ।
ಎನಗಿಲ್ಲ ಶಿಷ್ಯರಲಿ ಪರಿಗಣಿಪ ಆ ಭಾಗ್ಯ
ನಿನ್ನ ಕರುಣೆಯೇ ಎನಗೆ ಧ್ರುವತಾರೆ ಇಂದು ॥ 16 ॥

# ಗ್ರಂಥಾರಂಭ

**ಟೀಕಾಕಾರರ ಮಂಗಳಶ್ಲೋಕ**

ವಿಶ್ವಸ್ಯೋದಯಮಾತನೋತಿ ತದನು ತ್ರಾಣಂ ವಿಧತ್ತೇ ಪುನಃ
ಸೌಖ್ಯಾಪ್ತೀತರಹಾನಿಸಾಧನಮಲಂ ವಕ್ತಿ ಶ್ರುತೀರ್ವ್ಯಂಜಯನ್ ।
ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯಃ
ತಂ ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಮ್ ॥

**ಅನು :** (ಯಃ ವಿಶ್ವಸ್ಯ ಉದಯಂ ಆತನೋತಿ, ತದನು (ವಿಶ್ವಸ್ಯ) ತ್ರಾಣಂ ವಿಧತ್ತೇ, ಪುನಃ ಶ್ರುತೀಃ ವ್ಯಂಜಯನ್ (ವಿಶ್ವಸ್ಯ) ಸೌಖ್ಯಾಪ್ತಿ-ಇತರಹಾನಿ-ಸಾಧನಂ ಅಲಂ ವಕ್ತಿ , (ವಿಶ್ವಸ್ಯ) ಶ್ರಮಾಪಹೃತಯೇ ಸ್ವಾಪಂ ಪ್ರಾಪಯತಿ ಚ ಕಲ್ಪಾವಸಾನೇ (ವಿಶ್ವಸ್ಯ) ಸ್ವಾಪಂ ಪ್ರಾಪಯತಿ, ತಂ ದೇವಂ, ಪಿತರಂ, ಪತಿಂ, ಗುರುತಮಂ, ರಮಾವಲ್ಲಭಂ ವಂದೇ)

ಯಾರು ,ಈ ಜಗದ ಸೃಷ್ಟಿಯನ್ನು ಮಾಡುವನೋ, ಸೃಷ್ಟಿಸಿದ ಜಗವನ್ನು ಸಂರಕ್ಷಿಸುವನೋ, ವೇದಗಳನ್ನು ಪ್ರಕಟಗೊಳಿಸಿ, ಸುಖಪ್ರಾಪ್ತಿಯ, ದುಃಖನಾಶದ ಉಪಾಯಗಳನ್ನು ಚೆನ್ನಾಗಿ ಉಪದೇಶಿಸುವನೋ, ಎಲ್ಲರ ಶ್ರಮವನ್ನು ಪರಿಹರಿಸಲು (ಪ್ರತಿದಿನದಕೊನೆಯಲ್ಲಿ )ನಿದ್ರೆಯನ್ನು ಹೊಂದಿಸುವನೋ, ಹಾಗೆಯೇ ಕಲ್ಪದ ಕೊನೆಗೆ (ಪ್ರಳಯ ಕಾಲದಲ್ಲಿ ದೇವತೆಗಳಿಗೂ) ಸ್ವಾಪವನ್ನು ಹೊಂದಿಸುವನೋ, ಅಂತಹ ದೇವನಾದ (ಕ್ರೀಡಾದಿಗುಣಯುತನಾದ), ತಂದೆಯಾದ, ಸ್ವಾಮಿಯಾದ, ಶ್ರೇಷ್ಠಗುರುವಾದ ರಮಾಪತಿಯನ್ನು ನಮಿಸುವೆ.

(ವಿಶ್ವವನ್ನು ಸೃಷ್ಟಿಸಿದ್ದರಿಂದ ಲಕ್ಷ್ಮೀಪತಿಯನ್ನು 'ತಂದೆ' ಎಂದು, ಸೃಷ್ಟಿಸಿದ ವಿಶ್ವಕ್ಕೆ ಅಗತ್ಯವಾದದನ್ನು ಇತ್ತು ಸಂರಕ್ಷಿಸುವದರಿಂದ 'ಪತಿ' ಎಂದು, ಶ್ರುತಿಗಳನ್ನು ಪ್ರಕಟಗೊಳಿಸಿ (ಪುರಾಣಾದಿಗಳನ್ನು ನಿರ್ಮಿಸಿ) ಈ ಜಗಕ್ಕೆ ಜ್ಞಾನವನ್ನು ನೀಡಿದ್ದರಿಂದ ಗುರು ಎಂದು, ಜಗದ ಗುರುಗಳಾದ ಬ್ರಹ್ಮಾದಿಗಳಿಗೂ ಗುರುವಾದುದರಿಂದ 'ಗುರುತಮ' ಎಂದು, ಈ ಜಗದ ಸೃಷ್ಟಿ, ಸ್ಥಿತಿ, ಲಯಗಳು ಹರಿಗೆ ಕ್ರೀಡೆ, ಆದುದರಿಂದ ಈತನನ್ನು ದೇವ- ಕ್ರೀಡಾದಿಗುಣವಿಶಿಷ್ಟನು ಎಂದು ಕರೆಯಲಾಗುವುದು.)

**ಗ್ರಂಥಕರ್ತೃವಿಗೆ ನಮನ**

**ಲಸತು ಶ್ರೀಮದಾನಂದತೀರ್ಥೇಂದುರ್ನೋ ಹೃದಂಬರೇ ।**
**ಯದ್ವಚಶ್ಚಂದ್ರಿಕಾ ಸ್ವಾಂತಸಂತಾಪಂ ವಿನಿಕೃಂತತಿ ॥**

(ಯದ್ವಚಶ್ಚಂದ್ರಿಕಾಸ್ವಾಂತಸಂತಾಪಂ ವಿನಿಕೃಂತತಿ,
ಸಃ ಶ್ರೀಮದಾನಂದತೀರ್ಥೇಂದುಃ ನಃ ಹೃದಂಬರೇ ಲಸತು.)

ಯಾರ ಮಾತೆಂಬ ಬೆಳದಿಂಗಳು ಅಂತರಂಗದ ಕತ್ತಲೆಯನ್ನು ಕತ್ತರಿಸುವುದೋ, ಅಂತಹ ಶ್ರೀಮದಾನಂದತೀರ್ಥರೆಂಬ ಚಂದ್ರನು ನನ್ನ ಹೃದಯಾಕಾಶದಲ್ಲಿ ವಿರಾಜಿಸಲಿ.

**ಗುರುನಮನ ಹಾಗೂ ಪ್ರತಿಜ್ಞೆ**

**ಪದವಾಕ್ಯಪ್ರಮಾಣಜ್ಞಾನ್ ಪ್ರಣಮ್ಯ ಶಿರಸಾ ಗುರೂನ್ ।**
**ವ್ಯಾಕರಿಷ್ಯೇ ಯಥಾ ಬೋಧಂ ವಿಷ್ಣುತತ್ತ್ವವಿನಿರ್ಣಯಮ್ ॥**

ವ್ಯಾಕರಣಶಾಸ್ತ್ರ, ಮೀಮಾಂಸಾಶಾಸ್ತ್ರ , ಬ್ರಹ್ಮತರ್ಕ ಇವುಗಳನ್ನು[1] ತಿಳಿದಿರುವ ಗುರುಗಳನ್ನು ಶಿರಸಾ ನಮಿಸಿ 'ವಿಷ್ಣುತತ್ತ್ವವಿನಿರ್ಣಯ' ಎಂಬ ಗ್ರಂಥವನ್ನು ಯಥಾಮತಿ ವ್ಯಾಖ್ಯಾನಿಸುವೆನು.

**ವಿಘ್ನವಿಘಾತಾದಿಸಾಧನತಯಾऽವಿಗೀತಶಿಷ್ಟಾಚಾರಪರಂಪರಾದ್ಯವಗತಂ ನಾರಾಯಣವಂದನಂ ಸ್ವಯಮಂತರಾಯವಿಧುರೋऽಪಿ ಭಗವಾನಾನಂದ-ತೀರ್ಥೋ ಮುನಿಃ ಶಿಷ್ಯಾನ್ ಗ್ರಾಹಯಿತುಂ ಪ್ರಕರಣಾದೌ ನಿಬಧ್ನಾತಿ - 'ಸದಾಗಮೈಕವಿಜ್ಞೇಯಮ್' ಇತಿ ॥**

'ಅಡೆ-ತಡೆಗಳನ್ನು ಪರಿಹರಿಸುವುದೇ ಮುಂತಾದವುಗಳಿಗೆ ಸಾಧನವು' ಎಂದು,ಸಂಪ್ರತಿಪನ್ನರಾದ ಶಿಷ್ಟರ ಆಚರಣೆಯ ಪರಂಪರೆಯಿಂದ ತಿಳಿದು ಬಂದ ನಾರಾಯಣನ ನಮಸ್ಕಾರವನ್ನು (ಮಂಗಳಾಚರಣೆಯನ್ನು), ತಮಗೆ ತಡೆಗಳು ಇಲ್ಲದಿದ್ದರೂ, ಆನಂದತೀರ್ಥರೆಂಬ ಮುನಿಗಳು, ಶಿಷ್ಯರಿಗೆ (ಮಂಗಳದ ಆಚರಣವು ಅವಶ್ಯ ಎಂದು) ತಿಳಿಸಲು, ಪ್ರಕರಣದ (ಗ್ರಂಥದ) ಆದಿಯಲ್ಲಿ ಸೇರಿಸಿದ್ದಾರೆ. 'ಸದಾಗಮೈಕವಿಜ್ಞೇಯಂ' ಎಂದು

**ಮೂಲಗ್ರಂಥಕಾರರ ಮಂಗಳ ಶ್ಲೋಕ**

**ಮೂಲ-**

**ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಮ್।**
**ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಮ್ ॥**

---

1. ಪದ- ವ್ಯಾಕರಣಶಾಸ್ತ್ರ, ವಾಕ್ಯ-ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವಾದ ಶ್ಲೋಕರೂಪವಾದ ಅನುವ್ಯಾಖ್ಯಾನ, ಪ್ರಮಾಣ- ಬ್ರಹ್ಮತರ್ಕ ಎಂದು ಭಾವ.

ಸದಾಗಮಗಳಿಂದ ಮುಖ್ಯವಾಗಿ ವೇದ್ಯನು, ನಿತ್ಯಾನಿತ್ಯರಾದ ಚೇತನರು, ಪ್ರಕೃತಿಯಿಂದಲೂ ಉತ್ತಮನಾದ, ದೋಷದೂರನೂ ಸಕಲಗುಣಪೂರ್ಣನೂ ಆದ ನಾರಾಯಣನನ್ನು ನಿರಂತರ ನಮಸ್ಕರಿಸುವೆ.

**'ಸದಾ ವಂದೇ'** ಇತ್ಯನೇನ ಮಮ ನಾರಾಯಣವಂದನಂ 'ನ ಪ್ರತ್ಯೂಹ-ವಿರಹಾದಿಪ್ರಯೋಜನೋದ್ದೇಶೇನ' ಇತಿ ಸೂಚಯತಿ । ನಾನಿರ್ಧಾರಿತ-ಸ್ವರೂಪಸ್ಯ ವಂದನಂ ಯುಕ್ತಂ, ನ ಚ ಲಕ್ಷಣೇನ ವಿನಾ ನಿರ್ಧಾರಣಮ್? ಇತ್ಯತೋ ನಾರಾಯಣಸ್ಯ ಲಕ್ಷಣಾನ್ಯಾಹ **'ನಿರ್ದೋಷ..'** ಇತಿ । ನಿರ್ದೋಷಶ್ಚಾಸೌ ಅಶೇಷಸದ್ಗುಣಶ್ಚೇತಿ ವಿಗ್ರಹಃ । ಅತ್ರ ನಿರ್ದೋಷ-ಗ್ರಹಣೇನ ಪಾರತಂತ್ರ್ಯಾದಿರಾಹಿತ್ಯಾದೀನಿ, **'ಅಶೇಷಸದ್ಗುಣಂ'** ಇತ್ಯನೇನ ಪರಿಪೂರ್ಣಾನಂದತ್ವಾದೀನಿ ಚ ಅನಂತಾನಿ ಲಕ್ಷಣಾನಿ ಸೂಚಿತಾನಿ । ತದರ್ಥಮೇವ **'ಅಶೇಷ...'** ಇತ್ಯುಕ್ತಮ್ । ದುಃಖಾದೀನಾಮಪಿ ಗುಣತ್ವೇನ ವ್ಯವಹಾರಾತ್ **'ಸದ್...'** ಇತಿ । ಅಥವಾ ಉತ್ತ್ವಾದಿರಾಹಿತ್ಯಂ ಗುಣಾನಾಂ **'ಸತ್...'** ಶಬ್ದೇನಾಽಚಷ್ಟೇ ।

'ಸದಾ ವಂದೇ' ಈ ಪದಗಳಿಂದ 'ನಾನು (ಆಚಾರ್ಯರು) ಮಾಡುವ ನಾರಾಯಣನ ನಮನವು ವಿಘ್ನಪರಿಹಾರಾದಿ ಪ್ರಯೋಜನಕ್ಕಾಗಿ ಅಲ್ಲ' ಎಂದು ಸೂಚಿಸಿದ್ದಾರೆ.[1] ವ್ಯಕ್ತಿಯ ಸ್ವರೂಪದ ಅರಿವಿಲ್ಲದೇ ನಮಿಸುವುದು ತರವಲ್ಲ. ವ್ಯಕ್ತಿಯ ಸ್ವರೂಪದ ಅರಿವು ಲಕ್ಷಣದ ಅರಿವಿಲ್ಲದೆ ಶಕ್ಯವಿಲ್ಲ, ಆದುದರಿಂದ ನಾರಾಯಣನ ಲಕ್ಷಣಗಳನ್ನು ತಿಳಿಸುತ್ತಿದ್ದಾರೆ 'ನಿರ್ದೋಷ' ಎಂದು. ದೋಷರಹಿತಗಳಾದ ಎಲ್ಲ ಸದ್ಗುಣಗಳನ್ನು ಹೊಂದಿದವನು ಎಂದು (ನಿರ್ದೋಷ)ಪದದ ಭಾವ. ಇಲ್ಲಿ **'ನಿರ್ದೋಷ'**ಶಬ್ದವನ್ನು ಪರಿಗ್ರಹಿಸಿದ್ದರಿಂದ, 'ಪಾರತಂತ್ರ್ಯ ಮೊದಲಾದ ದೋಷಗಳಿಂದ ದೂರನಾದ' ಎಂದು, **'ಅಶೇಷಸದ್ಗುಣಂ'** ಎಂಬ ಶಬ್ದದಿಂದ, ಪರಿಪೂರ್ಣಾನಂದವೇ ಮುಂತಾದ

1. ಟೀಕಾಕಾರರು ಪೀಠಿಕೆಯಲ್ಲಿ ' ಆಚಾರ್ಯರಿಗೆ ವಿಘ್ನವಿಲ್ಲ' ವಿಘ್ನನಾಶಕ್ಕಾಗಿ ಮಂಗಳಾಚರಣದ ಅಗತ್ಯವಿಲ್ಲ ಎಂದು ಪ್ರಸ್ತಾಪಿಸಿದ್ದಾರೆ. ಅದು ದಿಟ ಎಂದು ಇಲ್ಲಿ ಸಮರ್ಥಿಸುತ್ತಿದ್ದಾರೆ - ವಿಘ್ನ ಪರಿಹಾರಕ್ಕೆ ಮಂಗಳವನ್ನು ಆಚರಿಸುವದಾದಲ್ಲಿ ನಿರಂತರ ನಮನದ ಅಗತ್ಯವಿರಲಿಲ್ಲ ಎಂದು ಭಾವ.

ಅನಂತ ಲಕ್ಷಣಗಳನ್ನು ಸೂಚಿಸಿದಂತಾಯಿತು. ಆದಕ್ಕಾಗಿಯೇ (ಅನಂತ ಲಕ್ಷಣಗಳನ್ನು ತಿಳಿಸುವ ಸಲುವಾಗಿ) **ಅಶೇಷ** ಎಂದು ಹೇಳಲಾಗಿದೆ. (ಎಲ್ಲ ವಿಧವಾದ ಸದ್ಗುಣಗಳನ್ನು ಹೊಂದಿದವನು ಎಂದು ಭಾವ.) ದುಃಖಾದಿಗಳನ್ನು ಗುಣ ಎಂದು (ನೈಯಾಯಿಕಾದಿಗಳು) ವ್ಯವಹರಿಸುವರು. ಆದುದರಿಂದ (ದುಃಖ, ದ್ವೇಷ, ಮೋಹ ಮುಂತಾದ ಅನ್ಯರು ಭಾವಿಸಿದ ಗುಣಗಳನ್ನು ಪರಿಗ್ರಹಿಸಬಾರದು ಎಂಬ ಉದ್ದೇಶದಿಂದ) ಗುಣ ಶಬ್ದಕ್ಕೆ **'ಸತ್'** ಎಂಬ ವಿಶೇಷಣವನ್ನು ನೀಡಿದ್ದಾರೆ[1]. ಅಥವಾ **'ಸತ್'** ಎಂಬ ವಿಶೇಷಣವು ಗುಣಕ್ಕೆ ಹುಟ್ಟು ಮೊದಲಾದವುಗಳು ಇಲ್ಲ ಎಂದು ತಿಳಿಸುತ್ತದೆ[2].

**ಮೂಲೋಕ್ತ ವಿಶೇಷಣಗಳ ಔಚಿತ್ಯ**

**ಏತಲ್ಲಕ್ಷಣಸಂಭಾವನಾರ್ಥಮುಕ್ತಂ 'ಸಮತೀತ..' ಇತಿ । ಕ್ಷರಾಕ್ಷರ-ಪದಾಭ್ಯಾಂ ಜಡಮಪ್ಯುಪಲಕ್ಷ್ಯತೇ । ಸಮ್ಯಗತೀತೇ- ಅತಿಕ್ರಾಂತೇ, ಕ್ಷರಾಕ್ಷರೇ ಯೇನ ಅಸೌ ತಥೋಕ್ತಃ । ಜಡಜೀವಪ್ರಕೃತಿ-ಭ್ಯೋಽತ್ಯನ್ತವಿಲಕ್ಷಣಮ್ ।**

(ನಿತ್ಯವಾದ ಸುಖಜ್ಞಾನಾದಿಪೂರ್ಣ ಇತ್ಯಾದಿ) ಈ ಲಕ್ಷಣಗಳು (ನಾರಾಯಣನಲ್ಲಿ)ಸಂಭಾವಿತ ಎಂದು ತಿಳಿಸಲು ಹೇಳಲಾಗಿದೆ **'ಸಮತೀತ'** ಎಂದು[3]. ಇಲ್ಲಿರುವ ಕ್ಷರಾಕ್ಷರ ಪದಗಳಿಂದ ಜಡಪದಾರ್ಥಗಳನ್ನೂ

1. ದುಃಖಾದಿಗಳು ಗುಣವಾದರೂ ಸದ್‌ಗುಣಗಳಲ್ಲ ಎಂದು ಭಾವ.

2. ಇಲ್ಲಿ ಸತ್ ಶಬ್ದದಿಂದ ದುಃಖ ದ್ವೇಷ. ಮೋಹಾದಿ ದುಷ್ಟಗುಣಗಳು ನಿವಾರಿತವಾಗುತ್ತದೆ ಎಂದು ಅರ್ಥೈಸಿದಲ್ಲಿ ಈ ಮೊದಲು ಹೇಳಿದ 'ನಿರ್ದೋಷ' ಎಂಬ ವಿಶೇಷಣವು ವ್ಯರ್ಥ ಎಂಬ ಶಂಕೆ ಬರುತ್ತದೆ, ದುಃಖ ಮೋಹಾದಿಗಳು ದುಷ್ಟಗುಣಗಳು ತಾನೆ ? ಆದುದರಿಂದ 'ಅಥವಾ' ಎನ್ನುವದರಿಂದ ಎರಡನೆಯ ಅರ್ಥವನ್ನು ತಿಳಿಸಿದ್ದಾರೆ. ಹುಟ್ಟು,ನಾಶಗಳನ್ನು ಹೊಂದಿರುವ ಸುಖ, ಜ್ಞಾನ, ಬಲ, ಸೌಂದರ್ಯಾದಿ ಗುಣಗಳೂ ಸದ್ಗುಣಗಳಲ್ಲ, ಭಗವಂತನಲ್ಲಿನ ಗುಣಗಳು ಸದ್ಗುಣಗಳು, ಆದುದರಿಂದ ಅವುಗಳಿಗೆ ಹುಟ್ಟು-ನಾಶಗಳು ಇಲ್ಲ ಎಂದು ಭಾವ.

3. ನಾವು ಕಂಡ, ತಿಳಿದ ಯಾವ ವ್ಯಕ್ತಿಗಳಲ್ಲೂ ಕಾಣದ, ನಿರ್ದೋಷಾಶೇಷಸದ್ಗುಣತ್ವವು ನಾರಾಯಣನಲ್ಲೂ ಇರಲಾರದು, ಈ ಅಸಂಭಾವನಾ ಸಂಶಯವನ್ನು ದೂರಮಾಡುವರು. ನಾರಾಯಣನು ನಾವು ಕಂಡ, ತಿಳಿದ ಎಲ್ಲ ಚೇತನರಿಂದ ಅಚೇತನಗಳಿಂದ ಅತೀತನಾದವ. ಆದುದರಿಂದ ಅವನಲ್ಲಿ ಈ ಗುಣಗಳು ಸಂಭಾವಿತ ಎಂದು ಭಾವ.

ಪರಿಗ್ರಹಿಸಬೇಕು[1]. ನಾಶಹೊಂದುವ ನಾಶಹೊಂದದ ಎಲ್ಲ ಪದಾರ್ಥಗಳನ್ನು ಚೆನ್ನಾಗಿ ಮೀರಿದವ ಎಂದು ತಿಳಿಸಿದಂತಾಯಿತು. ಜಡ, ಜೀವ, ಮತ್ತು ಪ್ರಕೃತಿಗಳಿಂದ ಅತ್ಯಂತ ವಿಲಕ್ಷಣ (ಎಂದು ಒಟ್ಟು ಭಾವ).

**ಏತೈರ್ಲಕ್ಷಣೈರನಯಾ ಚ ಸಂಭಾವನಯಾಽನ್ವಿತೋ ನಾರಾಯಣಃ ಕುತಃ ಪ್ರತಿಪತ್ತವ್ಯಃ? ಇತ್ಯತ ಉಕ್ತಂ 'ಆಗಮವಿಜ್ಞೇಯಮ್' ಇತಿ । ಆಗಮೈಃ ವಿಶಿಷ್ಟತಯಾ ವಿಲಕ್ಷಣತಯಾ ಚ ಜ್ಞೇಯಮ್ । ಪ್ರತ್ಯಕ್ಷಾನುಮಾನಾಭ್ಯಾಮ-ನ್ಯಥಾಪಿ ಜ್ಞಾಯತೇ? ಇತ್ಯತ ಉಕ್ತಮ್ 'ಏಕ' ಇತಿ । 'ಆಗಮಾನಪೇಕ್ಷಸ್ಯ ಪ್ರತ್ಯಕ್ಷಾದೇಃ ನಾರಾಯಣಸ್ಯ ಸದೋಷತ್ವಾದೌ ಪ್ರವೃತ್ತ್ಯನುಪಪತ್ತೇಃ, ತದಪೇಕ್ಷಾಯಾಂ ಚ ಉಪಜೀವ್ಯವಿರೋಧೇನ ನ ತಸ್ಯ ತತ್ರ ಪ್ರಾಮಾಣ್ಯಮ್' ಇತಿ ಭಾವಃ । ತಥಾಪಿ ಪಾಶುಪತಾದ್ಯಾಗಮೈರನ್ಯಥಾಽಪಿ ಜ್ಞಾಯತೇ? ಇತ್ಯತ ಉಕ್ತಂ 'ಸದ್' ಇತಿ । ಅಯೋಗ್ಯಜನವ್ಯಾಮೋಹನಾಯ ಪ್ರಣೇತಾನಾಂ ತೇಷಾಂ ದುರಾಗಮತ್ವಾತ್ ನ ತದುಕ್ತಪ್ರಕಾರೇಣ ಜ್ಞೇಯಃ ।**

**'ದೋಷೈಕದೃಗ್ ಪುರೋಭಾಗೀ' 'ಹ್ಲಾದೈಕಮಯೀಂ' ಇತ್ಯಾದಿ ಪ್ರಯೋಗದರ್ಶನಾತ್ ಸಂಖ್ಯಾರ್ಥಸ್ಯೈವೈಕಶಬ್ದಸ್ಯ 'ಪೂರ್ವಕಾಲೈಕ..' ಇತಿ ಪೂರ್ವನಿಪಾತೋ ನ ಕೇವಲಾರ್ಥಸ್ಯ ।**

('ಆನಂದಾದಿ ಸಕಲ ಗುಣಪೂರ್ಣ' 'ದುಃಖಾದಿ ಸಕಲ ದೋಷದೂರ') ಈ ಲಕ್ಷಣಗಳಿಂದ ಮತ್ತು ಈ ಸಂಭಾವಕ ಪ್ರಮಾಣದಿಂದ (ಲೋಕವಿಲಕ್ಷಣನಾದುದರಿಂದ ಈ ಗುಣಗಳು ಆತನಲ್ಲಿ ಇರಬಹುದು ಎಂಬ

---

1. ಸಮತೀತಕ್ಷರಾಕ್ಷರಂ ಎಂಬ ಶಬ್ದವನ್ನು ಕೇಳಿದೊಡನೆ ನಾಶವಿರುವ ಬ್ರಹ್ಮಾದಿಜೀವರು, ನಾಶವಿಲ್ಲದ ಲಕ್ಷ್ಮೀ (ಅಕ್ಷರಪುರುಷಳು) ಇವರುಗಳಿಂದ ವಿಲಕ್ಷಣ ಎಂದು ಭಾಸವಾಗುವುದು. 'ಕ್ಷರಃ ಸರ್ವಾಣಿ ಭೂತಾನಿ, ಕೂಟಸ್ಥೋಽಕ್ಷರ ಉಚ್ಯತೇ ' ಎಂದು ಭಗವದ್ಗೀತೆಯಲ್ಲಿ ತಿಳಿಸಿರುವದರಿಂದ. ಇವರಿಬ್ಬರಿಂದ ವೈಲಕ್ಷಣ್ಯವು ಜಡದಲ್ಲೂ ಇದೆ. ಹಾಗಾದಲ್ಲಿ 'ಸಮತೀತಕ್ಷರಾಕ್ಷರತ್ವ' ಎಂಬ ಭಗವಂತನ ಲಕ್ಷಣವು ಜಡದಲ್ಲಿ ಅತಿವ್ಯಾಪ್ತವಾಯಿತು. ಈ ದೋಷದ ಪರಿಹಾರಕ್ಕೆ ಟೀಕಾಕಾರರು ನುಡಿದರು 'ಜಡಮಪ್ಯುಪಲಕ್ಷ್ಯತೇ' ಎಂದು .ಕ್ಷರ ಎಂದರೆ ನಾಶ ಹೊಂದುವ ಜಡ ಮತ್ತು ಚೇತನಗಳು, ಅಕ್ಷರ ಎಂದರೆ ನಾಶವಿಲ್ಲದ ಜಡ ಮತ್ತು ಚೇತನಗಳು ಎಂದು. ಒಟ್ಟಿನಲ್ಲಿ ನಿತ್ಯಾನಿತ್ಯಗಳಾದ ಜಡ-ಜೀವ-ಪ್ರಕೃತಿಗಳಿಂದ ಭಿನ್ನ ಎಂದು ಹೇಳಿದಂತಾಯಿತು. ಆದುದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿಯು ಇಲ್ಲ ಎಂದು ಭಾವ.

ಸಂಭಾವನೆ) ಯುಕ್ತನಾದ ನಾರಾಯಣನ ಅರಿವು ಯಾವುದರಿಂದ? ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ **'ಆಗಮವಿಜ್ಞೇಯಂ'** ಎಂದು. ಆಗಮಗಳಿಂದ (ನಾರಾಯಣನು)ವಿಶಿಷ್ಟನೂ ವಿಲಕ್ಷಣನೂ ಎಂದು ತಿಳಿಯುವನು. ಪ್ರತ್ಯಕ್ಷ ಅನುಮಾನ ಪ್ರಮಾಣಗಳಿಂದ (ನಾರಾಯಣನು) ಬೇರೆ ರೀತಿಯಲ್ಲಿ ವಿದಿತನಾಗುವನಲ್ಲವೆ? ಎಂದು,[1] ಆದುದರಿಂದ ಹೇಳಿದರು **'ಏಕಂ'** ಎಂದು. 'ಆಗಮವನ್ನು ಅವಲಂಬಿಸದ ಪ್ರತ್ಯಕ್ಷಾನುಮಾನಗಳು ನಾರಾಯಣನಲ್ಲಿ ದೋಷಾದಿಗಳನ್ನು ತಿಳಿಸಲು ಪ್ರವೃತ್ತವಾಗಲಾರವು[2]. ಪ್ರತ್ಯಕ್ಷಾನುಮಾನಗಳಿಗೆ ಆಗಮದ ಅಪೇಕ್ಷೆ ಇರುವುದಾದಲ್ಲಿ ಆಶ್ರಯವಾದ ಆಗಮದ ವಿರೋಧ-ವಿರುವುದರಿಂದ ಪ್ರತ್ಯಕ್ಷಾನುಮಾನಗಳಿಗೆ ಆ ವಿಷಯದಲ್ಲಿ ಪ್ರಾಮಾಣ್ಯವಿಲ್ಲ' ಎಂದು ಭಾವ[3]. ಆದರೂ ಪಾಶುಪತಾದಿ ಆಗಮಗಳು (ನಾರಾಯಣನನ್ನು )

---

1. ರಾಮ-ಕೃಷ್ಣಾದಿ ಅವತಾರಕಾಲದಲ್ಲಿದ್ದ ಜನರು, ರಾಮ ಕೃಷ್ಣರು ದುಃಖಿಗಳಾದದ್ದನ್ನು ಪ್ರತ್ಯಕ್ಷದಿಂದ ಕಂಡಿದ್ದಾರೆ. ನಾರಾಯಣನೂ ಜೀವಿಯಾದುದರಿಂದ ಅವನಲ್ಲೂ ದುಃಖ-ರಾಗಾದಿಗಳು ಇರಬಹುದು ಎಂದು ಊಹಿಸಲಾಗುವುದು. ಆದುದರಿಂದ ಪ್ರತ್ಯಕ್ಷ ಅನುಮಾನಗಳು ನಾರಾಯಣನನ್ನು 'ಬಲಪೂರ್ಣ-ಸುಖಪೂರ್ಣ' ಇತ್ಯಾದಿಗಳಿಗೆ ವಿರುದ್ಧವಾಗಿ ತಿಳಿಸುವುದು ಎಂದು ಭಾವ.

2. ನಾರಾಯಣನು ಪ್ರತ್ಯಕ್ಷಾನುಮಾನಕ್ಕೆ ವಿಷಯನಾದಲ್ಲಿ ಆತನಲ್ಲಿಯ ಗುಣಾವಗುಣಗಳನ್ನು ಅವು ತಿಳಿಸಬಹುದಿತ್ತು. ಆದರೆ ಅವು ಆತನನ್ನು ತಿಳಿಸಲಾರವು.

3. 'ರಾಮ-ಕೃಷ್ಣರು ದೋಷಿಗಳು, ಇವರಿಂದ ಅಭಿನ್ನನಾದವನು ನಾರಾಯಣ, ಆದುದರಿಂದ ನಾರಾಯಣನೂ ದೋಷಿ' ಎಂದು ಹೇಳಬೇಕು. ಆದರೆ ರಾಮ-ಕೃಷ್ಣರು ದೋಷಿಗಳು ಎನ್ನುವುದು ಪ್ರತ್ಯಕ್ಷಾನುಮಾನಗಳಿಂದ ತಿಳಿದರೂ 'ರಾಮಕೃಷ್ಣರು ನಾರಾಯಣ' ಎನ್ನುವದು ಪ್ರತ್ಯಕ್ಷದಿಂದ ತಿಳಿಯಲು ಶಕ್ಯವಿಲ್ಲ. 'ರಾಮಕೃಷ್ಣರು ನಾರಾಯಣನ ಸ್ವರೂಪರು' ಎಂದು ತಿಳಿಸುವ ಆಗಮವಾದರೋ ನಾರಾಯಣನನ್ನು 'ನಿರ್ದೋಷೀ' ಎಂದೇ ತಿಳಿಸುತ್ತದೆ. ಹಾಗಾಗಿ ಆಗಮಕ್ಕೆ ವಿರುದ್ಧವಾದ 'ನಾರಾಯಣನು ದೋಷೀ' ಎನ್ನುವ ಪ್ರತ್ಯಕ್ಷಾನುಮಾನಗಳು ಸಾಧಕಗಳಾಗಲಾರದು. ಇನ್ನು 'ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವಗುಹಾಶಯಃ। ಆವಿರಾಸೀತ್.....।। ಎನ್ನುವ ಪುರಾಣವಾಕ್ಯದಿಂದ ರಾಮ-ಕೃಷ್ಣರನ್ನು ವಿಷ್ಣು ಎಂದು ತಿಳಿಯಬೇಕು. ಆದರೆ ಆ ಪುರಾಣವು ವಿಷ್ಣುವನ್ನು 'ದೋಷದೂರ' ಎಂದೇ ತಿಳಿಸಿರುತ್ತದೆ. ಪ್ರಕೃತ ಯಾವ ಪುರಾಣಾದಿವಾಕ್ಯಗಳಿಂದ ನಾವು 'ರಾಮ-ಕೃಷ್ಣರನ್ನು ವಿಷ್ಣು' ಎಂದು ತಿಳಿದಿರುವೆವೋ ಆ ಪುರಾಣವಾಕ್ಯಕ್ಕೆ ವಿರುದ್ಧವಾಗಿ ರಾಮ-ಕೃಷ್ಣರನ್ನು ದೋಷಿಗಳೆಂದು

**ಪುಟ 12ರಲ್ಲಿ.......**

ಬೇರೆ ರೀತಿಯಲ್ಲಿ ತಿಳಿಸುವವು? ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ **'ಸತ್'** ಎಂದು. ಅಯೋಗ್ಯಜನರ ಮೋಹನಕ್ಕಾಗಿ ರಚಿತವಾದ ಅವುಗಳು(ಪಾಶುಪತಾದಿ ಆಗಮುಗಳು) ದುರಾಗಮುಗಳಾದುದರಿಂದ ಅಲ್ಲಿ ತಿಳಿಸಿರುವಂತೆ ತಿಳಿಯಬಾರದು.

'ಪೂರ್ವಕಾಲೈಕ..' ಎಂದು ಪೂರ್ವನಿಪಾತವು ಸಂಖ್ಯಾವಾಚಕ 'ಏಕ' ಶಬ್ದಕ್ಕೆ ಹೊರತಾಗಿ, ಕೇವಲಾರ್ಥಕ 'ಏಕ' ಶಬ್ದಕ್ಕೆ ಅಲ್ಲ. 'ದೋಷೈಕದೃಕ್ ಪುರೋಭಾಗೀ' 'ಹ್ಲಾದೈಕಮಯೀ' ಇತ್ಯಾದಿ ಪ್ರಯೋಗಗಳು ಕಂಡಿರುವದರಿಂದ[1].

---

...... ಪುಟ 11 ರಿಂದ

ಪ್ರತ್ಯಕ್ಷಾನುಮಾನಗಳು ತಿಳಿಸಿದರೆ, ಉಪಜೀವ್ಯವಾದ (ರಾಮ-ಕೃಷ್ಣರು ನಾರಾಯಣ ಎಂದು ತಿಳಿಸಿದ) ಪುರಾಣಾದಿವಾಕ್ಯಗಳಿಗೆ ವಿರುದ್ಧವಾದುದರಿಂದ ಉಪಜೀವಕಗಳಾದ ಪ್ರತ್ಯಕ್ಷಾನುಮಾನಗಳು ಅಪ್ರಮಾಣವಾಗುವವು. ಪ್ರಮಾಣಗಳು ಪರಸ್ಪರ ವಿರುದ್ಧವಾಗಿ ತಿಳಿಸಿದಾಗ ದುರ್ಬಲವಾದದ್ದನ್ನು ಅಪ್ರಮಾಣ ಎಂದು ತಿಳಿಯುತ್ತಾರೆ. ಪ್ರಕೃತ ಉಪಜೀವ್ಯವಾದ ಆಗಮಕ್ಕೆ ವಿರುದ್ಧವಾದ ಉಪಜೀವಕಗಳಾದ ಪ್ರತ್ಯಕ್ಷಾನುಮಾನಗಳು ದುರ್ಬಲ. ಆದುದರಿಂದ ಅಪ್ರಮಾಣ.

1. 'ಪೂರ್ವಕಾಲೈಕಸರ್ವಜರತ್ಪುರಾಣನವಕೇವಲಾಃ ಸಮಾನಾಧಿಕರಣೇನ' (ಪಾ.ಅ.2.1.49.) ಎನ್ನುವದು ಸಮಾಸವಿಧಿಯ ಸೂತ್ರ. ಇಲ್ಲಿ ಪೂರ್ವ ಮುಂತಾದ ಶಬ್ದಗಳನ್ನು ಪ್ರಥಮಾವಿಭಕ್ತಿಯಿಂದ ನಿರ್ದೇಶಿಸಿರುತ್ತಾರೆ. ಇಲ್ಲಿ ನಿರ್ದಿಷ್ಟವಾದ ಶಬ್ದಗಳಿಗೆ 'ಪ್ರಥಮಾನಿರ್ದಿಷ್ಟಂ ಸಮಾಸೇ ಉಪಸರ್ಜನಂ' (ಪಾ.ಅ.1.2.43.) ಎನ್ನುವ ಸೂತ್ರದಿಂದ 'ಉಪಸರ್ಜನ' ಎಂಬ ಸಂಜ್ಞೆಯು ಪ್ರಾಪ್ತವಾಗುವುದು. ಯಾವುದು ಉಪಸರ್ಜನ ಸಂಜ್ಞೆಯನ್ನು ಹೊಂದಿದೆಯೋ ಅದು ಸಮಸ್ತಪದದಲ್ಲಿ ಮೊದಲು ಪ್ರಯುಕ್ತವಾಗಬೇಕು 'ಉಪಸರ್ಜನಂ ಪೂರ್ವಂ' (ಪಾ.ಅ.2.2.30.) ಎಂಬ ಸೂತ್ರದಲ್ಲಿ ನಿಯಮಿಸಿರುವದರಿಂದ. ಆದುದರಿಂದ 'ಸದೈಕಾಗಮ...' ಎಂದು ಆಚಾರ್ಯರು ಪ್ರಯೋಗಿಸಬೇಕಿತ್ತು, ಆದರೆ 'ಸದಾಗಮೈಕ..' ಎಂದು ಪ್ರಯೋಗಿಸಿದ್ದು ಸಾಧುವೇ? ಈ ಸಂಶಯವನ್ನು ಪರಿಹರಿಸುತ್ತಾರೆ. **'ದೋಷೈಕದೃಗ್'** 'ಹ್ಲಾದೈಕಮಯೀ' ಇತ್ಯಾದಿ ಪ್ರಯೋಗಗಳು ಇವೆ. ಈ ಸ್ಥಳಗಳಲ್ಲಿ ಏಕಶಬ್ದವು ಸಮಸ್ತಪದದಲ್ಲಿ ಉತ್ತರದಲ್ಲಿ ಪ್ರಯುಕ್ತವಾಗಿದೆ, ಕಾರಣ ಆ ಏಕ ಶಬ್ದವು ಸಂಖ್ಯಾವಾಚಕವಲ್ಲ. ಸಂಖ್ಯಾವಾಚಕವಾದಲ್ಲಿ ಮಾತ್ರ ಪೂರ್ವದಲ್ಲಿ ಪ್ರಯೋಗ. ಪ್ರಕೃತದಲ್ಲೂ ಏಕ ಶಬ್ದವು ಸಂಖ್ಯಾರ್ಥಕವಾಗದೆ, ಮುಖ್ಯಾರ್ಥಕವಾಗಿದೆ. ಆದುದರಿಂದ ಆಚಾರ್ಯರ ಪ್ರಯೋಗವು ಸಾಧುವೇ ಆಗಿದೆ ಎಂದು ಭಾವ.

**ಭಗವಲ್ಲಕ್ಷಣಾದಿಗಳ ಕಥನಗಳು ಉಪಯುಕ್ತ**

**ಶೃಂಗೇ ಕರ್ಣೇ ವಾ ಗೃಹೀತ್ವಾ ಗಾಮಿವ ನಾಗಮೋ ನಾರಾಯಣಂ ಗಮಯತಿ, ಕಿಂತು ಲಕ್ಷಣಮುಖೇನೈವ । ಲಕ್ಷಣಮಪಿ ನಾಪ್ರಮಿತಂ ಲಕ್ಷ್ಯನಿರ್ಧಾರಣಸ್ಯೇಷ್ಟೇ, ಸಂತಿ ಹಿ ತೇಽಪ್ಯರ್ಥಾಃ, ಯೇ ಪ್ರಮಾಣ-ಪ್ರತೀತಾ ಅಪ್ಯಸಂಭಾವನಯಾಽಪೋದ್ಯಂತೇ. ಯಥಾ 'ದೇವಗವಾನಾಮ್ ಉತ್ತಾನಾನಾಂ ವಹನಮ್' ಅತ್ರ ಚ ಯುಗಪದಣುತ್ವ ಮಹತ್ತ್ವಾದೀನಾಮ್ ಅಸಮ್ಭಾವನಯಾಽಪವಾದೋ ಮಾ ಶಂಕಿ, ಇತಿ ಲಕ್ಷಣಸಮ್ಭಾವನಾ-ಪ್ರಮಾಣಾನಾಂ ತ್ರಯಾಣಾಮಪಿ ಕಥನಂ ಯುಕ್ತಮ್ ।**

ಕೊಂಬನ್ನೋ , ಕಿವಿಯನ್ನೋ ಹಿಡಿದು ಹಸುವನ್ನು ತಿಳಿಸುವಂತೆ ನಾರಾಯಣನನ್ನು ಆಗಮವು ತಿಳಿಸುವುದಿಲ್ಲ. ಲಕ್ಷಣಗಳ ಮುಖಾಂತರವೇ (ನಾರಾಯಣನ ಅರಿವನ್ನು ಉಂಟು ಮಾಡುವುದು). ಅಪ್ರಮಿತವಾದ ಲಕ್ಷಣವೂ ಸಹ ಲಕ್ಷ್ಯದ ನಿರ್ಧಾರಕ್ಕೆ (ಅಲಕ್ಷ್ಯದಿಂದ ಬೇರ್ಪಡಿಸಿ ಬೋಧಿಸಲು) ಸಮರ್ಥವಾಗಲಾರದು ತಾನೆ ? (ಆದುದರಿಂದ ನಾರಾಯಣನು ಆಗಮಗಳಿಂದ ವೇದ್ಯ ಎಂದು ಪ್ರಮಾಣವನ್ನು ಸೂಚಿಸಿರುವರು.) ಯಾವವು ಪ್ರಮಾಣದಿಂದ ಪ್ರಮಿತವಾಗಿದ್ದರೂ, ಅಸಂಭಾವನಾ ಶಂಕೆಯಿಂದ ನಿರಾಕೃತವಾಗುವವೋ, ಅಂತಹ ಪದಾರ್ಥಗಳೂ ಇವೆ. ಉದಾಹರಣೆಗೆ - 'ದೇವಗವಾನಾಮುತ್ತಾನಾನಾಂ ವಹನಮ್' (ದೇವಲೋಕದ ಗೋವುಗಳು ತಲೆಕೆಳಗಾಗಿ ಹೊರುತ್ತವೆ') ಎನ್ನುವುದು. ಪ್ರಕೃತ ನಾರಾಯಣನ ವಿಷಯದಲ್ಲೂ- ಏಕಕಾಲದಲ್ಲಿ (ಒಬ್ಬನೇ ವ್ಯಕ್ತಿಯಲ್ಲಿ) ಅಣುತ್ವ ಮಹತ್ವಗಳು ('ಅಣೋರಣೀಯಾನ್ ಮಹತೋಮಹೀಯಾನ್' ಎಂದು ಶ್ರುತ್ಯಾದಿಗಳಲ್ಲಿ ತಿಳಿಸಲಾಗಿದೆ. ಈ ಮೊದಲಾದವು ಅಸಂಭಾವಿತವಾದುದರಿಂದ ಇದು ವಿರುದ್ಧ ಎಂದು ಶಂಕಿಸುವುದು ಬೇಡ ಎಂದು (ಆಚಾರ್ಯರು ಮಂಗಳಾಚರಣದಲ್ಲಿ) ಲಕ್ಷಣ, (ಆ ಲಕ್ಷಣಕ್ಕೆ) ಸಂಭಾವನಾ ಮತ್ತು ಪ್ರಮಾಣ ಈ ಮೂರನ್ನು ಹೇಳಿರುವುದು ಯುಕ್ತವಾಗಿದೆ.

**ಮಂಗಲಾಚರಣೆ ನಿಷ್ಪ್ರಯೋಜಕವಲ್ಲ.**

**ಪ್ರಾಮಾಣಿಕತ್ವಾಚ್ಚಾಸ್ಯಾರ್ಥಸ್ಯ[1] । 'ಕೃತದೇವತಾವಂದನಾನಾಮಪಿ ಯಾ ಚಿಕೀರ್ಷಿತಾಪರಿಸಮಾಪ್ತಿಃ ಸಾ ಭಕ್ತ್ಯಾದಿವೈಗುಣ್ಯನಿಮಿತ್ತಾ । ಯಾ ತ್ವಕೃತದೇವತಾವಂದನಾನಾಮಪಿ ಸಮಾಪ್ತಿಃ ಸಾಽದೃಷ್ಟಾನ್ತರಾಯತ್ತಾ' ಇತಿ ಕಲ್ಪ್ಯತೇ । 'ಶ್ರೇಯಾಂಸಿ ಬಹುವಿಘ್ನಾನಿ' ಇತಿ ವಿಘ್ನಾನಾಂ ಸಂಭಾವಿತತ್ವಾತ್ ಪಾಕ್ಷಿಕಸ್ಯಾಪಿ ದೋಷಸ್ಯ ಪರಿಹಾರ್ಯತ್ವಾತ್ ತನ್ನಿರಾಸಾರ್ಥಃ ಪ್ರಯತ್ನೋ ಯುಕ್ತ ಏವೇತಿ ।**

ಈ ವಿಷಯವು (ಮಂಗಲಾಚರಣೆಯು ಪರಿಸಮಾಪ್ತಿಗೆ ಕಾರಣ ಎನ್ನುವುದು) ಪ್ರಮಾಣಪ್ರಮಿತವಾಗಿರುವದರಿಂದ. ದೇವತಾವಂದನೆಯನ್ನು ಮಾಡಿದ್ದರೂ ಸಹ (ಮಂಗಲವನ್ನು ಆಚರಿಸಿದ್ದರೂ ಸಹ) ರಚಿಸಲು ಇಚ್ಛಿಸಿದ ಗ್ರಂಥದ ಪರಿಸಮಾಪ್ತಿಯು ಆಗದೇ ಇರಲು ಭಕ್ತಿ ಮೊದಲಾದವುಗಳ (ಕರ್ಮಾಂಗದಲ್ಲಿನ) ವೈಗುಣ್ಯವೇ ಕಾರಣ. ಹಾಗೆಯೇ ಎಲ್ಲಿ ದೇವತಾವಂದನೆಯನ್ನು ಮಾಡದೇ ಇದ್ದರೂ (ಮಂಗಲವನ್ನು ಆಚರಿಸದೇ ಇದ್ದರೂ) ಪರಿಸಮಾಪ್ತಿಯು (ಗ್ರಂಥಪರಿಸಮಾಪ್ತಿಯು) ಕಂಡಿದೆಯೋ ಅಲ್ಲಿ ಬೇರೆಯೇ ಅದೃಷ್ಟದಿಂದ (ಸಮಾಪ್ತಿಗೆ ಕಾರಣವಾದ ಪುಣ್ಯಾಂತರವಿದೆ ಎಂದು ಭಾವ) ಎಂದು ಊಹಿಸಲಾಗುವುದು. 'ಶ್ರೇಯಾಂಸಿ ಬಹುವಿಘ್ನಾನಿ' (ಮಂಗಳಕಾರ್ಯಕ್ಕೆ ವಿಘ್ನಗಳು ಹಲವು)[2] (ಎಂಬ ಪ್ರಮಾಣವು ಇರುವದರಿಂದ) ವಿಘ್ನಗಳು ಸಂಭಾವಿತವಾದುದರಿಂದ ಸಂಭಾವಿತ ದೋಷದ ಪರಿಹಾರವೂ ಅವಶ್ಯವಾದುದರಿಂದ, ಅದರ ನಿವಾರಣೆಗೆ ಪ್ರಯತ್ನವು (ಮಂಗಳಾಚರಣೆಯು) ಯೋಗ್ಯವೇ ಸರಿ.

**-: ಮಂಗಲಪ್ರಕರಣ ಸಮಾಪ್ತಿ :-**

---

1. 'ಪ್ರಾಮಾಣಿಕತ್ವಾಚ್ಚಾಸ್ಯಾರ್ಥಸ್ಯ' ಎಂಬ ಟೀಕಾ ವಾಕ್ಯವು ಶ್ರೀನಿವಾಸತೀರ್ಥೀಯದ ಪ್ರಕಾರ '... ಕಲ್ಪ್ಯತೇ ।' ಎಂಬ ವಾಕ್ಯದ ನಂತರ ಎಂದು ಭಾಸವಾಗುತ್ತದೆ.

2- 'ಯಾವ ವ್ಯಕ್ತಿಗೂ 'ವಿಘ್ನಗಳು ಇವೆ' ಎಂದು ನಿಶ್ಚಯವಾಗಿರುವದಿಲ್ಲ, ವಿಘ್ನವು ಇದೆ ಎಂದು ನಿಶ್ಚಿತವಾದಲ್ಲಿ ಅದರ ನಿವಾರಣೆಗೆ ಯತ್ನಿಸಬಹುದು. ಆದುದರಿಂದ ಮಂಗಳಾಚರಣೆಯು ಸರಿಯಲ್ಲ 'ಎನ್ನುವ ಸಂದೇಹವನ್ನು ನಿವಾರಿಸಿರುವರು.

## ॥ ಅನುಬಂಧಚತುಷ್ಟಯ ॥

ಗ್ರಂಥದ ಅಧ್ಯಯನಕ್ಕೆ ನಾವು ತೊಡಗಬೇಕಾದರೆ ಅದರಲ್ಲಿ ಪ್ರತಿಪಾದಿಸುವ ವಿಷಯವೇನು ? ಅದರ ಅಧ್ಯಯನದಿಂದ ಲಾಭವೇನು? ಅದನ್ನು ಅಭ್ಯಸಿಸಲು ನಾವು ಅರ್ಹರೇ? ಅಥವಾ ಅದು ನಮಗೆ ಅಗತ್ಯವೇ? ಈ ಎಲ್ಲ ಸಂಗತಿಗಳನ್ನು ಪರಿಶೀಲಿಸಬೇಕು. ಈ ಸಂಗತಿಗಳನ್ನು ಶಾಸ್ತ್ರದಲ್ಲಿ ಅನುಬಂಧ ಚತುಷ್ಟಯ ಎಂದು ತಿಳಿಸಿರುವರು. ಮೋಕ್ಷೇಚ್ಛುಗಳು ಸಜ್ಜನರು ಅಧಿಕಾರಿಗಳು, ಮೋಕ್ಷವು ಫಲ, ವಿಷ್ಣುವೇ ಸರ್ವೋತ್ತಮ ಎನ್ನುವುದು ಪ್ರತಪಾದಿತ ವಿಷಯ. ಮೋಕ್ಷವು ಏಕೆ ಎಲ್ಲರಿಂದ ಅಪೇಕ್ಷಿತ? ಆ ಅಪೇಕ್ಷಿತವಾದ ಮೋಕ್ಷವು ಇಲ್ಲಿ ಉಕ್ತವಾದ ಅರಿವಿನಿಂದಲೇ ಪ್ರಾಪ್ತಿ, ಇತ್ಯಾದಿ ಸಂಬಂಧ-ಸಂಬಂಧಿಯ ವಿವರವು ಇಲ್ಲಿದೆ.

### ಪ್ರಸಕ್ತ ಪ್ರಕರಣಕ್ಕೆ ಅನುಬಂಧಚತುಷ್ಟಯಗಳು

**ವಿಶೇಷಣಾನಿ ಯಾನೀಹ ಕಥಿತಾನಿ ಸದುಕ್ತಿಭಿಃ ।**
**ಸಾಧಯಿಷ್ಯಾಮಿ ತಾನ್ಯೇವ ಕ್ರಮಾತ್ ಸಜ್ಜನಸಂವಿದೇ ॥**

ಇಲ್ಲಿ (ಮಂಗಳ ಶ್ಲೋಕದಲ್ಲಿ) ಯಾವ (ಮೂರು) ವಿಶೇಷಣಗಳು ಉಕ್ತವಾಗಿವೆಯೋ, ಅವುಗಳನ್ನೇ ಸದುಕ್ತಿಗಳಿಂದ ಕ್ರಮವಾಗಿ,ಸಜ್ಜನರಿಗೆ ಅರಿವಿಗಾಗಿ ಸಮರ್ಥಿಸುತ್ತೇನೆ.

ಸ್ಯಾದೇತತ್, ಪ್ರಕರಣಮೇವೇದಮನಾರಂಭಣೀಯಮ್, ವಿಷಯ-ಪ್ರಯೋಜನಸಂಬಂಧಶೂನ್ಯತ್ವಾತ್,ಪ್ರತೀತಘಟಸ್ವರೂಪಪ್ರತಿಪಾದಕ-ವಾಕ್ಯವತ್, ಕಾಕದಂತಪರೀಕ್ಷಾ ಗ್ರಂಥವಚ್ಚ । 'ಸ ಹಿ ಶಾಸ್ತ್ರಸ್ಯ ವಿಷಯೋ ಭವತಿ, ಯೋಽಜ್ಞಾತಃ ಸಂದಿಗ್ಧೋ, ವಿಪರ್ಯಸ್ತೋ ವಾ' । ಅಸ್ಯ ವಿಷಯತ್ವೇನಾಭಿಮತೋ ನಾರಾಯಣಃ ಸರ್ವಸಮ್ಮತ ಏವ । ನ ಹಿ ನಾರಾಯಣಪದಮನರ್ಥಕಂ ಕೋಽಪ್ಯಙ್ಗೀಕರೋತಿ? ನಾಪ್ಯಸ್ಯ ಪ್ರಕರಣಸ್ಯ ಪ್ರಯೋಜನಮಸ್ತಿ । ಐಹಿಕಪಾರತ್ರಿಕಯೋಃ ಕೃಷ್ಯಾದಿಯಾಗಾದಿ-ಸಾಧನಾನ್ತರಸಾಧ್ಯತ್ವಾತ್ । ಏತೇನ ಸಂಬಂಧಾಭಾವಾಚ್ಚ । ಮೋಕ್ಷಸ್ಯಾಪಿ ಕರ್ಮಸಾಧ್ಯತ್ವಾತ್, ಏತತ್ಸಂಬಂಧಾಭಾವಾಚ್ಚ, ಸಕಲೈಹಿಕ-ಪಾರತ್ರಿಕ-ಭೋಗಪರಿತ್ಯಾಗಾತ್ಮಕಸ್ಯ ತಸ್ಯಾಪುರುಷಾರ್ಥತ್ವೇನ ನಿರಧಿಕಾರಿತ್ವಾಪತ್ತೇಶ್ಚ? ಇತ್ಯತ ಆಹ - '**ವಿಶೇಷಣಾನಿ**' ಇತಿ.

ಇದು ಆದೀತು (ನಿರ್ವಿಘ್ನ ಪರಿಸಮಾಪ್ತಿಗಾಗಿ ಈ ಮಂಗಲಾಚರಣೆಯು ಅವಶ್ಯ ಎಂದು). (ಆದರೂ) ಈ ಪ್ರಕರಣವೇ[1] (ಗ್ರಂಥವೇ) ಆರಂಭಕ್ಕೆ ಅಯೋಗ್ಯವಾಗಿದೆ, ವಿಷಯ-ಪ್ರಯೋಜನ-ಸಂಬಂಧಗಳಿಂದ ರಹಿತ ವಾಗಿರುವುದರಿಂದ. ಎಲ್ಲರಿಗೂ ತಿಳಿದ ಘಟವನ್ನು ತಿಳಿಸುವ ವಾಕ್ಯದಂತೆ (ವಿಷಯವಿಲ್ಲ ಎಂದು ತಿಳಿಸಿದಂತಾಯಿತು) ಕಾಗೆಯ ಹಲ್ಲನ್ನು ಪರೀಕ್ಷಿಸುವ ಗ್ರಂಥದಂತೆ[2]. 'ಯಾವದು ತಿಳಿದಿಲ್ಲವೋ, ಸಂದೇಹಾಸ್ಪದವೋ, ಅಥವಾ ವಿರುದ್ಧವಾಗಿ ತಿಳಿಯಲಾಗಿದೆಯೋ ಅದು ಶಾಸ್ತ್ರಕ್ಕೆ ವಿಷಯವಾಗುವುದು'. ಆದರೆ ಪ್ರಕೃತ ಈ ಗ್ರಂಥಕ್ಕೆ ವಿಷಯವೆಂದು ಅಭಿಮತನಾದ ನಾರಾಯಣನು ಎಲ್ಲರಿಗೂ ಸಮ್ಮತನೇ. ಯಾರೂ 'ನಾರಾಯಣ' ಎನ್ನುವ ಪದನ್ನು ಅರ್ಥರಹಿತ ಪದ ಎಂದು ಒಪ್ಪಿರುವದಿಲ್ಲ. ಐಹಿಕ (ಧನ, ಮನೆ ಮುಂತಾದವು) ಪಾರತ್ರಿಕ(ಸ್ವರ್ಗ, ಮೋಕ್ಷ ಮುಂತಾದವು) ಫಲಗಳು ವ್ಯವಸಾಯ ಯಾಗ ಮುಂತಾದ ಬೇರೆಬೇರೇ ಸಾಧನಗಳಿಂದ ಲಭ್ಯವಾಗುವುದರಿಂದ ಈ ಪ್ರಕರಣಕ್ಕೆ (ಗ್ರಂಥಕ್ಕೆ) ಪ್ರಯೋಜನವಿಲ್ಲ (ಈ ಗ್ರಂಥದ ಅಧ್ಯಯನವು ವ್ಯರ್ಥ ಎಂದು ಭಾವ). ಈ ಕಾರಣದಿಂದಲೇ ಸಂಬಂಧವೂ ಇಲ್ಲ[3], ಮೋಕ್ಷವಾದರೋ ಕರ್ಮದಿಂದಲೂ ಪ್ರಾಪ್ತವಾಗುವುದರಿಂದ ('ಅಪಾಮ ಸೋಮಮಮೃತಾ ಅಭೂಮ' ಸೋಮಯಾಗವನ್ನು ಆಚರಿಸುವದರಿಂದ ಮೋಕ್ಷ

---

1. ಶಾಸ್ತ್ರೈಕದೇಶಸಮ್ಬದ್ಧಂ ಶಾಸ್ತ್ರಕಾರ್ಯಾನ್ತರೇ ಸ್ಥಿತಮ್ । ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ॥ ಶಾಸ್ತ್ರದ ಏಕವಿಷಯವನ್ನು ಪ್ರತಿಪಾದಿಸುವ, ಶಾಸ್ತ್ರದ ಉದ್ದೇಶಾಂತರವನ್ನು ಸಾಧಿಸುವ ಗ್ರಂಥವಿಶೇಷವನ್ನು ಪ್ರಕರಣ ಎಂದು ಜ್ಞಾನಿಗಳು ಕರೆಯುವರು.

2. ಕಾಕಸ್ಯ ಕತಿ ವಾ ದಂತಾಃ ಮೇಷಸ್ಯಾಣ್ಡಂ ಕಿಯತ್ ಪಲಮ್ । ಕಂಬಲೇ ಕತಿ ರೋಮಾಣಿ ಕಾ ವಾರ್ತಾ ಚೋಲಮಂಡಲೇ ॥ - ಕಾಗೆಗೆ ಎಷ್ಟು ಹಲ್ಲುಗಳು, ಟಗರಿನ ವೃಷಣದ ತೂಕವೆಷ್ಟು, ಕಂಬಳಿಯಲ್ಲಿ ಎಷ್ಟು ಕೂದಲುಗಳಿವೆ, ಚೋಲಮಂಡಲದಲ್ಲಿ ಏನು ಸುದ್ದಿ. ಈ ರೀತಿಯಾಗಿ ನಿಷ್ಪ್ರಯೋಜಕ ವಿಷಯಗಳ ಗ್ರಂಥಗಳಂತೆ ಈ ಗ್ರಂಥವೂ ವ್ಯರ್ಥ ಎಂದು ಭಾವ.

3. ಈ ಗ್ರಂಥದ ಅಧ್ಯಯನದಿಂದ ಏನಾದರೂ ಪ್ರಯೋಜನವಿದ್ದರೆ, ಆ ಫಲಕ್ಕೂ ಈ ಗ್ರಂಥಕ್ಕೂ ಪ್ರಾಪ್ಯ-ಪ್ರಾಪಕಭಾವ ಸಂಬಂಧವನ್ನೋ, ಪ್ರತಿಪಾದಿಸಲು ಯೋಗ್ಯವಾದ ವಿಷಯವು ಇದ್ದಲ್ಲಿ, ಪ್ರತಿಪಾದ್ಯ-ಪ್ರತಿಪಾದಕಭಾವ ಸಂಬಂಧವನ್ನೋ ಪರಿಕಲ್ಪಿಸಬಹುದಿತ್ತು. ನಿಷ್ಪ್ರಯೋಜಕವಾದುದರಿಂದ ಯಾವ ತರಹದ ಸಂಬಂಧವೂ ಇಲ್ಲ ಎಂದು ಭಾವ.

ಪ್ರಾಪ್ತಿಯಾಗುವುದು ಎಂದು ಶಾಸ್ತ್ರಗಳಲ್ಲಿ ತಿಳಿಸಲಾಗಿದೆ.), ಈ ಗ್ರಂಥಕ್ಕೆ (ಮೋಕ್ಷದ) ಸಂಬಂಧವಿಲ್ಲವಾದುದರಿಂದಲೂ, (ಅಥವಾ ಈ ಗ್ರಂಥವು ಮೋಕ್ಷದ ಉಪಾಯವನ್ನು ತಿಳಿಸಿದರೂ ಪ್ರಯೋಜನವಿಲ್ಲ.) ಎಲ್ಲ ಐಹಿಕ, ಪಾರತ್ರಿಕ ಭೋಗಗಳ ತ್ಯಾಗ ಸ್ವರೂಪವಾದ ಮೋಕ್ಷವು ಪುರುಷಾರ್ಥವೇ ಅಲ್ಲವಾದುದರಿಂದ[1] (ಈ ಗ್ರಂಥಕ್ಕೆ) ಅಧಿಕಾರಿಗಳು ಇಲ್ಲದಿರುವುದರಿಂದಲೂ (ಈ ಗ್ರಂಥವು ಅನಾರಂಭಣೀಯ) ಆದುದರಿಂದ ಹೇಳುತ್ತಾರೆ - '**ವಿಶೇಷಣಾನಿ**' ಎಂದು.

#### ಈ ಗ್ರಂಥದಲ್ಲಿ ತಿಳಿಸಿದ ವಿಷಯಗಳು ಅಸಂಭಾವಿತವಲ್ಲ

**ಲಕ್ಷಣತ್ವೇನ ನಿರ್ದೋಷತ್ವಂ ಅಶೇಷಸದ್ಗುಣತ್ವಂ, ಯಥಾ ಕಾಮಧೇನು-ಪ್ರಭೃತೀನಾಂ ಲೋಕವಿಲಕ್ಷಣತ್ವಾತ್ ಪ್ರಾಸಾದೋದ್ಗಿರಣಾದಿಕಂ ನಾಸಂಭವಿ, ತಥಾ ಭಗವತೋಽಪೀತಿ ದರ್ಶನಾರ್ಥಂ ಸರ್ವತೋಽತ್ಯನ್ತ-ವಿಲಕ್ಷಣತ್ವಮ್, ತತ್ರ ಪ್ರಮಾಣಾಕಾಂಕ್ಷಾಯಾಂ ವೇದಾದಿವೇದ್ಯತ್ವಮ್, ತಸ್ಯ ವಿರೋಧಪರಿಹಾರಾಯ ದುರಾಗಮಾದ್ಯವೇದ್ಯತ್ವಮಿತಿ ಯಾನಿ ಇಹ - ಆದ್ಯಪದ್ಯೇ, ನಾರಾಯಣಸ್ಯ ವಿಶೇಷಣಾನಿ ಕಥಿತಾನಿ ತಾನ್ಯೇವ ಇಹ-ಗ್ರಂಥೇ[2] ಸಾಧಯಿಷ್ಯಾಮಿ, ತತ್ ಪ್ರಸಕ್ತಂ ಚಾನ್ಯತ್, ನ ತು ಸ್ವರೂಪಮಾತ್ರಮ್**

'ಕಾಮಧೇನು ಮುಂತಾದವುಗಳು ಲೋಕವಿಲಕ್ಷಣಗಳಾದುದರಿಂದ ಮಹಡಿ ಮನೆಯನ್ನು ನೀಡುವುದು' ಈ ಮೊದಲಾದವುಗಳು ಹೇಗೆ ಅಸಂಭವವಲ್ಲವೋ ಹಾಗೆ ಭಗವಂತನಲ್ಲೂ ಸಹ 'ನಿರ್ದೋಷತ್ವ' ಮತ್ತು 'ಅಶೇಷಸದ್ಗುಣತ್ವ' ಈ ಲಕ್ಷಣಗಳು ಅಸಂಭವಿಯಲ್ಲ ಎಂದು ತಿಳಿಸಲು 'ಎಲ್ಲದರಿಂದಲೂ ಅತ್ಯಂತವಿಲಕ್ಷಣ' (ಎಂದು 'ಸಮತೀತಕ್ಷರಾಕ್ಷರಂ'

---

1. ನೈಯ್ಯಾಯಿಕರು ಬೌದ್ಧರು ಮುಂತಾದವರು ಮೋಕ್ಷದ ಸ್ವರೂಪವನ್ನು ಸಕಲ ಭೋಗರಹಿತವೆಂದು ತಿಳಿಸಿದ್ದಾರೆ. ಅವರು ಒಪ್ಪಿರುವಂತಹ ಮೋಕ್ಷವು ನಿಮ್ಮ ಗ್ರಂಥಕ್ಕೆ ಫಲವು ಎಂದಾದಲ್ಲಿ ಅದು ಯಾರಿಂದಲೂ ಅಪೇಕ್ಷಿತವಾದದ್ದಲ್ಲ ಎಂದು ಪ್ರಶ್ನೆಯ ಭಾವ.

2. ಮೂಲದಲ್ಲಿ 'ಇಹ' ಎನ್ನುವದು ಒಂದೇ ಬಾರಿ ಉಕ್ತವಾಗಿದೆ .ಅದನ್ನು ಆವೃತ್ತಿ ಮಾಡಿಕೊಳ್ಳಬೇಕು ಎಂದು ಸೂಚಿಸಿದ್ದಾರೆ.

ಎನ್ನುವುದರಿಂದ ಹೇಳಲಾಯಿತು), ಈ ವಿಷಯದಲ್ಲಿ ಪ್ರಮಾಣದ ಜಿಜ್ಞಾಸೆ ಬರಲು 'ವೇದಾದಿವೇದ್ಯ' (ಎಂದು ತಿಳಿಸಲಾಗಿದೆ),ಅದರ ವಿರೋಧವನ್ನು ಪರಿಹರಿಸಲು 'ದುರಾಗಮಾವೇದ್ಯ' ಎಂದು (ಹೇಳಲಾಗಿದೆ.) ಯಾನಿ, ಇಹ-ಮೊದಲ ಪದ್ಯದಲ್ಲಿ ನಾರಾಯಣನಿಗೆ (ಯಾವ) ವಿಶೇಷಣಗಳನ್ನು ಹೇಳಲಾಗಿದೆಯೋ ಅವುಗಳನ್ನೇ ಇಹ- ಗ್ರಂಥದಲ್ಲಿ ಸಾಧಿಸುತ್ತೇನೆ. ಅದಕ್ಕೆ ಸಂಬಂಧಿಸಿದ ಬೇರೆ ವಿಷಯಗಳನ್ನೂ ಸಹ (ವೇದಾಪೌರುಷೇಯತ್ವ ಕಾರ್ಯತಾವಾದ ಮುಂತಾದವುಗಳನ್ನೂ ಸಹ) ಕೇವಲ (ನಾರಾಯಣನ) ಸ್ವರೂಪವನ್ನು ಮಾತ್ರವಲ್ಲ.

**ಅನುಬಂಧಚತುಷ್ಟಯದ ಸ್ಫುಟೀಕರಣ**

'ಏತದ್ವಿಶೇಷಣವತಿ ಚ ನಾರಾಯಣೇ ಸನ್ತ್ಯೇವಾಜ್ಞಾನಸನ್ದೇಹವಿಪ್ರತಿ-ಪತ್ತಯಃ' ಇತ್ಯನೇನ ವಿಷಯೋ ದರ್ಶಿತಃ । ಪ್ರಕರಣಸ್ಯ ವಿಷಯೇಣ ಸಹ ಪ್ರತಿಪಾದ್ಯ-ಪ್ರತಿಪಾದಕತ್ವಲಕ್ಷಣಃ ಸಮ್ಬನ್ಧಶ್ಚೋಕ್ತಃ । ಸ ತು ನ ಯುಕ್ತಃ । ಸಾಧಕಪ್ರಮಾಣಾಭಾವಾತ್ । ನ ತಾವದನುಮಾನಾದಿನಾ ಸದಾಗಮೈಕ-ವಿಜ್ಞೇಯತ್ವಾದಿವಿಶಿಷ್ಟತಯಾ ನಾರಾಯಣಃ ಸಾಧಯಿತುಂ ಶಕ್ಯತೇ ಸ್ವವಚನ-ವಿರೋಧಾತ್ । ನಾಪಿ ವೇದಾದಿಭಿಃ ಸದಾಗಮೈಃ, ತತ್ಪ್ರಾಮಾಣ್ಯಮ್ ಅನಭ್ಯುಪಗಚ್ಛತಃ ಸೌಗತಾರ್ಹತಾದೀನ್ ಪ್ರತಿ ತದುಪನ್ಯಾಸಾ-ಯೋಗಾದ್? ಇತ್ಯತ ಆಹ **'ಸದುಕ್ತಿಭಿಃ'** ಇತಿ । 'ಸದಾಗಮೈಃ, ತತ್ಪ್ರಾಮಾಣ್ಯಂ ಚ ಸಾಧಯಿಷ್ಯಾಮಿ' ಇತಿ ಭಾವಃ । ಅಥವಾ **ಸತ್ಯಃ**-ವೇದಾದ್ಯಾ ಉಕ್ತಯಃ ಅನುಗ್ರಾಹಿಕಾ ಯೇಷಾಮ್ ಅನುಮಾನಾದೀನಾಂ ತಾನಿ ಸದುಕ್ತೀನಿ ತೈರಪಿ । **'ಸದಾಗಮೈಕವಿಜ್ಞೇಯಂ'** ಇತಿ ಚ 'ವೇದಾದಿ-ವಿರುದ್ಧಾನುಮಾನಾದ್ಯವೇದ್ಯತ್ವಮೇವೋಕ್ತಮ್' ಇತಿ ಹೃದಯಮ್ । **'ಕ್ರಮಾದ್'** ಇತಿ ಮನ್ದಾನಾಂ ಮನಸ್ಸಮಾಧಾನಾಯೋಕ್ತಮ್ । ಅನ್ಯಥಾ ಕುತ್ರ ಕಿಂ ಸಾಧಿತಮ್? ಇತಿ ಮನ್ದಾ ವ್ಯಾಕುಲಾಃ ಸ್ಯುಃ । ನಿರ್ದೇಶಕ್ರಮ ಏವಾತ್ರ ವಿವಕ್ಷಿತೋ ನ ತ್ವಾಕಾಂಕ್ಷಾ ಕ್ರಮಃ ।

ಈ (ನಿರ್ದೋಷ, ಅಶೇಷಸದ್ಗುಣ ಇತ್ಯಾದಿ) ವಿಶೇಷಣಗಳಿಂದ ಯುಕ್ತನಾದ ನಾರಾಯಣನ ವಿಷಯದಲ್ಲಿ ಅಜ್ಞಾನ, ಸಂದೇಹ ಮತ್ತು ವಿವಾದಗಳು ಇದ್ದೇ ಇವೆ. ಇದರಿಂದ (ಹೀಗೆ ತಿಳಿಸಿದ್ದರಿಂದ) ವಿಷಯವನ್ನು

ತಿಳಿಸಿದಂತಾಯಿತು[1]. ಪ್ರಕರಣಕ್ಕೆ ವಿಷಯದಿಂದ ಪ್ರತಿಪಾದ್ಯ-ಪ್ರತಿಪಾದಕತ್ವ-ರೂಪ ಸಂಬಂಧವನ್ನು ಹೊಂದಿದೆ ಎಂದು ತಿಳಿಸಿದಂತಾಯಿತು.ಅದು ಸರಿಯಾಗದು, (ನಾರಾಯಣನ) ಸಾಧಕಪ್ರಮಾಣವು ಇಲ್ಲದಿರುವುದರಿಂದ. ಅನುಮಾನಾದಿಗಳಿಂದ ಸಾಧಿಸುವೆವು ಎನ್ನಲಾಗದು 'ನಾರಾಯಾಣನು ಸದಾಗಮಗಳಿಂದ ಮಾತ್ರ ಗಮ್ಯ ಈ ಮುಂತಾದ ಗುಣ ವಿಶಿಷ್ಟ' ಎಂದು ಸಾಧಿಸಲು ಶಕ್ಯವಿಲ್ಲ, ಸ್ವವಚನ ವಿರೋಧವು ಪ್ರಾಪ್ತವಾಗುವುದರಿಂದ[2]. ಸದಾಗಮಗಳಾದ ವೇದಾದಿಗಳಿಂದ ಎನ್ನಲೂ ಆಗದು, ಅದರ ಪ್ರಾಮಾಣ್ಯವನ್ನು ಒಪ್ಪದ ಬೌದ್ಧಜೈನಾದಿಗಳನ್ನು ಉದ್ದೇಶಿಸಿ ಅದರ (ವೇದಗಳ) ಉಪನ್ಯಾಸವು ಸರಿಯಾಗದಿರುವುದರಿಂದ. ಆದುದರಿಂದ ಉತ್ತರಿಸುವರು **'ಸದುಕ್ತಿಭಿಃ...'** ಎಂದು. ಸದಾಗಮಗಳಿಂದ, ಅದರ ಪ್ರಾಮಾಣ್ಯವನ್ನಾದರೂ ಮುಂದೆ ಸಾಧಿಸಲಾಗುವುದು ಎಂದು ಭಾವ. ಅಥವಾ[3] **ಸತ್**-ವೇದೋಕ್ತಿಗಳು, ಯಾವುದಕ್ಕೆ (ಯಾವ ಪ್ರಮಾಣಗಳಿಗೆ) ಅನುಗ್ರಾಹಕ ವಾಗಿದೆಯೋ ಅವು **'ಸದುಕ್ತಿಗಳು'** ಇಂತಹ ಉಕ್ತಿಗಳಿಂದಲೂ. **'ಸದಾಗಮೈಕ-ವಿಜ್ಞೇಯಂ'** ಎನ್ನುವುದರಿಂದ 'ವೇದವಿರುದ್ಧವಾದ ಅನುಮಾನಾದಿಗಳಿಂದ ಅವೇದ್ಯ' ಎನ್ನುವುದೇ ಮುಖ್ಯ ಎಂದು ತಿಳಿಸಿದಂತಾಯಿತು ಎಂದು ಭಾವ. ಅಜ್ಞರ ಮನಃಸಮಾಧಾನಕ್ಕಾಗಿ **'ಕ್ರಮಾತ್'** ಎಂದು (ಆಚಾರ್ಯರು) ಹೇಳಿರುವರು. ಹಾಗೇ ತಿಳಿಸದೆ ಇದ್ದಲ್ಲಿ ಯಾವ ಪ್ರಕರಣದಲ್ಲಿ ಯಾವ

---

1. ಗ್ರಂಥದ ವಿಷಯವು ಅಜ್ಞಾತವಾಗಿರಬೇಕು, ಸಂದಿಗ್ಧವಾಗಿರಬೇಕು, ಅಥವಾ ವಿವಾದಕ್ಕೆ ವಿಷಯವಾಗಿರಬೇಕು. ಪ್ರಕೃತ ಗ್ರಂಥಕ್ಕೆ ವಿಷಯನಾದ ನಾರಾಯಣನ ವಿಷಯದಲ್ಲಿ ಸಂದೇಹಾದಿಗಳು ಇವೆ. ನಾರಾಯಣನು ಗುಣಪೂರ್ಣನಲ್ಲ, ದೋಷದೂರನಲ್ಲ, ಅಥವಾ ಆತನ ಅಸ್ತಿತ್ವವನ್ನೇ ಒಪ್ಪದವರೂ ಇರುವರು. ಆದುದರಿಂದ ಇಂತಹ ಗುಣವಿಶಿಷ್ಟನಾದ ನಾರಾಯಣನು ವಿಷಯವಾಗಬಹುದು ಎಂದು ತಿಳಿಸಿದಂತಾಯಿತು ಎಂದು ಭಾವ.

2. ಆಗಮದಿಂದ ಮಾತ್ರ ವೇದ್ಯನಾದವನನ್ನು ಅನುಮಾನದಿಂದ ಸಾಧಿಸುವೆ ಎಂದಲ್ಲಿ ಸ್ವವಚನವಿರೋಧ ಎಂದು ಭಾವ.

3- ಸದುಕ್ತಿಭಿಃ ಎನ್ನುವ ಶಬ್ದಕ್ಕೆ ವಿಸ್ತೃತವಾದ ಅರ್ಥವನ್ನು ತಿಳಿಸುವರು. ಈ ಗ್ರಂಥದಲ್ಲಿ ಕೇವಲ ವೇದಗಳಿಂದ ವಾದವನ್ನು ಮಂಡಿಸದೇ ಅನುಮಾನ ಪುರಾಣವಾಕ್ಯಗಳು ವಾದಮಂಡನೆಗೆ ಉದಾಹರಿಸಲಾಗಿವೆ, ಆದುದರಿಂದ ಅವುಗಳನ್ನೂ ಸಂಗ್ರಹಿಸುವಂತೆ ವಿಶಾಲ ಅರ್ಥವನ್ನು 'ಅಥವಾ' ಎನ್ನುವುದರಿಂದ ಟೀಕೆಯಲ್ಲಿ ತಿಳಿಸುವರು.

ವಿಶೇಷಣದ ಸಾಧನೆಯನ್ನು ಮಾಡಿರುವರು ಎಂದು ಅಜ್ಞರು ಗಲಿಬಿಲಿಗೊಳ್ಳುತ್ತಿದ್ದರು. (ವಿಶೇಷಣಗಳ) ನಿರ್ದೇಶಕ್ರಮವನ್ನೇ ಇಲ್ಲಿ ವಿವಕ್ಷಿಸಲಾಗಿದೆ, ಹೊರತು (ವಿಶೇಷಣಗಳ) ಆಕಾಂಕ್ಷಾಕ್ರಮದಿಂದ ಅಲ್ಲ[1].

**ಗ್ರಂಥದ ಪ್ರಯೋಜನ**

**'ಸಂವಿದೇ' ಇತಿ ಪ್ರಯೋಜನಾಭಿಧಾನಮ್ । ನನು ನ ವ್ಯುತ್ಪಾದ್ಯಾರ್ಥ-ಸಂವಿತ್ ಮಾತ್ರಂ ಪ್ರಯೋಜನಂ, ಸುಖದುಃಖಾವಾಪ್ತಿಹಾನ್ಯೋರನ್ಯ-ತರತ್ವಾಭಾವಾತ್, ಕಾಕದಂತಾಪರೀಕ್ಷಾಗ್ರಂಥಸಾಧಾರಣ್ಯಾಚ್ಚ? ಇತ್ಯತ ಉಕ್ತಮ್ 'ಸಜ್ಜನ..' ಇತಿ । ಸಂತಿ ಹಿ ತಥಾವಿಧಾಃ ಪುರುಷಾಃ, ಯೇಷಾಂ ಸುಖಾವಾಪ್ತ್ಯಾದಿಕಮಪಿ ನ ಪ್ರಾರ್ಥ್ಯಂ, ಕಿಂತು ಪರಮೇಷ್ಟಸ್ಯ ನಾರಾಯಣಸ್ಯ ಸಂವಿದೇವ । ತಾನ್ ಪ್ರತೀದಂ ಸಾಧನಮುಪಪದ್ಯತೇ । ನ ಹಿ ಸರ್ವಾಧಿ ಕಾರಿಕಂ ಕಿಮಪಿ ಶಾಸ್ತ್ರಮಸ್ತಿ ।**

'ಸಜ್ಜನ ಸಂವಿದೇ' ಎಂದು (ಗ್ರಂಥದ) ಪ್ರಯೋಜನವನ್ನು ತಿಳಿಸಿರುವರು. ಆಗಲಿ,(ಗ್ರಂಥದ ಅಧ್ಯಯನದಿಂದ) ಉತ್ಪಾದ್ಯವಾದ ಕೇವಲ ಅರ್ಥದ ಜ್ಞಾನವು ಪ್ರಯೋಜನವಾಗಲಾರದು, (ಜ್ಞಾನವು) ಸುಖಪ್ರಾಪ್ತಿ ದುಃಖನಿವೃತ್ತಿ ಈ ಎರಡೂ ರೂಪವಲ್ಲವಾದುದರಿಂದ[2] ಕಾಗೆಯ ಹಲ್ಲಿನ ಪರೀಕ್ಷಾ

1. ಈ ಗ್ರಂಥದಲ್ಲಿ ಮೊದಲು 'ಸದಾಗಮೈಕ ವಿಜ್ಞೇಯಂ' ಎಂಬ ವಿಶೇಷಣವನ್ನು ನಂತರದಲ್ಲಿ 'ಸಮತೀತಕ್ಷರಾಕ್ಷರಂ' ಎಂಬ ವಿಶೇಷಣವನ್ನು ನಂತರ 'ನಿರ್ದೋಷಾಶೇಷಸದ್ಗುಣಂ' ಎಂಬ ವಿಶೇಷಣಗಳನ್ನು ಮಂಗಳಶ್ಲೋಕದಲ್ಲಿ ನಿರ್ದೇಶಿಸಿದಂತೆ ಇಲ್ಲಿ ಸಮರ್ಥಿಸಲಾಗಿದೆ. ಆಕಾಂಕ್ಷಾ ಕ್ರಮದಂತೆ ಸಮರ್ಥಿಸುವದಾದಲ್ಲಿ ' ನಾರಾಯಣನನ್ನು ನಮಿಸುವೆ 'ಎಂದೊಡನೆ ನಾರಾಯಣನು ಯಾರು? ಎಂಬ ಆಕಾಂಕ್ಷೆಗೆ 'ನಿರ್ದೋಷಾಶೇಷಸದ್ಗುಣಂ' ಎಂಬ ವಿಶೇಷಣವನ್ನು ,ಅದು ಅಸಂಭಾವಿತ ಎನ್ನುವ ಶಂಕೆಗೆ 'ಸಮತೀತಕ್ಷರಾಕ್ಷರಂ' ಎಂಬ ವಿಶೇಷಣವನ್ನು ಈ ವಿಷಯದಲ್ಲಿ ಮಾನವೇನು ಎಂಬ ಆಕಾಂಕ್ಷೆಗೆ 'ಸದಾಗಮೈಕವಿಜ್ಞೇಯಂ' ಎಂಬ ವಿಶೇಷಣವನ್ನು ಸಮರ್ಥಿಸಬೇಕಿತ್ತು. ಆದರೆ ಇಲ್ಲಿ ಆಕಾಂಕ್ಷಾಕ್ರಮವನ್ನು ವಿವಕ್ಷಿಸಲಾಗಿಲ್ಲ ಎಂದು ಭಾವ.

2- 'ಗ್ರಂಥದ ಅಧ್ಯಯನದಿಂದ ನಾರಾಯಣ ವಿಷಯಕ ಜ್ಞಾನಪ್ರಾಪ್ತಿರೂಪ ಫಲವಿದೆ' ಎಂದು ತಿಳಿಸಲಾಗಿದೆ, ಆದರೆ ಇದು ಫಲವಾಗದು. ಸುಖಪ್ರಾಪ್ತಿ ಅಥವಾ ದುಃಖನಿವೃತ್ತಿಯನ್ನು ಮಾತ್ರ ಪ್ರಯೋಜನವೆಂದು ಭಾವಿಸಲಾಗಿದೆ. ಈ ಎರಡೂ ಅಲ್ಲದ ಕೇವಲ ಅರ್ಥಜ್ಞಾನದ ಪ್ರಾಪ್ತಿಯು ಪ್ರಯೋಜನ ಎಂದು ತಿಳಿಸಿದುದು ಸರಿ ಅಲ್ಲ ಎಂದು ಭಾವ.

ಗ್ರಂಥದಂತಾದುದರಿಂದ (ವ್ಯರ್ಥ)? ಎಂದು, ಆದುದರಿಂದ ಉತ್ತರಿಸುತ್ತಾರೆ **'ಸಜ್ಜನ ಸಂವಿದೇ'** ಎಂದು. ಅಂತಹ ಕೆಲ ಮಂದಿ ಇರುವರು. ಯಾರು ಸುಖಪ್ರಾಪ್ತ್ಯಾದಿಗಳನ್ನೂ ಬಯಸದವರು. ಮತ್ತೆ ಕೇವಲ ಅತಿಪ್ರಿಯನಾದ ನಾರಾಯಣನ ಜ್ಞಾನವನ್ನು ಮಾತ್ರ (ಬಯಸುವರು)[1]. ಅಂತಹ ವ್ಯಕ್ತಿಗಳನ್ನು ಉದ್ದೇಶಿಸಿ ಇದು ಸಾಧನವಾಗುವುದು. ಎಲ್ಲರನ್ನೂ ಅಧಿಕಾರಿಗಳನ್ನಾಗಿ ಹೊಂದಿರುವ ಯಾವ ಶಾಸ್ತ್ರವೂ (ಈ ವಿಶ್ವದಲ್ಲಿ) ಇಲ್ಲ.

**ಎಲ್ಲ ಸ್ತರದ ಮುಮುಕ್ಷುಗಳು ಈ ಗ್ರಂಥಕ್ಕೆ ಅಧಿಕಾರಿಗಳು**

**ಟೀಕಾ - ಅಥವಾ ಸಂವಿಚ್ಛಬ್ದೇನ ತತ್ಸಾಧ್ಯೋ ಮೋಕ್ಷ ಉಪಲಕ್ಷ್ಯತೇ । ಮೋಕ್ಷಸ್ಯ ಕರ್ಮಸಾಧ್ಯತ್ವಂ ನಿರಾಕರ್ತುಂ, ಪ್ರಕರಣಸ್ಯ ಪ್ರಯೋಜನೇನ ಸಂಬಂಧಮುಪಪಾದಯಿತುಂ ಚ ಲಾಕ್ಷಣಿಕಪ್ರಯೋಗಃ । ಏವಂ ತರ್ಹಿ ನಿರಧಿಕಾರಿತ್ವಮ್? ಇತ್ಯತ ಉಕ್ತಂ 'ಸಜ್ಜನೇತಿ' । ಯೇ ಖಲು ಸಾತ್ವಿಕ-ಪ್ರಕೃತಯೋಽಧೀತಸಾಂಗಾಮ್ನಾಯಾಃ, ಶಮದಮಾದಿಸಂಪನ್ನಾಃ, ನಿತ್ಯಾ-ನಿತ್ಯವಸ್ತುವಿವೇಕವನ್ತೋಽಖಿಲಸಾಂಸಾರಿಕಭೋಗೇಭ್ಯೋ ವಿರಕ್ತಾ ಮುಮುಕ್ಷವೋ, ಭಗವತ್ಸಂವಿದೇಕಸಾಧ್ಯತ್ವಾತ್ ಮೋಕ್ಷಸ್ಯ, ತಾಮೇವಾರ್ಥಯನ್ತೇ ತೇಷಾಂ ಸಂವಿದೇ । ತಸ್ಮಾತ್ 'ವಿಷಯಪ್ರಯೋಜನ ಸಂಬಂಧಾಧಿಕಾರಿಸಂಪನ್ನತ್ವಾದ್ ಆರಂಭಣೀಯಂ ಪ್ರಕರಣಮ್' ಇತಿ ಸ್ಥಿತಮ್ ।**

ಅಥವಾ **'ಸಂವಿತ್'** ಶಬ್ದದಿಂದ, ಅದರಿಂದ ಸಾಧ್ಯವಾದ ಮೋಕ್ಷವನ್ನು ಊಹಿಸಲಾಗುವುದು. ಮೋಕ್ಷವು ಕರ್ಮದಿಂದ ಪ್ರಾಪ್ತವಾಗುವುದು ಎಂಬುದನ್ನು ನಿರಾಕರಿಸಲು[2] ಹಾಗೂ ಗ್ರಂಥಕ್ಕೂ ಫಲಕ್ಕೂ ಸಂಬಂಧವನ್ನು

---

1. 'ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ ತದರ್ಥಕಂ' ಎಂದು ಆಚಾರ್ಯರು ಉದಾಹರಿಸಿರುವ ಪ್ರಮಾಣದಂತೆ ಏಕಾಂತ ಭಕ್ತರಿಗೆ ನಾರಾಯಣನೇ ಪರಮ ಪ್ರಯೋಜನ. ಇನ್ನುಳಿದವುಗಳೆಲ್ಲ ಆತನ ಪ್ರಾಪ್ತಿಗಾಗಿ ಎಂದು ಅವರು ಭಾವಿಸಿರುವರು' ಎಂಬ ಭಾವ.
2. ಕೆಲವು ವಾದಿಗಳು ಮೋಕ್ಷವನ್ನು ಕರ್ಮಸಾಧ್ಯ ಎಂದು ಸಂದೇಹಿಸಿದ್ದರು, ಅದನ್ನು ಪರಿಹರಿಸಿದಂತಾಯಿತು. ಈ ಲಾಕ್ಷಣಿಕಪ್ರಯೋಗದಿಂದ 'ಮೋಕ್ಷವು ಜ್ಞಾನೈಕಸಾಧ್ಯ' ಎಂದು ತಿಳಿಸಿದಂತಾಯಿತು ಎಂದು ಭಾವ.

ತಿಳಿಸುವ ನಿಮಿತ್ತ ಲಾಕ್ಷಣಿಕ ಪ್ರಯೋಗ.[1] ಹೀಗಾದಲ್ಲಿ (ಶಾಸ್ತ್ರಕ್ಕೆ ಮೋಕ್ಷವು ಫಲ ಎಂತಾದಲ್ಲಿ ಈ ಶಾಸ್ತ್ರವು)ಅಧಿಕಾರಿರಹಿತವೆಂದಾಗುವದಿಲ್ಲವೇ ?[2] ಆದುದರಿಂದ ಉತ್ತರಿಸುತ್ತಾರೆ 'ಸಜ್ಜನ...' ಎಂದು ಯಾರು ಅಂಗಸಹಿತವಾದ ವೇದಗಳನ್ನು ಅಭ್ಯಸಿಸಿರುವರೋ ಶಮದಮಾದಿಸಂಪನ್ನರಾಗಿರುವರೋ, ನಿತ್ಯಾನಿತ್ಯವಸ್ತುಗಳ ವಿವೇಕಜ್ಞಾನವನ್ನು ಹೊಂದಿರುವರೋ, ಎಲ್ಲ ಸಾಂಸಾರಿಕಭೋಗಗಳಿಂದ ವಿರಕ್ತರಾಗಿರುವರೋ, ಮೋಕ್ಷೇಚ್ಛುಗಳಾದ ಸಾತ್ವಿಕಸ್ವಭಾವದವರು, ಮೋಕ್ಷವು ಭಗವಂತನ ಜ್ಞಾನದಿಂದ ಮಾತ್ರ ಸಾಧ್ಯವಾದುದರಿಂದ ಅದನ್ನೇ (ಆ ಜ್ಞಾನವನ್ನೇ) ಬಯಸುತ್ತಾರೋ, ಅಂತಹವರಿಗೆ ಜ್ಞಾನಕ್ಕಾಗಿ. ಆದುದರಿಂದ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿಗಳು ಇರುವದರಿಂದ ಈ ಗ್ರಂಥವು ಆರಂಭಣೀಯ ಎಂದಾಯಿತು.

**-:ಅನುಬಂಧಚತುಷ್ಟಯಮಂಡನೆಯು ಸಮಾಪ್ತ :-**

## ॥ ಪ್ರಮಾಣಗಳ ನಿರ್ಣಯ ॥

ಯಾವುದೇ ವಾದದ ಆರಂಭದಲ್ಲಿ ಅತಿ ಮುಖ್ಯವಾಗಿ ನಿರ್ಣಯವಾಗಬೇಕಾದ ಸಂಗತಿ ಸಮಯಬಂಧ. ಅದರ ಮೌಲಿಕ ವಿವರವನ್ನು ಇಲ್ಲಿ ಕಾಣಬಹುದಾಗಿದೆ. ಆಚಾರ್ಯರ ಮಹತ್ತರ ಕೊಡುಗೆಗಳಲ್ಲಿ ಇದೂ ಒಂದು. ಈ ಅಡಿಗಲ್ಲು ಇಲ್ಲದೆ ವಾದದ ಮಂಡನೆಯು ಕೊನೆಯನ್ನು ಕಾಣದು.

**ಸದಾಗಮಗಳು**

**ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।**
**ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್ ॥**
**ಯೇ ಚಾನುಯಾಯಿನಸ್ತ್ವೇಷಾಂ ಸರ್ವೇ ತೇ ಚ ಸದಾಗಮಾಃ ।**
**ದುರಾಗಮಾಸ್ತದನ್ಯೇ ಯೇ ತೈರ್ನ ಜ್ಞೇಯೋ ಜನಾರ್ದನಃ ॥**

1. ಈ ಪ್ರಕರಣದಿಂದ ಪ್ರಾಪ್ತವಾಗುವ ಜ್ಞಾನದಿಂದ ಮೋಕ್ಷವು ಸಾಧ್ಯ. ಆದುದರಿಂದ ಫಲ ಮತ್ತು ಗ್ರಂಥಕ್ಕೆ ಸಾಧ್ಯ-ಸಾಧಕಭಾವ ಸಂಬಂಧವು ಎಂದು ತಿಳಿಸಿದಂತಾಯಿತು.
2. ನೈಯಾಯಿಕ ಬೌದ್ಧ ಮುಂತಾದವರು ಒಪ್ಪಿರುವ ಮೋಕ್ಷವು ಯಾರಿಂದಲೂ ಅಪೇಕ್ಷಿತವಾದುದಲ್ಲ, ಆದುದರಿಂದ ಈ ಮೋಕ್ಷವನ್ನು ಯಾರೂ ಬಯಸಲಾರರು, ತನ್ನಿಮಿತ್ತ ಯಾರೂ ಅಧಿಕಾರಿಗಳು ಇಲ್ಲ ಎಂದು ಪ್ರಾಶ್ನಿಕನ ಅಂತರಂಗ.

ಋಗ್ವೇದ ಮುಂತಾದವು (ನಾಲ್ಕು ವೇದಗಳು), ಭಾರತ, ಸಂಪೂರ್ಣ ಪಂಚರಾತ್ರ, ಮೂಲರಾಮಾಯಣ, ಇದಕ್ಕೆ (ವೇದಕ್ಕೆ) ಅನುಗುಣವಾದ ಪುರಾಣ ಮತ್ತೆ ಇವುಗಳಿಗೆ ಅನುಗುಣವಾದವುಗಳೇ ಸದಾಗಮಗಳು. ಇವುಗಳ ಹೊರತಾದವು ದುರಾಗಮಗಳು, ಇವುಗಳಿಂದ ಜನಾರ್ದನನು ಸರ್ವಥಾ ಅಜ್ಞೇಯನು.

**ಕ್ರಮಾತ್,** ಸದಾಗಮೈಕವಿಜ್ಞೇಯತ್ವಸ್ಯ ಪ್ರಥಮಪ್ರತಿಪಾದ್ಯತ್ವಂ ಪ್ರತಿಜ್ಞಾತಮ್ । **'ಸದುಕ್ತಿಭಿಃ'** ಇತಿ **ಚೋಕ್ತಮ್** । ತತ್ರ ಕಾಸ್ತಾ ನಾರಾಯಣಸ್ಯ ಸದಾಗಮೈಕವೇದ್ಯತ್ವಂ ಪ್ರತಿಪಾದಯನ್ತ್ಯಃ ಸದುಕ್ತಯಃ? ಇತ್ಯತ ಆಹ - **'ಋಗಾದ್ಯಾ'** ಇತಿ । ಋಗ್ಯಜುಃ ಸಾಮಾಥರ್ವಸಂಜ್ಞಕಾ ವೇದಾಃ । **ಚಾಥಶಬ್ದೌ** ಪರಸ್ಪರಸಮುಚ್ಚಯೇ । **ಏವಶಬ್ದಯೋ**ಽಸ್ತು 'ತ ಏವ ಸದಾಗಮಾ, ತದನ್ಯೇ ಯೇ ತೇ ಸರ್ವೇ ದುರಾಗಮಾ ಏವ' ಇತಿ ವಾ 'ತೈರ್ನೈವ ಜ್ಞೇಯಃ, ಏತೈರೇವ ಜ್ಞೇಯಃ' ಇತಿ ವಾ ಸಂಬಂಧಃ । **ಪಂಚರಾತ್ರಗತಾನಾಂ ಜೀವಜನನಾದಿವಾಚಿನಾಂ ಕೇಷಾಂ ಚಿದ್ ವಾಕ್ಯಾನಾಮಪ್ರಾಮಾಣ್ಯಂ ಕೇಚಿದಾಚಕ್ಷತೇ, ತನ್ನಿರಾಸಾರ್ಥಮ್ 'ಅಖಿಲಮ್'** ಇತ್ಯುಕ್ತಮ್ । **ಏತದಾತ್ಮಕಂ- ಋಗಾದ್ಯನುಕೂಲಮ್** । **ಏಷಾಮ್- ಋಗಾದೀನಾಂ, ಅನುಯಾಯಿನಃ- ಅನುಕೂಲಗ್ರನ್ಥಾ ಮನ್ವಾದ್ಯಾಃ** । **ತುಶಬ್ದೋ** ವಿಶೇಷಣಾರ್ಥಃ । **ತದನ್ಯೇ- ತದ್ವಿರುದ್ಧಾಃ ತದುದಾಸೀನಾಶ್ಚ** ।

'ಸದಾಗಮೈಕ ವಿಜ್ಞೇಯತ್ವ' ಎಂಬ ವಿಷಯವನ್ನು ಮೊದಲು ಪ್ರತಿಪಾದಿಸಲಾಗುವುದು ಎಂದು **'ಕ್ರಮಾತ್'** ಎನ್ನುವದರಿಂದ ತಿಳಿಸಿದಂತಾಯಿತು. ಮತ್ತು **'ಸದುಕ್ತಿಭಿಃ'** ಎಂದು ಹೇಳಲಾಗಿದೆ. ಇಲ್ಲಿ ನಾರಾಯಣನನ್ನು 'ಸದಾಗಮೈಕವಿಜ್ಞೇಯ' ಎಂದು ಪ್ರತಿಪಾದಿಸುವ ಸದುಕ್ತಿಗಳು ಯಾವವು ? ಆದುದರಿಂದ ಹೇಳಿದರು **'ಋಗಾದ್ಯಾಃ'** ಎಂದು. ಋಗ್, ಯಜುಸ್, ಸಾಮ, ಅಥರ್ವ ಎಂಬ ಹೆಸರಿನ ವೇದಗಳು. **'ಚ' 'ಅಥ'** ಶಬ್ದಗಳು (ಹಿಂದಿನ ಮುಂದಿನ ವಿಷಯಗಳ) ಪರಸ್ಪರ ಒಟ್ಟುಗೂಡಿಸಲು. 'ಏವ' ಎಂಬ ಎರಡು ಶಬ್ದಗಳಾದರೋ 'ಅವುಗಳೇ ಸದಾಗಮಗಳು, ಅವುಗಳಿಂದ

ತಿಳಿಸುವ ನಿಮಿತ್ತ ಲಾಕ್ಷಣಿಕ ಪ್ರಯೋಗ.[1] ಹೀಗಾದಲ್ಲಿ (ಶಾಸ್ತ್ರಕ್ಕೆ ಮೋಕ್ಷವು ಫಲ ಎಂತಾದಲ್ಲಿ ಈ ಶಾಸ್ತ್ರವು) ಅಧಿಕಾರಿರಹಿತವೆಂದಾಗುವದಿಲ್ಲವೇ ?[2] ಆದುದರಿಂದ ಉತ್ತರಿಸುತ್ತಾರೆ 'ಸಜ್ಜನ...' ಎಂದು ಯಾರು ಅಂಗಸಹಿತವಾದ ವೇದಗಳನ್ನು ಅಭ್ಯಸಿಸಿರುವರೋ ಶಮದಮಾದಿಸಂಪನ್ನರಾಗಿರುವರೋ, ನಿತ್ಯಾನಿತ್ಯವಸ್ತುಗಳ ವಿವೇಕಜ್ಞಾನವನ್ನು ಹೊಂದಿರುವರೋ, ಎಲ್ಲ ಸಾಂಸಾರಿಕಭೋಗಗಳಿಂದ ವಿರಕ್ತರಾಗಿರುವರೋ, ಮೋಕ್ಷೇಚ್ಛುಗಳಾದ ಸಾತ್ವಿಕಸ್ವಭಾವದವರು, ಮೋಕ್ಷವು ಭಗವಂತನ ಜ್ಞಾನದಿಂದ ಮಾತ್ರ ಸಾಧ್ಯವಾದುದರಿಂದ ಅದನ್ನೇ (ಆ ಜ್ಞಾನವನ್ನೇ) ಬಯಸುತ್ತಾರೋ, ಅಂತಹವರಿಗೆ ಜ್ಞಾನಕ್ಕಾಗಿ. ಆದುದರಿಂದ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿಗಳು ಇರುವದರಿಂದ ಈ ಗ್ರಂಥವು ಆರಂಭಣೀಯ ಎಂದಾಯಿತು.

**-:ಅನುಬಂಧಚತುಷ್ಟಯಮಂಡನೆಯು ಸಮಾಪ್ತ :-**

## ॥ ಪ್ರಮಾಣಗಳ ನಿರ್ಣಯ ॥

ಯಾವುದೇ ವಾದದ ಆರಂಭದಲ್ಲಿ ಅತಿ ಮುಖ್ಯವಾಗಿ ನಿರ್ಣಯವಾಗಬೇಕಾದ ಸಂಗತಿ ಸಮಯಬಂಧ. ಅದರ ಮೌಲಿಕ ವಿವರವನ್ನು ಇಲ್ಲಿ ಕಾಣಬಹುದಾಗಿದೆ. ಆಚಾರ್ಯರ ಮಹತ್ತರ ಕೊಡುಗೆಗಳಲ್ಲಿ ಇದೂ ಒಂದು. ಈ ಅಡಿಗಲ್ಲು ಇಲ್ಲದೆ ವಾದದ ಮಂಡನೆಯು ಕೊನೆಯನ್ನು ಕಾಣದು.

**ಸದಾಗಮಗಳು**

**ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।**
**ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್ ॥**
**ಯೇ ಚಾನುಯಾಯಿನಸ್ತ್ವೇಷಾಂ ಸರ್ವೇ ತೇ ಚ ಸದಾಗಮಾಃ ।**
**ದುರಾಗಮಾಸ್ತದನ್ಯೇ ಯೇ ತೈರ್ನ ಜ್ಞೇಯೋ ಜನಾರ್ದನಃ ॥**

---

1. ಈ ಪ್ರಕರಣದಿಂದ ಪ್ರಾಪ್ತವಾಗುವ ಜ್ಞಾನದಿಂದ ಮೋಕ್ಷವು ಸಾಧ್ಯ. ಆದುದರಿಂದ ಫಲ ಮತ್ತು ಗ್ರಂಥಕ್ಕೆ ಸಾಧ್ಯ-ಸಾಧಕಭಾವ ಸಂಬಂಧವು ಎಂದು ತಿಳಿಸಿದಂತಾಯಿತು.
2. ನೈಯಾಯಿಕ ಬೌದ್ಧ ಮುಂತಾದವರು ಒಪ್ಪಿರುವ ಮೋಕ್ಷವು ಯಾರಿಂದಲೂ ಅಪೇಕ್ಷಿತವಾದುದಲ್ಲ, ಆದುದರಿಂದ ಈ ಮೋಕ್ಷವನ್ನು ಯಾರೂ ಬಯಸಲಾರರು, ತನ್ನಿಮಿತ್ತ ಯಾರೂ ಅಧಿಕಾರಿಗಳು ಇಲ್ಲ ಎಂದು ಪ್ರಾಶ್ನಿಕನ ಅಂತರಂಗ.

ಋಗ್ವೇದ ಮುಂತಾದವು (ನಾಲ್ಕು ವೇದಗಳು), ಭಾರತ, ಸಂಪೂರ್ಣ ಪಂಚರಾತ್ರ , ಮೂಲರಾಮಾಯಣ, ಇದಕ್ಕೆ (ವೇದಕ್ಕೆ) ಅನುಗುಣವಾದ ಪುರಾಣ ಮತ್ತೆ ಇವುಗಳಿಗೆ ಅನುಗುಣವಾದವುಗಳೇ ಸದಾಗಮಗಳು. ಇವುಗಳ ಹೊರತಾದವು ದುರಾಗಮಗಳು, ಇವುಗಳಿಂದ ಜನಾರ್ದನನು ಸರ್ವಥಾ ಅಜ್ಞೇಯನು.

**ಕ್ರಮಾತ್,** ಸದಾಗಮೈಕವಿಜ್ಞೇಯತ್ವಸ್ಯ ಪ್ರಥಮಪ್ರತಿಪಾದ್ಯತ್ವಂ ಪ್ರತಿಜ್ಞಾತಮ್ । **'ಸದುಕ್ತಿಭಿಃ'** ಇತಿ ಚೋಕ್ತಮ್ । ತತ್ರ ಕಾಸ್ತಾ ನಾರಾಯಣಸ್ಯ ಸದಾಗಮೈಕವೇದ್ಯತ್ವಂ ಪ್ರತಿಪಾದಯನ್ತ್ಯಃ ಸದುಕ್ತಯಃ? ಇತ್ಯತ ಆಹ - **'ಋಗಾದ್ಯಾ'** ಇತಿ । ಋಗ್ಯಜುಃ ಸಾಮಾಥರ್ವಸಂಜ್ಞಕಾ ವೇದಾಃ । **ಚಾಥಶಬ್ದೌ** ಪರಸ್ಪರಸಮುಚ್ಚಯೇ । **ಏವಶಬ್ದಯೋಽಸ್ತು** 'ತ ಏವ ಸದಾಗಮಾ, ತದನ್ಯೇ ಯೇ ತೇ ಸರ್ವೇ ದುರಾಗಮಾ ಏವ' ಇತಿ ವಾ 'ತೈರ್ನೈವ ಜ್ಞೇಯಃ, ಏತೈರೇವ ಜ್ಞೇಯಃ' ಇತಿ ವಾ ಸಂಬಂಧಃ । **ಪಂಚರಾತ್ರಗತಾನಾಂ ಜೀವಜನನಾದಿವಾಚಿನಾಂ ಕೇಷಾಂ ಚಿದ್ ವಾಕ್ಯಾನಾಮಪ್ರಾಮಾಣ್ಯಂ ಕೇಚಿದಾಚಕ್ಷತೇ, ತನ್ನಿರಾಸಾರ್ಥಮ್ 'ಅಖಿಲಮ್'** ಇತ್ಯುಕ್ತಮ್ । **ಏತದಾತ್ಮಕಂ-** ಋಗಾದ್ಯನುಕೂಲಮ್ । **ಏಷಾಮ್-** ಋಗಾದೀನಾಂ, **ಅನುಯಾಯಿನಃ-** ಅನುಕೂಲಗ್ರನ್ಥಾ ಮನ್ವಾದ್ಯಾಃ । **ತುಶಬ್ದೋ** ವಿಶೇಷಣಾರ್ಥಃ । **ತದನ್ಯೇ-** ತದ್ವಿರುದ್ಧಾಃ ತದುದಾಸೀನಾಶ್ಚ ।

'ಸದಾಗಮೈಕ ವಿಜ್ಞೇಯತ್ವ' ಎಂಬ ವಿಷಯುವನ್ನು ಮೊದಲು ಪ್ರತಿಪಾದಿಸಲಾಗುವುದು ಎಂದು **'ಕ್ರಮಾತ್'** ಎನ್ನುವದರಿಂದ ತಿಳಿಸಿದಂತಾಯಿತು. ಮತ್ತು **'ಸದುಕ್ತಿಭಿಃ'** ಎಂದು ಹೇಳಲಾಗಿದೆ. ಇಲ್ಲಿ ನಾರಾಯಣನನ್ನು 'ಸದಾಗಮೈಕವಿಜ್ಞೇಯ' ಎಂದು ಪ್ರತಿಪಾದಿಸುವ ಸದುಕ್ತಿಗಳು ಯಾವವು ? ಆದುದರಿಂದ ಹೇಳಿದರು **'ಋಗಾದ್ಯಾಃ'** ಎಂದು. ಋಗ್, ಯಜುಸ್, ಸಾಮ, ಅಥರ್ವ ಎಂಬ ಹೆಸರಿನ ವೇದಗಳು. **'ಚ' 'ಅಥ'** ಶಬ್ದಗಳು (ಹಿಂದಿನ ಮುಂದಿನ ವಿಷಯಗಳ) ಪರಸ್ಪರ ಒಟ್ಟುಗೂಡಿಸಲು. 'ಏವ' ಎಂಬ ಎರಡು ಶಬ್ದಗಳಾದರೋ 'ಅವುಗಳೇ ಸದಾಗಮಗಳು, ಅವುಗಳಿಂದ

ಭಿನ್ನವಾದವುಗಳು ಯಾವುವೋ ಅವೆಲ್ಲವೂ ದುರಾಗಮಗಳೇ' ಎಂದು. ಅಥವಾ 'ಅವುಗಳಿಂದ (ದುರಾಗಮಗಳಿಂದ) ಜ್ಞೇಯನೇ ಅಲ್ಲ, ಇವುಗಳಿಂದಲೇ(ಸದಾಗಮಗಳಿಂದಲೇ) ಜ್ಞೇಯ' ಎಂದಾದರೂ ಸಂಯೋಜಿಸುವುದು. 'ಜೀವಿಗಳಿಗೆ ಜನನವಿದೆ ' ಎಂದು ಹೇಳುವ ಪಂಚರಾತ್ರಾಗಮದ ಕೆಲವು ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಕೆಲವರು ಹೇಳುವರು. ಅದನ್ನು ನಿರಾಕರಿಸಲು **'ಅಖಿಲಂ'** ಎಂದು ಹೇಳಲಾಗಿದೆ[1]. **ಏತದಾತ್ಮಕಂ-** ಋಗಾದಿಗಳಿಗೆ ಅನುಕೂಲಕರವಾಗಿರುವ .[2] **ಏಷಾಂ-** ಋಗ್ವೇದವೇ ಮೊದಲಾದ ವೇದಗಳಿಗೆ, **ಅನುಯಾಯಿನಃ-** ಅನುಕೂಲಗಳಾದ ಮನುಸ್ಮೃತಿಯೇ ಮೊದಲಾದವುಗಳು. **'ತು'** ಎಂಬ ಶಬ್ದವು ವಿಶೇಷಣಾರ್ಥಕವಾಗಿದೆ. **ತದನ್ಯೇ-** ಅವುಗಳಿಗೆ (ಋಗ್ವೇದಾದಿಗಳಿಗೆ) ವಿರುದ್ಧವಾದವುಗಳು, ಅವುಗಳಲ್ಲಿ (ಸದಾಗಮದ ವಿಷಯದಲ್ಲಿ) ಅನಾದರ ಭಾವವನ್ನು ಹೊಂದಿರುವವೂ ಕೂಡ (ದುರಾಗಮಗಳು).

**ಶ್ರದ್ಧಾ ಭಕ್ತಿಗಳೇ ಅರಿವಿಗೆ ಮೂಲ**

**ಜ್ಞೇಯ ಏತೈಸ್ಸದಾಯುಕ್ತೈರ್ಭಕ್ತಿಮದ್ಭಿಃ ಸುನಿಷ್ಠಿತೈಃ ॥**

ಇವುಗಳಿಂದ (ವೇದಾದಿಗಳಿಂದ ಮಾತ್ರ ), (ವೇದಾದಿಗಳ ವಿಚಾರದಲ್ಲಿ) ನಿರಂತರವಾಗಿ ಆಸಕ್ತರಾದವರಿಂದ, ಮತ್ತು ತಡೆಯಿರದ ಭಕ್ತಿಸಹಿತರಾದವರಿಂದ (ಮಾತ್ರ ಹರಿಯ) ಅರಿವು ಶಕ್ಯ.

**ಕಥಂ ತರ್ಹಿ ವೈಶೇಷಿಕಾದಿಭಿರುಕ್ತವಿಶೇಷಣೋ ನಾರಾಯಣೋ ನ**

---

1. ಮೂಲದಲ್ಲಿ 'ಪಂಚರಾತ್ರಮಥಾಖಿಲಂ' ಎಂದಿದೆ. ಸಮಗ್ರ ಪಂಚರಾತ್ರವು ಸದುಕ್ತಿ, ಹಾಗಾದಲ್ಲಿ ಉಳಿದ ವೇದಾದಿಗಳು ಸಮಗ್ರವಾಗಿ ಸದುಕ್ತಿಗಳಲ್ಲವೆ ? ಎಂಬ ಸಂದೇಹಕ್ಕೆ ಅವಕಾಶವಿದೆ. ಅದನ್ನು ಪರಿಹರಿಸಿರುವರು. ಸಮಗ್ರ ವೇದಾದಿಗಳು ಸದುಕ್ತಿ ಎನ್ನುವದರಲ್ಲಿ ವಿವಾದವೇ ಇಲ್ಲ . ಇನ್ನು ಪಂಚರಾತ್ರದ ಬಗ್ಗೆ ಅನ್ಯರಲ್ಲಿ ಇರಬಹುದಾದ ಭಾವನೆಯು ಸರಿಯಲ್ಲ ಎಂದು ಭಾವ.

2. ಮೂಲದಲ್ಲಿ 'ಪುರಾಣಂ ಚೈತದಾತ್ಮಕಂ' ಎಂದು ಹೇಳಲಾಗಿದೆ. ಎಲ್ಲ ಪುರಾಣಗಳು ಸದುಕ್ತಿಗಳಲ್ಲ, ಕೆಲವು ಮೋಹನಕ್ಕಾಗಿಯೇ ರಚಿತವಾಗಿವೆ, ಆದುದರಿಂದ ವೇದಾನುಕೂಲ ಗಳಾದ ಪುರಾಣಗಳು ಮಾತ್ರ ಸದುಕ್ತಿಗಳು ಎಂದು ಭಾವ.

**ಜ್ಞಾಯತೇ ? ಇತ್ಯತ ಆಹ 'ಸದಾಯುಕ್ತೈಃ' ಇತಿ । ವೇದಾದ್ಯರ್ಥವಿಚಾರೇ ಸದಾಭಿಯೋಗಯುಕ್ತೈಃ । ವಾಕ್ಯಾರ್ಥೋ ಹಿ ವಿಚಾರಾಭಿಯೋಗ ಏವ ಸ್ಫುರತಿ । ನಚ ವೈಶೇಷಿಕಾದಯೋ ವೇದಾದ್ಯರ್ಥವಿಚಾರೇಽಭಿಯೋಗ-ಯುಕ್ತಾಃ । ತರ್ಹಿ ಮೀಮಾಂಸಕೈಃ ಕಿಂ ನ ಜ್ಞಾಯತೇ? ಇತ್ಯತ ಉಕ್ತಂ 'ಭಕ್ತಿಮದ್ಭಿಃ' ಇತಿ । 'ಯೋಹಿ ಯತ್ರಾದರವಾನ್ ತಸ್ಮೈ ತದ್ವಸ್ತು ವಿದ್ಯಮಾನಮಪಿ ಸ್ಫುರತಿ, ನತ್ವಾದರವತೋಽನ್ಯತ್ರಾಽದರವತಶ್ಚ' ಇತ್ಯನು-ಭವಸಿದ್ಧಮ್ । ನ ಚ ತಥಾ ಮೀಮಾಂಸಕಾಃ । ಭಕ್ತಿರಪಿ ನ ಕಾದಾಚಿತ್ಕೀ ವೇದಾದ್ಯರ್ಥಭಗವಜ್ಜ್ಞಾನೋಪಯೋಗಿನೀ ಇತ್ಯುಕ್ತಮ್ 'ಸುನಿಶ್ಚಿತೈಃ' ಇತಿ ।**

ವೈಶೇಷಿಕ ಮುಂತಾದ ವಾದಿಗಳಿಗೆ ನಾರಾಯಣನು ನೀವು ತಿಳಿಸಿದ (ಸದಾಗಮೈಕ ವಿಜ್ಞೇಯ ಇತ್ಯಾದಿ) ವಿಶೇಷಣಗಳಿಂದ (ಯುಕ್ತನಾಗಿ) ಏಕೆ ತಿಳಿಯುತ್ತಿಲ್ಲ[1]. ಆದುದರಿಂದ ಉತ್ತರಿಸುತ್ತಾರೆ. '**ಸದಾಯುಕ್ತೈಃ**' ಎಂದು. ವೇದಾದಿಗಳ ಅರ್ಥಗಳ ಚರ್ಚೆಯಲ್ಲಿ ನಿರಂತರ ಆಸಕ್ತರಾದವರಿಂದ. (ವೇದಗಳ) ವಾಕ್ಯಾರ್ಥವು (ವೇದ) ವಿಚಾರದಲ್ಲಿ ಆಸಕ್ತಿ ಇದ್ದರೇ ಪ್ರತಿಭಾಸಮಾನವಾಗುವುದು. ವೈಶೇಷಿಕಾದಿಗಳಾದರೋ ವೇದಾರ್ಥ-ವಿಚಾರದಲ್ಲಿ ಆಸಕ್ತರಾಗಿಲ್ಲ. ಹಾಗಾದಲ್ಲಿ ಮೀಮಾಂಸಕರಿಂದ ಏಕೆ (ನಾರಾಯಣನು ನೀವು ತಿಳಿಸಿದಂತೆ) ತಿಳಿಯಲಾಗಿಲ್ಲ ಎಂದು,[2] ಆದುದರಿಂದ ಉತ್ತರಿಸಿದರು '**ಭಕ್ತಿಮದ್ಭಿಃ**' ಎಂದು. ಯಾವ ವ್ಯಕ್ತಿಯು ಯಾವ ವಿಷಯದಲ್ಲಿ ಆಸಕ್ತಿಯನ್ನು ಹೊಂದಿರುವನೋ, ಆ ವ್ಯಕ್ತಿಗೆ ಅಲ್ಲಿರುವ ವಸ್ತುವು

---

1. ನ್ಯಾಯಮತಾನುಯಾಯಿಗಳು ವೈಶೇಷಿಕರು. ಅವರು ವೇದಗಳನ್ನು ಪ್ರಮಾಣ ಎಂದು ಒಪ್ಪಿರುವರು. ಆದರೆ ಅವರು ನಾರಾಯಣನನ್ನು ಅನುಮಾನದಿಂದ ಊಹಿಸಲು ಶಕ್ಯ ಎಂದು, ಎಂಟೇ ಗುಣಗಳಿಂದ ಕೂಡಿದವ ಎಂದು ತಿಳಿಸುವರು. ನೀವು ಹೇಳಿದ ವಿಶೇಷಗಳನ್ನು ಅವರು ನಾರಾಯಣನಿಗೆ ಒಪ್ಪಿಲ್ಲ, ಇದು ಹೇಗೆ? ಎಂದು ಭಾವ.

2. ಮೀಮಾಂಸಕರು ವೈಶೇಷಿಕರಂತೆ ಅನುಮಾನಕ್ಕೆ ಹೆಚ್ಚು ಆದ್ಯತೆಯನ್ನು ನೀಡುವುದಿಲ್ಲ. ವೇದಾರ್ಥವಿಚಾರದಲ್ಲಿ ಆಸಕ್ತಿಯನ್ನು ಹೊಂದಿರುವರು. ಆದುದರಿಂದ ಅವರಿಗೆ ನೀವು ತಿಳಿಸಿದಂತೆ ನಾರಾಯಣನು ತೋರಬೇಕಿತ್ತು, ಆದರೆ ಅವರು ಕರ್ಮಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ನೀಡುವರು ಅದು ಹೇಗೆ ? ಎಂದು ಪ್ರಾಶ್ನಿಕನ ಭಾವ

ಪ್ರತಿಭಾಸಮಾನವಾಗುವುದು, ಆದರವಿಲ್ಲದವಗೆ, ಅಥವಾ ಬೇರೆಡೆ ಆದರವಿರುವವಗೆ ಇಲ್ಲ (ಪ್ರತಿಭಾಸಮಾನವಾಗುವುದಿಲ್ಲ) ಇದು ಅನುಭವದಿಂದ ಸಿದ್ಧ[1]. ಮೀಮಾಂಸಕರಾದರೋ ಆ ರೀತಿಯಲ್ಲಿ ಇಲ್ಲ [2]. 'ಭಕ್ತಿಯೂ ಸಹ ಕೆಲವೊಮ್ಮೆ ಮಾತ್ರ ಇದ್ದಲ್ಲಿ ವೇದಾದಿಗಳ ಅರ್ಥನಾದ ಭಗವಂತನ ಜ್ಞಾನಕ್ಕೆ ಉಪಯೋಗವಾಗಲಾರದು' ಎಂದು ತಿಳಿಸುತ್ತಾರೆ 'ಸುನಿಷ್ಠಿತೈಃ' ಎಂದು.

**ಆಗಮದಿಂದ ಮಾತ್ರ ವೇದ್ಯ**

**ನ ಚ ಕೇವಲತರ್ಕೇಣ ನಾಕ್ಷಜೇನ ನ ಕೇನಚಿತ್ ।**
**ಕೇವಲಾಗಮವಿಜ್ಞೇಯೋ ಭಕ್ತೈರೇವ ನ ಚಾನ್ಯಥಾ ॥ ಇತಿ ಬ್ರಹ್ಮಾಂಡೇ ।**

ಕೇವಲ (ಆಗಮದ ಸಹಕಾರವಿಲ್ಲದ) ತರ್ಕದಿಂದ, ಪ್ರತ್ಯಕ್ಷದಿಂದ ಯಾರೂ ತಿಳಿಯಲಾರರು. ಕೇವಲ ಆಗಮದಿಂದ ಭಕ್ತರಿಂದ ಮಾತ್ರ (ಹರಿಯು) ಜ್ಞೇಯ. ಎಂದು ಬ್ರಹ್ಮಾಂಡಪುರಾಣದಲ್ಲಿ (ತಿಳಿಸಲಾಗಿದೆ).

**'ಏತೈರೇವ'** ಇತ್ಯಸ್ಯ 'ದುರಾಗಮಾ ಇವ ವ್ಯಾವರ್ತ್ಯಾನ್ತರಮಸ್ತಿ' ಇತ್ಯಾಹ **'ನ ಚ'** ಇತಿ । **ಕೇವಲಃ**- ವೇದಾದ್ಯನುಕೂಲರಹಿತಃ । ತರ್ಕಶಬ್ದೇನ **ದೂಷಣಾನುಮಾನಂ ವ್ಯಾವರ್ತಿತಮ್** । ತದಿತರಾನುಮಾನವ್ಯಾವೃತ್ತ್ಯರ್ಥಮಾಹ **'ನ ಕೇನ ಚಿತ್'** ಇತಿ । ಅಥವಾ ತರ್ಕಶಬ್ದೇನಾನುಮಾನಮೇವೋಕ್ತಮ್ । ಕುರು-ಪಾಂಡವವತ್ ಸಾಮಾನ್ಯವಿಶೇಷಭಾವಮಾಶ್ರಿತ್ಯ

1. 'ವಿದ್ಯಮಾನಮಪಿ ಸ್ಫುರತಿ' ಎಂದು ಟೀಕೆಯಲ್ಲಿದೆ. ಇಲ್ಲಿರುವ 'ಅಪಿ'ಶಬ್ದಕ್ಕೆ ಅರ್ಥವೇನು? ಅಪಿ ಶಬ್ದಕ್ಕೆ 'ಸಂಭಾವನಾ' ಎಂದು ಅರ್ಥವಿರೆ. ಆ ಅರ್ಥದಂತೆ 'ಪ್ರತಿಭಾಸಮಾನವಾಗಬಹುದು' ಎಂದು ಅರ್ಥೈಸಬಹುದು. ಸಮುಚ್ಚಯ ಎಂಬ ಅರ್ಥವೂ ಇದೆ. ಈ ಅರ್ಥವನ್ನು ಪರಿಗ್ರಹಿಸಿದಾಗ- 'ಶಬ್ದತಾಡಿತ (ನೇರ) ಅರ್ಥ ಮತ್ತು ವಾಕ್ಯದಿಂದ ಊಹಿತವಾದ ಪ್ರಮೇಯಗಳೂ ಸಹ ಪ್ರತಿಭಾಸಮಾನವಾಗುವುದು' ಎಂದು ಅರ್ಥೈಸಬಹುದು. ಕೈಮುತ್ಯಾರ್ಥದಲ್ಲಿ- 'ಯಾರಿಗೆ ಆದರವಿಲ್ಲವೋ ಆತನಿಗೆ ವಾಕ್ಯದಲ್ಲಿರುವ ವಸ್ತುವೇ ಸ್ಫುರಣವಾಗುವದಿಲ್ಲ ಇನ್ನು ವಾಕ್ಯಾರ್ಥದಿಂದ ಊಹಿತವಾಗುವ ಪ್ರಮೇಯವಿಶೇಷಗಳ ಸ್ಫುರಣವಾಗುವುದುಂಟೆ? ಎಂದು ಅರ್ಥೈಸಬಹುದು.
2. 'ತಸ್ಮೈ ನಮಃ ಕರ್ಮಣೇ' ಎಂದು ಕರ್ಮದಲ್ಲಿಯೇ ಹೆಚ್ಚು ಅಭಿನಿವೇಶನವು ಮೀಮಾಂಸಕರಿಗೆ ಎಂದು ಭಾವ.

**ಅರ್ಥಾಪತ್ತ್ಯಾದಿವ್ಯಾವೃತ್ತ್ಯರ್ಥಮೇತದುಕ್ತಮ್ । ಯದ್ವಾ ಕೇನಚಿತ್ ಸದಾ-ಯುಕ್ತತ್ವಾದಿರಹಿತೇನ ಪುರುಷೇಣ । ಕೇವಲೇತಿ ಸರ್ವಸ್ಯೋಪಸಂಹಾರಃ । ಕೇವಲಗ್ರಹಣೇನ ದುರಾಗಮಾದಿನಿರಾಸಃ । ಆಗಮೇತಿ ಸದಾಗಮ-ಗ್ರಹಣಮ್ । ಭಕ್ತೈಃ ಸದಾಯುಕ್ತೈಃ ಸುನಿಷ್ಠಿತೈಶ್ಚ । ಬ್ರಹ್ಮಾಂಡಪುರಾಣೇ 'ಕಥಿತಮ್' ಇತಿ ಶೇಷಃ ।**

**'ಏತೈರೇವ'** ಎನ್ನುವುದರಿಂದ 'ದುರಾಗಮಗಳಂತೆ ವ್ಯಾವರ್ತ್ಯವಾಗುವ ಇತರ (ಪ್ರಮಾಣಾಭಾಸಗಳೂ) ಇವೆ' ಎಂದು ಹೇಳುವರು **'ನ ಚ'** ಎನ್ನುವುದರಿಂದ. **ಕೇವಲಃ** - ವೇದಾದಿಗಳಿಂದ ಸಂವಾದವನ್ನು ಹೊಂದಿರದ. ತರ್ಕಶಬ್ದದಿಂದ ದೂಷಣಾನುಮಾನವನ್ನು ವ್ಯಾವರ್ತಿಸಲಾಗುವುದು. ಇತರಾನುಮಾನವನ್ನು (ಸಾಧನಾನುಮಾನವನ್ನು) ವ್ಯಾವರ್ತಿಸಲು ಹೇಳುವರು **'ನ ಕೇನ ಚಿತ್'** ಎಂದು. ಅಥವಾ ತರ್ಕಶಬ್ದದಿಂದ ಅನುಮಾನಸಾಮಾನ್ಯವನ್ನೇ (ಸಾಧನಾನುಮಾನ ಮತ್ತು ದೂಷಣಾನುಮಾನಗಳನ್ನು) ಹೇಳಲಾಗಿದೆ. 'ಕೌರವರು ಮತ್ತು ಪಾಂಡವರು' ಎಂದು ಹೇಳುವಂತೆ. ಸಾಮಾನ್ಯವಿಶೇಷಭಾವವನ್ನು ಭಾವಿಸಿ ಅರ್ಥಾಪತ್ತ್ಯಾದಿಗಳನ್ನು ವ್ಯಾವರ್ತಿಸಲು ಇದನ್ನು ('ನ ಕೇನ ಚಿತ್' ಎನ್ನುವುದನ್ನು) ಹೇಳಲಾಗಿದೆ[1]. ಅಥವಾ **ಕೇನಚಿತ್-**

---

1. ಮೂಲದಲ್ಲಿ 'ನ ಚ ಕೇವಲ ತರ್ಕೇಣ ನಾಕ್ಷಜೇನ ನ ಕೇನಚಿತ್' ಎಂದು ಪ್ರಯೋಗಿಸಿರುವರು. ಈ ಶಬ್ದಗಳಿಂದ ವ್ಯಾವರ್ತ್ಯವಾದವುಗಳು ಯಾವುವು ? ತರ್ಕಶಬ್ದವು ದೂಷಣಾನುಮಾನ ಸಾಧನಾನುಮಾನಾದಿ ಎಲ್ಲ ಅನುಮಾನಗಳನ್ನು ತಿಳಿಸುವುದು, ಅಕ್ಷಜೇನ ಎನ್ನುವದರಿಂದ ಪ್ರತ್ಯಕ್ಷದ ವ್ಯಾವೃತ್ತಿಯಾಯಿತು. ಹಾಗಾಗಿ 'ನ ಕೇನಚಿತ್' ಎನ್ನುವುದು ವ್ಯರ್ಥವೆಂಬ ಸಂದೇಹಕ್ಕೆ ಅವಕಾಶವಿದೆ. ಆದರೆ 'ಕೇನಚಿತ್' ಎನ್ನುವದು ಅರ್ಥಾಪತ್ತಿ ಮೊದಲಾದ ಇತರ ಪ್ರಮಾಣಗಳನ್ನು ವ್ಯಾವರ್ತಿಸುವುದು ಎಂದು ಸಮಾಧಾನವನ್ನು ಹೇಳಬಹುದು. ಆದರೂ ಅರ್ಥಾಪತ್ತಿಯೂ ಅನುಮಾನದ ವಿಶೇಷ ತಾನೆ ? ಅದೂ ಸಹ ತರ್ಕಶಬ್ದದಿಂದ ಸಂಗ್ರಹೀತವಾಗುವುದು ಎಂದಲ್ಲಿ, ಕುರು-ಪಾಂಡವನ್ಯಾಯದಂತೆ ಎನ್ನುವರು. ಪಾಂಡವರೂ ಸಹ ಕೌರವ ಎನ್ನುವದರಿಂದಲೇ ಸಂಗ್ರಹೀತರಾಗುವರು, ಆದರೂ 'ಕುರು ಪಾಂಡವ' ಎಂದು ಹೇಳಿದಾಗ 'ಕೌರವ'ಶಬ್ದದಿಂದ ಪಾಂಡವರಹಿತರಾದ ಕೌರವರನ್ನು ತಿಳಿಸಲಾಗುವುದು. ಪ್ರಕೃತ ತರ್ಕಶಬ್ದದಿಂದ ಅರ್ಥಾಪತ್ತಿಯೂ ಪರಿಗ್ರಹೀತವಾಗುವ ಅವಕಾಶವಿದ್ದರೂ ಸಾಧನಾನುಮಾನ ಮತ್ತು ದೂಷಣಾನುಮಾನಗಳನ್ನು, 'ಕೇನ ಚಿತ್' ಶಬ್ದದಿಂದ ಅನುಮಾನವಿಶೇಷವಾದ ಅರ್ಥಾಪತ್ತ್ಯಾದಿಗಳನ್ನು ಗ್ರಹಿಸಲಾಗುವುದೆಂದು ಭಾವ.

(ವೇದಾದ್ಯರ್ಥವಿಚಾರದಲ್ಲಿ) ನಿರಂತರ ಆದರಾದಿಗಳಿಲ್ಲದ ವ್ಯಕ್ತಿಯಿಂದ[1]. **'ಕೇವಲ...'** ಎನ್ನುವದು (ಈ ವರೆಗೆ ತಿಳಿಸಿದ) ಎಲ್ಲದರ ಕ್ರೋಡೀಕರಣ. **'ಕೇವಲ'** ಎಂದು ಹೇಳಿದ್ದರಿಂದ ದುರಾಗಮಗಳ ನಿರಾಸವಾಯಿತು. **'ಆಗಮ'** ಎಂದು ಹೇಳಿದ್ದರಿಂದ ಸದಾಗಮಗಳನ್ನು ಪರಿಗ್ರಹಿಸಿದಂತಾಯಿತು. ಭಕ್ತರಿಂದ, ವೇದಾದ್ಯರ್ಥವಿಚಾರದಲ್ಲಿ ಸದಭಿರುಚಿಯಿರುವವ್ಯಕ್ತಿಯಿಂದ, ಸದಾ ನಿರತರಾಗಿರುವವರಿಂದಲೂ (ಪ್ರತಿಭಾಸಮಾನವಾಗುವುದು). ಬ್ರಹ್ಮಾಂಡ ಪುರಾಣದಲ್ಲಿ 'ಕಥಿತಂ (ಹೇಳಲಾಗಿದೆ)' ಎಂದು ಶೇಷಪೂರಣವನ್ನು ಮಾಡಿಕೊಳ್ಳಬೇಕು.

**ಪ್ರತಿಪಾದಿಸಿದ ವಿಚಾರಕ್ಕೆ ಸಂವಾದಿಯಾಗಿ ವೇದವಾಕ್ಯಗಳು**

**'ನಾವೇದವಿನ್ ಮನುತೇ ತಂ ಬೃಹಂತಂ ಸರ್ವಾನುಭೂಮಾತ್ಮಾನಂ ಸಾಂಪರಾಯೇ' ಇತಿ ತೈತ್ತಿರೀಯಶ್ರುತಿಃ ।**

**'ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ' ಇತಿ ಕಠಶ್ರುತಿಃ।**

**'ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯನ್ತಿ, ತಸ್ಮಾದಾಹುಃ ವೇದಾಃ' ಇತಿ ಪಿಪ್ಪಲಾದಶ್ರುತಿಃ ।**

ವೇದದ ಅರಿವು ಇಲ್ಲದವನು ಆತನನ್ನು (ಪರಮಾತ್ಮನನ್ನು) ತಿಳಿಯಲಾರ, ಗುಣಪೂರ್ಣನಾದ ಸರ್ವಜ್ಞನಾದ ಪರಮಾತ್ಮನನ್ನು (ಜೀವರಿಗೆ) ಮೋಕ್ಷಕ್ಕಾಗಿ (ಶ್ರುತಿಯು ಉಪದೇಶಿಸುವುದು). ಎಂದು ತೈತ್ತಿರೀಯಶ್ರುತಿಯು (ತಿಳಿಸಿದೆ).

ಪ್ರಿಯಕರನೇ, (ಜೀವೇಶ್ವರರ) ಭೇದದ ಅರಿವಿರುವವನಿಂದ ಉಪದಿಷ್ಟವಾದರೇ ಸಮೀಚೀನವಾದ ಅರಿವಿಗೆ ಕಾರಣವಾಗುವುದು, ಈ ಅರಿವು (ಭಗವದ್ವಿಷಯಕವಾದ ಅರಿವು)ತರ್ಕದಿಂದ ಪ್ರಾಪ್ತವೂ ಆಗದು, (ಪ್ರಾಪ್ತವಾದದ್ದು) ನಾಶವೂ ಆಗದು. ಎಂದು ಕಠಶ್ರುತಿಯು (ತಿಳಿಸಿರುವುದು).

---

1. 'ತರ್ಕ' ಶಬ್ದದಿಂದಲೇ ಅರ್ಥಾಪತ್ತಿ ಮೊದಲಾದ ಎಲ್ಲ ವಿಧದ ಅನುಮಾನಗಳನ್ನು ಪರಿಗ್ರಹಿಸಲು ಅವಕಾಶವಿರುವಾಗ 'ಕೇನಚಿತ್' ಎನ್ನುವದು ವ್ಯರ್ಥವಲ್ಲವೆ ? ಕುರು-ಪಾಂಡವನ್ಯಾಯದಂತೆ ಈ ಮುಂತಾದ ಪರಿಹಾರಗಳು ಗೌಣವಲ್ಲವೇ ? ಎಂಬ ಸಂಶಯವನ್ನು ಈ ರೀತಿಯಾಗಿ ಅರ್ಥೈಸಿ ಪರಿಹರಿಸಿರುವರು ಎಂದು ಭಾವ.

ಇಂದ್ರಿಯಗಳಾಗಲಿ, ಅನುಮಾನವಾಗಲಿ ಈತನನ್ನು (ಪರಮಾತ್ಮನನ್ನು) ತಿಳಿಸಲಾರವು, ವೇದಗಳೇ (ಆತನನ್ನು) ತಿಳಿಸುತ್ತವೆ, ಆದುದರಿಂದಲೇ (ಭಗವಂತನನ್ನು ತಿಳಿಸುವದರಿಂದ ಅವುಗಳನ್ನು) 'ವೇದ' ಎಂದು ಕರೆಯುವರು. ಎಂದು ಪಿಪ್ಪಲಾದಶ್ರುತಿಯು (ತಿಳಿಸಿದೆ).

**'ನಾವೇದವಿತ್'** ಇತ್ಯಾದೌ ಸರ್ವೇಽಪಿ ಸದಾಗಮಾ ಗೃಹ್ಯಂತೇ । ಸರ್ವಮನುಭವತೀತಿ- **ಸರ್ವಾನುಭೂಃ** । **ಆತ್ಮಾನಂ** - ಪರಮಾತ್ಮಾನಮ್ । **ಸಾಂಪರಾಯಃ** - ಮೋಕ್ಷಃ , ತದರ್ಥಂ 'ಶ್ರುತಿಃ ವಕ್ತಿ' ಇತಿ ಶೇಷಃ । **ಆ, ಅಪೇತಿ** ವಿರುದ್ಧಾರ್ಥಯೋರುಪಸರ್ಗಯೋಃ ಕ್ರಮೇಣ ಸಂಬಂಧಃ । **ಏಷಾ-** ಪರಮಾತ್ಮವಿಷಯಾ ಮತಿಃ **ಶುಷ್ಕೇಣ ತರ್ಕೇಣ ಆನೇಯಾ-** ಉತ್ಪಾದ್ಯಾ , **ಅಪನೇಯಾ-** ನಿರಾಕಾರ್ಯಾ ಚ ನ ಭವತಿ । ಕಿಂತು **ಅನ್ಯೇನ-** ಜೀವೇಶ್ವರಭೇದಜ್ಞಾನಿನಾ, ಭಗವದ್‌ಭಕ್ತ್ಯಾದಿಮತೇತಿ ಯಾವತ್, ಆಚಾರ್ಯೇಣ **ಪ್ರೋಕ್ತಾ-** ವೇದಪ್ರವಚನೇನೋತ್ಪಾದಿತೈವ, ಸುಜ್ಞಾನಾಯ- ಸಾಕ್ಷಾತ್‌ಕಾರಾಯ ಭವತಿ । **ಪ್ರೇಷ್ಠ** ಇತಿ ನಚಿಕೇತಸಂ ಪ್ರತಿ ಯಮಸ್ಯ ಸಂಬುದ್ಧಿಃ । ಏನಂ- ಪರಮಾತ್ಮಾನಂ । **ತಸ್ಮಾದ್-** ವೇದನಕರಣತ್ವೇ ಸಮಾನೇಽಪಿ 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಇತಿ ನ್ಯಾಯಾದ್ ವಿಶಿಷ್ಟವಸ್ತುವೇದನಕರಣತ್ವಾದೇವ ಹಿ ಏತಾನ್ 'ವೇದಾಃ' ಇತ್ಯಾಹುಃ । ವಿವಕ್ಷಿತಸ್ಯ ಸರ್ವಸ್ಯಾಪ್ಯರ್ಥಸ್ಯ ಪ್ರತಿಪಾದನಾತ್ ಪುರಾಣವಾಕ್ಯಮಾದೌ ಪಠಿತಮ್ । ಶ್ರುತಯಸ್ತು ಏಕದೇಶಪ್ರತಿಪಾದನಾತ್ ಪಶ್ಚಾದ್ ಇತಿ.

**'ನಾವೇದವಿತ್'** ಈ ಮುಂತಾದವು ಎಲ್ಲ ಸದಾಗಮಗಳ ಗ್ರಾಹಕವಾಗಿವೆ[1]. ಸರ್ವಂ (ಎಲ್ಲ ರಸವನ್ನು)ಅನುಭವತಿ ಇತಿ (ಭೋಗಿಸುವವನು) - **ಸರ್ವಾನುಭೂಃ, ಆತ್ಮಾನಂ** - ಪರಮಾತ್ಮನನ್ನು **ಸಾಂಪರಾಯಃ**- ಮುಕ್ತಿ . ಅದಕ್ಕಾಗಿ (ಮೋಕ್ಷಕ್ಕಾಗಿ) 'ಶ್ರುತಿಃ ವಕ್ತಿ (ಶ್ರುತಿಯು ಉಪದೇಶಿಸುವುದು)' ಎಂದು ಶೇಷಪೂರಣಮಾಡಿಕೊಳ್ಳುವುದು. 'ಆ' 'ಅಪ' ಎಂದು ವಿರುದ್ಧಾರ್ಥ ಗಳನ್ನು ತಿಳಿಸುವ ಉಪಸರ್ಗಗಳಿಗೆ ಕ್ರಮವಾಗಿ ('ನೇಯಾ' ಎಂಬ ಶಬ್ದದೊಡನೆ)

---

1.'ನಾವೇದವಿತ್' ಇತ್ಯಾದಿ ವಾಕ್ಯಗಳಲ್ಲಿರುವ ವೇದ ಶಬ್ದಕ್ಕೆ ಕೇವಲ ವೈದಿಕ ಮಂತ್ರಗಳು ಎಂದಿಷ್ಟೇ ಅರ್ಥ್ಯಸದೆ ಸಕಲ ಸದಾಗಮುಗಳನ್ನು ಪರಿಗ್ರಹಿಸಬೇಕು ಎಂದು ಭಾವ.

ಅನ್ವಯಿಸಬೇಕು[1]. ಏಷಾ - ಪರಮಾತ್ಮವಿಷಯಕಬುದ್ಧಿಯು ಶುಷ್ಕವಾದ (ಪ್ರತ್ಯಕ್ಷಾಗಮಗಳ ಸಂವಾದರಹಿತವಾದ) ತರ್ಕದಿಂದ **ಆನೇಯಾ**- ಪ್ರಾಪ್ತಿಯು, **ಅಪನೇಯಾ** - ನಿರಾಕರಣವೂ ಆಗುವುದಿಲ್ಲ. ಆದರೆ **ಅನ್ಯೇನ**- 'ಜೀವೇಶ್ವರರು ಭಿನ್ನರು' ಎಂದು ತಿಳಿದ ಜ್ಞಾನಿಯಿಂದ- ಭಗವದ್ಭಕ್ತಿ ಮುಂತಾದ ಗುಣಗಳನ್ನು ಹೊಂದಿದವನು ಎಂದು ಒಟ್ಟು ಅಭಿಪ್ರಾಯ, ಇಂತಹ ಆಚಾರ್ಯರಿಂದ, **ಪ್ರೋಕ್ತಾ**- ವೇದಪ್ರವಚನದಿಂದ ಉತ್ಪಾದಿತವಾದ (ಮತಿಯು) **ಸುಜ್ಞಾನಾಯ**- ಸಾಕ್ಷಾತ್ಕಾರಕ್ಕೆ ಕಾರಣವಾಗುವುದು. **'ಪ್ರೇಷ್ಠ'** ಎನ್ನುವುದು ನಚಿಕೇತನನ್ನು ಕುರಿತು ಯಮನ ಸಂಬೋಧನೆ. **ಏನಂ**- ಪರಮಾತ್ಮನನ್ನು **ತಸ್ಮಾತ್**- ಜ್ಞಾನಕರಣತ್ವವು (ಪ್ರತ್ಯಕ್ಷ, ಅನುಮಾನ ಮತ್ತು ವೇದಗಳಿಗೆ) ಸಮಾನವಾಗಿದ್ದರೂ 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂಬ ನಿಯಮದ ಪ್ರಕಾರ, ವಿಶಿಷ್ಟವಾದ ವಸ್ತುವಿನ ಜ್ಞಾನಕ್ಕೆ ಕರಣ ವಾದುದರಿಂದ ಇವುಗಳನ್ನು **'ವೇದ'** ಎಂದು ಕರೆಯುವರು[2]. ವಿವಕ್ಷಿತವಾದ

---

1. ಕಠಶ್ರುತಿಯಲ್ಲಿ 'ಆಪನೇಯಾ' ಎಂದು ಇದೆ. ಈ 'ಆಪ' ಎಂಬ ಶಬ್ದವು 'ಆ' ಮತ್ತು 'ಅಪ' ಎಂದು ಎರಡು ಉಪಸರ್ಗಗಳಿಂದ ಘಟಿತವಾದದ್ದು ಎಂದು ತಿಳಿಯುವುದು. ಆದುದರಿಂದ 'ಆಪನೇಯಾ' ಎಂಬ ಶಬ್ದವನ್ನು 'ಆನೇಯಾ' ಮತ್ತು 'ಅಪನೇಯಾ' ಎಂದು ವಿಭಜಿಸಿ ಅರ್ಥೈಸಬೇಕು ಎಂದು ಭಾವ.

2. 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂದು ಶಾಸ್ತ್ರಗಳಲ್ಲಿ ಉಪದಿಷ್ಟವಾದ ಒಂದು ನಿಯಮ. ಲೋಕದ ವ್ಯವಹಾರವು ಅಸಾಧಾರಣಧರ್ಮದಿಂದ (ಇನ್ನಿತರರಲ್ಲಿ ಇಲ್ಲದ ಧರ್ಮದಿಂದ) ನಡೆಯುವುದು ಎಂದು ಭಾವ. ಉದಾಹರಣೆಗೆ - ಒಬ್ಬ ಮುನಿಯನ್ನು 'ಅಬ್ಭಕ್ಷ' ಎಂದು ಕರೆಯುತ್ತಾರೆ. ಅಬ್ಭಕ್ಷ ಅಂದರೆ ನೀರನ್ನು ಕುಡಿಯುವವ ಎಂದು. ಲೋಕದಲ್ಲಿ ಎಲ್ಲರೂ ನೀರನ್ನು ಕುಡಿಯುತ್ತಾರೆ. ಹೀಗಿರುವಾಗ ಮುನಿಯನ್ನು ಮಾತ್ರ 'ಅಬ್ಭಕ್ಷ' ಎಂದು ಕರೆಯಲು ಕಾರಣವೇನು ? ಇತರರು ನೀರನ್ನು ಕುಡಿಯುತ್ತಾರೆ ಜತೆಗೆ ಆಹಾರವನ್ನೂ ಸೇವಿಸುತ್ತಾರೆ. ಆದರೆ ಈ ಮುನಿಯು ನೀರನ್ನು ಮಾತ್ರ ಸೇವಿಸುತ್ತಾನೆ. ಆಹಾರಾದಿಗಳನ್ನು ಸೇವಿಸುವುದಿಲ್ಲ. ಅಬ್ಭಕ್ಷತ್ವವು ಮುನಿಯಲ್ಲಿನ ಅಸಾಧಾರಣ ಧರ್ಮ ಎನ್ನುವ ಅಭಿಪ್ರಾಯದಿಂದ ಮುನಿಯನ್ನು 'ಅಬ್ಭಕ್ಷ' ಎಂದು ಕರೆಯುವರು. ಹಾಗೆ ಪ್ರಕೃತದಲ್ಲಿ ವೇದ ಅಂದರೆ ಅರಿವಿಗೆ ಕಾರಣವಾದದ್ದು ಎಂದು. ಪ್ರತ್ಯಕ್ಷಾದಿಗಳೂ ಅರಿವಿಗೆ ಕಾರಣವಾಗಿವೆ. ಇತರ ಆಗಮಗಳೂ ಅರಿವಿಗೆ ಕಾರಣವಾಗಿವೆ, ಆದರೂ ಉಪನಿಷದಾದಿ ಆಗಮಗಳನ್ನು ಮಾತ್ರ 'ವೇದ' ಎಂದು ಕರೆಯಲು ವಿಶೇಷಕಾರಣವಿರಬೇಕು. ಪ್ರತ್ಯಕ್ಷಾದಿಗಳು ಲೋಕದ ಅರಿವಿಗೆ ಮಾತ್ರ ಕಾರಣವಾಗಿವೆ. ಈ ಆಗಮವು ಮಾತ್ರ ಪರತತ್ತ್ವದ ಅರಿವಿಗೆ ಕಾರಣವಾಗಿದೆ. ತನ್ನಿಮಿತ್ತ ವಾಗಿಯೇ ಇವುಗಳನ್ನು ವೇದ ಎಂದು ವ್ಯವಹರಿಸುವರು ಎಂದು ಭಾವ.

ಎಲ್ಲ ವಿಷಯಗಳನ್ನೂ ಪ್ರತಿಪಾದಿಸಿದ್ದರಿಂದ ಪುರಾಣವಾಕ್ಯವನ್ನು ಮೊದಲು ಹೇಳಿ, (ವಿವಕ್ಷಿತವಾದ ವಿಷಯಗಳಲ್ಲಿ) ಕೆಲವು ವಿಷಯಗಳನ್ನು ಮಾತ್ರ ಶ್ರುತಿಗಳು ಪ್ರತಿಪಾದಿಸಿದ್ದರಿಂದ ನಂತರದಲ್ಲಿ ಹೇಳಲಾಗಿದೆ[1].

**-: ಪ್ರಮಾಣಗಳ ನಿರ್ಣಯವು ಸಮಾಪ್ತ :-**

## ।। ವೇದಪ್ರಾಮಾಣ್ಯ ಮಂಡನೆ ।।

ವಿಷಯಮಂಡನೆಗೆ ವೇದವನ್ನು ಆಶ್ರಯಿಸುವದಾದಲ್ಲಿ ಅದು ನಿಃಸಂದಿಗ್ಧಪ್ರಮಾಣವಾಗಿರಬೇಕು. ಆದರೆ ವೇದವು ತಿಳಿಸಿದ ಕರ್ಮಗಳನ್ನು ಆಚರಿಸಿದರೂ ಫಲವು ಕಂಡಿಲ್ಲ. ವ್ಯಾಹತವಾದ ಮಾತುಗಳನ್ನು ಅಲ್ಲಲ್ಲಿ ಕಾಣುತ್ತೇವೆ.ಇಂತಹ ನಾನಾಸಂದೇಹಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿ, ಒಟ್ಟಿನಲ್ಲಿ ವಾಕ್ಯವು ದುಷ್ಟವಾಗಲು ಅದರ ಹಿಂದಿರುವ ವಕ್ತೃವಿನ ದೋಷವೇ ಕಾರಣ.ಇಂತಹ ಯಾವಸಂದೇಹಕ್ಕೂ ವೇದದಲ್ಲಿ ಅವಕಾಶವಿಲ್ಲ, ಅದು ಅಪೌರುಷೇಯವಾದುದರಿಂದ ಎಂದು ಮಂಡಿಸಲಾಗಿದೆ. ವೇದದ ಪ್ರಾಮಾಣ್ಯವು ಸಿದ್ಧವಾದಲ್ಲಿ ಅದರ ಹಿನ್ನೆಲೆಯಲ್ಲಿ ಪುರಾಣೇತಿಹಾಗಳ ಪ್ರಾಮಾಣ್ಯವು ಸಿದ್ಧಿಗೊಳ್ಳುವುದು.

**ವೇದಬಾಹಿರರ ಶಂಕೆಯು ಅಯುಕ್ತ**

**ನ ಚೈತೇಷಾಂ ವಚನಾನಾಮೇವಾಪ್ರಾಮಾಣ್ಯಮ್ ।**

---

1. ಪ್ರಮಾಣಗಳಲ್ಲಿ ಅಪೌರುಷೇಯವಾದ ವೇದಗಳು ಪ್ರಧಾನ, ತತ್ತ್ವನಿರ್ಣಯಕ್ಕೆ ಪ್ರಮಾಣವನ್ನಾಗಿ ಮೊದಲು ವೇದಗಳನ್ನು ಹೇಳಬೇಕು. ನಂತರ ಇತರ ಪುರಾಣಾದಿಗಳನ್ನು ಹೇಳುವುದು ಸಂಪ್ರದಾಯಪ್ರಾಪ್ತ ಕ್ರಮ. ಆದರೆ ಪ್ರಕೃತ ಬ್ರಹ್ಮಾಂಡಪುರಾಣಾದಿ ವಾಕ್ಯಗಳನ್ನು ತಿಳಿಸಿ, ನಂತರದಲ್ಲಿ ತೈತ್ತಿರೀಯಾದಿ ವೇದವಾಕ್ಯಗಳನ್ನು ತಿಳಿಸಲಾಗಿದೆ ಇದು ಸರಿಯೇ? ಎಂಬ ಸಂದೇಹವನ್ನು ಪರಿಹರಿಸಿರುವರು. ವೇದಪುರಾಣ, ಪಂಚರಾತ್ರಾದಿ ಸದಾಗಮಗಳಿಂದ ನಾರಾಯಣನು ಜ್ಞೇಯ, ಪಾಶುಪತಾದಿ ದುರಾಗಮಗಳಿಂದ ಅಜ್ಞೇಯ, ಪ್ರತ್ಯಕ್ಷಾದಿಗಳಿಂದ ಅವೇದ್ಯ , ವೇದಾದಿಗಳೇ ಸದಾಗಮ, ಈ ಮೊದಲಾದ ಎಲ್ಲ ಪ್ರಮೇಯಗಳನ್ನು ಪುರಾಣ ವಾಕ್ಯವು ಸ್ಫುಟಗೊಳಿಸಿದೆ. ವೇದವಾಕ್ಯಗಳಾದರೋ ಒಂದೊಂದು ಒಂದೊಂದು ತತ್ತ್ವವನ್ನು ಮಾತ್ರ ತಿಳಿಸುತ್ತದೆ ಆದುದರಿಂದ ಸಮಗ್ರವಾಗಿ ಎಲ್ಲ ಪ್ರಮೇಯಗಳನ್ನು ತಿಳಿಸುವ ಪುರಾಣ ವಾಕ್ಯಗಳನ್ನು ಮೊದಲು ಉದ್ಧರಿಸಲಾಗಿದೆ, ನಂತರದಲ್ಲಿ ವೇದವಾಕ್ಯಗಳನ್ನು , ಎಂದು ಭಾವ.

ಈ ವಾಕ್ಯಗಳೇ(ವೇದಾದಿವಚನಗಳೇ) ಅಪ್ರಮಾಣ ಎಂದೆನ್ನುವುದು ತರವಲ್ಲ.

ಅತ್ರಾಹುಃ- ಯದನೃತಂ ತದಪ್ರಮಾಣಂ ದೃಷ್ಟಂ ಯಥೋನ್ಮತ್ತ-ವಾಕ್ಯಮ್ । ಅನೃತಂ ಚ- 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ' ಇತ್ಯಾದಿವಾಕ್ಯಮ್ । ಕೃತಾಯಾಮಪಿ ಇಷ್ಟೌ ಪುತ್ರಜನ್ಮಾನುಪಲಮ್ಭಾತ್ । ಏವಂ 'ಮೃದಬ್ರವೀತ್' ಇತ್ಯಾದಿ, ಅನುಮಾನವಿರುದ್ಧತ್ವಾತ್ । ಸ್ವವ್ಯಾಹತಂ ಚಾಪ್ರಮಾಣಂ ದೃಷ್ಟಮ್, ಸ್ವವ್ಯಾಹತಂ ಚ- 'ಉದಿತೇ ಹೋತವ್ಯಮನುದಿತೇ ಹೋತವ್ಯಂ' ಇತ್ಯಾದಿ । ಪುನರುಕ್ತಂ ಚಾಪ್ರಮಾಣಮ್, ಪುನರುಕ್ತಂ ಚ ವೇದವಾಕ್ಯಂ, ಶಾಖಾಂತರೋಕ್ತಸ್ಯ ಶಾಖಾಂತರೇ ಅಭಿಧಾನಾತ್ । ಏಕಸ್ಯಾಮಪಿ ಶಾಖಾಯಾಂ ವಾಕ್ಯಾವೃತ್ತಿದರ್ಶನಾತ್ । 'ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಮ್ ' ಇತಿ ಸ್ವಯಮೇವ ವಿಧಾನಾಚ್ಚ । ನಿರರ್ಥಕಂ ಚಾಪ್ರಮಾಣಮ್, ನಿರರ್ಥಕಂ ಚ- 'ಸೃಣ್ಯೇವ....' ಇತ್ಯಾದಿ । ಪ್ರಮಾಣಾನ್ತರಸಿದ್ಧಾರ್ಥಂ ಚ ನ ಪ್ರಮಾಣಮ್, ತಥಾವಿಧಂ ಚ - 'ಅಗ್ನಿರ್ಹಿಮಸ್ಯ ಭೇಷಜಮ್' ಇತ್ಯಾದಿವೇದವಾಕ್ಯಮ್ ।

ಇಲ್ಲಿ (ವೇದಪ್ರಾಮಾಣ್ಯದ ವಿಷಯದಲ್ಲಿ ವೇದವನ್ನು ಪ್ರಮಾಣ ಎಂದು ಒಪ್ಪದ ಕೆಲವರು) ಹೇಳುವರು. 'ಯಾವುದು ಸುಳ್ಳೋ ಅದು ಅಪ್ರಮಾಣ' ಎಂದು ಕಂಡಿದೆ, ಹುಚ್ಚನ ಮಾತಿನಂತೆ . ಅನೃತತ್ವವಾದರೋ- 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ' ಇದೇ ಮುಂತಾದ ವೇದವಾಕ್ಯಗಳು (ಇವೆ). ಪುತ್ರೇಷ್ಟಿಯನ್ನು ಆಚರಿಸಿದರೂ ಪುತ್ರಪ್ರಾಪ್ತಿಯು ಕಾಣದಿರುವದರಿಂದ. ಇದೇ ರೀತಿ 'ಮೃದಬ್ರವೀತ್' ಇದೇ ಮೊದಲಾದವು. (ಇವು) ಅನುಮಾನ ಪ್ರಮಾಣದಿಂದ ವಿರುದ್ಧವಾಗಿದೆ[1]. ತನ್ನ ಮಾತಿಗೆ ವಿರುದ್ಧವಾಗಿರುವುದು

1. 'ಮಣ್ಣು ಮಾತನಾಡಲಾರದು ಜಡವಾದುದರಿಂದ ನೀರಿನಂತೆ' ಎಂಬಿತ್ಯಾದಿ ಅನುಮಾನಗಳಿಂದ 'ಮೃದಬ್ರವೀತ್' ಎಂಬಿತ್ಯಾದಿ ವೇದದ ವಾಕ್ಯಗಳು ಬಾಧಿತವಾಗಿದೆ ಎಂದು ಭಾವ.

ಅಪ್ರಮಾಣವಾಗಿರುವುದು (ಲೋಕದಲ್ಲಿ) ಕಂಡಿದೆ². 'ಉದಿತೇ ಹೋತವ್ಯಂ ಅನುದಿತೇ ಹೋತವ್ಯಂ' ಇದೆ ಮುಂತಾದ ವೇದದ ಮಾತು ಸ್ವವ್ಯಾಹತವಾಗಿದೆ. ಪುನರುಕ್ತಿಯು ಅಪ್ರಮಾಣವಾಗುವುದು. ವೇದದಲ್ಲಾದರೋ ಶಾಖಾಂತರದಲ್ಲಿ ಹೇಳಿದ್ದನ್ನು ಮತ್ತೊಂದು ಶಾಖೆಯಲ್ಲಿ ಹೇಳಲಾಗಿದೆ. (ಪುರುಷ ಸೂಕ್ತವೂ ನಾಲ್ಕು ಶಾಖೆಗಳಲ್ಲೂ ಕಂಡಿದೆ) ಒಂದೇ ಶಾಖೆಯಲ್ಲಿಯೂ ಸಹ ವಾಕ್ಯಗಳ ಪುನರಾವೃತ್ತಿಯು ಕಂಡಿರುವದರಿಂದಲೂ, ಮತ್ತು ಸ್ವತಃ ವೇದವೇ 'ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ' ಎಂದು ತಾನೇ ಉದ್ಘೋಷಿಸಿ ಕೊಂಡಿರುವದರಿಂದಲೂ (ಅಪ್ರಮಾಣ). ಅರ್ಥವಿಲ್ಲದ ಮಾತು ಸಹ ಅಪ್ರಮಾಣ. ಅರ್ಥವಿಲ್ಲದ ಮಾತಾದರೋ 'ಸೃಣ್ಯೇವ ......' ಇತ್ಯಾದಿಗಳು[1]. ಬೇರೇ ಪ್ರಮಾಣಗಳಿಂದ ಸಿದ್ಧವಾದ ವಿಷಯವನ್ನು ಪ್ರತಿಪಾದಿಸುವದೂ ಪ್ರಮಾಣವಾಗುವುದಿಲ್ಲ. (ವೇದದಲ್ಲಾದರೋ) ಅಂತಹದೂ ಕೂಡ (ಕಂಡಿದೆ). 'ಅಗ್ನಿರ್ಹಿಮಸ್ಯ ಭೇಷಜಮ್' (ಚಳಿಗೆ ಬೆಂಕಿಯು ಮದ್ದು) ಇತ್ಯಾದಿ ವೇದ ವಾಕ್ಯಗಳು.

**ಏವಂ ಪುರಾಣೇಽಪ್ಯನೃತತ್ವಾದೀನಿ ಜ್ಞಾತವ್ಯಾನಿ (ದ್ರಷ್ಟವ್ಯಾನಿ) । ತದ್ದೃಷ್ಟಾನ್ತೇನಾಶೇಷಸ್ಯಾಪಿ ವೇದಾದಿಭಾಗಸ್ಯಾಪ್ರಾಮಾಣ್ಯಮ್ ಅನುಮಾತವ್ಯಮ್ । ಕಿಂಚ ಸಂವಾದರಹಿತಂ ವಿಪ್ರಲಂಭಕಾದಿವಾಕ್ಯಮ್ ಅಪ್ರಮಾಣಮ್ । ತಥಾ ವಿಧಂ ಚ ವೇದಾದಿಕಮ್ । ಏವಂ ಚ ವೇದ-ಪುರಾಣಯೋರಪ್ರಾಮಾಣ್ಯಾತ್, ತದಂತರ್ಗತನಾಮುದಾಹೃತ-ವಾಕ್ಯಾನಾಮಪ್ರಾಮಾಣ್ಯಮೇವ । ಏತೇಷಾಂ ವಚನಾನಾಮೇವ ಅಪ್ರಾಮಾಣ್ಯೇ ಸತಿ ಕಥಮೇತದ್ಬಲಾತ್, ವಿಷ್ಣೋಃ ಸದಾಗಮೈಕ-ವಿಜ್ಞೇಯತ್ವಸಿದ್ಧಿಃ ? ಏವಮೇವ ವೇದಾದಿಭಿಃ ನಿರ್ದೋಷತ್ವಾದಿಸಿದ್ಧಿರಪಿ ಪರಾಸ್ತಾ ? ಇತ್ಯತ ಆಹ 'ನ ಚೈತೇಷಾಂ' ಇತಿ । ಚಶಬ್ದಃ ಸಮುಚ್ಚಯೇ ।**

---

1. 'ನನ್ನ ತಾಯಿ ಬಂಜೆ' ಎನ್ನುವ ಮಾತಿನಂತೆ.

2. ಸೃಣ್ಯೇವ ಝರ್ಭರೀ... ಇತ್ಯಾದಿಯಾಗಿ ಒಂದು ವೇದಋಕ್ ಇದೆ. ಇಲ್ಲಿರುವ ಅನೇಕ ಪದಗಳಿಗೆ ಪ್ರಸಿದ್ಧ ನಿಘಂಟುವಿನಿಂದ ಅರ್ಥೈಸುವುದು ಕಷ್ಟ. ಹಾಗಾಗಿ ಇದು ನಿರರ್ಥಕ ಎಂದು ಪ್ರತಿವಾದಿಯ ಭಾವ.

**ಏತಚ್ಛಙ್ಕಾಪರಿಹಾರಸಮುಚ್ಚಿತಸ್ಯೈವೋದಾಹೃತಪ್ರಮಾಣಸ್ಯ ವಿವಕ್ಷಿತ-ಸಾಧಕತ್ವಾತ್ । ಏವಮುತ್ತರತ್ರಾಪಿ ಬೋದ್ಧವ್ಯಮ್ ।**

ಇದೇ ರೀತಿ ಪುರಾಣದಲ್ಲಿಯೂ ಅನ್ಯತತ್ವಾದಿಗಳು ಇವೆ ಎಂದು ತಿಳಿಯುವುದು. ಈ ದೃಷ್ಟಾಂತದಿಂದ ಸಮಸ್ತವಾದ ವೇದಾದಿಗಳ (ಉಳಿದ) ಭಾಗಕ್ಕೆ ಅಪ್ರಾಮಾಣ್ಯವನ್ನು ಊಹಿಸುವುದು[1]. ಮತ್ತು ಸಂವಾದಕ ಪ್ರಮಾಣವಿಲ್ಲದ ಮಾತೂ ಅಪ್ರಮಾಣ, ಮೋಸಗಾರ ಮೊದಲಾದವರ ಮಾತಿನಂತೆ. ವೇದಾದಿಗಳೂ ಅದೆ ತರಹವಾಗಿವೆ[2]. ಹೀಗಾಗಿ ವೇದ ಮತ್ತು ಪುರಾಣಗಳು ಅಪ್ರಮಾಣವಾದುದರಿಂದ ಅದರಲ್ಲಿ ಅಂತರ್ಗತವಾದ ಉದಾಹರಿಸಲಿರುವ ವಾಕ್ಯಗಳಿಗೂ ಅಪ್ರಾಮಾಣ್ಯ ಉಂಟು. ಈ ವಾಕ್ಯಗಳೇ ಅಪ್ರಮಾಣವಾದಲ್ಲಿ, ಇಂತಹ ವಾಕ್ಯದ ಬಲದಿಂದ ನಾರಾಯಣನಿಗೆ 'ಸದಾಗಮೈಕವಿಜ್ಞೇಯತ್ವವು' ಸಿದ್ಧವಾಗುವುದು ಹೇಗೆ? ಇದೇ ರೀತಿ ವೇದಾದಿಗಳಿಂದ (ನಾರಾಯಣನಿಗೆ) ನಿರ್ದೋಷತ್ವಾದಿಗಳು ಸಿದ್ಧಿಯೂ ನಿರಾಕೃತವಾಯಿತು, ಈ ಕಾರಣದಿಂದ ಹೇಳುತ್ತಾರೆ. **'ನ ಚೈತೇಷಾಂ'** ಎಂದು. **'ಚ'** ಶಬ್ದವು ಕ್ರೋಡೀಕರಣಾರ್ಥದಲ್ಲಿ. ಈ ಎಲ್ಲ ಸಂದೇಹಗಳಿಂದ ರಹಿತವಾದ ಉದಾಹೃತ ಪ್ರಮಾಣಗಳಿಗೇ ವಿವಕ್ಷಿತವಾದ (ಪ್ರಮೇಯಗಳ)

---

1. ಉದಾಹರಿಸಿದ ವಾಕ್ಯಗಳು ಅಪ್ರಮಾಣವಾಗಿವೆ ಇದರಂತೆ ಉಳಿದ ವಾಕ್ಯಗಳೂ ಅಪ್ರಮಾಣವಾಗಿವೆ ಎಂದು ಊಹಿಸುವುದು. 'ತತ್ ಸಾಮಾನ್ಯಾತ್ ಇತೇರೇಷು ತಥಾತ್ವಂ' ಎಂದು ಶಾಸ್ತ್ರದ ನಿಯಮವಿದೆ. ಲೋಕದಲ್ಲೂ 'ಒಂದು ಅಕ್ಕಿಯನ್ನು ಪರೀಕ್ಷಿಸುವುದರಿಂದ ಪಾತ್ರೆಯಲ್ಲಿನ ಎಲ್ಲ ಅಕ್ಕಿಯ ಗುಣವೂ ತಿಳಿಯುವುದು' ಎಂದು ನಾಣ್ಣುಡಿ ಇದೆ.

2. ಮೋಸಗಾರ ಹೇಳುತ್ತಾನೆ. ನದೀತೀರದಲ್ಲಿ ಹಣ್ಣುಗಳಿವೆ ಎಂದು. ಮೋಸಗಾರನ ಮಾತಿಗೆ ಸಂವಾದಿಯಾದ ಪ್ರತ್ಯಕ್ಷಾದಿ ಇನ್ನೊಂದು ಪ್ರಮಾಣವಿಲ್ಲದಿರುವದರಿಂದ ಅದನ್ನು ಅಪ್ರಮಾಣ ಎಂದು ನಿಶ್ಚಯಿಸಲಾಗುವುದು. ಅದೇ ರೀತಿಯಲ್ಲಿ ವೇದಗಳಲ್ಲಿ ತಿಳಿಸಿರುವ ಸ್ವರ್ಗಾದಿ ವಿಷಯದಲ್ಲಿ ಸಂವಾದಕ ಪ್ರಮಾಣವಿಲ್ಲ. ಪ್ರಕೃತ ಇಲ್ಲಿ ಸಾಧಿಸಲಾಗುವ ನಾರಾಯಣನು ವೇದೈಕಗಮ್ಯ ಎಂದು ಸಿದ್ಧಾಂತಿಗಳೇ ಒಪ್ಪಿರುವದರಿಂದ, ಪ್ರಸಕ್ತ ಗ್ರಂಥದ ವಿಷಯವು ಸುತರಾಂ ಅವು ಅಪ್ರಮಾಣ ಎಂದು ಭಾವ.

ಸಾಧಕತ್ವವು ಇರುವದರಿಂದ[1]. ಇದೇ ರೀತಿಯಲ್ಲಿ ಮುಂದೆಯೂ ಸಹ ತಿಳಿಯುವುದು[2].

**ವೇದವಚನಗಳು ಅನೃತಗಳಲ್ಲ**

**ಅಯಮಭಿಪ್ರಾಯಃ- ಕಿಮಿದನೃತತ್ವಮ್? 'ಅರ್ಥಶೂನ್ಯತ್ವಮ್' ಇತಿ ಚೇತ್, ನನು ಏತದೇವಾಪ್ರಾಮಾಣ್ಯಮಿತಿ ಸಾಧ್ಯಾವಿಶಿಷ್ಟತಾ ಸ್ಯಾತ್, ಪ್ರಮಾಣಾನ್ತರವಿಸಂವಾದೋಽನೃತತ್ವಮಿತಿ ಚೇತ್, ಸಃ ಕಿಮಾಪಾತತಃ ಸರ್ವಥಾ ವಾ । ನಾಽದ್ಯಃ, ತಸ್ಯ ಸರ್ವತ್ರ ಸಂಭವೇನಾಽನೈಕಾಂತ್ಯಾತ್ । ದ್ವಿತೀಯೇ ಸಂದಿಗ್ಧಾಸಿದ್ಧಿಃ , 'ಕಿಮತ್ರ ಸರ್ವಥಾ ಪ್ರಮಾಣವಿಸಂವಾದ ಏವ ಉತ ವೈಗುಣ್ಯಾದಿನಿಮಿತ್ತಂ ಫಲದರ್ಶನಾದಿಕಮ್' ಇತಿ ಸಂದೇಹಾ-ಪರಿಹಾರಾತ್ ।**

ಇಷ್ಟು ಅಭಿಪ್ರಾಯ- 'ಅನೃತತ್ವ' ಎಂದರೇನು, 'ಅರ್ಥಶೂನ್ಯತ್ವ 'ಎಂದಾದಲ್ಲಿ, ಇದನ್ನೇ (ಅರ್ಥಶೂನ್ಯತ್ವವನ್ನೇ) 'ಅಪ್ರಾಮಾಣ್ಯ' ಎಂದು (ಕರೆಯುವದರಿಂದ, ನಿಮ್ಮ ಅನುಮಾನಕ್ಕೆ) 'ಸಾಧ್ಯಾವಿಶಿಷ್ಟತಾವು'

---

1. ಮೂಲದಲ್ಲಿರುವ 'ಚ' ಶಬ್ದವು ಸಮುಚ್ಚಯಾರ್ಥದಲ್ಲಿದೆ ಎಂದು ಅರ್ಥೈಸಲಾಯಿತು. ಆದರೆ ಈ ಹಿಂದೆ ಮೇಲೆ ಹೇಳಿದ ಶಂಕೆಗಳ ಪರಿಹಾರವನ್ನು ತಿಳಿಸಿದ ಪಕ್ಷದಲ್ಲಿ , ಆ ಪರಿಹಾರವನ್ನು ಸಮುಚ್ಚಯಗೊಳಿಸಬಹುದು, ಆದರೆ ಪ್ರಕೃತ ಯಾವುದೇ ಪರಿಹಾರವನ್ನು ತಿಳಿಸಲಾಗಿಲ್ಲ, ಆದುದರಿಂದ ಏನನ್ನು ಕ್ರೋಡೀಕರಿಸಲಾಗುವುದು ? ಎಂಬ ಸಂದೇಹವನ್ನು ಪರಿಹರಿಸುವರು ಟೀಕಾಕಾರರು. ಈ ಹಿಂದೆ ಉದಾಹರಿಸಲಾದ ಪ್ರಮಾಣಗಳು ಪೌನರುಕ್ತ್ಯಾದಿ ಶಂಕಾಕಲಂಕಿತವಾದಲ್ಲಿ ನಿರ್ದೋಷಾಶೇಷಸದ್ಗುಣತ್ವಾದಿ ತತ್ವಗಳನ್ನು ಸಮರ್ಥಿಸಲು ಅಶಕ್ತವಾಗುವವು. ಆದುದರಿಂದ 'ಇಂತಹ ಶಂಕಾಕಲಂಕರಹಿತವಾದವುಗಳು ಈ ಪ್ರಮಾಣಗಳು' ಎಂಬ ಪ್ರತಿಜ್ಞೆಯನ್ನು ಈ 'ಚ' ಶಬ್ದವೂ ಕ್ರೋಡೀಕರಿಸುವುದು. ಇವು ಹೇಗೆ ಶಂಕಾರಹಿತ ಎನ್ನುವದನ್ನು ಮುಂದಿನ ಗ್ರಂಥದಲ್ಲಿ ಸ್ಫುಟಗೊಳಿಸಲಾಗುವುದು ಎಂದು ಭಾವ.

2. ಸಮುಚ್ಚಾಯಕ ಸೂಚಕ ಶಬ್ದಗಳು ಮುಂದೆ ಇದ್ದಲ್ಲಿ ಸಮುಚ್ಚಾಯಕ ವಿಷಯವು ಆ ಹಿಂದೆ ಇಲ್ಲದ ಸಂದರ್ಭದಲ್ಲಿ ಈ ಮೇಲೆ ತಿಳಿಸಿದಂತೆ 'ಇಂತಹ ಶಂಕಾಕಲಂಕರಹಿತವಾದವುಗಳು ಈ ಪ್ರಮಾಣಗಳು' ಎಂಬ ಪ್ರತಿಜ್ಞೆಯನ್ನೇ ಸಮುಚ್ಚಯಿಸಿಕೊಳ್ಳಬೇಕು ಎಂದು ಭಾವ.

ಪ್ರಾಪ್ತವಾದೀತು.[1] ಅನೃತತ್ವ ಎಂದರೆ 'ಬೇರೇ ಪ್ರಮಾಣದಿಂದ ವಿರುದ್ಧವಾದುದು' ಎಂದು ಅರ್ಥವನ್ನು ಒಪ್ಪುವುದಾದಲ್ಲಿ (ಪ್ರಶ್ನಿಸುತ್ತಾರೆ, ಈ ಪ್ರಮಾಣಾಂತರ ವಿಸಂವಾದವು) ಮೇಲ್ನೋಟದಿಂದ ಉಂಟಾದುದೋ ಅಥವಾ ವಿಮರ್ಶಿತವಾದದ್ದೋ ? ಮೊದಲ ಪಕ್ಷದಲ್ಲಿ. ಅದು ಎಲ್ಲ ಕಡೆಯೂ ಸಂಭಾವಿತವಾದುದರಿಂದ (ಹೇತುವು) ವ್ಯಭಿಚರಿತ[2]. ಎರಡನೇ ಪಕ್ಷದಲ್ಲಿ (ನಿಶ್ಚಿತವಾಗಿಯೂ ಪ್ರಮಾಣಾಂತರ ವಿಸಂವಾದ ಉಂಟು ಎಂಬ ಪಕ್ಷದಲ್ಲಿ) ಸಂದಿಗ್ಧಾಸಿದ್ಧಿ (ಎಂಬ ದೋಷವು ಪ್ರಾಪ್ತವಾಗುವುದು)[3].

---

1. ಪುತ್ರೇಷ್ಟ್ಯಾ ಯಜೇತ' ಎಂಬ ವೇದವಾಕ್ಯವು ಅನೃತ ಎಂದು ಈ ಹಿಂದೆ ಬೌದ್ಧರು ಪ್ರಶ್ನಿಸಿರುವರು. ಅದಕ್ಕೆ ಉತ್ತರಿಸುತ್ತಿದ್ದಾರೆ- ಅನೃತತ್ವ ಎಂದರೇನು ? 'ಅರ್ಥಶೂನ್ಯತ್ವಂ'ಎಂದು ಅನೃತತ್ವಶಬ್ದವನ್ನು ಅರ್ಥೈಸಿದಲ್ಲಿ,ಬೌದ್ಧರು ಹೀಗೆ ಅನುಮಾನವನ್ನು ಒಪ್ಪಿದಂತಾಗುವುದು. 'ವೇದವಚನಾನಿ ಅಪ್ರಮಾಣಾನಿ ಅರ್ಥಶೂನ್ಯತ್ವಾತ್' ಎಂದು ಈ ಅನುಮಾನದಲ್ಲಿ ಸಾಧನೀಯವಾದದು ಅಪ್ರಾಮಾಣ್ಯ , ಸಾಧಕವಾದುದು ಅರ್ಥಶೂನ್ಯತ್ವ. ಆದರೆ ಸಾಧ್ಯವಾದ ವಾಕ್ಯಾಪ್ರಾಮಾಣ್ಯ , ಸಾಧಕವಾದ ಅರ್ಥಶೂನ್ಯತ್ವ ಇವೆರಡೂ ಏಕಾರ್ಥಕ ಶಬ್ದಗಳು. 'ವಾಕ್ಯಕ್ಕೆ ಅಪ್ರಾಮಾಣ್ಯ' ಎಂದರೂ 'ವಾಕ್ಯವು ಅರ್ಥಶೂನ್ಯವಾಗಿದೆ' ಎಂದರೂ ಅರ್ಥದಲ್ಲಿ ಭೇದವಿಲ್ಲ. ಶಾಸ್ತ್ರಗಳಲ್ಲಿ ಇಂತಹ ಅನುಮಾನಗಳಿಗೆ 'ಸಾಧ್ಯಾವಿಶಿಷ್ಟತಾ' (ಸಾಧ್ಯದಿಂದ ಸಾಧಕವಾದ ಹೇತುವು ಅಭಿನ್ನವಾಗಿರುವುದು) ಎಂಬ ದೋಷವನ್ನು ತಿಳಿಸಿರುತ್ತಾರೆ. 'ಅಲ್ಲಿ ವಹ್ನಿಯು ಇದೆ, ಅಗ್ನಿಯು ಇರುವುದರಿಂದ' ಈ ರೀತಿಯ ಅನುಮಾನಕ್ಕೆ ಸಮಾನವಾದದ್ದು ಈ ಬೌದ್ಧರ ಅನುಮಾನ ಎಂದು ಭಾವ.

2. ಮೇಲ್ನೋಟದಿಂದ ಪ್ರಮಾಣಾಂತರ ವಿರೋಧವೂ ಎಲ್ಲ ಪ್ರಮಾಣಗಳಿಗೆ ಇವೆ. ಉದಾಹರಣೆಗೆ - 'ಇದು ಗಡಿಗೆ' ಎಂಬ ವಚನವು 'ಇದು ಗಡಿಗೆ ಅಲ್ಲ, ಕೆಂಪಾಗಿರುವುದರಿಂದ' ಎಂಬ ವಚನದಿಂದ ವಿರುದ್ಧವಾಗುವುದು. ಗಡಿಗೆ ಕೆಂಪಾಗಿರಬಾರದು ಎಂದೇನಿಲ್ಲ ತಾನೆ ? ಆಪಾತತಃ ವಿಸಂವಾದವಿದ್ದರೂ 'ಇದು ಗಡಿಗೆ' ಎಂಬ ವಚನವು ಪ್ರಮಿತವಾಗಿದೆ, ಆದುದರಿಂದ 'ವೇದವಚನಾನಿ ಅಪ್ರಮಾಣಾನಿ ಆಪಾತತಃ ಪ್ರಮಾಣಾಂತರವಿಸಂವಾದಾತ್' ಎಂಬುವ ಅನುಮಾನದಲ್ಲಿನ ಪ್ರಮಾಣಾಂತರವಿಸಂವಾದಾತ್ ಎಂಬುವ ಹೇತುವು ವ್ಯಭಿಚರಿತವಾಗಿದೆ ಎಂದು ಭಾವ.

3. ಕಾರ್ಯ ಒಂದಕ್ಕೆ ಇದು ಕಾರಣ ಎಂದು ಪ್ರಸಿದ್ಧಿಯು ಇರುತ್ತದೆ. ಒಂದು ಸಂದರ್ಭದಲ್ಲಿ ಕಾರಣವಿದ್ದರೂ ಕಾರ್ಯವಾಗದೆ ಇದ್ದಲ್ಲಿ, ಆಗ ಸಂದೇಹ ಬರುವುದು. ಈ ಕಾರ್ಯಕ್ಕೆ ಇದು ಕಾರಣವೇ ಅಲ್ಲವೋ ಅಥವಾ ಇದು ಕಾರಣವಾಗಿದ್ದರೂ ಬೇರೇ ಯಾವುದೋ ಪ್ರತಿಬಂಧಕವಿರುವುದರಿಂದ ಕಾರ್ಯೋತ್ಪತ್ತಿಯಾಗಿಲ್ಲವೋ ಎಂದು . ಉದಾಹರಣೆಗೆ ರೋಗ

ಪುಟ 37ರಲ್ಲಿ........

**ವೇದವಚನಗಳಲ್ಲಿ ವ್ಯಾಹತಿಯು ಇಲ್ಲ**

ವ್ಯಾಘಾತೇನಾಪಿ, ಕಿಂದ್ವಯೋರಪ್ರಾಮಾಣ್ಯಂ ಸಾಧ್ಯಮುತಾನ್ಯತರಸ್ಯ ? ನಾಽದ್ಯಃ, ಅನ್ಯತರಪ್ರಾಮಾಣ್ಯೇಽಪಿ ವ್ಯಾಘಾತಸಂಭವೇನ ಸಂದಿಗ್ಧ-ಕಾಲಾತೀತತ್ವಸ್ಯಾನೈಕಾಂತಿಕತ್ವಸ್ಯ ಚಾಪಾತಾತ್ । ದ್ವಿತೀಯೇ, ಪಕ್ಷೀಕೃತಸ್ಯೈವ ಪ್ರಾಮಾಣ್ಯಸಂಭವೇನ ಸಂದಿಗ್ಧಬಾಧಾನಿಸ್ತಾರಾತ್ ।

ಕಿಂಚ ವ್ಯಾಘಾತೋಽಪ್ಯಾಪಾತತಃ ಸರ್ವಥಾ ವಾ ? ನಾಽದ್ಯಃ- ಅನೈಕಾಂತ್ಯಾತ್ । ದ್ವಿತೀಯೇ ಸಂದಿಗ್ಧಾಸಿದ್ಧಿಃ, ಕಿಮತ್ರ ಸರ್ವಥಾ ವ್ಯಾಘಾತ ಏವ ಉತಾಧಿಕಾರ್ಯಾದಿಭೇದೇನ ವ್ಯವಸ್ಥಾ? ಇತಿ ಸಂದೇಹಾನಿಸ್ತಾರಾತ್ ।

ಅನು - (ವೇದವಚನದಲ್ಲಿನ) ವ್ಯಾಹತಿಯಿಂದ ಎರಡೂ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸಾಧಿಸಲಾಗುವುದೋ ಅಥವಾ ಯಾವುದಾದರೂ ಒಂದು ವಾಕ್ಯಕ್ಕೊ? ಮೊದಲ ಪಕ್ಷವು ಸರಿಯಾಗದು. ಯಾವುದಾದರೂ ಒಂದು ವಾಕ್ಯಕ್ಕೆ ಪ್ರಾಮಾಣ್ಯವಿದ್ದರೂ ಸಹ (ಪರಸ್ಪರ ವಿರುದ್ಧವಾದ ಎರಡು ವಾಕ್ಯಗಳಲ್ಲಿ ಒಂದು ವಾಕ್ಯಕ್ಕೆ ಪ್ರಾಮಾಣ್ಯವಿದ್ದರೂ ಸಹ)ವಿರೋಧವು ಸಂಭಾವ್ಯವಾದುದರಿಂದ ಸಂದಿಗ್ಧಬಾಧ ಮತ್ತು ವ್ಯಭಿಚಾರವು ಸಂಭಾವಿತವಾದುದರಿಂದ[1]. ಎರಡನೇ

---

...... ಪುಟ 36 ರಿಂದ

ನಿವಾರಣೆಗೆ ಮದ್ದೊಂದು ಕಾರಣ. ಮದ್ದನ್ನು ಸೇವಿಸಿದರೂ ರೋಗ ನಿವಾರಣೆಯಾಗಲಿಲ್ಲ. ಇಂತಹ ಸಂದರ್ಭದಲ್ಲಿ ಈ ಮದ್ದು ರೋಗ ನಿವಾರಕವಲ್ಲವೋ ಅಥವಾ ಅದು ನಿವಾರಕವಾದರೂ ಅಪಥ್ಯದಿಂದ ರೋಗ ಪರಿಹಾರವಾಗಲಿಲ್ಲವೋ ಎಂಬ ಸಂದೇಹವು ಬರುವುದು. ಇಂತಹ ಸಂದರ್ಭವನ್ನು ಶಾಸ್ತ್ರಗಳಲ್ಲಿ 'ಸಂದಿಗ್ಧಾಸಿದ್ಧ' ಎಂಬ ದೋಷವನ್ನು ಪ್ರಸ್ತಾಪಿಸಿರುತ್ತಾರೆ. ಪ್ರಕೃತ (ಪುತ್ರಕಾಮೇಷ್ಟಿಯನ್ನು ಆಚರಿಸಿದರೂ ಮಕ್ಕಳಾಗದ ಸಂದರ್ಭದಲ್ಲಿ) ನಿಶ್ಚಿತವಾಗಿಯೂ ಪ್ರಮಾಣವಿಸಂವಾದದಿಂದಲೋ ಅಥವಾ (ಕರ್ತೃ-ಕರ್ಮಗಳಲ್ಲಿನ) ವೈಗುಣ್ಯದ ಕಾರಣದಿಂದಲೋ ಫಲಾಪ್ರಾಪ್ತಿಯು ಎಂಬ ಸಂದೇಹ ಪರಿಹೃತವಾಗದೇ ಇರುವುದರಿಂದ ಅನುಮಾನಕ್ಕೆ ಸಂದಿಗ್ಧಾಸಿದ್ಧಿದೋಷ ಎಂದು ಭಾವ.

1. 'ಉದಿತೇ ಜುಹೋತಿ' 'ಅನುದಿತೇ ಜುಹೋತಿ' ಇತ್ಯಾದೀನಿ ವೇದವಚನಾನಿ ಅಪ್ರಮಾಣಾನಿ ಸ್ವವ್ಯಾಹತತ್ವಾತ್' ಎಂದು ಬೌದ್ಧರ ಪೂರ್ವಪಕ್ಷ. ಪ್ರಕೃತ ಮೇಲೆ ಉದಾಹರಿಸಿದ ಎರಡು ವಾಕ್ಯಗಳಲ್ಲಿ ಯಾವುದಾದರೂ ಒಂದು ವಾಕ್ಯಕ್ಕೆ ಪ್ರಾಮಾಣ್ಯವಿದ್ದರೂ ಸಹ ಸ್ವವ್ಯಾಹತತ್ವರೂಪ ಹೇತುವು ಪಕ್ಷವಾದ ವೇದದಲ್ಲಿ ಸಂಭಾವಿತವಾಗುವುದು. ಉದಾಹರಣೆಗೆ 'ಮೊಲದ ಕೊಂಬು

ಪುಟ 38ರಲ್ಲಿ........

ಪಕ್ಷದಲ್ಲಿ ( ಸ್ವ- ವ್ಯಾಹತವಾದ ಎರಡು ವಾಕ್ಯಗಳಲ್ಲಿ ಯಾವುದಾದರೂ ಒಂದು ಅಪ್ರಾಮಾಣಿಕ ಎಂಬ ಪಕ್ಷದಲ್ಲಿ) ಪಕ್ಷೀಕರಿಸಿದ ವಾಕ್ಯದಲ್ಲೇ ಪ್ರಾಮಾಣ್ಯವು ಸಂಭಾವಿತವಾದುದರಿಂದ ಬಾಧಸಂದೇಹರೂಪದೋಷವು ಪರಿಹೃತವಾಗಲಿಲ್ಲ ಆದುದರಿಂದ[1].

---

...... ಪುಟ 37 ರಿಂದ

ತೀಕ್ಷ್ಣವಾಗಿದೆ' 'ತೀಕ್ಷ್ಣವಾಗಿಲ್ಲ' ಎನ್ನುವಲ್ಲಿ ಎರಡೂ ವಾಕ್ಯಗಳು ಅಪ್ರಾಮಾಣಿಕವಾಗಿವೆ ಮತ್ತು ಪರಸ್ಪರವ್ಯಾಹತವೂ ಆಗಿವೆ. ಹಾಗೆಯೇ 'ಬೆಟ್ಟದಲ್ಲಿ ಬೆಂಕಿ ಇದೆ' 'ಬೆಂಕಿ ಇಲ್ಲ' ಈ ವಾಕ್ಯಗಳಲ್ಲಿ ವ್ಯಾಹತಿ ಇದೆ. ಆದರೆ ಎರಡೂ ಅಪ್ರಮಾಣವಾಗಿರಬೇಕೆಂದೇನಿಲ್ಲ. ಒಂದು ಪ್ರಮಾಣವಾಗಿದ್ದರೂ ವ್ಯಾಹತಿಯು ಕೂಡುತ್ತದೆ. ಪ್ರಕೃತ 'ಉದಿತೇ ಜುಹೋತಿ' 'ಅನುದಿತೇ ಜುಹೋತಿ' ಎಂಬ ವಾಕ್ಯಗಳಲ್ಲಿ ಯಾವುದಾದರೂ ಒಂದು ವಾಕ್ಯಕ್ಕೆ ಪ್ರಾಮಾಣ್ಯವಿದ್ದರೂ ಸಹ ವ್ಯಾಹತತ್ವ ರೂಪ ಹೇತುವು ವೇದದಲ್ಲಿ ಸಂಭಾವಿತವಾಗಬಹುದು. ಆದರೆ ಎರಡರಲ್ಲಿ ಒಂದು ವಾಕ್ಯಕ್ಕೆ ಪ್ರಾಮಾಣ್ಯವನ್ನು ಒಪ್ಪಿ , ವ್ಯಾಹತತ್ವರೂಪ ಹೇತುವಿನಿಂದ ಅಪ್ರಾಮಾಣ್ಯವನ್ನು ಸಾಧಿಸಿದಲ್ಲಿ ಬಾಧಸಂದೇಹ ಮತ್ತು ಅನ್ಯೆಕಾಂತಿಕತ್ವರೂಪ ದೋಷಗಳು ಪ್ರಾಪ್ತವಾಗುವವು. ಬಾಧಸಂದೇಹ – ಅನುಮಾನದ ದೋಷಗಳಲ್ಲಿ ಇದು ಒಂದು. 'ಸಾಧ್ಯವು ಪಕ್ಷದಲ್ಲಿ ಇಲ್ಲ' ಎನ್ನಲು ಪ್ರಬಲಪ್ರಮಾಣವಿದ್ದಲ್ಲಿ ಅನುಮಾನವನ್ನು ಬಾಧಿತ ಎನ್ನುತ್ತಾರೆ. ಉದಾಹರಣೆಗೆ 'ನೀರಿನ ಮಡುವಿನಲ್ಲಿ ಬೆಂಕಿ ಇದೆ' ಎಂದು ಸಾಧಿಸಲು ಪ್ರಯತ್ನಿಸುವ ಅನುಮಾನಕ್ಕೆ ಪ್ರತ್ಯಕ್ಷದ ಬಾಧವಿದೆ. ನೀರಿನಲ್ಲಿ ಬೆಂಕಿ ಇರಲು ಶಕ್ಯವೇ ಇಲ್ಲ. ಹಾಗೆಯೇ ಸಾಧಿಸುವ ವಸ್ತುವಿನ ಅಭಾವವಿರಬಹುದು ಎಂದು ಪ್ರಮಾಣಾಂತರದಿಂದ ಸಂಶಯವು ಬಂದಲ್ಲಿ ಅದನ್ನು ಬಾಧಸಂದೇಹ ಎನ್ನುತ್ತಾರೆ. ಪ್ರಕೃತ ಬೌದ್ಧರು 'ಉದಿತೇ ಜುಹೋತಿ' 'ಅನುದಿತೇ ಜುಹೋತಿ' ಇತ್ಯಾದಿ ವೇದವಾಕ್ಯಗಳು ಅಪ್ರಮಾಣ ಸ್ವವ್ಯಾಹತವಾದುದರಿಂದ ಎಂದು ಸಾಧಿಸಲು ಪ್ರಯತ್ನಿಸಿದಲ್ಲಿ, ಈ ಮೇಲೆ ಹೇಳಿದ ವಾಕ್ಯದಲ್ಲಿ ಯಾವುದಾದರೂ ಒಂದು ವಾಕ್ಯ ಪ್ರಮಾಣವಾಗದಿರಬಹುದು. ಅವರು ಅಪ್ರಾಮಾಣ್ಯವನ್ನು ಸಾಧಿಸಲು ನಿಶ್ಚಯಿಸಿದ ವಾಕ್ಯದಲ್ಲಿ ಸಾಧ್ಯಾಭಾವದ ಸಂದೇಹವಿರುವುದರಿಂದ ಬಾಧಸಂದೇಹವು ಪ್ರಾಪ್ತವಾಯಿತು. ಮೇಲೆ ಹೇಳಿದ ವಾಕ್ಯಗಳಲ್ಲಿ ಯಾವುದಾದರೂ ಒಂದು ಪ್ರಾಮಾಣಿಕವಾಗಿರುವುದರಿಂದ , ಆ ಎರಡೂ ವಾಕ್ಯಗಳಲ್ಲಿ ವ್ಯಾಹತತ್ವರೂಪ ಹೇತುವು ಇದೆ. ಆದರೆ ಎರಡೂ ವಾಕ್ಯಗಳಲ್ಲಿ ಸಾಧ್ಯವಾದ ಅಪ್ರಾಮಾಣಿಕತ್ವವಿಲ್ಲ ತನ್ನಿಮಿತ್ತ ಬೌದ್ಧರ ಹೇತುವು ಸಂದಿಗ್ಧಾನ್ಯೆಕಾಂತಿಕವೂ ಆಯಿತು ಎಂದು ಭಾವ.

1. 'ಉದಿತೇ....' ಅಥವಾ 'ಅನುದಿತೇ... ' ಎಂಬ ಯಾವ ವಾಕ್ಯದಲ್ಲಿ ಅಪ್ರಾಮಾಣ್ಯವನ್ನು ಸಾಧಿಸಲು ಯತ್ನಿಸಿದರೂ ಆ ವಾಕ್ಯವೇ ಪ್ರಾಮಾಣಿಕವಾಗಿರಬಹುದಲ್ಲ ಎಂಬ ಸಾಧ್ಯಾಭಾವದ ಸಂದೇಹ ಇರುವುದರಿಂದ ಬಾಧಸಂದೇಹ ಅಪರಿಹೃತವಾಗಿದೆ ಎಂದು ಭಾವ.

ಮತ್ತೂ ಸಹ ವ್ಯಾಹತಿಯೂ ಸಹ ಮೇಲ್ನೋಟದಿಂದ ಪ್ರಾಪ್ತವಾದದ್ದೋ ಅಥವಾ ವಿಚಾರಾನಂತರ ಪ್ರಾಪ್ತವಾದದ್ದೋ? ಮೊದಲಪಕ್ಷವು ಸರಿಯಾದುದಲ್ಲ (ಮೇಲ್ನೋಟದಿಂದ ವ್ಯಾಹತವಾದದ್ದು ಎನ್ನುವ ಪಕ್ಷವು ಸರಿಯಾದುದಲ್ಲ.) ವ್ಯಭಿಚರಿತವಾದುದರಿಂದ[1]. ಎರಡನೆಯ ಪಕ್ಷದಲ್ಲಿ (ನಿಷ್ಕರ್ಷಿಸಿದರೂ ವಿರೋಧವಿದೆ ಎಂಬ ಪಕ್ಷದಲ್ಲಿ) ಬಾಧ ಸಂದೇಹವಿದೆ. ಇಲ್ಲಿ ನಿಶ್ಚಿತವಾಗಿಯೂ ವ್ಯಾಹತಿಯೋ ಅಥವಾ ಅಧಿಕಾರ್ಯಾದಿಗಳ ಭೇದದಿಂದ ವ್ಯವಸ್ಥೆಯೋ? ಎಂದು ಸಂದೇಹವು ಪರಿಹೃತವಾಗದಿರುವುದರಿಂದ[2].

**ವೇದವಚನಗಳಲ್ಲಿ ಪುನರುಕ್ತಿಯು ಇಲ್ಲ**

**ಪೌನರುಕ್ತ್ಯಂ ತು ಪ್ರಮಾಣಸಂಪ್ಲವೇ ವ್ಯಭಿಚಾರಾದಪ್ರಾಮಾಣ್ಯಸಾಧಕಂ ನ ಭವತಿ । ವೈಯರ್ಥ್ಯಂ ಕಥಂಚಿತ್ ಸಾಧಯೇತ್, ತದಪಿ ನಾಸ್ತಿ, ಕಿಮಿದಂ ಪುನರುಕ್ತಮೇವ ಉತಾಧಿಕವಿವಕ್ಷಾದಿನಾಽನುವಾದರೂಪಮ್? ಇತಿ ಸಂದಿಗ್ಧತ್ವಾತ್ ।**

ಪುನರುಕ್ತಿಯಾದರೋ ಪ್ರಮಾಣಸಂಪ್ಲವದಲ್ಲಿ (ಒಂದೇ ವಿಷಯದಲ್ಲಿ

---

1. 'ಮೇಲ್ನೋಟಕ್ಕೆ ವ್ಯಾಹತವಾಗಿದೆ ಆದುದರಿಂದ ವೇದವಚನಗಳು ಅಪ್ರಾಮಾಣಿಕ' ಎಂದು ಹೇಳಿದಲ್ಲಿ, ಪ್ರಾಮಾಣಿಕವಾದ ವಾಕ್ಯಗಳೂ ಸಹ ಮೇಲ್ನೋಟಕ್ಕೆ ವ್ಯಾಹತವಾಗಿರುತ್ತವೆ. 'ಬೆಟ್ಟದಲ್ಲಿ ಬೆಂಕಿ ಇದೆ.' 'ಬೆಟ್ಟದಲ್ಲಿ ಬೆಂಕಿ ಇಲ್ಲ' ಇವು ವ್ಯಾಹತಗಳಾಗಿವೆ. ಆದರೆ ನಿಷ್ಕರ್ಷಿಸಲು ಹೊಗೆ ಇರುವ ಸ್ಥಳದಲ್ಲಿ ಬೆಂಕಿ ಇದೆ. ನೀರಿನ ಝರಿ ಇರುವ ಬೆಟ್ಟದಲ್ಲಿ ಬೆಂಕಿ ಇಲ್ಲ ಎನ್ನುವುದು ಸತ್ಯವಾಗಿದೆ. ಆದುದರಿಂದ ಮೇಲ್ನೋಟದ ವ್ಯಾಹತಿ ಇದ್ದರೂ ಅಪ್ರಾಮಾಣ್ಯ ಇಲ್ಲವಾದುದರಿಂದ ನಿಮ್ಮ ಹೇತುವು ವ್ಯಭಿಚರಿತ ಎಂದು ಭಾವ.

2. 'ಉದಿತೇ....' 'ಅನುದಿತೇ....' ಎಂದು ವೇದವು ವಿಧಿಸಿದೆ. ಈ ವಿಧಿಯು 'ಅಧಿಕಾರಿಗಳು ಸೂರ್ಯೋದಯದ ಮೊದಲಾಗಲಿ, ನಂತರದಲ್ಲಾಗಲಿ ಹೋಮಿಸಬಹುದು' ಎಂದು ವಿಕಲ್ಪವನ್ನು ತಿಳಿಸಿರುವುದು. ಅಥವಾ 'ಕೆಲವು ಅಧಿಕಾರಿಗಳು ಸೂರ್ಯೋದಯದ ನಂತರ ಹೋಮಿಸಲಿ, ಮತ್ತೆ ಕೆಲವರು ಸೂರ್ಯೋದಯದ ಮೊದಲು ಹೋಮಿಸಲಿ' ಎಂದು ಅಧಿಕಾರಿಗಳ ಭೇದದಿಂದ ತಿಳಿಸಿರಬಹುದು. ಅಥವಾ ಕೆಲಸಂದರ್ಭದಲ್ಲಿ ಸೂರ್ಯೋದಯ ಮೊದಲು ಮತ್ತು ಕೆಲಸಂದರ್ಭದಲ್ಲಿ ಸೂರ್ಯೋದಯದ ನಂತರ ಎಂದು ಕಾಲದ ವ್ಯತ್ಯಾಸದಿಂದಲೂ ವಿಧಿಸಿರಬಹುದು ಎಂದು ಸಂದೇಹವಿರುವುದರಿಂದ ಎರಡೂ ವಾಕ್ಯಗಳು ಪ್ರಾಮಾಣಿಕವೇ ಆಗಿರಬಹುದು ಎಂದು ಸಾಧ್ಯಾಭಾವದ ಸಂದೇಹವಿರುವುದರಿಂದ ಅನುಮಾನಕ್ಕೆ ಬಾಧಸಂದೇಹ ಎಂಬ ದೋಷವಿದೆ ಎಂದು ಭಾವ.

ಪ್ರತ್ಯಕ್ಷಾದಿ ಅನೇಕಪ್ರಮಾಣಗಳು ಸಂಪನ್ನವಾದಲ್ಲಿ) ವ್ಯಭಿಚರಿತವಾದುದರಿಂದ, ಅಪ್ರಾಮಾಣ್ಯದ ಸಾಧಕವಾಗಲಾರದು[1]. (ಪುನರುಕ್ತಿಯಿಂದ ಅಪ್ರಾಮಾಣ್ಯವನ್ನು ಸಾಧಿಸಲು ಅಶಕ್ಯವಾದರೂ) ವ್ಯರ್ಥತೆಯನ್ನು ಸಾಧಿಸಲು ಅವಕಾಶವಿರಬಹುದು,ಆದರೆ ಅದೂ ಸಾಧ್ಯವಿಲ್ಲ. ಇದು ಪುನರುಕ್ತವೋ ಅಥವಾ ಹೆಚ್ಚಿನದನ್ನು ತಿಳಿಸಲು ಅನುವಾದಿಸಲಾಗಿದೆಯೋ? ಎಂದು ಸಂದೇಹವಿರುವುದರಿಂದ[2].

**ವೇದವಚನಗಳು ನಿರರ್ಥಕವಲ್ಲ, ಸಿದ್ಧವಾದ ವಿಷಯವನ್ನೂ ತಿಳಿಸುತ್ತಿಲ್ಲ**

**ಏತೇನ ಪ್ರಮಾಣಾಂತರಸಿದ್ಧಾರ್ಥತ್ವಮಪಿ ನಿರಸ್ತಮ್ । ನೈರರ್ಥಕ್ಯಮ್ ಆಪಾತತಶ್ಚೇದನೈಕಾಂತಿಕಮ್ । ಸರ್ವಥಾ ತು ಸಂದಿಗ್ಧಮ್ । ಕಿಮತ್ರ ಶಕ್ತಿತಾತ್ಪರ್ಯಾಪರಿಜ್ಞಾನಾದರ್ಥಾಪ್ರತಿಪತ್ತಿಃ, ಉತ ಸರ್ವಥಾ ನೈರರ್ಥಕ್ಯಾದ್? ಇತಿ ಸಂದೇಹಾತ್ । ಸಂವಾದರಾಹಿತ್ಯಂ ಚ ಭಾಗಾಸಿದ್ಧಮ್- 'ಅಗ್ನಿರ್ಹಿಮಸ್ಯ ....' ಇತ್ಯಾದೇಃ ಸಂವಾದದರ್ಶನಾತ್ । ಕಿಮಯಥಾರ್ಥತ್ವಾದೇವಾತ್ರ ಸಂವಾದೋ ನಾಸ್ತಿ ಉತ ತಸ್ಯಾರ್ಥಸ್ಯ ತದೇಕ-ಪ್ರಾಮಾಣಿಕತ್ವಾದ್ ? ಇತ್ಯನ್ಯಥಾಸಿದ್ಧಿಸಂದೇಹಾಚ್ಚ ನಾಪ್ರಮಾಣಮಿತಿ ।**

ಇದರಿಂದ (ಪೌನರುಕ್ತಿಯು ದೋಷವಲ್ಲ ಎಂದು ಹೇಳಿದ್ದರಿಂದ) ಪ್ರಮಾಣಾಂತರ ಸಿದ್ಧಾರ್ಥತ್ವ ( ಎಂಬ ದೋಷವು ವೇದಗಳಿಗೆ ಇದೆ ಎನ್ನುವುದು) ನಿರಾಕೃತವಾಯಿತು[3]. ನೈರರ್ಥಕ್ಯವು ಮೇಲ್ನೋಟದಿಂದ (ಕಂಡಿದ್ದು)

1. ವೇದವಚನಾನಿ ಅಪ್ರಾಮಾಣಾನಿ ಪುನರುಕ್ತತ್ವಾತ್ ಎಂದು ಪೂರ್ವಪಕ್ಷಕಾರನ ಅನುಮಾನ. ಈ ಪುನರುಕ್ತತ್ವವೆಂಬ ಹೇತು ವ್ಯಭಿಚರಿತವಾಗಿದೆ. ಒಂದೇ ವಿಷಯವನ್ನು ಅಧಿಕರಿಸಿ ಅನೇಕರು ಹೇಳುತ್ತಾರೆ . ಇದನ್ನು ಪ್ರಮಾಣಸಂಪ್ಲವ ಎನ್ನುತ್ತಾರೆ. ಆ ಅನೇಕರ ವಚನಗಳಲ್ಲಿ ಪುನರುಕ್ತಿ ಇದೆ. ಆದರೆ ಅಪ್ರಾಮಾಣ್ಯವಿಲ್ಲ. ಹೀಗಾಗಿ ಪುನರುಕ್ತಿ ಇದ್ದರೂ ಅಪ್ರಮಾಣವಾಗ ಬೇಕೆಂದೇನಿಲ್ಲ ಎಂದು ಭಾವ.

2. ಶಾಸ್ತ್ರಗಳಲ್ಲಿ ಹೆಚ್ಚಿನ ಸಂಗತಿಗಳನ್ನು ತಿಳಿಸಲು ಒಮ್ಮೆ ಹೇಳಿದ್ದನ್ನು ಅನುವಾದಿಸಿ, ಹೆಚ್ಚಿನದನ್ನು ತಿಳಿಸಲಾಗುವುದು, ಹಾಗೂ ಖಂಡಿಸಲೂ ಅನುವಾದಿಸಬಹುದು ಎಂದು ಭಾವ.

3. ಪ್ರಮಾಣಾಂತರ ಸಿದ್ಧವಾದುದನ್ನು ತಿಳಿಸುವುದು ಅಪ್ರಮಾಣ. ವೇದದಲ್ಲಿ 'ಅಗ್ನಿರ್ಹಿಮಸ್ಯ ...' ಎಂದು ತಿಳಿಸುವಂತಹ ವಚನಗಳಿವೆ ಎಂದು ಪೂರ್ವಪಕ್ಷವನ್ನು ಮಾಡಿದ್ದರು, ಅಂತಹ ನುಡಿಗಳಿಗೆ ಪ್ರಮಾಣಾಂತರ ಸಿದ್ಧತ್ವವಿದ್ದರೂ ಅಪ್ರಾಮಾಣ್ಯವಿಲ್ಲ, ಪ್ರಮಾಣಸಂಪ್ಲವದಂತೆ ಪ್ರಾಮಾಣ್ಯವೇ ಇದೆ ಎಂದು ಭಾವ.

ಎಂದಾದಲ್ಲಿ, ವ್ಯಭಿಚರಿತವಾಗುವುದು[1]. ನಿಶ್ಚಿತವಾಗಿಯೂ (ನಿರರ್ಥಕ ಎನ್ನುವುದು) ಸಂದಿಗ್ಧವಾಗಿದೆ. ವಾಕ್ಯದ ಶಕ್ತಿ-ತಾತ್ಪರ್ಯಗಳ ಜ್ಞಾನವಿಲ್ಲದೇ ಇರುವುದರಿಂದ ಅರ್ಥದ ಪ್ರತಿಭಾಸವಾಗಲಿಲ್ಲವೋ ಅಥವಾ ನಿಶ್ಚಿತವಾಗಿಯೂ ನಿರರ್ಥಕವೋ? ಎಂದು ಸಂದೇಹವಿರುವದರಿಂದ . ಸಂವಾದ ರಾಹಿತ್ಯವಾದರೋ ಭಾಗಾಸಿದ್ಧ. 'ಅಗ್ನಿಯು ಚಳಿಗೆ ಔಷಧ' ಎಂದರ್ಥವನ್ನು ತಿಳಿಸುವಂತಹ ಅನೇಕ ವಾಕ್ಯಗಳಿಗೆ ಸಂವಾದ ಕಂಡಿರುವದರಿಂದ. (ಇನ್ನು ಸಂವಾದವು ಇಲ್ಲದ ವಾಕ್ಯಗಳಲ್ಲಾದರೋ) ಅಯಥಾರ್ಥವಾದುದರಿಂದ ಸಂವಾದ ಇಲ್ಲವೋ ಅಥವಾ ಈ ವಿಷಯವು ವೇದಪ್ರಮಾಣದಿಂದ ಮಾತ್ರ ವೇದ್ಯವಾದುದರಿಂದಲೋ? ಎಂದು ಸಂದೇಹ ವಿರುವುದರಿಂದ ಈ ಹೇತುವು (ಸಂವಾದರಾಹಿತ್ಯರೂಪ ಹೇತುವು, ವೇದವಚನಗಳು ಅಪ್ರಮಾಣ ಎಂದು ಸಾಧಿಸಲು) ಪ್ರಮಾಣವಾಗಲಾರದು ಎಂದು[2].

---

1. ವೇದವಚನಾನಿ ಅಪ್ರಮಾಣಾನಿ ಆಪಾತತಃ ನಿರರ್ಥಕತ್ವಾತ್ ಎಂದು ತಿಳಿಸಿದಂತಾಯಿತು. ಬುದ್ಧವಾಕ್ಯದಲ್ಲೂ ಆಪಾತತಃ ನಿರರ್ಥಕತ್ವ ಎಂಬ ಹೇತುವು ಇದೆ. ಆದರೆ ಬೌದ್ಧರು ಆ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಒಪ್ಪಿಲ್ಲ ತನ್ನಿಮಿತ್ತ ಹೇತುವು ವ್ಯಭಿಚರಿತವಾಗಿದೆ ಎಂದು ಭಾವ.

2. 'ಸದಾಗಮೈಕವಿಜ್ಞೇಯಂ' ಎಂದು ಆಚಾರ್ಯರು ತಿಳಿಸಿರುವರು. ಇಲ್ಲಿ ಒಂದು ಸಂದೇಹವಿದೆ. ಯಾವುದು ಒಂದೇ ಪ್ರಮಾಣದಿಂದ ವೇದ್ಯವಾಗುವುದೋ ಇತರ ಪ್ರಮಾಣ ಸಂವಾದವಿಲ್ಲವೋ ಅದು ಅಪ್ರಮಾಣ. ಉದಾಹರಣೆಗೆ ಮೋಸಗಾರನ ವಾಕ್ಯ . ಆತನ ಮಾತಿಗೆ ಪ್ರತ್ಯಕ್ಷಾದಿ ಪ್ರಮಾಣದ ಸಂವಾದವಿಲ್ಲ. ಪ್ರಕೃತ ನಾರಾಯಣನನ್ನು 'ಆಗಮೈಕವೇದ್ಯ' ಎಂದು ಒಪ್ಪಲಾಗಿದೆ. ಆದುದರಿಂದ ಅಂತಹ ವಿಷಯವು ಅಪ್ರಮಾಣ ಮೋಸಗಾರನ ವಚನದಂತೆ ಎಂದು ಸಂದೇಹಿಸಿದಲ್ಲಿ ಉತ್ತರಿಸುತ್ತಾರೆ. ಸಂವಾದರಹಿತವಾದದ್ದು ಅಪ್ರಮಾಣವೂ ಆಗಿರಬಹುದು, ಪ್ರಮಾಣವೂ ಆಗಿರಬಹುದು. ಸಂವಾದವಿಲ್ಲದ ಮೋಸಗಾರನ ವಾಕ್ಯವು ಅಪ್ರಮಾಣವಾಗಿದೆ. ಆದರೆ ಕೆಲವು ಸಂದರ್ಭದಲ್ಲಿ ಸಂವಾದವಿರದ ವಾಕ್ಯವು ಪ್ರಮಾಣವಾಗಿರುತ್ತದೆ. ಕಲ್ಲುಸಕ್ಕರೆಯ ಸಿಹಿ ರಸನ ಪ್ರತ್ಯಕ್ಷಕ್ಕೆ ಮಾತ್ರ ವೇದ್ಯ . ಅನುಮಾನಾದಿ ಇತರ ಪ್ರಮಾಣಗಳ ಸಂವಾದವಿಲ್ಲ ಎಂದು ಸಿಹಿಯನ್ನು ಅಪ್ರಮಾಣ ಎಂದು ಹೇಳಲಾಗುವುದಿಲ್ಲ. ಆದರಂತೆ ನಾರಾಯಣನು ವೇದಮಾತ್ರ ವೇದ್ಯನಾಗಿರುವನು. ಇಲ್ಲಿ ಪ್ರಮಾಣದ ಸಂವಾದ ಇಲ್ಲದ ಮಾತ್ರದಿಂದ ಅಪ್ರಮಾಣ ಎಂದು ನಿಶ್ಚಯಿಸಲು ಸಾಧ್ಯವಿಲ್ಲ. ಆದುದರಿಂದ ಬೌದ್ಧರ ಹೇತುಗಳು ವೇದವಚನಗಳನ್ನು ಅಪ್ರಮಾಣ ಎಂದು ಸಾಧಿಸಲು ಸಮರ್ಥವಾಗುವುದಿಲ್ಲ ಎಂದು ಭಾವ.

ವೇದಪ್ರಾಮಾಣ್ಯಸಂದೇಹಗಳ ನಿರಾಕರಣೆ

**ಅಪೌರುಷೇಯತ್ವಾದ್ ವೇದಸ್ಯ ।**

ವೇದವು ಅಪೌರುಷೇಯವಾದುದರಿಂದ (ವೇದದಲ್ಲಿ ಅಪ್ರಮಾಣ್ಯಕ್ಕೆ ಕಾರಣವಾದ ಅನೃತತ್ವಾದಿ ದೋಷಗಳಿಲ್ಲ).

**ಅಸ್ತ್ವೇವಂ ತರ್ಹಿ ಹೇತೂನಾಂ ಸಂದಿಗ್ಧಾಸಿದ್ಧತ್ವಾದಿನಾ ವೇದಾಪ್ರಾಮಾಣ್ಯನಿಶ್ಚಯಃ ತಥಾಽಪಿ ತತ್ಸಂದೇಹೋಽಸ್ತ್ಯೇವ, ವೈಗುಣ್ಯಾದಿನಿಮಿತ್ತತ್ವಾದೇರನಿಶ್ಚಿತತ್ವಾತ್ । ತಥಾ ಚ ತತ್ ಭವತೋಽಭಿಮತಸಿದ್ಧಯೇ ವೇದಪುರಾಣವಚನೋದಾಹರಣಮಯುಕ್ತಮ್? ಇತ್ಯತ ಆಹ 'ಅಪೌರುಷೇಯತ್ವಾತ್' ಇತಿ ॥ 'ವಚನಾನಾಮ್' ಇತಿ ಪ್ರಕೃತತ್ವೇಽಪಿ 'ವೇದಸ್ಯ' ಇತಿ ಪುನರ್ವಚನಂ, ಪುರಾಣವಚನಸ್ಯಾಪಿ ಪ್ರಕೃತತ್ವಾತ್ ತಸ್ಯಾಪಿ ಪಕ್ಷೀಕಾರೇ ಭಾಗಾಸಿದ್ಧಿಪ್ರಸಙ್ಗಾತ್ ತತ್ಪರಿತ್ಯಾಗೇನ ತಾವದತ್ರ ವೇದಸ್ಯೈವ ಪಕ್ಷೀಕರಣಜ್ಞಾಪನಾರ್ಥಮ್ ।**

ಹಾಗೆಯೇ ಆಗಲಿ, ಆದರೆ (ಬೌದ್ಧರು ವೇದವು ಅಪ್ರಮಾಣ ಎಂದು ಸಾಧಿಸಲು ಹೇಳಿದ) ಹೇತುಗಳಿಗೆ ಸಂದಿಗ್ಧಾಸಿದ್ಧಿ ಮೊದಲಾದ ದೋಷಗಳು ಇರುವುದರಿಂದ ವೇದದ ಅಪ್ರಾಮಾಣ್ಯವು ನಿಶ್ಚಯವಾಗದಿರಬಹುದು, ಆದರೂ ಅಪ್ರಾಮಾಣ್ಯದ ಸಂದೇಹವು ಇದ್ದೇಇದೆ. (ಆದುದರಿಂದ) ವೈಗುಣ್ಯಾದಿಗಳು (ಫಲಾಭಾವಾದಿಗಳಲ್ಲಿ) ಕಾರಣ ಎಂಬುವದು ನಿಶ್ಚಿತವಾಗಿಲ್ಲವಾದುದರಿಂದ[1]. ಹಾಗಾದಲ್ಲಿ ನಿಮಗೆ ಅಭಿಮತವಾದುದರ (ನಾರಾಯಣನಲ್ಲಿ ಸದಾಗಮೈಕವೇದ್ಯತ್ವ, ನಿರ್ದೋಷತ್ವಾದಿಗಳ) ಸಿದ್ಧಿಗೆ

1. ಪುತ್ರಕಾಮೇಷ್ಟಿಯನ್ನು ಮಾಡಿದರೂ ಮಕ್ಕಳಾಗಿಲ್ಲ. ಇಲ್ಲಿ ವೇದವೇ ಅಪ್ರಮಾಣವಾದುದರಿಂದ ಮಕ್ಕಳಾಗಿಲ್ಲವೋ ಅಥವಾ ಇಷ್ಟಿಯನ್ನು ಮಾಡಿದ ಕ್ರಮದಲ್ಲಿ ಏನಾದರೂ ಲೋಪದಿಂದ ಮಕ್ಕಳಾಗಿಲ್ಲವೋ? ಎಂದು ಸಂದೇಹವಿದೆ. ಆದರೆ ವೇದವು ಪ್ರಮಾಣ ಎಂದು ನಿಶ್ಚಿತವಾದರೆ 'ಮಕ್ಕಳಾಗದಿರಲು ಕರ್ಮಾದಿಗಳಲ್ಲಿ ವೈಗುಣ್ಯವಿದೆ' ಎಂದು ನಿಶ್ಚಯಿಸಬಹುದು. ಪ್ರಕೃತ ವೇದದ ಪ್ರಾಮಾಣ್ಯ ನಿಶ್ಚಯವಾಗಿಲ್ಲ ಆದುದರಿಂದ ಕರ್ಮಾದಿಗಳಲ್ಲಿ ವೈಗುಣ್ಯವನ್ನು ಕಲ್ಪಿಸಲು ಸಾಧ್ಯವಿಲ್ಲ ಎಂದು ಭಾವ.

ವೇದಪುರಾಣವಚನಗಳನ್ನು ಉದಾಹರಿಸಿದ್ದು ಅಯುಕ್ತ? ಆದುದರಿಂದ ಉತ್ತರಿಸುವರು '**ಅಪೌರುಷೇಯತ್ವಾತ್**' ಎಂದು. '**ವಚನಾನಾಂ**' ಎಂದು ಪ್ರಕೃತವಾಗಿದ್ದರೂ, ಪುನಃ '**ವೇದಸ್ಯ**' ಎಂದು ಹೇಳಿರುವುದು, ಪುರಾಣವಚನಗಳೂ ಪ್ರಕೃತದಲ್ಲಿ ಪ್ರಸಕ್ತವಾಗಿರುವದರಿಂದ, ಅವುಗಳನ್ನೂ ಪಕ್ಷವನ್ನಾಗಿ ಸ್ವೀಕರಿಸಿದಲ್ಲಿ 'ಭಾಗಾಸಿದ್ಧಿ'ಗೆ(ಅನುಮಾನದ ಒಂದು ದೋಷಕ್ಕೆ) ಅವಕಾಶವಿರುವುದರಿಂದ ಪುರಾಣಾದಿಗಳನ್ನು ಪರಿತ್ಯಜಿಸಿ ಕೇವಲ ವೇದವನ್ನು ಮಾತ್ರ ಪಕ್ಷವನ್ನಾಗಿಸಬೇಕು ಎಂದು ಸೂಚಿಸಲು[1].

**ಶಬ್ದದಲ್ಲಿನ ದೋಷವು ವಕ್ತೃವಿನ ಅಧೀನ**

**ಇದಮುಕ್ತಂ ಭವತಿ - ಕರಣಾನಾಮಪ್ರಾಮಾಣ್ಯಂ ಖಲ್ವಬೋಧಕತ್ವಂ, ವಿಪರೀತಬೋಧಕತ್ವಂ ವಾ । ತತ್ರ ಶಬ್ದಸ್ಯಾಬೋಧಕತ್ವಂ ತು ದ್ವೇಧಾ ಸಂಭವತಿ ಪದಾಭಿಮತಾನಾಂ ನಿರಭಿಧೇಯತ್ವೇನ ಸಾಭಿಧೇಯತ್ವೇಽಪ್ಯನ್ವಯಾಭಾವೇನ ಚೇತಿ । ವಿಪರೀತಬೋಧಕತ್ವಂ ತು ವಿಪರೀತಾನ್ವಯೇನ । ತದಿದಂ 'ಸ್ವತಂತ್ರವಕ್ತೃಪುರುಷದೋಷಾಧೀನಂ ನ ತು ಸ್ವಭಾವ' ಇತಿ ಅಪ್ರಾಮಾಣ್ಯಸ್ಯ ಪರತಸ್ತ್ವಂ ವ್ಯುತ್ಪಾದಯನ್ತೋ ವಕ್ಷ್ಯಾಮಃ ।**

ಇಷ್ಟು ಹೇಳಿದಂತಾಯಿತು- ಕರಣಗಳಿಗೆ (ಪ್ರತ್ಯಕ್ಷಾದಿಗಳಿಗೆ) ಅಪ್ರಾಮಾಣ್ಯವು ಅಬೋಧಕತ್ವದಿಂದ ಅಥವಾ ವಿರುದ್ಧ ಬೋಧಕತ್ವದಿಂದ

---

1. 'ನಚೈತೇಷಾಂ....' ಎಂದು ಪೂರ್ವದಲ್ಲಿ ಪ್ರಸಕ್ತವಾಗಿದೆ. ಅಲ್ಲಿ ವೇದ ಮತ್ತು ಪುರಾಣದ ವಚನಗಳು ಅಪ್ರಮಾಣ ಎಂದು ಶಂಕಿಸಲಾಗಿದೆ. 'ಪೂರ್ವ ಪ್ರಸಕ್ತವಾದ ವಾಕ್ಯಗಳು ಅಪ್ರಮಾಣವಲ್ಲ ಅವು ಅಪೌರುಷೇಯವಾದುದರಿಂದ' ಎಂದು ಹೇಳಿದಲ್ಲಿ, ಪೂರ್ವಪ್ರಸಕ್ತ ವಚನಗಳಲ್ಲಿನ ವೇದಭಾಗದಲ್ಲಿ ಅಪೌರುಷೇಯತ್ವರೂಪಹೇತು ಇದ್ದರೂ ಪುರಾಣಗಳಲ್ಲಿ ಅಪೌರುಷೇಯತ್ವವು ಇಲ್ಲದಿರುವುದರಿಂದ ಪಕ್ಷದ ಒಂದು ಭಾಗದಲ್ಲಿ ಹೇತುವು ಇಲ್ಲ. ಆದುದರಿಂದ ಅನುಮಾನಕ್ಕೆ 'ಭಾಗಾಸಿದ್ಧಿ' ಎಂಬ ದೋಷವು ಪ್ರಾಪ್ತವಾಗುವ ಅವಕಾಶವಿತ್ತು, ಆದುದರಿಂದ ಪುರಾಣವಚನಗಳನ್ನು ಪರಿತ್ಯಜಿಸಿ ಕೇವಲ ವೇದವಚನಗಳನ್ನು ಮಾತ್ರ ಪರಿಗ್ರಹಿಸಿ, ಈ ಹೇತುವಿನಿಂದ ಅಪ್ರಾಮಾಣ್ಯಸಂದೇಹವನ್ನು ಪರಿಹರಿಸಲಾಗುವುದು ಎನ್ನುವದನ್ನು ಸೂಚಿಸಲು 'ವೇದಸ್ಯ' ಎಂದು ಆಚಾರ್ಯರು ಪರಿಗ್ರಹಿಸಿರುವರು. ಇನ್ನು ಪುರಾಣಗಳ ಪ್ರಾಮಾಣ್ಯವನ್ನು ವೇದಾನುಸಾರಿಯಾದುದರಿಂದ, ಎಂದು ಮುಂದೆ ತಿಳಿಸುತ್ತಾರೆ ಎಂದು ಭಾವ.

(ಪ್ರಾಪ್ತವಾಗುವುದು)[1]. ಪ್ರಕೃತದಲ್ಲಿ ಶಬ್ದಕ್ಕೆ ಅಬೋಧಕತ್ವವು ಎರಡು ವಿಧದಲ್ಲಿ ಸಂಭಾವಿತವಾಗಿದೆ. ಅಭಿಮತವಾದ ಪದಗಳಿಗೆ ವಾಚ್ಯತ್ವವೇ ಇಲ್ಲದಿರುವುದರಿಂದ ವಾಚ್ಯತ್ವವಿದ್ದರೂ ಅನನ್ವಿತವಾಗುವುದರಿಂದಲೂ (ಶಬ್ದಕ್ಕೆ ಅಬೋಧಕತ್ವವು ಪ್ರಾಪ್ತವಾಗುವುದು)[2]. (ಇನ್ನು ವಾಕ್ಯಕ್ಕೆ) ವಿಪರೀತ ಬೋಧಕತ್ವವು ವಿರುದ್ಧ ಅನ್ವಯವನ್ನು ಮಾಡುವುದರಿಂದ.[3] ಈ ತರಹ (ಶಬ್ದದೋಷವು), ಸ್ವತಂತ್ರ ವಕ್ತೃವಿನ ದೋಷದ ಪ್ರಯುಕ್ತವೇ ಹೊರತು (ಶಬ್ದಕ್ಕೆ) ಸ್ವಾಭಾವಿಕವಾದದ್ದಲ್ಲ. ಅಪ್ರಾಮಾಣ್ಯವು ಅನ್ಯನಿಮಿತ್ತ (ಪರತಃ) ಎನ್ನುವುದನ್ನು ಮುಂದೆ ಪ್ರತಿಪಾದಿಸುತ್ತೇವೆ[4].

**ವೇದಗಳಲ್ಲಿ ಅಪ್ರಾಮಾಣ್ಯದ ಆಶಂಕೆಗೆ ಕಾರಣಗಳಿಲ್ಲ**

**ಪುರುಷೋ ಹ್ಯಜ್ಞಾನಾದ್ ವಿಪರೀತಜ್ಞಾನಾತ್, ಪ್ರಮಾದಾತ್, ಅಪಟುಕರಣತ್ವಾದ್ ವಾ ನಿರಭಿಧೇಯಾನ್ ನಿರನ್ವಯಾನ್ ವಾ ಶಬ್ದಾನ್ ಪ್ರಯುಂಕ್ತೇ । ಪ್ರಮಾದಾತ್, ಕರಣಾಪಟುತ್ವಾದ್, ವಿಪರೀತಜ್ಞಾನಾದ್, ವಿಪ್ರಲಂಭಕತ್ವಾದ್ ವಾ ವಿಪರೀತಾನ್ವಯಾನ್ । ತದಭಾವಶ್ಚ ದ್ವೇಧಾ ಸಂಭವತಿ, ಅಪೌರುಷೇಯತ್ವೇನ ವಾ ವಕ್ತುರಾಪ್ತತ್ವೇನ ವಾ, 'ವಿವಕ್ಷಿತಾರ್ಥತತ್ತ್ವಜ್ಞಾನಾದೇಃ' ಆಪ್ತಿಶಬ್ದಾರ್ಥತ್ವಾತ್ । ತತ್ರ ವೇದಸ್ಯ ಅಪೌರುಷೇಯತ್ವೇನ ಪುರುಷದೋಷನಿಬಂಧನದೋಷಾಭಾವಾತ್, ಕಾರಣಾಭಾವೇ ಚ ಕಾರ್ಯಸ್ಯ ಶಙ್ಕಿತುಮಶಕ್ಯತ್ವಾದಪ್ರಾಮಾಣ್ಯಾಭಾವೋ ನಿಶ್ಚೀಯತೇ ।**

---

1. ಜ್ಞಾನಕ್ಕೆ ಕರಣಗಳು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳು. ಇವು ಏನನ್ನೂ ತಿಳಿಸದ ಪಕ್ಷದಲ್ಲಿ ವಿರುದ್ಧವಾಗಿ ತಿಳಿಸಿದಲ್ಲಿ, ಇವುಗಳನ್ನು ಅಪ್ರಮಾಣ ಎನ್ನುವರು ಎಂದು ಭಾವ.
2. 'ಕಚಟತಪ' 'ಜಬಗಡದ' ಈ ಶಬ್ದಗಳಿಗೆ ವಾಚ್ಯತ್ವವಿಲ್ಲ, ನಿರರ್ಥಕ ಶಬ್ದಗಳು. 'ಅಗ್ನಿನಾ ಸಿಂಚತಿ' ಎನ್ನುವುದು ಅನನ್ವಿತವಾದದು, ಅಗ್ನಿಗೂ ಸೇಚನಕ್ರಿಯೆಗೂ ಅನ್ವಯವಿಲ್ಲ. ಇತ್ಯಾದಿಗಳು ಉದಾಹರಣ ಎಂದು ಭಾವ.
3. 'ಗರುಡಾನೆ ಉರುಗ ತುರುಗ ಪರ್ಯಂಕ...' ಇಲ್ಲಿ ಹರಿಗೆ ಗರುಡ ಮತ್ತು ಉರುಗ ಇವರಿಬ್ಬರು ತುರಗ-ಪರ್ಯಂಕಗಳು ಎಂದು ಅನ್ವಯಿಸಬೇಕು ಇಲ್ಲದಿದ್ದಲ್ಲಿ ಅಬೋಧಕತ್ವವು ಪ್ರಾಪ್ತವಾಗುವುದೆಂದು ಭಾವ.
4. ಕರಣಗಳಿಗೆ ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ ಎನ್ನುವುದು ತತ್ತ್ವವಾದಿಗಳಿಗೆ ಅಭಿಮತವಾಗಿದೆ, ಅದನ್ನು ಮುಂದೆ ಸ್ಫುಟೀಕರಿಸಲಾಗುವುದು.

ಅನು- ಪುರುಷನು ಅಜ್ಞಾನದಿಂದಲೋ, ವಿರುದ್ಧಜ್ಞಾನದಿಂದಲೋ, ಅನವಧಾನದಿಂದಲೋ, ಇಂದ್ರಿಯಗಳ ದೋಷದಿಂದಲೋ, ವಾಚ್ಯತ್ವರಹಿತ ವಾದ ಅಥವಾ ಅನ್ವಯರಹಿತವಾದ ಶಬ್ದಗಳನ್ನು ಬಳಸುತ್ತಾನೆ. ವಿರುದ್ಧಾನ್ವಯ ವಿರುವ ಶಬ್ದಗಳನ್ನು ಅನವಧಾನದಿಂದ, ಇಂದ್ರಿಯದೋಷದಿಂದ, ವಿರುದ್ಧ ಜ್ಞಾನದಿಂದ ಮೋಸ ಮಾಡುವ ಉದ್ದೇಶದಿಂದ ಪ್ರಯೋಗಿಸುತ್ತಾನೆ. ಈ ದೋಷಗಳು ಇಲ್ಲದಿರಲು ಎರಡು ಬಗೆಗಳಿವೆ. ವಾಕ್ಯಗಳು ಅಪೌರುಷೇಯ ವಾಗುವುದರಿಂದ, ವಕ್ತೃವು ಆಪ್ತನಾಗುವುದರಿಂದ. 'ಆಪ್ತಿ' ಶಬ್ದಕ್ಕೆ 'ವಿವಕ್ಷಿತ ತತ್ವಜ್ಞಾನ ಮುಂತಾದವು' ಎಂದು ಅರ್ಥೈಸಿದ್ದರಿಂದ[1]. ಪ್ರಕೃತದಲ್ಲಿ ವೇದವು ಅಪೌರುಷೇಯವಾದುದರಿಂದ ಪುರುಷದೋಷನಿಮಿತ್ತವಾದ ದೋಷಗಳಿಲ್ಲ, ಆದುದರಿಂದ[2], ಕಾರಣವಿಲ್ಲದೆ ಕಾರ್ಯವನ್ನು(ದೋಷಗಳನ್ನು) ಶಂಕಿಸಲು ಅಶಕ್ಯವಾದುದರಿಂದ ಅಪ್ರಾಮಾಣ್ಯವಿಲ್ಲವೆಂದು ನಿಶ್ಚಯಿಸಲಾಗುವುದು.

**ಯುಕ್ತಿಯಿಂದಲೂ ವೇದಪ್ರಾಮಾಣ್ಯ**

**ವೇದೋ ನಾಪ್ರಮಾಣಂ, ಅಪ್ರಾಮಾಣ್ಯಕಾರಣದೋಷಶೂನ್ಯತ್ವಾತ್ ಪ್ರತ್ಯಕ್ಷಾದಿವತ್ । ಶಬ್ದದೋಷಾಶ್ಚ ಪುರುಷದೋಷಾಧೀನಾಃ, ತದನ್ವಯ ವ್ಯತಿರೇಕಾನುವಿಧಾಯಿತ್ವಾತ್ । ಯದ್ ಯದನ್ವಯವ್ಯತಿರೇಕಾನುವಿಧಾಯಿ ತತ್ ತದಧೀನಮ್, ಯಥಾ ಪಟಃ ತಂತ್ವಧೀನಃ । ವೇದೋ ನ ಪುರುಷದೋಷನಿಬಂಧನದೋಷವಾನ್ ಪುರುಷಾಪ್ರಣೀತತ್ವಾತ್ । ಯದ್ ಯೇನಾಪ್ರಣೀತವಾಕ್ಯಂ ನ ತತ್ತದ್ದೋಷಪ್ರಯುಕ್ತದೋಷವತ್, ಯಥಾ ಯಜ್ಞದತ್ತಾಪ್ರಣೀತಂ ವಾಕ್ಯಂ ನ ಯಜ್ಞದತ್ತದೋಷಪ್ರಯುಕ್ತದೋಷವತ್ ಇತಿ । ವಿಪಕ್ಷೇ ತ್ವಕಾರಣಕಾರ್ಯೋತ್ಪತ್ತಿಪ್ರಸಙ್ಗಃ ।**

---

1. ವಸ್ತುತಃ ಆಪ್ತನಾದವ ಮೋಸಮಾಡದೇ ಇರಬಹುದು. ಆದರೆ ಅನವಧಾನ ಅಪಟುಕರಣತ್ವಗಳನ್ನು ಹೊಂದಿಲ್ಲ ಎಂದು ಹೇಳಲಾಗದು. ಆದುದರಿಂದ ಆಪ್ತ ಎನ್ನುವ ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ವಿವಕ್ಷಿಸದೆ 'ವಿವಕ್ಷಿತವಾದ ತತ್ವಜ್ಞಾನ ಮುಂತಾದವುಗಳನ್ನು ಹೊಂದಿದವ'ಎಂದು ಅರ್ಥೈಸಲಾಗಿದೆ ಎಂದು ಭಾವ.

2. ವಾಕ್ಯದ ದೋಷಕ್ಕೆ ಕಾರಣವಾದ, ಅಜ್ಞಾನ, ವಿಪರೀತಜ್ಞಾನ, ಅನವಧಾನ ಇತ್ಯಾದಿ ದೋಷಗಳನ್ನು ಹೊಂದಿದ ವ್ಯಕ್ತಿಯ ವಚನವಾಗದಿರುವುದರಿಂದ.

ವೇದವು ಅಪ್ರಮಾಣವಲ್ಲ, ಅಪ್ರಾಮಾಣ್ಯಕ್ಕೆ ಕಾರಣವಾದ ದೋಷಗಳು ಇಲ್ಲದಿರುವುದರಿಂದ, ಪ್ರತ್ಯಕ್ಷಾದಿಗಳಂತೆ. ಶಬ್ದದಲ್ಲಿನ (ವಾಕ್ಯಗಳಲ್ಲಿನ) ದೋಷಗಳು (ಉಚ್ಚರಿಸುವ) ಪುರುಷನ ದೋಷದ ಅಧೀನ[1]. ಅದರ (ವಕ್ತೃದೋಷದ) ಅನ್ವಯ-ವ್ಯತಿರೇಕಗಳನ್ನು ಅನುಸರಿಸಿರುವದರಿಂದ[2]. ಯಾವುದು ಇದ್ದಲ್ಲಿ ಅದು ಇರುವುದೋ, ಯಾವುದು ಇಲ್ಲದಿದ್ದಲ್ಲಿ ಅದು ಇರುವುದಿಲ್ಲವೋ, ಅಂತಹ ವಸ್ತುವು ಅದರ ಅಧೀನ, ಬಟ್ಟೆಯು ನೂಲಿನ ಅಧೀನವಾಗಿರುವಂತೆ[3]. ವೇದವು ವಕ್ತೃಪುರುಷದೋಷ ಪ್ರಯುಕ್ತ ದೋಷವನ್ನು ಹೊಂದಿಲ್ಲ, ಪುರುಷನಿಂದ ನಿರ್ಮಿತವಾಗದ್ದರಿಂದ. ಯಾವ ವಾಕ್ಯವು ಯಾರಿಂದ ಪ್ರಣೀತವಾಗಿಲ್ಲವೋ, ಆ ವಾಕ್ಯವೂ ಆ ವ್ಯಕ್ತಿಯ (ವಾಕ್ಯದ ನಿರ್ಮಾತೃ ಆಗದವನ) ದೋಷಪ್ರಯುಕ್ತ ದೋಷವನ್ನು ಹೊಂದಿರದಂತೆ. ಉದಾಹರಣೆಗೆ ಯಜ್ಞದತ್ತನಿಂದ ನಿರ್ಮಿತವಾಗದ ವಾಕ್ಯವು ಯಜ್ಞದತ್ತನ ದೋಷನಿಮಿತ್ತವಾದ ದೋಷವನ್ನು ಹೊಂದಿರದಂತೆ. ಇದಕ್ಕೆ ವಿರುದ್ಧವಾಗಿ ಒಪ್ಪುವುದಾದಲ್ಲಿ, ಕಾರಣವಿಲ್ಲದೇ ಕಾರ್ಯದ ಉತ್ಪತ್ತಿಯಾಗುತ್ತದೆ ಎಂದು ಒಪ್ಪಬೇಕಾದೀತು[4].

**ಬೌದ್ಧರ ಆಶಂಕೆಗಳಿಗೆ ಉತ್ತರ**

**ತಥಾಚಾನೃತತ್ವಾದಯಃ ಪ್ರಾಗ್ ಅಪ್ರಾಮಾಣ್ಯಾಭಾವಾನಿಶ್ಚಯಾತ್ ಸಂದಿಗ್ಧಾಸಿದ್ಧಾಃ । ನಿಶ್ಚಿತೇ ತು ಅಪ್ರಮಾಣ್ಯಾಭಾವೇ, ನಿಶ್ಚಿತಾಸಿದ್ಧಾ ಏವ**

1. ಉಚ್ಚರಿಸುವ ವ್ಯಕ್ತಿಯು ಅನಾಪ್ತನಾಗಿದ್ದಲ್ಲಿ, ಆತನಿಗೆ ಅವಧಾನವಿ- ಲ್ಲದೇಹೋದಲ್ಲಿ, ಅಜ್ಞಾನಿಯಾಗಿದ್ದಲ್ಲಿ, ಅತನ ವಾಕ್ಯವು ಅಪ್ರಮಾಣವಾಗಿರುತ್ತದೆ ಎಂಬ ಭಾವ.

2. ಅನ್ವಯ-ವಕ್ತೃವಿನಲ್ಲಿ ದೋಷವು ಇದ್ದಲ್ಲಿ, ವಾಕ್ಯದಲ್ಲಿ ಅಪ್ರಾಮಾಣ್ಯವು ಇರುವುದು. ವ್ಯತಿರೇಕ- ವಕ್ತೃವಿನಲ್ಲಿ ದೋಷವು ಇಲ್ಲದಿದ್ದಲ್ಲಿ ವಾಕ್ಯದಲ್ಲಿ ಅಪ್ರಾಮಾಣ್ಯವು ಇಲ್ಲ ಎಂದು ಸಿದ್ಧವಾಗಿದೆ ಎಂದು ಭಾವ.

3. ಬಟ್ಟೆಯು ಇರುವಲ್ಲಿ ನೂಲು ಇದೆ, ನೂಲು ಇಲ್ಲದೆ ಬಟ್ಟೆಯು ಇಲ್ಲ. ಹಾಗೆ ದುಷ್ಟವಕ್ತೃವಿನ ವಚನದಲ್ಲಿ ದೋಷವಿದೆ, ಆಪ್ತನ ವಚನದಲ್ಲಿ ದೋಷವಿಲ್ಲ. ಶುದ್ಧವಚನವು ಆಪ್ತನಿಂದಲೇ ಎಂದು ಭಾವ.

4. ವಾಕ್ಯದಲ್ಲಿನ ದೋಷಕ್ಕೆ ವಕ್ತೃವಿನ ದೋಷವು ಕಾರಣ ಎಂದು ಸಾಧಿಸಲಾಗಿದೆ, ಈ ಕಾರಣವು ಇಲ್ಲದೇ ವಾಕ್ಯದಲ್ಲಿ ದೋಷವು ಸಂಭಾವಿತ ಎಂದು ವಾದಿಸಿದಲ್ಲಿ, ಕಾರಣವಿಲ್ಲದೇ ಕಾರ್ಯದ ಉತ್ಪತ್ತಿಯಾಗಲಿ ಎನ್ನುವ ಪ್ರಸಂಗವು ಪ್ರಾಪ್ತವಾದೀತು ಎಂದು ಭಾವ.

**ಭವನ್ತಿ । ಏವಮಪ್ರಾಮಾಣ್ಯಾಭಾವೇ ನಿಶ್ಚಿತೇಽಪಿ ಪ್ರಾಮಾಣ್ಯನಿಶ್ಚಯಃ ಕುತಃ ? ಇತಿ ಚೇತ್ 'ಅಪೌರುಷೇಯತ್ವೇನ, ತನ್ನಿಬಂಧನಾಬೋಧಕತ್ವ-ವಿಪರೀತಬೋಧಕತ್ವ ಶೂನ್ಯತ್ವಾತ್' ಇತಿ ಬ್ರೂಮಃ ।**

ಹಾಗಾದುದರಿಂದ (ಈವರೆಗಿನ ವಿಚಾರದಿಂದ ,ವೇದಗಳಲ್ಲಿ) ಅಪ್ರಾಮಾಣ್ಯದ ಅಭಾವವು ಅನಿಶ್ಚಿತವಾದುದರಿಂದ (ವೇದಗಳು ಪ್ರಾಮಾಣಿಕಗಳಾಗಿರಬಹುದು ಎಂದು ಸಂದೇಹವು ಇರುವುದರಿಂದ) ಅನೃತತ್ವಾದಿ ಹೇತುಗಳು ಸಂದಿಗ್ಧಾಸಿದ್ಧಗಳಾದವು[1]. ಆದರೆ ಅಪ್ರಾಮಾಣ್ಯದ ಅಭಾವವು (ವೇದದಲ್ಲಿ) ನಿಶ್ಚಿತವಾದಲ್ಲಿ (ಅನೃತತ್ವಾದಿ ಹೇತುಗಳು) ಅಸಿದ್ಧವೇ ಆಗುವವು. ( ಸರಿ ಆದರೆ) ಈ ಹಿಂದಿನ ವಾದದಂತೆ (ವೇದದಲ್ಲಿ) ಅಪ್ರಾಮಾಣ್ಯದ ಅಭಾವ ನಿಶ್ಚಯವಾದರೂ, ಪ್ರಾಮಾಣ್ಯದ ನಿಶ್ಚಯ ಹೇಗೆ? ಎಂದರೆ '(ವೇದವು) ಅಪೌರುಷೇಯುವಾದುದರಿಂದ, ಪುರುಷ ನಿಬಂಧನದಿಂದ ಉಂಟಾಗಬಹುದಾದ ಅಬೋಧಕತ್ವವಾಗಲೀ, ವಿಪರೀತ-ಬೋಧಕತ್ವವಾಗಲೀ ಇಲ್ಲವಾದುದರಿಂದ' ಎಂದು ಹೇಳುತ್ತೇವೆ[2].

### ವೇದಪ್ರಾಮಾಣ್ಯಸಾಧಕಾನುಮಾನವು ಸತ್‌ಪ್ರತಿಪಕ್ಷದಿಂದ ದೂಷಿತವಲ್ಲ

**'ವೇದೋಽಪ್ರಮಾಣಂ, ಆಪ್ತಾಪ್ರಣೀತವಾಕ್ಯತ್ವಾತ್, ಉನ್ಮತ್ತವಾಕ್ಯವತ್' ಇತಿ ಚೇನ್ನ । ವಾಕ್ಯತ್ವಾವಚ್ಛಿನ್ನೇ ಸಾಧ್ಯೇಽನಾಪ್ತಪ್ರಣೀತತ್ವಸ್ಯ, ಕೇವಲೇ ವಾಪ್ರಾಮಾಣ್ಯಕಾರಣದೋಷವತ್ವಸ್ಯೋಪಾಧಿತ್ವಾತ್ । ವೇದೇ ಚೋಪಾಧಿ-ದ್ವಯಾಭಾವಸ್ಯೋಕ್ತತ್ವಾತ್ ।**

ವೇದವು ಅಪ್ರಮಾಣ, ಆಪ್ತನಿಂದ ರಚಿತವಲ್ಲದ ವಾಕ್ಯವಾದುದರಿಂದ.

---

1. 'ವೇದವು ಅಪ್ರಮಾಣ, ಸುಳ್ಳನ್ನು ತಿಳಿಸಿದ್ದರಿಂದ ' ಇದೇ ಮೊದಲಾದ ಅನುಮಾನಗಳನ್ನು ಈ ಹಿಂದೆ ಚರ್ಚಿಸಲಾಗಿ, ಈ ಅನುಮಾನಗಳು ವೇದವನ್ನು ಅಪ್ರಮಾಣ ಎಂದು ನಿಃಸಂದಿಗ್ಧವಾಗಿ ಪ್ರತಿಪಾದಿಸಲು ಅಸಮರ್ಥವಾಗಿದೆ ಎಂದು ತೀರ್ಮಾನಿಸಿ, ಆ ಹೇತುಗಳೆಲ್ಲವೂ 'ಸಂದಿಗ್ಧಾಸಿದ್ಧ' ಎಂದು ಸಾಧಿಸಲಾಗಿದೆ ಎಂದು ಭಾವ.
2. ವಾಕ್ಯದಲ್ಲಿ ದೋಷಕ್ಕೆ ಕಾರಣ ವಕ್ತೃವಿನ ದೋಷ , ಪ್ರಕೃತ ವೇದಕ್ಕೆ ವಕ್ತೃವೇ ಇಲ್ಲವಾದುದರಿಂದ ವಕ್ತೃದೋಷ ನಿಮಿತ್ತವಾದ ದೋಷವಿಲ್ಲ ಎಂದು ಭಾವ.

ಉನ್ಮತ್ತನ ವಾಕ್ಯದಂತೆ[1]. ಎಂದು ಹೇಳಲು ಶಕ್ಯವಿಲ್ಲ. ವಾಕ್ಯತ್ವಾವಚ್ಛಿನ್ನದಲ್ಲಿ (ಅಪ್ರಾಮಾಣ್ಯವನ್ನು)ಸಾಧಿಸಿದಲ್ಲಿಅನಾಪ್ತಪ್ರಣೀತತ್ವವು, ಅಥವಾ ಕೇವಲ (ಅಪ್ರಾಮಾಣ್ಯವನ್ನು) ಸಾಧ್ಯವನ್ನಾಗಿಸಿದಲ್ಲಿ, ಅಪ್ರಾಮಾಣ್ಯಕಾರಣ-ದೋಷತ್ವವು ಉಪಾಧಿಯಾಗುವದರಿಂದ. ಎರಡೂ ಉಪಾಧಿಗಳ ಅಭಾವವನ್ನು ವೇದದಲ್ಲಿ ತಿಳಿಸಲಾಗಿರುವುದರಿಂದ[2].

---

1. 'ವೇದವು ಪ್ರಮಾಣ, ಅಪ್ರಾಮಾಣ್ಯಕ್ಕೆ ಕಾರಣವಾದ ದೋಷಗಳು ಇಲ್ಲದಿರುವುದರಿಂದ ಪ್ರತ್ಯಕ್ಷಾದಿಗಳಂತೆ' ಎನ್ನುವ ಅನುಮಾನಕ್ಕೆ ಸತ್‌ಪ್ರತಿಪಕ್ಷಾನುಮಾನವನ್ನು ತಿಳಿಸಿದರು 'ವೇದಃ ಅಪ್ರಮಾಣಂ.....' ಎಂದು. ಉನ್ಮತ್ತನ ವಾಕ್ಯವು ಪ್ರಮಾಣವಲ್ಲ ,ಆ ವಾಕ್ಯವು ಆಪ್ತನಿಂದ ರಚಿತವಾಗದಿರುವುದರಿಂದ, ಅದರಂತೆ ವೇದಗಳೂ. ವೇದವನ್ನು ಅಪೌರುಷೇಯ ಎಂದು ವಾದಿಗಳೂ ಒಪ್ಪಿರುವುದರಿಂದ ವೇದವು ಆಪ್ತನಿಂದ ಪ್ರಣೀತವಾಗಿಲ್ಲ ಎಂದು ಒಪ್ಪಿದಂತಾಗಿ ಹೇತುವು ವೇದದಲ್ಲಿದೆ, ತನ್ನಿಮಿತ್ತವಾಗಿ ಅಪ್ರಮಾಣವಾಗಲಿ . ಈ ಸತ್ಪ್ರತಿಪಕ್ಷಾನುಮಾನದಲ್ಲಿನ ಹೇತುವಿನಲ್ಲಿ ಎರಡು ಘಟಕಗಳಿವೆ ಆಪ್ತಾಪ್ರಣೀತತ್ವ ಮತ್ತು ವಾಕ್ಯತ್ವ ಎಂದು. ಅವುಗಳಲ್ಲಿ ಕೇವಲ 'ವಾಕ್ಯಾತ್' ಎಂದು ಹೇತುವನ್ನು ವಿವಕ್ಷಿಸಿದಲ್ಲಿ ಆಪ್ತವಾಕ್ಯದಲ್ಲಿ ಹೇತು ಇದೆ, ಆದರೆ ಅಲ್ಲಿ ಅಪ್ರಾಮಾಣ್ಯವಿಲ್ಲ, ಹೇತುವು ವ್ಯಭಿಚರಿತವಾಗುವುದು. ಹಾಗೆಯೆ ಕೇವಲ 'ಆಪ್ತಾಪ್ರಣೀತತ್ವಾತ್' ಎಂದು ಹೇತುವನ್ನು ವಿವಕ್ಷಿಸಿದಲ್ಲಿ ಗಗನದಲ್ಲಿ ಹೇತುವು ಇದೆ, ಆದರೆ 'ಭ್ರಮಾಜನಕತ್ವರೂಪ ಅಪ್ರಾಮಾಣ್ಯ' ಎಂಬ ಸಾಧ್ಯವು ಇಲ್ಲ, ತನ್ನಿಮಿತ್ತ ಹೇತುವು ವ್ಯಭಿಚರಿತವಾಗುವುದು. ಈ ಕಾರಣದಿಂದ ಹೇತುವಿನಲ್ಲಿ ಈ ಎರಡು ಘಟಕಗಳನ್ನು ಸಂಯೋಜಿಸಲಾಗಿದೆ ಎಂದು ಭಾವ.

2. 'ವೇದವು ಅಪ್ರಮಾಣ ಆಪ್ತನಿಂದ ರಚಿತವಲ್ಲದ ವಾಕ್ಯವಾದುದರಿಂದ ಉನ್ಮತ್ತನ ವಚನದಂತೆ' ಎಂದು ಪ್ರತಿವಾದಿಯು ಅನುಮಾನವನ್ನು ಅಭಿಮತಿಸಿರುವನು. ಈ ಅನುಮಾನವು ಉಪಾಧಿ ದೋಷದಿಂದ ಯುಕ್ತವಾಗಿದೆ- ವಾಕ್ಯಗಳಲ್ಲಿನ ಅಪ್ರಾಮಾಣ್ಯವನ್ನು ಮಾತ್ರ ಸಾಧ್ಯ ಎಂದು ಅಭಿಮತಿಸಿ ಆಪ್ತಾಪ್ರಣೀತತ್ವವು ಹೇತು ಎಂದು ಉಕ್ತವಾದಲ್ಲಿ, ಅನಾಪ್ತಪ್ರಣೀತತ್ವವು ಉಪಾಧಿ ದೃಷ್ಟಾಂತವಾದ ಉನ್ಮತ್ತವಾಕ್ಯದಲ್ಲಿ ಉಪಾಧಿಯಾದ ಅನಾಪ್ತಪ್ರಣೀತತ್ವವು ಇದೆ, ಅಲ್ಲಿ ಅಪ್ರಾಮಾಣ್ಯವು ಇದೆ, ಆದುದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ಪ್ರಾಪ್ತವಾಯಿತು. ಅಪರಿಚಿತನ ವಾಕ್ಯದಲ್ಲಿ ಉಪಾಧಿಯಾದ ಅನಾಪ್ತಪ್ರಣೀತತ್ವವಿಲ್ಲ . ಗ್ರಾಮಾಂತರದಲ್ಲಿ ಮಾರ್ಗಾದಿಗಳನ್ನು ತಿಳಿಯುವ ಸಂದರ್ಭದಲ್ಲಿ ಎದುರಿನಲ್ಲಿ ಕಂಡ ವ್ಯಕ್ತಿಯನ್ನು ಪ್ರಶ್ನಿಸುವರು. ಆ ವ್ಯಕ್ತಿಯು ಆಪ್ತನೋ ಅನಾಪ್ತನೋ ಎನ್ನುವುದು ಆಗ ನಿಶ್ಚಿತವಲ್ಲ, ಆತನು ಉದಾಸೀನ. ಹಾಗಾಗಿ ಅವನ ವಚನದಲ್ಲಿ ಆಪ್ತಾಪ್ರಣೀತತ್ವರೂಪ ಹೇತುವು ಇದೆ. ಆದರೆ ಆ ವಚನವು ಪ್ರಮಿತವೇ ಆಗಿದೆ. ಆದುದರಿಂದ ಉಪಾಧಿಗೆ ಸಾಧನಾವ್ಯಾಪಕತ್ವವು ಪ್ರಾಪ್ತವಾಯಿತು. ಇನ್ನು

ಪುಟ 49ರಲ್ಲಿ........

**ವೇದದ ಪ್ರಾಮಾಣ್ಯಸಾಧನೆಗೆ ಬೇರೆ ಮಾರ್ಗಗಳು ಸಲ್ಲದು**

'ವಾಕ್ಯಪ್ರಾಮಾಣ್ಯಸ್ಯ ವಕ್ತುರಾಪ್ತಿಮೂಲತ್ವೇನ ತದಭಾವೇಽಕಾರಣ-ಕಾರ್ಯೋತ್ಪತ್ತಿಃ ಸ್ಯಾದ್' ಇತಿ ತು ಪ್ರಾಮಾಣ್ಯಸ್ಯ ಸ್ವತಸ್ತ್ವಪ್ರತಿಪಾದನೇನ ನಿರಾಕರಿಷ್ಯತೇ । ಆಪ್ತೋಕ್ತತ್ವೇನಾಪ್ರಾಮಾಣ್ಯಾಭಾವಪ್ರಾಮಾಣ್ಯಯೋಃ ನಿಶ್ಚಯಃ ಕಿಂ ನ ಕ್ರಿಯತೇ ? ಇತಿ ಚೇತ್; ಯಥಾ ನ ಶಕ್ಯತೇ ತಥಾ ವಕ್ಷ್ಯತೇ । ಮಹಾಜನ ಪರಿಗೃಹೀತತ್ವಾತ್ ಪ್ರಾಮಾಣ್ಯಾದಿನಿಶ್ಚಯೋಽಸ್ತು, ಕಿಮನೇನಾಪೌರುಷೇಯತ್ವಕ್ಲೇಶೇನ ? ಇತಿ ಚೇತ್, ಕಿಂ ಮಹಚ್ಛಬ್ದೇನ ಸಂಖ್ಯಾಪ್ರಕರ್ಷೋಽಭಿಧೀಯತೇ ಪೂಜ್ಯತಾ ವಾ? ನಾದ್ಯಃ, ಜನಾನಾಮ್ ಇಯತ್ತಾಪರಿಜ್ಞಾನಸ್ಯಾಶಕ್ಯತ್ವೇನ ಸಂದಿಗ್ಧಾಸಿದ್ಧತ್ವಾತ್ । ದೇಶಾದಿವಿಶೇಷೇ ಬೌದ್ಧಾದೀನಾಂ ಮಹಾಜನಪರಿಗೃಹೀತತ್ವೇನಾನೈಕಾಂತ್ಯಾಚ್ಚ । ನದ್ವಿತೀಯಃ, ವೇದಪರಿಗ್ರಹವತಾಂ ಪೂಜ್ಯತ್ವಸ್ಯ ಪರೈರನಙ್ಗೀಕೃತತ್ವಾತ್ । ಸ್ವಶಾಸ್ತ್ರ-ಪರಿಗೃಹೀತ ೃಣಾಂ ತಸ್ಯಾಙ್ಗೀಕೃತತ್ವಾಚ್ಚೇತಿ ।

ವಾಕ್ಯದ ಪ್ರಾಮಾಣ್ಯಕ್ಕೆ ವಕ್ತೃವಿನ ಆಪ್ತಿಯೇ ಕಾರಣ. ಅದು (ಆಪ್ತಿಮೂಲತ್ವವು) ಇಲ್ಲದೆ (ವಾಕ್ಯಕ್ಕೆ ಪ್ರಾಮಾಣ್ಯವನ್ನು ಒಪ್ಪಿದಲ್ಲಿ) 'ಕಾರಣವಿಲ್ಲದೇ ಕಾರ್ಯದ ಉತ್ಪತ್ತಿಯು ಆಗಲಿ ' (ಎಂದು ಪ್ರಶ್ನಿಸಲು ಅವಕಾಶವಿಲ್ಲವೇ? ಎನ್ನುವ ಸಂದೇಹವು ಸರಿಯಾಗದು) ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಪ್ರತಿಪಾದಿಸುವಸಂದರ್ಭದಲ್ಲಿ (ಈ ಸಂದೇಹವನ್ನು)

---

...... ಪುಟ 48 ರಿಂದ

ಕೇವಲ ಅಪ್ರಾಮಾಣ್ಯವನ್ನು ಸಾಧ್ಯ ಎಂದು ಅಭಿಮತಿಸಿದಲ್ಲಿ, ಅಪ್ರಾಮಾಣ್ಯಕಾರಣದೋಷವು ಉಪಾಧಿ. ಉನ್ಮತ್ತನ ವಾಕ್ಯದಲ್ಲಿ ಉಪಾಧಿಯಾದ ಅಪ್ರಾಮಾಣ್ಯಕಾರಣದೋಷವಿದೆ (ಅಜ್ಞಾನಾದಿಗಳು), ಅಪ್ರಾಮಾಣ್ಯವು ಇದೆ, ತನ್ನಿಮಿತ್ತ ಉಪಾಧಿಗೆ ಸಾಧ್ಯವ್ಯಾಪಕತ್ವವು ಪ್ರಾಪ್ತವಾಯಿತು. ಹಾಗೆ ಅಪರಿಚಿತನ ವಾಕ್ಯದಲ್ಲಿ ಉಪಾಧಿಯಾದ ಅಪ್ರಾಮಾಣ್ಯ-ಕಾರಣದೋಷವಿಲ್ಲ ಆದರೆ ಅನಾಪ್ತಪ್ರಣೀತತ್ವರೂಪ ಹೇತುವು ಇದೆ, ತನ್ನಿಮಿತ್ತ ಉಪಾಧಿಗೆ ಸಾಧನಾವ್ಯಾಪಕತ್ವವು ಪ್ರಾಪ್ತವಾಯಿತು. ಪಕ್ಷವಾದ ವೇದದಲ್ಲಿ ಅನಾಪ್ತಪ್ರಣೀತತ್ವವು ಇಲ್ಲ (ಅದು ಯಾರಿಂದಲೂ ಪ್ರಣೀತವಾಗದಿರುವದರಿಂದ). ಮತ್ತು ಅಪ್ರಾಮಾಣ್ಯಕಾರಣ-ದೋಷವೂ ಇಲ್ಲ, ವಾಕ್ಯದಲ್ಲಿ ದೋಷವು ಪ್ರಾಪ್ತವಾಗಲು ವಕ್ತೃದೋಷವೇ ಕಾರಣ, ಪ್ರಕೃತ ವೇದವನ್ನು ಅಪೌರುಷೇಯ ಎಂದು ಈ ಹಿಂದೆ ತಿಳಿಸಲಾಗಿದೆ ಎಂದು ಭಾವ.

ನಿರಾಕರಿಸಲಾಗುವುದು.ಆಪ್ತೋಕ್ತತ್ವವು ಇರುವದರಿಂದಲೇ (ವೇದದಲ್ಲಿ) ಅಪ್ರಾಮಾಣ್ಯದ ಅಭಾವ ಮತ್ತು ಪ್ರಾಮಾಣ್ಯಗಳ ನಿಶ್ಚಯವನ್ನು ಮಾಡಬಹುದಲ್ಲವೆ ? ಹೇಗೆ ಶಕ್ಯವಿಲ್ಲ ಎನ್ನುವದನ್ನು ಮುಂದೆ ತಿಳಿಸಲಾಗುವುದು[1]. ಮಹಾಜನರು ಪರಿಗ್ರಹಿಸಿರುವುದರಿಂದ ಪ್ರಾಮಾಣ್ಯ ಮುಂತಾದವುಗಳ ನಿಶ್ಚಯವಾಗಲಿ, (ವೇದಗಳು) ಅಪೌರುಷೇಯ ಎಂಬ (ಕಲ್ಪನೆಯ) ಕ್ಲೇಶ ಏತಕ್ಕಾಗಿ ? (ಉತ್ತರಿಸುವರು) 'ಮಹತ್'ಶಬ್ದದಿಂದ ಬಹುಸಂಖ್ಯಾಕರು ಎಂದು ಹೇಳಲಾಗಿದೆಯೋ ಅಥವಾ ಪೂಜ್ಯರು ಎಂದು (ಅರ್ಥೈಸಲಾಗುವುದೋ) ? ಮೊದಲ ಪಕ್ಷ ಸರಿಯಾಗಲಾರದು, ಜನಗಳ ಸಂಖ್ಯೆಯ ಅರಿವು ಅಶಕ್ಯವಾದುದರಿಂದ ಸಂದಿಗ್ಧಾಸಿದ್ಧಿದೋಷ ಬರುವುದು.[2] ಮತ್ತೂ ಸಹ ದೇಶವಿಶೇಷಗಳಲ್ಲಿ (ಶ್ರೀಲಂಕಾ, ಬರ್ಮಾ ಇತ್ಯಾದಿಸ್ಥಳಗಳಲ್ಲಿ) ಬುದ್ಧಾದಿಗಳ ಆಗಮಗಳನ್ನು ಮಹಾಜನರು (ಬಹುಸಂಖ್ಯಾಕರು) ಪರಿಗ್ರಹಿಸಿರುವುದರಿಂದ (ವೈದಿಕರು ಬೌದ್ಧಾಗಮಗಳನ್ನು ಪ್ರಮಾಣ ಎಂದು ಒಪ್ಪದಿರುವುದರಿಂದ) ಹೇತುವು ವ್ಯಭಿಚರಿತವಾಗುವುದರಿಂದಲೂ ಸಹ. ಎರಡನೆಯ ಪಕ್ಷವು ಸರಿಯಲ್ಲ (ಮಹತ್ ಶಬ್ದಕ್ಕೆ ಪೂಜ್ಯರು ಎಂದು ಅರ್ಥೈಸುವ ಪಕ್ಷವೂ ಸರಿಯಾಗದು) ವೇದವನ್ನು ಪ್ರಮಾಣ ಎಂದು ಸ್ವೀಕರಿಸುವವರನ್ನು 'ಪೂಜ್ಯರು' ಎಂದು ಪರರು (ಬೌದ್ಧಾದಿಗಳು) ಅಂಗೀಕರಿಸುವುದಿಲ್ಲವಾದುದರಿಂದ. ತನ್ನ ಶಾಸ್ತ್ರವನ್ನು ಪರಿಗ್ರಹಿಸಿದವರಿಗೆ ಪೂಜ್ಯತ್ವವನ್ನು ಆತನು ಒಪ್ಪಿರುವುದರಿಂದ[3].

---

1. 'ನ ಚ ಪೌರುಷೇಯವಾಕ್ಯೇನ...' ಎಂದು ಮುಂದೆ ತಿಳಿಸಲಾಗುವುದು ಎಂದು ಭಾವ.

2. ಮಹಾಜನ ಪರಿಗೃಹೀತವಾದುದರಿಂದ ವೇದವು ಪ್ರಮಾಣ'ಎಂಬ ಅನುಮಾನ ಸಿದ್ಧವಾಗುವುದು. ಮಹಾಜನ ಪರಿಗೃಹೀತ ಎಂದರೆ ಬಹುಸಂಖ್ಯಾಕರಿಂದ ಪರಿಗೃಹೀತವಾಗಿದೆ ಎಂದು ಅರ್ಥವನ್ನು ವಿವಕ್ಷಿಸಲಾಗಿದೆ. ಎಷ್ಟು ಮಂದಿ ಪರಿಗ್ರಹಿಸಿರುವರು ಎಂದು ಸಂಖ್ಯಾಜ್ಞಾನವು ಸರಿಯಾಗಿ ಇಲ್ಲವಾದುದರಿಂದ ಹೇತುವು ಪಕ್ಷವಾದ ವೇದದಲ್ಲಿ ಸಂದಿಗ್ಧವಾಯಿತು. ಆದುದರಿಂದ 'ಸಂದಿಗ್ಧಾಸಿದ್ಧಿ' ಎನ್ನುವ ದೋಷವು ಪ್ರಾಪ್ತವಾಯಿತು, ಎಂದು ಭಾವ.

3. 'ವೇದವು ಪ್ರಮಾಣ ಪೂಜ್ಯರು ಪರಿಗ್ರಹಿಸಿರುವುದರಿಂದ' ಎಂಬ ಅನುಮಾನವನ್ನು ಹೇಳಿದಲ್ಲಿ, ವೈದಿಕರನ್ನು ಬೌದ್ಧರು ಪೂಜ್ಯರು ಎಂದು ಒಪ್ಪಿಲ್ಲವಾದುದರಿಂದ ಹೇತು ಅವರರೀತ್ಯಾ ಅಸಿದ್ಧ. ಇನ್ನು ಬೌದ್ಧಾಗಮವನ್ನು ಅವರು 'ಪೂಜ್ಯರಿಂದ ಗೃಹೀತವಾಗಿದೆ' ಎಂದು ಒಪ್ಪಿರುವುದರಿಂದ ಹೇತು ಅವರ ರೀತಿಯಲ್ಲಿ ವ್ಯಭಿಚರಿತವಾಯಿತು ಎಂದು ಭಾವ.

**ಇತಿಹಾಸಪುರಾಣಗಳೂ ಪ್ರಮಾಣ**

**'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಇತಿ ತದ್ಗೃಹೀತತ್ವಾಚ್ಚ,**

'ಇತಿಹಾಸ ಪುರಾಣಗಳು ಐದನೆಯ ವೇದ, ವೇದಗಳಿಗೆ ಸಮ' ಎಂದು ಅದರಿಂದ (ಪ್ರಮಾಣವೆಂದು ನಿಶ್ಚಿತಾವಾದ ವೇದಗಳಿಂದ) ಪರಿಗ್ರಹಿಸಲಾಗಿರುವದರಿಂದಲೂ ಸಹ (ಪ್ರಮಾಣ).

**ಅಸ್ತ್ವೇವಂ ವೇದಸ್ಯಾಪೌರುಷೇಯತ್ವೇನಾಪ್ರಾಮಾಣ್ಯಕಾರಣದೋಷಾಭಾವಾದಪ್ರಾಮಾಣ್ಯಾಭಾವನಿಶ್ಚಯಃ, ಪ್ರಾಮಾಣ್ಯನಿಶ್ಚಯಶ್ಚ । ತತ ಏವ ಫಲವಿಸಂವಾದಾದೇರವಶ್ಯಂ ವೈಗುಣ್ಯಾದಿನಿಮಿತ್ತತ್ವಸ್ಯ ಕಲ್ಪನೀಯತ್ವೇನ ಪರೋಕ್ತಹೇತೂನಾಮಸಿದ್ಧತ್ವನಿಶ್ಚಯೋಽಪಿ । ಪುರಾಣವಾಕ್ಯಸ್ಯ ತು ಕಥಮ್? ನ ಹಿ ತದಪ್ಯಪೌರುಷೇಯತಯಾಽಙ್ಗೀಕ್ರಿಯತೇ । ತಥಾತ್ವೇ ಪೂರ್ವವಾಕ್ಯೇ 'ವೇದಸ್ಯ' ಇತಿ ನೋಚ್ಯೇತ? ಇತ್ಯತ ಆಹ 'ಇತಿಹಾಸ..'ಇತಿ ॥**

ವೇದವು ಅಪೌರುಷೇಯವಾದುದರಿಂದ, ಅಪ್ರಾಮಾಣ್ಯಕಾರಣ-ದೋಷಗಳಿಲ್ಲ. ಆದುದರಿಂದ, ಅಪ್ರಾಮಾಣ್ಯಾಭಾವದ ನಿಶ್ಚಯ ಮತ್ತು ಪ್ರಾಮಾಣ್ಯದ ನಿಶ್ಚಯವೂ ಸಿದ್ಧವಾಗಲಿ. ಆದುದರಿಂದಲೇ (ವೇದಗಳಲ್ಲಿ ಪ್ರಾಮಾಣ್ಯ ನಿಶ್ಚಯವಾದುದರಿಂದಲೇ ) ಫಲವಿಸಂವಾದಾದಿಗಳಿಗೆ (ಕರ್ತೃ-ಕರ್ಮಾದಿಗಳಲ್ಲಿನ) ವೈಗುಣ್ಯಾದಿಗಳನ್ನು ನಿಮಿತ್ತವೆಂದು ಊಹಿಸುವುದರಿಂದ, ಪ್ರತಿವಾದಿಗಳು ಹೇಳಿದ ಹೇತುಗಳಿಗೆ ( ಅನೃತತ್ವ, ವ್ಯಾಹತತ್ವ ಮೊದಲಾದವುಗಳಿಗೆ) ಅಸಿದ್ಧಿಯು ನಿಶ್ಚಯವಾದರೂ ಸಹ, ಪುರಾಣವಾಕ್ಯಗಳಿಗೆ ಹೇಗೆ (ಪ್ರಾಮಾಣ್ಯ ನಿಶ್ಚಯವಾಗುವುದು)? ಅವುಗಳನ್ನೂ ಅಪೌರುಷೇಯ ಎಂದು ಒಪ್ಪಿರುವುದಿಲ್ಲ.[1] ಪುರಾಣಗಳನ್ನೂ ಅಪೌರುಷೇಯ ಎಂದು ಒಪ್ಪಿದ್ದರೆ (ಅಪೌರುಷೇಯತ್ವಾದ್ವೇದಸ್ಯ' ಎಂಬ ಹಿಂದಿನ ವಾಕ್ಯದಲ್ಲಿ) 'ವೇದಸ್ಯ' ಎಂದು

---

1. ವೇದಗಳನ್ನು ಅಪೌರುಷೇಯ ಎಂದು ಒಪ್ಪಿದ್ದರಿಂದ, ಅನೃತತ್ವಾದಿ ಅಪ್ರಾಮಾಣ್ಯಕಾರಣ ದೋಷಗಳು ಅವುಗಳಲ್ಲಿ ಇಲ್ಲ ಎಂದು ಸಾಧಿಸಿದರೂ ಪುರಾಣಗಳು ಪುರುಷಪ್ರಣೀತ ಎಂದು ಒಪ್ಪಿದ್ದರಿಂದ ಅನೃತತ್ವಾದಿದೋಷಗಳಿಲ್ಲ ಎಂದು ಸಾಧಿಸಲು ಶಕ್ಯವಿಲ್ಲ ಎಂದು ಭಾವ.

ವಿಶೇಷವಾಗಿ ನಿರ್ದೇಶಿಸಬಾರದಿತ್ತು[1]. ಈ ರೀತಿಯಾದ ಸಂಶಯ ಬಂದುದರಿಂದ ಉತ್ತರಿಸುತ್ತಾರೆ- 'ಇತಿಹಾಸಪುರಾಣ....' ಎಂದು.

**'ಇತಿಹಾಸಪುರಾಣಃ' ಶಬ್ದವು ಸಾಧು**

'ಇತಿಹಾಸಶ್ಚ ಪುರಾಣಂ ಚ' ಇತಿ ದ್ವಂದ್ವೈಕವದ್ಭಾವಃ । ನಪುಂಸಕತ್ವಂ ತು ನಾಽಶ್ರಿತಮ್ । ಪುರಾಣಶಬ್ದಸ್ಯ ವಿಶೇಷ್ಯ ಲಿಂಗತ್ವಾತ್ ಗ್ರನ್ಥವಿಶೇಷಣತ್ವೇನ ಪುಲ್ಲಿಂಗತ್ವಮೇವಾಽಶ್ರಿತಮ್ ।

**ಇತಿಹಾಸಪುರಾಣೋ ವೇದೋ, ವೇದಾನಾಂ-** ಋಗಾದೀನಾಂ, **ಪಂಚಮಃ-** ಪಂಚತ್ವಸಂಖ್ಯಾಪೂರಣೋ ವೇದ ಇತಿ । **ತೇನ-** ಅಪ್ರಾಮಾಣ್ಯ-ಶಙ್ಕಾಶೂನ್ಯೇನ, ಪ್ರಮಾಣತಯಾ ನಿಶ್ಚಿತೇನ ವೇದೇನ ವೇದಸಮಾನತಯಾ **ಗೃಹೀತತ್ವಾತ್** ಪುರಾಣವಚನಸ್ಯಾಪ್ಯಪ್ರಾಮಾಣ್ಯಾಭಾವಾದಿನಿಶ್ಚಯಾತ್ 'ಯುಕ್ತಂ ತದುದಾಹರಣಮ್' ಇತಿ । ಅತ್ರ ಯದ್ಯಪಿ ಸಾಮಾನ್ಯೇನೋಕ್ತಂ ತಥಾಽಪಿ ಪ್ರಮಾಣಾನ್ತರಬಲಾತ್ 'ವೇದಾನುಕೂಲಯೋರೇವೇತಿಹಾಸ-ಪುರಾಣಯೋಃ ಗ್ರಹಣಮ್' ಇತಿ ಜ್ಞಾತವ್ಯಮ್ । ನನು, ಆಪ್ತೋಕ್ತತ್ವೇನೈವ ಪುರಾಣಸ್ಯ ಅಪ್ರಾಮಾಣ್ಯಾಭಾವನಿಶ್ಚಯಃ ಕಿಂ ನ ಕ್ರಿಯತೇ? ಇತಿ ಚೇನ್ನ । ಆಪ್ತಿನಿಶ್ಚಯಸ್ಯಾಪ್ಯನ್ತತಃ ವೇದಾನುಸರಣಮನ್ತರೇಣಾಶಕ್ಯತ್ವಾತ್ । ಏತೇನ ವೇದಾದಿಭಿಃ ವಿಷ್ಣೋರ್ನಿರ್ದೋಷತ್ವಾದಿಸಿದ್ಧಿರಪಿ ಸಮಾಹಿತಾ ।

'ಇತಿಹಾಸಶ್ಚ ಪುರಾಣಂ ಚ' ಎಂದು ದ್ವಂದ್ವಸಮಾಸವನ್ನು ಆಶ್ರಯಿಸಿದ್ದರಿಂದ ಏಕವದ್ಭಾವವನ್ನು ವಿವಕ್ಷಿಸಲಾಗಿದೆ. ನಪುಂಸಕಲಿಂಗವನ್ನಾದರೋ ಆಶ್ರಯಿಸಿಲ್ಲ. (ಪ್ರಕೃತ) ಪುರಾಣ ಶಬ್ದಕ್ಕೆ ವಿಶೇಷ್ಯದ ಲಿಂಗವನ್ನೇ ಹೇಳಬೇಕಾದುದರಿಂದ, ('ಪುರಾತನೋ ಗ್ರನ್ಥಃ- ಪುರಾಣಃ' ಎಂದು) ಗ್ರಂಥ

---

1. 'ವೇದೈಕಸಮಧಿಗಮ್ಯ' ಎಂಬುವುದನ್ನು ಸಾಧಿಸಲು ವೇದಪುರಾಣಗಳ ವಾಕ್ಯಗಳನ್ನು ಈ ಮುನ್ನ ಉದಾಹರಿಸಲಾಗಿತ್ತು. ಆಗ 'ಈ ವಾಕ್ಯಗಳೇ ಅಪ್ರಮಾಣ' ಎಂದು ಸಂದೇಹಿಸಿದಾಗ 'ಅಪೌರುಷೇಯತ್ವಾತ್ ವೇದಸ್ಯ' ಎಂದು ವೇದದ ಪ್ರಾಮಾಣ್ಯಕ್ಕೆ ಉಪಯುಕ್ತವಾದ ಯುಕ್ತಿಯನ್ನು ಮಾತ್ರ ಉಪದೇಶಿಸಲಾಗಿದೆ ಎಂಬುವುದು 'ವೇದಸ್ಯ' ಎಂದು ವೇದಶಬ್ದವನ್ನು ವಿಶೇಷವಾಗಿ ಪರಿಗ್ರಹಿಸಿದ್ದರಿಂದ ತಿಳಿಯುವುದು. ಹಾಗಾಗಿ ಪೌರುಷೇಯವಾದ ಪುರಾಣಗಳ ಪ್ರಾಮಾಣ್ಯವು ಹೇಗೆ? ಎಂದು ಸಂದೇಹದ ಭಾವ.

ಎಂಬ ಶಬ್ದಕ್ಕೆ ವಿಶೇಷಣವಾದುದರಿಂದ (ದ್ವಂದ್ವಸಮಾಸಕ್ಕೂ ಮುನ್ನ ಪುಲ್ಲಿಂಗ ಶಬ್ದವಾದುದರಿಂದ) ಪುಲ್ಲಿಂಗವನ್ನೇ ಆಶ್ರಯಿಸಲಾಗಿದೆ.[1]

(ಮೂಲವಾಕ್ಯದ ಅರ್ಥವನ್ನು ವಿವರಿಸುತ್ತಿದ್ದಾರೆ-) **ಇತಿಹಾಸಪುರಾಣಃ ವೇದಃ, ವೇದಾನಾಂ** - ಋಗಾದಿವೇದಗಳಿಗೆ, **ಪಂಚಮಃ** - ಐದನೆಯ ಸಂಖ್ಯೆಯನ್ನು ಪೂರ್ಣಗೊಳಿಸುವ **ವೇದಃ** - ಗ್ರಂಥ ಎಂದು[2]. (ಪ್ರಕೃತ

1. ಇತಿಹಾಸಶ್ಚ ಪುರಾಣಂ ಚ ಎಂದು ದ್ವಂದ್ವಸಮಾಸವನ್ನು ವಿವಕ್ಷಿಸಿದಲ್ಲಿ 'ಇತಿಹಾಸಪುರಾಣೇ' ಎಂದು ದ್ವಿವಚನಾಂತವಾಗಿ ನಿರ್ದೇಶಿಸಬೇಕಿತ್ತು . ಆದರೆ ಇಲ್ಲಿ 'ಇತಿಹಾಸ ಪುರಾಣಃ' ಎಂದು ಏಕವಚನಾಂತದಲ್ಲಿ ನಿರ್ದೇಶಿಸಲಾಗಿದೆ, ಇದು ಸರಿಯೇ ? ಎಂಬ ಪ್ರಶ್ನೆಗೆ ಉತ್ತರಿಸುವರು ಏಕವದ್ ಭಾವವನ್ನು ವಿವಕ್ಷಿಸಲಾಗಿದೆ. ಎಂದು. 'ಸರ್ವೋ ದ್ವಂದ್ವೋ ವಿಭಾಷಾಯೈಕವದ್ ಭವತಿ' ಎಂಬ ವ್ಯಾಕರಣನಿಯಮಾನುಸಾರ ಏಕವಚನಾಂತವಾಗಿ ಇಲ್ಲಿ ಪರಿಗ್ರಹಿಸಲಾಗಿದೆ. ಆದರೆ 'ಸ ನಪುಂಸಕಂ' (ಪಾ.ಸೂ.2.4.17) ಎಂಬ ನಿಯಮಾನುಸಾರ ಏಕವದ್ ಭಾವವಿದ್ದಲ್ಲಿ ನಪುಂಸಕಲಿಂಗದ ವಿಧಾನವಿದೆ. ಆದರೆ ಇಲ್ಲಿ '...ಪುರಾಣಃ' ಎಂದು ಪುಲ್ಲಿಂಗದ ನಿರ್ದೇಶನವು ತಪ್ಪಲ್ಲವೆ? ಎಂಬ ಪ್ರಶ್ನೆಗೆ ಉತ್ತರ ನಪುಂಸಕತ್ವವನ್ನು ಇಲ್ಲಿ ಆಶ್ರಯಿಸಿಲ್ಲ 'ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ' (ಎಲ್ಲ ನಿಯಮಗಳು ವೇದದಲ್ಲಿ ವಿಕಲ್ಪಿತವಾಗಿವೆ) ಎಂಬ ನಿಯಮಾನುಸಾರ ನಪುಂಸಕತ್ವವನ್ನು ಇಲ್ಲಿ ವಿವಕ್ಷಿಸದೆ ಪುಲ್ಲಿಂಗವನ್ನೇ ಸ್ವೀಕರಿಸಲಾಗಿದೆ. ಏಕವದ್‌ಭಾವ ನಿಮಿತ್ತಕವಾಗಿ ನಪುಂಸಕಲಿಂಗವನ್ನು ವಿವಕ್ಷಿಸದೇ ಇದ್ದರೂ, ಪುರಾಣಶಬ್ದವು ಸ್ವರೂಪತಃ ನಪುಂಸಕಲಿಂಗವಲ್ಲವೇ ? ಎಂಬ ಸಂಶಯವನ್ನು ಪರಿಹರಿಸುವರು. ಸಂಸ್ಕೃತ ಭಾಷಾ ನಿಯಮದಂತೆ ಗುಣವಾಚಕಗಳಿಗೆ ಗುಣಿಯ ಲಿಂಗ ವಿಭಕ್ತಿ ವಚನಗಳನ್ನು ನಿರ್ದೇಶಿಸಲಾಗುವುದು. ಪ್ರಕೃತ ಈ ಪುರಾಣಶಬ್ದವು 'ವೇದಃ' ಎಂಬ ಶಬ್ದಕ್ಕೆ ವಿಶೇಷಣವಾದುದರಿಂದ ಪುಲ್ಲಿಂಗವನ್ನು ವಿವಕ್ಷಿಸಲಾಗಿದೆ ಎಂದು ಭಾವ.

2. ಮೇಲ್ನೋಟದಲ್ಲಿ ಮೂಲವಾಕ್ಯದ ಅರ್ಥವು ಸರಿಯಾಗಿ ಪ್ರತಿಭಾಸವಾಗುವುದಿಲ್ಲ, ಆದುದರಿಂದ ಅದನ್ನು ಟೀಕಾಕಾರರು ಸಂಯೋಜಿಸಿರುತ್ತಾರೆ. 'ವೇದಃ' ಎನ್ನುವ ಶಬ್ದವನ್ನು ಎರಡುಬಾರಿ ಯೋಜಿಸಿಕೊಳ್ಳಬೇಕು. ಆಗ 'ಇತಿಹಾಸಪುರಾಣಃ ವೇದಃ, ವೇದಾನಾಂ ಪಂಚಮೋ ವೇದಃ' ಎಂದು ವಾಕ್ಯವು ಸಿದ್ಧವಾಗುವುದು. 'ಪಂಚಮಃ' ಎನ್ನುವಲ್ಲಿ ಡಟ್ ಪ್ರತ್ಯಯವಿದೆ. ಈ ಡಟ್‌ಪ್ರತ್ಯಯಕ್ಕೆ 'ನಾನ್ತಾದಸಂಖ್ಯಾದೇರ್ಮಟ್' (5.2.49.) ಎನ್ನುವ ಸೂತ್ರದಿಂದ 'ಮಟ್' ಪ್ರತ್ಯಯವು ಪ್ರಾಪ್ತವಾಗುವುದು. 'ತಸ್ಯ ಪೂರಣೇ ಡಟ್' (5.2.48.) ಎನ್ನುವ ಸೂತ್ರದಲ್ಲಿ ವಿಧಿಸಿದಂತೆ ಆ ಪ್ರತ್ಯಯಕ್ಕೆ 'ಪೂರಕ' ಎಂದು ಅರ್ಥ. ಆಗ ವೇದಗಳಿಗೆ 'ಮುಂದಿನ ಸಂಖ್ಯೆಯನ್ನು ಪೂರ್ಣಗೊಳಿಸುವದು' ಎಂಬ ಅರ್ಥವು ಪ್ರಾಪ್ತವಾಗುವುದು. 'ಅನುಕ್ತಂ ಪಂಚಭಿರ್ವೇದೈಃ...' ಎಂದು ಪ್ರಮಾಣವಿದೆ. ಇಲ್ಲಿ 'ಐದು ವೇದಗಳಿಂದ' ಎಂದು ನಿರ್ದೇಶಿಸಿರುವರು ಋಗಾದಿಗಳು ನಾಲ್ಕು ಎಂದು ಪ್ರಸಿದ್ಧ , ಐದನೆಯ ವೇದ ಯಾವದು? 'ಪುರಾಣವೆಂಬುದು ಐದನೆಯ ವೇದ' ಎಂದು ಐದನೆಯ ಸಂಖ್ಯೆಯನ್ನು ಪೂರಣ ಮಾಡುವುದು ಎಂದು ಭಾವ.

ಮೂಲದಲ್ಲಿ 'ತದಗೃಹೀತತ್ವಾತ್' ಎಂದಿದೆ, ಅದರ ಅರ್ಥವನ್ನು ವಿವರಿಸುತ್ತಿರುವರು-) **(ತತ್)ತೇನ** - ಅಪ್ರಾಮಾಣ್ಯ ಶಂಕಾರಹಿತವಾದ, ಪ್ರಮಾಣವೆಂದು ನಿಶ್ಚಿತವಾದ ವೇದದಿಂದ, **ಗೃಹೀತತ್ವಾತ್**- ವೇದಸಮಾನವಾಗಿ ಪರಿಗ್ರಹಿಸಿರುವುದರಿಂದ [1]. ಪುರಾಣ ವಾಕ್ಯಗಳಲ್ಲೂ ಅಪ್ರಾಮಾಣ್ಯಾಭಾವ ನಿಶ್ಚಯವಾದುದರಿಂದ ಪುರಾಣವಾಕ್ಯಗಳ ಉದಾಹರಣವು ಯೋಗ್ಯವಾಗಿದೆ. ಇಲ್ಲಿ ವಸ್ತುತಃ ಪುರಾಣಗಳೆಂದು ಸಾಮಾನ್ಯವಾಗಿ ಎಲ್ಲ ಪುರಾಣಗಳನ್ನೂ ನಿರ್ದೇಶಿಸಲಾಗಿದೆ (ಆದರೆ) ಬೇರೇ ಪ್ರಮಾಣಗಳನ್ನು ಪರಿಶೀಲಿಸಿದಾಗ ವೇದಕ್ಕೆ ಅನುಕೂಲಗಳಾದ ಇತಿಹಾಸಪುರಾಣಗಳನ್ನು ಮಾತ್ರ ಪರಿಗ್ರಹಿಸಬೇಕೆಂದು ತಿಳಿಯುವುದು.[2] ಆಪ್ತರಿಂದ ನಿರ್ಮಿತವಾಗಿವೆ ಪುರಾಣಗಳು. 'ಆದರಿಂದಲೇ ಪುರಾಣಗಳಲ್ಲಿ ಅಪ್ರಾಮಾಣ್ಯವಿಲ್ಲ' ಎಂದು ಏಕೆ ನಿಶ್ಚಯವನ್ನು ಮಾಡುತ್ತಿಲ್ಲ? ಎನ್ನಲಾಗದು. ಆಪ್ತಿಯ ನಿಶ್ಚಯವೂ ಸಹ ಕೊನೆಯಲ್ಲಿ ವೇದವನ್ನು ಅನುಸರಿಸಿಯೇ ಹೇಳಬೇಕು ಆದುದರಿಂದ[3]. ವೇದಗಳಲ್ಲಿ ಅಪ್ರಾಮಾಣ್ಯವಿಲ್ಲ

---

1. ಪ್ರಕೃತ 'ತದ್ಗೃಹೀತತ್ವಾತ್' ಎನ್ನುವದರ ವಿವರ - 'ವೇದೇನ ವೇದಸಮಾನತಯಾ ಗೃಹೀತತ್ವಾತ್' ಎಂದು. ಆದರೆ ಮೂಲದಲ್ಲಿ 'ವೇದಸಮಾನತಯಾ' ಎಂಬ ಶಬ್ದವು ಕಾಣುವುದಿಲ್ಲ. ಮಧ್ಯಮ ಪದಲೋಪೀ ಸಮಾಸದ ನಿಯಮದಂತೆ ಈ ಶಬ್ದವನ್ನು ಇಲ್ಲಿ ಯೋಜಿಸಲಾಗಿದೆ ಎಂದು ಭಾವ.

2. ಪುರಾಣ-ಇತಿಹಾಸಗಳಲ್ಲಿ ಸಾತ್ವಿಕ, ರಾಜಸ, ತಾಮಸಗಳೆಂಬ ವಿಭಾಗಗಳಿವೆ. ಅವುಗಳಲ್ಲಿ ರಾಜಸ, ತಾಮಸ ಪುರಾಣ-ಇತಿಹಾಸಗಳು ವೇದ ವಿರುದ್ಧವಾಗಿವೆ. ಇಲ್ಲಿ 'ಇತಿಹಾಸ ಪುರಾಣಃ....' ಎಂದು ಎಲ್ಲ ಪುರಾಣಗಳನ್ನೂ ವೇದದ ಸಮಾನವೆಂದು ಹೇಳಲಾಗಿದೆ. ವಿರುದ್ಧವಚನಗಳಿಗೆ ಪ್ರಾಮಾಣ್ಯ ಹೇಗೆ ? ಎಂಬ ಸಂಶಯವನ್ನು ಪರಿಹರಿಸಿದರು, ಸಾತ್ವಿಕ ಪುರಾಣ-ಇತಿಹಾಸಗಳನ್ನು ಮಾತ್ರ ಪರಿಗ್ರಹಿಸಬೇಕು ಎಂದು ತಿಳಿಸುವ ಮುಖಾಂತರ.

3. ಪುರಾಣಗಳು ಈಶ್ವರ ಪ್ರಣೀತ ಎಂದು ಒಪ್ಪಲಾಗಿದೆ. 'ಈಶ್ವರನಾದರೋ ಆಪ್ತ, ಆತನಿಂದ ಉಕ್ತವಾದುದರಿಂದ ಪುರಾಣಗಳಲ್ಲಿ ಅಪ್ರಾಮಾಣ್ಯದ ಶಂಕೆ ಇಲ್ಲ' ಎಂದು ಸುಲಭದಲ್ಲಿ ಪುರಾಣಪ್ರಾಮಾಣ್ಯವನ್ನು ನಿಶ್ಚಯಿಸಲು ಶಕ್ಯವಿರುವಾಗ 'ವೇದದಲ್ಲಿ ಪುರಾಣವನ್ನು 'ವೇದದ ಸಮ' ಎಂದು ಪರಿಗ್ರಹಿಸಲಾಗಿದೆ. ಆದುದರಿಂದ ಪುರಾಣಗಳಲ್ಲಿ ಅಪ್ರಾಮಾಣ್ಯದ ಶಂಕೆ ಇಲ್ಲ' ಎಂದು ಸುತ್ತು ಬಳಸಿ ವಾದವನ್ನು ಮಂಡಿಸಲು ಕಾರಣವೇನು? ಎನ್ನುವ ಸಂಶಯವನ್ನು ಪರಿಹರಿಸಿದ್ದಾರೆ. ಈಶ್ವರನು ಆಪ್ತನು ಎಂದು ನಿಶ್ಚಯಿಸಿದಲ್ಲಿ ಆತನಿಂದ ಪ್ರಣೀತವಾದ

ಪುಟ 55ರಲ್ಲಿ........

ಮತ್ತು ಪ್ರಾಮಾಣ್ಯವಿದೆ ಎಂದು ಸಮರ್ಥಿಸಿದ್ದರಿಂದ 'ವೇದಗಳಿಂದ ವಿಷ್ಣುವಿನ ನಿರ್ದೋಷತ್ವ (ಕ್ಷರಾಕ್ಷರಾತೀತ್ವ) ಮೊದಲಾದವು ಸಿದ್ಧವಾಗುತ್ತವೆ' ಎಂಬುವುದನ್ನು ಸಮರ್ಥಿಸಿದಂತಾಯಿತು.

**-: ವೇದಪ್ರಾಮಾಣ್ಯ ಮಂಡನೆಯು ಸಮಾಪ್ತ :-**

**॥ ವೇದಾಪೌರುಷೇಯತ್ವವಾದಾರಂಭ ॥**

ವೇದದ ಪ್ರಾಮಾಣ್ಯದ ಬೇರು 'ಅದು ಅಪೌರುಷೇಯ' ಎನ್ನುವುದು. ಆದರೆ ಪುರುಷನ ಹಿನ್ನೆಲೆ ಇಲ್ಲದ ವಾಕ್ಯಗಳು ಈ ಜಗದಲ್ಲಿ ಉಂಟೇ? ತಾಯಿ ಇಲ್ಲದೇ ಮಗುವು ಜನಿಸೀತೆ? ಎಂದು ಸನಾತನಿಗಳ ಮಾನಿಸಿಕ ಭಾವನೆಗಳನ್ನು ಕೆಣಕುವ ಮೂಲಭೂತ ಪ್ರಶ್ನೆ ಇದು. ಶತಶತಮಾನಗಳಿಂದ ಸ್ವರಾಕ್ಷರಗಳ ವ್ಯತ್ಯಾಸವೂ ಇಲದಂತೆ ಕಾಪಿಟ್ಟ ವೇದಗಳ ಕರ್ತೃವನ್ನು ಮರೆಯಲು ಶಕ್ಯವೇ? ಎಲ್ಲರೂ ಒಪ್ಪಿರುವ ಧರ್ಮ,ಸ್ವರ್ಗ, ಪಾಪ, ಪುಣ್ಯ ಈ ಮುಂತಾದವುಗಳ ಅರಿವು ಏತರಿಂದ? ಸಮಾಜದ ಏಳಿಗೆಗಾಗಿ ತನು-ಮನ-ಧನ ಕೊನೆಯದಾಗಿ ತನ್ನ ಬಲಿದಾನವನ್ನೇ ಆಚರಿಸುವಂತಹ ಮಹತ್ತರ ತ್ಯಾಗಮಯೀ ಜೀವನಕ್ಕೆ ಕೇವಲ ಭೌತಿಕವಾದದಲ್ಲಿ ನೆಲೆ ಇದೆಯೇ? ವ್ಯವಸ್ಥಿತ ಸಮಾಜದ ಉಳಿವಿಗೆ ಈ ಧೃಢವಾದ ಆಸ್ತಿಕಭಾವನೆಯೇ ಕಾರಣವಾಗಿದೆ. ಈ ನಾಸ್ತಿಕವಾದದಿಂದ ಸಮಾಜಕ್ಕೆ ಏನು ಕೊಡುಗೆ? ಈ ಎಲ್ಲ ವಿಷಯಗಳ ವಿಸ್ತಾರವಾದ ವಿರ್ಶೆಯನ್ನು ಇಲ್ಲಿ ಕಾಣಬಹುದಾಗಿದೆ

**ಅಪೌರುಷೇಯವಾದ ವಾಕ್ಯಗಳೇ ಇಲ್ಲ ಎಂದೆನ್ನಲಾಗದು**

**ನಚ 'ಅಪೌರುಷೇಯಂ ವಾಕ್ಯಮೇವ ನಾಸ್ತಿ' ಇತಿ ವಾಚ್ಯಮ್ । ತದಭಾವೇ ಸರ್ವಸಮಯಾಭಿಮತಧರ್ಮಾದ್ಯಸಿದ್ಧೇಃ ॥**

---

...... ಪುಟ 54 ರಿಂದ

ಪುರಾಣಗಳು ಪ್ರಮಾಣವಾಗುವವು. ಈಶ್ವರನ ಆಪ್ತತ್ವವಾದರೋ ವೇದದಿಂದಲೇ ನಿಶ್ಚಯವಾಗಬೇಕು. ವೇದದಿಂದ ಈಶ್ವರನ ಆಪ್ತತ್ವವನ್ನು ನಿಶ್ಚಯಿಸಿ, 'ಆಪ್ತನಾದ ಈಶ್ವರನಿಂದ ಪ್ರಣೀತವಾದುದರಿಂದ ಪುರಾಣಗಳನ್ನು ಪ್ರಮಾಣ' ಎಂದು ಹೇಳುವುದೇ ಬಳಸು ಹಾದಿ. ಆದರ ಬದಲು 'ವೇದಗಳೇ ಪುರಾಣಗಳ ಪ್ರಾಮಾಣ್ಯವನ್ನು ತಿಳಿಸಿವೆ' ಎಂದು ತಿಳಿಸುವುದೇ ನೇರ ಹಾದಿ ಎಂದು ಭಾವ.

'ಪುರುಷನಿರ್ಮಿಸದ ವಾಕ್ಯವೇ ಇಲ್ಲ' ಎಂದು ಹೇಳುವುದು ತರವಲ್ಲ. ಅದು (ಅಪೌರುಷೇಯವಾಕ್ಯವು) ಇಲ್ಲ ಎಂದಾದಲ್ಲಿ ಎಲ್ಲ ದಾರ್ಶನಿಕರು ಒಪ್ಪಿದ ಧರ್ಮಾದಿಗಳು ಅಸಿದ್ಧವಾಗುವುದರಿಂದ,

ಅತ್ರಾऽಹುः- ವೇದಪ್ರಾಮಾಣ್ಯವಾದಿನೋ ಬಾಹ್ಯಾಶ್ಚ । ವೇದಸ್ಯಾಪೌರುಷೇಯತ್ವಂ ನ ಯುಕ್ತಮ್ । ಘಟತ್ವನೀರೂಪತ್ವಯೋರಿವ, ವಾಕ್ಯತ್ವಾಪೌರುಷೇಯತ್ವಯೋः ಪರಸ್ಪರಪರಿಹಾರೇಣೈವ ವೃತ್ತ್ಯುಪಲಬ್ಧ್ಯೋರೇಕತ್ರಾಸಮ್ಭಾವಿತತ್ವಾತ್ । ನ ಚ ತತ್ಸಾಧನಮಪಿಯುಕ್ತಮ್ । ಸಮ್ಭಾವಿತಸ್ಯೈವ ಸಾಧನಾರ್ಹತ್ವಾತ್ । ಯಥೋಕ್ತಂ -

ಸಮ್ಭಾವಿತः ಪ್ರತಿಜ್ಞಾಯಾ ಅರ್ಥः ಸಾಧ್ಯೇತ ಹೇತುನಾ ।

ನ ತಸ್ಯ ಹೇತುಭಿಸ್ತ್ರಾಣಮುತ್ಪತನ್ನೇವ ಯೋ ಮೃತः ॥ ಇತಿ ।

ನಹಿ 'ಮಮ ಕರ್ಣಂ ಪ್ರವಿಶ್ಯ ಗಜೋ ಗರ್ಜತಿ' ಇತ್ಯೇತತ್ ಸಾಧನಾರ್ಹಂ? ಕಿಂತ್ವನಾದರಣೀಯಮೇವೇತ್ಯತ ಆಹ -'ನ ಚ' ಇತಿ ।

'ವೇದ ಅಪೌರುಷೇಯ' ಎನ್ನುವ ವಿಷಯದಲ್ಲಿ ವೇದಪ್ರಾಮಾಣ್ಯವಾದಿಗಳು (ನೈಯ್ಯಾಯಿಕರು) ಮತ್ತು ಹೊರಗಿನವರು (ವೇದವನ್ನು ಪ್ರಮಾಣವೆಂದು ಒಪ್ಪದೆ ಇರುವ ಬೌದ್ಧ, ಜೈನ ಮುಂತಾದವರು) ಹೇಳುತ್ತಾರೆ. ವೇದಕ್ಕೆ ಆಪೌರುಷೇಯತ್ವವು ಯುಕ್ತವಲ್ಲ. ಘಟತ್ವ ನೀರೂಪತ್ವಗಳಂತೆ, ಪರಸ್ಪರ ಒಂದು ಇಲ್ಲದ ಸ್ಥಳದಲ್ಲೇ ಇನ್ನೊಂದು ಇರುವಿಕೆಯು ಕಂಡಿದ್ದರಿಂದ, ವಾಕ್ಯತ್ವ-ಆಪೌರುಷೇಯತ್ವಗಳ ಒಂದೆಡೆ ಇರುವಿಕೆಯು ಅಸಂಭಾವಿತವಾದುದರಿಂದ[1] ಅದನ್ನು (ವಾಕ್ಯತ್ವ ಮತ್ತು ಅಪೌರುಷೇಯತ್ವಗಳು ಒಂದೆಡೆ ಇರುವುದನ್ನು) ಸಾಧಿಸುತ್ತೇನೆ ಎನ್ನುವುದು ಯುಕ್ತವಲ್ಲ. ಸಂಭಾವಿತವಾದದ್ದು ಸಾಧಿಸಲು ಯೋಗ್ಯವಾಗಿರುವುದರಿಂದ. ಈ ವಿಷಯದಲ್ಲಿ (ಪ್ರಾಚೀನರ) ಉಕ್ತಿ

---

1. ಘಟದಲ್ಲಿ ಘಟತ್ವವಿದೆ, ಅಲ್ಲಿ ರೂಪರಾಹಿತ್ಯ ಇಲ್ಲ. ಘಟತ್ವ -ನೀರೂಪತ್ವಗಳಲ್ಲಿ ಒಂದು ಇರುವಲ್ಲಿ ಮತ್ತೊಂದು ಇರುವದಿಲ್ಲ. ಹಾಗೆಯೇ ಪ್ರಕೃತ ವಾಕ್ಯತ್ವವು ಎಲ್ಲಿರುವುದೋ ಅಲ್ಲಿ ಅಪೌರುಷೇಯತ್ವವಿರುವದಿಲ್ಲ. ವಾಕ್ಯಗಳೆಲ್ಲವೂ ಪುರುಷನಿರ್ಮಿತವೇ ಆಗಿರಬೇಕು ಎಂದು ಒಟ್ಟು ಭಾವ.

ಇದೆ. – 'ಸಂಭಾವಿತವಾದ ಪ್ರತಿಜ್ಞೆಯನ್ನು ಹೇತುವಿನಿಂದ ಸಾಧಿಸಬಹುದು. ಹುಟ್ಟುವಾಗಲೇ ಯಾವುದು ಮೃತವಾಗಿದೆಯೋ (ಅಸಂಭಾವಿತವಾದದ್ದು ಎಂದು ಭಾವ) ಅದಕ್ಕೆ (ಪ್ರತಿಜ್ಞಾತವಾದ ವಿಷಯಕ್ಕೆ) ಹೇತುಗಳಿಂದ ಜೀವವು ಪ್ರಾಪ್ತವಾಗಲಾರದು' ಎಂದು. 'ನನ್ನ ಕಿವಿಯಲ್ಲಿ ಆನೆಯು ಪ್ರವೇಶಿಸಿ ಘೀಳಿಡುತ್ತದೆ' ಎನ್ನುವುದು ಸಾಧನಕ್ಕೆ ಅರ್ಹವೇ ? ಮತ್ತೆ (ಇಂತಹ ಮಾತುಗಳು) ಉಪೇಕ್ಷಣೀಯವೇ ಆಗಿದೆ ಎಂದು. ಆದುದರಿಂದ ಉತ್ತರಿಸುತ್ತಾರೆ 'ನ ಚ' ಎನ್ನುವುದರಿಂದ.

**'ಅಪೌರುಷೇಯಂ ವಾಕ್ಯಮೇವ ನಾಸ್ತಿ'** ಇತ್ಯನೇನ 'ವಾಕ್ಯತ್ವಾಪೌರುಷೇಯತ್ವಯೋಃ ಪರಸ್ಪರಪರಿಹಾರೇಣೈವ ವೃತ್ತಿಃ' ಇತ್ಯಾಚಷ್ಟೇ। 'ಅತೋ ವೇದೋಽಪೌರುಷೇಯ ಇತ್ಯೇತದಸಂಭಾವಿತಮೇವ' ಇತಿ ವಾಕ್ಯಶೇಷಃ । ಇತಃ ಪರಂ **'ಅಪೌರುಷೇಯತ್ವಂ ಚ ಸ್ವತ ಏವ'** ಇತ್ಯತಃ ಪ್ರಾಕ್ತನೋ ಗ್ರಂಥಃ ಸಂಭಾವನಾರ್ಥಃ । ಕುತೋ ನವಾಚ್ಯಮ್? ಇತ್ಯತ ಆಹ- **'ತದಭಾವೇ'** ಇತಿ ॥

'ಅಪೌರುಷೇಯಂ ವಾಕ್ಯಮೇವ ನಾಸ್ತಿ' ( ಅಪೌರುಷೇಯವಾದ ವಾಕ್ಯವೇ ಇಲ್ಲ ) ಎನ್ನುವ ವಾಕ್ಯದಿಂದ ವಾಕ್ಯತ್ವ-ಅಪೌರುಷೇಯತ್ವಗಳು ಒಂದು ಇದ್ದಲ್ಲಿ ಮತ್ತೊಂದು ಇರಲಾರದು ಎಂದು ತಿಳಿಸಿದಂತಾಯಿತು. ಆದುದರಿಂದ 'ವೇದವು ಅಪೌರುಷೇಯ ಎಂದೆನ್ನುವುದು ಅಸಂಭಾವಿತ' ಎಂದು ಶೇಷಪೂರಣ ಮಾಡಿಕೊಳ್ಳುವುದು. ಇಲ್ಲಿಂದ ಮುಂದಿನ, **'ಅಪೌರುಷೇಯತ್ವಂ ಚ ಸ್ವತ ಏವ'** ಎನ್ನುವಲ್ಲಿನವರೆಗಿನ ಗ್ರಂಥ ಭಾಗವು (ವೇದಗಳು ಅಪೌರುಷೇಯ ಎನ್ನುವದನ್ನು) ಸಂಭಾವಿತ ಎಂದು ಸಾಧಿಸಲು (ಪ್ರವೃತ್ತವಾಗಿದೆ). (ಅಪೌರುಷೇಯ ವಾಕ್ಯವೇ ಇಲ್ಲ ಎಂದು) ಏಕೆ ಹೇಳಬಾರದು ? ಆದುದರಿಂದ ಉತ್ತರಿಸುತ್ತಾರೆ **'ತದಭಾವೇ'** ಎಂದು.

**ಅಪೌರುಷೇಯವಾದ ವಾಕ್ಯವು ಅಸಂಭಾವಿತವಲ್ಲ**

**ಧರ್ಮಾದಿಕಂ ತಾವದತೀಂದ್ರಿಯಂ ವಸ್ತು ಸರ್ವಸಮಯಾನಾಮ್ ಅಭಿಮತಮ್ । ತತಸ್ತತ್ತತ್ಸಮಯಿಭಿಃ ಪ್ರಾಮಾಣಿಕತ್ವೇನ ತದಙ್ಗೀಕರಣೀಯಮ್ । 'ಪ್ರಾಮಾಣಿಕತಯಾಽಭ್ಯುಪಗತಸ್ಯೈವಾರ್ಥಸ್ಯ ಶಾಸ್ತ್ರ-**

**ಸಿದ್ಧಾನ್ತತ್ವಾತ್' । ನಚಾಪೌರುಷೇಯಂ ವಾಕ್ಯಂ ವಿನಾ ಧರ್ಮಾದಿಸಾಧಕಂ ಪ್ರಮಾಣಮಸ್ತಿ ? ಅತೋಽಪೌರುಷೇಯವಾಕ್ಯಾಭಾವೇ ಧರ್ಮಾದ್ಯಸಿದ್ಧಿ-ಪ್ರಸಙ್ಗಾದ್ 'ಅಪ್ರಾಮಾಣಿಕಸ್ಯ ಚ ಸರ್ವಶಾಸ್ತ್ರಾಭಿಮತತ್ವಾಯೋಗಾತ್' ಸರ್ವೈಃ ಸಮಯಿಭಿರ್ಧರ್ಮಾದಿನಿಶ್ಚಯಾರ್ಥಂ ಕಿಮಪ್ಯಪೌರುಷೇಯಂ ವಾಕ್ಯಮಙ್ಗೀಕಾರ್ಯಂ । ತತಶ್ಚ ವಾಕ್ಯತ್ವಾಪೌರುಷೇಯತ್ವಯೋಃ ಕ್ವಚಿತ್ ಸಮಾವೇಶೇ ಸರ್ವೈರಙ್ಗೀಕರ್ತವ್ಯೇ ಕುತೋ ವೇದೋಽಪೌರುಷೇಯ ಇತ್ಯೇತದಸಂಭಾವಿತಮ್? ಇತಿ ।**

ಎಲ್ಲ ವಾದಿಗಳಿಗೂ ಅಭಿಮತವಾದ 'ಧರ್ಮ' ಎಂಬುವ ವಸ್ತುವು ಅತೀಂದ್ರಿಯವಾಗಿದೆ. ಇದನ್ನು (ಅತೀಂದ್ರಿಯವಾದ ಧರ್ಮವನ್ನು) ಆ ಆ ವಾದಿಗಳು ಪ್ರಾಮಾಣಿಕ (ಪ್ರಮಾಣದಿಂದ ಪ್ರಮಿತವಾಗಿದೆ) ಎಂದು ಒಪ್ಪಬೇಕು. 'ಪ್ರಮಾಣದಿಂದ ಪ್ರಮಿತ' ಎಂದು ಒಪ್ಪಿರುವ ಪದಾರ್ಥವೇ ಶಾಸ್ತ್ರದ ಸಿದ್ಧಾಂತವಾದುದರಿಂದ. ಅಪೌರುಷೇಯವಾದ ವಾಕ್ಯವು ಇಲ್ಲದೇ ಧರ್ಮಾದಿಗಳನ್ನು (ಅತೀಂದ್ರಿಯ ಪದಾರ್ಥಗಳನ್ನು) ಸಾಧಿಸುವ ಪ್ರಮಾಣಾಂತರವಿಲ್ಲ. ಆದುದರಿಂದ ಅಪೌರುಷೇಯ ವಾಕ್ಯವು ಇಲ್ಲದ ಪಕ್ಷದಲ್ಲಿ ಧರ್ಮಾದಿಗಳ ಸಿದ್ಧಿಯು ಆಗದೇ ಹೋದೀತು. ಪ್ರಮಾಣಪ್ರಮಿತ-ವಾಗದ (ಧರ್ಮಾದಿ ಅತೀಂದ್ರಿಯ ಪದಾರ್ಥಗಳು) ಎಲ್ಲ ಶಾಸ್ತ್ರಗಳಿಂದ ಒಪ್ಪಿತವಾಗದೇ ಇರಬೇಕಾದೀತು. (ಆದುದರಿಂದ) ಎಲ್ಲ ವಾದಿಗಳು ಧರ್ಮಾದಿಗಳ ನಿಶ್ಚಯಕ್ಕಾಗಿ ಯಾವುದಾದರೂ ಒಂದು ಅಪೌರುಷೇಯವಾದ ವಾಕ್ಯವನ್ನು ಒಪ್ಪಬೇಕು. ಆದುದರಿಂದ ವಾಕ್ಯತ್ವಕ್ಕೂ ಅಪೌರುಷೇಯತ್ವಕ್ಕೂ ಯಾವುದಾದರೂ ಒಂದು ಸ್ಥಳದಲ್ಲಿ ಅಸ್ತಿತ್ವವನ್ನು ಒಪ್ಪಿದಲ್ಲಿ, 'ವೇದವು ಅಪೌರುಷೇಯ' ಎನ್ನುವದು ಏಕೆ ಅಸಂಭಾವಿತವಾಗುವುದು ? ಎಂದು.

**ಚಾರ್ವಾಕವಾದದ ಖಂಡನೆ**

**ಯಸ್ಯ ತೌ ನಾಭಿಮತೌ ನಾಸೌ ಸಮಯೀ, ಸಮಯ-ಪ್ರಯೋಜನಾಭಾವಾತ್ ।**

**ಅನು.**- ಯಾರಿಗೆ ಅವೆರಡು (ಧರ್ಮಾಧರ್ಮಗಳು) ಅಭಿಮತವಲ್ಲವೋ ಆತನು ದಾರ್ಶನಿಕನಾಗಲಾರ, (ಆತನ) ದರ್ಶನಕ್ಕೆ ಪ್ರಯೋಜನವು ಇಲ್ಲದಿರುವುದರಿಂದ.

**ಯೇಷಾಂ ವೈಶೇಷಿಕಾದೀನಾಂ ಬೌದ್ಧಾದೀನಾಂ ಚಾತೀಂದ್ರಿಯಂ ಧರ್ಮಾದಿಕಂ ವಸ್ತ್ವಭಿಮತಂ ತಾನ್ ಪ್ರತ್ಯಾಪಾದ್ಯತಾಮಪೌರುಷೇಯ-ವಾಕ್ಯಾಭ್ಯುಪಗಮಃ । ಯಸ್ಯ ತು ಲೋಕಾಯತಸ್ಯ ಧರ್ಮಾದ್ಯಭಿಮಾನೋ ನಾಸ್ತಿ ನ ತಂ ಪ್ರತ್ಯಾಪಾದನಂ ಯುಕ್ತಮ್ । ತಸ್ಯ ಸ್ವಾಭಿಮತಸ್ಯ ಪ್ರಮೇಯಸ್ಯ ಪ್ರತ್ಯಕ್ಷೈಕ್ಯೈವ ಸಿದ್ಧೇರತೀಂದ್ರಿಯಸ್ಯಾನಙ್ಗೀಕೃತತ್ವೇನಾಽಪಾದಕತ್ವಾ-ಭಾವಾತ್ । ತಥಾ ಚ ಲೋಕಾಯತಂ ಪ್ರತಿ ನಾಸಂಭಾವನಾ-ಪರಿಹಾರೋಽಸ್ತೀತ್ಯಾಶಂಕ್ಯ ತೇನಾಪಿ ಧರ್ಮಾದ್ಯಭ್ಯುಪಗಮಂ ಕಾರಯಿತ್ವಾ ತತ್ಸಾಧಕಾಪೌರುಷೇಯವಾಕ್ಯಮಙ್ಗೀಕಾರಯಿಷ್ಯಾಮೀತ್ಯಾಶಯವಾನ್ ಆಹ- 'ಯಸ್ಯ' ಇತಿ ॥**

ಯಾವ ವೈಶೇಷಿಕರು, ಬೌದ್ಧರು ಮುಂತಾದವರು ಅತೀಂದ್ರಿಯವಾದ ಧರ್ಮಾದಿ ಪದಾರ್ಥಗಳನ್ನು ಒಪ್ಪಿರುವರೋ ಅವರನ್ನು ಉದ್ದೇಶಿಸಿ 'ಅಪೌರುಷೇಯವಾಕ್ಯವನ್ನು ಒಪ್ಪಬೇಕು' ಎಂದು ನಿರ್ಬಂಧಿಸಿರಿ.[1] ಯಾವ ಲೋಕಾಯತನಿಗೆ (ಚಾರ್ವಾಕನಿಗೆ-ನಾಸ್ತಿಕನಿಗೆ) ಧರ್ಮಾದಿಗಳಲ್ಲಿ ಅಭಿಮಾನವು ಇಲ್ಲವೋ, ಆತನನ್ನು ಉದ್ದೇಶಿಸಿ ಈ ನಿರ್ಬಂಧವು ಅಯುಕ್ತವಾಗುವುದು[2]. ಹಾಗಾದಲ್ಲಿ 'ಲೋಕಾಯತನ ದೃಷ್ಟಿಯಲ್ಲಿ ಅಸಂಭಾವನಾಶಂಕೆಯು ಪರಿಹಾರವಾಗಲಿಲ್ಲ[3]. ಎಂದು ಶಂಕಿಸಿ ಆತನಿಂದಲೂ

---

1. ಅತೀಂದ್ರಿಯವಾದ ಧರ್ಮಾಧರ್ಮಗಳನ್ನು ವೈಶೇಷಿಕರು, ಬೌದ್ಧರು ಒಪ್ಪಿರುವರು. ಆದುದರಿಂದ ಆ ಅತೀಂದ್ರಿಯ ಪದಾರ್ಥಗಳ ಸಿದ್ಧಿಗಾಗಿ ಅವರು ಅಪೌರುಷೇಯವಾದ ವಾಕ್ಯವನ್ನು ಒಪ್ಪುವ ಆವಶ್ಯಕತೆ ಇದೆ ಎಂದು ನಿರ್ಬಂಧಿಸಬಹುದು ಎಂದು ಭಾವ.

2. ಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನು ಒಪ್ಪದ ಚಾರ್ವಾಕನಿಗೆ ಅಪೌರುಷೇಯವಾದ ವಾಕ್ಯಗಳ ಅಗತ್ಯವಿಲ್ಲ ಎಂದು ಭಾವ.

3. 'ವಾಕ್ಯತ್ವಕ್ಕೂ ಅಪೌರುಷೇಯತ್ವಕ್ಕೂ ಸಾಹಚರ್ಯವೇ ಇಲ್ಲ ಇವುಗಳ ಸಾಹಚರ್ಯ ಅಸಂಭಾವಿತ' ಎಂದು ಈ ಹಿಂದೆ ಸಂಶಯ ಬಂದಾಗ 'ಧರ್ಮಾದಿ ಅತೀಂದ್ರಿಯ ಪದಾರ್ಥಗಳ ಸಿದ್ಧಿಗಾಗಿ ಅಪೌರುಷೇಯವಾದ ವಾಕ್ಯವು ಬೇಕೇ ಬೇಕು. ಆದುದರಿಂದ ವಾಕ್ಯತ್ವಕ್ಕೂ ಅಪೌರುಷೇಯತ್ವಕ್ಕೂ ಸಾಹಚರ್ಯ ಅಸಂಭಾವಿತವಲ್ಲ' ಎಂದು ಸಮಾಧಾನವನ್ನು ತಿಳಿಸಿದ್ದರು. ಪ್ರಕೃತ ಅತೀಂದ್ರಿಯಪದಾರ್ಥಗಳನ್ನು ಒಪ್ಪದ ಚಾರ್ವಾಕನ ದೃಷ್ಟಿಯಲ್ಲಿ ಆ ಅಸಂಭಾವನಾ ಶಂಕೆಗೆ ಉತ್ತರಿಸಿದಂತಾಗಲಿಲ್ಲ ಎಂದು ಭಾವ.

ಧರ್ಮಾದಿಗಳನ್ನು ಒಪ್ಪಿಸಿ, ಆ ಧರ್ಮಾದಿಗಳ ಸಾಧಕವಾದ ಅಪೌರುಷೇಯ-ವಾದ ವಾಕ್ಯವನ್ನೂ ಒಪ್ಪಿಸುತ್ತೇವೆ ಎಂಬ ಅಭಿಪ್ರಾಯದಿಂದ ತಿಳಿಸುತ್ತಾರೆ. 'ಯಸ್ಯ' ಎಂದು.

**'ಯಸ್ಯ' ಎಂದು ಷಷ್ಠಿಯು ಯುಕ್ತವಾಗಿದೆ**

**ಟೀಕಾ-** ನನು 'ಕರ್ತೃಕರಣಯೋಸ್ತೃತೀಯಾ' ಇತಿ ಪ್ರಾಪ್ತಾಂ ತೃತೀಯಾಂ ಬಾಧಿತ್ವಾ 'ಕರ್ತೃಕರ್ಮಣೋಃ ಕೃತಿ' ಇತಿ ಪ್ರಾಪ್ತಾಯಾಃ ಷಷ್ಠ್ಯಾಃ 'ನ ಲೋಕಾವ್ಯಯ ನಿಷ್ಠಾ....' ಇತಿ ಪುನಃ ಪ್ರತಿಷೇಧೇ ತೃತೀಯಾ ಭವಿತವ್ಯಂ 'ದೇವದತ್ತೇನ ಭುಕ್ತಂ'ಇತಿ ಯಥಾ, ಯಸ್ಯೇತಿ ತು ಕಥಮ್ ? ಉಚ್ಯತೇ, 'ಅಭಿಮತೌ' ಇತಿ 'ಮತಿಬುದ್ಧಿಪೂಜಾರ್ಥೇಭ್ಯಶ್ಚ' ಇತಿ ವರ್ತಮಾನೇ ಕ್ತಃ । 'ಕ್ತಸ್ಯ ಚ ವರ್ತಮಾನೇ' ಇತಿ ಪ್ರತಿಷೇಧಬಾಧಕತ್ವೇನ ಷಷ್ಠೀವಿಧಾನಾತ್ ಸೈವಾತ್ರ ಯುಕ್ತಾ 'ದೇವದತ್ತಸ್ಯ ಇಷ್ಟಂ' ಇತಿ ಯಥಾ ಇತಿ ।

ಅನು.- 'ಕರ್ತೃಕರಣಯೋಸ್ತೃತೀಯಾ' ಎಂಬ ಸೂತ್ರದಂತೆ (ಯಸ್ಯ ತೌ ನಾಭಿಮತೌ' ಎನ್ನುವ ವಾಕ್ಯದಲ್ಲಿರುವ 'ಯತ್' ಶಬ್ದಕ್ಕೆ ಪ್ರಾಪ್ತವಾದ ತೃತೀಯಾ ವಿಭಕ್ತಿಯನ್ನು ಬಾಧಿಸಿ, 'ಕರ್ತೃಕರ್ಮಣೋಃ ಕೃತಿ' ಎಂಬ ಸೂತ್ರದಂತೆ ಪ್ರಾಪ್ತವಾದ ಷಷ್ಠೀ ವಿಭಕ್ತಿಗೆ ಪುನಃ 'ನ ಲೋಕಾವ್ಯಯನಿಷ್ಠಾ....' ಎಂಬ ಸೂತ್ರದಿಂದ ಪುನಃ ತೃತೀಯಾ ವಿಭಕ್ತಿಯೇ ಪ್ರತಿವಿಹಿತವಾಗಿರುವುದರಿಂದ ತೃತಿಯಾ ವಿಭಕ್ತ್ಯಂತವಾಗಿಯೇ ಇರಬೇಕು,'ದೇವದತ್ತೇನ ಭುಕ್ತಂ' ಎನ್ನುವ ವಾಕ್ಯದಂತೆ, ಆದುದರಿಂದ ಪ್ರಕೃತದಲ್ಲಿ 'ಯಸ್ಯ' ಎಂದು (ಷಷ್ಠ್ಯಂತವಾಗಿ) ಹೇಗೆ ಪ್ರಯೋಗಿಸಲಾಗಿದೆ ? ಉತ್ತರಿಸುತ್ತಾರೆ 'ಮತಿಬುದ್ಧಿಪೂಜಾರ್ಥೇಭ್ಯಶ್ಚ' ಎನ್ನವ ಸೂತ್ರದಂತೆ (ಮತಿ, ಬುದ್ಧಿ, ಪೂಜಾ ಈ ಅರ್ಥಉಳ್ಳ ಧಾತುಗಳಿಗೆ ವರ್ತಮಾನಾರ್ಥದಲ್ಲಿ 'ಕ್ತ' ಪ್ರತ್ಯಯುವು ಪ್ರಾಪ್ತವಾಗುವುದು) ವರ್ತಮಾನಾರ್ಥದಲ್ಲಿ 'ಅಭಿಮತೌ' ಎನ್ನುವಲ್ಲಿ 'ಕ್ತ' ಪ್ರತ್ಯಯವಿದೆ. 'ಕ್ತಸ್ಯ ಚ ವರ್ತಮಾನೇ' ಎನ್ನುವ ಸೂತ್ರದಂತೆ ಷಷ್ಠೀ ವಿಭಕ್ತಿಯ ಪ್ರತಿಷೇಧಕ್ಕೆ (ತೃತೀಯಾ ವಿಭಕ್ತಿಗೆ) ಬಾಧಕವಾಗಿ ಷಷ್ಠಿಯನ್ನೇ ವಿದಿಸಿರುವುದರಿಂದ ಅದೇ (ಷಷ್ಠಿ

ವಿಭಕ್ತಿಯೇ ಪ್ರಕೃತದಲ್ಲಿ) ಯುಕ್ತವಾಗಿದೆ. 'ದೇವದತ್ತಸ್ಯ ಇಷ್ಟಂ' ಎಂದು ಹೇಗೆ ಪ್ರಯೋಗವಿದೆಯೋ (ಹಾಗೆ) ಎಂದು[1].

---

1. 'ಯಸ್ಯ ತೌ ನಾಭಿಮತೌ' ಎನ್ನುವ ಮೂಲ ವಾಕ್ಯದಲ್ಲಿ 'ಯಸ್ಯ' ಎಂದು ಷಷ್ಠ್ಯಂತವಾದ 'ಯತ್' ಶಬ್ದವನ್ನು ಪ್ರಯೋಗಿಸಿರುತ್ತಾರೆ. ಆದರೆ 'ಕರ್ತೃಕರಣಯೋಸ್ತೃತೀಯಾ' (2.3.18.) ಎಂಬ ಸೂತ್ರದ ಪ್ರಕಾರ 'ಯೇನ ಅಭಿಮತಾ' ಎಂದು ತೃತೀಯಾಂತವಾಗಿ ಪ್ರಯೋಗಿಸಬೇಕು. ಇದರ ಅಭಿಪ್ರಾಯ- ಕರ್ತೃವಾಚಕ ಮತ್ತು ಕರಣವಾಚಕ ಪದಗಳಿಗೆ ತೃತೀಯಾ ವಿಭಕ್ತಿಯು ವಿಹಿತವಾಗಿದೆ . ಕ್ರಿಯಾಪದವು ಕರ್ತೃವಾಚಕವಾಗದ ಸಂದರ್ಭದಲ್ಲಿ, ಉದಾಹರಣೆ - 'ರಾಮೇಣ ರಾವಣೋ ಹತಃ' ಇತ್ಯಾದಿಗಳು. ಕ್ರಿಯಾಪದವು ಕರ್ತೃವಾಚಕವಾದಲ್ಲಿ ತೃತೀಯಾವಿಭಕ್ತಿ ಬರುವುದಿಲ್ಲ. ಉದಾಹರಣೆ - 'ಹರಿಃ ಕರೋತಿ' 'ಹನುಮಾನ್ ನಮತಿ' ಇತ್ಯಾದಿಗಳು. ಕ್ರಿಯಾಪದವು ಕರ್ತೃವಾಚಕ ಎಂದರೆ, ಕ್ರಿಯಾಪದ-ಕರ್ತೃಪದಗಳ ವಚನಗಳಿಗೆ ಪರಸ್ಪರ ಸಂಬಂಧವಿರುವುದು. 'ರಾಮಕೃಷ್ಣಾಭ್ಯಾಂ ಪ್ರಲಂಬೋ ಹತಃ' ಇಲ್ಲಿ ಕರ್ತೃವಾಚಕಗಳಾದ ರಾಮಕೃಷ್ಣ ಶಬ್ದದ ವಚನಕ್ಕೂ, ಕ್ರಿಯಾವಾಚಕವಾದ 'ಹತಃ' ಎನ್ನುವ ಶಬ್ದದ ವಚನಕ್ಕೂ ಪರಸ್ಪರ ಸಂಬಂಧವಿರುವದಿಲ್ಲ. ಆದರೆ 'ಹರಿಃ ಕರೋತಿ, ಹರಯಃ ಕುರ್ವಂತಿ' ಎನ್ನುವಂತೆ ಕ್ರಿಯಾವಾಚಕ ಮತ್ತು ಕರ್ತೃವಾಚಕಗಳಿಗೆ ಪರಸ್ಪರ ಸಂಬಂಧವಿರುವುದು. ಪ್ರಕೃತದಲ್ಲಿ ಕ್ರಿಯಾ ಪದದಿಂದ ಕರ್ತೃವಾಚಕವು ಅನುಕ್ತವಾದುದರಿಂದ 'ಯೇನ ತೌ ನಾಭಿಮತೌ' ಎಂದು ಪ್ರಯೋಗಿಸಬೇಕಿತ್ತು . ಆದರೆ 'ಕರ್ತೃಕರ್ಮಣೋಃ ಕೃತಿ' (2.3.65.) ಎಂದು ಮತ್ತೊಂದು ಸೂತ್ರವಿದೆ. ಅದರ ಅಭಿಪ್ರಾಯ- ಕೃದಂತ ಶಬ್ದದ ಪ್ರಯೋಗವಿದ್ದಲ್ಲಿ ಕರ್ತೃ ಮತ್ತು ಕರ್ಮ ವಾಚಕ ಶಬ್ದಗಳಿಗೆ ಷಷ್ಠೀ ವಿಭಕ್ತಿ ವಿಹಿತ ಎಂದು. ಉದಾಹರಣೆಗೆ 'ವ್ಯಾಸಸ್ಯ ಕೃತಿಃ' 'ಭಾರತಸ್ಯ ಶ್ರವಣಂ' ಇತ್ಯಾದಿಗಳು. ಪ್ರಕೃತದಲ್ಲಿ 'ಅಭಿಮತೌ' ಎನ್ನುವ ಶಬ್ದವು ಕೃದಂತ ಶಬ್ದವೇ ಆಗಿದೆ. ಹೇಗೆಂದರೆ 'ಕೃದತಿಙ್'(3.1.93.) ಎಂಬ ಪಾಣಿನೀಯಸೂತ್ರದ ಪ್ರಕಾರ ತಿಙ್‌ಭಿನ್ನವಾದ ಪ್ರತ್ಯಯಗಳಿಗೆ ಕೃತ್ ಸಂಜ್ಞೆ ಇದೆ. ಈ ನಿಯಮಾನುಸಾರ 'ಅಭಿಮತೌ' ಎನ್ನುವಲ್ಲಿ 'ಅಭಿ' ಉಪಸರ್ಗ ಸಹಿತವಾದ 'ಮನ್' ಎನ್ನುವ ಮೂಲರೂಪಕ್ಕೆ 'ಕ್ತ' ಪ್ರತ್ಯಯವಿದೆ. ಈ'ಕ್ತ' ಪ್ರತ್ಯಯವು 'ಕೃತ್' ಸಂಜ್ಞೆಯನ್ನು ಹೊಂದಿದೆ. ಆದುದರಿಂದ 'ಅಭಿಮತೌ' ಎನ್ನುವುದು ಕೃದಂತವಾಯಿತು, ತನ್ನಿಮಿತ್ತ 'ಯಸ್ಯ' ಎಂದು ಷಷ್ಠೀ ವಿಭಕ್ತಿಯ ಪ್ರಯೋಗ ಸಾಧು ಎಂದು ಹೇಳಲಾಗದು, ಏಕೆಂದರೆ 'ನ ಲೋಕಾವ್ಯಯನಿಷ್ಠಾಖಲರ್ಥತೃನಾಂ'(2.3.69.) ಎಂದು ಮತ್ತೊಂದು ಸೂತ್ರವಿದೆ. ಈ ಸೂತ್ರದ ಪ್ರಕಾರ ಇಲ್ಲಿ ಉಕ್ತವಾದ ಲ,ಉ,ಉಕ,ನಿಷ್ಠಾ, ಖಲರ್ಥ, ತೃನ್‌ಗಳ ಯೋಗವಿದ್ದಲ್ಲಿ ಕರ್ತೃವಾಚಕ ಪದಕ್ಕೆ ಷಷ್ಠೀ ವಿಭಕ್ತಿಯ ಯೋಗವಿಲ್ಲ. ಉದಾ - 'ದೇವದತ್ತೇನ ಭುಕ್ತಂ' 'ವಿಷ್ಣುನಾ ಹತಾಃ' ಎನ್ನುವುದು. ಪ್ರಕೃತ 'ಅಭಿಮತೌ' ಎನ್ನುವಲ್ಲಿರುವ 'ಕ್ತ' ಪ್ರತ್ಯಯಕ್ಕೆ

ಪುಟ 62ರಲ್ಲಿ........

**ತೌ - ಧರ್ಮಾಧರ್ಮೌ, ಅತೀಂದ್ರಿಯೋಪಲಕ್ಷಣಂ ಚೈತತ್ । ನಾಸೌ ಸಮಯೀ 'ಸ್ಯಾದ್' ಇತಿ ಶೇಷಃ । ಧರ್ಮಾದಿಕಮನಙ್ಗೀಕಾರಿಣೋ-ಅಶಾಸ್ತ್ರಿತ್ವಾಪತ್ತಿಃ ಕುತಃ ? ಇತ್ಯತ ಆಹ 'ಸಮಯ..' ಇತಿ । ಪ್ರಯುಜ್ಯತೇ-ಪ್ರೇರ್ಯತೇ , ಪ್ರಣೇತಾ ಪ್ರಣಯನೇ, ಶ್ರೋತಾ ಚ ಶ್ರವಣೇ ಯೇನ ತತ್ ಪ್ರಯೋಜನಂ ವಿಷಯಃ ಸಾಧ್ಯಂ ಚ । ಸಮಯಸ್ಯ - ಲೋಕಾಯತಶಾಸ್ತ್ರಸ್ಯ ವಿಷಯಾದ್ಯಭಾವ ಪ್ರಸಂಗಾತ್ ಇತ್ಯರ್ಥಃ ।**

ತೌ - ಧರ್ಮಾಧರ್ಮಗಳು, ಇದು ( ಧರ್ಮಾಧರ್ಮೌ ಎನ್ನುವ ಪದವು) ಅತೀಂದ್ರಿಯ ಪದಾರ್ಥಗಳನ್ನು (ಸ್ವರ್ಗ, ನರಕ, ದೈವ ಮುಂತಾದವುಗಳನ್ನು) ಸೂಚಿಸುತ್ತವೆ. 'ನಾಸೌ ಸಮಯೀ' (ಎನ್ನುವ ಮೂಲವಾಕ್ಯದಲ್ಲಿ) 'ಸ್ಯಾತ್'

---

...... ಪುಟ 61 ರಿಂದ

ನಿಷ್ಠಾ ಸಂಜ್ಞೆಯು ಇದೆ. 'ಕ್ತಕ್ತವತೂ ನಿಷ್ಠಾ'(1.1.26.) ಎನ್ನುವ ಸೂತ್ರದ ಅನುಸಾರ 'ನಿಷ್ಠಾ' ಸಂಜ್ಞೆ ಯು ಪ್ರಾಪ್ತವಾಗುವುದು. 'ನಲೋಕಾ ... ' ಸೂತ್ರದ ಅನುಸಾರ ನಿಷ್ಠಾಯೋಗವಿದ್ದಲ್ಲಿ ಷಷ್ಠೀ ವಿಭಕ್ತಿಯ ನಿಷೇಧವಿದೆ. ಆದುದರಿಂದ ಷಷ್ಠೀವಿಭಕ್ತಿಯನ್ನು ಬಳಸುವಂತಿಲ್ಲ. 'ಕರ್ತೃಕರ್ಮಣೋಸ್ಸೃತೀಯಾ' ಎನ್ನುವುದರಿಂದ ಪ್ರಾಪ್ತವಾದ ತೃತೀಯಾವನ್ನು ಪ್ರಯೋಗಿಸಿದಲ್ಲಿ 'ಯೇನ' ಎಂದಾಗಬೇಕು. 'ಅಪವಾದಸ್ಯಾಪವಾದೇ ಪುನರುತ್ಸರ್ಗಸ್ಯೈವ ಪ್ರಾಪ್ತಿಃ' ಎನ್ನುವ ನಿಯಮವು ಇದನ್ನೇ ತಿಳಿಸುತ್ತದೆ. ಉದಾ- 'ದೇವದತ್ತೇನ ಭುಕ್ತಂ' ಎಂದು ಸಂದೇಹಿಸಿದಲ್ಲಿ, ಉತ್ತರಿಸುವರು- 'ನಲೋಕಾವ್ಯಯ.....' ಎನ್ನುವ ಸೂತ್ರದಲ್ಲಿ ಭೂತಾರ್ಥಕ ನಿಷ್ಠಾ ಸಂಜ್ಞಕ ಪ್ರತ್ಯಯದ ಯೋಗವಿದ್ದಾಗ ಮಾತ್ರ ಷಷ್ಠಿಯ ನಿಷೇಧಮಾಡಿದ್ದಾರೆ ಹೊರತು ವರ್ತಮಾನಾರ್ಥಕ ನಿಷ್ಠಾಸಂಜ್ಞಕ ಪ್ರತ್ಯಯದ ಯೋಗವಿದ್ದಾಗ ನಿಷೇಧಿಸಲಾಗಿಲ್ಲ. ಪ್ರಕೃತದಲ್ಲಾದರೂ ನಿಷ್ಠಾ ಸಂಜ್ಞಕವಾದ 'ಕ್ತ' ಪ್ರತ್ಯಯವು ವರ್ತಮಾನಾರ್ಥಕವಾಗಿದೆ. 'ಮತಿಬುದ್ಧಿಪೂಜಾರ್ಥೇಭ್ಯಶ್ಚ' (3.2.188.) ಎನ್ನುವ ಸೂತ್ರದಲ್ಲಿ ಇಷ್ಟ, ಬುದ್ಧಿ ಪೂಜಾ ಈ ಅರ್ಥವನ್ನು ತಿಳಿಸುವ ಧಾತುವಿಗೆ ವರ್ತಮಾನಾರ್ಥಕವಾದ 'ಕ್ತ' ಪ್ರತ್ಯಯವನ್ನು ವಿಧಿಸಿದ್ದಾರೆ. ಪ್ರಕೃತ 'ಅಭಿಮತೇ' ಎನ್ನುವಲ್ಲಿ 'ಅಭಿ' ಉಪಸರ್ಗ ಪೂರ್ವವಾದ ಈ 'ಮನ' ಧಾತುವು ಬುದ್ಧ್ಯರ್ಥಕವಾಗಿದೆ. 'ಕ್ತಸ್ಯ ಚ ವರ್ತಮಾನೇ' (2.3.67.) ವರ್ತಮಾನಾರ್ಥಕ 'ಕ್ತ' ಪ್ರತ್ಯಯದ ಯೋಗವಿದ್ದಲ್ಲಿ ಷಷ್ಠೀ ವಿಭಕ್ತಿಯು ಪ್ರಾಪ್ತವಾಗುವುದು. ತನ್ನಿಮಿತ್ತ ಷಷ್ಠೀ ವಿಭಕ್ತಿಯ ಪ್ರಯೋಗವು ಸಾಧುವಾಗಿದೆ. ಉದಾ - ಸತಾಂ ಮತಃ, ರಾಜ್ಞಾಂ ಮತಃ' ದೇವದತ್ತಸ್ಯ ಇಷ್ಟಂ ಇತ್ಯಾದಿಗಳು ಎಂದು ಭಾವ.

ಎಂದು ಶೇಷಪೂರಣಮಾಡಿಕೊಳ್ಳಬೇಕು[1]. ಧರ್ಮಾದಿಗಳನ್ನು ಒಪ್ಪದವನಿಗೆ ಅಶಾಸ್ತ್ರಿತ್ವದ ಪ್ರಸಂಗವು ಏಕೆ ? ಆದುದರಿಂದ ಉತ್ತರಿಸುವರು '**ಸಮಯ..**' ಎಂದು. ಪ್ರಯುಜ್ಯತೇ- ಶಾಸ್ತ್ರರಚನಕಾರನನ್ನು ಗ್ರಂಥರಚನೆಯಲ್ಲಿ, ಶ್ರೋತೃವನ್ನು ಶ್ರವಣದಲ್ಲಿ ಯಾವುದು ಪ್ರೇರೇಪಿಸುವುದೋ ಅದನ್ನು 'ಪ್ರಯೋಜನ' (ಎಂದು ತಿಳಿಯುವುದು) (ಅದು) ವಿಷಯ ಮತ್ತು (ಆ ವಿಷಯವು ಗ್ರಂಥದ ಅಧ್ಯಯನದಿಂದ) ಸಾಧ್ಯವಾಗಬೇಕು[2]. **ಸಮಯಸ್ಯ**- ಚಾರ್ವಾಕಶಾಸ್ತ್ರಕ್ಕೆ ವಿಷಯಾದಿಗಳು ಇಲ್ಲದಂತಾದೀತು (ಅತೀಂದ್ರಿಯ ಪದಾರ್ಥಗಳನ್ನು ಒಪ್ಪದ ಪಕ್ಷದಲ್ಲಿ) ಎಂದು ಭಾವ.

**ಚಾರ್ವಾಕನೂ ಧರ್ಮಾದಿಗಳನ್ನು ಒಪ್ಪಬೇಕು**

**ಏತದುಕ್ತಂ ಭವತಿ- ನ ತಾವಲ್ಲೋಕಾಯತಶಾಸ್ತ್ರಸ್ಯೈಂದ್ರಿಯಕೋ ವಿಷಯಃ, ಪ್ರತ್ಯಕ್ಷತ ಏವ ತತ್‌ಸಿದ್ಧೌ ಶಾಸ್ತ್ರಾನಪೇಕ್ಷತ್ವಾತ್ । ಫಲಮಪಿ ನ ದೃಷ್ಟಮರ್ಥಾದಿಕಂ ತಸ್ಯಾನ್ಯತೋ ಲಭ್ಯತ್ವಾತ್ ; ಅನೇನ ಸಂಬಂಧಾ- ಭಾವಾಚ್ಚ । ತತೋ ಧರ್ಮಾದಿಕಮತೀಂದ್ರಿಯಂ ವಿಷಯತ್ವೇನ, ಸ್ವರ್ಗಾದಿಕಂ ಫಲತ್ವೇನಾಙ್ಗೀಕಾರ್ಯಮ್ । ತದಪಿ ಚೇನ್ನಾಙ್ಗೀಕ್ರಿಯತೇ? ತದಾ ಶಾಸ್ತ್ರಸ್ಯ ನಿರ್ವಿಷಯತ್ವೇನ, ನಿಷ್ಫಲತ್ವೇನ ಚ ಕಾಕದಂತಪರೀಕ್ಷಾ- ಗ್ರಂಥವದಶಾಸ್ತ್ರತ್ವಮಾಪದ್ಯೇತ । 'ವಕ್ತೃಶ್ರೋತ್ರೋರಭಿಮತಮನನ್ಯಸಾಧ್ಯಂ ಫಲಮಧಿಕೃತ್ಯ ತದ್ಧೇತುಭೂತಂ ಪ್ರಮಾಣಾಂತರಾಪ್ರಾಪ್ತಮರ್ಥಂ ಪ್ರತಿಪಾದಯತಾಂ ವಾಕ್ಯಾನಾಂ ಸಮೂಹೋ ಹಿ ಶಾಸ್ತ್ರಮ್' ಇತ್ಯುಚ್ಯತೇ ಯಥಾ ಚರಕಾದಿ । ಏವಂ ಚಾಶಾಸ್ತ್ರತ್ವಾಪತ್ತೌ ತಸ್ಯಾಶಾಸ್ತ್ರಿತ್ವಂ ಪ್ರಸಜ್ಯೇತ । ನ**

---

1. ಯಾರು ಧರ್ಮಾಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನು ಒಪ್ಪುವುದಿಲ್ಲವೋ ಅಂತಹವನು ಸಮಯೀ (ಶಾಸ್ತ್ರಕಾರನು) ಆಗಲಾರನು ಎಂದು ಒಟ್ಟು ಭಾವ.

2. 'ಪ್ರಯುಜ್ಯತೇ ಇತಿ- ಪ್ರಯೋಜನಂ' ಎಂದು ಪ್ರಯೋಜನ ಶಬ್ದದ ಅರ್ಥ. ಪ್ರಯುಜ್ಯತೇ– ಪ್ರೇರೇಪಿಸುವುದು, ಶಾಸ್ತ್ರಕಾರನನ್ನು ಗ್ರಂಥ ರಚಿಸಲು ಪ್ರೇರೇಪಿಸುವುದು, ಹಾಗೆಯೇ ಜಿಜ್ಞಾಸುಗಳನ್ನು ಶ್ರವಣದಲ್ಲಿ ಪ್ರೇರೇಪಿಸುವುದು, ಅದನ್ನು 'ಪ್ರಯೋಜನ' ಎಂದು ಕರೆಯಲಾಗುವುದು. ಯಾವ ವಿಷಯವು ಗ್ರಂಥದ ಅಧ್ಯಯನದಲ್ಲಿ ವ್ಯಕ್ತಿಯನ್ನು ಪ್ರೇರೇಪಿಸಿತೋ ಅದು ವಿಷಯ, ಆ ವಿಷಯವು ಈ ಗ್ರಂಥದಿಂದಲೇ ಸಾಧ್ಯ(ಪ್ರಾಪ್ಯ)ವಾಗ- ಬೇಕು ಎಂದು ಒಟ್ಟು ಭಾವ.

**ಚ ತಸ್ಯ ತದಿಷ್ಟಮಿ ಇತಿ ಸರ್ವಥಾ ತೇನ ವಿಷಯಾದಿಸಿದ್ಧ್ಯರ್ಥಂ ಧರ್ಮಾದಿಕಮಙ್ಗೀಕಾರ್ಯಮಿತಿ ।**

ಇಷ್ಟು ಹೇಳಿದಂತಾಗುವುದು- ಚಾರ್ವಾಕ ಶಾಸ್ತ್ರಕ್ಕೆ ಪ್ರಾತ್ಯಕ್ಷಿಕವಾದ ಪದಾರ್ಥಗಳನ್ನು ವಿಷಯ (ಚಾರ್ವಾಕ ಶಾಸ್ತ್ರವು ಪ್ರತ್ಯಕ್ಷಸಿದ್ಧವಾದ ಪದಾರ್ಥಗಳನ್ನು ಪ್ರತಿಪಾದಿಸುತ್ತದೆ) ಎಂದು ಹೇಳಲಾಗದು. ಆ ವಿಷಯಗಳು ಪ್ರತ್ಯಕ್ಷದಿಂದಲೇ ಸಿದ್ಧಿಸುತ್ತಿರುವಾಗ ಶಾಸ್ತ್ರದ ಅಪೇಕ್ಷೆ ಇಲ್ಲದಿರುವುದರಿಂದ. ಹಾಗೂ ದೃಷ್ಟವಾದ ಧನ ಮೊದಲಾದವುಗಳನ್ನು ಚಾರ್ವಾಕ ಶಾಸ್ತ್ರಕ್ಕೆ 'ಫಲ' ಎಂದೂ ಹೇಳಲಾಗದು. ಅವು ಅನ್ಯೋಪಾಯಗಳಿಂದ (ಕೃಷಿ-ವಾಣಿಜ್ಯಾದಿಗಳಿಂದ) ಲಭ್ಯವಾಗುವುದರಿಂದ. ಇದರಿಂದ ಸಂಬಂಧವೂ ಇಲ್ಲ[1]. ಆದುದರಿಂದ ಅತೀಂದ್ರಿಯವಾದ ಧರ್ಮಾದಿಗಳನ್ನು (ಶಾಸ್ತ್ರಕ್ಕೆ) ವಿಷಯವೆಂದು, ಸ್ವರ್ಗಾದಿಗಳನ್ನು ಫಲವೆಂದು ಅಂಗೀಕರಿಸಬೇಕು. ಇದನ್ನಾದರೂ ಒಪ್ಪದಿದ್ದಲ್ಲಿ ಆಗ (ಚಾರ್ವಾಕನ) ಶಾಸ್ತ್ರವು, ಕಾಕದಂತಪರೀಕ್ಷಾ ಗ್ರಂಥದಂತೆ, ನಿರ್ವಿಷಯ ನಿಷ್ಫಲವಾಗುವುದರಿಂದ 'ಅಶಾಸ್ತ್ರ' ಎಂದಾಗಬೇಕಾದೀತು. ಏಕೆಂದರೆ '(ಶಾಸ್ತ್ರವನ್ನು) ಹೇಳುವವರಿಗೆ ಕೇಳುವವರಿಗೆ ಅಭಿಮತವಾದ, ಮತ್ತೊಂದರಿಂದ ಸಾಧ್ಯವಾಗದ ಫಲವನ್ನು ಉದ್ದೇಶಿಸಿ,

1. ಗ್ರಂಥದಲ್ಲಿ ಪ್ರತಿಪಾದಿಸುವದನ್ನು 'ವಿಷಯ' ಎನ್ನುತ್ತಾರೆ. ಆ ವಿಷಯವು ಮತ್ತೊಂದರಿಂದ ಪ್ರತಿಪಾದಿತವಾಗಿರಬಾರದು. ಹಾಗೆಯೇ ಗ್ರಂಥಾಧ್ಯಯನದಿಂದ ಏನಾದರೂ ಪ್ರಯೋಜನವಿರಬೇಕು. ಆ ಪ್ರಯೋಜನವು ಉಪಾಯಾಂತರಗಳಿಂದ ಸಿದ್ಧವಾಗಬಾರದು. ಪ್ರಕೃತ ಚಾರ್ವಾಕನು ಅತೀಂದ್ರಿಯ ಪದಾರ್ಥಗಳನ್ನು ಒಪ್ಪಿಲ್ಲ. ಹಾಗಾಗಿ ಅವುಗಳನ್ನು ಆತನ ಶಾಸ್ತ್ರವು ಪ್ರತಿಪಾದಿಸಲಾರದು. ಇನ್ನು ಇಂದ್ರಿಯಗೋಚರವಾದದ್ದನ್ನು ಪ್ರತಿಪಾದಿಸುವದು ಎಂದು ಹೇಳಬೇಕು. ಅವುಗಳನ್ನು ತಿಳಿಯಲು ಶಾಸ್ತ್ರದ ಅಗತ್ಯವಿಲ್ಲ. ಹಾಗೆಯೇ ಅತೀಂದ್ರಿಯವಾದ ಸ್ವರ್ಗಾದಿಗಳನ್ನು ಚಾರ್ವಾಕನು ಒಪ್ಪಿಲ್ಲವಾದುದರಂದ ಅವುಗಳು ಶಾಸ್ತ್ರಾಧ್ಯಯನದಿಂದ ಪ್ರಾಪ್ತವಾಗುತ್ತವೆ ಎನ್ನುವಂತಿಲ್ಲ. ಇನ್ನು ಪ್ರತ್ಯಕ್ಷಗೋಚರವಾದ ಧನಾದಿಗಳು ಶಾಸ್ತ್ರಾಭ್ಯಾಸದ ಫಲ ಎಂದೂ ಹೇಳಲಾಗದು. ಅವುಗಳು ಕೃಷಿ, ವಾಣಿಜ್ಯ ಮುಂತಾದವುಗಳಿಂದ ಲಭ್ಯವಾಗುವವು. ಹೀಗಾಗಿ ಶಾಸ್ತ್ರಕ್ಕೆ ವಿಷಯವಿಲ್ಲ. ಫಲವೂ ಇಲ್ಲ. ವಿಷಯವಿದ್ದಲ್ಲಿ, ಶಾಸ್ತ್ರವು-ಪ್ರತಿಪಾದಕ, ವಿಷಯವು-ಪ್ರತಿಪಾದ್ಯ , ಫಲವು-ಪ್ರಾಪ್ಯ , ಶಾಸ್ತ್ರವು-ಪ್ರಾಪಕ ಎಂದು ಸಂಬಂಧವನ್ನು ಹೇಳಲು ಅವಕಾಶವಿತ್ತು. ಅದು ಇಲ್ಲಿ ಅಸಾಧ್ಯ ಎಂದು ಭಾವ.

ಫಲಪ್ರಾಪ್ತಿಗೆ ಕಾರಣವಾದ, ಬೇರೇ ಪ್ರಮಾಣಗಳಿಂದ ಅಪ್ರತಿಪಾದಿತವಾದ ವಿಷಯವನ್ನು ಪ್ರತಿಪಾದಿಸುವ ವಾಕ್ಯಗಳ ಸಮೂಹವನ್ನು ಶಾಸ್ತ್ರ' ಎಂದು ಕರೆಯುತ್ತಾರೆ. ಉದಾಹರಣೆಗೆ – ಚರಕಸಂಹಿತ[1] ಮುಂತಾದವು. ಆದುದರಿಂದ (ಚಾರ್ವಾಕನ) ಶಾಸ್ತ್ರವು ಅಶಾಸ್ತ್ರವಾಗಲು (ಶಾಸ್ತ್ರಾಭಾಸವಾಗಲು) ಚಾರ್ವಾಕನನ್ನು 'ಅಶಾಸ್ತ್ರಿ' ಎಂದು ವ್ಯವಹರಿಸಲಾಗುವುದು. ಇದು ಆತನಿಗೆ ಇಷ್ಟವಲ್ಲ. ಆದುದರಿಂದ ವಿಷಯಾದಿಗಳ ಸಿದ್ಧಿಗಾಗಿ (ಅತೀಂದ್ರಿಯವಾದ) ಧರ್ಮಾದಿಗಳನ್ನು ಒಪ್ಪಬೇಕು ಎಂದು.

**ಚಾರ್ವಾಕಶಾಸ್ತ್ರದಿಂದ ಲೋಕೋಪಕಾರವಿಲ್ಲ-**

**ನ ಚ ತೇನ ಲೋಕೋಪಕಾರಃ । ಧರ್ಮಾಧರ್ಮಾಭಾವಜ್ಞಾನೇ ಪರಸ್ಪರಹಿಂಸಾದಿನಾಽಪಕಾರಸ್ಯೈವ ಪ್ರಾಪ್ತೇಃ ॥**

ಆದರಿಂದ (ಶಸ್ತ್ರಕಾರನಿಂದ, ರಚಿತವಾದ ಚಾರ್ವಾಕಶಾಸ್ತ್ರದಿಂದ) ಪ್ರಪಂಚಕ್ಕೆ ಉಪಕಾರವಾಗದು. ಧರ್ಮಾಧರ್ಮಗಳು ಇಲ್ಲ ಎಂಬ ಭಾವನೆಯು ಉಂಟಾದಲ್ಲಿ ಪರಸ್ಪರ ಹಿಂಸಾದಿಗಳಿಂದ (ಜನರಿಗೆ) ಅಪಕಾರವೇ ಸಂಭವಿಸುವುದರಿಂದ.

**ನನು, ಧರ್ಮಾದ್ಯನಙ್ಗೀಕಾರೇಽಪಿ ನ ಶಾಸ್ತ್ರಸ್ಯ ವಿಷಯಾದಿ-ಶೂನ್ಯತ್ವಮಾಪದ್ಯತೇ, ಧರ್ಮಾದ್ಯಭಾವಸ್ಯೈವ ವಿಷಯತ್ವಾತ್ । ನ ಚ 'ಧರ್ಮಾದಿಕಂ ಪಶ್ವಾದಿಭಿರಿವ ಸ್ವಭಾವತ ಏವ ಅಪ್ರತಿಪನ್ನಮ್, ಇತಿ ಕಿಂ ತದಭಾವಪ್ರತಿಪಾದನೇನ ?' ಇತಿ ವಾಚ್ಯಮ್ । ವೇದಾದಿಜನಿತಯಾ ಭ್ರಾಂತ್ಯಾ ಧರ್ಮಾದಿಸದ್ಭಾವಸ್ಯ ಪ್ರಸಕ್ತತ್ವೇನ 'ನಾಯಂ ಸರ್ಪಃ' ಇತಿವತ್, ತದಭಾವಪ್ರತಿಪಾದನಸ್ಯೋಪಪನ್ನತ್ವಾತ್ । ಫಲಂ ಚ ಲೋಕಸ್ಯ ನಿರಂಕುಶಃ ಕಾಮೋಪಭೋಗೋ ದುಃಖನಿವೃತ್ತಿಶ್ಚ । ಯದ್ಯಪಿ ಶಾಸ್ತ್ರಂ ನ ಕಾಮಾನ್ ದದಾತಿ, ತೇಷಾಮರ್ಥೇನೈವ ಲಭ್ಯತ್ವಾತ್ । ನಾಪಿ ಭೋಜಯತಿ, ರಾಗತ**

---

1. ಚರಕಸಂಹಿತೆಯು- ವೈದ್ಯಶಾಸ್ತ್ರ. ಈ ಶಾಸ್ತ್ರಕ್ಕೆ ನಿದಾನವು ವಿಷಯ. ಆರೋಗ್ಯ ಅದರ ಫಲ. ನಿದಾನವು ಮತ್ತೆ ಬೇರೆ ಶಾಸ್ತ್ರಗಳಿಂದ ಅವಿದಿತವಾಗಿದೆ, ಹಾಗೂ ಆರೋಗ್ಯವು ವೈದ್ಯಶಾಸ್ತ್ರದಿಂದ ತಿಳಿಯುವ ಔಷಧದಿಂದಲೇ ಪ್ರಾಪ್ತವಾಗುವುದು, ಇತರ ಉಪಾಯಗಳಿಂದ ಅಪ್ರಾಪ್ಯವಾಗಿದೆ ಎಂದು ಭಾವ.

**ಏವ ತತ್ಸಂಭವಾತ್ । ನಾಪ್ಯೌಷಧಾದಿವತ್ ದುಃಖಂ ಶಮಯತಿ, ತಥಾऽಪಿ ಧರ್ಮಾದಿಸದ್ಭಾವಭ್ರಾಂತ್ಯಾ ಕೇಚಿತ್ ಕಾಮೋಪಭೋಗರುದ್ಧಾಃ, ಕೃಚ್ಛ್ರಚಾಂದ್ರಾಯಣಾದ್ಯನುಷ್ಠಾನನಿಮಿತ್ತಂ ದುಃಖಂ ಚ ಪ್ರಸಕ್ತಮ್ । ಧರ್ಮಾದ್ಯಭಾವಪ್ರತಿಪಾದನೇನ ತು ಭ್ರಾಂತೌ ನಿವೃತ್ತಾಯಾಂ ಯಥೇಷ್ಟಕಾಮೋಪಭೋಗೋ ದುಃಖಾದ್ಯನುದಯಶ್ಚ ಸ್ಯಾತ್ । ಶಾಸ್ತ್ರಪ್ರಣೇತುಸ್ತು ಲೋಕೋಪಕಾರಃ ಫಲಮ್ । ಉಪಕೃತಾಶ್ಚ ಲೋಕಾ 'ಅಸ್ಮಾಕಮಯಂ ಕಾಮೋಪಭೋಗೋಪರೋಧಂ ಧರ್ಮಾದ್ಯನುಷ್ಠಾನ-ಕ್ಲೇಶಾದಿಕಂ ಚ ನಿವಾರಿತವಾನ್' ಇತ್ಯನುರಾಗಿಣೋ ಭವಂತಿ । 'ಜನಾನುರಾಗಪ್ರಭವಾಶ್ಚ ಸಂಪದ' ಇತಿ, ತತ್ರಾऽಹ - 'ನ ಚ ತೇನ' ಇತಿ ॥**

ಸರಿ, ಧರ್ಮಾದಿಗಳನ್ನು (ಅತೀಂದ್ರಿಯ ಪದಾರ್ಥಗಳನ್ನು) ಒಪ್ಪದಿದ್ದರೂ ಶಾಸ್ತ್ರಕ್ಕೆ ವಿಷಯಾದಿ ರಾಹಿತ್ಯವನ್ನು ಆಪಾದಿಸಲಾಗದು, 'ಧರ್ಮಾದಿಗಳು ಇಲ್ಲ' ಎನ್ನುವುದೇ (ಶಾಸ್ತ್ರದ) ವಿಷಯವಾದುದರಿಂದ. ಸ್ವಾಭಾವಿಕವಾಗಿ ಪಶ್ವಾದಿಗಳೂ ಸಹ 'ಧರ್ಮಾದಿಗಳು ಇಲ್ಲ' ಎಂದು ಅರಿತಿರುವಾಗ, ಅದರ (ಧರ್ಮಾದಿಗಳ) ಅಭಾವದ ಪ್ರತಿಪಾದನವು ಏಕೆ? ಎಂದು ಪ್ರಶ್ನಿಸುವಂತಿಲ್ಲ. ವೇದಾದಿಗಳಿಂದ ಉಂಟಾದ ಭ್ರಾಂತಿಯಿಂದ 'ಧರ್ಮಾದಿಗಳು ಉಂಟು' ಎಂಬ ಭಾವನೆ ಪ್ರಸಕ್ತವಾಗಿದೆ. 'ಇದು ಹಾವಲ್ಲ' ಎನ್ನುವಂತೆ (ಬಾಧಕಜ್ಞಾನದಂತೆ) ಧರ್ಮಾದಿಗಳ ಅಭಾವವನ್ನು ಪ್ರತಿಪಾದಿಸುವುದು ಯೋಗ್ಯವಾಗುವುದು[1]. ಇನ್ನು (ಶಾಸ್ತ್ರಕ್ಕೆ) ಫಲವಾದರೋ ಜನರಿಗೆ ಅಡೆತಡೆಗಳಿಲ್ಲದಂತೆ ಅಪೇಕ್ಷಿತವಾದುದನ್ನು ಭೋಗಿಸುವುದು, (ಆದ್ದರಿಂದ) ದುಃಖದ ನಿವೃತ್ತಿಯೂ ಆಗದು. ವಸ್ತುತಃ ಶಾಸ್ತ್ರವು (ಶಾಸ್ತ್ರಾಭ್ಯಾಸಿಗೆ) ಅಪೇಕ್ಷಿತವಾದದ್ದನ್ನು ನೀಡದು, ಅವುಗಳು (ಅಪೇಕ್ಷಿತ ಪದಾರ್ಥಗಳು) ಧನಾದಿಗಳಿಂದಲೇ ಪ್ರಾಪ್ತವಾಗುವವು. ಮತ್ತು ಶಾಸ್ತ್ರವೇನೂ (ಭೋಗಗಳನ್ನು) ಉಣಿಸುವುದಿಲ್ಲ. (ವಿಷಯಗಳಲ್ಲಿನ) ಆಸಕ್ತಿಯೇ ಅದರಲ್ಲಿ (ಭೋಗದಲ್ಲಿ ) ತೊಡಗಿಸುವುದು. ಔಷಧಾದಿಗಳಂತೆ

---

1. ಕತ್ತಲೆಯಲ್ಲಿ ಹಗ್ಗವನ್ನು ಕಂಡ ವ್ಯಕ್ತಿಯೋರ್ವನು ಹಾವು ಎಂದು ಭ್ರಾಂತನಾಗಿ ಹೆದರಿ ನಿಂತಾಗ 'ಇದು ಹಾವಲ್ಲ ಹಗ್ಗ'ಎಂದು ತಿಳಿಸುವಂತೆ, ಧರ್ಮವು ಉಂಟು ಎಂದು ಭ್ರಾಂತರಾದವರಿಗೆ ಧರ್ಮಾಭಾವದ ಉಪದೇಶವು ಅಗತ್ಯವಾಗಿರುವುದು ಎಂದು ಭಾವ.

(ಶಾಸ್ತ್ರವೇನು) ದುಃಖವನ್ನು ಪರಿಹರಿಸುವುದಿಲ್ಲ. ಹೀಗಿದ್ದರೂ ಧರ್ಮಾದಿಗಳು ಇವೆ ಎಂಬುವ ಭ್ರಾಂತಿಯಿಂದ ಕೆಲವರು ಅಪೇಕ್ಷಿತವಾದ (ಕೆಲವು) ಭೋಗಗಳಿಂದ ಹಿಂದೆ ಸರಿದಿರುವರು. ಅತಿಕಷ್ಟವಾದ ಚಾಂದ್ರಾಯಣ ಮೊದಲಾದವುಗಳನ್ನು (ವ್ರತವನ್ನು) ಆಚರಿಸುವುದರಿಂದ ದುಃಖಿಗಳಾಗಿರುವರು. ಧರ್ಮಾದಿಗಳು ಇಲ್ಲ ಎಂದು ಪ್ರತಿಪಾದಿಸಿದ್ದರಿಂದ ಭ್ರಾಂತಿ ಪರಿಹಾರವಾಗಲು, ಅಪೇಕ್ಷಿತವಾದವು ಗಳನ್ನು ಭೋಗಿಸುವರು. ದುಃಖಾದಿಗಳ (ವ್ರತಾನುಷ್ಠಾನಾದಿ ನಿಮಿತ್ತ ಕ್ಲೇಶಗಳ) ಪರಿಹಾರವಾಗುವುದು. ಶಾಸ್ತ್ರವನ್ನು ರಚಿಸಿದವಗೆ, ಜನರಿಗೆ ಉಪಕಾರ ಮಾಡುವುದೇ ಫಲ. ಉಪಕೃತರಾದ ಜನರು 'ಈತ ನಮಗೆ ಕಾಮೋಪಭೋಗಕ್ಕೆ ಇದ್ದ ಅಡ್ಡಿಯನ್ನು, ಧರ್ಮಾದಿಗಳ ಅನುಷ್ಠಾನದ ಕ್ಲೇಶಗಳನ್ನು ಸಹ ನಿವಾರಿಸಿರುವನು' ಎಂದು (ಶಾಸ್ತ್ರಕಾರನಲ್ಲಿ) ಅನುರಾಗವನ್ನು ಹೊಂದುವರು 'ಜನಾನುರಾಗವು ಸಂಪತ್ತಿಗೆ ಕಾರಣ' (ಎಂದು ನಾಣ್ನುಡಿ) ಎಂದು (ಚಾರ್ವಾಕನ ಪ್ರಶ್ನೆ), ಇಲ್ಲಿ ಉತ್ತರಿಸುತ್ತಾರೆ- 'ನ ಚ ತೇನ' ಎನ್ನುವುದರಿಂದ.

#### ಚಾರ್ವಾಕಶಾಸ್ತ್ರದಿಂದ ಲೋಕಕ್ಕೆ ಅಪಕಾರ

**ತೇನ** - ಶಾಸ್ತ್ರಪ್ರಣೇತ್ರಾ, **ತೇನ** - ಶಾಸ್ತ್ರೇಣ ಪ್ರಣೇತೇನ ಲೋಕೋಪಕಾರಃ ಕೃತೋ ಭವತೀತಿ ನ ಚ ವಾಚ್ಯಮಿತ್ಯರ್ಥಃ । ಲೋಕ ಪ್ರಯೋಜನಾದಿಪ್ರತಿಷೇಧಸ್ಯಾಪ್ಯುಪಲಕ್ಷಣಮೇತತ್ । ಕುತೋ ನ? ಇತ್ಯತ ಆಹ - **'ಧರ್ಮ..'** ಇತಿ । ಜ್ಞಾನೇ ಲೋಕಸ್ಯ ಲೋಕಾಯತ-ಶಾಸ್ತ್ರೇಣೋತ್ಪಾದಿತೇ ಸತಿ ಹಿಂಸಾದಿನಾ ಪ್ರಾಪ್ತೇನ । ಏತದುಕ್ತಂ ಭವತಿ- ಯದಿ ಧರ್ಮಾದಿಜ್ಞಾನಂ ಪ್ರಮಾ ವಾ ಯದಿ ವಾ ಭ್ರಾಂತಿಃ ಸರ್ವಥಾ ಸರ್ವಮರ್ಯಾದಾಸ್ಥಿತಿಹೇತುತ್ವೇನ ಮಹಾನ್ತಮನರ್ಥಂ ಪ್ರರ್ಯಹಾರ್ಷೀತ್ । ಇದಾನೀಂ ತು ಧರ್ಮಾದ್ಯಭಾವಜ್ಞಾನೇನ ಧನ-ವನಿತಾದ್ಯಪಹಾರಾರ್ಥಿನೋ ಲೋಕಸ್ಯ ಪರಸ್ಪರಹಿಂಸಾದಿಕಂ ಪ್ರಾಪ್ನೋತ್ಯೇವ । ತಥಾ ಚಾಪಕಾರ ಏವ ಲೋಕಸ್ಯಾನೇನ ಕೃತೋಭವತಿ । 'ನ ಹಿ ಕಪರ್ದಿಕಾಲಾಭಾರ್ಥಂ ಲಕ್ಷಲಾಭಂ ನಾಶಯನ್ನುಪಕಾರೀ ಭವತಿ ।' ತತಶ್ಚ ಶ್ರೋತೃಣಾಮಿದಮಫಲಮೇವ । ಫಲಸಂಬಂಧಿನ ಏವ ವಿಷಯತ್ವೇನ

ನಿರ್ವಿಷಯತ್ವಂ ಚ । ಶಾಸ್ತ್ರಪ್ರಣೇತರಿ ಚ ಲೋಕಸ್ಯಾಪಕಾರಿತ್ವಬುದ್ಧ್ಯಾ ದ್ವೇಷ ಏವ ಭವತಿ ಕುತೋಽನುರಾಗಃ? ಇತಿ ।

ತೇನ- ಶಾಸ್ತ್ರಕಾರನಿಂದ, ತೇನ- ರಚಿತವಾದ ಶಾಸ್ತ್ರದಿಂದ, ಲೋಕೋಪಕಾರವು ಮಾಡಿದಂತಾಯಿತು ಎಂದು ಹೇಳಲಾಗದು ಎಂದು ಅರ್ಥ.(ಶಾಸ್ತ್ರರಚನೆಯಿಂದ) ಜನರಿಗೆ ಉಂಟಾಗಬಹುದಾದ ಪ್ರಯೋಜನಾದಿಗಳ ನಿಷೇಧಕ್ಕೂ ಸೂಚಕವಾಗಿದೆ[1]. ಏಕೆ (ಉಪಕಾರಕ)ಆಗಿಲ್ಲ? ಉತ್ತರಿಸುತ್ತಾರೆ. 'ಧರ್ಮಾದ್ಯ.....' ಎನ್ನುವುದರಿಂದ. ಚಾರ್ವಾಕ ಶಾಸ್ತ್ರದಿಂದ ಜನರಿಗೆ (ಧರ್ಮಾದಿಗಳು ಇಲ್ಲ ಎಂಬ) ಜ್ಞಾನಬಂದಲ್ಲಿ ಹಿಂಸಾದಿಗಳೇ ಒದಗುವುದರಿಂದ.

ಇಷ್ಟು ತಿಳಿಸಿದಂತಾಗುವುದು- ಧರ್ಮಾದಿಗಳ ಜ್ಞಾನವು ಯಥಾರ್ಥವೋ ಭ್ರಮೆಯೋ, ಆದರೆ ನಿಶ್ಚಿತವಾಗಿಯೂ (ಈ ಧರ್ಮಾದಿಜ್ಞಾನವು) ಈ ಸಮಸ್ತ ಜಗದ ಮರ್ಯಾದೆಯ (ನೀತಿನಿಯಮಗಳ) ಸ್ಥಿತಿಗೆ ಕಾರಣವಾಗಿರುವುದರಿಂದ ಭಾರೀ ಅನರ್ಥದ ಪರಿಹಾರಕ್ಕೆ ಕಾರಣವಾಗಿದೆ[2]. ಈಗಲಾದರೋ ಧರ್ಮಾದಿಗಳು ಇಲ್ಲ ಎಂಬ ಜ್ಞಾನ ಉಂಟಾಗಿ (ಈ ಜಗದ) ಎಲ್ಲ ನಿಯಮಗಳು ನಷ್ಟವಾಗಿ ಹಣ-ಹೆಣ್ಣು ಮೊದಲಾದವುಗಳನ್ನು ಅಪಹರಿಸಬೇಕೆಂಬ ದುರಭಿಲಾಷದಿಂದ ಜನತೆಗೆ ಪರಸ್ಪರ ಹಿಂಸಾದಿಗಳೇ ಒದಗುವುದು. ಹೀಗಾದಲ್ಲಿ ಇದರಿಂದ (ಈ ಶಾಸ್ತ್ರದ ಉಪದೇಶದಿಂದ) 'ಒಂದು ಕವಡೇಕಾಸಿನ ಲಾಭಕ್ಕಾಗಿ, ಒಂದು ಲಕ್ಷಲಾಭವನ್ನು ಹಾಳುಗೆಡವಿದವನು ಉಪಕಾರಿಯಾಗಲಾರನು'[3].

---

1. 'ನ ಚ ಲೋಕೋಪಕಾರಃ' ಎನ್ನುವ ಮೂಲವೂ ' ಪ್ರಜೆಗಳಿಗೆ ನಿರಂಕುಶ ಭೋಗ, ಶಾಸ್ತ್ರಪ್ರಣೇತೃವಿಗೆ ಜನಾನುರಾಗ ಎಂಬ ಪ್ರಯೋಜನಗಳು ಇಲ್ಲ ಎನ್ನುವದನ್ನು ಸೂಚಿಸುತ್ತದೆ ಎಂದು ಭಾವ.

2. ಕಳ್ಳತನ ಸುಳ್ಳತನ ಸುಲಿಗೆ ಇವು ಪಾಪಕ್ಕೆ ಕಾರಣ. ಇದರಿಂದ ನರಕಾದಿಅನರ್ಥಗಳಾಗುತ್ತವೆ ಉಪಕಾರ ಅಹಿಂಸೆ ದಾನ ಮುಂತಾದವು ಸ್ವರ್ಗಕ್ಕೆ ಕಾರಣ ಎಂಬತ್ಯಾದಿ ನಂಬಿಕೆಯು ಜನಗಳ ನೆಮ್ಮದಿಯ ಬದುಕಿಗೆ ಕಾರಣವಾಗಿದೆ ಎಂದು ಭಾವ.

3. ಸ್ವೇಚ್ಛಾಚರಣವು ಆಪಾತತಃ ಖುಶಿಯನ್ನು ಇತ್ತರೂ, ಧನ-ವನಿತಾದಿಗಳ ನಾಶದಿಂದ, ಸಮಾಜದ ಸ್ವಾಸ್ಥ್ಯದ ನಾಶದಿಂದ ಅಪಾರ ಹಾನಿಯೇ ಸಂಭವಿಸುವುದರಿಂದ, ಲಾಭಕ್ಕಿಂತಲೂ ನಷ್ಟವೇ ಹೆಚ್ಚು ಎಂದು ಭಾವ.

ಆದುದರಿಂದ (ಚಾರ್ವಾಕ ಶಾಸ್ತ್ರದ) ಶ್ರೋತೃಗಳಿಗೆ ಫಲವಿಲ್ಲ ಎಂದಾಯಿತು (ಅನರ್ಥಫಲವು ಪ್ರಾಪ್ತವಾಯಿತು). ಫಲಕಾರಿಯಾದದ್ದು (ಶಾಸ್ತ್ರಕ್ಕೆ) ವಿಷಯವಾದುದರಿಂದ (ಚಾರ್ವಾಕಶಾಸ್ತ್ರವು) ನಿರ್ವಿಷಯವಾಯಿತು. ಇನ್ನು ಶಾಸ್ತ್ರವನ್ನು ರಚಿಸಿದವನಲ್ಲಿ ಜನತೆಗೆ 'ಅಪಕಾರೀ' ಎಂದು ಭಾವನೆ ಉಂಟಾದ್ದರಿಂದ ದ್ವೇಷಕ್ಕೇ ಕಾರಣವಾಗುವುದು, ಲೋಕಾನುರಾಗ ಎಲ್ಲಿಂದ ? ಎಂದು.

#### ಧರ್ಮಾದಿಗಳಲ್ಲಿನ ನಂಬಿಕೆಯಿಂದ ಸಮಾಜದಲ್ಲಿ ಸ್ವಾಸ್ಥ್ಯ

ನನು, ಅವಿವೇಕಿನಾಂ ಭವತು ಕೇಷಾಞ್ಚಿದ್ ದ್ವೇಷಃ, ವಿವೇಕಿನಸ್ತ್ವಸ್ಮತ್‌ಸುಖಾದ್ಯರ್ಥಮನೇನೋದ್ಯಮಃ ಕೃತಃ । ಯತ್ತು ಹಿಂಸಾದಿಕಂ ಪ್ರಾಪ್ತಂ ತದಸ್ಮತ್‌ಸಾಮರ್ಥ್ಯಾಭಾವನಿಬಂಧನಮ್ । ತತ್ರಾಯಂ ಕಿಂ ಕರೋತಿ? ಇತಿ ಮನ್ವಾನಾಽನುರಜ್ಯನ್ತ ಏವ । ಯಥಾ ಆರೋಗ್ಯಾರ್ಥಂ ಭಿಷಜೌಷಧೇ ದತ್ತೇ ಸ್ವಾಪರಾಧೇನ ಚಾನಿಷ್ಟೋತ್ಪಾದೇ ಜಾತೇ ನಾಮಯಾವೀ ತಸ್ಮೈ ದ್ರುಹ್ಯತಿ, ಕಿಂತು ಪ್ರತ್ಯುಪಕರೋತ್ಯೇವೇತಿ ಚೇನ್ನ । ತಥಾಪಿ ಸಮವ್ಯಯಫಲತ್ವೇನ ಶಾಸ್ತ್ರಕಾರೇಣ ನಿಷ್ಪ್ರಯೋಜನತ್ವಾತ್ । ಅಙ್ಗೀಕೃತ್ಯ ಚೇದಮುಕ್ತಂ, ವಿಷಮಶ್ಚಾಯಮುಪನ್ಯಾಸಃ - ನ ಹಿ ರೋಗಿಣೋಽಪ್ಯಪಥ್ಯಾಚರಣಂ ವೈದ್ಯನಿಮಿತ್ತಂ ಯೇನ ತಸ್ಮೈ ದ್ರುಹ್ಯೇತ್? 'ಹಿಂಸಾದಿಪ್ರಾಪ್ತಿಸ್ತು ಶಾಸ್ತ್ರನಿಮಿತ್ತಾ ಏವ' ಇತಿ ಸರ್ವೇಷಾಂ ದ್ವೇಷ ಏವ ಸ್ಯಾತ್ । ಯೇ ತು ಹಿಂಸಯಾ ಧನ-ವನಿತಾದಿಕಂ ಲಭನ್ತೇ ತೇಽಪಿ ಬಲವತ್ತರೈರನ್ಯೈರ್ಹಿಂಸ್ಯನ್ತ ಏವ । ನೈವಂ ದೃಶ್ಯತೇ ಚೇತ್ ಸತ್ಯಂ, ತದಾಸ್ತಿಕದರ್ಶನಾನಾಮನುನ್ಮೂಲಿತತ್ವಾತ್ , ತದನ್ಮೂಲನಾರ್ಥಶ್ಚ ಪರಸ್ಯ ಪ್ರಯತ್ನಃ ?

ಅವಿವೇಕಿಗಳಿಗೆ ದ್ವೇಷ ಬಂದೀತು, ವಿವೇಕಿಗಳಾದರೋ. ನಮ್ಮ ಸುಖಕ್ಕಾಗಿ ಈತ ಯತ್ನಿಸಿದ , ಆದರೆ ಏನು ಈ ಹಿಂಸಾದಿಗಳು ಒದಗಿತೋ ಇದು (ನಮ್ಮ) ದೌರ್ಬಲ್ಯ ನಿಮಿತ್ತವಾದದ್ದು. ಈ ವಿಷಯದಲ್ಲಿ ಈತ ಏನು ಮಾಡಿಯಾನು? ಎಂದು ಭಾವಿಸಿ (ಶಾಸ್ತ್ರಕಾರನನ್ನು) ಪ್ರೀತಿಸುವುದೇ ದಿಟ. ಹೇಗೆ ಆರೋಗ್ಯಕ್ಕಾಗಿ

ವೈದ್ಯನೋರ್ವ ಔಷಧವನ್ನು ನೀಡುತ್ತಾನೆ. ತನ್ನ ಅಪರಾಧದಿಂದ [1] ಅನಿಷ್ಟ-ವುಂಟಾದಲ್ಲಿ, ರೋಗಿಯು ಅವನಿಗೆ (ವೈದ್ಯನಿಗೆ) ದ್ರೋಹ ಬಗೆಯಲಾರನು, ವಸ್ತುತಃ ಪ್ರತಿಯಾಗಿ (ವೈದ್ಯನಿಗೆ) ಉಪಕರಿಸುವನು, ಎಂದು ಎನ್ನಲಾಗದು. ಹೀಗಾದರೂ ಶಾಸ್ತ್ರಕಾರನಿಗೆ ಲಾಭ-ನಷ್ಟಗಳು ಸಮವಾದುದರಿಂದ ನಿಷ್ಪ್ರಯೋಜಕ[2] (ನಿನ್ನ ವಾದವನ್ನು) ಸರಿ ಎಂದು ಒಪ್ಪಿ ಇದನ್ನು ಹೇಳಲಾಗಿದೆ. (ವಸ್ತುತಃ) ಈ ವಾದಮಂಡನೆಯು ವಿಷಮವಾಗಿದೆ. ರೋಗಿಯು ಅಪಥ್ಯವನ್ನು ಮಾಡಲು ವೈದ್ಯನು ಕಾರಣನಲ್ಲ. ಹಾಗಾಗಿದ್ದಲ್ಲಿ (ರೋಗಿಯು) ವೈದ್ಯನನ್ನು ದ್ವೇಷಿಸುತ್ತಿದ್ದನು[3] ಪ್ರಕೃತದಲ್ಲಿ ಹಿಂಸಾದಿಗಳು ಉಂಟಾಗಲು ಕಾರಣ ಶಾಸ್ತ್ರವೇ, ಆದುದರಿಂದ ಎಲ್ಲರೂ ದ್ವೇಷಿಸುವರು. (ಯಾರು ಬಲಿಷ್ಠರೋ ಅವರು ಹಿಂಸಾದಿಗಳಿಂದ ಪರರ ಧನಾದಿಗಳನ್ನು ಅಪಹರಿಸಿ ಸಮೃದ್ಧರಾಗಿರುವರೋ ಅವರು ಶಾಸ್ತ್ರಕಾರರನ್ನು ಅಭಿನಂದಿಸುವರು ಎನ್ನುವದೂ ಸರಿಯಲ್ಲ ಎನ್ನುತ್ತಾರೆ.) ಯಾರು ಹಿಂಸಾದಿಗಳಿಂದ ಹಣ-ಹೆಣ್ಣನ್ನು ಹೊಂದಿರುವರೋ, ಅವರೂ ಸಹ ಬೇರೆ ಬಲಿಷ್ಠರಿಂದ ಹಿಂಸೆಗೆ ಒಳಗಾಗುವರು. ಪ್ರಕೃತ ಪ್ರಪಂಚದಲ್ಲಿ ಹಾಗೆ ಕಂಡಿಲ್ಲವಲ್ಲ ? (ನಾಸ್ತಿಕ ಪ್ರವೃತ್ತಿಯಿದ್ದರೂ ಈ ಜಗದಲ್ಲಿ ಪರಸ್ಪರ ಕಿತ್ತಾಟವು ಕಂಡಿಲ್ಲ ಎನ್ನುವ ಸಂದೇಹಕ್ಕೆ ಉತ್ತರಿಸುವರು) ಅಹುದು, ಇನ್ನೂ ಈ ಜಗದಲ್ಲಿ ಆಸ್ತಿಕರ ವಾದಗಳು ಬೇರು ಸಹಿತ ಹೋಗದಿರುವುದರಿಂದ, ಈ ಆಸ್ತಿಕವಾದವನ್ನು ಬೇರು ಸಹಿತ ಕೀಳಲುತಾನೆ ಪರವಾದಿಯ(ಚಾರ್ವಾಕನ) ಪ್ರಯತ್ನ ?

---

1. ಹೆಚ್ಚಿನ ಪ್ರಮಾಣದಿಂದ ಔಷಧವನ್ನು ಸೇವಿಸಿದ್ದೋ ಔಷಧವನ್ನು ಸೇವಿಸದೇ ಇರುವುದೋ, ಅಪಥ್ಯವಾದ ಪದಾರ್ಥವನ್ನು ಸೇವಿಸುವದೋ ಮುಂತಾದ ರೋಗಿಯ ಅಪರಾಧದಿಂದ.
2. ಕೆಲವರು ಶಾಸ್ತ್ರಕಾರನನ್ನು ದ್ವೇಷಿಸುವರು ಮತ್ತೆ ಕೆಲವರು ಪ್ರೀತಿಸಬಹುದು. ಹೀಗಾಗಿ ಸಮನ್ವಯ ಫಲವಾಯಿತು. ಆದುದರಿಂದ ಈ ಶಾಸ್ತ್ರದಿಂದ ಶಾಸ್ತ್ರಕಾರನಿಗೆ ಲಾಭವಿಲ್ಲ. ತನ್ನಿಮಿತ್ತ ಶಾಸ್ತ್ರರಚನೆಯಲ್ಲಿ ಚಾರ್ವಾಕನು ಪ್ರವೃತ್ತನಾಗಲಾರನು ಎಂದು ಭಾವ.
3. ರೋಗಿಯು ತನ್ನ ನಾಲಿಗೆಯ ರುಚಿಗೆ ಅಪಥ್ಯ ಪದಾರ್ಥವನ್ನು ತಿಂದು, ರೋಗವನ್ನು ಉಲ್ಬಣಿಸಿಕೊಂಡಿರುವನು.ಇದಕ್ಕೆ ವೈದ್ಯನನ್ನು ಹೊಣೆಗಾರನನ್ನಾಗಿ ಮಾಡಲು ಶಕ್ಯವಿಲ್ಲ ಎಂದು ಭಾವ.

**ಚಾರ್ವಾಕಶಾಸ್ತ್ರಕಾರನಿಗೆ ಏನೂ ಪ್ರಯೋಜನವಿಲ್ಲ**

**ನ ಚೋಪಕಾರೇಣ ತಸ್ಯ ಪ್ರಯೋಜನಮ್, ಅದೃಷ್ಟಾಭಾವಾತ್ । ಅತೋ ಧರ್ಮಾದ್ಯಭಾವಂ ವದತಾ ಸ್ವಸಮಯಸ್ಯಾಽನರ್ಥಕ್ಯ-ಮಙ್ಗೀಕೃತಮೇವೇತಿ ನಾಸೌ ಸಮಯೀ ॥**

(ಲೋಕಕ್ಕೆ) ಉಪಕರಿಸುವುದರಿಂದ ಆತನಿಗೆ (ಚಾರ್ವಾಕದರ್ಶನದ ಉಪದೇಶಕನಿಗೆ) ಪ್ರಯೋಜನವಿಲ್ಲ, (ಆತನ ಅಭಿಮತದಂತೆ) ಅದೃಷ್ಟವಾದದು ಇಲ್ಲದಿರುವುದರಿಂದ. ಧರ್ಮಾದಿಗಳು ಇಲ್ಲ ಎಂದು ಹೇಳುವವನಿಂದ ತನ್ನ ದರ್ಶನಕ್ಕೆ ಫಲರಾಹಿತ್ಯವನ್ನು ಒಪ್ಪಿದಂತೆಯೇ, ಆದುದರಿಂದ ಆತನು ದಾರ್ಶನಿಕನಾಗಲಾರ.

**ಟೀಕಾ-** **ನನು, ಅಪಕುರ್ವನ್ತು ಸರ್ವೇ ತಥಾಽಪಿ ಹಿತಬುದ್ಧ್ಯಾ ಶಾಸ್ತ್ರಂ ಪ್ರಣೀತವತೋಽಸ್ಯ ಉಪಕಾರಿತ್ವಮಸ್ತ್ಯೇವ । 'ನ ಹಿ ಪಂಕಮಗ್ನಾಂ ಗಾಮುದ್ದಿಧೀರ್ಷುರ್ಯದಿ ಗವಾ ಶೃಂಗೇಣ ಹನ್ಯತೇ ತರ್ಹಿ ಗೋರಪಕಾರೀ ಭವತಿ?' ಇತಿ ಚೇತ್ । ತದಾ ವಕ್ತವ್ಯಂ, ಸಃ ತಾದೃಗುಪಕಾರಃ ಕಿಂ ಶಾಸ್ತ್ರಂ ಪ್ರಣಯತಃ ಸ್ವಯಮೇವ ಪ್ರಯೋಜನರೂಪ ಉತ ತೇನಾನ್ಯತ್ ಪ್ರಯೋಜನಂ ಭವತಿ? ನಾಽದ್ಯಃ- ಸುಖಪ್ರಾಪ್ತ್ಯಾದೀತರತ್ವಾತ್ । ದ್ವಿತೀಯೇಽಪಿ ಕಿಂ ದೃಷ್ಟಂ ಪ್ರಯೋಜನಮದೃಷ್ಟಂ ವಾ ? ಆದ್ಯಂ ದೂಷಯತಿ 'ನ ಚ' ಇತಿ । ತಸ್ಯ- ಶಾಸ್ತ್ರಪ್ರಣೇತುಃ । ಉಕ್ತಪ್ರಕಾರೇಣ ಸರ್ವವಿದ್ವೇಷವಿಷಯತ್ವಾತ್ ಪ್ರಣಾಡಿಕಾನ್ತರಾಭಾವಾದಿತಿ ಭಾವಃ ।**

**ಅನು.-** ಸರಿ, (ಸಾಮಾಜಿಕರು) ಎಲ್ಲರೂ ಅಪಕಾರವನ್ನು ಮಾಡಲಿ, ಆದರೆ ಹಿತ ಬುದ್ಧಿಯಿಂದ ಶಾಸ್ತ್ರವನ್ನು ರಚಿಸಿದ ಚಾರ್ವಾಕನಿಗೆ ಉಪಕಾರಿ ಭಾವವು ಉಂಟೇಉಂಟು. ಕೆಸರಿನಲ್ಲಿ ಸಿಲುಕಿದ ಹಸುವನ್ನು ಮೇಲೆತ್ತಲು ಬಯಸಿದ ವ್ಯಕ್ತಿಯು ಅಕಸ್ಮಾತ್ ಆ ಹಸುವಿನ ಕೋಡಿನಿಂದ ತಿವಿಸಿಕೊಂಡಲ್ಲಿ, ಆತನು ಹಸುವಿನ ಅಪಕಾರಿಯಾಗುವನೇನು?[1] ಎಂದು ಪ್ರಶ್ನಿಸಿದಲ್ಲಿ, ಆತನಲ್ಲಿ ಈ ರೀತಿ

1. ಅರಿವಿಲ್ಲದ ಪ್ರಾಣಿಗಳು ಉಪಕಾರ ಮಾಡುವವರನ್ನೇ ಹಿಂಸಿಸುವುದು ಸಾಮಾನ್ಯ, ಆದರೆ ಪ್ರಾಣಿಗಳಿಗೆ ಉಪಕಾರ ಮಾಡಿದ್ದು ತಪ್ಪಲ್ಲ. ಅದರಂತೆ ಲೋಕೋಪಕಾರಮಾಡುವುದು ತಪ್ಪಲ್ಲ ಎಂದು ಭಾವ.

ಚರ್ಚಿಸಬೇಕು. ಆ ತರಹದ ಉಪಕಾರವು (ಸ್ವಚ್ಛಂದ ಕಾಮಭೋಗರೂಪವಾದ ಲೋಕೋಪಕಾರವು) ಶಾಸ್ತ್ರವನ್ನು ನಿರ್ಮಿಸಿದವಗೆ(ಚಾರ್ವಾಕನಿಗೆ) ಅದೇ (ಪರರಿಗೆ ಮಾಡಿದ ಉಪಕಾರವೇ) ಉಪಕಾರವೋ, ಅಥವಾ ಅದರಿಂದ ಬೇರೇ ಪ್ರಯೋಜನವಿದೆಯೋ ? ಮೊದಲಪಕ್ಷದಲ್ಲಿ(ಪರರಿಗೆ ಮಾಡಿದ ಉಪಕಾರವೇ ಪ್ರಯೋಜನವಲ್ಲ) ಸುಖಪ್ರಾಪ್ತಿ ಮೊದಲಾದವಲ್ಲವಾದುದರಿಂದ[1]. ಎರಡನೇ ಪಕ್ಷದಲ್ಲೂ ಸಹ (ಬೇರೇ ಪ್ರಯೋಜನವಿದೆ ಎನ್ನುವ ಪಕ್ಷದಲ್ಲಿ) ದೃಷ್ಟ ಪ್ರಯೋಜನವೋ ಅದೃಷ್ಟಪ್ರಯೋಜನವೋ? ಮೊದಲ ಪಕ್ಷವನ್ನು ನಿರಾಕರಿಸುತ್ತಾರೆ. 'ನ ಚ' ಎನ್ನುವುದರಿಂದ. ತಸ್ಯ- ಶಾಸ್ತ್ರವನ್ನು ರಚಿಸಿದವಗೆ. ಹಿಂದೆ ಹೇಳಿದಂತೆ ಎಲ್ಲರ ದ್ವೇಷಕ್ಕೆ ಗುರಿಯಾದುದುರಿಂದ (ಜನಾನುರಾಗಾದಿ ಪ್ರಯೋಜನವಿಲ್ಲ), ಬೇರೆ ಮತ್ತಾವ ರೀತಿಯೂ ಇಲ್ಲದುದರಿಂದ ಎಂದು ಭಾವ[2].

**ದ್ವಿತೀಯಾಭಾವೇ ಹೇತುಮಾಹ 'ಅದೃಷ್ಟಾ..' ಇತಿ । ನ ಕೇವಲಂ ಶಾಸ್ತ್ರಪ್ರಣೇತುಃ ಪ್ರಯೋಜನಾಭಾವಃ, ಕಿಂತು ತಸ್ಯಾಪಿ ಹಿಂಸಾದಿಪ್ರಾಪ್ತಿಃ ಅವರ್ಜನೀಯಾಽಅದೃಷ್ಟಾಭಾವಾದೇವೇತಿ । ಸಂಕ್ಷೇಪಕರಣೇ ಕಾರಣಂ ಸೂಚಯನ್, ಚಾರ್ವಾಕಸ್ಯಾಸಮಯಿತ್ವಾಪಾದನಮುಪಸಂಹರತಿ 'ಅತ' ಇತಿ । 'ಅವಿದ್ಯಮಾನೋಽರ್ಥೋ ವಿಷಯಃ ಪ್ರಯೋಜನಂ ಚ ಯಸ್ಯ' ತದ್ ಅನರ್ಥಕಂ ತಸ್ಯ ಭಾವಃ- ಆನರ್ಥಕ್ಯಮ್ । ಅಂಗೀಕೃತಮೇವ - ಅಂಗೀಕೃತಪ್ರಾಯಮೇವ । ಅದೃಷ್ಟವಿಷಯಾದ್ಯಭಾವಸ್ಯ ಸ್ವಯಮೇವ ಅಙ್ಗೀಕೃತತ್ವೇನ 'ಅರ್ಥಂ ತಾವದವಸಿತಂ ಭಾರಸ್ಯ' । 'ದೃಷ್ಟವಿಷಯಾದಿ-ನಿರಾಸಶ್ಚಾಯತ್ನಸಾಧ್ಯಃ' ಇತಿ 'ಪ್ರತಿವಾದಿನೋ ನಾತ್ರಾತ್ಯಂತಂ ಕೃತ್ಯಮ್'**

---

1. ಸುಖಪ್ರಾಪ್ತಿ, ಅಥವಾ ದುಃಖ ನಿವೃತ್ತಿ ರೂಪದಲ್ಲಿ ಪ್ರಯೋಜನಗಳಿರುವವು. ಪ್ರಕೃತ ಪರರಿಗೆ ಮಾಡಿದ ಉಪಕಾರವು, ಉಪಕಾರಮಾಡಿದ ವ್ಯಕ್ತಿಗೆ ಈ ಎರಡೂ ಆಗಿಲ್ಲವಾದುದರಿಂದ ಪ್ರಯೋಜನವಲ್ಲ ಎಂದು ಭಾವ.

2. ಹಿಂದೆ ತಿಳಿಸಿದಂತೆ ಧರ್ಮಾದಿಗಳು ಇಲ್ಲ ಎಂದು ತಿಳಿದ ಜನರು ಉಚ್ಛೃಂಖಲ ಪ್ರವೃತ್ತಿಯಿಂದ ಧನ ವನಿತಾದಿಗಳನ್ನು ಅಪಹರಿಸಿ ಲೋಕದಲ್ಲಿ ಭಾರೀ ಕ್ಷೋಭೆಗೆ ಕಾರಣವಾಗುವುದರಿಂದ, ಚಾರ್ವಾಕ ಶಾಸ್ತ್ರಿಯು ಎಲ್ಲರ ದ್ವೇಷಕ್ಕೆ ಗುರಿಯಾಗುವನು. ಜನರ ಅನುರಾಗಕ್ಕೆ ಪಾತ್ರನಾಗಲಾರ. ದೃಷ್ಟಫಲವನ್ನು ಮಾತ್ರ ಒಪ್ಪಿದ ಚಾರ್ವಾಕನು ಜನಾನುರಾಗದ ಹೊರತಾಗಿ ಮತ್ತಾವುದೋ ಪ್ರಯೋಜನವನ್ನು ಶಾಸ್ತ್ರದಿಂದ ಹೊಂದಲಾರ ಎಂದು ಭಾವ.

**ಇತ್ಯುಪಸಂಹ್ರಿಯತ ಇತಿ ಭಾವಃ । ಅಸೌ ಧರ್ಮಾದ್ಯಭಾವಮ್ ಅಭ್ಯುಪಗಚ್ಛನ್, ಅಸಮಯೀ ಸ್ಯಾತ್ । 'ಅತಃ'- ಸಮಯಿತ್ವಲೋಭಾತ್ ತೇನಾಪಿ ವಿಷಯತ್ವೇನ ಧರ್ಮಾದಿಕಮ್ ಅಙ್ಗೀಕಾರ್ಯಂ, ತತ್ ಸಿದ್ಧೇರನ್ಯಥಾಽನುಪಪತ್ತ್ಯಾ 'ಅಪೌರುಷೇಯಂ ವಾಕ್ಯಮಪಿ' ಇತಿ ಶೇಷಃ ।**

ಎರಡನೆಯದೂ (ದೃಷ್ಟೇತರ ಪ್ರಯೋಜನವೂ) ಇಲ್ಲ ಎನ್ನಲು ಕಾರಣವನ್ನು ತಿಳಿಸುತ್ತಾರೆ '**ಅದೃಷ್ಟ**' ಎಂದು[1]. 'ಶಾಸ್ತ್ರವನ್ನು ರಚಿಸಿದವಗೆ ಯಾವದೇ ಪ್ರಯೋಜನವಿಲ್ಲ' ಎಂದು ಮಾತ್ರವಲ್ಲದೆ, ಆತನಿಗೂ ಹಿಂಸಾದಿಗಳು (ಅನರ್ಥಗಳು) ಅನಿವಾರ್ಯ, ಅದೃಷ್ಟವನ್ನು ಒಪ್ಪದೇ ಇರುವುದರಿಂದಲೇ[2] ಎಂದು. (ಈ ಚಾರ್ವಾಕವಾದದ ನಿರಾಕರಣೆಯನ್ನು) ಸಂಕ್ಷೇಪಗೊಳಿಸಲು ಕಾರಣವನ್ನು ಸೂಚಿಸಿ, ಚಾರ್ವಾಕನಿಗೆ ಶಾಸ್ತ್ರಿತ್ವವಿಲ್ಲ ಎನ್ನುವುದನ್ನು ಉಪಸಂಹರಿಸುತ್ತಾರೆ 'ಅತಃ' ಎನ್ನುವುದರಿಂದ. ಯಾವ ಶಾಸ್ತ್ರವು ವಿಷಯ ಮತ್ತು ಪ್ರಯೋಜನಗಳನ್ನು ಹೊಂದಿಲ್ಲವೋ ಆ ಶಾಸ್ತ್ರ ಅನರ್ಥಕ. ಅನರ್ಥಕತನವೇ 'ಆನರ್ಥಕ್ಯ'[3]. **ಅಂಗೀಕೃತಮೇವ**- ಅಂಗೀಕರಿಸಿದಂತೆ. ಅದೃಷ್ಟಾದಿಗಳನ್ನು ಆತನೇ ಒಪ್ಪದಿರುವುದರಿಂದ (ಶಾಸ್ತ್ರಕ್ಕೆ ವಿಷಯವಿಲ್ಲ ಎಂದು ಸಾಧಿಸುವ) ಅರ್ಧಭಾರ ಕಡಿಮೆಯಾಯಿತು[4]. ದೃಷ್ಟವಾದ ವಿಷಯಾದಿಗಳ ನಿರಾಸವು ಶ್ರಮಸಾಧ್ಯವಲ್ಲ ಎಂದು (ಚಾರ್ವಾಕನ)ಪ್ರತಿವಾದಿಗೆ (ತತ್ತ್ವವಾದಿಗೆ) ಈ ವಿಷಯದಲ್ಲಿ ಹೆಚ್ಚು ಶ್ರಮವಿಲ್ಲ ಎಂದು ಉಪಸಂಹರಿಸುವರು ಎಂದು

1. ಶಾಸ್ತ್ರರಚನೆಯೇ ಪ್ರಯೋಜನವೋ, ಅಥವಾ ಅದರಿಂದ ಭಿನ್ನವಾದ ಪ್ರಯೋಜನ ವಿದೆಯೋ ಎಂದು ವಿಕಲ್ಪವನ್ನು ಮಾಡಲಾಗಿತ್ತು. ಈಗ ಎರಡನೆಯ ವಿಕಲ್ಪವಾದ 'ಪ್ರಯೋಜನಾಂತರವನ್ನು' ಒಪ್ಪಲು ಅವಕಾಶವಿಲ್ಲ ಎಂದು ತಿಳಿಸುತ್ತಾರೆ ಎಂದು ಭಾವ.
2. ಸಮಾಜದಲ್ಲಿ ಧರ್ಮದ ಹೆದರಿಕೆಯಿಂದ ಒಂದು ವ್ಯವಸ್ಥೆ ಇದೆ. ಇಂದು ಚಾರ್ವಾಕಶಾಸ್ತ್ರದ ಪ್ರಚೋದನೆಯಿಂದ ಧನ-ವನಿತಾದಿಗಳ ಲೋಭದಿಂದ ಇಡೀ ಸಮಾಜವೇ ಹಿಂಸಾದಿಗಳಲ್ಲಿ ತೊಡಗಿತು. ಈ ಎಲ್ಲ ಅನರ್ಥಕ್ಕೆ ಈತನೇ ಕಾರಣನೆಂದು ಆತನನ್ನೇ ಜನರು ಶಿಕ್ಷೆಗೆ ಗುರಿಪಡಿಸುವರು ಎಂದು ಭಾವ.
3. ಮೂಲದಲ್ಲಿರುವ 'ಆನರ್ಥಕ್ಯಂ' ಎನ್ನುವುದರ ವಿವರ.
4. ಶಾಸ್ತ್ರಕ್ಕೆ ದೃಷ್ಟವಾದವು ಮತ್ತು ಅದೃಷ್ಟವಾದವುಗಳು ಎಂದು ಎರಡು ವಿಧವಾಗಿ ವಿಷಯಪ್ರಯೋಜನಗಳು ಇರುತ್ತವೆ. ಪ್ರಕೃತದಲ್ಲಿ ಚಾರ್ವಾಕನೂ ಅತೀಂದ್ರಿಯ ಪದಾರ್ಥವನ್ನೇ ಒಪ್ಪದಿರುವುದರಿಂದ, ಆತನ ಶಾಸ್ತ್ರಕ್ಕೆ ವಿಷಯ ಪ್ರಯೋಜನಗಳು ಇಲ್ಲ ಎಂದು ಸಾಧಿಸುವ ಭಾರದಲ್ಲಿ ಅರ್ಧ ಕಡಿಮೆಯಾಯಿತು ಎಂದು ಭಾವ.

ಭಾವ. **ಅಸೌ** - ಧರ್ಮಾದಿಗಳನ್ನು ಒಪ್ಪದ ಈತನು ಶಾಸ್ತ್ರಿಯಾಗಲಾರನು **ಅತಃ**- ಶಾಸ್ತ್ರಿಯಾಗಬೇಕು ಎನ್ನುವ ಆಸೆಯಿಂದ ಆ ಚಾರ್ವಾಕನೂ (ತನ್ನ ಶಾಸ್ತ್ರಕ್ಕೆ) ಧರ್ಮಾದಿಗಳನ್ನು ವಿಷಯ ಎಂದು ಒಪ್ಪಬೇಕು. 'ಆ ಧರ್ಮಾದಿಗಳ ಸಿದ್ಧಿಯು ಬೇರೇ ಉಪಾಯಗಳಿಂದ ಸಿದ್ಧವಾಗುವುದಿಲ್ಲವಾದ್ದರಿಂದ 'ಅಪೌರುಷೇಯಂ ವಾಕ್ಯಮಪಿ'- (ಅಪೌರುಷೇಯ ವಾಕ್ಯವನ್ನೂ ಸಹ) ಎಂದು ಶೇಷಪೂರಣ ಮಾಡಿಕೊಳ್ಳಬೇಕು.

**ಧರ್ಮಾದಿಗಳು ಪ್ರಮಾಣಪ್ರಮಿತವೆ ?**

**ನನು, 'ನ ಪ್ರಯೋಜನಾಧೀನಾ ಪ್ರಮೇಯವ್ಯವಸ್ಥಿತಿಃ, ಕಿನ್ತು ಪ್ರಮಾಣಾಧೀನಾ' । 'ನಹಿ ದೇವದತ್ತಃ ಪಿಪಾಸಿತ ಇತ್ಯೇತಾವತಾ ಮರೌ ವಾರಿ ಸಿದ್ಧ್ಯತಿ' ? ನ ಚ ಧರ್ಮಾದೌ ಪ್ರಮಾಣಮಸ್ತಿ, ಪ್ರತ್ಯಕ್ಷೇಣ ತದನವಗಮಾತ್ । ಅನುಮಾನಾದೀನಾಂ ಚ ಪ್ರಾಮಾಣ್ಯಾಭಾವಾತ್ ।**

ಸರಿ, 'ಪ್ರಯೋಜನದ ಅಧೀನವಾಗಿ ಪ್ರಮೇಯಗಳ ಸತ್ತೆ ಇರದು. ಮತ್ತೆ ಪ್ರಮಾಣದ ಅಧೀನವಾಗಿದೆ (ಅದರ ಸತ್ತೆಯು)'. 'ದೇವದತ್ತನು ಬಾಯಾರಿದ್ದಾನೆ ಎಂದು ಮರಳುಗಾಡಿನಲ್ಲಿ ನೀರು ಸಿದ್ಧಿಸುವುದಿಲ್ಲ'? ಧರ್ಮಾದಿಗಳ ವಿಷಯದಲ್ಲಿ ಪ್ರಮಾಣವಿಲ್ಲ. ಪ್ರತ್ಯಕ್ಷದಿಂದ ಅದು ಸಿದ್ಧವಾಗುವುದಿಲ್ಲವಾದುದರಿಂದ. ಇನ್ನು ಅನುಮಾನಾದಿಗಳಿಗೆ ಪ್ರಾಮಾಣ್ಯವೇ ಇಲ್ಲವಾದುದರಿಂದಲೂ[1].

---

1. 'ಲೋಕದಲ್ಲಿ ಶಾಂತಿ ಮೊದಲಾದ ಸುವ್ಯವಸ್ಥೆಯ ಸಲುವಾಗಿ ಧರ್ಮಾದಿಗಳು ಅವಶ್ಯಕ. ಈ ಧರ್ಮಾದಿಗಳಾದರೋ ಅಪೌರುಷೇಯ ವಾಕ್ಯಗಳಿಂದಲೇ ಸಿದ್ಧವಾಗುವವು' ಎಂದು ಈ ಹಿಂದೆ ಪ್ರತಿಪಾದಿಸಲಾಗಿದೆ. ಈ ವಿಷಯದಲ್ಲಿ ಚಾರ್ವಾಕನ ಪ್ರಶ್ನೆ. ಲೋಕದಲ್ಲಿ ಶಾಂತಿ ಸೌಹಾರ್ದಬೇಕು, ಅದಕ್ಕಾಗಿ ಧರ್ಮಬೇಕು ಎಂದು ವಾದಿಸುವುದು ತರವಲ್ಲ. ಕಾರಣ ನಮ್ಮ ಅವಶ್ಯಕತೆಗೆ ತಕ್ಕಂತೆ ಪದಾರ್ಥಗಳನ್ನು ಕಲ್ಪಿಸುವುದು ಸಲ್ಲದು. ಮರಳುಗಾಡಿನಲ್ಲಿ ನೀರಿನ ಅವಶ್ಯಕತೆ ಇದೆ ಎಂದು ನೀರು ಲಭ್ಯವಾಗುವುದೆ ? ಹಾಗೆ ಪ್ರಕೃತದಲ್ಲಿ ಲೋಕದ ಶಾಂತಿ ಸೌಹಾರ್ದಕ್ಕಾಗಿ ಧರ್ಮವನ್ನು ಕಲ್ಪಿಸುವುದು ತರವಲ್ಲ. ಒಂದು ಪದಾರ್ಥವಿದೆ ಎನ್ನಲು ಪ್ರಮಾಣದ ಅವಶ್ಯಕತೆ ಇದೆ. ಪ್ರಕೃತ (ಅತೀಂದ್ರಿಯವಾದ) ಧರ್ಮಾದಿಗಳ ವಿಷಯದಲ್ಲಿ ಪ್ರತ್ಯಕ್ಷವನ್ನು ಪ್ರಮಾಣ ಎಂದು ಹೇಳಲಾಗದು. ಇನ್ನು ಪ್ರತ್ಯಕ್ಷ ಮಾತ್ರ ಪ್ರಮಾಣವೆಂದು ಒಪ್ಪಿರುವ ನನ್ನನ್ನು ಉದ್ದೇಶಿಸಿ ಅನುಮಾನಾದಿಗಳಿಂದ ನೀವು ಧರ್ಮಾದಿಗಳನ್ನು ಸಾಧಿಸಲು ಶಕ್ಯವಿಲ್ಲ ಎಂದು ಭಾವ.

**ಧರ್ಮಾದಿಗಳ ಅಸ್ತಿತ್ವದ ವಿಷಯದಲ್ಲಿ ಉದಯನರ ವಾದದ ವಿಮರ್ಶೆ**

ಅತ್ರಾಽಹೋದಯನಃ - 'ಯದ್ಯದೃಷ್ಟಂ ನ ಸ್ಯಾತ್ ನ ಪರಲೋಕಾರ್ಥೀ ಕಶ್ಚಿದಿಷ್ಟಾ- ಪೂರ್ತಯೋಃ ಪ್ರವರ್ತೇತ । ನ ಹಿ ನಿಷ್ಫಲೇ, ದುಃಖೈಕಫಲೇ ವಾ ಕದಾಚಿತ್ ಕಶ್ಚಿದೇಕೋಽಪಿ ಪ್ರೇಕ್ಷಾಪೂರ್ವಕಾರೀ ಘಟತೇ? ಪ್ರಾಗೇವ ಜಗದ್' ಇತಿ । ಅತ್ರ ಪ್ರಷ್ಟವ್ಯಂ ಕಿಮನೇನ ಪ್ರಮಾಣಮುಕ್ತಮ್? ಇತಿ । ಅನುಮಾನಮರ್ಥಾಪತ್ತಿರ್ವೇತಿ ಚೇನ್ನ, ಪ್ರತ್ಯಕ್ಷೈಕಪ್ರಮಾಣವಾದಿನಂ ಪ್ರತಿ ತದುಪನ್ಯಾಸಸ್ಯಾನುಚಿತತ್ವಾತ್ । ಕಿಂಚೈವಂ ಚೈತ್ಯವಂದನಾದಿಕಮಪಿ ಧರ್ಮಾದಿಸಾಧನಂ ಸ್ಯಾತ್ ? ತತ್ರಾಪಿ ಹಿ ಶಕ್ಯತೇ ವಕ್ತುಮ್, ಅನ್ಯಥಾ ನ ಕಶ್ಚಿಚ್ ಚೈತ್ಯವಂದನಾದೌ ಘಟೇತ? ಇತಿ ।

ನೈತದೇವಂ, 'ಯತೋ ಹೇತುದರ್ಶನಾದರ್ಶನಾಭ್ಯಾಂ ವಿಶೇಷೋಽಸ್ತಿ, ಜೀವಿಕಾದಿಕಂ ತತ್ರ ಹೇತುರಸ್ತಿ ನ ಚಾತ್ರ ಕಶ್ಚಿದ್' ಇತಿ ಚೇನ್ನ । ಸರ್ವೇಷಾಂ ಚೈತ್ಯವಂದನಾದೇಃ ಜೀವಿಕಾದಿಮೂಲಕತ್ವಕಲ್ಪನೇಽನುಭವವಿರೋಧಾತ್ । ಕೇಷಾಂಚಿತ್ ತಥಾತ್ವಸ್ಯೇಷ್ಟಾಪೂರ್ತಯೋರಪಿ ಸಮತ್ವಾತ್ । 'ತಸ್ಮಾಚ್ ಚೈತ್ಯವಂದನಾದಿಕಮಿವ ಇಷ್ಟಾಪೂರ್ತಮಪ್ಯನ್ಧಪರಂಪರಯಾ ವಿಪ್ರಲಮ್ಭೇನ ವಾ ಪ್ರಾಪ್ತಮ್' ಇತಿ । ಪ್ರಯೋಜನಾಭಾವಾನ್ ನೈವಂ ವಿಧಂ ವಿಪ್ರಲಂಭನಂ ಸಂಭವತಿ? ಇತಿ ಚೇನ್ನ । ಪರಚಿತ್ತವೃತ್ತಿಗುರುತರ-ಪ್ರಯೋಜನಸ್ಯೇದಾನೀನ್ತನೈರಸ್ಮಾಭಿರಪಾಕುರ್ತುಮಶಕ್ಯತ್ವಾತ್ । ತ್ವಯಾಪಿ ಕಥಮಿದಂ ನಿಶ್ಚಿತಮ್? ಇತಿ ಚೇತ್, ನ ಮಯಾಽಪಿ ನಿಶ್ಚಿತಂ ಕಿಂತು ಶಙ್ಕ್ಯತೇ ಏವ । ತಾವತಾಽಪ್ಯನುಮಾನಾದೇರನ್ಯಥಾಸಿದ್ಧಿಶಙ್ಕಾಕಲಂಕಿತಸ್ಯ ನ ಪ್ರವೃತ್ತಿರಿತಿ ।

ಈ ವಿಷಯದಲ್ಲಿ ಉದಯಾನಾಚಾರ್ಯರು ಹೀಗೆ ಉತ್ತರಿಸಿರುವರು. 'ಒಂದು ವೇಳೆ ಅತೀಂದ್ರಿಯವಾದವು ಇಲ್ಲ ಎಂದಾದಲ್ಲಿ ಸ್ವರ್ಗಾದಿ ಲೋಕವನ್ನು ಬಯಸುವವರು ಯಾರೂ ಸಹ ಯಜ್ಞ-ಪೂರ್ತಾದಿಗಳಲ್ಲಿ (ಅನ್ನಛತ್ರಾದಿ ನಿರ್ವಹಣಾದಿಗಳಲ್ಲಿ) ಪ್ರವೃತ್ತರಾಗದೇ ಇರಬೇಕಿತ್ತು. ನಿಷ್ಫಲವಾದ, ದುಃಖಮಾತ್ರ ಕಾರಣವಾದವುಗಳಲ್ಲಿ (ಅಂತಹ ಕರ್ಮದಲ್ಲಿ) ತಿಳುವಳಿಕೆ ಇದ್ದ ಯಾವ ಒಬ್ಬನೂ ಯಾವ ಸಂದರ್ಭದಲ್ಲೂ ಪ್ರವೃತ್ತನಾಗಲಾರ,

ಇನ್ನು ಜನಸಾಮಾನ್ಯರು ಮೊದಲೇ ನಿವೃತ್ತರಾಗುವರು ಎಂದು[1]. ಈ ವಿಷಯದಲ್ಲಿ (ಉದಯನರು) ಈ ಕೆಳಕಂಡ ಪ್ರಶ್ನೆಗೆ ಗುರಿಯಾಗುವರು. ಈ ಉಪನ್ಯಾಸದಿಂದ ಯಾವ ಪ್ರಮಾಣವನ್ನು ಹೇಳಿದಂತಾಯಿತು? ಎಂದು. ಅನುಮಾನ ಪ್ರಮಾಣವನ್ನೋ ಅರ್ಥಾಪತ್ತಿಯನ್ನೋ (ತಿಳಿಸಿದಂತಾಯಿತು) ಎಂದೆನ್ನಲಾಗದು. 'ಪ್ರತ್ಯಕ್ಷವನ್ನು ಮಾತ್ರ ಪ್ರಮಾಣ' ಎಂದು ಒಪ್ಪಿರುವ (ಚಾರ್ವಾಕನಿಗೆ) ಅವುಗಳ ಉಪನ್ಯಾಸವು ಅನುಚಿತವಾದುದರಿಂದ. ಮತ್ತೂ ಸಹ, ಈ ರೀತಿಯಲ್ಲಿ ವಾದವನ್ನು ಮಂಡಿಸಿದಲ್ಲಿ ಚೈತ್ಯವಂದನ ಮೊದಲಾದವುಗಳೂ ಸಹ ಧರ್ಮಕ್ಕೆ ಸಾಧನವಾದೀತು. ಅಲ್ಲೂ ಸಹ (ಚೈತ್ಯವಂದನದ ವಿಷಯದಲ್ಲೂ ಸಹ) ಹೀಗೆಯೇ ವಾದವನ್ನು ಮಂಡಿಸಲು ಶಕ್ಯವಿದೆ. 'ಹಾಗಾಗದಿದ್ದಲ್ಲಿ (ಚೈತ್ಯವಂದನವೂ ಸಾರ್ಥಕವಾಗದ ಪಕ್ಷದಲ್ಲಿ) ಯಾರೂ ಸಹ ಚೈತ್ಯವಂದನಾದಿಗಳಲ್ಲಿ ಪ್ರವೃತ್ತರಾಗದಿರಬೇಕಾದೀತು' ಎಂದು[2].

ಇದು ಹಾಗಲ್ಲ, ಸಕಾರಣ-ನಿಷ್ಕಾರಣಗಳೆಂಬ ವೈಶಿಷ್ಟ್ಯವು ಇರುವುದರಿಂದ. ಜೀವನನಿರ್ವಹಣೆ ಮುಂತಾದವು ಅಲ್ಲಿ (ಬೌದ್ಧರ ಚೈತ್ಯವಂದನಾದಿಗಳಲ್ಲಿ) ಕಾರಣವಾಗಿದೆ, ಇಲ್ಲಿ (ವೈದಿಕರ ಯಜ್ಞಾದಿಕ್ರಿಯೆಯಲ್ಲಿ) ಯಾವುದೂ (ಉದರಂಭರಣಾದಿ ಕಾರಣಗಳು) ಇಲ್ಲ ಎಂದೆನ್ನಲಾಗದು[3]. 'ಎಲ್ಲ

---

1. ಕಷ್ಟಸಹಿಷ್ಣುಗಳಾದ ತಿಳಿದು ವ್ಯವಹರಿಸುವ ವಿವೇಕಿಗಳೇ ತೊಡಗಿಕೊಂಡಿಲ್ಲ ಎಂದಾದಲ್ಲಿ ಇನ್ನು ಆಲಸೀ ಜನರು ಇಂತಹ ಕಷ್ಟಸಾಧ್ಯ ಕರ್ಮದಲ್ಲಿ ಪ್ರವೃತ್ತರಾಗುವರೇ? ಎಂದು ಭಾವ.
2. ಅರಿವು ಇರುವವರು ಅನೇಕ ಮಂದಿ ಯಜ್ಞ, ಅನ್ನ-ಛತ್ರಾದಿಗಳ ನಿರ್ಮಾಣದಲ್ಲಿ ಪ್ರವೃತ್ತರಾದುದರಿಂದ ಅವುಗಳಿಗೆ ಫಲವಿದೆ. ಆ ಫಲವು ಅತೀಂದ್ರಿಯವಾದದ್ದು ಎಂದು ವಾದವನ್ನು ಮಂಡಿಸಿದಲ್ಲಿ, ಬೌದ್ಧಾದಿಗಳು ಆಚರಿಸುವ ಧಾರ್ಮಿಕ ಚಟುವಟಿಕೆಗಳಾದ ಚೈತ್ಯವಂದಾನಾದಿಗಳು ಸಫಲವಾಗಿವೆ, ಆದುದರಿಂದಲೇ ಚೈತ್ಯವಂದನದಲ್ಲಿ ಅನೇಕ ಬೌದ್ಧ ವಿದ್ವಾಂಸರು ನಿರತರಾಗಿದ್ದಾರೆ. ಆದರೆ ವೈದಿಕರ ವಿವಕ್ಷೆಯಲ್ಲಿ ಬೌದ್ಧರ ಚೈತ್ಯವಂದನವು ನಿಷ್ಫಲ. ಹಾಗಾಗಿ 'ಅನೇಕರು ವಿದ್ವಾಂಸರು ಪ್ರವೃತ್ತರಾದುದರಿಂದ ಯಜ್ಞಯಾಗಾದಿಗಳ ಆಚರಣೆಯು ಸಾರ್ಥಕ' ಎಂದು ಸಾಧಿಸುವುದು ತರವಲ್ಲ ಎಂದು ಭಾವ.
3. 'ಬೌದ್ಧರು ತಾವು ಭಾರೀ ಕರ್ಮಠರು, ಆದುದರಿಂದ ಸಾಮಾನ್ಯರಿಗಿಂತಲೂ ಮೇಲ್ಪಟ್ಟವರು' ಎಂದು ಸಮಾಜದಲ್ಲಿ ತಮ್ಮನ್ನು ಬಿಂಬಿಸಿಕೊಂಡು, ಅದರಿಂದ ಏನಾದರೂ ಲಾಭವನ್ನು ಹೊಂದುವ ಅಭಿಲಾಷೆಯಿಂದ ಹಾಗೆ ಆಚರಿಸುವರು. ವೈದಿಕರು ಇಂತಹ ತಂತ್ರಗಳಿಂದ ಉದರಂಭಣದಲ್ಲಿ ಆಸಕ್ತರಲ್ಲ ಎಂದು ಹೇಳುವುದು ತರವಲ್ಲ ಎಂದು ಭಾವ.

ಚೈತ್ಯವಂದನಾದಿಗಳೂ ಉದರಂಭರಣಕ್ಕಾಗಿಯೇ ಇವೆ' ಎಂದು ಕಲ್ಪಿಸುವುದು ಅನುಭವಕ್ಕೆ ವಿರುದ್ಧವಾಗಿದೆ. ಕೆಲವರು ಆ ರೀತಿಯಲ್ಲಿರುವವರು ಎಂದಾದಲ್ಲಿ ಇಷ್ಟಾಪೂರ್ತಗಳಲ್ಲೂ ಇದು ಸಮವಾಗಿದೆ[1]. ಆದುದರಿಂದ ಚೈತ್ಯವಂದನಾದಿಗಳಂತೆ ಇಷ್ಟಾಪೂರ್ತಗಳೂ ಸಹ ಅಜ್ಞಪರಂಪರೆ ಅಥವಾ ಮೋಸಗೊಳಿಸುವ ಉದ್ದೇಶದಿಂದ ಪ್ರಾಪ್ತವಾಗಿದೆ ಎಂದು (ವಾದಿಸಬಹುದಾಗಿದೆ). (ಜೀವನನಿರ್ವಹಣೆ ಮುಂತಾದವು) ಪ್ರಯೋಜನೋದ್ದೇಶವು (ಇಷ್ಟಾಪೂರ್ತಗಳಲ್ಲಿ) ಇಲ್ಲವಾದುದರಿಂದ ಮೋಸಗೊಳಿಸುವ ಪ್ರಸಕ್ತಿ ಇಲ್ಲ ಎಂದನ್ನೆಲಾಗದು. ಅಂದಿನ ಜನರ ಮನದಲ್ಲಿರುವ ಭಾರೀಪ್ರಯೋಜನವನ್ನು, ಈಗಿರುವ ನಾವು ಬಯಲುಗೊಳಿಸಲು ಅಶಕ್ಯವಾದುದರಿಂದ (ಈ ರೀತಿಯ ವಾದವು ಧೃಢವಾಗಲಾರದು.) ನಿನ್ನಿಂದಲಾದರೂ (ಚಾರ್ವಾಕನಿಂದ) ಇದನ್ನು (ವೈದಿಕ ಕರ್ಮಗಳು ಮೋಸಗಾರರ ಹುನ್ನಾರ ಎಂದು) ಹೇಗೆ ನಿಶ್ಚಯಿಸಲಾಯ್ತು ? (ಎಂದು ಉದಯನಾಚಾರ್ಯರು ಚಾರ್ವಾಕರನ್ನು ಪ್ರಶ್ನಿಸಿದಲ್ಲಿ, ಚಾರ್ವಾಕರು ಉತ್ತರಿಸುವರು) ನಾನಾದರೋ ನಿಶ್ಚಯಿಸಿಲ್ಲ, ಸಂಶಯವನ್ನು ವ್ಯಕ್ತಗೊಳಿಸಿರುವೆ. ಇಷ್ಟರಿಂದಲೂ (ಈ ಸಂಶಯದಿಂದಲೂ )ಸಹ, ಅನ್ಯಥಾಸಿದ್ಧಿ ಶಂಕೆಯಿಂದ ಮಲಿನಗೊಂಡ ಅನುಮಾನಾದಿಗಳಿಂದ (ಯಾಗಾದಿ ಧರ್ಮಕರ್ಮಗಳಲ್ಲಿ) ಪ್ರವೃತ್ತಿಯು ಕೂಡಲಾರದು[2].

**ಧರ್ಮಸಂದೇಹದ ನಿರಾಕರಣೆಗಾದರೂ ಆಗಮದ ಪ್ರಾಮಾಣ್ಯವು ಅನಿವಾರ್ಯ**

**ಉಚ್ಯತೇ- ಕಿಮೇವಂ ವದತೋ ಧರ್ಮಾದೌ ಸಂದೇಹ ಉತಾಽಭಾವನಿಶ್ಚಯಃ । ಆದ್ಯೇ ನ ತತ್ರ ಪ್ರವರ್ತೇತ ನಾಪಿ ನಿವರ್ತೇತ ।**

---

1. ವೈದಿಕ ಕರ್ಮವಾದ ಇಷ್ಟಾಪೂರ್ತಗಳನ್ನು ಅನೇಕ ವೈದಿಕರು ಹಣಸಂಪಾದನೆಗಾಗಿ ನಡೆಸುವುದು ಅನುಭವದಲ್ಲಿ ವಿದಿತವಾಗಿದೆ, ಹಾಗೇ ಬೌದ್ಧರಲ್ಲಿ ಕೇವಲ ನಿಷ್ಠೆಯಿಂದಲೇ ಚೈತ್ಯವಂದನವನ್ನು ಆಚರಿಸುವವರೂ ಇರುವರು, ಎಂದು ಭಾವ.

2. ಧರ್ಮದ ಅಸ್ತಿತ್ವವನ್ನು ಸಾಧಿಸಲು ಉದಯನರು ಹೇಳಿದ ಅನುಮಾನ ಅಥವಾ ಅರ್ಥಾಪತ್ತಿಯು ಅನ್ಯಥಾಸಿದ್ಧಿ ಶಂಕಾಕಲಂಕಿತವಾಗಿದೆ- 'ವೈದಿಕರ ಅಭಿಮತರಂತೆ ನಿಷ್ಫಲವಾದ ಚೈತ್ಯವಂದನೆಯಲ್ಲಿ ಹೇಗೆ ಬೌದ್ಧರು ಪ್ರವೃತ್ತರಾಗುವರೋ, ಹಾಗೆ ನಿಷ್ಫಲವಾದ ಯಾಗಾದಿಗಳಲ್ಲೂ ವೈದಿಕರು ಪ್ರವೃತ್ತರಾಗಬಹುದು' ಎಂದು ಚಾರ್ವಾಕನು ಹೇಳಲು ಸಾಧ್ಯತೆಗಳಿರುವುದರಿಂದ ಎಂದು ಭಾವ.

ದ್ವಿತೀಯೇ ಕುತೋಽಸೌ? ಇತಿ ವಾಚ್ಯಮ್ । ಘಟಾದ್ಯಭಾವನಿಶ್ಚಯ ಇವ ಪ್ರತ್ಯಕ್ಷೇಣೈವ ಧರ್ಮಾದ್ಯಭಾವ ನಿಶ್ಚಯ ಃ? ಇತಿ ಚೇನ್ನ । ಅಯೋಗ್ಯತಯಾ ಚಕ್ಷುಷಾ ರಸಸ್ಯೇವ ಪ್ರತ್ಯಕ್ಷೇಣ ಸತೋಽಪ್ಯಗ್ರಹಣೋಪಪತ್ತೇಃ । ನನು, 'ಕಿಂ ಯೋಗ್ಯತಾವಿಶೇಷಣೇನ, ಯನ್ನೋಪಲಭ್ಯತೇ ತನ್ನಾಸ್ತ್ಯೇವ' ಇತಿ ಚೇತ್ । ಸ್ಯಾದೇತದೇವಂ ಯದ್ಯತ್ರ ವಾದಿನೋ ನ ವಿಪ್ರತಿಪದ್ಯೇರನ್, ಯದಿ ಚ 'ಚಕ್ಷುರಾದಿನಾ ರಸಾದಿಕಮಯೋಗ್ಯತಯಾ ನ ಗೃಹ್ಯತೇ' ಇತಿ ನ ಸ್ಯಾತ್ ।

ಸತ್ಯಾಂ ತು ವಾದಿವಿಪ್ರತಿಪತ್ತೌ ಸತಿ ಚಾಯೋಗ್ಯತಯಾ ಕ್ವಚಿದನುಪಲಮ್ಭೇ, ಪ್ರತ್ಯಕ್ಷಾನುಪಲಬ್ಧಿಃ ಸಂಶಯಮೇವ ಸಂಪಾದಯತಿ । 'ಕಿಮನುಪಲಮ್ಭಾನ್ನಾಸ್ತ್ಯೇವ ಧರ್ಮಾದಿಕಮುತ ವಾದ್ಯನ್ತರೋಕ್ತರೀತ್ಯಾ ಚಕ್ಷುಷಾನುಪಲಭ್ಯಮಾನೋಽಪಿ ರಸೋ ರಸನೇನೇವ, ಅಯೋಗ್ಯತಯಾ ಪ್ರತ್ಯಕ್ಷೇಣಾನುಪಲಭ್ಯಮಾನಮಪಿ ಪ್ರಮಾಣಾನ್ತರಾದಸ್ತಿ' ಇತಿ । 'ನ ಹಿ ನ್ಯಾಯಮತಿಕ್ರಮ್ಯ ಸ್ವಸಮಯಮಾತ್ರೇಣ ಸಂಶಯೋತ್ತಾರೋ ಯುಜ್ಯತೇ?' । ತಥಾಚೈತತ್ ಸಂಶಯನಿರಾಸಾರ್ಥಮಪ್ಯಗಮಾದಿಕಂ ಪ್ರಮಾಣಮಙ್ಗೀಕಾರ್ಯಮ್ । ತಥಾ ಸತಿ ತೇನೈವ ಸುಕರಂ ಧರ್ಮಾದಿಸಾಧನಮ್ ।

ಉತ್ತರಿಸಲಾಗುವುದು- (ಪ್ರತ್ಯಕ್ಷದಿಂದ ಧರ್ಮಾದಿಗಳು ಸಿದ್ಧವಾಗುವುದಿಲ್ಲ, ಅನುಮಾನ ಆಗಮಗಳನ್ನು ಪ್ರಮಾಣ ಎಂದು ಒಪ್ಪುವುದಿಲ್ಲ) ಈ ರೀತಿಯಾಗಿ ಹೇಳುವುದರಿಂದ ಧರ್ಮಾದಿಗಳ (ಅಸ್ತಿತ್ವದ) ವಿಷಯದಲ್ಲಿ ಸಂದೇಹವನ್ನು ತಿಳಿಸಿದಂತಾಯಿತೋ ಅಥವಾ ಧರ್ಮಾದಿಗಳು ಇಲ್ಲ ಎಂದು ನಿಶ್ಚಯವೋ? ಮೊದಲ ಪಕ್ಷದಲ್ಲಿ (ಧರ್ಮಾದಿಗಳು ಅಸ್ತಿತ್ವದಲ್ಲಿ ಸಂದೇಹ ಎಂದು ಒಪ್ಪುವ ಪಕ್ಷದಲ್ಲಿ) ಪ್ರವೃತ್ತನೂ ಆಗಲಾರ, ನಿವೃತ್ತನೂ ಆಗಲಾರ[1]. ಇನ್ನು

---

1. ಚಾರ್ವಾಕನ ಶಾಸ್ತ್ರವನ್ನು ತಿಳಿದವ ಧರ್ಮದ ಅಸ್ತಿತ್ವದಲ್ಲಿ ಸಂದೇಹವಿರುವುದರಿಂದ ನಿರಂಕುಶಕಾಮಭೋಗಾದಿಗಳಲ್ಲಿ ಪ್ರವೃತ್ತನು ಆಗಲಾರ, ಧರ್ಮಾದಿಗಳು ಸತ್ಯವಾದಲ್ಲಿ ನಿರಂಕುಶಕಾಮಭೋಗದಿಂದ ಅನರ್ಥವಾದೀತು ಎಂಬ ಭಯದಿಂದ. ಅಥವಾ ಇಷ್ಟಾಪೂರ್ತಾದಿ ವೈದಿಕ ಕರ್ಮಗಳಲ್ಲಿ ಪ್ರವೃತ್ತನಾಗದೆಯೇ ಇರಬಹುದು ಅಥವಾ ಪ್ರವೃತ್ತನೂ ಆಗಬಹುದು ಎಂದು ಭಾವ.

ಎರಡನೇ ಪಕ್ಷದಲ್ಲೂ ಸಹ (ಧರ್ಮಾದಿಗಳ ಅಭಾವ ನಿಶ್ಚಯವಾಗಿದೆ ಎನ್ನುವ ಪಕ್ಷದಲ್ಲಿ) ಅದು ಹೇಗೆ (ನಿಶ್ಚಯವಾಯಿತು) ಎಂದು ಹೇಳಬೇಕು. ಘಟಾದಿ ಪದಾರ್ಥಗಳ ಅಭಾವದ ನಿಶ್ಚಯವು ಹೇಗೆ ಪ್ರತ್ಯಕ್ಷದಿಂದಲೇ ಸಂಭವಿಸುವುದೋ ಹಾಗೆಯೇ ಧರ್ಮಾದಿಗಳ ಅಭಾವದ ನಿಶ್ಚಯವಾಗುವುದು ಎಂದು ಹೇಳಲು ಆಗದು. ರಸದ (ಪ್ರತ್ಯಕ್ಷವು) ಕಣ್ಣಿಗೆ ಅಯೋಗ್ಯವಾದುದರಿಂದ (ತೋರದು) ಅದರಂತೆ, (ಧರ್ಮವು) ಇದ್ದರೂ, ಪ್ರತ್ಯಕ್ಷದಿಂದ ತೋರದೇ ಇರುವುದು ಉಪಪನ್ನವಾಗುವದರಿಂದ[1]. ಸರಿ, ಯೋಗ್ಯತಾ ವಿಶೇಷಣದಿಂದೇನು ? 'ಯಾವುದು ತೋರುವದಿಲ್ಲವೋ ಅದು ಇಲ್ಲವೇ ಇಲ್ಲ' ಎಂದು ಹೇಳುವುದಾದಲ್ಲಿ[2]. ಇದು ಹಾಗೇ ಆಗಬಹುದಿತ್ತು (ನೀನು ಹೇಳಿದಂತೆ ಒಪ್ಪಬಹುದಿತ್ತು ), ಒಂದು ವೇಳೆ ವಾದಿಗಳಲ್ಲಿ ವಿವಾದ ಇಲ್ಲದ ಪ್ರಸಂಗದಲ್ಲಿ. 'ಅಯೋಗ್ಯವಾದುದರಿಂದ ರಸಾದಿಗಳು ಕಣ್ಣಿನ ಅರಿವಿಗೆ ಬರುವುದಿಲ್ಲ' ಎನ್ನುವದೂ ಇಲ್ಲವಾದೀತು[3].

(ಪ್ರಕೃತ) ವಾದಿಗಳಲ್ಲಿ ವಿವಾದ ಇರಲಾಗಿ, ಕೆಲವು ಸಂದರ್ಭದಲ್ಲಿ (ವಸ್ತುವು ಇದ್ದರೂ, ಪ್ರತ್ಯಕ್ಷಕ್ಕೆ) ಅಯೋಗ್ಯವಾದುದರಿಂದ ಅರಿವಿಗೆ ಬಾರದಿರಲು, (ಈ) ಪ್ರತ್ಯಕ್ಷಾನುಪಲಬ್ಧಿಯು ಸಂಶಯವನ್ನೇ ಉಂಟುಮಾಡುವುದು. '(ಚಕ್ಷುರಾದಿ ಇಂದ್ರಿಯಗಳ) ಅರಿವಿಗೆ ಬಾರದಿದ್ದರಿಂದ ಧರ್ಮಾದಿಗಳು ಇಲ್ಲವೋ, ಅಥವಾ

---

1. ಫಲಾದಿ ಪದಾರ್ಥಗಳಲ್ಲಿ ಮಧುರಾದಿ ರಸಗಳಿವೆ. ಅವು ಕಣ್ಣಿಗೆ ಕಾಣಲಿಲ್ಲ ಎಂದು ಇಲ್ಲ ಎಂದು ನಿರ್ಣಯಿಸಲು ಶಕ್ಯವಿಲ್ಲ. ರಸವು ಕಣ್ಣಿಗೆ ಕಾಣುವ ಪದಾರ್ಥವಲ್ಲ, ಆದುದರಿಂದ ಕಣ್ಣಿಗೆ ಕಂಡಿಲ್ಲ. ಹಾಗೆಯೇ 'ಧರ್ಮಾದಿಗಳು ಕಣ್ಣಿಗೆ ಕಾಣದ ಮಾತ್ರಕ್ಕೆ ಇಲ್ಲ ' ಎಂದು ನಿಶ್ಚಯಿಸಲು ಶಕ್ಯವಿಲ್ಲ ಎಂದು ಭಾವ.

2. 'ಧರ್ಮಾದಿಗಳು ಅತಿಸೂಕ್ಷ್ಮವಾದ ಪದಾರ್ಥಗಳು, ಈ ಸಾಮಾನ್ಯ ದರ್ಶನದ ಅರಿವಿಗೆ ಬರುವ ಪದಾರ್ಥಗಳು ಅಲ್ಲ ' ಎಂದು ಏಕೆ ಒಪ್ಪಬೇಕು? 'ಮೊಲದ ಕೋಡಿನಂತೆ ಇಲ್ಲದ ಪದಾರ್ಥ ಆದುದರಿಂದ ತೋರುತ್ತಿಲ್ಲ' ಎಂದು ಹೇಳುವುದಾದಲ್ಲಿ ಉತ್ತರಿಸುತ್ತಾರೆ.

3. ರೂಪದ ಅರಿವು ಕಣ್ಣಿನಿಂದ, ರಸದ ಅರಿವು ನಾಲಗೆಯಿಂದ. ಅಂದರೆ ಆಯಾ ಪದಾರ್ಥಗಳಲ್ಲಿ ವೈಶಿಷ್ಟ್ಯವು ಇರುವುದರಿಂದ ಆವಾವ ಇಂದ್ರಿಯಗಳ ಅರಿವಿಗೆ ಬರುವಂತೆ ವ್ಯವಸ್ಥೆಯನ್ನು ಒಪ್ಪಲಾಗಿದೆ. ಹೀಗೆ ವೈಶಿಷ್ಟ್ಯವನ್ನು ಒಪ್ಪದ ಪಕ್ಷದಲ್ಲಿ 'ಕಣ್ಣಿನ ಅರಿವಿಗೆ ಬಾರದೇ ಇರುವುದರಿಂದ ರಸವು ಇಲ್ಲ ' ಎಂದೆನ್ನಬೇಕಾದೀತು. ಹಾಗೆ ಹೇಳುವುದು ಲೋಕಾನುಭವಕ್ಕೆ ವಿರುದ್ಧ ಎಂದು ಭಾವ.

ಬೇರೇ ವಾದಿಗಳು ಹೇಳುವ ರೀತಿಯಂತೆ, ಕಣ್ಣಿನ ಅರಿವಿಗೆ ಬಾರದಿದ್ದರೂ, ರಸವೂ ರಸನೇಂದ್ರಿಯದಿಂದಲೇ (ಅರಿವಿಗೆ) ಬರುವಂತೆ, (ಈ ಧರ್ಮಾದಿಗಳು) ಪ್ರತ್ಯಕ್ಷದಿಂದ ಅಯೋಗ್ಯವಾದುದರಿಂದ ಅರಿವಿಗೆ ಬಾರದಿದ್ದರೂ, ಬೇರೆ ಪ್ರಮಾಣದಿಂದ (ಅರಿವಿಗೆ ಬರಬಹುದಾದುದರಿಂದ) ಇರಬಹುದು? ಎಂದು. ಲೋಕದ ರೀತಿ-ರಿವಾಜನ್ನು ಅತಿಕ್ರಮಿಸಿ, ತಮ್ಮ ಶಾಸ್ತ್ರದ ನಿಯಮ ಮಾತ್ರದಿಂದ (ಧರ್ಮದ ಬಗ್ಗೆ ಬಂದ) ಸಂಶಯವನ್ನು ನಿರಾಕರಿಸಲು ಆಗದು. ಹಾಗಾಗಿ ಈ ಸಂಶಯ ನಿರಾಕರಣೆಗಾಗಿಯಾದರೂ ಆಗಮಾದಿಗಳಿಗೆ ಪ್ರಾಮಾಣ್ಯವನ್ನು ಒಪ್ಪಬೇಕು. ಹಾಗಾದಲ್ಲಿ (ಆಗಮ-ಪ್ರಾಮಾಣ್ಯವನ್ನು ಒಪ್ಪಿದಲ್ಲಿ) ಆ ಆಗಮದಿಂದಲೇ ಧರ್ಮಾದಿಗಳ ಸಾಧನೆಯು ಸುಲಭ.

**ಆಗಮಪ್ರಾಮಾಣ್ಯವು ಸರ್ವರಿಗೂ ಅವಶ್ಯ**

**ಕಿಞ್ಚಾಽಗಮಾದಿಪ್ರಾಮಾಣ್ಯಾಭಾವೇ ಲೋಕವ್ಯಹಾರೋಚ್ಛೇದಃ ಪ್ರಸಜ್ಯೇತ । ನನು, ಸಂಭಾವನಾಮಾತ್ರೇಣ ತತ್ಸಿದ್ಧಿಃ ? ಸಂವಾದೇನ ಚ ಪ್ರಾಮಾಣ್ಯಾಭಿಮಾನ ಇತಿ ಚೇತ್, ಏವಂ ತರ್ಹಿ 'ಆಗಮಾದಿಕಂ ಜ್ಞಾನಮುತ್ಪಾದಯತಿ ತಚ್ಚ ಸಂವಾದೀ' ಇತ್ಯಙ್ಗೀಕೃತಮ್ । ಕಿಮತೋಽಧಿಕಂ ಪ್ರಾಮಾಣ್ಯಂ ನಾಮ, ಯನ್ನಾಙ್ಗೀಕ್ರಿಯತೇ ? ತದೇವಂ 'ಚಾರ್ವಾಕೇಣಾಪಿ ಧರ್ಮಾದಿಕಮಙ್ಗೀಕಾರ್ಯಮ್ ' ಇತಿ ಸ್ಥಿತಮ್ ।**

ಮತ್ತು ಸಹ ಆಗಮಾದಿಗಳಿಗೆ ಪ್ರಾಮಾಣ್ಯ ಇಲ್ಲ ಎಂದಾದಲ್ಲಿ ಲೋಕದ ವ್ಯವಹಾರಗಳು ನಾಶವಾಗಬೇಕಾದೀತು[1]. ಸರಿ ಆದರೆ, ಇವೆಲ್ಲ ಸಂಭಾವನೆ (ಹೀಗೂ ಇರಬಹುದು ಎನ್ನುವ ನಂಬಿಕೆಯ) ಮಾತ್ರದಿಂದ ಅದು (ಲೋಕ ವ್ಯವಹಾರವು) ಸಿದ್ಧವಾಗುವುದು, ಮತ್ತು (ಈ ಆಗಮ, ಅನುಮಾನಗಳಿಗೆ)

1. ಪರಸ್ಪರ ಕಲಹ ಬಂದಾಗ ನ್ಯಾಯವನ್ನು ಹೇಳುವವರು ಸಾಕ್ಷಿದಾರರ ಮಾತಿನಂತೆ. ಇತ್ಯಾದಿ ಅನೇಕ ಲೋಕವ್ಯವಹಾರಗಳು ಆಗಮದ ಪ್ರಾಮಾಣ್ಯದಿಂದಲೇ ನಡೆಯುವವು. ಹಾಗೆಯೇ ಅನುಮಾನದಿಂದಲೂ, ಕೃಷ್ಯಾದಿ ಕರ್ಮಗಳು ನಡೆಯುತ್ತವೆ, ಮಣ್ಣಿನಲ್ಲಿ ಬೀಜವನ್ನು ಬಿತ್ತುವುದು, ಗಗನದಿಂದ ಮಳೆಯನ್ನು ನಿರೀಕ್ಷಿಸುವುದು ಅನುಮಾನಕ್ಕೆ ಪ್ರಾಮಾಣ್ಯವನ್ನು ಒಪ್ಪದಿದ್ದಲ್ಲಿ ಈ ಎಲ್ಲ ಚಟುವಟಿಕೆಗಳು ನಿಲ್ಲಬೇಕಾದೀತು ಎಂದು ಭಾವ.

ಪ್ರತ್ಯಕ್ಷದ ಸಂವಾದ (ಸಮ್ಮತಿ) ಇದೆ ಆದುದರಿಂದ ಅವುಗಳನ್ನೂ 'ಪ್ರಮಾಣ' ಎಂದು ಕೇವಲ ಅಭಿಮಾನದಿಂದ ವ್ಯವಹರಿಸಲಾಗುವುದು ಎಂದಲ್ಲಿ, ಹಾಗಾದಲ್ಲಿ 'ಆಗಮಾದಿಗಳು ಅರಿವನ್ನು ಹುಟ್ಟಿಸುತ್ತವೆ, ಮತ್ತು ಅವು (ಪ್ರಮಾಣಾಂತರದ) ಸಂವಾದವನ್ನು ಹೊಂದಿವೆ' ಎಂದು ಒಪ್ಪಿದಂತಾಯಿತು. ಮತ್ತಿನ್ನೇನು ? ಇದಕ್ಕಿಂತ ಹೆಚ್ಚಿನ ಪ್ರಾಮಾಣ್ಯ ಅಂದರೇನು, ಯಾವುದನ್ನು (ನೀನು) ಒಪ್ಪುತ್ತಿಲ್ಲ[1]? ಹೀಗಾದಲ್ಲಿ 'ಚಾರ್ವಾಕನೂ ಧರ್ಮಾದಿಗಳನ್ನು ಒಪ್ಪಬೇಕು' ಎನ್ನುವುದು ಸ್ಥಿರವಾಯಿತು.

**ಪೌರುಷೇಯವಚನಗಳಿಂದ ಧರ್ಮಾದಿಗಳ ನಿಶ್ಚಯವಾಗದು**

**ನ ಚ ಪೌರುಷೇಯೇಣ ವಾಕ್ಯೇನ ತತ್ಸಿದ್ಧಿಃ, ಅಜ್ಞಾನವಿಪ್ರಲಮ್ಭಯೋಃ ಪ್ರಾಪ್ತೇಃ**

ಪುರುಷ ನಿರ್ಮಿತವಾದ ವಾಕ್ಯದಿಂದ ಅದರ (ಧರ್ಮಾದಿಗಳ) ಸಿದ್ಧಿಯು ಆಗದು. ( ಜನ ಸಾಮಾನ್ಯರಲ್ಲಿ ಸಂಭಾವಿತವಾದಂತೆ) ಅಜ್ಞಾನ ಮೋಸಗಾರಿಕೆಗಳು ( ಈ ಧರ್ಮೋಪದೇಶಕನಲ್ಲೂ) ಸಂಭಾವಿತವಾದುದರಿಂದ.

ನನು, ಅಸ್ತ್ವೇವಂ ಧರ್ಮಾದಿಕಂ, ತಚ್ಚ ಬುದ್ಧರ್ಷಭೇಶ್ವರಕಪಿಲಾದಿಪುರುಷವಚಸೈವ ಸೇತ್ಸ್ಯತಿ, ತತ್ಕಿಮಪೌರುಷೇಯವಾಕ್ಯಾಙ್ಗೀಕಾರೇಣ? ಇತ್ಯತ ಆಹ '**ನ ಚ ಪೌರುಷೇಯೇಣ**' ಇತಿ ॥ **ತತ್ಸಿದ್ಧಿ** : - ಧರ್ಮಾದಿನಿಶ್ಚಯಃ । ತತ್ರ ಹೇತುಮಾಹ '**ಅಜ್ಞಾನ...**' ಇತಿ ॥ ವಿವಕ್ಷಿತಾರ್ಥತತ್ತ್ವಜ್ಞಾನಾಭಾವಃ- **ಅಜ್ಞಾನಮ್** । ಜ್ಞಾತ್ವಾऽಪಿ ಪರಪ್ರತಾರಣಂ-**ವಿಪ್ರಲಂಭಃ**। ಮಿಥ್ಯಾಜ್ಞಾನಪ್ರಮಾದಾಪಟುಕರಣತ್ವಾನಾಮ್ ಅಪ್ಯುಪಲಕ್ಷಣಮೇತತ್ । **ಪ್ರಾಪ್ತೇಃ**- ಪುರುಷೇಷು ಸಂಭವಾತ್ । ಪುರುಷಾಣಾಂ ಬಹುಲಮಜ್ಞಾನವಿಪ್ರಲಮ್ಭಾದ್ಯುಪಲಮ್ಭೇನ ಬುದ್ಧರ್ಷಭಾದಿಷ್ವಪಿ ತತ್ಸಂಭಾವನಯಾऽऽಶ್ವಾಸಾನುಪಪತ್ತೇಃ, ನ ತದ್ವಾಕ್ಯೇನ ಧರ್ಮಾದಿನಿಶ್ಚಯಃ ಸಮ್ಭವತಿ ।

1. ಆಗಮಾನುಮಾನಗಳು ಪ್ರಮಾಣವಲ್ಲ ಎನ್ನುವುದು, ಆದರೆ ಅವುಗಳಿಂದ ಲೋಕವ್ಯವಹಾರವನ್ನು ಒಪ್ಪುವುದು, ಅವುಗಳಿಗೆ ಪ್ರಮಾಣಾಂತರ ಸಂವಾದವಿದೆ ಎನ್ನುವುದು, ಅದರಿಂದ ಅರಿವು ಪ್ರಾಪ್ತವಾಗುವುದು ಎಂದು ಒಪ್ಪುವುದು. ಪ್ರಮಾಕರಣಗಳಿಗೆ ಇವೆಲ್ಲಕ್ಕಿಂತ ಮಿಗಿಲಾದ ಪ್ರಾಮಾಣ್ಯ ಎನ್ನುವುದು ಬೇರೇ ಇರದು ಎಂದು ಭಾವ.

ಸರಿ, ಧರ್ಮಾದಿಗಳು ಈ ರೀತಿಯೇ ಇರಲಿ (ಆಗಮವೇದ್ಯವೇ ಆಗಿರಲಿ), ಅದು (ಧರ್ಮಾದಿಗಳು) ಬುದ್ಧ, ಋಷಭ, ಈಶ್ವರ, ಕಪಿಲ ಮುಂತಾದ ಪುರುಷರ ವಾಕ್ಯಗಳಿಂದಲೇ ಸಿದ್ಧವಾಗುವುದು. ಆದುದರಿಂದ ಅಪೌರುಷೇಯ ವಾಕ್ಯದ ಅಂಗೀಕಾರವೇಕೆ ? ಎಂದು. ಆದುದರಿಂದ ಉತ್ತರಿಸುತ್ತಾರೆ. **'ನ ಚ ಪೌರುಷೇಯೇಣ'** ಎನ್ನುವುದರಿಂದ. **ತತ್ಸಿದ್ಧಿಃ** - ಧರ್ಮಾದಿಗಳ ನಿಶ್ಚಯವು, ಈ ವಿಷಯದಲ್ಲಿ ಕಾರಣವನ್ನು ತಿಳಿಸುತ್ತಾರೆ- **'ಅಜ್ಞಾನ'** ಎನ್ನುವುದರಿಂದ. ವಿವಕ್ಷಿತವಾದ ತತ್ತ್ವಗಳ ಜ್ಞಾನದ ಅಭಾವವು - **'ಅಜ್ಞಾನಂ'**. (ತತ್ತ್ವಗಳನ್ನು) ತಿಳಿದೂ ಮತ್ತೊಬ್ಬರನ್ನು ಮೋಸಗೊಳಿಸುವಿಕೆಯು - **ವಿಪ್ರಲಂಭಃ**. ಇದು (ಅಜ್ಞಾನ ಎನ್ನುವ ಶಬ್ದವು) ಭ್ರಾಂತಿ, ಅನವಧಾನ, ಇಂದ್ರಿಯಗಳಲ್ಲಿನ ದೋಷಗಳಿಗೂ ಸೂಚಕ. **ಪ್ರಾಪ್ತೇಃ** - ಪುರುಷರಲ್ಲಿ ಸಂಭಾವಿತವಾದುದರಿಂದ. ಸಾಮಾನ್ಯವಾಗಿ ಪುರುಷರಲ್ಲಿ ಅಜ್ಞಾನ, ಮೋಸಗಾರಿಕೆ ಮುಂತಾದವು ಕಂಡಿರುವುದರಿಂದ, ಬುದ್ಧ, ಋಷಭಾದಿಗಳಲ್ಲೂ ಸಹ ಇವು ಸಂಭಾವಿತವಾಗಿದೆ ಆದುದರಿಂದ (ಅವರುಗಳಲ್ಲಿ) ವಿಶ್ವಾಸ ಬರಲಾರದು, ಆದುದರಿಂದ ಅವರ ವಾಕ್ಯಗಳಿಂದ ಧರ್ಮಾದಿಗಳ ನಿಶ್ಚಯವಿಲ್ಲ.

**-: ವೇದಾಪೌರುಷೇಯವಾದ ಸಮಾಪ್ತಿ :-**

**॥ ವೇದದಿಂದಲೇ ಧರ್ಮದ ಸಿದ್ಧಿ ॥**

ಈ ವೇದಾಪೌರುಷೇಯತ್ವದ ವಿಷಯದಲ್ಲಿ ನಮ್ಮವರೇ ಆದ ವೇದಪ್ರಾಮಾಣ್ಯವಾದಿಗಳಾದ ನೈಯಾಯಿಕೇ ಮುಂತಾದವರು ಕಿವಿಯನ್ನು ಹಿಂಡುವರು. ಜೊತೆಯಲ್ಲಿ ಧರ್ಮಾದಿಗಳನ್ನು ಒಪ್ಪಿದ ಬೌದ್ಧಜೈನಾದಿಗಳೂ ಇದನ್ನು ಒಪ್ಪರು. ಈ ಎಲ್ಲರ ನಿಭಾವಣೆಯನ್ನು ಇಲ್ಲಿ ಕಾಣಬಹುದಾಗಿದೆ. ಧರ್ಮಾದಿಗಳ ಸಿದ್ಧಿಗಾಗಿ ಅಪೌರುಷೆಯವಾದ ವಾಕ್ಯದ ಅಗತ್ಯವಿಲ್ಲ ಸರ್ವಜ್ಞನನಾದ ಪುರುಷನ ನುಡಿಯಿಂದಲೇ ಧಾವರ್ಮಾದಿಗಳ ನಿಶ್ಚಯವಾಗಬಹುದಲ್ಲವೇ? ಕಾಳದಾಸಾದಿಗಳ ವಾಕ್ಯದಂತೆ ವೇದಗಳಲ್ಲೂ ವಾಕ್ಯಗಳಿವೆ. ಇಂತಹ ವಾಕ್ಯಗಳಿಗೆ ಒಬ್ಬ ಕರ್ತಾ ಇಲ್ಲ ಎನ್ನುವುದು ತರವೇ? ಗುಹೆಯೊಳಗೆ ಇರುವ ಅಂಕುರಕ್ಕೆ ನಾವಾರು ಕರ್ತೃವನ್ನು ಗಮನಿಸಿಲ್ಲ ಅಂದಮಾತ್ರಕ್ಕೆ ಅದನ್ನು ಸ್ವಯಂಭೂ ಎನ್ನಲು ಶಕ್ಯವೆ? ಇತ್ಯಾದಿಗಳನ್ನು ಚರ್ಚಿಸುತ್ತಾ , ಈ ಜಗದಲ್ಲಿ ಎಲ್ಲಿಯೂ ಕಾಣದ ಸರ್ವಜ್ಞನ್ನು ಕಲ್ಪಿಸುವುದು,

'ಮತ್ತಾವುದೋ ವಚನಗಳು ಸರ್ವಜ್ಞನ ನುಡಿ' ಎಂದು ಕಲ್ಪಿಸುವುದು ಇನ್ನೂ ಇಂತಹ ಅನೇಕ ಕಲ್ಪನೆಗಳು ತರವಲ್ಲ. ಅಪೌರುಷೇಯವಾದ ವೇದದಿಂದ ಧರ್ಮಾದಿಗಳ ಸಿದ್ಧಿ ಎಂದು ತಿಳಿಸಿರುತ್ತಾರೆ.

**ಸರ್ವಜ್ಞನ ಕಲ್ಪನೆಯು ಉಚಿತವಲ್ಲ**

**ನ ಚ ತದರ್ಥತ್ವೇನ ಸರ್ವಜ್ಞಃ ಕಲ್ಪ್ಯೇತ । ಅನ್ಯತ್ರಾದೃಷ್ಟಸ್ಯ ಸರ್ವಜ್ಞತ್ವಸ್ಯ ಕಲ್ಪನಂ, ತಸ್ಯಾವಿಪ್ರಲಮ್ಭಕತ್ವಂ, ತಸ್ಯ ತತ್ಕೃತತ್ವಕಲ್ಪನಂ ಚೇತಿ ಕಲ್ಪನಾಗೌರವಪ್ರಾಪ್ತೇಃ ।**

'ಬೇರೆಡೆಯಲ್ಲಿ ಕಾಣದ ಸರ್ವಜ್ಞತ್ವದ ಕಲ್ಪನೆ, ಆತನು (ಕಲ್ಪಿತನಾದ ಸರ್ವಜ್ಞನು) ಮೋಸಗಾರನಲ್ಲ ಎಂಬ ಕಲ್ಪನೆ, ಆತನು ಅವುಗಳನ್ನು (ಧರ್ಮಾಧರ್ಮಬೋಧಕವಾಕ್ಯಗಳನ್ನು) ನಿರ್ಮಿಸಿರುವನು ಎಂಬ ಕಲ್ಪನೆ' ಎಂದು, ಕಲ್ಪನಾಗೌರವವು ಪ್ರಾಪ್ತವಾಗುವುದರಿಂದ, 'ಅದರ (ಧರ್ಮಾದಿಗಳ) ಸಿದ್ಧಿಗಾಗಿ ಸರ್ವಜ್ಞನನ್ನು ಕಲ್ಪಿಸಲಾಗುವುದು' ಎನ್ನುವುದು ಉಚಿತವಲ್ಲ.

ನನು, 'ಧರ್ಮಾದೇರುಪದೇಷ್ಟಾ ಬುದ್ಧಃ ಸರ್ವಜ್ಞೋಽಙ್ಗೀಕ್ರಿಯತೇ? ಧರ್ಮಾದಿಸಾಕ್ಷಾತ್ಕಾರವತಶ್ಚ ನ ತಸ್ಯ ರಾಗದ್ವೇಷಾದಿದೋಷಾಃ ಸಮ್ಭವನ್ತಿ, ಅಜ್ಞಾನಮೂಲತ್ವಾತ್ ತೇಷಾಮ್ । ಯಥಾಽಽಹ ಪತಂಜಲಿಃ 'ಅವಿದ್ಯಾಕ್ಷೇತ್ರತ್ವಮುತ್ತರೇಷಾಂ' ಇತಿ । ರಾಗಾದಿರಹಿತಸ್ಯ ಚ ನ ವಿಪ್ರಲಮ್ಭಃ ಸಂಭವತಿ, ತಸ್ಯ ತತ್ಕಾರ್ಯತ್ವಾತ್ । ನಹ್ಯೇವಮೇವ ಕಶ್ಚಿತ್ ಕಞ್ಚಿತ್ ವಿಪ್ರಲಬ್ಧುಮಿಚ್ಛತಿ । ನಚೈವಮ್ಭೂತಸ್ಯ ಮಹಾನುಭಾವಸ್ಯ ಕರಣಪಾಟವಾ-ದ್ಯಭಾವಸಮ್ಭಾವನಾಽಸ್ತಿ । ಅತಃ ತಸ್ಮಿನ್ನನಾಶ್ವಾಸಕಾರಣಾಭಾವಾದು-ಪಪನ್ನಸ್ತದ್ವಾಕ್ಯೇನ ಧರ್ಮಾದಿನಿಶ್ಚಯಃ' ಇತಿ ಬೌದ್ಧಾಃ । ಏವಮಾರ್ಹತಾ-ದಯೋಪಿ ಸ್ವಸ್ವಾಚಾರ್ಯಸಾರ್ವಜ್ಞಮಙ್ಗೀಕುರ್ವಾಣಾಃ । ತಾನ್ ಪ್ರತ್ಯಾಹ 'ನ ಚ' ಇತಿ । 'ಪೌರುಷೇಯೇಣ ವಾಕ್ಯೇನ ಧರ್ಮಾದಿಸಿದ್ಧಿಃ ' ತತ್ ಇತಿ ಪರಾಮೃಶ್ಯತೇ । ಸೋಽರ್ಥಃ - ಪ್ರಯೋಜನಂ ಯಸ್ಯ ಸರ್ವಜ್ಞಕಲ್ಪನಸ್ಯ ತತ್ ತಥೋಕ್ತಂ । ತಸ್ಯ ಭಾವಃ - ತತ್ತ್ವಂ । ತೃತೀಯಾ- ಹೇತೌ । ಸರ್ವಜ್ಞಕಲ್ಪನಾಯಾಃ ಪೌರುಷೇಯವಾಕ್ಯೇನ ಧರ್ಮಾದಿ ನಿಶ್ಚಯಃ ಪ್ರಯೋಜನಂ ಯತ ಇತಿ ।

**ಅರ್ಥಶಬ್ದೋ ನಿವೃತ್ತಿವಚನ ಇತಿ ಕೇಚಿತ್ । ತತ್ರ 'ಅಜ್ಞಾನಾದಿಪ್ರಾಪ್ತಿಃ' 'ತತ್' ಶಬ್ದೇನ ಪರಾಮೃಶ್ಯತೇ, ಅರ್ಥಶಬ್ದಶ್ಚಾಽವರ್ತನೀಯಃ । ತಸ್ಯಾ ಅರ್ಥೋ ನಿವೃತ್ತಿಃ ತದರ್ಥಃ । ಸೋಽರ್ಥಃ - ಪ್ರಯೋಜನಂ ಯಸ್ಯ ಸರ್ವಜ್ಞಕಲ್ಪನಸ್ಯೇತಿ । ಉಕ್ತನ್ಯಾಯೇನ ಸರ್ವಜ್ಞೇ ಕಲ್ಪಿತೇ ವಿಪ್ರಲಂಭಾದ್ಯಭಾವಸ್ತತ ಏವ ಸೇತ್ಸ್ಯತೀತಿ ಪೂರ್ವಪಕ್ಷಿಣಾಭಿಪ್ರೇತತ್ವಾತ್ 'ಸರ್ವಜ್ಞಃ' ಇತ್ಯೇವೋಕ್ತಮ್ ।**

ಸರಿ, ಸರ್ವಜ್ಞನಾದ ಬುದ್ಧನು ಧರ್ಮಾದಿಗಳ ಉಪದೇಶಕನು ಎಂದು ಒಪ್ಪಲಾಗಿದೆ. ಧರ್ಮಾದಿಗಳ ಸಾಕ್ಷಾತ್ಕಾರವನ್ನು ಹೊಂದಿದ ಆತನಲ್ಲಿ ರಾಗದ್ವೇಷಾದಿ ದೋಷಗಳು ಸಂಭಾವಿತವಲ್ಲ, ರಾಗಾದಿಗಳಿಗೆ, ಅಜ್ಞಾನವೇ ಮೂಲ[1]. ಎಂದು. ಪತಂಜಲಿಗಳು ತಿಳಿಸಿರುವರು- 'ಅವಿದ್ಯಾಕ್ಷೇತ್ರತ್ವಂ ಉತ್ತರೇಷಾಂ' (ರಾಗ, ದ್ವೇಷ, ಮಾತ್ಸರ್ಯ, ಮೋಸ ಮುಂತಾದವುಗಳಿಗೆ ಅಜ್ಞಾನವೇ ನೆಲೆವೀಡು.) ಎಂದು. ರಾಗಾದಿ ದೋಷರಹಿತನಾದ ವ್ಯಕ್ತಿಯಲ್ಲಿ ಮೋಸಗಾರಿಕೆ ಸಂಭಾವಿತವಲ್ಲ. ಮೋಸಗಾರಿಕೆಗೆ ಕಾರಣ ರಾಗಾದಿ ದೋಷಗಳು. ಯಾರೂ ಯಾರನ್ನೂ ಕಾರಣವಿಲ್ಲದೇ ಮೋಸ ಮಾಡಲಾರರು. ಈ ರೀತಿಯಾದ ಮಹಾನುಭಾವನಿಗೆ ಕರ್ಣಪಾಟವಾದಿಗಳು ಇರಲಿಕ್ಕಿಲ್ಲ ಎಂಬ ಸಂಭಾವನೆಯು ಸಲ್ಲದು[2]. ಆದುದರಿಂದಲೇ ಆತನಲ್ಲಿ ಅವಿಶ್ವಾಸಕ್ಕೆ ಕಾರಣವಿಲ್ಲದಿರುವುದರಿಂದ, ಅವನ ವಾಕ್ಯಗಳಿಂದ ಧರ್ಮಾದಿಗಳ ನಿಶ್ಚಯವು ಉಪಪನ್ನವಾಗಿದೆ, ಎಂದು ಬೌದ್ಧರು. ಇದೇ ರೀತಿಯಾಗಿ ಜೈನರು ಮೊದಲಾದ ವಾದಿಗಳು ತಮ್ಮ ತಮ್ಮ ಆಚಾರ್ಯರನ್ನು ಸರ್ವಜ್ಞರು ಎಂದು ಒಪ್ಪುವರು.

---

1. ಧನ-ವನಿತಾದಿಗಳಲ್ಲಿ ನಮಗೆ ಅತಿರಾಗವಿದೆ. ಅದಕ್ಕೆ ಕಾರಣ ಅವುಗಳು ನಮಗೆ ಮುದ ನೀಡುವವು ಎಂಬಿತ್ಯಾದಿ ಅಜ್ಞಾನ. ಹೀಗೆ ಎಲ್ಲೆಡೆಯೂ ವಿಷಯಗಳಲ್ಲಿನ ರಾಗಕ್ಕೆ ಅಜ್ಞಾನವೇ ಕಾರಣ ಎಂದು ಭಾವ.

2. ಅಂತಹ ವ್ಯಕ್ತಿಯೋರ್ವನು ಸರ್ವಜ್ಞನಾಗಿದ್ದಾನೆ, ಧರ್ಮಾದಿಗಳನ್ನು ಸಾಕ್ಷಾತ್ಕರಿಸಿಕೊಂಡಿದ್ದಾನೆ. ರಾಗಾದಿ ದೋಷಗಳಿಲ್ಲ, ಮೋಸಗಾರಿಕೆಯಿಲ್ಲ ಇಂತಹ ವ್ಯಕ್ತಿಯ ಇಂದ್ರಿಯಗಳು ವಿಷಯಗ್ರಹಣದಲ್ಲಿ ಅಪಟುವಾಗಿರಲಾರವು ಎಂದು ಸಂಶಯಿಸಲು ಶಕ್ಯವೇ ಇಲ್ಲ ಎಂದು ಭಾವ.

ಅವರನ್ನು ಉದ್ದೇಶಿಸಿ ಹೇಳುತ್ತಾರೆ '**ನಚ**' ಎಂದು. ('ತದರ್ಥತ್ವೇನ' ಎಂಬ ಮೂಲದಲ್ಲಿನ ಪದವನ್ನು ವಿಭಜಿಸಿ ವಿವರಿಸುತ್ತಾರೆ.) '**ತತ್**' ಎನ್ನುವ ಪದವು 'ಪುರುಷನಿರ್ಮಿತವಾಕ್ಯದಿಂದ ಧರ್ಮಾದಿಗಳ ಸಿದ್ಧಿ' ಎಂಬುದನ್ನು ಪರಾಮರ್ಶಿಸುತ್ತದೆ[1]. **ಸೋಽರ್ಥಃ**- 'ಯಾವ ಸರ್ವಜ್ಞನ ಕಲ್ಪನೆಯು ಆ ಪ್ರಯೋಜನವನ್ನು' ಎಂದು ತಿಳಿಸಿದಂತಾಯಿತು. ಅದರ ತನವೇ 'ತತ್ವ' (ತದರ್ಥತ್ವ). (ಪ್ರಸಕ್ತಶಬ್ದದಲ್ಲಿನ) ತೃತೀಯಾವು (ವಿಭಕ್ತಿಯು) ಹೇತುವಿನಲ್ಲಿ (ಕಾರಣಾರ್ಥದಲ್ಲಿದೆ)[2]. 'ಪುರುಷವಾಕ್ಯದಿಂದ ಧರ್ಮಾದಿನಿಶ್ಚಯ ಎಂಬ ಪ್ರಯೋಜನವು ಯಾವುದರಿಂದ, ಆ ಸರ್ವಜ್ಞನ ಕಲ್ಪನೆಯಿಂದ' ಎಂದು[3].

ಕೆಲವರು (ಈ ವಾಕ್ಯದಲ್ಲಿರುವ) ಅರ್ಥ ಶಬ್ದವು 'ನಿವೃತ್ತಿ' ಎಂಬ ಅರ್ಥವನ್ನು ಹೇಳುತ್ತದೆ ಎಂದು ತಿಳಿಸಿರುವರು. ಆ ಅರ್ಥವನ್ನು ಸ್ವೀಕರಿಸಿದಲ್ಲಿ 'ತತ್' ಎಂಬ ಶಬ್ದವು 'ಅಜ್ಞಾನಾದಿ ಪ್ರಾಪ್ತಿ'ಯನ್ನು ಪರಾಮರ್ಶಿಸುತ್ತದೆ. 'ಅರ್ಥ' ಶಬ್ದವನ್ನು ಪುನರಾವರ್ತಿಸಬೇಕು[4]. ಸರ್ವಜ್ಞನಾದ ವ್ಯಕ್ತಿಯ ಕಲ್ಪನೆಯು (ಧರ್ಮೋಪದೇಶಕನಾದ ವ್ಯಕ್ತಿಯಲ್ಲಿ) ಅಜ್ಞಾನ, ಮೋಸಗಾರಿಕೆಗಳ ನಿವೃತ್ತಿಯನ್ನು ಸಾಧಿಸುವ ಪ್ರಯೋಜನಕ್ಕಾಗಿ ಎಂದು ('ತದರ್ಥತ್ವೇನ' ಎನ್ನುವ)ವಾಕ್ಯದ ಭಾವವಾಗುವುದು. (ಈ ಹಿಂದೆ) ಹೇಳಿದ ಯುಕ್ತಿಯಿಂದ ಸರ್ವಜ್ಞನಾದ ವ್ಯಕ್ತಿಯೋರ್ವನ ಕಲ್ಪನೆ ಮಾಡಲಾಗಿ, ಅದರಿಂದಲೇ ಆ ವ್ಯಕ್ತಿಯಲ್ಲಿ ಮೋಸಗಾರಿಕೆ ಮೊದಲಾದವುಗಳು ಇಲ್ಲವೆಂದು

---

1. ತತ್ ಎನ್ನುವುದು ಸರ್ವನಾಮವಾಚಕ ಶಬ್ದವಾಗಿದೆ. ಅದು ಪೂರ್ವೋಕ್ತವಾದದ್ದನ್ನು ಪರಾಮರ್ಶಿಸುತ್ತದೆ. ಪ್ರಕೃತ ಪ್ರಸಕ್ತವಾದದ್ದು 'ಧರ್ಮಾದಿಸಿದ್ಧಿ' ಮತ್ತು 'ಅಜ್ಞಾನ ವಿಪ್ರಲಂಭಗಳು' ಇವುಗಳಲ್ಲಿ ಧರ್ಮಾದಿಸಿದ್ಧಿಯನ್ನು 'ತತ್' ಶಬ್ದವು ಪರಾಮರ್ಶಿಸುತ್ತದೆ ಎಂದು ಭಾವ.

2. ಪ್ರಾಯಃ ತೃತೀಯಾ ವಿಭಕ್ತಿಯು ಕರಣಾರ್ಥದಲ್ಲಿರುತ್ತದೆ.'ಕೊಡಲಿಯಿಂದ ವೃಕ್ಷವನ್ನು ಕಡಿಯುತ್ತಾನೆ' ಇತ್ಯಾದಿ ವಾಕ್ಯಗಳಲ್ಲಿ ಕಾಣಬಹುದು. ಆದರೆ ಪ್ರಕೃತದಲ್ಲಿ ಕಾರಣಾರ್ಥದಲ್ಲಿ ಅಂದರೆ ಪಂಚಮೀ ವಿಭಕ್ತ್ಯರ್ಥದಲ್ಲಿ ಬಳಸಲಾಗಿದೆ ಎಂದು ತಿಳಿಸಲಾಗಿದೆ.

3. '**ತದರ್ಥತ್ವೇನ....**' ಎಂಬ ವಾಕ್ಯದ ಒಟ್ಟು ತಾತ್ಪರ್ಯಾರ್ಥವನ್ನು ತಿಳಿಸಿರುವರು.

4. 'ತದರ್ಥಾರ್ಥತ್ವೇನ' ಎಂದಾಗುವುದು ಎಂದು ಭಾವ.

ಸಾಧಿಸಲಾಗುವುದು ಎಂದು ಪೂರ್ವಪಕ್ಷಕಾರರ ಅಭಿಪ್ರಾಯವಾದುದರಿಂದ (ಆಚಾರ್ಯರು) 'ಸರ್ವಜ್ಞಃ' ಎಂದಿಷ್ಟೇ ಹೇಳಿರುವರು[1].

**'ಅನ್ಯತ್ರಾದೃಷ್ಟಸ್ಯ' ಎಂಬ ವಾಕ್ಯದ ಬಹುರೂಪ**

**ಕುತೋ ನ? ಇತ್ಯತ ಆಹ 'ಅನ್ಯತ್ರ' ಇತಿ ॥ ಏವಂ ವದತಾ ತಾವತ್ ಕಸ್ಮಿಂಶ್ಚಿತ್ ಪುರುಷೇ ವಿನಾ ಪ್ರಮಾಣೇನ ಸರ್ವಜ್ಞತ್ವಸ್ಯ ಕಲ್ಪನಂ ಕಾರ್ಯಮ್ । ತಥಾಹಿ- ನ ತಾವತ್ ತದೀಯೇ ಸಾರ್ವಜ್ಞೇऽಸ್ಮಾಕಂ ಪ್ರತ್ಯಕ್ಷಮಸ್ತಿ । ಅಸ್ಮಾಕಮಪಿ ತತ್ಪ್ರಸಂಗಾತ್ । ಸರ್ವಂ ಹಿ ಜ್ಞಾತ್ವಾ ತದೀಯಜ್ಞಾನಸ್ಯ ತದ್ವಿಷಯತ್ವಂ ಪ್ರತ್ಯಕ್ಷೇಣಾವಗನ್ತವ್ಯಮ್ ? ನ ಚಾಸ್ಮಾಕಂ ಸಾರ್ವಜ್ಞಮಸ್ತಿ । ತಥಾತ್ವೇ , ಬುದ್ಧಾದಿಕಲ್ಪನಾ ವೈಯರ್ಥ್ಯಾತ್ । ತದಿದಮುಕ್ತಮ್, ಅನ್ಯತ್ರ- ಅಸ್ಮಾಸು, ಅದೃಷ್ಟಸ್ಯ ಇತಿ । ಅನುಭವವಿರುದ್ಧಂ ಚಾಸ್ಮಾಕಂ ಪರಚಿತ್ತವೃತ್ತಿಪ್ರತ್ಯಕ್ಷೀಕರಣಮ್ ।**

**ನಾಪ್ಯನುಮಾನಮ್ , ಯದ್ಧಿ ಯೇನ ಧರ್ಮೇಣ ವ್ಯಾಪ್ತಮ್ ಅನ್ಯತ್ರೋಪಲಬ್ಧಂ , ತತ್ ತಸ್ಯೈವಗಮಕಂ ಭವತಿ । ನ ಚ ಸರ್ವಜ್ಞತ್ವಮ್ ಅನ್ಯತ್ರ ದೃಷ್ಟಮ್ । ಯೇನಾऽನುಮಾನಸ್ಯ ವ್ಯಾಪ್ತಿರ್ಗೃಹ್ಯೇತ । ಏತದಪ್ಯುಕ್ತಂ 'ಅನ್ಯತ್ರಾದೃಷ್ಟಸ್ಯ' ಇತಿ ।**

(ಸರ್ವಜ್ಞಪುರುಷನೋರ್ವನ ಕಲ್ಪನೆ) ಏಕಾಗದು ? ಆದುದರಿಂದ ಉತ್ತರಿಸುತ್ತಾರೆ. 'ಅನ್ಯತ್ರ' ಎಂದು. (ಸರ್ವಜ್ಞನಾದ ಪುರುಷನೋರ್ವನ ವಾಕ್ಯದಿಂದ ಧರ್ಮಾದಿಗಳು ಸಿದ್ಧವಾಗುವವು) ಎಂದು ವಾದಿಸುವವರು ಮೊದಲು ಪುರುಷನೋರ್ವನಲ್ಲಿ ಸರ್ವಜ್ಞತ್ವವನ್ನು ಪ್ರಮಾಣವಿಲ್ಲದೆ ಕಲ್ಪಿಸಬೇಕು. ಏಕೆಂದರೆ- ಆ (ಸರ್ವಜ್ಞನು ಎಂದು ಕಲ್ಪಿತನಾದ) ವ್ಯಕ್ತಿಯಲ್ಲಿನ

1. ವಸ್ತುತಃ ಬೌದ್ಧಾದಿ ವಾದಿಗಳು, ಧರ್ಮೋಪದೇಶಕನಲ್ಲಿ ಸರ್ವಜ್ಞತ್ವ, ಅಪಟುಕರಣತ್ವ, ಅವಿಪ್ರಲಂಭಕತ್ವ ಮುಂತಾದವುಗಳನ್ನು ಕಲ್ಪಿಸಬೇಕು. ಆದರೆ ಪರವಾದಿಗಳು ಸರ್ವಜ್ಞತ್ವವನ್ನು ಮಾತ್ರ ಕಲ್ಪಿಸಿ, ಅತನು ಸರ್ವಜ್ಞನಾದುದರಿಂದ ಆತನಲ್ಲಿ ರಾಗಾದಿಗಳಿಲ್ಲ ಆದುದರಿಂದ ಆತ ಮೋಸಮಾಡಲು ಇಚ್ಛಿಸುವುದಿಲ್ಲ ಇತ್ಯಾದಿಯಾಗಿ ವಾದವನ್ನು ಮಂಡಿಸಿರುವರು. ಆದುದರಿಂದ ಅವರ ವಾದದ ಬೀಜವಾದ 'ಸರ್ವಜ್ಞತ್ವ' ಎನ್ನುವುದನ್ನು ಮಾತ್ರ ಆಚಾರ್ಯರು ಪರಿಗ್ರಹಿಸಿ ನಿರಾಕರಿಸುತ್ತಿರುವರು ಎಂದು ಭಾವ.

ಸರ್ವಜ್ಞತ್ವವು ನಮ್ಮ ಪ್ರತ್ಯಕ್ಷಕ್ಕೆ ನಿಲುಕದು. ಹಾಗಾದಲ್ಲಿ ನಾವೂ ಸರ್ವಜ್ಞರಾಗಬೇಕಾದೀತು.(ಏಕೆಂದರೆ ನಾವು) ಎಲ್ಲವನ್ನು ತಿಳಿದು, 'ಆತನ ಅರಿವಿನಲ್ಲಿ ಎಲ್ಲ ವಿಷಯಗಳೂ ಒಳಗೊಂಡಿದೆ' ಎನ್ನುವುದನ್ನು ಪ್ರತ್ಯಕ್ಷದಿಂದ ತಿಳಿಯಬೇಕು. (ಆದರೆ) ನಾವು ಎಲ್ಲವನ್ನೂ ಅರಿತಿಲ್ಲ. ಹಾಗಾದಲ್ಲಿ (ನಾವೇ ಎಲ್ಲವನ್ನೂ ಅರಿತಲ್ಲಿ )ಬುದ್ಧಾದಿಗಳನ್ನು (ಸರ್ವಜ್ಞರು ಎಂದು) ಕಲ್ಪಿಸುವುದು ವ್ಯರ್ಥ, ಈ ವಿಷಯವನ್ನು ತಿಳಿಸುವರು ಅನ್ಯತ್ರ - ನಮ್ಮಗಳಲ್ಲಿ ಅದೃಷ್ಟಸ್ಯ ಎಂದು[1]. ಮತ್ತು ಅನ್ಯರ ಮನದಲ್ಲಿನ ಜ್ಞಾನವನ್ನು ನಾವು ಪ್ರತ್ಯಕ್ಷೀಕರಿಸಿ ಕೊಳ್ಳುವುದು ಅನುಭವವಿರುದ್ಧವಾಗಿದೆ[2].

ಅನುಮಾನದಿಂದಲೂ ತಿಳಿಯಲು ಸಾಧ್ಯವಿಲ್ಲ. ಯಾವ ಒಂದು ಪದಾರ್ಥವು ಪದಾರ್ಥಾಂತರದಿಂದ ವ್ಯಾಪ್ತವಾಗಿರುವುದೋ, ಆ ಒಂದು ಪದಾರ್ಥವು (ದೇಶ ವಿಶೇಷದಲ್ಲಿ ಕಂಡಲ್ಲಿ)ಅದೂ ಆ (ವ್ಯಾಪಕವಾದ) ಪದಾರ್ಥಕ್ಕೆ ಗಮಕವಾಗಿರುತ್ತದೆ[3]. (ಪ್ರಕೃತದಲ್ಲಿ) ಸರ್ವಜ್ಞತ್ವವು ಬೇರೆಡೆಯಲ್ಲಿ ಕಂಡಿಲ್ಲ. ಕಂಡಿದ್ದರೆ (ಸಾರ್ವಜ್ಞವನ್ನು ಸಾಧಿಸುವ)ಅನುಮಾನಕ್ಕೆ ವ್ಯಾಪ್ತಿಯು ಗೃಹೀತವಾಗುತ್ತಿತ್ತು[4]. ಇದನ್ನೂ ಸಹ ತಿಳಿಸಿರುವರು 'ಅನ್ಯತ್ರಾದೃಷ್ಟಸ್ಯ' ಎನ್ನುವುದರಿಂದ.

**ಆಗಮೋಽಪಿ ನ ತಾವದಪೌರುಷೇಯಃ ಪರೇಣಾಙ್ಗೀಕ್ರಿಯತೇ ।**

---

1. ಬುದ್ಧನಿಂದ ಬೇರೇಯಾದ ನಮ್ಮಲ್ಲಿ ಯಾರಲ್ಲೂ ಕಾಣದ ಸರ್ವಜ್ಞತ್ವ, ಅವಿಪ್ರಲಂಭಕತ್ವ ಮುಂತಾದವುಗಳನ್ನು ಬುದ್ಧಾದಿಗಳಲ್ಲಿ ಕಲ್ಪಿಸುವುದು ಕಲ್ಪನಾಗೌರವ ಎಂದು ಭಾವ.
2. ಜ್ಞಾನಾದಿಗಳು ಅಂತಃಕರಣದಲ್ಲಿನ ಪದಾರ್ಥ, ಅವು ಅತೀಂದ್ರಿಯಗಳು. ಅನ್ಯರಲ್ಲಿನ ಜ್ಞಾನ, ಅವರ ಮನದಲ್ಲಿನ ಇತರ ವಿಚಾರಗಳು ಇವುಗಳನ್ನು ಪ್ರತ್ಯಕ್ಷೀಕರಿಸಿಕೊಳ್ಳುವುದು ಅನುಭವವಿರುದ್ಧವಾದುದು ಎಂದು ಭಾವ.
3. ವಹ್ನಿಯಿಂದ ವ್ಯಾಪ್ಯವಾದ ಧೂಮವು ಪರ್ವತಾದಿಗಳಲ್ಲಿ ಕಂಡಲ್ಲಿ ಆ ಧೂಮವು ವ್ಯಾಪಕವಾದ ವಹ್ನಿಯ ಗಮಕವಾಗುವುದು ಎಂದು ಭಾವ.
4. ಸರ್ವಜ್ಞನಾದ ಒಬ್ಬ ಪುರುಷನು ಪ್ರಸಿದ್ಧನಾಗಿದ್ದಲ್ಲಿ ಅವನಲ್ಲಿರುವ ಕೆಲವು ಗುಣಗಳು ಬುದ್ಧಾದಿಗಳಲ್ಲೂ ಇವೆ. ಹಾಗಾಗಿ ಆತನಂತೆ ಈತನೂ ಸರ್ವಜ್ಞನು ಎಂದು ಅನುಮಾನಿಸಬಹುದಿತ್ತು. ಆದರೆ ಸರ್ವಜ್ಞರಾದವರನ್ನು ಬೇರೆಡೆ ಎಲ್ಲೂ ಕಾಣದಿರುವುದರಿಂದ ಅನುಮಾನಕ್ಕೆ ಅಗತ್ಯವಾದ ವ್ಯಾಪ್ತಿಜ್ಞಾನವೇ ಇಲ್ಲ ಎಂದು ಭಾವ.

ಪೌರುಷೇಯೋಽಪಿ ಕಿಂ ಸರ್ವಜ್ಞಪ್ರಣೀತೋಽಥಾನ್ಯಪ್ರಣೀತಃ ? ನಾನ್ತ್ಯೋಽನಾಶ್ವಾಸಾತ್ । ಆದ್ಯೇಽಪಿ ಕಿಂ ತತ್ಸರ್ವಜ್ಞಪ್ರಣೀತ ಉತ ಸರ್ವಜ್ಞಾನ್ತರಪ್ರಣೀತಃ ? ನಾಽದ್ಯಃ ಇತರೇತರಾಶ್ರಯಪ್ರಸಙ್ಗಾತ್ । 'ತಸ್ಯ ಸಾರ್ವಜ್ಞಸಿದ್ಧೌ ತತ್ಪ್ರಣೀತಾಗಮಪ್ರಾಮಾಣ್ಯಸಿದ್ಧಿಃ, ತೇನ ಚ ತಸ್ಯ ಸಾರ್ವಜ್ಞಸಿದ್ಧಿಃ' ಇತಿ । ಅನ್ಯಥಾಽಸ್ಮದ್ವಾಕ್ಯೇನೈವಾಸ್ಮಾಕಮಪಿ ತತ್ಸಿದ್ಧೇತ್, ನ ಚ ತದಸ್ತಿ , ತದಪ್ಯಾಹ 'ಅನ್ಯತ್ರಾದೃಷ್ಟಸ್ಯ' ಇತಿ ॥ ಅನ್ಯತ್ರ ಸ್ವವಾಕ್ಯೇನ ಸಿದ್ಧತಯಾಽದೃಷ್ಟಸ್ಯೇತ್ಯರ್ಥಃ । ನ ದ್ವಿತೀಯಃ, ಪುರುಷಾನ್ತರೇ ಸಾರ್ವಜ್ಞಸ್ಯಾದೃಷ್ಟತ್ವಾತ್ । ಸರ್ವಜ್ಞಾನ್ತರವಾಕ್ಯೇನ ತತ್ಕಲ್ಪನೇಽನವಸ್ಥಿತೇಃ । ಪೂರ್ವಸರ್ವಜ್ಞವಾಕ್ಯಾಶ್ರಯಣೇ ಚ ಇತರೇತರಾಶ್ರಯಣಾತ್ । ಇದಮಪ್ಯುಕ್ತಂ'ಅನ್ಯತ್ರಾದೃಷ್ಟಸ್ಯ' ಇತಿ ॥

(ಆಗಮದಿಂದಲೂ ಸರ್ವಜ್ಞತ್ವವನ್ನು ಸಾಧಿಸಲು ಶಕ್ಯವಿಲ್ಲ ಎಂದು ತಿಳಿಸುವರು.) ಆಗಮವೂ ಸಹ ಅಪೌರುಷೇಯವಾಗಲಾರದು, ಪರರಿಂದ (ಪ್ರಸಕ್ತ ವಾದಿಗಳಾದ ಬೌದ್ಧಾದಿಗಳಿಂದ ಅಪೌರುಷೇಯವಾದ ಆಗಮವನ್ನು) ಒಪ್ಪಲಾಗಿಲ್ಲ. ಪೌರುಷೇಯ ಆಗಮವಾದರೂ, ಸರ್ವಜ್ಞನಿಂದ ಪ್ರಣೀತವಾದದ್ದೋ ? ಅಥವಾ ಅನ್ಯರಿಂದ ಪ್ರಣೀತವಾದದ್ದೋ ? ಕೊನೆಯ ಪಕ್ಷದಲ್ಲಿ (ಅನ್ಯರಿಂದ ಪ್ರಣೀತವಾದ ಆಗಮದಿಂದ ಬುದ್ಧಾದಿಗಳಿಗೆ ಸರ್ವಜ್ಞತ್ವವು ಸಿದ್ಧವಾಗುವುದು ಎಂಬ ಪಕ್ಷದಲ್ಲಿ) ವಿಶ್ವಾಸವಿಲ್ಲದಿರುವುದರಿಂದ[1]. ಇನ್ನು ಮೊದಲ ಪಕ್ಷದಲ್ಲಿ (ಸರ್ವಜ್ಞ ಪ್ರಣೀತವಾದ ಆಗಮದಿಂದ ಓರ್ವ ವ್ಯಕ್ತಿಯಲ್ಲಿ ಸರ್ವಜ್ಞತ್ವವು ಸಿದ್ಧವಾಗುವುದು ಎನ್ನುವ ಪಕ್ಷದಲ್ಲಿ) ಆ ಸರ್ವಜ್ಞನಿಂದ ರಚಿತವಾದ ಆಗಮವೋ ? ಅಥವಾ ಬೇರೆ ಸರ್ವಜ್ಞನಿಂದ ರಚಿತವಾದದ್ದೋ ? ಮೊದಲ ಪಕ್ಷವು (ಸರ್ವಜ್ಞನು ಯಾರೆಂದು ನಾವು ಭಾವಿಸಿದ್ದೇವೆಯೋ ಅತನೇ ತನ್ನನ್ನು ಸರ್ವಜ್ಞ ಎಂದು ತಿಳಿಸಿರುವನು ಎಂದು ಒಪ್ಪಿದ ಪಕ್ಷದಲ್ಲಿ) ಸರಿಯಾಗದು. ಅನ್ಯೋನ್ಯಾಶ್ರಯವು ಸಂಭವಿಸೀತು. ಆತನಿಗೆ ಸಾರ್ವಜ್ಞವು ಸಿದ್ಧವಾದಲ್ಲಿ ಆತನಿಂದ ನಿರ್ಮಿತವಾದ ವಾಕ್ಯಕ್ಕೆ ಪ್ರಾಮಾಣ್ಯ

---

1. ಯಾವುದೋ ಸಾಮಾನ್ಯವ್ಯಕ್ತಿಯು 'ಈತನು ಸರ್ವಜ್ಞ' ಎಂದು ತಿಳಿಸಿದಲ್ಲಿ ನಂಬಲು ಶಕ್ಯವಾಗುವುದೋ? ಇಲ್ಲ ಎಂದು ಭಾವ.

ಸಿದ್ಧಿಯಾಗುವುದು. ಈ ವಾಕ್ಯದ ಪ್ರಾಮಾಣ್ಯದಿಂದ ಆತನಿಗೆ ಸರ್ವಜ್ಞತ್ವದ ಸಿದ್ಧಿ ಎಂದು (ಅನ್ಯೋನ್ಯಾಶ್ರಯ ದೋಷ). ಹೀಗೆ ಒಪ್ಪದ ಪಕ್ಷದಲ್ಲಿ ನಮ್ಮ ಮಾತಿನಿಂದ ನಮಗೂ ಸರ್ವಜ್ಞತ್ವವು ಸಿದ್ಧಿಯಾಗಬೇಕಾದೀತು[1]. ಹಾಗೆ ಆಗದು. ಇದನ್ನೂ ಸಹ ತಿಳಿಸಿರುವವರು '**ಅನ್ಯತ್ರಾದೃಷ್ಟಸ್ಯ**' ಎಂದು. ಅನ್ಯತ್ರ- ಬೇರೆಡೆಯಲ್ಲಿ ತನ್ನ ವಾಕ್ಯದಿಂದ ಸಿದ್ಧವಾದದ್ದು ,**ಅದೃಷ್ಟಸ್ಯ**- ಕಂಡಿಲ್ಲ ಎಂದು ಭಾವ. ಎರಡನೆಯ ಪಕ್ಷವೂ ಆಗದು. (ಮತ್ತೊಬ್ಬ ಸರ್ವಜ್ಞ ಪುರುಷನು 'ಬುದ್ಧಾದಿಗಳನ್ನು ಸರ್ವಜ್ಞರು' ಎಂದು ತಿಳಿಸಿರುವವರು ಎನ್ನುವ ಪಕ್ಷವೂ ಸರಿಯಾಗದು.) ಮತ್ತೊಬ್ಬರಲ್ಲಿ ಸರ್ವಜ್ಞತ್ವವು ಕಾಣದಿರುವುದರಿಂದ. ಮತ್ತೊಬ್ಬ ಸರ್ವಜ್ಞನ ವಾಕ್ಯದಿಂದ ಆ ವ್ಯಕ್ತಿಯ ಸರ್ವಜ್ಞತ್ವವು ಸಿದ್ಧವಾಗುವುದು ಎಂದು ಕಲ್ಪಿಸಿದಲ್ಲಿ ಅನವಸ್ಥಾ ದೋಷ ಬರುವುದರಿಂದ[2]. ಮೊದಲು ಸರ್ವಜ್ಞನ ವಚನದಿಂದ ಬುದ್ಧನ ಸರ್ವಜ್ಞತ್ವಸಿದ್ಧಿ, (ಸರ್ವಜ್ಞನೆಂದು ಸಿದ್ಧನಾದ) ಬುದ್ಧನಿಂದ ಆತನ (ಬುದ್ಧನನ್ನು ಸರ್ವಜ್ಞನೆಂದು ತಿಳಿಸಿದ ವ್ಯಕ್ತಿಗೆ) ಸರ್ವಜ್ಞತ್ವದ ಸಿದ್ಧಿ ಎಂದೆನ್ನಲೂ ಆಗದು, ಅನ್ಯೋನ್ಯಾಶ್ರಯತ್ವ ದೋಷವಿರುವುದರಿಂದ. ಇದನ್ನೂ ಸಹ ತಿಳಿಸಿರುವವರು '**ಅನ್ಯಾತ್ರಾದೃಷ್ಟಸ್ಯ**' ಎನ್ನುದರಿಂದ[3].

**ನಾಪ್ಯುಪಮಾನಂ, ತದ್ಧಿ 'ಸ ಇವಾಯಂ' ಇತಿ, 'ಏತತ್ಸದೃಶೋಽಸೌ' ಇತಿ ವೋತ್ಪದ್ಯತೇ । ನ ಚಾನ್ಯತ್ರ ಸಾರ್ವಜ್ಞಂ ಪ್ರಮಿತಂ, ಯೇನೋಪಮಾ- ನೋದಯಃ ಸ್ಯಾತ್ । ಏತದಪ್ಯುಕ್ತಮ್ 'ಅನ್ಯತ್ರಾದೃಷ್ಟಸ್ಯ' ಇತಿ**

**ನಾಪ್ಯರ್ಥಾಪತಿರನುಪಪತ್ತ್ಯಭಾವಾತ್ । 'ಬುದ್ಧಸ್ಯ ಧರ್ಮಾತಿದೇಶನಂ ಮಹಾಜನಪರಿಗೃಹೀತತ್ವಂ ವಾಽನುಪಪದ್ಯಮಾನಂ ಸಾರ್ವಜ್ಞಂ ಗಮಯತಿ'**

1. ಬುದ್ಧನು ಸರ್ವಜ್ಞನೆಂದು ನಿಶ್ಚಯವಾಗದಿದ್ದರೂ ಅವನ ಮಾತಿನಿಂದಲೇ ಆತನಿಗೆ ಸರ್ವಜ್ಞತ್ವವು ಸಿದ್ಧವಾಗುವದಾದಲ್ಲಿ 'ನಾನೂ ಸರ್ವಜ್ಞ' ಎಂದು ಹೇಳಿ ಕೊಳ್ಳುವೆ. ನನ್ನ ಮಾತಿನಿಂದ ನನಗೂ ಸರ್ವಜ್ಞತ್ವ ಸಿದ್ಧಿಯಾಗಬೇಕಾದೀತು ಎಂದು ಭಾವ.

2. ಬುದ್ಧನ ಸರ್ವಜ್ಞತ್ವವು, ಮತ್ತೊಬ್ಬ ಸರ್ವಜ್ಞನ ವಚನದಿಂದ. ಆತನ ಸರ್ವಜ್ಞತ್ವವು, ಇನ್ನೊಬ್ಬ ಸರ್ವಜ್ಞನ ವಚನದಿಂದ. ಆತನದು ಮತ್ತೊಬ್ಬನಿಂದ ಎಂದು ಅನವಸ್ಥಾ ದೋಷವಿರುವುದರಿಂದ ಈ ಪಕ್ಷವು ಸರಿಯಾಗದು.

3. ಅವನ ಮಾತಿನಿಂದ ಈತನಿಗೆ ಸರ್ವಜ್ಞತ್ವ, ಈತನ ಮಾತಿನಿಂದ ಆತನಿಗೆ ಸರ್ವಜ್ಞತ್ವವನ್ನು ಕಲ್ಪಿಸುವುದು ಮತ್ತೆ ಬೇರೆಲ್ಲೂ ಕಾಣದಿರುವುದರಿಂದ ಎಂದು ಭಾವ.

**ಇತಿ ಚೇತ್, ತರ್ಹಿ ಜಿನಸ್ಯಾಪಿ ತತ್‌ಸ್ಯಾತ್ । ನ ಚಾಸ್ತ್ವಿತಿ ವಾಚ್ಯಮ್ । ವಿಪ್ರತಿಪತ್ತ್ಯಭಾವಪ್ರಸಙ್ಗಾತ್ । ಇದಮಪ್ಯಾಹ 'ಅನ್ಯತ್ರಾದೃಷ್ಟಸ್ಯ' ಇತಿ ।**

**ನಾಪ್ಯಭಾವಃ ತಸ್ಯ ಭಾವವಿಷಯತಾಯಾಃ ಕ್ವಾಪ್ಯದೃಷ್ಟತ್ವಾತ್ । ಏತಚ್ಚೋವಾಚ 'ಅನ್ಯತ್ರಾದೃಷ್ಟಸ್ಯ' ಇತಿ । ಅನ್ಯತ್ರಾಭಾವಪ್ರಮಾಣ-ವಿಷಯತಯಾ ಅದೃಷ್ಟಸ್ಯ, ಭಾವರೂಪಸ್ಯ ಇತಿ ।**

ಉಪಮಾನ ಪ್ರಮಾಣದಿಂದಲೂ[1] (ಸರ್ವಜ್ಞತ್ವವನ್ನು ಸಾಧಿಸಲು) ಆಗದು. ಅದಾದರೋ (ಉಪಮಾನ ಪ್ರಮಾಣವಾದರೋ) 'ಅವನಂತೆ ಇವ' ಅಥವಾ 'ಇವನಂತೆ ಅವನು' ಎಂದೂ ಹೇಳಬೇಕು. ಬೇರೆಡೆ ಎಲ್ಲೂ ಸರ್ವಜ್ಞನು ಪ್ರಮಿತನಾಗಿಲ್ಲ. ಇದರಿಂದ (ಪ್ರಮಿತನಾಗಿದ್ದಲ್ಲಿ) ಉಪಮಾನವು ಸಿದ್ಧವಾಗುತ್ತಿತ್ತು. ಇದನ್ನೂ ಸಹ ತಿಳಿಸಿರುವರು **'ಅನ್ಯತ್ರಾದೃಷ್ಟಸ್ಯ'** ಎನ್ನುವುದರಿಂದ[2].

ಅರ್ಥಾಪತ್ತಿಯು (ಸರ್ವಜ್ಞತ್ವವನ್ನು ಸಾಧಿಸಲು ಶಕ್ತವು) ಆಗಲಾರದು[3]. ಅನುಪಪತ್ತಿಯು ಇಲ್ಲದಿರುವುದರಿಂದ[2]. ಬಹುಸಂಖ್ಯಾಕರು ಬುದ್ಧನ ಧರ್ಮೋಪದೇಶವನ್ನು ಆದರಿಸಿರುವರು ಇದು ಆತನಲ್ಲಿ ಸರ್ವಜ್ಞತ್ವವನ್ನು

---

1. ಪ್ರತ್ಯಕ್ಷ-ಅನುಮಾನದಂತೆ ಉಪಮಾನವನ್ನು ಒಂದು ಪ್ರತ್ಯೇಕ ಪ್ರಮಾಣ ಎಂದು ಕೆಲವು ವಾದಿಗಳು ಒಪ್ಪಿರುವರು. ಆಚಾರ್ಯರು ಇದನ್ನು ಪ್ರತ್ಯಕ್ಷಾನುಮಾನ ಗಳಲ್ಲಿ ಅಂತರ್ಭೂತವಾಗುವುದು ಎಂದು ಮುಂದೆ ತಿಳಿಸಿರುವರು.

2. 'ಆ ಸರ್ವಜ್ಞನಂತೆ ಈತನೂ ಸರ್ವಜ್ಞನಾಗಿರುವನು' ಎಂದು ಹೇಳಲು ಶಕ್ಯವಿಲ್ಲ. ದೃಷ್ಟಾಂತವು ಬೇರೆಡೆ ಎಲ್ಲೂ ಲಭಿಸಿಲ್ಲವಾದುದರಿಂದ ಎಂದು ಭಾವ.

3. ಅರ್ಥಾಪತ್ತಿಯನ್ನು ಪ್ರತ್ಯಕ್ಷಾದಿಗಳಂತೆ ಪೃಥಕ್ ಪ್ರಮಾಣ ಎಂದು ಕೆಲವರು ವಾದಿಸುವರು. ಇದೂ ಸಹ ಅನುಮಾನದಲ್ಲಿ ಅಂತರ್ಭಾವಗೊಳ್ಳುವುದು ಎಂದು ಮುಂದೆ ಆಚಾರ್ಯರು ತಿಳಿಸುವರು. ಪ್ರಕೃತ ಪೃಥಕ್‌ಪ್ರಮಾಣ ಎಂದುವಾದಿಸುವವರ ವಾದವನ್ನು ಒಪ್ಪಿ ಈ ನಿರಾಕರಣವನ್ನು ಮಾಡಲಾಗುತ್ತಿದೆ ಎಂದು ತಿಳಿಯುವುದು.

4. ಎರಡು ಪ್ರಮಾಣಗಳು ತಿಳಿಸಿದ ಸಂಗತಿಗಳನ್ನು ಹೊಂದಿಸಲು ಅನುಪಪತ್ತಿಯು ಇದ್ದಾಗ ಮತ್ತೊಂದು ಸಂಗತಿಯನ್ನು ಊಹಿಸುವದನ್ನು 'ಅರ್ಥಾಪತ್ತಿ' ಎನ್ನುವರು. ಪ್ರಕೃತದಲ್ಲಿ ಅಂತಹ ಅನುಪಪತ್ತಿಯು ಯಾವುದೂ ಇಲ್ಲ ಎಂದು ಭಾವ.

ಸೂಚಿಸುವುದು[1] ಎಂದರೆ, ಹಾಗಾದಲ್ಲಿ ಜಿನನೂ ಹಾಗೆಯೇ (ಸರ್ವಜ್ಞನು) ಆಗಬೇಕಾದೀತು[2]. ಆಗಲಿ ಎಂದೆನ್ನಲಾಗದು (ಅವರಿಬ್ಬರಲ್ಲಿ) ಭಿನ್ನಾಭಿಪಾಯವಿಲ್ಲದೇ ಇರಬೇಕಾದೀತು. ಇದನ್ನು ಸಹ ತಿಳಿಸಿರುವವರು **'ಅನ್ಯತ್ರಾದೃಷ್ಟಸ್ಯ'** ಎನ್ನವುದರಿಂದ[3].

ಅಭಾವ ಪ್ರಮಾಣದಿಂದಲೂ ಸಿದ್ಧವಾಗದು [4]. 'ಸರ್ವಜ್ಞತ್ವವು' ಅದಕ್ಕೆ (ಅಭಾವಪ್ರಮಾಣಕ್ಕೆ) ಭಾವಪದಾರ್ಥವು ವಿಷಯವಾಗಿರುವುದು ಎಲ್ಲೂ ಕಂಡಿಲ್ಲದಿರುವುದರಿಂದ. ಇದನ್ನು ಸಹ ಹೇಳಿರುವವರು **'ಅನ್ಯತ್ರಾದೃಷ್ಟಸ್ಯ'** ಎನ್ನುವುದರಿಂದ. **ಅನ್ಯತ್ರ**-ಬೇರೆಡೆ ಎಲ್ಲೂ ಅಭಾವರೂಪ ಪ್ರಮಾಣಕ್ಕೆ ಭಾವಪದಾರ್ಥವು ವಿಷಯವಾಗಿರುವುದು **ಅದೃಷ್ಟತ್ವಾತ್**-ಕಾಣದಿರುವುದರಿಂದ ಎಂದು.

### ಜೈನರ ವಾದದ ವಿಮರ್ಶೆ

**ಆರ್ಹತಾಸ್ತ್ವಾಹುಃ - 'ಕಶ್ಚಿದಾತ್ಮಾ ಸಕಲಪದಾರ್ಥಸಾಕ್ಷಾತ್ಕಾರೀ, ತದ್ಗ್ರಹಣಸ್ವಭಾವತ್ವೇ ಸತಿ ಪ್ರಕ್ಷೀಣಪ್ರತಿಬನ್ಧಕತ್ವಾತ್, ಯದೇವಂ ತದೇವಂ ಯಥಾಪಗತತಿಮಿರಾದಿಪ್ರತಿಬನ್ಧಂ ಲೋಚನವಿಜ್ಞಾನಂ ರೂಪಸಾಕ್ಷಾತ್ಕಾರೀ' ಇತಿ । ತದಸತ್, ಸಕಲಪದಾರ್ಥಸಾಕ್ಷಾತ್ಕಾರಿತ್ವಸ್ಯ ಅನ್ಯತ್ರಾದೃಷ್ಟತ್ವೇನ ಅಪ್ರಸಿದ್ಧವಿಶೇಷಣತ್ವಾತ್ । ತದ್ಗ್ರಹಣಸ್ವಭಾವತ್ವಂ ಚ ಕಿಂ ವಿವಕ್ಷಿತಸ್ಯೈ-ವಾऽತ್ಮನೋऽಙ್ಗೀಕ್ರಿಯತೇ ಸರ್ವೇಷಾಂ ವಾ ? ನಾऽದ್ಯಃ ಅನ್ಯತ್ರಾ-ದೃಷ್ಟತ್ವೇನ, ಆತ್ಮತ್ವಾತ್ ತತ್ರಾಪಿ ತದಭಾವಸಾಧನಸೌಲಭ್ಯಾತ್ । ನ**

1. ಬುದ್ಧನಲ್ಲಿ ಸರ್ವಜ್ಞತ್ವವು ಇಲ್ಲದ ಪಕ್ಷದಲ್ಲಿ ಆತನ ಉಪದೇಶವನ್ನು ಬಹುಜನರು ಪರಿಗ್ರಹಿಸಬಾರದಿತ್ತು. ಪರಿಗ್ರಹಿಸಿರುವರು ಎಂಬೀ ಅನುಪಪತ್ತಿಯನ್ನು ಹೊಂದಿಸಬೇಕಾದಲ್ಲಿ ಬುದ್ಧನಲ್ಲಿ ಸರ್ವಜ್ಞತ್ವವನ್ನು ಊಹಿಸಬೇಕು ಎಂದು ಭಾವ.

2. ಜಿನನ ಉಪದೇಶವನ್ನೂ ಬಹುಸಂಖ್ಯಾಕರು ಆದರಿಸಿರುವರು ಆದುದರಿಂದ ಜಿನನೂ ಸರ್ವಜ್ಞನಾಗಲಿ ಎಂದಾಗಬೇಕಾದೀತು ಎಂದು ಭಾವ.

3. ಮಹಾಜನಪರಿಗ್ರಹೀತವಾದರೂ ಜಿನಾದಿ ಬೇರೇ ಮತಪ್ರವರ್ತಕರುಗಳಲ್ಲಿ ಸರ್ವಜ್ಞತ್ವವು ಕಾಣದಿರುವುದರಿಂದ.

4. ಕೆಲವು ವಾದಿಗಳು ಅಭಾವವನ್ನು ಪ್ರಮಾಣ ಎಂದು ವಾದಿಸುವರು. ಆಚಾರ್ಯರು ಇದನ್ನು ಪ್ರತ್ಯಕ್ಷ ಮತ್ತು ಅನುಮಾನಗಳಲ್ಲಿ ಅಂತರ್ಭೂತವಾಗುವುದು ಎಂದು ತಿಳಿಸುವರು.

ದ್ವಿತೀಯಃ, ಅಸ್ಮದಾದೌ ತಸ್ಸ್ವಭಾವತ್ವಸ್ಯ ಪ್ರಮಾಣಾದೃಷ್ಟತ್ವಾತ್ । ವ್ಯಾಪ್ತಿ-ಜ್ಞಾನಂ ಸರ್ವವಿಷಯಂ ಸರ್ವಾತ್ಮನಾಂ ಸ್ವಭಾವೋ ದೃಶ್ಯತ ಇತಿ ಚೇನ್ನ । ಪರೋಕ್ಷಸಾಮಾನ್ಯಜ್ಞಾನಸ್ವಭಾವತ್ವೇನ ಅಪರೋಕ್ಷವಿಶೇಷಜ್ಞಾನಸಾಧನ-ಸ್ಯಾತಿಪ್ರಸಙ್ಗಿತ್ವಾತ್, ಅನ್ಯತ್ರ ರೂಪಸಾಕ್ಷಾತ್ಕಾರಸ್ವಭಾವೇಽಪಿ ಲೋಚನ-ವಿಜ್ಞಾನೇ ರಸಸಾಕ್ಷಾತ್ಕಾರಿತ್ವಸ್ಯಾದೃಷ್ಟತ್ವಾತ್ । ತತ್ ಸ್ವಭಾವತ್ವಸ್ಯ ಅಸಿದ್ಧತ್ವಾದೇವ ಪ್ರತಿಬನ್ಧಕಕಲ್ಪನಾನುಪಪತ್ತೇಃ ತತ್ಕ್ಷಯಸ್ಯಾಪ್ಯನುಪಪತ್ತಿ-ರೇವ । ನ ಹಿ ತೇಜಸೋಽನ್ಯತ್ರ ದಾಹಾದಿ ಪ್ರತಿಬನ್ಧಕತ್ವಂ ದೃಷ್ಟಮ್ ॥

ಜೈನರು ವಾದಿಸುವರು- 'ಒಬ್ಬ ಪುರುಷನು ಎಲ್ಲ ಪದಾರ್ಥಗಳ ಪ್ರತ್ಯಕ್ಷಾನುಭವವನ್ನು ಹೊಂದಿರುವನು, ಪದಾರ್ಥಗಳ ಗ್ರಹಣದ ಸ್ವಭಾವವನ್ನುಹೊಂದಿ ಯಾವುದೇ ತಡೆ ಇಲ್ಲದಿರುವುದರಿಂದ, ಯಾರು ಹೀಗೆ ಇರುವರೋ (ಅರಿವನ್ನು ಪಡೆಯುವ ತಡೆ ಇಲ್ಲದ ಸಾಮರ್ಥ್ಯವನ್ನು ಹೊಂದಿರುವನೋ), ಆತ ಹೀಗೆ (ಆ ಎಲ್ಲಾ ಅರಿವನ್ನು ಹೊಂದುವನು). ಕತ್ತಲೆ ಮೊದಲಾದ ತಡೆ ಇಲ್ಲದ ಸಂದರ್ಭದಲ್ಲಿ ಲೋಚನವಿಜ್ಞಾನವು (ಕಣ್ಣಿರುವವನು) ರೂಪಗಳ ಅರಿವನ್ನು ಹೇಗೆ ಹೊಂದುವನೋ ಹಾಗೆ. ಈ ರೀತಿಯ ವಾದ ಸರಿಯಲ್ಲ. (ಒಬ್ಬನೇ ವ್ಯಕ್ತಿಗೆ) ಸಕಲ ಪದಾರ್ಥಗಳ ಪ್ರತ್ಯಕ್ಷಾನುಭವವು ಬೇರೆಡೆ ಎಲ್ಲೂ ಕಾಣದಿರುವುದರಿಂದ ಅಪ್ರಸಿದ್ಧ ವಿಶೇಷಣ(ರೂಪ ದೋಷ) ಇರುವದರಿಂದ[1]. (ಸಾಧ್ಯದ ವಿಮರ್ಶಾನಂತರದಲ್ಲಿ, ಹೇತುವನ್ನು ವಿಮರ್ಶಿಸುವರು.) ಸಕಲಪದಾರ್ಥಗಳನ್ನು ಗ್ರಹಿಸುವ ಸ್ವಭಾವವನ್ನು ಕೇವಲ ವಿವಕ್ಷಿತನಾದ ಒಬ್ಬ ವ್ಯಕ್ತಿಯಲ್ಲಿ ಅಂಗೀಕರಿಸಲಾಗುವುದೋ, ಅಥವಾ ಎಲ್ಲ ವ್ಯಕ್ತಿಗಳಲ್ಲಿ ಅಂಗೀಕರಿಸಲಾಗುವುದೋ? ಮೊದಲ ಪಕ್ಷವು ಸರಿಯಾಗದು.

---

1. ಜೈನರು ಸರ್ವಜ್ಞನಾದ ಒಬ್ಬ ವ್ಯಕ್ತಿಯನ್ನು ಅನುಮಾನದಿಂದ ಸಾಧಿಸಲು ಪ್ರಯತ್ನಿಸಿರುವರು. ಆ ಅನುಮಾನದಲ್ಲಿ 'ಸಕಲ ಪದಾರ್ಥಗಳ ಪ್ರತ್ಯಕ್ಷಾನುಭವಿ' ಎನ್ನುವುದು ಸಾಧಿಸಬೇಕಾದ ವಿಷಯ ಅಂದರೆ ಸಾಧ್ಯ. ಸಾಧ್ಯವು ಪ್ರಸಿದ್ಧವಾದಲ್ಲಿ ಸರ್ವಜ್ಞನು ಸಿದ್ಧನಾಗುವನು ಎಂದು ಭಾವಿಸಿರುವರು, ಆದರೆ ಈ ಸಾಧ್ಯವು ಅಪ್ರಸಿದ್ಧ. ಎಲ್ಲೂ ಪ್ರಸಿದ್ಧಿ ಇಲ್ಲದ್ದನ್ನು ಸಾಧಿಸುವುದು ಅನುಮಾನದೋಷಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ. ಸಾಧ್ಯವನ್ನು ವಿಶೇಷಣ ಎಂದು ಕರೆಯುವರು. ಆದುದರಿಂದ ಈ ಅನುಮಾನಕ್ಕೆ ಅಪ್ರಸಿದ್ಧವಿಶೇಷಣ ಎನ್ನುವ ದೋಷವು ಒದಗುವುದು ಎಂದು ಭಾವ.

ಬೇರೆಡೆಯಲ್ಲೂ ಕಾಣದಿರುವುದರಿಂದ. ವಿವಕ್ಷಿತ ವ್ಯಕ್ತಿಯಲ್ಲೂ ಅತ್ಮತ್ವವಿರುವುದರಿಂದ ಸಕಲಪದಾರ್ಥಗಳ ಸಾಕ್ಷಾತ್ಕಾರವಿಲ್ಲವೆಂದು ಸಾಧಿಸಲೂ ಅವಕಾಶವಿರುವುದರಿಂದ[1]. ಎರಡನೆಯ ಪಕ್ಷವು ಸಾಧುವಲ್ಲ. (ಎಲ್ಲ ಜೀವರು ಸಕಲಪದಾರ್ಥಗಳ ಸಾಕ್ಷಾತ್ಕಾರ ಸ್ವಭಾವವನ್ನು ಹೊಂದಿರುವರು ಎನ್ನುವ ಪಕ್ಷ) ನಾವುಗಳು ಅಂತಹಸ್ವಭಾವ ಹೊಂದಿರುವುದು ಪ್ರಮಾಣದಿಂದ (ಅನುಭವದಲ್ಲಿ)ಕಾಣದಿರುವುದರಿಂದ. ಸರ್ವವಿಷಯಕವಾದ ಜ್ಞಾನವನ್ನು ಎಲ್ಲ ಜೀವಿಗಳ ಸ್ವಭಾವವಾಗಿ ಹೊಂದಿರುವುದು ಕಂಡಿದೆ, ಆದುದರಿಂದ (ಪ್ರಕೃತಾನುಮಾನದಲ್ಲಿ) ವ್ಯಾಪ್ತಿಜ್ಞಾನವು ಪ್ರಾಪ್ತವಾಗಬಹುದು ಎನ್ನಲಾಗದು[2]. ವ್ಯಕ್ತಿಗಳು ಎಲ್ಲ ಪದಾರ್ಥಗಳ ಪರೋಕ್ಷಜ್ಞಾನವನ್ನು ಹೊಂದಿರುವರು. ಇದರಿಂದ, ಅಪರೋಕ್ಷ ವಿಶೇಷ ಜ್ಞಾನವನ್ನು ಹೊಂದಿರುವರು ಎಂದು ಸಾಧಿಸಿದಲ್ಲಿ ಅತಿಪ್ರಸಂಗಕ್ಕೆ ಕಾರಣವಾದೀತು[3]. (ಹೇತುವು ಅಸಿದ್ಧ

1. ಜೀವಿಗಳಾದ ನಮ್ಮ-ನಿಮ್ಮಲ್ಲಿ ಎಲ್ಲೂ ಕಾಣದ ಈ ಸಕಲ ಪದಾರ್ಥಗಳ ಸಾಕ್ಷಾತ್ಕಾರಿತ್ವವು, ಪ್ರಕೃತ ವಿವಕ್ಷಿತರಾದ ಬುದ್ಧಾದಿಗಳೂ ಜೀವರೇ ಆಗಿರುವುದರಿಂದ, ಅವರಲ್ಲೂ 'ಸಕಲಪದಾರ್ಥಗಳ ಸಾಕ್ಷಾತ್ಕಾರಿತ್ವವನ್ನು' ಇಲ್ಲವೆಂದು ಸಾಧಿಸುವುದು ಸುಲಭ ಎಂದು ಭಾವ.
2. ಎಲ್ಲ ಪದಾರ್ಥಗಳು ಅಭಿಧೇಯವಾಗಿವೆ, ಎಲ್ಲ ಪದಾರ್ಥಗಳಲ್ಲಿ ಪ್ರಮೇಯತ್ವವಿದೆ ಇತ್ಯಾದಿಯಾಗಿ ಮನುಷ್ಯಸಾಮಾನ್ಯರಿಗೆ ಸರ್ವ ವಸ್ತುಗಳ ಅರಿವು ಇರುವುದರಿಂದ ಸರ್ವಜ್ಞತ್ವವು ಇರುವುದು ತಿಳಿದಿದೆ. ಆದ್ದರಿಂದ ಪ್ರಕೃತಾನುಮಾನದ ಸಾಧ್ಯ ಹೇತುಗಳ ವ್ಯಾಪ್ತಿಯ ಅರಿವು ಪ್ರಾಪ್ತವಾಗಲು ಸಾಧ್ಯವೆಂದು ಹೇಳುವುದು ತರವಾಗಲಾರದೆಂದು ಭಾವ.
3. ಪದಾರ್ಥಗಳೆಲ್ಲವೂ ಅಭಿಧೇಯ, ಪದಾರ್ಥಗಳೆಲ್ಲವೂ ಪ್ರಮೇಯತ್ವವನ್ನು ಹೊಂದಿದೆ ಇತ್ಯಾದಿ ಜ್ಞಾನವನ್ನು ಪರೋಕ್ಷಜ್ಞಾನ ಎಂದು ಕರೆಯುತ್ತಾರೆ. ಇವು ಶಬ್ದದಿಂದಲೋ ಅನುಮಾನದಿಂದಲೋ ಪ್ರಾಪ್ತವಾಗುವ ಅರಿವು. ನಯನಾದಿ ಇಂದ್ರಿಯಗಳ ಸಂಪರ್ಕದಿಂದ ಬರುವ ಜ್ಞಾನವನ್ನು ಅಪರೋಕ್ಷಜ್ಞಾನ ಎನ್ನುತ್ತಾರೆ. ಪ್ರಕೃತ 'ಪದಾರ್ಥಗಳೆಲ್ಲವು ಒಂದು ಹೆಸರನ್ನು ಹೊಂದಿದೆ' ಎಂಬಿತ್ಯಾದಿ ಪರೋಕ್ಷ ಜ್ಞಾನದಿಂದ ಸರ್ವಪದಾರ್ಥಗಳ ಅಪರೋಕ್ಷಜ್ಞಾನವು ಜನಸಾಮಾನ್ಯರಲ್ಲಿದೆ ಎಂದು ಹೇಳುವದಾದಲ್ಲಿ, ಮನೆ ಹೊರಗೆ ನಿಂತ ವ್ಯಕ್ತಿಗೆ 'ಮನೆಯ ಒಳಗೆ ಪಾತ್ರೆ ಆಹಾರ ಇತರಪದಾರ್ಥಗಳು ಇವೆ' ಎಂಬ ಪರೋಕ್ಷಜ್ಞಾನವಿದೆ. ಆದುದರಿಂದ ಆತನಿಗೆ ಮನೆಯಲ್ಲಿರುವ ಎಲ್ಲ ಪದಾರ್ಥಗಳ ಅಪರೋಕ್ಷಜ್ಞಾನವಿದೆ ಎಂದು ಒಪ್ಪಬೇಕಾದೀತು. ಗಂಧವನ್ನು ಗ್ರಹಿಸುವ ಘ್ರಾಣೇಂದ್ರಿಯವು ರೂಪವನ್ನು ಗ್ರಹಿಸಲಿ, ಇದೇ ಮುಂತಾದ ಅತಿಪ್ರಸಂಗಗಳನ್ನು ಎದುರಿಸಬೇಕಾದೀತು ಎಂದು ಭಾವ.

ಎಂದು ತಿಳಿಸುವರು)ಬೇರೆಡೆಯಲ್ಲಿ ರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವ ಸ್ವಭಾವದ ನಯನಗಳಿಗೆ ರಸದ ಸಾಕ್ಷಾತ್ಕಾರವು ಕಂಡಿಲ್ಲ. ಆ ಸ್ವಭಾವವು (ರಸಸಾಕ್ಷಾತ್ಕಾರ ರೂಪ ಸ್ವಭಾವವು ನಯನಕ್ಕೆ) ಅಸಿದ್ಧವಾದುದರಿಂದಲೇ, ಪ್ರತಿಬಂಧಕವನ್ನು ಕಲ್ಪಿಸಲಾಗದು, ಅದರ (ಇಲ್ಲದ ಪ್ರತಿಬಂಧಕಕ್ಕೆ) ನಾಶವೂ ಅನುಪಪನ್ನವೇ ಆಗಿರುವುದರಿಂದ. ಬೆಂಕಿಯ ಹೊರತಾಗಿ ಅನ್ಯತ್ರ-ಬೇರೆಡೆಯಲ್ಲಿ (ಜಲಾದಿಗಳಲ್ಲಿ) ದಹನಪ್ರತಿಬಂಧಕವು ಇದೆ ಎಂದು ಕಂಡಿಲ್ಲ[1].

**ಜೈನರ ಹೇತುವು ಅಸಿದ್ಧ**

**ಕಿಂಚ ಅನ್ಯತ್ರಾದೃಷ್ಟಸ್ಯಾಽವರಣಪ್ರಕ್ಷಯಸ್ಯ ವಿವಕ್ಷಿತೇಽಪ್ಯಾತ್ಮನಿ ಕುತಃ ಸಿದ್ಧಿಃ ? ಆವರಣತ್ವಾದೇವ' ಇತಿ ಚೇನ್ನ । ಕಸ್ಯಚಿತ್ ತಿಮಿರಾದೇಃ ಯಾವದಾವ್ರಿಯಮಾಣಭಾವಿತ್ವಾತ್ । ಕಮನೀಯಕಾನ್ತಾಸ್ಪರ್ಶಾದಾವಪಿ ರಾಗಾದ್ಯನುದಯಾತ್ ಪ್ರಕ್ಷೀಣಪ್ರತಿಬನ್ಧಕತ್ವಸಿದ್ಧಿಃ ಇತಿ ಚೇನ್ನ, ರಾಗಾದ್ಯ-ಭಾವಸ್ಯಾಪ್ಯನ್ಯತ್ರಾಽದೃಷ್ಟಸ್ಯ ಕಲ್ಪಕಾಭಾವಾತ್ । ಬಾಹ್ಯವಿಕ್ರಿಯಾಽಭಾವೇನ ತದಭಾವಾನುಮಾನಮಿತಿ ಚೇನ್ನ । ಜಗದ್ವಶೀಕರಣಾರ್ಥಂ ಧೈರ್ಯೇಣ ಸ್ಥಗನಸಂಭವಾತ್ ।**

ಮತ್ತೂ ಸಹ, ಮತ್ತೆಲ್ಲೂ ಕಾಣದ (ಜ್ಞಾನಕ್ಕೆ ಪ್ರತಿಬಂಧಕವಾದ)ಆವರಣದ ಪ್ರಕ್ಷಯವು (ನೀವು)ವಿವಕ್ಷಿಸಿದ ಆತ್ಮನಲ್ಲಿಯೇ ಹೇಗೆ ಸಿದ್ಧವಾಗುವುದು ?

---

1. ಕಣ್ಣುಗಳು ರೂಪವನ್ನು ಸಾಕ್ಷಾತ್ಕಾರಿಸಿಕೊಳ್ಳುತ್ತವೆ. ಕತ್ತಲೆ, ಗೋಡೆ ಮುಂತಾದ ಪ್ರತಿಬಂಧಕವಿದ್ದಲ್ಲಿ ರೂಪದ ಸಾಕ್ಷಾತ್ಕಾರವು ಆಗುವುದಿಲ್ಲ. ಆದುದರಿಂದ ಪ್ರತಿಬಂಧಕವಿಲ್ಲದ ಪಕ್ಷದಲ್ಲಿ ನಯನವು ರೂಪವನ್ನು ಗ್ರಹಿಸುವುದು ಎನ್ನುವುದು ಎಲ್ಲರ ಅನುಭವ. ಕಣ್ಣುಗಳು ರಸವನ್ನು ಸಾಕ್ಷಾತ್ಕರಿಸಿಕೊಳ್ಳದಿರಲು ಅಲ್ಲಿ ಒಂದು ಪ್ರತಿಬಂಧಕವಿದೆ ಎಂದು ಯಾರೂ ಹೇಳುವುದಿಲ್ಲ. ರಸದ ಸಾಕ್ಷಾತ್ಕಾರವು ಕಣ್ಣಿನ ಸ್ವಭಾವವಲ್ಲ ಎನ್ನುವರು. ಬೆಂಕಿಯು ದಹಿಸದಿದ್ದಲ್ಲಿ ಮಣಿಯೋ ಮಂತ್ರವೋ ಮೊದಲಾದ ಪ್ರತಿಬಂಧಕವಿದೆ ಎನ್ನುವರು. ಜಲಾದಿಗಳು ಸುಡದಿದ್ದಲ್ಲಿ ಪ್ರತಿಬಂದಕವಿದೆ ಎನ್ನಲಾಗದು. ದಹಿಸದಿರುವುದು ಜಲಾದಿಗಳ ಸ್ವಭಾವ ಎಂದು ಹೇಗೆ ಹೇಳುವರೋ ಹಾಗೆ. ಪ್ರಕೃತ ಈ 'ತದ್ಗ್ರಹಣಸ್ವಭಾವತ್ವೇ ಸತಿ ಪ್ರಕ್ಷೀಣಪ್ರತಿಬಂದಕತ್ವಾತ್' ಎನ್ನುವ ಹೇತುವನ್ನು ನಿರಾಕರಿಸಿದಂತಾಯಿತು. ಸಕಲ ವಸ್ತುಗಳನ್ನು ಗ್ರಹಿಸುವ ಸ್ವಭಾವವು ಜನಸಾಮಾನ್ಯರಲ್ಲಿ ಇಲ್ಲದಿರುವದರಿಂದಲೇ ಪ್ರತಿಬಂಧಕವನ್ನು ಕಲ್ಪಿಸುವ ಅಗತ್ಯವಿಲ್ಲ. ಪ್ರತಿಬಂಧಕವೇ ಇಲ್ಲದ ಮೇಲೆ ಪ್ರತಿಬಂಧಕದ ಪ್ರಕ್ಷಯವೂ ಕೂಡದು ಎಂದು ಭಾವ.

ಆವರಣವಾದುದರಿಂದಲೇ (ಸಿದ್ಧವಾಗುವುದು) ಎಂದೆನ್ನಲಾಗದು[1]. ಯಾವುದೋ ಒಂದು (ಪರ್ವತದ ಗುಹೆಯೊಳಗಿರುವ) ಕಗ್ಗತ್ತಲೆ ಮುಂತಾದ (ಆವರಣವು) ಆವೃತವಾದ ವಸ್ತುವು ಇರುವ ಪರ್ಯಂತವೂ ಇರುವುದರಿಂದ[2]. ಸುಂದರ ಹೆಣ್ಣಿನ ಸ್ಪರ್ಶ ಮೊದಲಾದ ಸಂದರ್ಭದಲ್ಲೂ, ರಾಗಾದಿಗಳು (ಆ ವ್ಯಕ್ತಿಯಲ್ಲಿ) ಕಂಡಿಲ್ಲವಾದುದರಿಂದ, ಪ್ರತಿಬಂಧಕದ ನಾಶವು ಸಿದ್ಧವಾಗುವದು ಎಂದು ಹೇಳಲಾಗದು. ಬೇರೆಡೆ ಎಲ್ಲೂ ಕಾಣದ ರಾಗಾದ್ಯಭಾವವನ್ನು ಈತನಲ್ಲಿ ಕಲ್ಪಿಸಲು ಕಾರಣವಿಲ್ಲವಾದುದರಿಂದ. ಬಾಹ್ಯವಿಕ್ರಿಯೆಗಳು ಇಲ್ಲದಿರುವುದರಿಂದ ರಾಗಾದಿಗಳ ಅಭಾವವನ್ನು ಊಹಿಸುತ್ತೇವೆ ಎಂದು ಹೇಳುವುದು ಸರಿಯಲ್ಲ[3]. ಜಗತ್ತನ್ನು ವಶೀಕರಿಸಿಕೊಳ್ಳಲು (ಮನೋ) ಧೈರ್ಯದಿಂದ (ಬಾಹ್ಯವಿಕ್ರಿಯೆಗಳನ್ನು) ಸ್ಥಗನಗೊಳಿಸಿಕೊಳ್ಳುವ ಸಂಭವವಿರುವುದರಿಂದ.

---

1. ಬೌದ್ಧರು ಸರ್ವಜ್ಞನಾದ ಒರ್ವ ವ್ಯಕ್ತಿಯನ್ನು ಸಾಧಿಸಲು 'ತದ್ಗ್ರಹಣಸ್ವಭಾವತ್ವೇ ಸತಿ ಪ್ರಕ್ಷೀಣಪ್ರತಿಬಂಧಕತ್ವಾತ್' ಎಂಬ ಹೇತುವನ್ನು ಹೇಳಿರುವರು. ಈ ಹೇತುವಿನ ಘಟಕವಾದ ಪ್ರಕ್ಷೀಣಪ್ರತಿಬಂಧಕತ್ವವು ಅಂದರೆ ಎಲ್ಲ ಪದಾರ್ಥಗಳ ಅರಿವಿಗೆ ತಡೆಯಾದ ಆವರಣದ ನಾಶವು ಮತ್ತಾರಲ್ಲೂ ಕಾಣದಿರುವುದು. ಪರವಾದಿಗಳಿಂದ ವಿವಕ್ಷಿತನಾದ ವ್ಯಕ್ತಿಯಲ್ಲಿ ಮಾತ್ರ ಅದು ಹೇಗೆ ಸಿದ್ಧವಾಗುವದು ? ಬೌದ್ಧವಾದಿಗಳು ಉತ್ತರಿಸುವರು. 'ಯಾವುದು ಆವರಣವೋ ಅದು ಪ್ರಕ್ಷೀಣವಾಗುವುದು, ಮಂಜಿನ ಮುಸುಕಿನಂತೆ' ಎಂಬ ನಿಯಮವಿದೆ. ಆದುದರಿಂದ ನಾವು ವಿವಕ್ಷಿಸಿದ ವ್ಯಕ್ತಿಯಲ್ಲಿ ಆ ಆವರಣನಾಶವಾಗಿದೆ ಎಂದು. ಇದು ತರವಲ್ಲ ಎಂದು ಭಾವ.

2. ಆವರಣಗಳೆಲ್ಲವೂ ಒಂದು ದಿನ ಸರಿದೇ ತೀರುವುದು ಎಂದು ಹೇಳಲಾಗದು. ಯಾವುದೋ ಗುಹೆ, ಅದರಲ್ಲಿನ ಕಗ್ಗತ್ತಲೆಯಲ್ಲಿ ಕೆಲವು ಪದಾರ್ಥಗಳು ಇವೆ. ಆ ಕತ್ತಲೆಗೆ ಎಂದೂ ನಾಶವಿಲ್ಲ, ಆ ಮುಸುಕಿನಲ್ಲಿ ಅಡಗಿದ ಅನೇಕ ಪದಾರ್ಥಗಳು ಆ ಕತ್ತಲೆಯಲ್ಲಿಯೇ ಉತ್ಪನ್ನವಾಗಿ ನಾಶವನ್ನು ಹೊಂದುವವು ಆದ್ದರಿಂದ 'ಆವರಣತ್ವಾತ್' ಎಂಬುವ ಹೇತುವು ವ್ಯಭಿಚರಿತವಾಯಿತು ಎಂದು ಭಾವ.

3. ಸುಂದರ ಹೆಣ್ಣೇ ಮೊದಲಾದ ಮೋಹಕ ಸಾಮಗ್ರಿಗಳ ದರ್ಶನ ಸ್ಪರ್ಶನಾದಿಗಳು ಸಹಜವಾಗಿ ಮನುಜನನ್ನು ವ್ಯಗ್ರಗೊಳಿಸುವವು. ಅಂತಹ ಸಂದರ್ಭದಲ್ಲೂ ಈ ವ್ಯಕ್ತಿ ವ್ಯಗ್ರಗೊಳ್ಳಲಿಲ್ಲ ಎಂದಾದಲ್ಲಿ ಅನ್ಯರಲ್ಲಿರದ ವಿಶಿಷ್ಟ ವ್ಯಕ್ತಿತ್ವವು ಈತನಲ್ಲಿದೆ ಎಂದು ಸಿದ್ಧವಾಗುವುದು. ಆದುದರಿಂದ ಅನ್ಯರಲ್ಲಿ ಎಲ್ಲೂ ಕಾಣದ 'ಎಲ್ಲ ಪದಾರ್ಥದ ಅರಿವು' ಆತನಲ್ಲಿದೆ ಎಂದು ಊಹಿಸುತ್ತೇವೆ' ಎಂದು ಹೇಳಲು ಆಗದು ಎಂದು ಭಾವ.

**ಅನ್ಯತ್ರ- ದೃಷ್ಟಾನ್ತೇ ಚ ಸಕಲಪದಾರ್ಥಸಾಕ್ಷಾತ್ಕಾರಿತ್ವಂ ತತ್ಸ್ವಭಾವತ್ವಂ ಚಾದೃಷ್ಟಮೇವ । 'ಯದ್ಯಯದ್ಗ್ರಹಣಸ್ವಭಾವತ್ವೇ ಸತಿ ಪ್ರಕ್ಷೀಣ-ಪ್ರತಿಬನ್ಧಕಂ ತತ್ ತತ್ಸಾಕ್ಷಾತ್ಕಾರೀ' ಇತಿ ವ್ಯಾಪ್ತಿರಿತಿ ಚೇನ್ನ। ತಥಾಽಪಿ ವಿಜ್ಞಾನಸ್ಯ ಸಾಕ್ಷಾತ್ಕಾರತ್ವೇನ ಸಾಕ್ಷಾತ್ಕಾರಿತ್ವಾಭಾವಾತ್ । ಕಿಞ್ಚ ಸಕಲ-ಪದಾರ್ಥಸಾಕ್ಷಾತ್ಕಾರಿತ್ವಸ್ಯ ಅನ್ಯತ್ರಾದೃಷ್ಟಸ್ಯಾತ್ರಾಪಿ ಆತ್ಮತ್ವಾದೇವ ಅಭಾವಃ ಕಿಂ ನ ಸಾಧ್ಯತ ? ಇತಿ ।**

ಅನ್ಯತ್ರ- ದೃಷ್ಟಾಂತದಲ್ಲಿ[1] ಸಕಲ ಪದಾರ್ಥಗಳ ಸಾಕ್ಷಾತ್ಕಾರಿತ್ವರೂಪ ಸ್ವಭಾವವು ಕಂಡಿಲ್ಲ. 'ಯಾರಿಗೆ ಯಾವ ಅರಿವನ್ನು ಹೊಂದುವ ಸಾಮರ್ಥ್ಯವಿದ್ದು ಪ್ರತಿಬಂಧಕವಿರುವುದಿಲ್ಲವೋ ಆತನು ಅದರ ಸಾಕ್ಷಾತ್ಕಾರವನ್ನು ಹೊಂದಿರುವನು ಎಂದು ವ್ಯಾಪ್ತಿ ಇದೆ' ಎಂದು ಹೇಳಲಾಗದು. ಈ ರೀತಿಯ ವ್ಯಾಪ್ತಿ ಇದ್ದರೂ ಸಹ ವಿಜ್ಞಾನವು ಸಾಕ್ಷಾತ್ಕಾರದ (ಜ್ಞಾನದ)ರೂಪ ಹೊರತು ಸಾಕ್ಷಾತ್ಕಾರವನ್ನು ಹೊಂದಿರುವುದಿಲ್ಲ ಆದುದರಿಂದ[2] ಮತ್ತೂ ಸಹ ಬೇರೇ ಯಾರಲ್ಲೂ ಕಾಣದ ಸಕಲ ಪದಾರ್ಥದ ಸಾಕ್ಷಾತ್ಕಾರಿತ್ವವು, '(ನೀವು) ವಿವಕ್ಷಿಸಿದ ವ್ಯಕ್ತಿಯಲ್ಲೂ ಸಹ ಆತ್ಮನಾದುದರಿಂದ ಇರಲಾರದು' ಎಂದು ಸಾಧಿಸಲು ಏಕೆ ಸಾಧ್ಯವಿಲ್ಲ?[3]

**ಸರ್ವಜ್ಞನ ಕಲ್ಪನೆಯು ಪ್ರಮಿತವಾದುದಲ್ಲ**

**ನನು 'ಧರ್ಮಾದಿಕಂ ಕಸ್ಯಚಿತ್ ಪ್ರತ್ಯಕ್ಷಂ ವಸ್ತುತ್ವಾತ್ ಘಟವತ್' ಇತಿ ಸಾಮಾನ್ಯತಃ ಸಾರ್ವಜ್ಞಾದಿಸಿದ್ಧಿಃ, ಇತಿ, ಮೈವಮ್- ಅತ್ರ ಕಿಂ ಧರ್ಮಾದೇಃ ಪ್ರತ್ಯಕ್ಷತ್ವಮಾತ್ರಂ ಸಾಧ್ಯತೇ ಉತ ಏಕಪುರುಷಪ್ರತ್ಯಕ್ಷತ್ವಮ್ । ಆದ್ಯೇಽರ್ಥಾನ್ತರತ್ವಮ್ । ಕಸ್ಯಚಿತ್ ಕೇನಚಿತ್ ಪ್ರತ್ಯಕ್ಷೀಕೃತತ್ವೇನಾಪಿ ಪ್ರತಿ**

1. ಮೂಲದಲ್ಲಿನ 'ಅನ್ಯತ್ರ' ಎನ್ನುವ ಶಬ್ದಕ್ಕೆ 'ಪಕ್ಷದಿಂದ ಬೇರೆಯಾದ ದೃಷ್ಟಾಂತದಲ್ಲಿ' ಎಂದು ಅರ್ಥೈಸಲಾಗಿದೆ.

2. ಸರ್ವಜ್ಞನನ್ನು ಸಾಧಿಸಲು ಹೇಳಿದ ಅನುಮಾನದಲ್ಲಿ ದೃಷ್ಟಾಂತವನ್ನಾಗಿ 'ಲೋಚನವಿಜ್ಞಾನಂ ರೂಪಸಾಕ್ಷಾತ್ಕಾರಿ' ಎಂದು ತಿಳಿಸಿರುವರು. ಆದರೆ ಲೋಚನ ವಿಜ್ಞಾನವು- ಜ್ಞಾನವು 'ಜ್ಞಾನಿ' ಆಗಲಾರದು ಎಂದು ಭಾವ.

3. 'ವಿಮತಾ ಆತ್ಮಾನಃ ನ ಸಕಲಪದಾರ್ಥಸಾಕ್ಷಾತ್ಕಾರವನ್ತಃ ಆತ್ಮತ್ವಾತ್ ಅಸ್ಮದಾದಿವತ್' ಎಂದು ಸತ್‌ಪ್ರತಿಪಕ್ಷಾನುಮಾನವನ್ನು ಹೇಳಲು ಅವಕಾಶವಿದೆ ಎಂದು ಭಾವ.

**ಜ್ಞಾತಾರ್ಥಸ್ಯ ಸಿದ್ಧೇಃ । ನ ದ್ವಿತೀಯಃ, (ಅನ್ಯತ್ರ-)ದೃಷ್ಟಾಂತೇ ಅದೃಷ್ಟತ್ವಾತ್। ನಹಿ ಪಕ್ಷಾತಿರಿಕ್ತಸ್ಯ ಸರ್ವಸ್ಯ ಏಕಪುರುಷಪ್ರತ್ಯಕ್ಷತ್ವಂ ಸಮ್ಮತಮ್ । ಏಕೋ ಘಟ ಏಕಸ್ಯ ಪ್ರತ್ಯಕ್ಷ ಇತಿ ಚೇತ್, ತರ್ಹಿ 'ಏಕೋ ಧರ್ಮ ಏಕಸ್ಯ ಪ್ರತ್ಯಕ್ಷೋಽಪರಸ್ಯಾಧರ್ಮಃ' ಇತ್ಯೇವಂ ಪ್ರತಿಜ್ಞಾತಾರ್ಥಸ್ಯೋಪಪತ್ತೇಃ ಅರ್ಥಾನ್ತರತಾ ತಾದವಸ್ಥ್ಯಾತ್ ।**

'ಧರ್ಮಾದಿಗಳು ಓರ್ವನ ಪ್ರತ್ಯಕ್ಷಕ್ಕೆ ವಿಷಯವಾಗಿದೆ, ವಸ್ತುವಾದುದರಿಂದ ಘಟದಂತೆ' ಎಂಬ ಅನುಮಾನದಿಂದ (ಇಂತಹ ವ್ಯಕ್ತಿ ಎಂದು ವ್ಯಕ್ತಿವಿಶೇಷನನ್ನು ನಿರ್ದೇಶಿಸಿಸದೆ) ಸಾಮಾನ್ಯವಾಗಿ ಸರ್ವಜ್ಞನಾದ ಪುರುಷನೋರ್ವನು ಸಿದ್ಧವಾಗಬಹುದಲ್ಲವೆ ? ಹೀಗೆನ್ನುವುದು ಸರಿಯಲ್ಲ[1]. (ಈ ಅನುಮಾನದಿಂದ) 'ಧರ್ಮಾದಿಗಳು ಪ್ರತ್ಯಕ್ಷಕ್ಕೆ ವಿಷಯವಾಗಿವೆ' ಎಂದು ಇಷ್ಟುಮಾತ್ರ ಸಾಧಿಸಲಾಗುವುದೋ? ಅಥವಾ ಓರ್ವನ ಪ್ರತ್ಯಕ್ಷಕ್ಕೆ ವಿಷಯವಾಗಿವೆ ಎಂದೋ? ಮೊದಲ ಪಕ್ಷವನ್ನು ಒಪ್ಪಿದಲ್ಲಿ (ಅನುಮಾನಕ್ಕೆ) ಅರ್ಥಾಂತರತ್ವ (ರೂಪದೋಷಬರುವುದು). ಯಾವುದೋ ಓರ್ವ ವ್ಯಕ್ತಿಗೆ ಯಾವುದೋ ಒಂದು ಪದಾರ್ಥದ ಪ್ರತ್ಯಕ್ಷವಿದೆ ಎನ್ನುವದರಿಂದಲೇ ನಿಮ್ಮ ಪ್ರತಿಜ್ಞಾತಾರ್ಥವು (ನೀವು ಸಾಧಿಸಲು ಅಪೇಕ್ಷಿಸಿದ ವಿಷಯವು) ಸಿದ್ಧವಾಗುವುದರಿಂದ[2].

---

1. ಶ್ರೀಮದಾಚಾರ್ಯರು 'ಪ್ರತ್ಯಕ್ಷಃ ಕಸ್ಯಚಿದ್ ಧರ್ಮಃ ವಸ್ತುತ್ವಾತ್....। ಎಂದು ಅನು.ವ್ಯಾ.1.1.70. ರಲ್ಲಿ ಸೂಚಿಸಿರುವ ವಾದವನ್ನು ಇಲ್ಲಿ ಪ್ರಸ್ತುತಪಡಿಸುತ್ತಿದ್ದಾರೆ. ಘಟ, ಪಟ ಮೊದಲಾದ ಪದಾರ್ಥಗಳು ದೇವದತ್ತ ಯಜ್ಞದತ್ತ ಮೊದಲಾದ ವ್ಯಕ್ತಿಗಳ ಪ್ರತ್ಯಕ್ಷಕ್ಕೆ ವಿಷಯವಾಗಿವೆ. ಅದರಂತೆ ಧರ್ಮಾಧರ್ಮಾದಿಗಳೂ ಸಹ ಘಟ-ಪಟಗಳಂತೆ ಒಂದು ವಸ್ತು ವಿಶೇಷವಾಗಿವೆ, ಇವೂ ಸಹ ಯಾವುದೋ ವ್ಯಕ್ತಿಯ ಪ್ರತ್ಯಕ್ಷಕ್ಕೆ ಗೋಚರವಾಗುವವು. ಹೀಗೆ ಧರ್ಮಾದಿಗಳ ಪ್ರತ್ಯಕ್ಷವೂ ಉಂಟು ಎಂದಾದಲ್ಲಿ ಅದು ಯಾವುದೋ ವ್ಯಕ್ತಿಯಲ್ಲಿಯೇ ಇರಬೇಕು. ಜ್ಞಾನಾದಿಧರ್ಮಗಳು ವ್ಯಕ್ತಿಯನ್ನಾಶ್ರಯಿಸಿಯೇ ಇರುವುದು ಕಂಡಿದೆ. ಆದುದರಿಂದ ಧರ್ಮಾದಿ ಸಕಲ ಪದಾರ್ಥಗಳನ್ನು ಪ್ರತ್ಯಕ್ಷೀಕರಿಸಿಕೊಂಡ ವ್ಯಕ್ತಿಯೋರ್ವನು ಸಿದ್ಧನಾಗುವನು ಎಂದು ಪೂರ್ವಪಕ್ಷೀಕಾರನ ಅಭಿಪ್ರಾಯ.

2. ಧರ್ಮಾದಿಗಳು ಘಟ-ಪಟಾದಿ ಪದಾರ್ಥಗಳಂತೆ ಪದಾರ್ಥವಾಗಿವೆ. ಘಟಪಟಾದಿಗಳು ಪ್ರತ್ಯಕ್ಷದ ಅರಿವಿಗೆ ಸಿಗುವಂತೆ ಧರ್ಮಾದಿಗಳು ಪ್ರತ್ಯಕ್ಷದ ಅರಿವಿಗೆ ಸಿಗುವುವು ಎಂದು ಸಾಧಿಸಲು ಬಯಸಿರುವರು ಪ್ರತಿವಾದಿಗಳು. ಆದರೆ ಘಟ-ಪಟಾದಿ ಪದಾರ್ಥಗಳೆಲ್ಲವೂ

ಪುಟ 98ರಲ್ಲಿ........

ಎರಡನೇಯ ಪಕ್ಷವು ಸರಿಯಾಗುವುದಿಲ್ಲ. (ಧರ್ಮಾದಿಗಳು ಒಬ್ಬ ವ್ಯಕ್ತಿಯ ಪ್ರತ್ಯಕ್ಷಕ್ಕೆ ವಿಷಯವಾಗಿವೆ ಎಂದು ಸಾಧಿಸುವೆವು ಎಂಬುದು ಎರಡನೆಯ ಪಕ್ಷ) (**ಅನ್ಯತ್ರ**-)ದೃಷ್ಟಾಂತದಲ್ಲಿ **ಅದೃಷ್ಟತ್ವಾತ್**- ಕಾಣದೇ ಇರುವುದರಿಂದ. ಪಕ್ಷಾತಿರಿಕ್ತವಾದ ಎಲ್ಲವು (ಎಲ್ಲ ಪದಾರ್ಥಗಳು) ಓರ್ವ ಪುರುಷನ ಪ್ರತ್ಯಕ್ಷಕ್ಕೆ ವಿಷಯವಾಗಿವೆ ಎನ್ನವುದು ಅಸಮ್ಮತವಾಗಿವೆ[1]. ಒಂದು ಘಟವು ಓರ್ವ ವ್ಯಕ್ತಿಯ ಅರಿವಿಗೆ (ಮತ್ತೊಂದು ಮತ್ತೋರ್ವನ ಅರಿವಿಗೆ ಒಟ್ಟಿನಲ್ಲಿ ಎಲ್ಲ ಪದಾರ್ಥಗಳ ಅರಿವು ಅನೇಕ ವ್ಯಕ್ತಿಗಳಲ್ಲಿ ಸಿದ್ಧವಾಗುವುದು) ಎಂದರೆ ಹಾಗಾದಲ್ಲಿ ಧರ್ಮವು ಓರ್ವನ ಪ್ರತ್ಯಕ್ಷಕ್ಕೆ, ಅಧರ್ಮವು ಮತ್ತೋರ್ವನ ಪ್ರತ್ಯಕ್ಷಕ್ಕೆ ಎಂದು ಪ್ರತಿಜ್ಞಾತವಾದ ವಿಷಯವು ('ಧರ್ಮಾಧರ್ಮಾದಿಗಳೆಲ್ಲವೂ ಪ್ರತ್ಯಕ್ಷಕ್ಕೆ ವಿಷಯವಾಗಿವೆ' ಎನ್ನವುದು) ಉಪಪನ್ನವಾಗುವುದರಿಂದ ಅರ್ಥಾಂತರತ್ವವು ಅನಿವಾರ್ಯವಾಗುವುದರಿಂದ[2].

**ಧರ್ಮಂ ಪಶ್ಯನ್ ಅಧರ್ಮಂ ಕಥಂ ನ ಪಶ್ಯತಿ? ಇತಿ ಚೇತ್ ಕಿಮಿಯಂ ಸಂಭಾವನಾ ಅಥಾನುಮಾನಂ ? ನಾಽದ್ಯಃ , ಅಸಾಧಕತ್ವಾತ್, ನ ದ್ವಿತೀಯಃ,**

---

...... ಪುಟ 97 ರಿಂದ
ಒಬ್ಬ ವ್ಯಕ್ತಿಯ ಅರಿವಿಗೆ ಪ್ರಾಪ್ತವಾಗಿವೆ ಎಂಬುವುದು ಕಂಡಿಲ್ಲ. ಯಾರಿಗೋ ಘಟದ ಅರಿವು ಮತ್ತಾರಿಗೋ ಪಟದ ಅರಿವು ಎಂಬುವುದು ಅನುಭವ. ಪ್ರಕೃತ ಧರ್ಮಾದಿ ಅನೇಕ ಪದಾರ್ಥಗಳ ಅರಿವೂ ಸಹ ಒಬ್ಬ ವ್ಯಕ್ತಿಯ ಅರಿವಿನಲ್ಲೇ ಇರಬೇಕೆಂದು ಸಿದ್ಧವಾಗುವುದಿಲ್ಲ ಅನೇಕ ವ್ಯಕ್ತಿಗಳ ಅರಿವಿಗೆ ಪ್ರಾಪ್ತವಾಗಬಹುದು ಎಂದಾಯ್ತು. ಆದುದರಿಂದ ಅವರಿಗೆ ಅಭೀಷ್ಟನಾದ ಧರ್ಮಾದಿ ಸಕಲ ಪದಾರ್ಥಗಳ ಅರಿವನ್ನು ಹೊಂದಿದ ಒಬ್ಬ ಸರ್ವಜ್ಞವ್ಯಕ್ತಿಯು ಸಿದ್ಧಿಯಾಗದೇ 'ಧರ್ಮಾದಿಗಳು ಪ್ರತ್ಯಕ್ಷಗೋಚರ' ಎಂದಿಷ್ಟೇ ಸಿದ್ಧವಾಗುವುದು. ಇದನ್ನು ಶಾಸ್ತ್ರದಲ್ಲಿ ಅರ್ಥಾಂತರ ಎಂಬ ದೋಷ ಎಂದು ತಿಳಿಸಿರುವರು. ಪಕ್ಷದಲ್ಲಿ ಹೇತುವಿನ ಅಸ್ತಿತ್ವವು ಸಾಧ್ಯದ ಅಸ್ತಿತ್ವವನ್ನು ಸಾಧಿಸಲಾರದು ಎಂದು ಭಾವ.

1. ಉದಾಹರಿಸಿದ ಘಟ-ಪಟಾದಿ ಪದಾರ್ಥಗಳು ವಿಭಿನ್ನದೇಶ-ಕಾಲಗಳಲ್ಲಿವೆ. ಆ ಎಲ್ಲ ಪದಾರ್ಥದ ಅರಿವು ಒಬ್ಬ ವ್ಯಕ್ತಿಗೆ ಇದೆ ಎನ್ನುವದು ಅನುಭವದಲ್ಲಿಲ್ಲ ಎಂದು ಭಾವ.

2. ಧರ್ಮಾದಿಗಳು ಪ್ರತ್ಯೇಕ ವ್ಯಕ್ತಿಗಳ ಪ್ರತ್ಯಕ್ಷಕ್ಕೆ ವಿಷಯವಾದರೂ 'ವಸ್ತುತ್ವಾತ್ ಘಟವತ್' ಎನ್ನುವ ಅನುಮಾನವು ಸರ್ವಜ್ಞತ್ವವನ್ನು ಸಾಧಿಸದೆ ಉಪಪನ್ನವಾಗುವುದರಿಂದ ಅರ್ಥಾಂತರತ್ವ ರೂಪ ದೋಷದಿಂದ ದುಷ್ಟವಾಯಿತು ಈ ಅನುಮಾನ. ಈ ಅನುಮಾನಕ್ಕೆ ಸರ್ವಜ್ಞತ್ವವನ್ನು ಸಾಧಿಸುವುದೇ ಅರ್ಥ-ಪ್ರಯೋಜನ, ಪ್ರಕೃತ ಆ ಪ್ರಯೋಜನವು ಈ ಅನುಮಾನ-ದಿಂದಾಗಲಿಲ್ಲ ಎಂದು ಭಾವ.

ವ್ಯಾಪ್ತ್ಯಭಾವಾತ್ । 'ಯೋಽಶಕ್ಯಮೇಕಂ ಕರೋತಿ ಸೋಽಪರಮಪೀತಿ ವ್ಯಾಪ್ತಿಃ' ಇತಿ ಚೇನ್ನ । ವರಾಹಗೃಧ್ರಾದಿಷು ದೂರಸ್ಥಶಬ್ದರೂಪಗ್ರಹಣ-ಸಾಮರ್ಥ್ಯೇಷ್ವಪಿ ತಥಾವಿಧರಸಾದಿಗ್ರಹಣಸಾಮರ್ಥ್ಯಸ್ಯಾದೃಷ್ಟತ್ವಾತ್ । ಅಸ್ತು ವಾ ವಿಪ್ರತಿಪನ್ನಮೇಕಸ್ಯೈವ ಪ್ರತ್ಯಕ್ಷಂ, ತಥಾಪಿ ಕುತಃ ಸಾರ್ವಜ್ಞ-ಸಿದ್ಧಿಃ? ನ ಹಿ 'ಸ ಏವ ಸಂಪ್ರತಿಪನ್ನಂ ಪಶ್ಯತಿ' ಇತ್ಯತ್ರ ಪ್ರಮಾಣಮಸ್ತಿ । ಕೈಮುತ್ಯನ್ಯಾಯಸಿದ್ಧಂ ತದಿತಿ ಚೇನ್ನ , ತದ್ಬೀಜಾಭಾವಾತ್ । 'ಯೋ ಹ್ಯಶಕ್ಯಂ ಕರೋತಿ ಸ ಸುಕರಂ ಕರೋತ್ಯೇವ' ಇತಿ ಚೇನ್ನ । ಕಂಟಕಾನ್ ಭಕ್ಷಯಿತರಿ ಉಷ್ಟ್ರೇ ಕದಲೀಫಲಭಕ್ಷಣಸ್ಯಾದೃಷ್ಟತ್ವಾತ್ । ಧರ್ಮಾದಿಜ್ಞಾನೇನೈವ ಪ್ರಕೃತೋಪಯೋಗಾತ್ ಕಿಂ ಕೀಟಕಸಂಖ್ಯಾಪರಿಜ್ಞಾನೇನ? ಇತಿ ಚೇನ್ ನ । ಧರ್ಮಾದಿಸಾಧ್ಯಸಾಧನಾದ್ಯಪರಿಜ್ಞಾನೇ ಧರ್ಮಾದಿಜ್ಞಾನಸ್ಯಾನುಪಯುಕ್ತ-ತ್ವಾತ್ ।

ಧರ್ಮದ ಅರಿವನ್ನು ಹೊಂದಿದವ ಅಧರ್ಮವನ್ನು ಕಾಣಲಾರ ಎನ್ನುವುದು ಹೇಗಾದೀತು ? ಎಂದಲ್ಲಿ, ( ಈ ಪ್ರಶ್ನೆಯನ್ನು ಉತ್ತರಿಸಲು ವಿಕಲ್ಪಗಳನ್ನು ಮಾಡುವರು.) ಇದು (ಧರ್ಮದ ಅರಿವು ಇದ್ದಲ್ಲಿ ಅಧರ್ಮದ ಅರಿವೂ ಇರಬಹುದು ಎಂಬುದು) ಏನು ಸಂಭಾವನೆಯೋ, ಅಥವಾ ಅನುಮಾನವೋ? ಮೊದಲಪಕ್ಷವಾಗದು. ಸಾಧಕವಲ್ಲವಾದುದರಿಂದ. ಎರಡನೆಯ ಪಕ್ಷವೂ ಆಗದು, ವ್ಯಾಪ್ತಿಯಿಲ್ಲವಾದುದರಿಂದ[1]. ಯಾವ ವ್ಯಕ್ತಿ ಕಷ್ಟಸಾಧ್ಯವಾದುದನ್ನು ಮಾಡುವನೋ, ಆತನು ಅಂತಹ ಮತ್ತೊಂದನ್ನೂ ಮಾಡಬಲ್ಲ ಎಂದು ವ್ಯಾಪ್ತಿ ಇದೆ (ಅನುಭವವಿದೆ) ಎನ್ನಲಾಗದು. ಹಂದಿ, ಹದ್ದು ಮುಂತಾದವು ದೂರದಲ್ಲಿರುವ ಶಬ್ದ, ರೂಪಗಳನ್ನು ಕಾಣುವ ಸಾಮರ್ಥ್ಯವನ್ನು ಹೊಂದಿದ್ದರೂ[2], ದೂರದಲ್ಲಿರುವ ರಸ ಮುಂತಾದವುಗಳನ್ನು ಅರಿಯುವ

1. ' ಹಾಗೂ ಆಗಬಹುದು' ಎನ್ನುವ ಸಂಭಾವನೆಯು ತತ್ವಸಾಧಕವಾಗುವದಿಲ್ಲ. ಮತ್ತು 'ಯಾರು ಧರ್ಮದ ಅರಿವನ್ನು ಹೊಂದಿರುವನೋ ಆತನು ಅಧರ್ಮದ ಅರಿವನ್ನೂ ಹೊಂದಿರುವನು' ಎಂದು ಅನುಭವದಲ್ಲಿ ಕಂಡಿಲ್ಲ. ಆದುದರಿಂದ ವ್ಯಾಪ್ತಿಯ ಅರಿವಾಗದೆ ಅನುಮಾನವು ಪ್ರಮಾಣವಾಗದು ಎಂದು ಭಾವ.

2. ಹಂದಿಯು ಅತಿದೂರದಲ್ಲಿನ ಶಬ್ದವನ್ನು ಕೇಳಿಸಿಕೊಳ್ಳುವುದು, ಹದ್ದು ಅತಿದೂರದಲ್ಲಿರುವ ಚಿಕ್ಕ ಪದಾರ್ಥವನ್ನೂ ಗ್ರಹಿಸುವುದು ಎಂಬುವುದು ಲೋಕಪ್ರಸಿದ್ಧಿ.

ಸಾಮರ್ಥ್ಯವು ಕಂಡಿಲ್ಲವಾದುದರಿಂದ[1]. ಅಥವಾ ವಿವಾದಕ್ಕೆ ವಿಷಯವಾದ ಪದಾರ್ಥಗಳು ಓರ್ವನ ಪ್ರತ್ಯಕ್ಷಕ್ಕೆ ಗೋಚರವಾಗಲಿ, ಆದರೂ ಸರ್ವಜ್ಞನಾದ ವ್ಯಕ್ತಿಯ ಸಿದ್ಧಿಯು ಹೇಗೆ ಆಗುವುದು ? 'ಇಂತಹ ವ್ಯಕ್ತಿಯೇ ಸಮ್ಮತ ವಾದದ್ದನ್ನು(ಧರ್ಮಾದಿಗಳನ್ನು) ಕಾಣುವನು' ಎಂದು ಸಾಧಿಸಲು ಪ್ರಮಾಣವಿಲ್ಲ[2]. ಕೈಮುತ್ಯನ್ಯಾಯದಿಂದ[3], ಅದು ಸಿದ್ಧಿಸುತ್ತದೆ ಎಂದು ಹೇಳಲು ಆಗದು. ಅದಕ್ಕೆ (ಧರ್ಮಾದಿಗಳು ಸಾಮಾನ್ಯ ಪದಾರ್ಥ, ಇದಕ್ಕಿಂತ ಕ್ಲಿಷ್ಟಪದಾರ್ಥದ ಸಾಕ್ಷಾತ್ಕಾರವು ಈತನಿಗೆ ಇದೆ ಎನ್ನುವದಕ್ಕೆ) ಏನೂ ನಿಮಿತ್ತವಾದದ್ದು ಇಲ್ಲವಾದುದರಿಂದ[4]. (ಮತ್ತೂ ಸಹ) ಯಾರು ಕಷ್ಟ ಸಾಧ್ಯವಾದದ್ದನ್ನು ಮಾಡುವನೋ ಆತನು ಸುಲಭವಾದದ್ದನ್ನು ಮಾಡುವನು (ಎಂಬ ಅನುಮಾನವೇ ಇಲ್ಲಿ ನಿಮಿತ್ತ) ಎಂದೆನ್ನಲಾಗದು. ಮುಳ್ಳನ್ನು ತಿನ್ನುವ ಒಂಟೆಯು ಬಾಳೆಹಣ್ಣನ್ನು ತಿನ್ನುವುದು ಕಂಡಿಲ್ಲವಾದುದರಿಂದ (ಕಠಿಣವಾದ ಜೋಳದ ದಂಟನ್ನು ತಿನ್ನುವ ಹಸುಗಳು ಮೆತ್ತನೆಯ ಅನ್ನವನ್ನು ತಿಂದು ಜೀರ್ಣಿಸಿಕೊಳ್ಳಲಾರವು.) ಪ್ರಕೃತದಲ್ಲಿ ಧರ್ಮಾದಿಗಳ ಅರಿವು ಮಾತ್ರ ಅಗತ್ಯವಾಗಿದೆ,(ಆದುದರಿಂದ) ಹುಳುಹುಪ್ಪಟೆಗಳ ಸಂಖ್ಯೆಯ ಅರಿವಿನಿಂದ

---

1. ಒಂದು ಕಷ್ಟಸಾಧ್ಯಕೆಲಸವನ್ನು ಮಾಡಿದವ ಮತ್ತೊಂದು ಕಷ್ಟ ಸಾಧ್ಯವಾದ ಕೆಲಸವನ್ನು ಮಾಡುವನು ಎಂಬ ವ್ಯಾಪ್ತಿಗೆ ಪ್ರಕೃತ ದೃಷ್ಟಾಂತದಲ್ಲಿ ವ್ಯಭಿಚಾರವು ಕಂಡಿದೆ ಎಂದು ಭಾವ.

2. ಧರ್ಮಾದಿಗಳು ಓರ್ವನ ಪ್ರತ್ಯಕ್ಷಗೋಚರವಾಗುವವು ಎಂದು ಒಪ್ಪಿದರೂ ಆ ಎಲ್ಲ ಧರ್ಮಾದಿಗಳ ಅರಿವನ್ನು ಇದೇ ವ್ಯಕ್ತಿಯು ಹೊಂದಿರುವನು ಎನ್ನಲು ಏನು ಪ್ರಮಾಣ ? ಹೀಗಾಗಿ ಸರ್ವಜ್ಞನ ಸಿದ್ಧಿಯು ಆಗಲಾರದು, ಹಾಗಾಗಿ ಪುನಃ ಅರ್ಥಾಂತರತಾದೋಷ ಎಂದು ಭಾವ.

3. ಸಮುದ್ರವನ್ನು ಈಸಿ ದಾಟಿದವ ನದಿಯನ್ನು ದಾಟಲಾರನೇ ? ಇವೇ ಮುಂತಾದವು ಕೈಮುತ್ಯನ್ಯಾಯಕ್ಕೆ ಉದಾಹರಣೆಗಳು.

4. ಧರ್ಮಾದಿ ದರ್ಶನವು ಒಂದು ಸಾಮಾನ್ಯ ಕಾರ್ಯ, ಆದಕ್ಕಿಂತ ಮಹತ್ತರವಾದುದು ಇನ್ನೊಂದು ಕಾರ್ಯ, ಇಂತಹ ಮಹತ್ತರವಾದ ಕಾರ್ಯವನ್ನು ಈತನು ಮಾಡಿದ್ದರಿಂದ ಈ ಸಾಮಾನ್ಯಕಾರ್ಯವನ್ನು ಈತನು ಮಾಡಬಲ್ಲ ಎಂದು ಹೇಳಲು ಅಗತ್ಯವಿರುವ ಸಂಗತಿಗಳು ಯಾವುದೂ ಕಂಡಿಲ್ಲ ಎಂದು ಭಾವ.

ಏನು ಎಂದು ಪ್ರಶ್ನಿಸಲಾಗದು[1]. ಧರ್ಮಾದಿಗಳಿಂದ ಸಾಧ್ಯವಾಗುವ ಮತ್ತು ಧರ್ಮಾದಿಗಳ ಸಾಧನ ಈ ಎಲ್ಲದರ ಅರಿವಿಲ್ಲದೆ (ಕೇವಲ) ಧರ್ಮಾದಿಗಳ ಅರಿವು ಅನುಪಯುಕ್ತವಾದುದರಿಂದ[2].

**ಸರ್ವಜ್ಞತ್ವದ ಸಾಧನೆಯ ನೈಯಾಯಿಕರ ಮಾರ್ಗವೂ ತರವಲ್ಲ.**

**'ನನು ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟಾದಿವತ್' ಇತಿ ಕ್ಷಿತ್ಯಾದೇಃ ಕರ್ತರಿ ಸಿದ್ಧೇ ತಸ್ಯ ಸಾರ್ವಜ್ಞಮಪಿ ಸಿದ್ಧಮೇವ । ಉಪಾದಾನಾದಿ ಸಾಕ್ಷಾತ್ಕಾರವತ ಏವ ಕರ್ತೃತ್ವಾತ್ । ಸರ್ವಸ್ಯಾಪಿ ಕ್ಷಿತ್ಯಾದ್ಯುಪಾದಾನಾದೌ ಪ್ರವಿಷ್ಟತ್ವಾದ್ ಇತಿ ಚೇನ್ನ ।**

**ಘಟಾದೀನಾಂ ಕರ್ತರಿ ಕುಲಾಲಾದೌ ತದುಪಾದಾನಾದಿವಿಷಯ-ಸಾಕ್ಷಾತ್ಕಾರಸ್ಯಾದೃಷ್ಟತ್ವಾತ್ । ನ ಹಿ ಕುಲಾಲೋ ಘಟಂ ಪಲಪರಿಮಾಣೇ-ಯತ್ತಾವಿಶೇಷವನ್ತಂ ನಿಮಿತ್ತಂ ವಾ ಕಾಲಂ, ದೇಶಮ್, ಅದೃಷ್ಟಂ, ತದಾಶ್ರಯಂ ವಾ ಪುರುಷಂ, ತತ್ಪ್ರಯೋಜನವಿಶೇಷಂ ವಾ ಸಾಕ್ಷಾತ್ಕರೋತಿ ।**

**ಕಿಞ್ಚ ಘಟಾದೌ ಸಪಕ್ಷೇಽದೃಷ್ಟಸ್ಯ ಏಕಕರ್ತೃಕತ್ವಸ್ಯ ಕ್ಷಿತ್ಯಾದೌ ಕುತಃ ಸಿದ್ಧಿಃ? ಯತಸ್ತಸ್ಯ ಸಾರ್ವಜ್ಞಂ ಸ್ಯಾತ್ । ಕಲ್ಪನಾಲಾಘವಾದಿತಿ ಚೇನ್ನ,**

---

1. ಪ್ರಕೃತ ಬೌದ್ಧರು ಅನುಮಾನದಿಂದ 'ಧರ್ಮಾದಿಗಳು ಓರ್ವ ವ್ಯಕ್ತಿಯ ಅರಿವಿನಲ್ಲಿವೆ' ಎಂದು ಸಾಧಿಸಿದರೂ, ಈ ಕ್ರಿಮಿಕೀಟಾದಿಗಳ ಅರಿವನ್ನು ಹೊಂದಿದವ ಎಂದು ಸಾಧಿಸಲು ಆಗದು ಎಂದು ತತ್ವವಾದಿಗಳು ಪ್ರಶ್ನಿಸಲು, ಕ್ರಿಮಿಕೀಟಾದಿಗಳ ಅರಿವು ಪ್ರಕೃತವಾದಕ್ಕೆ ಅನುಪಯುಕ್ತ. ಧರ್ಮಾದಿಗಳ ಅರಿವನ್ನು ಹೊಂದಿದ ಓರ್ವ ಸಿದ್ಧನಾದಲ್ಲಿ ಅಪೌರುಷೇಯ ವಾಕ್ಯಗಳನ್ನು ಒಪ್ಪದೆ, ಧರ್ಮಾದಿಗಳು ಸಿದ್ಧವಾಗುವುದು ಎಂದು ಬೌದ್ಧಾದಿಗಳು ಉತ್ತರಿಸುವರು. ಇದು ಸರಿಯಾಗದು ಎಂದು ಭಾವ.

2. 'ತಂದೆ ತಾಯಿಯ ಸೇವೆಯನ್ನು ಮಾಡಬೇಕು' 'ಸತ್ಯವನ್ನು ನುಡಿಯಬೇಕು' ಈ ಮುಂತಾದ ಕೇವಲ ಧರ್ಮ-ಕರ್ಮಗಳ ಮಾಹಿತಿ ಇದ್ದರೆ ಸಾಲದು. ಈ ಧರ್ಮಕರ್ಮಗಳನ್ನು ಆಚರಿಸದೆ ಇದ್ದವ ಯಾವ ಯೋನಿಯಲ್ಲಿ ಜನ್ಮವನ್ನು ತಾಳುವನು ? ಯಾವ ವಿಧ ನರಕದಲ್ಲಿ ದುಃಖಿಸುವನು ? ಧರ್ಮವನ್ನು ಆಚರಿಸಿದಲ್ಲಿ ಯಾವ ವಿಧ ಸುಖವನ್ನು ಹೊಂದುವನು ? ಎಷ್ಟು ಕಾಲ ಈ ಸುಖ-ದುಃಖಗಳನ್ನು ಹೊಂದುವನು? ಯಾವ ಧರ್ಮ ಹಿರಿದು ? ಯಾವುದು ಕಿರಿದು ? ಇದು ಏಕೆ ಕಿರಿದು ? ಇತ್ಯಾದಿ ಅನೇಕ ವಿಧವಾದ ಧರ್ಮದ ಎಡ-ಬಲ, ಹಿಂದಿನ-ಮುಂದಿನ ವಿಷಯಗಳ ಅರಿವು ಅಗತ್ಯ ಎಂದು ಭಾವ.

**ಅತಿಬಹುತರಕಾರ್ಯಜಾತಸ್ಯ ಅನೇಕಕರ್ತೃತಾಯಾ ಏವೋಚಿತತ್ವಾದ್ ಇತ್ಯಲಂ ಪ್ರಪಂಚನೇನ ।**

'ಘಟಾದಿಗಳಂತೆ ಕಾರ್ಯವಾದ ಈ ಕ್ಷಿತ್ಯಾದಿಗಳಿಗೂ ಒಬ್ಬ ಕರ್ತೃವಿರಬೇಕು' (ಎಂಬ ಅನುಮಾನದಿಂದ) ಕ್ಷಿತ್ಯಾದಿಗಳಿಗೆ ಕರ್ತೃವು ಸಿದ್ಧವಾಗಲು, ಆ ಕರ್ತೃವಿಗೆ ಸರ್ವಜ್ಞತ್ವವು ಸಿದ್ಧವೇ ಆಗುತ್ತದೆ. ಉಪಾದಾನ-ಕಾರಣಾದಿಗಳ ಸಾಕ್ಷಾತ್ಕಾರವಿರುವವನೇ ಕರ್ತೃವಾಗಬೇಕಾದುದರಿಂದ. ಎಲ್ಲ ಪದಾರ್ಥಗಳೂ ಈ ಭೂಮಿ ಮೊದಲಾದವುಗಳ (ಕಾರ್ಯ- ಪ್ರಪಂಚದ) ಉಪಾದಾನಾದಿಗಳಲ್ಲಿ ಸೇರುವುದರಿಂದ[1]. ಎಂದೆನ್ನುವುದು ಸರಿಯಲ್ಲ.

ಘಟಾದಿಗಳ ಕರ್ತೃವಾದ ಕುಲಾಲಾದಿಗಳಲ್ಲಿ ಘಟಾದಿಗಳ ಉಪಾದಾನಾದಿ ವಿಷಯಗಳ ಸಾಕ್ಷಾತ್ಕಾರವು **ಅದೃಷ್ಟತ್ವಾತ್**- ಕಂಡಿಲ್ಲವಾದುದರಿಂದ. ಕುಲಾಲನು ಘಟದ ತೂಕ, (ಅದರಲ್ಲಿನ) ಪರಮಾಣು (ಅದರ ಸಂಖ್ಯೆ), (ಅದರ) ಅವಧಿ ಈ ಮುಂತಾದ ವಿಶೇಷಗಳನ್ನಾಗಲಿ, ಅದರ ನಿಮಿತ್ತವನ್ನಾಗಲಿ, ಕಾಲ, ದೇಶ, ಅದೃಷ್ಟ, ಅದರ ಆಶ್ರಯ, ಪುರುಷ ಅದರ ಪ್ರಯೋಜನ ಈ ಮುಂತಾದ ವಿಶೇಷಜ್ಞಾನವನ್ನು (ಕುಲಾಲನು) ಸಾಕ್ಷಾತ್ಕರಿಸಿಕೊಂಡಿರುವುದಿಲ್ಲ[2].

1. ಈ ಭೂಮಿ, ಸಮುದ್ರ, ಆಕಾಶ, ಆಕಾಶಕಾಯ ಮುಂತಾದ ಎಲ್ಲ ಪ್ರಪಂಚವು ಕಾರ್ಯವಾಗಿದೆ. ಕಾರ್ಯವೆಂದಾದಲ್ಲಿ ಅವುಗಳಿಗೆ ಓರ್ವ ಕರ್ತೃವು ಬೇಕು. ಆ ಕರ್ತೃವಿಗೆ ಈ ಭೂಮಿ ಮೊದಲಾದ ಪ್ರಪಂಚದ ಉಪಾದಾನ ಕಾರಣ, ನಿಮಿತ್ತಕಾರಣ, ಅದೃಷ್ಟಕಾರಣ ಮುಂತಾದ ಎಲ್ಲವಿಧವಾದ ಪದಾರ್ಥಗಳ ಅರಿವಿರಬೇಕು. ಈ ಪ್ರಪಂಚದಲ್ಲಿ ಎಲ್ಲ ಪದಾರ್ಥಗಳೂ ಅಡಕವಾಗುವುದರಿಂದ ಅದರ ಕರ್ತೃವಿಗೆ ಆ ಎಲ್ಲದರ ಅರಿವಿರಬೇಕು. ಆದುದರಿಂದ ಓರ್ವ ಸರ್ವಜ್ಞನಾದ ವ್ಯಕ್ತಿ ಸಿದ್ಧವಾಗುವನು ಎಂದು ಭಾವ.

2. ಕುಲಾಲನು ಗಡಿಗೆಯನ್ನು ನಿರ್ಮಿಸುತ್ತಾನೆ. ಆದರೆ ಆತನಿಗೆ, ಗಡಿಗೆಯ ನಿರ್ಮಾಣದಲ್ಲಿ ಸೀಮಿತವಾದ ಜ್ಞಾನವಿರುತ್ತದೆ. ಹೊರತಾಗಿ ಸಮಗ್ರಜ್ಞಾನವಿರುವುದಿಲ್ಲ. ಉದಾಹರಣೆಗೆ ತಾನು ರಚಿಸಿದ ಗಡಿಗೆಯಲ್ಲಿ ಎಷ್ಟು ಪರಮಾಣುಗಳಿವೆ. ? ಎಷ್ಟು ತೂಕವಿದೆ. ಈ ಗಡಿಗೆಯ ಬಾಳಿಕೆಯ ಕಾಲವೆಷ್ಟು ? ಈ ಗಡಿಗೆ ಯಾವಕಾರ್ಯಕ್ಕಾಗಿ ನಿರ್ಮಾಣಗೊಂಡಿದೆ. ಯಾವ ಊರನ್ನು ಸೇರುತ್ತದೆ, ಯಾವ ವ್ಯಕ್ತಿಯ ಬಳಕೆಗಾಗಿ ಈ ಮುಂತಾದ ಜ್ಞಾನವಿರುವುದಿಲ್ಲ. ಅದರಂತೆ ಈ ಪ್ರಪಂಚಕ್ಕೆ ಒಬ್ಬ ಕರ್ತೃವನ್ನು ಊಹಿಸಿದರೂ ಆತನೂ ಕುಂಬಾರನಂತೆ ಸಾಮಾನ್ಯ ಅರಿವಿನ ವ್ಯಕ್ತಿಯಾದರೂ ಸಾಕಾದೀತು ಸರ್ವಜ್ಞನೇ ಆಗಿರಬೇಕಾಗಿಲ್ಲ. ಆದುದರಿಂದ ಕರ್ತೃವು ಸಿದ್ಧನಾದರೂ ಆತನು ಸರ್ವಜ್ಞನು ಆಗಬೇಕಾಗಿಲ್ಲ. ಈ ಅನುಮಾನಕ್ಕೆ ಅರ್ಥಾಂತರತ್ವರೂಪ ದೋಷ ಎಂದು ಭಾವ.

ಮತ್ತೂ ಸಹ ದೃಷ್ಟಾಂತವಾದ ಘಟಾದಿಗಳ ಕರ್ತೃವೂ ಓರ್ವನೇ ಆಗದಿರುವಾಗ ಈ ಕ್ಷಿತ್ಯಾದಿಗಳ ಕರ್ತೃ ಓರ್ವನೇ ಎಂಬುವುದು ಹೇಗೆ ಸಿದ್ಧವಾಗುವುದು ? ಯಾವ ಕಾರಣದಿಂದ ( ಇಡೀ ಪ್ರಪಂಚಕ್ಕೆ ಓರ್ವನೇ ಕರ್ತೃವಾದಲ್ಲಿ) ಆತನಿಗೆ (ಕರ್ತೃವಿಗೆ) ಸರ್ವಜ್ಞತ್ವವು ಸಿದ್ಧಿಸೀತು[1]. ಕಲ್ಪನೆಯಲ್ಲಿ ಲಘುವಾದುದರಿಂದ ಎನ್ನಲು ಸಾಧ್ಯವಿಲ್ಲ[2]. ಅತಿಯಾದ, ಬಹುತರವಾದ ಈ ಕಾರ್ಯ ಸಮೂಹವನ್ನು ಅನೇಕರು ನಿರ್ವಹಿಸುವರು ಎಂದು ಕಲ್ಪಿಸುವುದೇ ಉಚಿತವಾದುದರಿಂದ[3]. (ಪ್ರಕೃತದಲ್ಲಿ) ಇಷ್ಟು ವಿವರ ಸಾಕು.

#### ಅಪೌರುಷೇಯವಾಕ್ಯಗಳನ್ನು ಅಂಗೀಕರಿಸದ ಪಕ್ಷದಲ್ಲಿ ಕಲ್ಪನಾಗೌರವ

ಏವಂ ಸಾರ್ವಜ್ಞಾಸಿದ್ಧೌ , ತಸ್ಯಾವಿಪ್ರಲಮ್ಭಕತ್ವಮಪ್ಯಪ್ರಾಮಾಣಿಕಂ ಕಲ್ಪ್ಯಮೇವ । ಸಾರ್ವಜ್ಞೇಽಪಿ ಕುತೋ ವಿಪ್ರಲಂಭಾಭಾವಃ? ರಾಗಾದ್ಯಭಾವಾದಿತಿ ಚೇನ್ನ ; ತದ್ರಹಿತೇಷ್ವಪಿ ಬುದ್ಧಾದೀಶ್ವರಾವತಾರೇಷು ದರ್ಶನಾತ್ । ವೀತರಾಗಾಣಾಮಪಿ ಜ್ಞಾನಾಙ್ಕುರಸಂರಕ್ಷಣಾರ್ಥಂ ಛಲಾದಿನಾ ಪ್ರತಿವಾದಿಪ್ರತಾರಣಸ್ಯ ಸರ್ವೈರಙ್ಗೀಕೃತತ್ವಾಚ್ಚ । ಏವಂ ಪಟುಕರಣತ್ವಾದಿಕಂ ಕಲ್ಪ್ಯಮೇವ ನತು ಪ್ರಾಮಾಣಿಕಮ್ । ಕಿಂಚಾಸ್ತು ಕಶ್ಚಿತ್ ಸರ್ವಜ್ಞೋಽವಿಪ್ರಲಂಭಕಶ್ಚ । ತಥಾಽಪಿ ಧರ್ಮಾದಿಪ್ರತಿಪಾದಕ-ವಾಕ್ಯವಿಶೇಷಸ್ಯ ತತ್ಕರ್ತೃತ್ವಂ ಕುತಃ ಸಿದ್ಧಮ್? 'ನನ್ವೇವಮ್ಭೂತಃ ಸ್ವೀಯಹಿತಾಹಿತಪ್ರಾಪ್ತಿಪರಿಹಾರಸಾಧನಮವಿದುಷೋ ನಾನಾವಿಧವ್ಯಸನ-

---

1. ಕ್ಷಿತ್ಯಾದಿ ಸಮಸ್ತ ಪ್ರಪಂಚಕ್ಕೆ ಓರ್ವನೇ ಕರ್ತಾ ಎಂದಾದಲ್ಲಿ ಅಂತಹ ಕರ್ತೃವಿಗೆ ಸರ್ವಜ್ಞತ್ವವೂ ಸಿದ್ಧವಾಗಬಹುದಿತ್ತು, ಆದರೆ ಪ್ರಕೃತದಲ್ಲಿ ಹಾಗೇ ಆಗಬೇಕೆಂದಿಲ್ಲ, ಈ ಪ್ರಪಂಚಕ್ಕೆಅನೇಕ ಕರ್ತೃಗಳನ್ನು ಒಪ್ಪಬಹುದಾಗಿದೆ ಎಂದು ಭಾವ.

2. ನಮ್ಮ ನಿಮ್ಮ ಕಣ್ಣಿಗೆ ಕಾಣದ ಕರ್ತೃವನ್ನು ಈ ಕ್ಷಿತ್ಯಾದಿಗಳಿಗೆ ಕಲ್ಪಿಸಬೇಕು. ಈ ಸಂದರ್ಭದಲ್ಲಿ ಆ ಕಲ್ಪಿತ ಕರ್ತೃ ಓರ್ವನೋ ಹಲವರೋ ಎಂಬ ಜಿಜ್ಞಾಸೆ ಬಂದಾಗ ಓರ್ವನನ್ನು ಕಲ್ಪಿಸುವುದು ಲಘು, ಹಲವರನ್ನು ಕಲ್ಪಿಸುವುದು ಗುರು ಎಂದು ಶಾಸ್ತ್ರನಿಯಮ ಈ ನಿಯಮವು ಇಲ್ಲಿಗೆ ಅನ್ವಯಿಸುವದಿಲ್ಲ ಎಂದು ಭಾವ.

3. ದೊಡ್ಡದಾದ ಕೆಲಸವನ್ನು ಅನೇಕ ಮಂದಿ ಸೇರಿಕೊಂಡು ನಿರ್ವಹಿಸಿರುವುದು ಈ ಜಗದಲ್ಲಿ ಕಂಡಿರುವಾಗ, ಈ ಪ್ರಪಂಚವನ್ನೂ ಅನೇಕ ಮಂದಿ ನಿರ್ವಹಿಸಿರುವರು ಎಂದು ಕಲ್ಪಿಸಿದಲ್ಲಿ ಗೌರವದೋಷಕ್ಕೆ ಎಡೆ ಇಲ್ಲ ಎಂದು ಭಾವ.

**ಸಾಗರನಿಮಗ್ನಾನ್ ಜಂತೂನ್ನವಲೋಕಯನ್ ನಾನುಪದಿಶ್ಯ ಸ್ಥಾತುಮ್ ಅರ್ಹತಿ? ಇತಿ ಚೇನ್ನ । ಏವಮ್ಭೂತಾನಾಮಪಿ ಸಿದ್ಧಾನಾಮ್ ಉದಾಸೀನಾನಾಮಙ್ಗೀಕೃತತ್ವಾತ್ । ಉಪದಿಶತು ವಾಽಸೌ, 'ಸೋಽಯ-ಮುಪದೇಶ' ಇತಿ ತು ಕಲ್ಪ್ಯಮೇವ ।**

ಹಿಂದೆ ಹೇಳಿದಂತೆ ಸರ್ವಜ್ಞಪುರುಷನು ಸಿದ್ಧಿಸದಿರಲು, (ಸರ್ವಜ್ಞನನ್ನು ಒಪ್ಪಿದರೂ) ಆ ವ್ಯಕ್ತಿಯು ಮೋಸಗಾರನಲ್ಲ ಎಂದು ಪ್ರಮಾಣಪ್ರಮಿತ-ವಾಗದಿರುವುದನ್ನು ಕಲ್ಪಿಸಲೇಬೇಕು. ಆ ವ್ಯಕ್ತಿ ಸರ್ವಜ್ಞನಾದರೂ (ಆತನಲ್ಲಿ) ಮೋಸಗಾರಿಕೆ ಇಲ್ಲ ಎನ್ನುವುದು ಹೇಗೆ ಸಿದ್ಧವಾಗಲಿದೆ ? ಆತನಲ್ಲಿ ರಾಗಾದಿಗಳು ಇಲ್ಲ ಆದುದರಿಂದ ಎಂದು ಹೇಳಲಾಗದು. ರಾಗಾದಿಗಳು ಇಲ್ಲದ ಬುದ್ಧಾದಿ ದೇವತಾವತಾರಗಳಲ್ಲಿ (ಮೋಸಗಾರಿಕೆಯು) ಕಂಡಿರುವುದರಿಂದ. ರಾಗಾದಿರಹಿತರೂ ಸಹ ಜ್ಞಾನದ ಸೆಲೆಯನ್ನು ಸಂರಕ್ಷಿಸಲು ಛಲಾದಿಗಳಿಂದ (ವಾದದ ವಿಶೇಷ ಪ್ರಸಂಗದಲ್ಲಿ) ಪ್ರತಿವಾದಿಗಳನ್ನು ಮೋಸಗೊಳಿಸುವುದನ್ನು ಎಲ್ಲರೂ ಒಪ್ಪಿರುವುದರಿಂದಲೂ ಸಹ[1]. ಹಾಗೆಯೇ (ಆ ವ್ಯಕ್ತಿಗೆ) ಕರಣಪಾಟವಾದಿಗಳನ್ನು ಕಲ್ಪಿಸಬೇಕು. ಇದೂ ಪ್ರಮಾಣ ಪ್ರಮಿತವಾದುದಲ್ಲ. ಮತ್ತು ಸಹ ಓರ್ವ ಸರ್ವಜ್ಞನಿರಲಿ. ಆತನಲ್ಲಿ ಮೋಸಗಾರಿಕೆಯೂ ಇಲ್ಲದಿರಲಿ, ಹಾಗಾದರೂ 'ಧರ್ಮಾದಿಗಳನ್ನು ಪ್ರತಿಪಾದಿಸುವ ವಾಕ್ಯವಿಶೇಷಗಳು ಆತನಿಂದಲೇ ನಿರ್ಮಿತವಾದದ್ದು' ಎಂದು ಹೇಗೆ (ಯಾವ ಪ್ರಮಾಣದಿಂದ) ಸಿದ್ಧವಾಗುವುದು? ಸರಿ, ಈ ರೀತಿಯಾದ (ಮೋಸಗಾರನಲ್ಲದವ, ಸರ್ವಜ್ಞನಾದವನು), 'ತಮ್ಮ ಹಿತಗಳನ್ನು ಹೊಂದುವ ದುರಿತಗಳನ್ನು ದೂರೀಕರಿಸಿಕೊಳ್ಳುವ ಉಪಾಯದ ಅರಿವಿಲ್ಲದ, ನಾನಾವಿಧದ ವ್ಯಸನಸಾಗರದಲ್ಲಿ ಮುಳುಗಿದ ಜೀವರನ್ನು ಕಂಡು (ತಾರಣೋಪಾಯಗಳನ್ನೂ) ಉಪದೇಶಿಸದೆ ಸುಮ್ಮನಿರಲಾರನು' ಎಂದು ಹೇಳಲಾಗದು. ಈ ರೀತಿಯಿರುವ

1. ಛಲ, ವಿತಂಡ, ವಾದ ಎಂದು ವಿವಿಧವಾದ ಕಥಾಪ್ರಸಂಗದಲ್ಲಿ ವಿತಂಡ ಕಥೆಗಳಲ್ಲಿ ತತ್ತ್ವವನ್ನು ತಿಳಿಸದೇ, ಕೇವಲ ಪ್ರತಿವಾದಿಯನ್ನು ಗೆಲ್ಲುವುದೇ ಉದ್ದೇಶವಾಗಿರುತ್ತದೆ. ಆಗ ಪ್ರತಿವಾದಿಯು ತತ್ತ್ವವನ್ನೇ ಹೇಳಿದ್ದರೂ ಗೆಲ್ಲುವ ಉದ್ದೇಶದಿಂದ ಪ್ರತಿವಾದವನ್ನು ಖಂಡಿಸುವ ಪ್ರಸಂಗವಿರುತ್ತದೆ ಎಂದು ಭಾವ.

(ಸರ್ವಜ್ಞರಾದ, ಪಟುಕರಣರಾದ ರಾಗಾದಿರಹಿತರಾದ) ಸಿದ್ಧರೂ ಸಹ ಉದಾಸೀನರಾಗಿವುದನ್ನು ಒಪ್ಪಿರುವುದರಿಂದ. ಅಥವಾ ಆತನು ಉಪದೇಶಿಸಲಿ, ಆ ಉಪದೇಶವು ಇದೇ ಎಂದು ಕಲ್ಪಿಸಲೇ ಬೇಕು[1].

**ತದೇವಂ ಕಲ್ಪನಾಗೌರವಪ್ರಸಙ್ಗೇನ ನ ಪೌರುಷೇಯೇಣ ವಾಕ್ಯೇನ ಧರ್ಮಾದಿನಿಶ್ಚಯಃ ಶಕ್ಯಃ । ನ ಹಿ ಲೋಕೇ ವಿನಾ ಪ್ರಮಾಣೇನ ಕಸ್ಯಚಿತ್ ಪುರುಷಸ್ಯಾऽऽಪ್ತತ್ವಂ ಪ್ರಕಲ್ಪ್ಯ ತತ್ಪ್ರಣೀತತಾಂ ಚ ಕಸ್ಯಚಿದ್ವಾಕ್ಯಸ್ಯ ಕಲ್ಪಯಿತ್ವಾ ಪ್ರೇಕ್ಷಾವನ್ತಸ್ತದರ್ಥನಿಶ್ಚಯಂ ಕುರ್ವನ್ತಿ । ಕುರ್ವಾಣಾ ವಾ ಕಿಂ ಸ್ವಾತ್ಮನ್ಯೇವ ತತ್ಸರ್ವಂ ನ ಕಲ್ಪಯೇಯುಃ? । ತಸ್ಮಾತ್- ಪೌರುಷೇಯ-ವಾಕ್ಯೇನ ಧರ್ಮಾದ್ಯಸಿದ್ಧೇಃ ತತ್ಪ್ರತಿಪಾದಕಂ ಕಿಮಪ್ಯಪೌರುಷೇಯಂ ವಾಕ್ಯಮಙ್ಗೀಕೃತ್ಯ 'ಬುದ್ಧರ್ಷಭಾದಯಸ್ತದರ್ಥಸ್ಯಾನುವಾದಕಾಃ' ಇತಿ ತೈಸ್ತೈರ್ವಾದಿಭಿಃ ಧರ್ಮಾದಿನಿಶ್ಚಯಮಭಿಲಷದ್ಭಿರಭ್ಯುಪೇಯಮ್ । ಯಥಾऽऽಹುಃ - 'ಶೌದ್ಧೋದನಿಪ್ರಭೃತಯಃ ಸಂಪ್ರದಾಯಪ್ರವರ್ತಕಾಃ' ಇತಿ ।**

ಈ ವರೆಗಿನ ವಿಮರ್ಶೆಯಿಂದ ಕಲ್ಪನಾಗೌರವರೂಪ ದೋಷವಿರುವುದರಿಂದ ಪುರುಷನಿರ್ಮಿತ ವಾಕ್ಯದಿಂದ ಧರ್ಮಾದಿಗಳ ನಿಶ್ಚಯವು ಸಾಧ್ಯವಿಲ್ಲ. ಯಾವುದೋ ಓರ್ವನನ್ನು ಆಪ್ತನೆಂದು ಊಹಿಸಿ, ಯಾವುದೋ (ಧರ್ಮೋಪದೇಶಕವಾದ) ವಾಕ್ಯವನ್ನು ಆತನಿಂದ ಪ್ರಣೀತವಾದದ್ದು ಎಂದೂ ಸಹ ಕಲ್ಪಿಸುವುದನ್ನು, ಪ್ರಮಾಣವಿಲ್ಲದೆ ಯಾವುದೇ ವಿಚಾರವಾದಿಯು ಈ ವಿಷಯದ ನಿಶ್ಚಯವನ್ನು ಮಾಡುವುದಿಲ್ಲ. (ಪ್ರಮಾಣವಿಲ್ಲದೇ) ನಿಶ್ಚಯಿಸುವದಾದಲ್ಲಿ, ತನ್ನಲ್ಲೇ ಈ ಎಲ್ಲವನ್ನು ( ಸರ್ವಜ್ಞತ್ವಾದಿಗಳನ್ನು) ಕಲ್ಪಿಸಿಕೊಳ್ಳಲಿ. ತಸ್ಮಾತ್- ಪುರುಷನಿರ್ಮಿತ ವಾಕ್ಯದಿಂದ ಧರ್ಮಾದಿಗಳ ಸಿದ್ಧಿಯಾಗುವುದಿಲ್ಲವಾದುದರಿಂದ, ಧರ್ಮಾದಿಗಳ ನಿಶ್ಚಯವನ್ನು ಬಯಸುವ ಆ ಆ ವಾದಿಗಳಿಂದ ಅದನ್ನು (ಧರ್ಮವನ್ನು) ಪ್ರತಿಪಾದಿಸುವ ಯಾವುದಾದರೂ ಒಂದು ಪುರುಷ ನಿರ್ಮಿತವಲ್ಲದ ವಾಕ್ಯವನ್ನು ಒಪ್ಪಿ, 'ಬುದ್ಧ, ಋಷಭ

1. ಬುದ್ಧಾದಿಗಳ ಉಪದೇಶ ಇದು ಎನ್ನುವುದು ಕೇವಲ ನಂಬಿಕೆ ಹೊರತಾಗಿ ನಾವುಗಳಾರೂ ಅದನ್ನು ಸಾಕ್ಷಾತ್ತಾಗಿ ಕಂಡಿಲ್ಲ ಎಂದು ಭಾವ.

ಮುಂತಾದವರು ಆ ವಾಕ್ಯಗಳ ಅನುವಾದಕರು' ಎಂದು, ಒಪ್ಪಬೇಕು. ಹೀಗೆ ಹೇಳಲಾಗಿದೆ- 'ಶೌದ್ಧೋಧನಿಪ್ರಭೃತಯಃ ಸಂಪ್ರದಾಯಪ್ರವರ್ತಕಾಃ' ಎಂದು[1].

**ಅಪೌರುಷೇಯವಾಕ್ಯಗಳನ್ನು ಒಪ್ಪಿದಲ್ಲಿ ಕಲ್ಪನಾಗೌರವವಿಲ್ಲ**

**ಅಪೌರುಷೇಯವಾಕ್ಯಾಙ್ಗೀಕಾರೇ ನ ಕಿಞ್ಚಿತ್ ಕಲ್ಪ್ಯಮ್ ।**

ಅಪೌರುಷೇಯವಾಕ್ಯವನ್ನು ಒಪ್ಪಿದಲ್ಲಿ, ಯಾವುದೇ ಕಲ್ಪನೆಯ ಅಗತ್ಯವಿಲ್ಲ.

ನನು, 'ಪ್ರಸಿದ್ಧಾನಿ ಬೌದ್ಧಾದಿವಾಕ್ಯಾನಿ ಪರಿತ್ಯಜ್ಯ ಧರ್ಮಾದಿಪ್ರತಿಪಾದಕಂ ಕಿಂಚಿದಪೌರುಷೇಯಂ ವಾಕ್ಯಂ ಕಲ್ಪ್ಯಮ್' ಇತಿ ಸಾಮ್ಯಮೇವ? ಇತ್ಯತ ಆಹ- '**ಅಪೌರುಷೇಯ..**' ಇತಿ । ಪೌರುಷೇಯವಾಕ್ಯೇನ ಧರ್ಮಾದಿ-ನಿಶ್ಚಯಮಿಚ್ಛತಾ ಯಥಾ ಬಹುತರಂ ಸಾರ್ವಜ್ಞಾದಿಕಲ್ಪ್ಯಂ ತಥಾಽಪೌರು-ಷೇಯವಾಕ್ಯಾಙ್ಗೀಕಾರೇ ನ ಕಿಂಚಿತ್ ಬಹುತರಂ ಕಲ್ಪ್ಯಮ್ । ಕಿನ್ತ್ವಪೌರು-ಷೇಯವಾಕ್ಯಮೇಕಮೇವ । ತಥಾಚ ಧರ್ಮಾದಿನಿಶ್ಚಯಸ್ಯಾವಶ್ಯಮ-ಙ್ಗೀಕಾರ್ಯತ್ವೇ ಬಹುಕಲ್ಪನಾ ಪಕ್ಷಪರಿತ್ಯಾಗೇನಾಲ್ಪಕಲ್ಪನಾಪಕ್ಷಾಶ್ರಯಣ-ಮೇವ ಜ್ಯಾಯಃ । ಯಥಾಹುಃ - 'ಯತ್ರಾಲ್ಪೀಯಾಂಸೋ ದೋಷಾಃ ಸ ಪಕ್ಷಃ' ಇತಿ । ತಥಾಽಪಿ ದುಷ್ಟಸ್ಯ ಕಥಮಙ್ಗೀಕಾರಃ? ಇತಿ ಚೇತ್ ಕಿಂ ಕಾರ್ಯಂ ಗತ್ಯನ್ತರಾಭಾವಾತ್ । ಅಯಂ ಚ ಪರೇಷಾಮೇವ, ಯಥಾ ನಾಸ್ಮಾಕಂ ದೋಷಃ ತಥಾಽನುಪದಮೇವ ವಕ್ಷ್ಯತೇ । ಏವಂ ಸರ್ವಸಮಯಿಭಿರಪೌರುಷೇಯವಾಕ್ಯಸ್ಯಾವಶ್ಯಮಙ್ಗೀಕಾರ್ಯತ್ವಾತ್ '**ವೇದೋಽಪೌರುಷೇಯಃ**' ಇತಿ ವಾಕ್ಯಂ 'ನಾಸಂಭಾವಿತಾರ್ಥಮ್' ಇತಿ ಸಿದ್ಧಮ್ ।

ಸರಿ, (ಧರ್ಮಾದಿಗಳನ್ನು ಪ್ರತಿಪಾದಿಸುವ) ಪ್ರಸಿದ್ಧವಾದ ಬೌದ್ಧಾದಿಗಳ ವಚನಗಳನ್ನು ಪರಿತ್ಯಜಿಸಿ, ಧರ್ಮಾದಿಗಳನ್ನು ಪ್ರತಿಪಾದಿಸುವ ಯಾವುದೋ

1. ಬುದ್ಧಾದಿಗಳು ಹಿಂದಿನ ಸಂಪ್ರದಾಯದ ಪ್ರವರ್ತಕರು. ಹೊಸ ಸಂಪ್ರದಾಯವನ್ನು ಹುಟ್ಟು ಹಾಕಿದವರಲ್ಲ ಎಂದು ಭಾವ.

ಅಪೌರುಷೇಯ ವಾಕ್ಯವನ್ನು ಕಲ್ಪಿಸಬೇಕು, ಆದುದರಿಂದ ಸಮಾನವೇ ಆಯಿತು, ಆದುದರಿಂದ ಉತ್ತರಿಸುತ್ತಾರೆ '**ಅಪೌರುಷೇಯ...**' ಎಂದು[1]. ಪುರುಷನಿರ್ಮಿತ ವಾಕ್ಯದಿಂದ ಧರ್ಮಾದಿಗಳ ನಿಶ್ಚಯವನ್ನು ಬಯಸುವವನು ಸಾರ್ವಜ್ಞಾದಿ ಅನೇಕ (ಧರ್ಮಗಳನ್ನು) ಕಲ್ಪಿಸಬೇಕೋ ಆ ರೀತಿಯಲ್ಲಿ ಅಪೌರುಷೇಯ ವಾಕ್ಯವನ್ನು ಒಪ್ಪಿದಲ್ಲಿ ಯಾವುದೇ ಅನೇಕ ಕಲ್ಪನೆಗಳಲ್ಲಿ. ಆದರೆ ಅಪೌರುಷೇಯ ವಾಕ್ಯವನ್ನು ಮಾತ್ರ ಕಲ್ಪಿಸಬೇಕು. ಒಟ್ಟಿನಲ್ಲಿ ಧರ್ಮಾದಿಗಳ ನಿಶ್ಚಯವು ಅವಶ್ಯ ಎಂದು ಒಪ್ಪಿದಲ್ಲಿ, ಅನೇಕ ಕಲ್ಪನೆಯ ಪಕ್ಷವನ್ನು ಬಿಟ್ಟು, ಅಲ್ಪ ಕಲ್ಪನೆಯ ಪಕ್ಷವನ್ನು ಆಶ್ರಯಿಸುವುದೇ ಶ್ರೇಷ್ಠ. ಹೀಗೆ (ಪ್ರಾಜ್ಞರು) ಹೇಳಿರುವರು- 'ಯತ್ರಾಲ್ಪೀಯಾಂಸೋ ದೋಷಾಃ ಸ ಪಕ್ಷಃ' (ಎಲ್ಲಿ ದೋಷಗಳು ಕಡಿಮೆಯೋ ಅದು ಪಕ್ಷ') ಎಂದು. ಆದರೂ ತಪ್ಪಾದದ್ದನ್ನು ಹೇಗೆ ಒಪ್ಪಲಾಗುವುದು ? ಉಪಾಯಾಂತರವಿಲ್ಲದ ಪ್ರಯುಕ್ತ . ಇದಾದರೋ (ಕಲ್ಪಿಸಬೇಕು ಎನ್ನುವ ದೋಷವು) ಪರವಾದಿಗಳಿಗೆ ಮಾತ್ರ. ನಮಗೆ ಹೇಗೆ ದೋಷವಾಗುವುದಿಲ್ಲ ಎಂಬುವದನ್ನು ಶೀಘ್ರದಲ್ಲಿಯೇ (ಮುಂದಿನ ವಾಕ್ಯದಲ್ಲಿ) ಪ್ರತಿಪಾದಿಸಲಾಗುವುದು. ಹೀಗೆ ಎಲ್ಲ ವಾದಿಗಳು ಅಪೌರುಷೇಯ ವಾಕ್ಯವನ್ನು ಒಪ್ಪಬೇಕಾದುದರಿಂದ '**ವೇದೋಽಪೌರುಷೇಯಃ**' ಎಂಬ ವಾಕ್ಯವು 'ಅಸಂಭಾವಿತವಾದ ವಿಷಯವನ್ನು ಹೇಳುವದಿಲ್ಲ' ಎಂದು ಸಿದ್ಧವಾಯಿತು.

**ಅಪ್ರಸಿದ್ಧವಾದುದ್ದನ್ನು ಕಲ್ಪಿಸುವುದು ತರವಲ್ಲ**

**ಮೂಲ -ಅಪೌರುಷೇಯತ್ವಂ ಚ ಸ್ವತ ಏವ ಸಿದ್ಧಮ್, ವೇದಕರ್ತುರಪ್ರಸಿದ್ಧೇಃ । ಅಪ್ರಸಿದ್ಧೌ ಚ ಕರ್ತುಸ್ತತ್ಕಲ್ಪನೇ ಕಲ್ಪನಾ-ಗೌರವಮ್ । ಅಕಲ್ಪನೇ ಚಾಕರ್ತೃಕತ್ವಂ ಸಿದ್ಧಮೇವ ।**

ವೇದದ ಕರ್ತೃವು ಅಪ್ರಸಿದ್ಧನಾದುದರಿಂದ (ವೇದಗಳಿಗೆ)

---

1. ಲೋಕದಲ್ಲಿ ಬೇರೆಡೆ ಕಾಣದ ಸರ್ವಜ್ಞತ್ವವನ್ನು ಓರ್ವ ವ್ಯಕ್ತಿಯಲ್ಲಿ ಕಲ್ಪಿಸಬೇಕು ಮತ್ತು ರಾಗಾದಿ ದೋಷಗಳಿಲ್ಲದವನೆಂದು, ಆತನಿಂದ ನಿರ್ಮಿತವಾದ ವಾಕ್ಯಗಳು ಇವು ಇತ್ಯಾದಿಗಳನ್ನು ಬೌದ್ಧಾದಿವಾದಿಗಳು ಕಲ್ಪಿಸಬೇಕು. ಹಾಗೆಯೇ ವೇದಾಪೌರುಷೇಯ ಎನ್ನುವ ವಾದಿಗಳೂ ಸಹ ಅಪೌರುಷೇಯವಾಕ್ಯಗಳನ್ನು ಕಲ್ಪಿಸಬೇಕು. ಕಲ್ಪನೆ ಎಂಬ ದೋಷವು ಈರ್ವರಿಗೂ ಸಮಾನ ಎಂದು ಭಾವ.

ಅಪೌರುಷೇಯತ್ವವು ಸ್ವತಃ ಸಿದ್ಧವೇ ಆಗುವುದು. ಅಪ್ರಸಿದ್ಧವಾದರೂ ಕರ್ತೃವನ್ನು ಕಲ್ಪಿಸಿದಲ್ಲಿ ಕಲ್ಪನಾಗೌರವವು (ಪ್ರಾಪ್ತವಾಗುವುದು). ಕಲ್ಪಿಸದೇ ಹೋದಲ್ಲಿ ಅಕರ್ತೃಕತ್ವವು ಸಿದ್ಧವೇ ಆಗುವುದು.

**ಅಸ್ತು ವೇದಸ್ಯಾಪೌರುಷೇಯತ್ವಂ ಸಂಭಾವಿತಂ, ತನ್ನಿಶ್ಚಯಸ್ತು ನಾಸ್ತಿ । ನ ಚಾನಿಶ್ಚಿತೋ ಹೇತುರ್ಭವತಿ? ಇತ್ಯತ ಆಹ 'ಅಪೌರುಷೇಯತ್ವಂ ಚ' ಇತಿ ' ವೇದಸ್ಯ' ಇತಿ ಶೇಷಃ । ವೇದಸ್ಯಾಪೌರುಷೇಯತ್ವಮಸಂಭಾವನಯಾ ನಿರುದ್ಧಂ ದುಃಸಾಧನಮಭೂತ್ । ಇದಾನೀಮಸಂಭಾವನಾಯಾಂ ನಿರಸ್ತಾಯಾಂ ಸ್ವತ ಏವ - ಅನಾಯಾಸೇನೈವ, ಸಿದ್ಧಂ- ನಿಶ್ಚಿತಮ್ । ಕುತಃ? ಇತ್ಯತ ಆಹ 'ವೇದ...' ಇತಿ ।**

**'ಕರ್ತರಿ ಚ' ಇತಿ ಪ್ರತಿಷಿದ್ಧಸ್ಯ 'ಯಾಜಕಾದಿಭ್ಯಶ್ಚ' ಇತಿ ಪ್ರತಿಪ್ರಸವಾತ್ ತೃಜನ್ತೇನ ಷಷ್ಠ್ಯಾಃ ಸಮಾಸೋಪಪತ್ತಿಃ । ದ್ವಿತೀಯಾನ್ತಸ್ಯ ತೃನ್ನನ್ತೇನ ವಾಽಯಂ ಸಮಾಸಃ ।**

**'ಶ್ರಿತಾದಿಷು ಗಮಿಗಮ್ಯಾದೀನಾಮುಪಸಂಖ್ಯಾನಾತ್' । 'ವೇದೋಽ-ಪೌರುಷೇಯಃ, ಅಪ್ರಮಿತ ಕರ್ತೃಕತ್ವಾತ್ ಗಗನವದ್' ಇತ್ಯರ್ಥಃ ।**

ವೇದಗಳು ಅಪೌರುಷೇಯ ಎನ್ನುವುದು ಸಂಭಾವಿತವಾಗಲಿ, ಆದರೆ ನಿಶ್ಚಯವಿಲ್ಲ. ಅನಿಶ್ಚಿತವಾದದ್ದು ಹೇತುವಾಗಲಾರದು?[1] ಆದುದರಿಂದ ಉತ್ತರಿಸುತ್ತಾರೆ '**ಅಪೌರುಷೇಯತ್ವಂ**' ಎಂದು 'ವೇದಸ್ಯ' ಎಂದು ಶೇಷಪೂರಣಮಾಡಿಕೊಳ್ಳಬೇಕು. 'ವೇದಕ್ಕೆ ಅಪೌರುಷೇಯತ್ವವು ಅಸಂಭಾವಿತ' ಎಂದು ಪ್ರಶ್ನಿಸಿದ್ದರಿಂದ (ದೋಷಸಂದೇಹವು ಪ್ರಾಪ್ತವಾಗಿ) ಪ್ರತಿರುದ್ಧವಾಗಿ (ವೇದಕ್ಕೆ) ಸಾಧನತ್ವವು ಇಲ್ಲದಂತಾಗಿತ್ತು. ಈಗ ಅಸಂಭಾವನಾ ಶಂಕೆಯು

---

1. ವೇದವಾಕ್ಯಗಳಿಗೆ ಪುನರುಕ್ತಿ, ಅಸದುಕ್ತಿ ಮೊದಲಾದ ದೋಷಗಳನ್ನು ಹೇಳುವುದು ಸಲ್ಲ, ವೇದವಾಕ್ಯಗಳು ಅಪೌರುಷೇಯವಾದುದರಿಂದ ಎಂದು ಹೇಳಲಾಗಿತ್ತು. ಪ್ರಕೃತ 'ಅಪೌರುಷೇಯ ವಾಕ್ಯಗಳಿರಬಹುದು' ಎಂದು ಸಂಭಾವನೆ ಮಾತ್ರ, ನಿಶ್ಚಿತವಾಗಿಲ್ಲ. ಆದುದರಿಂದ ಅನಿಶ್ಚಿತವಾದ 'ಅಪೌರುಷೇಯತ್ವಾತ್' ಎಂಬ ಹೇತುವಿನಿಂದ ವೇದಪ್ರಾಮಾಣ್ಯಾದಿಗಳು ನಿಶ್ಚಯವಾಗಲಾರದು ಎಂದು ಭಾವ.

ನಿರಾಕೃತವಾಗಲು ಸ್ವತ ಏವ- ಅನಾಯಾಸವಾಗಿಯೇ, ಸಿದ್ಧಂ-ನಿಶ್ಚಿತವಾಯಿತು. ಹೇಗೆ ಎಂದರೆ ಉತ್ತರಿಸುತ್ತಾರೆ 'ವೇದ...' ಎಂದು.

'ಕರ್ತರಿ ಚ' ಎಂಬ ಸೂತ್ರದಿಂದ ಪ್ರತಿಷಿದ್ಧವಾದ ಷಷ್ಠೀ ವಿಭಕ್ತಿಯು 'ಯಾಜಕಾದಿಭ್ಯಶ್ಚ' ಎಂಬ ಸೂತ್ರದಿಂದ ಪುನಃ ವಿಹಿತವಾದುದರಿಂದ (ವೇದಸ್ಯ ಕರ್ತುಃ ಎಂದು) ಷಷ್ಠೀ ವಿಭಕ್ತಿಯಿಂದ ಸಮಾಸವು ಯುಕ್ತವಾಗಬಹುದು. ಅಥವಾ ತೃನ್ನಂತವಾದುದರಿಂದ (ವೇದಂ ಕರ್ತುಃ ಎಂದು) ದ್ವಿತೀಯಾವಿಭಕ್ತ್ಯಂತವಾಗಿಯಾದರೂ ಸಮಾಸವನ್ನು ಮಾಡಬಹುದು. 'ಶ್ರಿತಾದಿಷು ಗಮಿಗವ್ಯಾದೀನಾಮುಪಸಂಖ್ಯಾನಾತ್' ಎನ್ನುವಲ್ಲಿ (ವಾರ್ತಿಕದಲ್ಲಿ) ತಿಳಿಸಿರುವುದರಿಂದ. (ದ್ವಿತೀಯಾವಿಭಕ್ತಿಯಿಂದ ಸಮಾಸವನ್ನು ಮಾಡಬಹುದು)[1]. 'ವೇದವು ಪುರುಷನಿರ್ಮಿತವಲ್ಲ, ಕರ್ತೃವು ಪ್ರಮಿತನಾಗದಿರುವುದರಿಂದ ಗಗನದಂತೆ' ಎಂದು ಅಭಿಪ್ರಾಯ.

---

1. 'ವೇದಕರ್ತುಃ' ಎಂದು ಆಚಾರ್ಯರು ಪ್ರಯೋಗಿಸಿದ್ದಾರೆ. 'ವೇದಂ ಕರ್ತುಃ' ಅಥವಾ 'ವೇದಸ್ಯ ಕರ್ತುಃ ಎಂದು ಎರಡು ವಿಧದಲ್ಲಿಯೂ ಸಮಾಸಮಾಡಬಹುದಾಗಿದೆ. 'ಕರ್ಮಣಿ ದ್ವಿತೀಯಾ'(2.3.2.) ಕ್ರಿಯಾಪದದಿಂದ ಕರ್ಮವು ಅನುಕ್ತವಾದಲ್ಲಿ ಕರ್ಮವಾಚಕಪದಕ್ಕೆ ದ್ವಿತೀಯಾ ವಿಭಕ್ತಿಯು ಪ್ರಾಪ್ತವಾಗುವುದು. 'ಹರಿಂ ಭಜತಿ' ಎನ್ನುವುದು ಉದಾಹರಣೆ, ಉಕ್ತವಾಗದಿದ್ದಲ್ಲಿ 'ಹರಿಃ ಸೇವ್ಯತೇ' ಎನ್ನುವದು ಉದಾಹರಣೆ. ಪ್ರಕೃತ ಈ ಸೂತ್ರವನ್ನು ಅನುಸರಿಸಿ ದ್ವಿತೀಯಾ ತತ್ಪುರುಷ ಸಮಾಸವನ್ನು ವಿವಕ್ಷಿಸಿ 'ವೇದಂ ಕರ್ತಾ- ವೇದಕರ್ತಾ' ಎಂದು ಪ್ರಯೋಗಿಸಲಾಗಿದೆ. 'ತೃಚ್' ಅಥವಾ 'ತೃನ್' ಈ ಎರಡರಲ್ಲಿ ಯಾವ ಪ್ರತ್ಯಯಾಂತವಾದರೂ 'ಕರ್ತಾ' ಎಂಬ ರೂಪವು ಸಿದ್ಧವಾಗಬಹುದು. ತೃಚ್ ಪ್ರತ್ಯಯಾಂತ ಎಂದು ವಿವಕ್ಷಿಸಿದಲ್ಲಿ, 'ಕರ್ತೃಕರ್ಮಣೋಃ ಕೃತಿ' (2.3.65.) ಎನ್ನುವ ಸೂತ್ರದ ರೀತ್ಯಾ ಕೃತ್ ಪ್ರತ್ಯಯದ ಯೋಗವಿದ್ದಲ್ಲಿ ಕರ್ತೃವಾಚಕ, ಕರ್ಮವಾಚಕ ಶಬ್ದಗಳಿಗೆ ಷಷ್ಠೀವಿಭಕ್ತಿಯನ್ನು ವಿಧಿಸಲಾಗಿದೆ. ಉದಾ. 'ಕೃಷ್ಣಸ್ಯ ಕೃತಿಃ' 'ಜಗತಃ ಕರ್ತಾ', ಇದರಂತೆ ಪ್ರಕೃತದಲ್ಲೂ 'ವೇದಸ್ಯ ಕರ್ತಾ' ಎಂದಾಗುವುದು. 'ನ ಲೋಕಾವ್ಯಯನಿಷ್ಠಾಖಲರ್ಥತೃನಾಂ' (2.3.69.) ಎನ್ನುವ ಷಷ್ಠೀ ನಿಷೇಧಕ ಸೂತ್ರಕ್ಕೆ ಪ್ರಕೃತದಲ್ಲಿ ಅವಕಾಶವಿಲ್ಲ. ಕರ್ತಾ ಎನ್ನುವ ಶಬ್ದವನ್ನು 'ತೃಚ್' ಪ್ರತ್ಯಯಾಂತ ಎಂದು ಪ್ರಕೃತದಲ್ಲಿ ವಿವಕ್ಷಿಸಲಾಗಿದೆ, ಸೂತ್ರದಲ್ಲಾದರೋ ತೃನ್ ಪ್ರತ್ಯಯಾಂತವಾದುದಕ್ಕೆ ಷಷ್ಠಿಯನ್ನು ನಿಷೇಧಿಸಲಾಗಿದೆ. ಆದುದರಿಂದ 'ಷಷ್ಠೀ' (2.2.8.) ಎನ್ನುವ ಸೂತ್ರದಲ್ಲಿ ಸೂಚಿಸಿದಂತೆ ಯೋಗ್ಯವಾದ ಸುಬಂತದೊಡನೆ ಷಷ್ಠೀ ಸಮಾಸವು ಸಂಪನ್ನವಾಗುವದರಿಂದ 'ವೇದಕರ್ತಾ' ಎನ್ನುವುದು ಸಾಧು. ಆದರೆ 'ಕರ್ತರಿ

**ಪುಟ 110ರಲ್ಲಿ........**

ನನು, ಯಥಾ ಗಿರಿದರೀವರ್ತಿನಃ ತೃಣಾಙ್ಕುರಸ್ಯಾಸ್ಮಾಭಿಃ ಕೇನಾಪಿ ಪ್ರಮಾಣೇನಾಪ್ರಮಿತಸ್ಯಾಪಿ ಕರ್ತುಃ ಸದ್ಭಾವಃ, ತಥಾ ವೇದಸ್ಯ ಕರ್ತುರಸ್ಮಾಭಿರಪ್ರಮಿತಸ್ಯಾಪಿ ಸದ್ಭಾವಃ ಶಙ್ಕ್ಯತೇ? ಇತ್ಯತ ಆಹ **'ಅಪ್ರಸಿದ್ಧೇಶ್ಚ' ಇತಿ** । ಕಲ್ಪನೇ- ಶಙ್ಕಾಯಾಂ, ಅಪ್ರಮಿತಮಪಿ ವೇದಸ್ಯ ಕರ್ತಾರಂ ಶಙ್ಕಮಾನಃ ಕಿಂ ಧರ್ಮಾದಿಕಮಙ್ಗೀಕರೋತಿ ನ ವಾ? ನೇತಿ ಪಕ್ಷೇಽಸಮಯೀ ಸ್ಯಾತ್ । ಆದ್ಯೇ, ಬುದ್ಧಾದಿಪುರುಷವಾಕ್ಯೇನ ವಾ ತನ್ನಿಶ್ಚಿನುಯಾದ್, ವೇದೇನ ವಾ, ವಾಕ್ಯಾನ್ತರಮಪೌರುಷೇಯಂ ಕಲ್ಪಯಿತ್ವಾ ತೇನ ವಾ ; ಗತ್ಯನ್ತರಾಭಾವಾತ್ । ಅನುಮಾನಾದೀನಾಂ ನಿರಾಕರಿಷ್ಯಮಾಣತ್ವಾತ್ ।

---

...... ಪುಟ 109 ರಿಂದ

ಚ' (2.2.16) ಎಂಬ ಸೂತ್ರವು ಕರ್ತ್ರರ್ಥಕವಾದ 'ತೃಚ್' 'ಅಕ್' ಪ್ರತ್ಯಯಾಂತವಾದ ಶಬ್ದಗಳೊಡನೆ ಷಷ್ಠೀ ಸಮಾಸವಿಲ್ಲ ಎಂದು ತಿಳಿಸಿದೆ. ಉದಾ.'ಸತಾಂ ಪೂಜಕಃ, ಅಪಾಂ ಸ್ರಷ್ಟಾ' ಇತ್ಯಾದಿಗಳು. ಪ್ರಕೃತದಲ್ಲಿ ತೃಜಂತವಾದ ಕರ್ತೃ ಶಬ್ದದೊಡನೆ ಸಮಾಸವು ಸಲ್ಲದು, 'ವೇದಸ್ಯ ಕರ್ತಾ' ಎಂದು ಪ್ರಯೋಗಿಸಬೇಕಿತ್ತು . ಆದರೆ 'ಯಾಜಕಾದಿಭಿಶ್ಚ' (2.2.9)ಎಂಬ ಸೂತ್ರದಲ್ಲಿ ಕರ್ತ್ರರ್ಥಕವಾದ 'ತೃಚ್' ಮತ್ತು 'ಅಕ್' ಪ್ರತ್ಯಯಾಂತ ಶಬ್ದಗಳಿಗೆ ಷಷ್ಠೀ ಸಮಾಸವನ್ನು ಪುನಃ ವಿಧಾನ ಮಾಡಿದ್ದಾರೆ. ದ್ವಿಜಯಾಜಕಃ, ದೇವಪೂಜಕಃ ಇತ್ಯಾದಿ ಉದಾಹರಣೆಗಳನ್ನು ಕಾಣಬಹುದಾಗಿದೆ. ತನ್ನಿಮಿತ್ತವಾಗಿ 'ವೇದಕರ್ತುಃ' ಎಂದು ಪ್ರಯೋಗಿಸಿರುವುದು ಸುಸಂಪನ್ನವಾಗಿದೆ.

ಇನ್ನು 'ತೃನ್' ಪ್ರತ್ಯಯಾಂತ ಕರ್ತೃ ಶಬ್ದವೆಂದು ಅಭಿಮತಿಸಿದಲ್ಲಿ- ದ್ವಿತೀಯಾ ತತ್ಪುರುಷ ಸಮಾಸವನ್ನು ಆಶ್ರಯಿಸಿ ವೇದಕರ್ತುಃ ಎಂದು ರೂಪವನ್ನು ಸಂಯೋಜಿಸಬಹುದು. 'ದ್ವಿತೀಯಾ ಶ್ರಿತಾತೀತಪತಿತಗತ್ಯಸ್ತಪ್ರಾಪ್ತಾಪನ್ನೈಃ' (2.1.24.) ಎಂಬ ಸೂತ್ರದನಿಯಮದಂತೆ ದ್ವಿತೀಯಾತತ್ಪುರುಷವು ಸಮಂಜಸವಾಗುವುದು. 'ಕೃಷ್ಣಂ ಶ್ರಿತಃ, ದುಃಖಂ ಅತೀತಃ' ಇತ್ಯಾದಿಗಳನ್ನು ದೃಷ್ಟಾಂತವನ್ನಾಗಿ ತಿಳಿಸಲಾಗಿದೆ. ವಸ್ತುತಃ ಈ ಸೂತ್ರದಲ್ಲಿ 'ಶ್ರಿತಾದಿ' ಶಬ್ದದೊಡನೆ ದ್ವಿತೀಯಾ ತತ್ಪುರುಷ ಎಂದು ತಿಳಿಸಿರುವರೇ ಹೊರತು, 'ಕರ್ತೃ' ಶಬ್ದವನ್ನು ಈ ಸೂತ್ರದಲ್ಲಿ ಪರಿಗ್ರಹಿಸಲಾಗಿಲ್ಲ, ಆದುದರಿಂದ ಈ ಪ್ರಯೋಗವು ಹೇಗೆ ಸಾಧು? ಎನ್ನುವ ಸಂದೇಹಕ್ಕೆ ಅವಕಾಶವಿದೆ. ಆ ಸೂತ್ರಕ್ಕೆ ಸಂಬಂಧಿಸಿದ 'ಗಮಿಗಮ್ಯಾದೀನಾಮುಪ-ಸಂಖ್ಯಾನಮ್' ಎಂಬುವ ವಾರ್ತಿಕದಲ್ಲಿ ಆದಿ ಶಬ್ದದಿಂದ ಕರ್ತೃಶಬ್ದವನ್ನೂ ಪರಿಗ್ರಹಿಸಲಾಗಿದೆ. ಆದುದರಿಂದ ದ್ವಿತೀಯಾ ತತ್ಪುರುಷವನ್ನು ಆಶ್ರಯಿಸಿ 'ವೇದಕರ್ತುಃ' ಎನ್ನುವುದು ಸಮಂಜಸವಾಗಿದೆ ಎಂದು ಭಾವ.

ಸರಿ, ಬೆಟ್ಟದ ಗುಹೆಯೊಳಗೆ ಇರುವ ಹುಲ್ಲಿನ ಮೊಳಕೆಗೆ ಕರ್ತೃವು ಯಾವುದೇ ಪ್ರಮಾಣದಿಂದಲೂ ನಮಗೆ ಸಿದ್ಧವಾಗಿರದಿದ್ದರೂ ಕರ್ತೃವಿದ್ದಾನೆ ಎಂದು (ಅನುಮಾನದಿಂದ) ಹೇಗೆ ಒಪ್ಪಲಾಗಿದೆಯೋ, ಹಾಗೆಯೇ ನಮಗೆ ವೇದದಕರ್ತೃವಿನ ಅರಿವಿಲ್ಲದಿದ್ದರೂ ಕರ್ತೃವು ಇರಬಹುದು? ಎಂದು ಶಂಕಿಸುವೆವು, ಆದುದರಿಂದ ಉತ್ತರಿಸುತ್ತಾರೆ 'ಅಪ್ರಸಿದ್ಧೌ ಚ' ಎಂದು[1]. ಕಲ್ಪನೆ-ಶಂಕಿಸಿದಲ್ಲಿ[2]. ವೇದದ ಕರ್ತೃವು ಅಪ್ರಮಿತನಾಗದಿದ್ದರೂ, ಕರ್ತೃವನ್ನು ಶಂಕಿಸುವವನು ಧರ್ಮವನ್ನು ಒಪ್ಪಿರುವನೋ ಇಲ್ಲವೋ? ಇಲ್ಲ ಎಂಬ ಪಕ್ಷದಲ್ಲಿ (ಧರ್ಮಾದಿಗಳನ್ನು ಒಪ್ಪಿಲ್ಲ ಎಂಬ ಪಕ್ಷದಲ್ಲಿ) ಆತ ಶಾಸ್ತ್ರಿಯೇ ಅಲ್ಲ ಎಂದಾದೀತು.ಮೊದಲ ಪಕ್ಷದಲ್ಲಿ (ಧರ್ಮಾದಿಗಳನ್ನು ಒಪ್ಪಿದ ಪಕ್ಷದಲ್ಲಿ) ಬುದ್ಧಾದಿ ಪುರುಷ ವಾಕ್ಯಗಳಿಂದ ಧರ್ಮಾದಿಗಳನ್ನು ನಿಶ್ಚಯಿಸಲಾಗುವುದೋ? ವೇದದಿಂದಲೋ (ನಿಶ್ಚಯಿಸಲಾಗುವುದೊ)[3]? ಅಥವಾ ಬೇರೇ ವಾಕ್ಯಗಳನ್ನು

---

1. ನಾವು ಕಂಡಿಲ್ಲ ಕೇಳಿಲ್ಲ ಎಂದು ಬೆಟ್ಟದ ಗುಹೆಯೊಳಗಿನ ಮೊಳಕೆಯನ್ನು 'ಸ್ವಯಂಭೂ' ಎನ್ನಲಾಗುವುದೇ ? ಇಲ್ಲ, ನಾವು ಊರಲ್ಲಿ ಕಂಡ ಮೊಳಕೆಯು ಹೇಗೆ ಕರ್ತೃವನ್ನು ಹೊಂದಿದೆಯೋ ಅದರಂತೆ ಈ ಮೊಳಕೆಯೂ ಕತೃವನ್ನು ಹೊಂದಿದೆ ಎಂದು ಊಹಿಸುತ್ತೇವೆ. ಅದರಂತೆ ವೇದದ ಕತೃವು ನಮಗೆ ತಿಳಿದಿಲ್ಲವೆಂದು ವೇದವನ್ನು ಅಪೌರುಷೇಯ ಎನ್ನಲು ಶಕ್ಯವಿಲ್ಲ.ನಮಗೆ ಪ್ರಸಿದ್ಧಿ ಇರುವ ವಾಕ್ಯಗಳು ಹೇಗೆ ವ್ಯಕ್ತಿವಿಶೇಷರಿಂದ ನಿರ್ಮಿತಗಳಾಗಿವೆಯೋ ಅದರಂತೆ ವೇದವೂ ಸಹ ಯಾವುದೋ ವ್ಯಕ್ತಿಯಿಂದ ನಿರ್ಮಿತಿಯನ್ನು ಹೊಂದಿದೆ ಎಂದು ಶಂಕಿಸಲಾಗುವುದು ಎಂದು ಭಾವ.

2. 'ವೇದಃ ಅಪೌರುಷೇಯಃ, ಅಪ್ರಸಿದ್ಧಕರ್ತೃಕತ್ವಾತ್' ಎಂದು ಸಿದ್ಧಾಂತಿಗಳು ವೇದಾಪೌರುಷೇಯತ್ವವನ್ನು ಸಾಧಿಸುವ ಅನುಮಾನವನ್ನು ಪ್ರಯೋಗಿಸಿದಾಗ ಪ್ರತಿವಾದಿಯು ಆಕ್ಷೇಪಿಸುವನು - 'ವೇದವು ಅಪ್ರಸಿದ್ಧ ಕರ್ತೃಕವಾದರೂ ಪುರುಷನಿರ್ಮಿತವಾಗಲಿ, ಗುಹೆಯೊಳಗಿನ ಮೊಳಕೆಯಂತೆ' ಎಂದು. ಅಂದರೆ ಹೇತುವಿದ್ದರೂ ಸಾಧ್ಯವಾದ ಅಪೌರುಷೇಯತ್ವದ ಅಭಾವವನ್ನು , ಅಂದರೆ ಅಪ್ರಯೋಜಕತ್ವಶಂಕಾವನ್ನು ಮಾಡಿರುವನು. ಆದರೆ ಮೂಲದಲ್ಲಿ '...ತತ್‌ಕಲ್ಪನೇ....' ಎಂದಿದೆ. ಇದು ಸಾಧ್ಯಾಭಾವದ ಕಲ್ಪನೆಯಲ್ಲ 'ಸಾಧ್ಯಾಭಾವಶಂಕಾ' ಎಂದು ತಿಳಿಸಲು 'ಕಲ್ಪನ' ಶಬ್ದಕ್ಕೆ 'ಶಂಕಾ' ಎಂಬ ಅರ್ಥವನ್ನು ತಿಳಿಸಿರುವರು.

3. ವೇದದಿಂದ ಸರ್ವಜ್ಞನನ್ನು ನಿಶ್ಚಯಿಸಬಹುದಲ್ಲವೇ ಎನ್ನುವ ವಾದಿಯು ವೇದವು ಈಶ್ವರ ನಿರ್ಮಿತ ಎಂದು ಒಪ್ಪಿರುವನು, ಇಂತಹ ನಿರ್ಮಿತವಾದ ವೇದದಿಂದಲೋ ಎಂದು ಭಾವ.

'ಅಪೌರುಷೇಯ' ಎಂದು ಕಲ್ಪಿಸಿ, ಅದರಿಂದ ನಿಶ್ಚಯಿಸಲಾಗುವುದೋ ? (ಈ ಮೂರು ಮಾರ್ಗಗಳ ಹೊರತಾಗಿ) ಬೇರೇ ಮಾರ್ಗವಿಲ್ಲದಿರುವುದರಿಂದ. ಅನುಮಾನ ಮುಂತಾದವುಗಳನ್ನು ಮುಂದೆ ಖಂಡಿಸಲಾಗುವುದರಿಂದ[1].

ಪ್ರಥಮೇ ದ್ವಿತೀಯೇ ಚ 'ಬುದ್ಧಾದೀನಾಂ ವೇದಕರ್ತುರ್ವಾ ಸರ್ವಜ್ಞತ್ವಾದಿಕಂ ಪ್ರಮಾಣೇನ ವಿನಾ ಕಲ್ಪನೀಯಮ್' ಇತಿ ಕಲ್ಪನಾಗೌರವಂ ಸ್ಯಾತ್ । ತೃತೀಯೇ ತು 'ತದ್ವಾಕ್ಯಂ ತಸ್ಯಾಪೌರುಷೇಯತ್ವಂ ಚ ಕಲ್ಪ್ಯಮ್' ಇತಿ ಕಲ್ಪನಾಗೌರವಮೇವ । ನ ಚ ಪ್ರಯೋಜನಾನುರೋಧೇನ ಪ್ರಮಾಣಕಲ್ಪನಾ ಯುಕ್ತಾ । ಕಿಂ ನಾಮ ನಿಶ್ಚಿತೇನ ಪ್ರಮಾಣೇನಾನ್ಯದಭ್ಯುಪಗಮ್ಯತೇ । ಅತಃ ಕಲ್ಪನಾಗೌರವಪ್ರಸಙ್ಗಾತ್ ನಾಪ್ರಮಿತೋ ವೇದಸ್ಯ ಕರ್ತಾ ಶಙ್ಕನೀಯಃ । ತತಃ ಕಿಮ್? ಇತ್ಯತ ಆಹ 'ಅಕಲ್ಪನೇ ಚ' ಇತಿ । ಏವಂ ವೇದಕರ್ತುರಪ್ರಮಿತತ್ವೇ, ಕಲ್ಪನಾಗೌರವಪ್ರಸಙ್ಗಭಯೇನ, ಅಕಲ್ಪನೇ ಶಙ್ಕಾಯಾ ಅಪ್ಯಭಾವೇ ವೇದಸ್ಯಾಕರ್ತೃತ್ವಂ ಸಿದ್ಧಮೇವ । ಯಥಾ ಧೂಮಸ್ಯಾಗ್ನಿ (ಧೂಮಾಗ್ನ್ಯೋಃ) ಸಮ್ಬನ್ಧೇ ನ ಕಶಿದುಪಾಧಿಃ ಪ್ರಮಿತಃ, ತರ್ಕಬಲೇನಾಽಶಙ್ಕಾಽಪಿ ಉಪಾಧಿ ವಿಷಯಾ ನಿರಾಕ್ರಿಯತೇ ತತೋ ನಿರುಪಾಧಿಕ ಏವಾಸೌ ಅನುಮಾನಬೀಜಂ ಸಮ್ಬಧಃ ಸಿದ್ಧ್ಯತಿ ತಥೈವೇತಿ ।

---

1. ಧರ್ಮವನ್ನು ಅಂಗೀಕರಿಸಿರುವವನು ಪ್ರಕೃತದಲ್ಲಿನ ಪ್ರತಿವಾದಿ. ಆ ಧರ್ಮದ ನಿಶ್ಚಯವು ಯಾವ ಪ್ರಮಾಣದಿಂದ ಆಗುತ್ತದೆ ಎಂದು ಪ್ರಶ್ನಿಸಲಾಗಿದೆ. ಬುದ್ಧಾದಿ ಶಾಸ್ತ್ರ ನಿರ್ಮಾತೃಗಳ ವಾಕ್ಯ, ಈಶ್ವರ ನಿರ್ಮಿತವಾದ ವೇದ ವಚನ, ಪ್ರಸಿದ್ಧವಾದ ವೇದದಿಂದ ಭಿನ್ನವಾದ ಬೇರೆ ಅಪೌರುಷೇಯವಾದ ವಾಕ್ಯ, ಅನುಮಾನ, ಅರ್ಥಾಪತ್ತಿ, ಪ್ರತ್ಯಕ್ಷ ಇತ್ಯಾದಿ ಪ್ರಮಾಣಗಳು. ಇವುಗಳಲ್ಲಿ ಯಾವುದಾದರೂ ಒಂದರಿಂದ ಧರ್ಮಾದಿಗಳು ಸಿದ್ಧವಾಗುವುವು ಎಂದು ಉತ್ತರಿಸಬೇಕು. ಇವುಗಳ ಹೊರತಾಗಿ ಬೇರೆ ಉಪಾಯದಿಂದ ಧರ್ಮದ ಸಿದ್ಧಿಯಾಗಲಾರದು. ಧರ್ಮಬೋಧಕಗಳು ಎಂದು ಪ್ರತಿವಾದಿಯು ಒಪ್ಪಿರುವ 'ಅನುಮಾನ ಪ್ರತ್ಯಕ್ಷಾದಿಗಳಿಂದ ಧರ್ಮದ ಸಿದ್ಧಿಯು ಅಶಕ್ಯ' ಎನ್ನುವುದನ್ನು ಮುಂದೆ ತಿಳಿಸಲಾಗುವುದು, ಹಾಗಾಗಿ ಉಳಿದವು ಈ ಮೂರೇ ಮಾರ್ಗಎಂದು ಭಾವ.

ಮೊದಲನೆಯ ಮತ್ತು ಎರಡನೆಯ ಪಕ್ಷಗಳಲ್ಲಿ[1] ಬುದ್ಧಾದಿಗಳಿಗಾಗಲೀ ವೇದನಿರ್ಮಾತೃವಿಗಾಗಲೀ ಸರ್ವಜ್ಞತ್ವಾದಿಗಳನ್ನು ಪ್ರಮಾಣವಿಲ್ಲದೆ ಕಲ್ಪಿಸಬೇಕು[2], ಆದುದರಿಂದ ಕಲ್ಪನಾಗೌರವವು ಬಂದೀತು. ಮೂರನೇ ಪಕ್ಷದಲ್ಲಿ (ವೇದೇತರ ವಾಕ್ಯಗಳಿಗೆ ಅಪೌರುಷೇಯತ್ವವನ್ನು ಕಲ್ಪಿಸುವೆವು ಎಂಬ ಪಕ್ಷದಲ್ಲಿ) ಆ ವಾಕ್ಯಗಳಿಗೆ ಅಪೌರುಷೇಯತ್ವವನ್ನು (ಪ್ರಮಾಣವಿಲ್ಲದೇ) ಕಲ್ಪಿಸಬೇಕು. (ಆಗ ಪುನಃ) ಕಲ್ಪನಾಗೌರವವೇ. (ಮತ್ತೂ ಸಹ,)ಅಗತ್ಯವಿದೆ ಎಂದು ಪ್ರಮಾಣವನ್ನು ಊಹಿಸುವುದು ಸರಿಯಾದುದಲ್ಲ. ಮತ್ತೇನೆಂದರೆ ನಿಶ್ಚಿತವಾದ ಪ್ರಮಾಣದಿಂದ ಬೇರೆಯದನ್ನು (ಪ್ರಮೇಯಗಳನ್ನು) ಒಪ್ಪಲಾಗುವುದು[1]. 'ಪ್ರಮಾಣ-ಪ್ರಮಿತನಾಗದ ಕರ್ತೃವು ವೇದಕ್ಕೆ ಇದ್ದಾನೆ' ಎಂದು ಶಂಕಿಸಬಾರದು. ಪ್ರಮಾಣವಿಲ್ಲದೆ ಶಂಕಿಸಿದಲ್ಲಿ ಕಲ್ಪನಾಗೌರವವು ಪ್ರಾಪ್ತವಾಗುವುದು. ಆದುದರಿಂದ (ಪ್ರಕೃತಕ್ಕೆ) ಏನು ? ಉತ್ತರಿಸುತ್ತಾರೆ '**ಅಕಲ್ಪನೇ ಚ**' ಎಂದು. ಈ ರೀತಿಯಾಗಿ (ಹಿಂದಿನ ವಿಮರ್ಶೆಯಂತೆ) ವೇದದ ಕರ್ತೃವು ಅಪ್ರಮಿತ-ನಾಗಿರುವಾಗ ಕಲ್ಪನಾಗೌರವಭಯದಿಂದ ಕಲ್ಪಿಸದೆ ಇದ್ದಲ್ಲಿ, (ಕರ್ತೃಕತ್ವದ) ಶಂಕೆಯೇ ಇಲ್ಲ ಎಂದಾದಲ್ಲಿ, ವೇದಕ್ಕೆ ಅಕರ್ತೃಕತ್ವವು (ಅಪೌರುಷೇಯತ್ವವು) ಸಿದ್ಧವೇ ಆಗುವುದು. ಹೇಗೆ ಧೂಮಾಗ್ನಿಗಳ ಸಂಬಂಧ ವಿಷಯದಲ್ಲಿ ಯಾವುದೇ

---

1. ಬುದ್ಧನಿರ್ಮಿತವಾಕ್ಯದಿಂದ ಅಥವಾ ಈಶ್ವರ ಪ್ರಣೀತವಾದ ವೇದ ವಾಕ್ಯದಿಂದ ಧರ್ಮಾದಿಗಳು ನಿಶ್ಚಿತವಾಗುವವು ಎಂಬ ಪಕ್ಷಗಳಲ್ಲಿ.

2. ಸರ್ವಜ್ಞತ್ವಾದಿ ಎಂಬಲ್ಲಿನ ಆದಿ ಪದದಿಂದ ರಾಗಾದಿ ದೋಷಗಳಿಂದ ರಹಿತನು ಎನ್ನುವದನ್ನು ಪರಿಗ್ರಹಿಸುವುದು.

1. ಪ್ರಸಿದ್ಧವಾದ (ಪ್ರತ್ಯಕ್ಷಾದಿ)ಪ್ರಮಾಣಗಳಿಂದ ಧರ್ಮಾದಿಗಳು ನಿಶ್ಚಯವಾಗದಿರಲು 'ಹೊಸದಾದ ಅಪೌರುಷೇಯವಾದ ವಾಕ್ಯಗಳಿಂದಲೋ, ಬುದ್ಧಾದಿ ವಾಕ್ಯಗಳಿಂದಲೋ ಧರ್ಮಾದಿಗಳನ್ನು ನಿಶ್ಚಯಿಸುವೆವು' ಎಂದು ಹೇಳಲಾಗದು. ಲೋಕನಿಯಮದಂತೆ ವ್ಯವಹರಿಸಬೇಕು. ಪ್ರಕೃತ ನಮಗೆ ಧರ್ಮಾದಿಗಳ ಅಗತ್ಯವಿದೆ, ಅದರ ಸಿದ್ಧಿಗಾಗಿ ಪ್ರಮಾಣಾಂತರ ಬೇಕು ಎಂದು ಪ್ರಮಾಣಾಂತರವನ್ನು ಊಹಿಸುವುದು, ಲೋಕದ ನಿಯಮವಲ್ಲ. ಪ್ರಮಾಣಗಳು ಎಂದು ಪ್ರಸಿದ್ಧವಾದುದರಿಂದ ಧರ್ಮಾದಿಗಳು ಸಿದ್ಧವಾಗುವು-ದಾದಲ್ಲಿ ಅಂತಹ ಧರ್ಮಾದಿಗಳನ್ನು ಒಪ್ಪಬಹುದೇ ಹೊರತು ಹೊಸ ಪ್ರಮಾಣಗಳನ್ನು ಕಲ್ಪಿಸುವುದು ತರವಲ್ಲ. ಈ ವಾದವನ್ನು ಹಿಂದೆ 'ಮರಳುಗಾಡಿನಲ್ಲಿ ಬಾಯಾರಿದ್ದಾನೆಂದು ನೀರು ಸಿಗಲಾರದು' ಎಂಬಿತ್ಯಾದಿ ಮಾತುಗಳಲ್ಲಿ ಸ್ಫುಟಗೊಳಿಸಲಾಗಿದೆ ಎಂದು ಭಾವ.

ನಿಮಿತ್ತವು (ಉಪಾಧಿಯು) ಪ್ರಮಾಣಪ್ರಮಿತವಾಗಿಲ್ಲ (ಸಹಜವಾದದ್ದು, ಆದರೂ) ತರ್ಕಬಲದಿಂದ (ಅವುಗಳ ಸಂಬಂಧವು) ಸೋಪಾಧಿಕ ಎಂದು (ಪ್ರಾಪ್ತವಾದ) ಶಂಕಾವನ್ನು ನಿರಾಕರಿಸಲಾಗುವುದೋ, (ಆಗ ಅವುಗಳ ಸಂಬಂಧವು) ನಿರುಪಾಧಿಕವೇ ಆಗಿದೆ, ಆದುದರಿಂದ ಅನುಮಾನಕ್ಕೆ ಬೀಜಭೂತವಾದ (ವ್ಯಾಪ್ತಿ) ಸಂಬಂಧವು ಸಿದ್ಧವೇ ಆಗುವುದು, ಹಾಗೆಯೇ (ವೇದದ ಅಪೌರುಷೇಯತ್ವವೂ) ಸಿದ್ಧವಾಗುತ್ತದೆ[1].

**-: ವೇದದಿಂದಲೇ ಧರ್ಮದ ಸಿದ್ಧಿಯ ಸಮರ್ಥನೆಯು ಸಮಾಪ್ತ :-**

## ॥ ವೇದದ ಅಪೌರುಷೇಯತ್ವದಲ್ಲಿ ಮತ್ತೆ ಕೆಲವು ಸಂದೇಹ ॥

ಯುಕ್ತಿಯಿಂದ ವೇದವನ್ನು ಪೌರುಷೇಯ ಎಂದು ಸಾಧಿಸಲು ಆಗದು. ವಾಕ್ಯ ಒಂದನ್ನು ರಚಿಸಿ ಇದು ಅಪೌರುಷೇಯ ಎಂದು ಮೋಸಗೊಳಿಸಲು ಆಗದು. ವಶಿಷ್ಠಾದಿಗಳು ದಿವ್ಯಯೋಗದೃಷ್ಟಿಯಿಂದ ಕಂಡ ವೇದಭಾಗಗಳನ್ನು ಅಲ್ಲಗಳೆಯಲಾಗುದು ಈ ಮುಂತಾದ ವಿಷಯಗಳ ಚರ್ಚೆಯು ಇಲ್ಲಿದೆ.

**ಎಲ್ಲ ವಾಕ್ಯಗಳಂತೆ ವೇದವಾಕ್ಯಗಳಿಗೂ ಕರ್ತೃವನ್ನು ಊಹಿಸಲಾಗದು**

**ನ ಚ ಲೌಕಿಕವಾಕ್ಯವತ್ ಸಕರ್ತೃಕತ್ವಂ, ತಸ್ಯಾಕರ್ತೃಕತ್ವಪ್ರಸಿದ್ಧ್ಯಭಾವಾತ್ ।**

1. ಧೂಮದಿಂದ ವಹ್ನಿಯನ್ನು ಅನುಮಾನಿಸಲಾಗುವುದು. ಧೂಮ ಮತ್ತು ವಹ್ನಿಗಳ ಸಂಬಂಧವು ನೈಮಿತ್ತಿಕವಾದುದಲ್ಲ, ಸಹಜವಾದದ್ದು. ಇಂತಹ ಅನುಮಾನದಲ್ಲಿ ಧೂಮ ಮತ್ತು ವಹ್ನಿಗಳ ಸಂಬಂಧವು 'ಔಪಾಧಿಕ' ಎಂದು ಯಾರಾದರೂ ಸಂದೇಹಿಸಿದಲ್ಲಿ, ಆಗ ತರ್ಕದ ಬಲದಿಂದ, ಅಂದರೆ 'ಒಂದು ವೇಳೆ ವಹ್ನಿಯು ಇಲ್ಲ ಎಂದಾದಲ್ಲಿ, ಧೂಮವೂ ಇಲ್ಲದೇ ಹೋಗಬೇಕಾದೀತು' ಎಂಬ ಅನಿಷ್ಟಾಪಾದನ ರೂಪ ತರ್ಕದಿಂದ, ಧೂಮಾಗ್ನಿಗಳ ಸಂಬಂಧವು ಔಪಾಧಿಕ ಎಂಬ ಸಂದೇಹವನ್ನು ನಿರಾಕರಿಸಲಾಗುವುದು. ಆಗ ಧೂಮಾಗ್ನಿಗಳ ಸಂಬಂಧವು ಸಹಜ ಎಂದು ಸ್ವತಃ ಹೇಗೆ ಸಿದ್ಧವಾಗುವುದೋ, ಹಾಗೆಯೇ ಪ್ರಕೃತದಲ್ಲಿ, ವೇದಕ್ಕೆ ಕರ್ತೃವು ಪ್ರಮಿತನಾಗದಿದ್ದರೂ, ಕರ್ತೃವನ್ನು ಕಲ್ಪಿಸಿ ಸಂದೇಹಿಸಿದಲ್ಲಿ ತರ್ಕದಿಂದ ಆ ಸಂದೇಹವನ್ನು ನಿರಾಕರಿಸಲಾಗುವುದು. ಅಪ್ರಮಿತವಾದದ್ದನ್ನು ಊಹಿಸುವದಾದಲ್ಲಿ ಅತಿಪ್ರಸಂಗವು ಒದಗೀತು, ಅಪೌರುಷೇಯವಾದ ವಾಕ್ಯವನ್ನು ಒಪ್ಪದಿದ್ದಲ್ಲಿ ಧರ್ಮವೇ ಸಿದ್ಧವಾಗಲಿಕ್ಕಿಲ್ಲ ಎಂಬ ತರ್ಕದಿಂದ ಸಂದೇಹವು ನಿರಾಕೃತವಾದಲ್ಲಿ ವೇದಾಪೌರುಷೇಯತ್ವವು ಸಹಜವಾಗಿ ಸಿದ್ಧವಾಗುವುದು ಎಂದು ಭಾವ.

ಲೌಕಿಕವಾಕ್ಯದಂತೆ (ವೇದವಾಕ್ಯಕ್ಕೆ) ಸಕರ್ತೃಕತ್ವವು ಇಲ್ಲ, ಅದಕ್ಕೆ (ಲೌಕಿಕವಾಕ್ಯಕ್ಕೆ) ಅಕರ್ತೃಕತ್ವದ ಪ್ರಸಿದ್ಧಿಯು ಇಲ್ಲದಿರುವುದರಿಂದ.

**ಏವಂ ವೇದಸ್ಯಾಕರ್ತೃಕತ್ವೇಽನುಮಾನಮಭಿಧಾಯ ತತ್ಸ್ಥೇಮ್ನೇಽನುಕೂಲತರ್ಕೋಽಪ್ಯಭಿಹಿತಃ । ತತ್ರ ಶಙ್ಕತೇ- ಅಸಿದ್ಧಂ ವೇದಸ್ಯಾಪ್ರಮಿತಕರ್ತೃಕತ್ವಮ್, 'ವೇದಃ ಸಕರ್ತೃಕಃ ವಾಕ್ಯತ್ವಾತ್ ಲೌಕಿಕವಾಕ್ಯವತ್' ಇತ್ಯಾದ್ಯನುಮಾನೇನ ವೇದಕರ್ತುಃ ಪ್ರಮಿತತ್ವಾತ್ ಇತಿ । ತತ್ರಾಹ 'ನ ಚ ಲೌಕಿಕ..' ಇತಿ । 'ವೇದಸ್ಯ ವಾಕ್ಯತ್ವಾದಿಹೇತುನಾಽನುಮೇಯಮ್' ಇತಿ ಶೇಷಃ । ಕುತಃ? ಇತ್ಯತ ಆಹ 'ತಸ್ಯ' ಇತಿ । ತಸ್ಯ- ಲೌಕಿಕವಾಕ್ಯಸ್ಯ, 'ಸಕರ್ತೃಕತ್ವಂ' ಇತಿ ವರ್ತತೇ । ಪಕ್ಷೀಕೃತಸ್ಯ ತ್ವಕರ್ತೃಕತ್ವಪ್ರಸಿದ್ಧಿಮತ್ತ್ವಾತ್ 'ಅಕರ್ತೃಕತ್ವಮಸ್ತು' ಇತಿ ವಾಕ್ಯಶೇಷಃ ॥**

ಈ ರೀತಿಯಾಗಿ ವೇದಕ್ಕೆ ಕರ್ತೃವಿಲ್ಲ ಎನ್ನುವ ವಿಷಯದಲ್ಲಿ ಅನುಮಾನವನ್ನು[1] ಹೇಳಿ, ಆ ಅನುಮಾನಪ್ರಾಮಾಣ್ಯದ ನಿಶ್ಚಯಕ್ಕಾಗಿ ಅನುಕೂಲತರ್ಕವನ್ನು ಹೇಳಲಾಗಿದೆ[2]. ಈ ವಿಷಯದಲ್ಲಿ (ಅನುಮಾನದ ವಿಷಯದಲ್ಲಿ ಪುನಃ) ಪ್ರಶ್ನಿಸುತ್ತಾರೆ- 'ವೇದದ ಕರ್ತೃವು ಅಪ್ರಮಿತ' ಎನ್ನುವುದೇ (ಹೇತುವೇ) ಅಸಿದ್ಧ. 'ವೇದವು ಕರ್ತೃವನ್ನು ಹೊಂದಿದೆ ವಾಕ್ಯವಾದುದರಿಂದ, ಲೌಕಿಕವಾಕ್ಯದಂತೆ' ಇದೇ ಮೊದಲಾದ ಅನೇಕ ಅನುಮಾನಗಳಿಂದ ವೇದದ ಕರ್ತೃವು ಪ್ರಮಿತನಾದುದರಿಂದ. ಈ ಸಂದರ್ಭದಲ್ಲಿ ಹೇಳುತ್ತಾರೆ **'ನ ಚ ಲೌಕಿಕವಾಕ್ಯವತ್'** ಎಂದು. 'ವೇದಸ್ಯ ವಾಕ್ಯತ್ವಾದಿ-ಹೇತುನಾ ಅನುಮೇಯಂ' ಎಂದು ಶೇಷಪೂರಣ ಮಾಡಿಕೊಳ್ಳಬೇಕು[3].

1. 'ವೇದಃ ಅಪೌರುಷೇಯಃ ಅಪ್ರಮಿತಕರ್ತೃಕತ್ವಾತ್ ಗಗನವತ್' ಎಂಬ ಅನುಮಾನವೆಂದು ಭಾವ.

2. 'ಕರ್ತೃವು ಪ್ರಮಿತನಾಗದಿದ್ದರೂ ಕರ್ತೃವನ್ನು ಕಲ್ಪಿಸಿದಲ್ಲಿ ಕಲ್ಪನಾಗೌರವ, ಧರ್ಮಾದಿಗಳ ಅಸಿದ್ಧಿ ಈ ಮುಂತಾದ ಅನಿಷ್ಟಗಳು ಪ್ರಾಪ್ತವಾದೀತು' ಎನ್ನುವ ಅನಿಷ್ಟಾಪಾದನೆಗಳು ಪ್ರಾಪ್ತವಾಗುವುದು ಎಂದು ಭಾವ.

3. ಮೂಲದಲ್ಲಿ 'ಲೌಕಿಕವಾಕ್ಯವತ್, ಸಕರ್ತೃಕತ್ವಂ' ಎಂದು ದೃಷ್ಟಾಂತ ಮತ್ತು ಸಾಧ್ಯಗಳ ನಿರ್ದೇಶನವನ್ನು ಮಾತ್ರ ಮಾಡಲಾಗಿದೆ. ಅನುಮಾನದಲ್ಲಿನ ಪಕ್ಷವಾಚಕ, ಹೇತುವಾಚಕ ಶಬ್ದಗಳನ್ನು ಊಹಿಸಿ ಪೂರ್ಣಗೊಳಿಸಿಕೊಳ್ಳಬೇಕು. ಆಗ 'ವೇದಃ ಸಕರ್ತೃಕಃ ವಾಕ್ಯತ್ವಾತ್ ಲೌಕಿಕವಾಕ್ಯವತ್' ಎಂದು ಅನುಮಾನವನ್ನು ಸೂಚಿಸಿದಂತಾಯಿತು ಎಂದು ಭಾವ.

ಏಕೆ [1]? ತಸ್ಯ- ಲೌಕಿಕವಾಕ್ಯಕ್ಕೆ, 'ಸಕರ್ತೃಕತ್ವಂ' ಎಂದು ಇದೆ[2]. 'ಪಕ್ಷೀಕೃತಸ್ಯ ತು ಅಕರ್ತೃಕತ್ವಪ್ರಸಿದ್ಧಿಮತ್ತ್ವಾತ್ ಅಕರ್ತೃಕತ್ವಮಸ್ತು' ಎಂದು ವಾಕ್ಯವನ್ನು ಅಧ್ಯಾಹರಿಸಿಕೊಂಡು ಪೂರ್ಣಗೊಳಿಸಿಕೊಳ್ಳುವುದು[3].

**'ವೇದವು ಸಕರ್ತೃಕ' ಎಂಬ ಅನುಮಾನವು ಅಪ್ರಯೋಜಕ**

**ಇದಮುಕ್ತಂ ಭವತಿ- 'ವಾಕ್ಯತ್ವಾದೌ ಸಮಾನೇಽಪಿ ಲೌಕಿಕವಾಕ್ಯಸ್ಯ ಅವೇದವಾಕ್ಯತ್ವಾತ್ ಸಕರ್ತೃಕತ್ವಮಸ್ತು , ಅಸ್ಯ ತು ವೇದತ್ವಾತ್ ಅಕರ್ತೃಕತ್ವಂ ಭವತು' ಇತ್ಯಾಶಙ್ಕಾಯಾಂ ಬಾಧಕಾಭಾವೇನಾಪ್ರಯೋಜಕತ್ವಾತ್ 'ನೈವಮನುಮಾತವ್ಯಮ್' ಇತಿ । ನ ಚ 'ಸಾಧ್ಯದೃಷ್ಟಾಂತಯೋರ್ಧರ್ಮ-ವಿಕಲ್ಪೇನ ಪ್ರತ್ಯವಸ್ಥಾನಾದ್ ''ವಿಕಲ್ಪಸಮಾಖ್ಯಂ ಜಾತ್ಯುತ್ತರಮೇತದ್ ' ಇತಿ ಶಙ್ಕನೀಯಮ್ । ತಥಾ ಸತಿ ಕುತ್ರಾಪ್ಯನುಕೂಲತರ್ಕಸ್ಯ ವಿಪಕ್ಷೇ ಬಾಧಕಸ್ಯ ಚಾವಕ್ತವ್ಯತ್ವಾತ್, ತರ್ಕವ್ಯುತ್ಪಾದನಸ್ಯ ವೈಯ್ಯರ್ಥ್ಯಾಪತ್ತೇಃ । ಕಿನ್ತು ಸಾಧ್ಯೇ[4] ವಾ, ದೃಷ್ಟಾಂತೇ ವಾ, ಸಾಧ್ಯದೃಷ್ಟಾಂತಯೋರ್ವಾ ಧರ್ಮವಿಕಲ್ಪಾತ್ ಕಸ್ಯಚಿದ್ಧರ್ಮಸ್ಯ ಕಿಞ್ಚಿದ್ಧರ್ಮವ್ಯಭಿಚಾರದರ್ಶನಾತ್ ಸಾಧನಸ್ಯಾಪಿ ಸಾಧ್ಯವ್ಯಭಿಚಾರಪ್ರತಿಪಾದನಂ 'ವಿಕಲ್ಪಸಮಾ ಜಾತಿಃ' ।**

---

1. ವೇದಃ ಸಕರ್ತೃಕಃ... ಎನ್ನುವ ಅನುಮಾನವನ್ನು ಏಕೆ ಮಾಡಬಾರದು ? ಎಂದು ಪ್ರಶ್ನೆಯ ಭಾವ.

2. ಹಿಂದಿನ ವಾಕ್ಯದಿಂದ 'ಸಕರ್ತೃಕತ್ವಂ' ಎನ್ನುವುದನ್ನು ಅಧ್ಯಾಹರಿಸಿಕೊಳ್ಳಬೇಕು ಒಟ್ಟಿನಲ್ಲಿ 'ತಸ್ಯ- ಲೌಕಿಕವಾಕ್ಯಸ್ಯ ಸಕರ್ತೃಕತ್ವಂ, ಅಕರ್ತೃಕತ್ವಪ್ರಸಿದ್ಧ್ಯಭಾವಾತ್' ಎಂದು ಮೂಲವು ಸಂಪನ್ನವಾಗುವುದು. ಕಾಳಿದಾಸಾದಿ ಲೌಕಿಕವಾಕ್ಯಕ್ಕೆ ಸಕರ್ತೃಕತ್ವವನ್ನು ಹೇಳಬಹುದು, ಅವುಗಳಿಗೆ ಅಕರ್ತೃಕತ್ವದ ಪ್ರಸಿದ್ಧಿಯು ಇಲ್ಲದೇ ಇರುವುದರಿಂದ, ಎಂದು ಭಾವ.

3. ಪಕ್ಷೀಕರಿಸಿದ ವೇದವಾದರೂ 'ಅಕರ್ತೃಕ' ಎಂದು ಪ್ರಸಿದ್ಧವಾದುದರಿಂದ (ಪಕ್ಷದಲ್ಲಿ) ಅಕರ್ತೃಕತ್ವವು ಇರಲಿ' ಎಂದು ಶೇಷಪೂರಣ ಮಾಡಿಕೊಳ್ಳುವುದು. ವೇದ ವಾಕ್ಯಗಳಲ್ಲಿ ಮತ್ತು ಲೌಕಿಕವಾಕ್ಯಗಳಲ್ಲಿ ವಾಕ್ಯತ್ವರೂಪ ಹೇತುವಿದ್ದರೂ, ಲೌಕಿಕವಾಕ್ಯಗಳಲ್ಲಿ ಅಕರ್ತೃಕತ್ವ ಪ್ರಸಿದ್ಧಿ ಇಲ್ಲವಾದುದರಿಂದ ಸಕರ್ತೃಕತ್ವವಿರಲಿ, ವೇದಗಳಲ್ಲಿ ಅಕರ್ತೃಕತ್ವ ಪ್ರಸಿದ್ಧಿಯಿರುವುದರಿಂದ ಅಕರ್ತೃಕತ್ವವೇ ಇರಲಿ. ಒಟ್ಟಿನಲ್ಲಿ ವಾಕ್ಯತ್ವರೂಪ ಹೇತುವು ಸಕರ್ತೃಕತ್ವದ ಸಾಧಕವಲ್ಲ ಎಂದು ಭಾವ.

4. ಇಲ್ಲಿ ಸಾಧ್ಯ ಶಬ್ದಕ್ಕೆ ಪಕ್ಷ ಎಂದು ಅರ್ಥ. ಪಕ್ಷವನ್ನು 'ಸಾಧ್ಯದಿಂದ ವಿಶಿಷ್ಟವಾಗಿದೆ' ಎಂದು ಸಾಧಿಸುವುದರಿಂದ ಪಕ್ಷವನ್ನೂ 'ಸಾಧ್ಯ' ಎಂದು ನಿರ್ದೇಶಿಸುವುದು ಶಾಸ್ತ್ರದಲ್ಲಿ ಕಂಡಿದೆ ಎಂದು ಭಾವ.

ಇಷ್ಟು ತಿಳಿಸಿದಂತಾಗುವುದು– ವಾಕ್ಯತ್ವವೇ ಮೊದಲಾದವು (ವೇದವಾಕ್ಯ–ಲೌಕಿಕವಾಕ್ಯಗಳಲ್ಲಿ) ಸಮಾನವಾದರೂ, 'ಲೌಕಿಕವಾಕ್ಯದಲ್ಲಿ ಅವೇದತ್ವವು ಇರುವುದರಿಂದ ಸಕರ್ತೃಕತ್ವವಿರಲಿ. ವೇದದಲ್ಲಾದರೆ ವೇದತ್ವವು ಇರುವುದರಿಂದ ಅಕರ್ತೃಕತ್ವವೇ ಇರಲಿ' ಎಂದು ಶಂಕಿಸಿದಲ್ಲಿ ಬಾಧಕವಿಲ್ಲದಿರುವುದರಿಂದ (ವಾಕ್ಯತ್ವ ಹೇತುವು) ಅಪ್ರಯೋಜಕವಾದುದರಿಂದ ಈ ರೀತಿಯಲ್ಲಿ (ವೇದಃ ಸಕರ್ತೃಕಃ.... ಎಂಬ) ಅನುಮಾನವನ್ನು ಹೇಳಬಾರದು. ಪಕ್ಷ ದೃಷ್ಟಾಂತಗಳಲ್ಲಿನ ಧರ್ಮಗಳನ್ನು ವಿಕಲ್ಪಿಸಿ ಅಪ್ರಯೋಜಕತ್ವವನ್ನು ಶಂಕಿಸಿದಲ್ಲಿ 'ವಿಕಲ್ಪಸಮಾ' ಎನ್ನುವ ಜಾತ್ಯುತ್ತರರೂಪ ದೋಷವು ಪ್ರಾಪ್ತವಾಗುವುದಲ್ಲವೇ ? ಎಂದು ಶಂಕಿಸಬಾರದು . ಹಾಗೆ ಹೇಳಿದಲ್ಲಿ (ಇಲ್ಲಿ ಪ್ರಸ್ತುತವಾದ ಅಪ್ರಯೋಜಕತ್ವ ಶಂಕೆಗೆ ಜಾತ್ಯುತ್ತರರೂಪ ದೋಷವನ್ನು ಹೇಳಿದ ಪಕ್ಷದಲ್ಲಿ) ಅನುಕೂಲ ತರ್ಕವನ್ನು ಮತ್ತು ವಿಪಕ್ಷದಲ್ಲಿ ಬಾಧಕವನ್ನು ಯಾವ ಸಂದರ್ಭದಲ್ಲಿಯೂ ಹೇಳದೇ ಇರಬೇಕಾದೀತು, (ಆಗ) ತರ್ಕದ ಉಕ್ತಿಯೇ ವ್ಯರ್ಥವಾಗುವ ಪ್ರಸಂಗವು ಬಂದೀತು. ಆದರೆ ಪಕ್ಷದಲ್ಲಿರುವ ಅಥವಾ ದೃಷ್ಟಾಂತದಲ್ಲಿರುವ, ಪಕ್ಷದೃಷ್ಟಾಂತಗಳಲ್ಲಿರುವ ಯಾವುದೋ ಧರ್ಮವನ್ನು ವಿಕಲ್ಪಿಸಿ, ಯಾವುದೋ ಧರ್ಮದಿಂದ ಮತ್ತಾವುದೋ ಧರ್ಮಕ್ಕೆ ವ್ಯಭಿಚಾರವು ಕಂಡಿರುವುದರಿಂದ, ಪ್ರಸಕ್ತವಾದ ಸಾಧ್ಯ–ಹೇತುಗಳಿಗೆ ವ್ಯಭಿಚಾರವನ್ನು ಶಂಕಿಸಿದಲ್ಲಿ, ಇಂತಹ ಸಂದರ್ಭದಲ್ಲಿ ಮಾತ್ರ 'ವಿಕಲ್ಪಸಮಾಜಾತಿ' ಎಂಬ ದೋಷವನ್ನು ಹೇಳಬೇಕು[1].

---

1. ಈ ಟೀಕಾಪ್ರಸಂಗದ ಅಭಿಪ್ರಾಯವು ಹೀಗಿದೆ– 'ವೇದಗಳಿಗೆ ಕರ್ತೃವು ಇದ್ದಾನೆ' ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ 'ಲೌಕಿಕವಾಕ್ಯಗಳಂತೆ ವೇದವಾಕ್ಯಗಳಿಗೂ ಕರ್ತೃವಿದ್ದಾನ ಎಂದು ಹೇಳಬಾರದು' ಎಂದು ಮೂಲದಲ್ಲಿ ತಿಳಿಸಲಾಗಿದೆ. ಪೂರ್ವಪಕ್ಷಿಯು ವೇದದ ಕರ್ತೃವಿನ ಅಸ್ತಿತ್ವದ ವಿಷಯದಲ್ಲಿ 'ವೇದಃ ಸಕರ್ತೃಕಃ ವಾಕ್ಯತ್ವಾತ್ ಕಾಳಿದಾಸಾದಿವಾಕ್ಯವತ್' ಎಂಬ ಅನುಮಾನವು ಪ್ರಮಾಣ ಎಂದು ಹೇಳಿದನು. ಈ ವಾಕ್ಯತ್ವಾನುಮಾನವು ಅಪ್ರಯೋಜಕ ಎಂದು ಆಚಾರ್ಯರು ತಿಳಿಸಿರುವರು. ಅಂದರೆ ಸಾಧ್ಯ ಹೇತುಗಳ ಸಾಹಚರ್ಯವು ಪ್ರಮಾಣದಿಂದ ಪ್ರಮಿತವಾಗಿರಬೇಕು. ಧೂಮವು ವಹ್ನಿಯಕಾರ್ಯ, ಆದುದರಿಂದ ಧೂಮವಿದ್ದಲ್ಲಿ ಅದರ ಕಾರಣವಾದ ವಹ್ನಿಯು ಇರಬೇಕು. ಹೀಗೆ ವಹ್ನಿ–ಧೂಮಗಳ ಸಾಹಚರ್ಯವು ಪ್ರಮಿತವಾಗಿದೆ. ಪ್ರಕೃತ ವಾಕ್ಯತ್ವ–ಸಕರ್ತೃಕತ್ವಗಳ

ಪುಟ 118ರಲ್ಲಿ........

...... ಪುಟ 117 ರಿಂದ

ಸಾಹಚರ್ಯವು ಪ್ರಮಾಣಪ್ರಮಿತವಲ್ಲ. 'ವೇದದಲ್ಲಿ ವಾಕ್ಯತ್ವವಿರಲಿ ಸಕರ್ತೃಕತ್ವವು ಇಲ್ಲದಿರಲಿ. ಕಾಳಿದಾಸಾದಿ ವಾಕ್ಯಗಳು ಅವೇದವಾಗಿವೆ, ಆದುದರಿಂದ ಅಲ್ಲಿ ಸಕರ್ತೃಕತ್ವವಿರಲಿ' ಎಂದು ವಾಕ್ಯತ್ವಾನುಮಾನಕ್ಕೆ ಅಪ್ರಯೋಜಕತ್ವ ಶಂಕೆಯನ್ನು ಪ್ರಸ್ತುತಪಡಿಸಲಾಗಿದೆ. 'ಸಕರ್ತೃಕತ್ವಕ್ಕೆ ವಾಕ್ಯತ್ವವು ಕಾರಣವಲ್ಲ, ಅವೇದತ್ವವು ಕಾರಣ 'ಎಂದು ಒಟ್ಟು ಅಭಿಪ್ರಾಯ. 'ವೇದಃ ಸಕರ್ತೃಕಃ ವಾಕ್ಯತ್ವಾತ್ ಕಾಳಿದಾಸವಾಕ್ಯವತ್' ಎನ್ನುವ ಅನುಮಾನಕ್ಕೆ ಅಪ್ರಯೋಜಕತ್ವದ ಶಂಕೆಯು ಇರುವುದರಿಂದ ಸಕರ್ತೃತ್ವವನ್ನು ಸಾಧಿಸಲು ಈ ಅನುಮಾನವು ಸಮರ್ಥವಲ್ಲ' ಎಂದು ಹೇಳುವುದು ಸರಿಯಾದ ಕ್ರಮವಲ್ಲ. ಏಕೆಂದರೆ 'ಪರ್ವತಃ ವಹ್ನಿಮಾನ್ ಧೂಮಾತ್ ಮಹಾನಸವತ್' ಎಂಬ ಬಹುಪ್ರಸಿದ್ಧವಾದ ಸದನುಮಾನದಲ್ಲಿಯೂ ಸಹ ನೀವು ಹೇಳಿದಂತೆ ಅಪ್ರಯೋಜಕತ್ವ ಶಂಕೆಯನ್ನು ಮಾಡಲು ಶಕ್ಯವಿದೆ- 'ಲೌಕಿಕವಾಕ್ಯದಲ್ಲಿ ಅವೇದತ್ವವು ಇರುವದರಿಂದ ಸಕರ್ತೃತ್ವವು ಇರಲಿ, ವೇದದಲ್ಲಿ ವೇದತ್ವವು ಇರುವುದರಿಂದ ಸಕರ್ತೃಕತ್ವವು ಇಲ್ಲ'ಎಂದು ಹೇಳಿದಂತೆ 'ಮಹಾನಸದಲ್ಲಿ ಪರ್ವತದ ಭೇದವಿದೆ ಅಲ್ಲಿ ವಹ್ನಿಯು ಇರಲಿ, ಪರ್ವತದಲ್ಲಿ ಪರ್ವತದ ಭೇದವಿಲ್ಲ ಆದುದರಿಂದ ವಹ್ನಿ ಇರದಿರಲಿ' ಎಂದು ಅಪ್ರಯೋಜಕತ್ವ ಶಂಕೆಯನ್ನು ಮಾಡಲು ಅವಕಾಶವಿದೆ. ಹೀಗೆಯೇ 'ಘಟಃ ಸಕರ್ತೃಕಃ ಸಾವಯವತ್ವಾತ್ ಪಟವತ್' ಎನ್ನುವ ಅನುಮಾನದಲ್ಲಿಯೂ ಶಂಕಿಸಬಹುದು. 'ಸಾವಯವತ್ವವು ಸಕರ್ತೃತ್ವಕ್ಕೆ ಕಾರಣವಲ್ಲ, ಪಟಾಭೇದವು ಕಾರಣ' ಎಂದು. ಅಂದರೆ ಪಕ್ಷ-ದೃಷ್ಟಾಂತಗಳಲ್ಲಿನ ಯಾವುದೋ ಧರ್ಮವನ್ನು ವಿಕಲ್ಪಿಸಿ, ಕಾರ್ಯಕಾರಣಭಾವವನ್ನು ಶಂಕಿಸಿದಲ್ಲಿ ಅಂತಹ ಸಂದರ್ಭದಲ್ಲಿ 'ಜಾತ್ಯುತ್ತರ' ಎಂಬ ದೋಷವನ್ನು ಶಾಸ್ತ್ರದಲ್ಲಿ ತಿಳಿಸಿರುತ್ತಾರೆ. 'ಅಸದುತ್ತರಂ- ಜಾತಿಃ' ಎಂದು ಶಾಸ್ತ್ರದಲ್ಲಿ ತಿಳಿಸಲಾಗಿದೆ. ಪ್ರಕೃತ ವಾಕ್ಯತ್ವಾನುಮಾನದಲ್ಲಿನ ಅಪ್ರಯೋಜಕತ್ವ ಶಂಕೆಯೂ ಸಹ 'ಜಾತ್ಯುತ್ತರ' ದೋಷವನ್ನು ಹೊಂದಿದಂತಾಗುವುದಿಲ್ಲವೆ ? ಎಂದು ಶಂಕಿಸಬಾರದು. ಪ್ರಸಿದ್ಧಾನುಮಾನಗಳಲ್ಲಿ ಅಪ್ರಯೋಜಕತ್ವವನ್ನು ಶಂಕಿಸಿದಾಗ ಜಾತ್ಯುತ್ತರ ದೋಷವನ್ನು ಹೇಳಲಾಗದು. 'ಒಂದು ವೇಳೆ ಪರ್ವತದಲ್ಲಿ ವಹ್ನಿಯು ಇಲ್ಲ ಎಂದಾದಲ್ಲಿ (ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದ) ಧೂಮವೇ ಇಲ್ಲದಂತಾಗಲಿ' ಎಂದು ಉತ್ತರಿಸಲಾಗುವುದು. ಏಕೆಂದರೆ ಧೂಮ-ವಹ್ನಿಗಳಲ್ಲಿ ಕಾರ್ಯ-ಕಾರಣಭಾವವನ್ನು ಒಪ್ಪಿರುವರು, ಈ ಕಾರ್ಯಕಾರಣಭಾವಕ್ಕೆ ಭಂಗಬರುವುದು. ಇದನ್ನು ಶಾಸ್ತ್ರಗಳಲ್ಲಿ 'ಬಾಧಕತರ್ಕ' ಎಂದು ಕರೆಯುತ್ತಾರೆ. ಪ್ರಸಿದ್ಧಾನುಮಾನದಲ್ಲಿನ ಅಪ್ರಯೋಜಕತ್ವಶಂಕೆಯನ್ನು ಹೀಗೆ ಬಾಧಕತರ್ಕವನ್ನು ಹೇಳಿ ಖಂಡಿಸದೆ, 'ಜಾತ್ಯುತ್ತರ' ದೋಷವನ್ನು ಹೇಳಿ ಖಂಡಿಸುವದಾದಲ್ಲಿ, ಯಾವ ಸಂದರ್ಭದಲ್ಲೂ ಸಹ ತರ್ಕಕ್ಕೆ ಅವಕಾಶವೇ ಇಲ್ಲದಂತಾದೀತು. ಅಂದರೆ ಸಾಧ್ಯಹೇತುಗಳ ಸಾಹಚರ್ಯವು ನಿಶ್ಚಿತವಾಗಿದ್ದಲ್ಲಿ ಅನುಕೂಲತರ್ಕವನ್ನೇ ಹೇಳಬೇಕು. ಇದು ಶಾಸ್ತ್ರದ ಹೃದಯ ಎಂದು ಭಾವ.

ಪುಟ 119ರಲ್ಲಿ.......

**ವಾಕ್ಯತ್ವಾನುಮಾನದಲ್ಲಿನ ಬಾಧಕಾಶಂಕೆಯು ಯುಕ್ತ**

ನನು, ಕಿಮಿದಂ ವೇದತ್ವಂ? ಯದ್ಭಾವಾಭಾವಾಭ್ಯಾಂ ಪಕ್ಷ-ಸಪಕ್ಷಯೋಃ ಸಾಧ್ಯಸ್ಯಾಭಾವೋ ಭಾವಶ್ಚ ವ್ಯವಸ್ಥಾಪ್ಯತೇ । ನ ತಾವತ್ ವಾಕ್ಯತ್ವಂ, ಅದೃಷ್ಟವಿಷಯವಾಕ್ಯತ್ವಂ ವಾ । ಬೌದ್ಧಾದಿವಾಕ್ಯಾನಾಮಪಿ ವೇದತ್ವ-ಪ್ರಸಙ್ಗಾತ್ । ನಾಪಿ ಪ್ರಮಾಣತ್ವೇ ಸತ್ಯದೃಷ್ಟವಿಷಯವಾಕ್ಯತ್ವಮ್, ಮನ್ವಾದಿವಾಕ್ಯಾನಾಮಪಿ ತತ್ಪ್ರಾಪ್ತೇಃ । ನಾಪ್ಯಪೌರುಷೇಯವಾಕ್ಯತ್ವಂ, ವ್ಯವಸ್ಥಾಪ್ಯಮಾನಾತಿರಿಕ್ತ ವ್ಯವಸ್ಥಾಪಕಾಭಾವಪ್ರಸಙ್ಗಾತ್ । ಇತ್ಯಾಶಙ್ಕ್ಯ ತಸ್ಯ 'ಅವೇದತ್ವಾತ್' ಇತಿ ವಕ್ತವ್ಯೇಽವೇದಶಬ್ದಾರ್ಥಜ್ಞಾಪನಾರ್ಥಂ 'ತಸ್ಯ ಅಕರ್ತೃಕತ್ವಪ್ರಸಿದ್ಧಿರಹಿತತ್ವಾತ್' ಇತ್ಯುಕ್ತಮ್ । ತಥಾಚ ಅಕರ್ತೃಕತ್ವ-

---

...... ಪುಟ 118 ರಿಂದ

ಇನ್ನು 'ಜಾತ್ಯುತ್ತರ' ಎಂಬ ದೋಷವನ್ನು ಯಾವ ಸಂದರ್ಭದಲ್ಲಿ ತಿಳಿಸಬೇಕು ? ಉತ್ತರಿಸುತ್ತಾರೆ - ವಿಕಲ್ಪಸಮ ಎಂಬ ನಿಗ್ರಹಸ್ಥಾನದ ಲಕ್ಷಣವು ಹೀಗಿದೆ-

ಧರ್ಮಸ್ಯೈಕಸ್ಯ ಕೇನಾಪಿ ಧರ್ಮೇಣ ವ್ಯಭಿಚಾರತಃ ।
ಹೇತೋಃ ಸಾಧ್ಯಾಭಿಚಾರೋಕ್ತೇರ್ವಿಕಲ್ಪಸಮಜಾತಿತಾ ॥

ಒಂದು ಧರ್ಮವು ಯಾವುದೋ ಧರ್ಮದಿಂದ ವ್ಯಭಿಚರಿತವಾದ್ದರಿಂದ (ಸಾಹಚರ್ಯವನ್ನು ಹೊಂದದೆ ಇರುವುದರಿಂದ) ಪ್ರಕೃತ ಸಾಧ್ಯ-ಹೇತುಗಳಿಗೆ ಸಾಹಚರ್ಯವಿಲ್ಲ' ಎಂದು ಹೇಳಿದಲ್ಲಿ ಇಂತಹ ಸಂದರ್ಭದಲ್ಲಿ 'ವಿಕಲ್ಪಸಮಾಜಾತಿ' ಎಂಬ ನಿಗ್ರಹ ಸ್ಥಾನವನ್ನು ಹೇಳಲಾಗುವುದು. ಉದಾಹರಣೆ - ಪರ್ವತೋ ವಹ್ನಿಮಾನ್ ಧೂಮಾತ್ ಮಹಾನಸವತ್' ಎಂಬ ಅನುಮಾನದಲ್ಲಿ ಹೇತುವಾದ ಧೂಮವನ್ನು ಹೊಂದಿದ ಪಕ್ಷದಲ್ಲಿ, ಅಪರ್ವತತ್ವವು ಇಲ್ಲ. ಅಪರ್ವತತ್ವಕ್ಕೂ ಧೂಮವತ್ವಕ್ಕೂ ಸಾಹಚರ್ಯವು ಕಂಡಿಲ್ಲ ಆದುದರಿಂದ ವಹ್ನಿ-ಧೂಮಗಳ ಸಾಹಚರ್ಯವನ್ನು ನಿರಾಕರಿಸುವುದು, ಹಾಗೆ ಸಾಧನವಾದ ಧೂಮವು ದೃಷ್ಟಾಂತವಾದ ಮಹಾನಸದಲ್ಲಿದೆ, ಅಲ್ಲಿ ಮಹಾನಸದ ಭೇದವಿಲ್ಲ. ಅಮಹಾನಸತ್ವ ಇರುವ ಸ್ಥಳದಲ್ಲಿ ಧೂಮವಿರುವುದರಿಂದ ಸಾಧ್ಯವಾದ ವಹ್ನಿಯೊಡನೆ ಸಾಹಚರ್ಯದ ಅಭಾವವನ್ನು (ವ್ಯಭಿಚಾರವನ್ನು) ಶಂಕಿಸುವುದು, ಹಾಗೆಯೇ ರಸಹೀನವಾದ ಘಟದಲ್ಲಿ ರೂಪವು ಇರುವುದರಿಂದ, ರೂಪವು ರಸದಿಂದ ವ್ಯಭಿಚರಿತವಾಗಿದೆ. ಅದರಂತೆ ಧೂಮವೂ ವಹ್ನಿಯಿಂದ ವ್ಯಭಿಚರಿತವಾಗಲಿ ಎಂದು ಪ್ರತಿಪಾದಿಸುವುದು ಇಂತಹ ಸಂದರ್ಭಗಳಲ್ಲಿ 'ವಿಕಲ್ಪಸಮಾಜಾತಿ' ಎಂಬ ನಿಗ್ರಹಸ್ಥಾನವನ್ನು ಹೇಳಲಾಗುವುದು. ಪ್ರಕೃತದಲ್ಲಿ ವಾಕ್ಯತ್ವ ಹೇತುವಿಗೆ ಸಕರ್ತೃಕತ್ವಸಾಧ್ಯದಿಂದ ವ್ಯಭಿಚಾರವನ್ನು ಶಂಕಿಸಲಾಗಿಲ್ಲ ಎಂದು ಭಾವ.

**ಪ್ರಸಿದ್ಧಿಮತ್ತ್ವಂ - ವೇದತ್ವಂ, ತದಭಾವಶ್ಚ - ಅವೇದತ್ವಂ, ತಾಭ್ಯಾಂ ಸಾಧ್ಯವಿಕಲ್ಪಃ ಶಂಕ್ಯತ ಇತ್ಯಭಿಹಿತಂ ಭವತಿ ।**

'ವೇದತ್ವ' ಅಂದರೆ ಏನು ? ಯಾವುದರ (ವೇದತ್ವದ) ಇರುವಿಕೆ-ಇಲ್ಲದಿರುವಿಕೆಯಿಂದ ಪಕ್ಷ-ಸಪಕ್ಷಗಳಲ್ಲಿ (ವೇದದಲ್ಲಿ ಲೌಕಿಕವಾಕ್ಯಗಳಲ್ಲಿ) ಸಾಧ್ಯದ ಭಾವ-ಅಭಾವಗಳನ್ನು ವ್ಯವಸ್ಥೆಗೊಳಿಸಲಾಗುತ್ತಿದೆ ? ಆದರೆ (ವೇದತ್ವ ಎಂದರೆ) 'ವಾಕ್ಯತ್ವ' ಅಥವಾ 'ಅದೃಷ್ಟವಿಷಯವಾಕ್ಯತ್ವ[1]' ಎಂದೆನ್ನಲಾಗದು. ಬುದ್ಧಾದಿ ನಿರ್ಮಿತವಾಕ್ಯಗಳನ್ನು ವೇದಗಳೆಂದು ಒಪ್ಪಬೇಕಾದೀತು[2]. ಮತ್ತೂ ಸಹ 'ಪ್ರಮಾಣಭೂತವಾದದ್ದು ಮತ್ತು ಅದೃಷ್ಟ ವಿಷಯ ಪ್ರತಿಪಾದಕವಾದದ್ದು' ಎಂದೂ ಹೇಳಲು ಆಗದು[3]. ಮನ್ವಾದಿ ವಾಕ್ಯಗಳನ್ನೂ ಸಹ 'ವೇದ' ಎಂದು ಒಪ್ಪ ಬೇಕಾದೀತು[4]. ಮತ್ತೂ ಸಹ (ವೇದತ್ವವೆಂದರೆ)'ಅಪೌರುಷೇಯತ್ವಂ' ಎಂದು ಹೇಳಲಾಗದು. ಸಾಧ್ಯ ಸಾಧನಗಳಲ್ಲಿ ಭೇದವಿಲ್ಲದ ಪ್ರಸಂಗವು ಪ್ರಾಪ್ತವಾಗುವುದರಿಂದ[5]. ಹೀಗೆ ಆಶಂಕಿಸಿಕೊಂಡು, ಅದಕ್ಕೆ (ಲೌಕಿಕವಾಕ್ಯಕ್ಕೆ)

1. ಅದೃಷ್ಟಗಳಾದ ಧರ್ಮ, ಅಧರ್ಮ, ನರಕ, ಸ್ವರ್ಗ ಇತ್ಯಾದಿಗಳನ್ನು ಬೋಧಿಸುವ ವಾಕ್ಯಗಳು ಎಂದು ಭಾವ.

2. ಪ್ರಕೃತದಲ್ಲಿ ವೇದಪ್ರಾಮಾಣ್ಯವನ್ನು ಒಪ್ಪಿದ ನೈಯ್ಯಾಯಿಕ ಮತ್ತು ವೇದಾಂತಿಗಳಲ್ಲಿ ವಾದವು ಪ್ರಸಕ್ತವಾಗಿದೆ. ಅವರಿಂದ ಬುದ್ಧಾದಿಗಳ ವಚನವನ್ನು ಅಪ್ರಮಾಣ ಎಂದು ಒಪ್ಪಿಕೊಳ್ಳಲಾಗಿದೆ, ಆದರೆ ಆ ವಚನಗಳಲ್ಲಿ ವಾಕ್ಯತ್ವವೂ ಇದೆ, ಧರ್ಮ-ಸ್ವರ್ಗಾದಿಗಳ ವಿಚಾರವೂ ಇದೆ . ಆದುದರಿಂದ ಬೌದ್ಧವಾಕ್ಯಗಳು ವೇದವಾಗಬೇಕಾದೀತು ಎಂದು ಭಾವ.

3. ಪ್ರಸಕ್ತವಾದಿಗಳು ಈರ್ವರೂ ಬುದ್ಧ-ಜಿನರ ವಾಕ್ಯಗಳನ್ನು ಅಪ್ರಮಾಣವೆಂದು ಒಪ್ಪಿರುವುದರಿಂದ ವೇದತ್ವದ ನಿರ್ವಚನದಲ್ಲಿ 'ಪ್ರಮಾಣತ್ವೇ ಸತಿ' ಎಂದು ವಿಶೇಷಣವನ್ನು ಯೋಜಿಸುವುದರಿಂದ ಬುದ್ಧಾದಿ ವಾಕ್ಯಗಳಲ್ಲಿ ವೇದತ್ವದ ಪ್ರಸಕ್ತಿ ಇಲ್ಲ ಎಂದು ಭಾವ.

4. ಮನು ಮೊದಲಾದ ಸ್ಮೃತಿಕಾರರಿಂದ ನಿರ್ಮಿತವಾದ ಗ್ರಂಥಗಳು ಪ್ರಮಾಣವಾಗಿವೆ, ಆದರೆ ಅವು ವೇದಗಳಲ್ಲ. ಆದರೆ ಅದೃಷ್ಟವಾದ ಧರ್ಮಾದಿಗಳನ್ನು ತಿಳಿಸುತ್ತವೆ. ಆದುದರಿಂದ 'ಪ್ರಮಾಣತ್ವೇ ಸತಿ ಅದೃಷ್ಟವಿಷಯವಾಕ್ಯತ್ವಂ' ಎನ್ನವುದು ಅವುಗಳಲ್ಲಿ ಇರಲಾಗಿ ಅವುಗಳಿಗೂ ವೇದತ್ವವು ಪ್ರಾಪ್ತವಾಗುವುದು ಎಂದು ಭಾವ.

5. ವೇದದಲ್ಲಿ ಅಪೌರುಷೇಯತ್ವವನ್ನು ಸಾಧಿಸಲು 'ವೇದತ್ವ' ಎಂಬ ಹೇತುವನ್ನು ತಿಳಿಸಲಾಗಿದೆ. ಪ್ರಕೃತ 'ವೇದತ್ವ' ಎಂದರೆ 'ಅಪೌರುಷೇಯತ್ವ' ಎಂದು ಹೇಳಿದಲ್ಲಿ 'ವೇದಃ ಅಪೌರುಷೇಯಃ ವೇದತ್ವಾತ್-ಅಪೌರುಷೇಯತ್ವಾತ್' ಎಂಬುದಾಗಿ ಸಾಧ್ಯ-ಹೇತುಗಳು ಎರಡೂ ಒಂದೇ ಎಂದು ಒಪ್ಪಿದಂತಾಗುವುದು ಎಂದು ಭಾವ.

'ಅವೇದತ್ವಾತ್' ಎಂದು ಹೇಳಬೇಕಿತ್ತು (ಹಾಗೆ ಹೇಳದೆ) ಅವೇದ ಶಬ್ದದ ಅರ್ಥವನ್ನು ಸೂಚಿಸಲು 'ತಸ್ಯಾಕರ್ತೃಕತ್ವಪ್ರಸಿದ್ಧಿರಹಿತತ್ವಾತ್' ಎಂದು ಹೇಳಲಾಗಿದೆ. ಹೀಗೆ ಹೇಳಿದ್ದರಿದ, 'ಅಕರ್ತೃಕತ್ವ ಪ್ರಸಿದ್ಧಿಮತ್ತ್ವ' ಎಂದರೆ 'ವೇದತ್ವ' ಎಂದು, ಅದರ ಅಭಾವವೇ 'ಅವೇದತ್ವ' ಎಂದು ಇವೆರಡರಿಂದ ಸಾಧ್ಯವಿಕಲ್ಪವನ್ನು ಆಶಂಕಿಸಲಾಗುವುದು ಎಂದು ತಿಳಿಸಿದಂತಾಯಿತು[1].

**ವೇದವು ಅಕರ್ತೃಕತ್ವೇನ ಪ್ರಸಿದ್ಧ**

ಅಕರ್ತೃಕತ್ವಪ್ರಸಿದ್ಧಿಮತ್ತ್ವಂ ನಾಮ 'ಪ್ರತ್ಯಕ್ಷಾದಿಪ್ರಮಾಣಂ ವಿಪ್ರಲಮ್ಭಾದಿಕಂ ವಾಽಸ್ಯ ಮೂಲಂ ನೋಪಲಭ್ಯತೇ' ಇತಿ ಪ್ರಸಿದ್ಧಿ-ವಿಷಯತ್ವಂ । ಏತಚ್ಚ 'ಅನುಪಲಭ್ಯಮಾನಮೂಲತ್ವೇ ಸತಿ ಮಹಾಜನ-ಪರಿಗೃಹೀತವಾಕ್ಯತ್ವಂ- ವೇದತ್ವಂ' ಇತಿ ವದತಾ ಉದಯನೇನಾಪಿ ಅಙ್ಗೀಕೃತಮ್ । ತತ್ರಾನುಪಲಭ್ಯಮಾನಮೂಲತ್ವಗ್ರಹಣೇನ ಪ್ರತ್ಯಕ್ಷಾದಿ-ಮೂಲತ್ವಸ್ಯ ಮಹಾಜನಪರಿಗೃಹೀತತ್ವಗ್ರಹಣೇನ ವಿಪ್ರಲಮ್ಭಾದಿ-ಮೂಲತ್ವಸ್ಯ ಚ ವ್ಯಾವರ್ತಿತತ್ವಾತ್ । ಸರ್ವಜ್ಞಜ್ಞಾನಮೂಲತ್ವಂ ವದತಾಽಪಿ ತಸ್ಯ ಪ್ರಮಾಣತ್ವಾಭಾವಾದೇವಂ ವಕ್ತುಂ ಶಕ್ಯತ ಏವ । ಏತಚ್ಚಾನುಮಾನಂ ವೈಶೇಷಿಕಾದೀನಾಮ್ । ತಥಾ ಚ ಸೂತ್ರಮ್ 'ಬುದ್ಧಿಪೂರ್ವಾ ವಾಕ್ಯಕೃತಿರ್ವೇದೇ' ಇತಿ । ಅತಸ್ತಾನ್ ಪ್ರತ್ಯೇವಂ ವೇದಶಬ್ದಾರ್ಥಂ ನಿರುಚ್ಯ ತದ್ಭಾವಾಭಾವಾಭ್ಯಾಂ ಸಾಧ್ಯವಿಕಲ್ಪಶಙ್ಕೋಪಪದ್ಯತೇ । ವಿಪ್ರಲಂಭಾದಿ-ಮೂಲತ್ವಮಭ್ಯುಪಗಚ್ಛತಃ ಸೌಗತಾದೀನ್ ಪ್ರತಿ ತು ಪಕ್ಷತಾವಚ್ಛೇದಕತ್ವೇನ ಯದ್ವೇದತ್ವಂ ತೈರಙ್ಗೀಕ್ರಿಯತೇ ತದ್ಭಾವಾಭಾವಾಭ್ಯಾಮೇವ ಶಙ್ಕನೀ-ಯಮ್ । ಏವಂ ಚಾಪ್ರಯೋಜಕೋಽನ್ಯಥಾಸಿದ್ಧೋ ವ್ಯಾಪ್ಯತ್ವಾಸಿದ್ಧೋ ವಾ ವಾಕ್ಯತ್ವಾದಿಹೇತುರಿತಿ । 'ಸಕರ್ತೃಕತ್ವಾಭಾವೇ ಪ್ರಾಮಾಣ್ಯಾಭಾವಪ್ರಸಙ್ಗಃ ಪ್ರಮಾಯಾಃ ಪರತಂತ್ರತ್ವಾತ್' ಇತ್ಯಾದಿಭಾಧಕಂ ತು, ಉತ್ತರತ್ರ ನಿರಾಕರಿಷ್ಯತೇ ।

---

1. 'ವೇದಃ ಸಕರ್ತೃಕಃ ವಾಕ್ಯತ್ವಾತ್ ಲೌಕಿಕವಾಕ್ಯವತ್' ಎಂಬ ಅನುಮಾನದಲ್ಲಿ ಪಕ್ಷದಲ್ಲಿ 'ಅಕರ್ತೃಕತ್ವ ಪ್ರಸಿದ್ಧಿಮತ್ತ್ವವು' ಇದೆ, ದೃಷ್ಟಾಂತದಲ್ಲಿ 'ಅಕರ್ತೃಕತ್ವಪ್ರಸಿದ್ಧಿಮತ್ತ್ವವು' ಇಲ್ಲ. ಆದ್ದರಿಂದ ವೇದದಲ್ಲಿ ಅಪೌರುಷೇಯತ್ವವಿರಲಿ, ಲೌಕಿಕವಾಕ್ಯದಲ್ಲಿ ಪೌರುಷೇಯತ್ವವಿರಲಿ' ಎಂದು ಸಾಧ್ಯದ ಭಾವಾಭಾವಗಳನ್ನು ಶಂಕಿಸಲಾಗುವುದು ಎಂದು ಭಾವ.

'ಅಕರ್ತೃಕತ್ವೇನ ಪ್ರಸಿದ್ಧಿಮತ್ತ್ವಂ' ಎಂದರೆ 'ಇದಕ್ಕೆ (ವೇದಕ್ಕೆ ಯಾವುದೋ ಓರ್ವ ವ್ಯಕ್ತಿಯ) ಪ್ರತ್ಯಕ್ಷಾದಿಗಳು ಮೂಲ ಎಂದಾಗಲಿ, ಅಥವಾ ಈ ವೇದಕ್ಕೆ ಮೋಸದ ಉದ್ದೇಶವಿದೆ ಎಂದಾಗಲಿ ತಿಳಿದಿರುವುದಿಲ್ಲ' ಎಂಬ ಪ್ರಸಿದ್ಧಿಗೆ ವಿಷಯವಾಗಿರುವುದು ಎಂದು[1]. ಇದನ್ನು (ಈ ರೀತಿಯಾದ ಅಕರ್ತೃಕತ್ವೇನ ಪ್ರಸಿದ್ಧಿಮತ್ತ್ವಂ- ವೇದತ್ವಂ ಎನ್ನುವದನ್ನು) 'ಅನುಪಲಭ್ಯಮಾನಮೂಲತ್ವೇ ಸತಿ ಮಹಾಜನಪರಿಗ್ರಹೀತವಾಕ್ಯತ್ವಂ- ವೇದತ್ವಂ (ಮೂಲ ಉಪಲಬ್ಧವಾಗಿರದೆ, ಮಹಾಜನಗಳು ಪರಿಗ್ರಹಿಸಿರುವದು- ವೇದ)' ಎಂದು ಹೇಳಿರುವ ಉದಯನಾಚಾರ್ಯರೂ ಒಪ್ಪಿರುತ್ತಾರೆ.(ಇದು ಹೇಗೆ ತಿಳಿಯುತ್ತದೆ ಎನ್ನುವದನ್ನು ಸ್ಫುಟಗೊಳಿಸುತ್ತಾರೆ)'ಅನುಪಲಭ್ಯಮಾನಮೂಲತ್ವಂ' ಎನ್ನುವುದರಿಂದ ಪ್ರತ್ಯಕ್ಷಾದಿಗಳು ಆಧಾರವಾಗಿರುವ ಗ್ರಂಥಗಳನ್ನು (ಮನುಸ್ಮೃತಿ ಮೊದಲಾದವುಗಳನ್ನು), 'ಮಹಾಜನಪರಿಗ್ರಹೀತತ್ವಂ' ಎನ್ನುವುದರಿಂದ ವಿಪ್ರಲಂಭಾದಿ ಮೂಲಕವಾದ ವಾಕ್ಯಗಳನ್ನು (ಬುದ್ಧಾದಿಗಳ ವಾಕ್ಯವನ್ನು) ವ್ಯಾವೃರ್ತಿಗೊಳಿಸುವುದರಿಂದ. (ವೇದಕ್ಕೆ) ಸರ್ವಜ್ಞನ ಜ್ಞಾನಮೂಲಕತ್ವನ್ನು ಒಪ್ಪಿದ್ದರೂ ಸಹ ಅದಕ್ಕೆ (ಈಶ್ವರನ ಜ್ಞಾನಕ್ಕೆ) ಪ್ರಾಮಾಣ್ಯವು ಇಲ್ಲದಿರುವುದರಿಂದ ಮೇಲೆ ಹೇಳಿದಂತೆ (ವೇದದ) ಲಕ್ಷಣವನ್ನು ಹೇಳಲು ಶಕ್ಯವಾಗುವುದು[2]. ಈ ಅನುಮಾನವಾದರೂ ವೈಶೇಷಾಕಾದಿಗಳನ್ನು ಉದ್ದೇಶಿಸಿ. ವೈಶೇಷಿಕರ ಸೂತ್ರ 'ಬುದ್ಧಿಪೂರ್ವಾ ವಾಕ್ಯಕೃತಿರ್ವೇದಃ' ಎಂದು (ವೇದಗಳು

1. ಮನ್ವಾದಿ ಸ್ಮೃತಿಗಳು ಮನ್ವಾದಿಗಳ ಪ್ರತ್ಯಕ್ಷವನ್ನು ಮೂಲವನ್ನಾಗಿ ಹೊಂದಿವೆ. ಬುದ್ಧಾದಿಗಳು ವಿಪ್ರಲಂಭನೆಗಾಗಿ ಉಪದೇಶಿಸಿರುವರು. ಜನಾದಿಗಳು ತಮ್ಮ ಭ್ರಾಂತಿಯಿಂದ ಉಪದೇಶಿಸಿರುವರು. ವೇದವಾದರೂ ಅಂತಹ ಯಾವುದೇ ಪ್ರತ್ಯಕ್ಷವನ್ನಾಗಲೀ, ಅಜ್ಞಾನಾದಿಗಳನ್ನಾಗಲೀ ಮೂಲವನ್ನಾಗಿ ಹೊಂದಿಲ್ಲ, ವಿಪ್ರಲಂಭನೆಯ ಉದ್ದೇಶವೂ ವೇದಕ್ಕೆ ಇಲ್ಲ ಎಂದು ಭಾವ.

2. ವೇದತ್ವಂ ನಾಮ- ಅಕರ್ತೃಕತ್ವೇನ ಪ್ರಸಿದ್ಧಿಮತ್ತ್ವಂ ಎಂದು. ಅಕರ್ತೃಕತ್ವೇನ ಪ್ರಸಿದ್ಧಿಮತ್ತ್ವ ಎಂದರೆ 'ಪ್ರತ್ಯಕ್ಷಾದಿಪ್ರಮಾಣಮೂಲಕವಾದವುಗಳು, ವಿಪ್ರಲಂಭಾದಿಗಳು ಉದ್ದೇಶವಾಗಿರುವುದು ಎಂಬ ಪ್ರಸಿದ್ಧಿಯು ಇಲ್ಲದಿರುವುದು' ಎಂದು ವ್ಯಾಖ್ಯಾನಿಸಲಾಗಿದೆ. ಈ ಎರಡೂ ರೀತಿಯ ಅಪ್ರಸಿದ್ಧಿಯನ್ನು ವೇದಕ್ಕೆ ವೈಶೇಷಿಕರೂ ಒಪ್ಪಿರುವರು. ಉದಯನಾಚಾರ್ಯರು 'ಅನುಪಲಂಭಮಾನಮೂಲತ್ವೇ ಸತಿ ಮಹಾಜನಪರಿಗ್ರಹೀತತ್ವಂ- ವೇದತ್ವಂ' ಎಂದು ಅನುಪಲಂಭಮಾನಮೂಲತ್ವ ಎಂಬ ವಿಶೇಷಣವನ್ನು ವೇದದ ಲಕ್ಷಣದಲ್ಲಿ ತಿಳಿಸಿರುವುದರಿಂದ. ಆದರೆ ವೈಶೇಷಿಕರು ವೇದವನ್ನು ಸರ್ವಜ್ಞನಾದ ಈಶ್ವರನ ಜ್ಞಾನದ

ಪುಟ 123ರಲ್ಲಿ.......

ಬುದ್ಧಿಪೂರ್ವಕವಾಗಿ ರಚಿತವಾದ ವಾಕ್ಯಗಳು' ಎಂದು) ಆದುದರಿಂದ ವೈಶೇಷಿಕರನ್ನು ಮಾತ್ರ ಉದ್ದೇಶಿಸಿ 'ವೇದ' ಶಬ್ದದ ಈ ನಿರ್ವಚನವನ್ನು ತಿಳಿಸಿ ವೇದತ್ವದ ಇರುವಿಕೆ, ಇಲ್ಲದಿರುವಿಕೆಯಿಂದ ಸಾಧ್ಯದ ಭಾವ-ಅಭಾವಗಳನ್ನು ವಿಕಲ್ಪಿಸಲಾಗುವುದು[1]. ಬೌದ್ಧರಾದರೋ ವೇದಗಳನ್ನು ವಿಪ್ರಲಂಭ ಮೂಲಕವಾದದ್ದು ಎಂದು ಒಪ್ಪಿರುವುದರಿಂದ ಅವರನ್ನು ಕುರಿತು ಪಕ್ಷದಲ್ಲಿ ಇರುವ 'ವೇದತ್ವ' ಎಂಬ ಯಾವ ಧರ್ಮವನ್ನು ಬೌದ್ಧರಿಂದ ಒಪ್ಪಲಾಗಿದೆಯೋ ಆ ವೇದತ್ವರೂಪ ಧರ್ಮವು ವೇದದಲ್ಲಿರುವುದರಿಂದ ಲೌಕಿಕವಾಕ್ಯದಲ್ಲಿ ಇಲ್ಲದಿರುವುದರಿಂದ ಸಾಧ್ಯದ ಭಾವಾಭಾವಗಳನ್ನು ಶಂಕಿಸಬೇಕು[2]. ಇಷ್ಟು ವಿಚಾರದಿಂದ 'ವಾಕ್ಯತ್ವಾತ್' ಇದೇ ಮುಂತಾದ ಹೇತುಗಳು ಅಪ್ರಯೋಜಕ-

---

...... ಪುಟ 122 ರಿಂದ

ಮೂಲಕವಾದದ್ದು ಎಂದು ಒಪ್ಪಿರುತ್ತಾರೆ. ಈಶ್ವರಪ್ರತ್ಯಕ್ಷಮೂಲಕತ್ವವನ್ನು ವೇದಕ್ಕೆ ಒಪ್ಪಿರುತ್ತಾರೆ. ಆದುದರಿಂದ ಅಕರ್ತೃಕತ್ವೇನ ಪ್ರಸಿದ್ಧಿಮತ್ತ್ವವು ಅವರ ರೀತಿಯಲ್ಲಿ ಪ್ರಾಪ್ತವಾಗಲಿಲ್ಲ ಎಂದು ಶಂಕಿಸಲು ಆಗದು- ಜ್ಞಾನದ ಪ್ರಾಮಾಣ್ಯವು ಆಪ್ತೋಕ್ತ್ಯಾದಿ ಗುಣಜನ್ಯ ಎಂದು ಅವರು ಒಪ್ಪಿರುವರು, ಈಶ್ವರಜ್ಞಾನವಾದರೋ ನಿತ್ಯ, ಹಾಗಾಗಿ ಗುಣಜನ್ಯತ್ವವು ಇಲ್ಲ, ಅಂದರೆ ಪ್ರಾಮಾಣ್ಯ ಇಲ್ಲ ಎಂದಾದೀತು. ಆದುದರಿಂದ ಈಶ್ವರ ಜ್ಞಾನದ ಬಗ್ಗೆ ಅವರ ಅಭಿಮತಿಯು ಹೀಗಿದೆ-

ಗುಣದೋಷಾಜನ್ಯತಯಾ ನಿತ್ಯತ್ವಾದೀಶ್ವರೀ ಪ್ರಮಾ ।
ಪ್ರಮಾಪ್ರಮಾಬಹಿರ್ಭೂತಾ ಪರತಸ್ತ್ವಾತ್ ತರ್ಯೋರ್ಮಮ ॥ ಎಂದು.

(ಜ್ಞಾನದಲ್ಲಿನ ಪ್ರಾಮಾಣ್ಯಾಪ್ರಾಮಾಣ್ಯಗಳು ಆಪ್ತೋಕ್ತತ್ವಾದಿಗುಣದಿಂದ ವಿಪ್ರಲಂಭಕತ್ವಾದಿ ದೋಷದಿಂದ ಜನ್ಯಗಳು. ನಿತ್ಯವಾದ ಈಶ್ವರನ ಪ್ರಮಾದಲ್ಲಿ ಗುಣದೋಷಜನ್ಯತ್ವವು ಇಲ್ಲ, ಆದುದರಿಂದ ಪ್ರಮಾಪ್ರಮಾಗಳಿಂದ ಬಹಿರ್ಭೂತವಾದದ್ದು.) ವೇದಗಳಿಗೆ ಈಶ್ವರ ಜ್ಞಾನ ಮೂಲತ್ವವಿದ್ದರೂ, ವೇದವು ಪ್ರತ್ಯಕ್ಷಾದಿಪ್ರಮಾಮೂಲರಹಿತ, ವಿಪ್ರಲಂಭಾದಿ ಉದ್ದೇಶರಹಿತ ಎಂಬ ಪ್ರಸಿದ್ಧಿಗೆ ವಿಷಯವಾಗಬಹುದು. ಈಶ್ವರಜ್ಞಾನವು ಪ್ರಮಾ-ಅಪ್ರಮಾ ಬಹಿರ್ಭೂತವಾದುದರಿಂದ ಎಂದು ಭಾವ.

1. ವೇದದಲ್ಲಿ ಅಕರ್ತೃಕತ್ವ ಪ್ರಸಿದ್ಧಿಮತ್ತ್ವವಿರುವುದರಿಂದ ಅಪೌರುಷೇಯತ್ವವಿದೆ. ಲೌಕಿಕವಾಕ್ಯ-ದಲ್ಲಿ ಅಕರ್ತೃಕತ್ವದ ಪ್ರಸಿದ್ಧಿ ಇಲ್ಲವಾದುದರಿಂದ ಪೌರುಷೇಯತ್ವವೇ ಇದೆ ಎಂದು ಸಾಧ್ಯವನ್ನು ವಿಕಲ್ಪಿಸಲಾಗಿದೆ, ಇದು ಕೇವಲ ವೈಶೇಷಿಕರೊಡನೆ ವಾದಿಸುವಾಗ ಮಾತ್ರ ಎಂದು ಭಾವ.

2. ವೇದದಲ್ಲಿ ವೇದತ್ವವಿರುವುದರಿಂದ ಪೌರುಷೇಯತ್ವವಿಲ್ಲ, ಲೌಕಿಕ ವಾಕ್ಯದಲ್ಲಿ ವೇದತ್ವವಿಲ್ಲದಿರುವುದರಿಂದ ಪೌರುಷೇಯತ್ವವೇ ಇದೆ ಎಂದು ಸಾಧ್ಯದ ಭಾವಾಭಾವಗಳನ್ನು ನಿರ್ಣಯಿಸಲಾಗುವುದು ಎಂದು ಭಾವ.

ವೆಂದೂ ಅನ್ಯಥಾಸಿದ್ಧವೆಂದೂ, ವ್ಯಾಪ್ಯತ್ವಾಸಿದ್ಧವೆಂದೂ ತಿಳಿಯುವುದು[1]. ವೇದವನ್ನು 'ಸಕರ್ತೃಕ' ಎಂದು ಒಪ್ಪದ ಪಕ್ಷದಲ್ಲಿ ಪ್ರಾಮಾಣ್ಯವೇ ಇಲ್ಲದಂತಾದೀತು. 'ಪ್ರಾಮಾಣ್ಯವು ಪರತಂತ್ರವಾದುದರಿಂದ' ಎಂಬ ಬಾಧಕವನ್ನು (ಬಾಧಕಶಂಕಾವನ್ನು)ಮುಂದೆ ನಿರಾಕರಿಸಲಾಗುವುದು[2].

**ಗೂಢಕರ್ತೃಕವಾಕ್ಯಗಳಲ್ಲಿ ವೇದವೆಂಬ ಭ್ರಾಂತಿಗೆ ಅವಕಾಶವಿಲ್ಲ**

**ನ ಚ ಕೇನಚಿತ್ ಕೃತ್ವಾ ವೇದ ಇತ್ಯುಕ್ತಂ ವೇದಸಮಂ, ಪರಮ್ಪರಾಭಾವಾತ್ ।**

ಯಾರೊಬ್ಬರಿಂದ ರಚಿತವಾದ ವಾಕ್ಯವನ್ನು ಅಕರ್ತೃಕ ಎಂದು ಪ್ರಸಿದ್ಧಿಗೊಳಿಸಿ, ಇದು ವೇದ ಎಂದು ಹೇಳಿದಲ್ಲಿ (ಅದು) ವೇದಸಮವಾಗಲಾರದು, (ಆ ವಾಕ್ಯಕ್ಕೆ) ಪರಂಪರೆಯು ಇಲ್ಲದಿರುವುದರಿಂದ.

**'ಅಕರ್ತೃಕತ್ವಪ್ರಸಿದ್ಧಿಮದ್ವಾಕ್ಯತ್ವಂ ವೇದತ್ವಮ್' ಇತಿ ಯದ್ವೇದಲಕ್ಷಣಮುಕ್ತಂ, ತದಯುಕ್ತಂ । ಗೂಢಕರ್ತೃಕಸ್ಯ ಕೃತಾಕರ್ತೃಕತ್ವಪ್ರಸಿದ್ಧಿಕಸ್ಯಾಪಿ ವಾಕ್ಯಸ್ಯ ವೇದತ್ವಪ್ರಸಙ್ಗಾತ್ । ಅನ್ಯಥಾಽತಿವ್ಯಾಪಕತ್ವಾದ್? ಇತ್ಯಾಹ 'ನ ಚ**

---

1. 'ವೇದಃ ಪೌರುಷೇಯಃ ವಾಕ್ಯತ್ವಾತ್ ಲೌಕಿಕವಾಕ್ಯವತ್ 'ಎಂಬ ಅನುಮಾನದಲ್ಲಿನ ವಾಕ್ಯತ್ವಹೇತುವು ಅಪ್ರಯೋಜಕ. ವೇದದಲ್ಲಿ ವಾಕ್ಯತ್ವವಿರಲಿ, ಪೌರುಷೇಯತ್ವವು ಇಲ್ಲದಿರಲಿ. ವಾಕ್ಯತ್ವಕ್ಕೂ ಪೌರುಷೇಯತ್ವಕ್ಕೂ ಕಾರ್ಯಕಾರಣತ್ವಾದಿರೂಪ ಯಾವುದೇ ವಿಧವಾದ ಪ್ರಯೋಜ್ಯ- ಪ್ರಯೋಜಕತ್ವವಿಲ್ಲ. ಆದುದರಿಂದ 'ವಿಪಕ್ಷೇ ಬಾಧಕಾಭಾವಾತ್' ಎಂದು ಹೇಳಬಹುದು. ಅಥವಾ ವ್ಯಾಪ್ಯತ್ವಾಸಿದ್ಧಿ. ವಾಕ್ಯತ್ವಕ್ಕೂ ಪೌರುಷೇಯತ್ವಕ್ಕೂ ಸಾಹಚರ್ಯ ಸಿದ್ಧವಾಗಿಲ್ಲ. ಅಂದರೆ ಅವುಗಳ ಸಾಹಚರ್ಯವನ್ನು ನಿರ್ಣಯಿಸುವ ಪ್ರಮಾಣವಿಲ್ಲ. ಮತ್ತು ಹೇತುವು ಉಪಾಧಿಗ್ರಸ್ತ ಎಂದು ಭಾವ.

2. 'ವೇದಃ ಸಕರ್ತೃಕಃ ವಾಕ್ಯತ್ವಾತ್' ಎಂಬ ಅನುಮಾನಕ್ಕೆ ವೇದದಲ್ಲಿ ವಾಕ್ಯತ್ವವಿರಲಿ ಸಕರ್ತೃಕತ್ವ ಇಲ್ಲದಿರಲಿ' ಎಂದು ಅಪ್ರಯೋಜಕಶಂಕೆಯನ್ನು ವೇದಾಂತಿಗಳು ಮಾಡಿದ್ದರು. ಹೀಗೆ ಅಪ್ರಯೋಜಕ ಶಂಕೆ ಮಾಡಲು ಆಗದು ಎಂದು ವೈಶೇಷಿಕರು ವಾದಿಸುವರು. ಏಕೆಂದರೆ ವೇದವನ್ನು 'ಸಕರ್ತೃಕ' ಎಂದು ಒಪ್ಪದ ಪಕ್ಷದಲ್ಲಿ ಅದಕ್ಕೆ ಪ್ರಾಮಾಣ್ಯವೇ ಸಿದ್ಧವಾಗಲಾರದು, ಪ್ರಾಮಾಣ್ಯವು ಆಪ್ತೋಕ್ತತ್ವಾದಿ ಗುಣಜನ್ಯ ಎಂದು ಅವರ ಮತ. ಕರ್ತೃಕತ್ವವಿಲ್ಲದೆ ಹೋದಲ್ಲಿ ಆಪ್ತೋಕ್ತತ್ವವಿಲ್ಲದಂತಾಗಿ ಪ್ರಾಮಾಣ್ಯವಿಲ್ಲದಂತಾದೀತು ಎಂದು. ಆದರೆ ವೇದಾಂತಿಗಳು ಪ್ರಾಮಾಣ್ಯವು ಗುಣಜನ್ಯವಲ್ಲ 'ಸ್ವತಃ' ಎನ್ನುವುದನ್ನು ಮುಂದೆ ಸಾಧಿಸಲಿದ್ದಾರೆ, ಹಾಗಾಗಿ ಈ ಬಾಧಕಶಂಕಾಕ್ಕೆ ಅವಕಾಶವಿಲ್ಲ ಎಂದು ಭಾವ.

**ಕೇನಚಿತ್**' ಇತಿ । **ವೇದ ಇತ್ಯುಕ್ತಂ** ಕೃತಾಕರ್ತೃಕತ್ವಪ್ರಸಿದ್ಧಿಕಂ ವಾಕ್ಯಂ **ವೇದಸಮಂ**- ಪ್ರಸಿದ್ಧವೇದವತ್ ವೇದತ್ವೋಪೇತಂ 'ಪ್ರಸಜ್ಯತೇ' ಇತಿ ಶೇಷಃ । ಹೇತುಮಾಹ 'ಪರಂಪರಾ...' ಇತಿ । ಅಕರ್ತೃಕತ್ವಪ್ರಸಿದ್ಧಿಮತ್ತ್ವಂ ನಾಮ- 'ಅನುಪಲಭ್ಯಮಾನಪ್ರತ್ಯಕ್ಷಾದಿಮೂಲತ್ವಮ್' ಇತ್ಯುಕ್ತಮ್ । ಅಸ್ಯ ಚಾಧ್ಯೇತೃಪರಂಪರಾಭಾವೇನ ಯಸ್ಮಿನ್ ವಿಚ್ಛೇದಃ ತದೀಯಪ್ರತ್ಯಕ್ಷಾದಿಮೂಲತ್ವಮನುಮಾನೇನೋಪಲಭ್ಯತ ಏವ । 'ವಿಮತಂ ವಾಕ್ಯಂ ಏತತ್-ಪ್ರತ್ಯಕ್ಷಾದಿಮೂಲಮ್, ಅಸ್ಮಿನ್ ವಿಚ್ಛಿನ್ನಪರಂಪರತ್ವಾತ್, ಯದ್ಯಸ್ಮಿನ್ ವಿಚ್ಛಿನ್ನಪರಂಪರಂ ವಾಕ್ಯಂ, ತತ್ ತತ್ಪ್ರತ್ಯಕ್ಷಾದಿಮೂಲಂ ಯಥಾ ಸಂಪ್ರತಿಪನ್ನಮ್' ಇತಿ । ಅತೋ ನೋಕ್ತಂ ವೇದಲಕ್ಷಣಂ ಗೂಢಕರ್ತೃಕೇಽಸ್ತೀತಿ ।

'ವೇದತ್ವ' ಎಂದರೆ 'ಅಕರ್ತೃಕತ್ವಪ್ರಸಿದ್ಧಿಮದ್ವಾಕ್ಯತ್ವ' ಎಂದು, ಯಾವುದನ್ನು ವೇದದ ಲಕ್ಷಣ ಎಂದು ಹೇಳಲಾಗಿದೆಯೋ ಅದು ಸರಿಯಾದುದಲ್ಲ. 'ಕರ್ತೃವು ಇಲ್ಲ' ಎಂದು ಪ್ರಸಿದ್ಧಿಯನ್ನು ಹೊಂದಿದ ಗೂಢಕರ್ತೃಕವಾದ ವಾಕ್ಯದಲ್ಲಿ ವೇದತ್ವವನ್ನು ಒಪ್ಪುವ ಪ್ರಸಂಗವು ಇರುವುದರಿಂದ. ಹಾಗಾಗದ ಪಕ್ಷದಲ್ಲಿ (ಗೂಢಕರ್ತೃಕವಾಕ್ಯವನ್ನು ವೇದವೆಂದು ಪರಿಗಣಿಸದ ಪಕ್ಷದಲ್ಲಿ, ವೇದದ ಲಕ್ಷಣವು) ಅತಿವ್ಯಾಪಕವಾಗುವುದರಿಂದ[1]. ಆದುದರಿಂದ ಉತ್ತರಿಸುತ್ತಾರೆ '**ನ ಚ ಕೇನಚಿತ್**' ಎಂದು. ಅಕರ್ತೃಕ ಎಂದು ಪ್ರಸಿದ್ಧವಾದ (ಗೂಢಕರ್ತೃಕ) ವಾಕ್ಯವನ್ನು **ವೇದ ಇತ್ಯುಕ್ತಂ** (ಇದು ವೇದ ಎಂದು ಹೇಳಿದಲ್ಲಿ), **ವೇದಸಮಂ**- ಪ್ರಸಿದ್ಧ ವೇದದಂತೆ, (ಇದೂ ಸಹ) ವೇದತ್ವೋಪೇತವಾದದ್ದು 'ಪ್ರಸಜ್ಯೇತ- (ಆಗಲಿ)' ಎಂದು ವಾಕ್ಯವನ್ನು ಪೂರ್ಣ ಮಾಡಿಕೊಳ್ಳಬೇಕು[2]. (ಗೂಢಕರ್ತೃಕ

---

1. ಗೂಢಕರ್ತೃಕವಾಕ್ಯದಲ್ಲಿ ಅಕರ್ತೃಕತ್ವಪ್ರಸಿದ್ಧಿಮತ್ತ್ವಂ ಎನ್ನುವ ವೇದದ ಲಕ್ಷಣವಿದೆ ಆದರೆ ಅದರಲ್ಲಿ ವೇದತ್ವವಿಲ್ಲ ಆದುದರಿಂದ ವೇದದ ಲಕ್ಷಣವು ಅತಿವ್ಯಾಪ್ತವಾಗುವುದು ಎಂದು ಭಾವ.
2. ಆಚಾರ್ಯರು 'ಕೇನ ಚಿತ್ ಕೃತ್ವಾ ವೇದ ಇತ್ಯುಕ್ತಂ ವೇದಸಮಂ' ಎಂದು ತಿಳಿಸಿದ್ದಾರೆ. ವಾಕ್ಯದ ಮೇಲ್ನೋಟದ ಅಭಿಪ್ರಾಯವು - 'ವ್ಯಕ್ತಿ ಓರ್ವನು ಗುಟ್ಟಾಗಿ ವಾಕ್ಯವನ್ನು ನಿರ್ಮಿಸಿ, 'ಇದು ವೇದ' ಎಂದು ಹೇಳಿದಲ್ಲಿ ಅದು ವೇದದ ಸಮವಾಗಬೇಕು' ಎಂದು. ಅಂದರೆ ಅದರಲ್ಲಿ ವೇದದ ಲಕ್ಷಣವಾದ 'ಅಕರ್ತೃಕತ್ವ ಪ್ರಸಿದ್ಧಿಮದ್ವಾಕ್ಯತ್ವವು' ಇರುವುದರಿಂದ ಅದನ್ನು ವೇದ ಸಮವೆಂದು ಭಾವಿಸಬೇಕಾದೀತು ಎಂದು. ಆದರೆ ಗೂಡಕರ್ತೃಕ ವಾಕ್ಯಕ್ಕೆ 'ಕರ್ತಾ' ಅಪ್ರಸಿದ್ಧನೇ ಹೊರತು 'ಅಕರ್ತೃಕತ್ವವು- ಕರ್ತೃವೇ ಇಲ್ಲ' ಎಂದು ಪ್ರಸಿದ್ಧಿಯು ಇಲ್ಲ. 'ಈ ವಾಕ್ಯದ ಕರ್ತೃವು

ಪುಟ 126ರಲ್ಲಿ........

ವಾಕ್ಯವು ಏಕೆ ವೇದದ ಸಮವಲ್ಲ ಎನ್ನುವದಕ್ಕೆ )ಕಾರಣವನ್ನು ತಿಳಿಸುತ್ತಾರೆ **'ಪರಂಪರಾ'** ಎಂದು. 'ಅಕರ್ತೃಕತ್ವಪ್ರಸಿದ್ಧಿ' ಎಂದರೆ '(ಆ ವಾಕ್ಯದ ವಿಷಯವು) ಪ್ರತ್ಯಕ್ಷಾದಿ ಪ್ರಮಾಣ ಮೂಲಕವಾದದ್ದಲ್ಲ' ಎಂದು ವ್ಯಾಖ್ಯಾನಿಸಲಾಗಿದೆ. ಈ (ಗೂಢಕರ್ತೃಕ) ವಾಕ್ಯಕ್ಕಾದರೋ ಅಧ್ಯೇತೃಪರಂಪರೆ ಇಲ್ಲದಿರುವುದರಿಂದ ಎಲ್ಲಿ (ಅಧ್ಯೇತೃ ಪರಂಪರೆಯ) ವಿಚ್ಛೇದವೋ, ಆತನ ಪ್ರತ್ಯಕ್ಷಾದಿ ಮೂಲಕವಾದದ್ದು ಎಂದು ಅನುಮಾನದಿಂದ ಅವಗತವೇ ಆಗುವುದು. (ಆ ಅನುಮಾನದ ಆಕಾರವನ್ನು ತಿಳಿಸುತ್ತಾರೆ.) 'ವಿವಾದಕ್ಕೆ ವಿಷಯವಾದ ವಾಕ್ಯವು (ಗೂಢಕರ್ತೃಕ ವಾಕ್ಯವು) ಈ ವ್ಯಕ್ತಿಯ ಪ್ರತ್ಯಕ್ಷದ ಮೂಲಕವಾದದ್ದು, ಆತನಲ್ಲಿ ಪರಂಪರೆಯು ವಿಚ್ಛಿನ್ನವಾದುದರಿಂದ, ಯಾವ ವಾಕ್ಯವು ಯಾರಲ್ಲಿ ಪರಂಪರೆಯ ವಿಚ್ಛಿತ್ತಿ ಯನ್ನು ಹೊಂದಿರುವುದೋ ಆ ವಾಕ್ಯವು ಆ ವ್ಯಕ್ತಿಯ ಪ್ರತ್ಯಕ್ಷಾದಿ ಪ್ರಮಾಣ ಮೂಲಕವಾದದ್ದು. (ಈರ್ವರಿಗೂ) ಸಮ್ಮತವಾದ ವಾಕ್ಯಗಳಂತೆ' ಆದುದರಿಂದ ಗೂಢಕರ್ತೃಕವಾಕ್ಯದಲ್ಲಿ ಹಿಂದೆ ಹೇಳಿದ ವೇದದ ಲಕ್ಷಣವು ('ಅನುಪಲಭ್ಯ-ಮಾನಪ್ರತ್ಯಕ್ಷಾದಿಮೂಲತ್ವಂ' ಎಂಬುವ ಲಕ್ಷಣವು) ಇಲ್ಲ[1].

---

...... ಪುಟ 125 ರಿಂದ

ಗೂಢ - ಯಾರು ಎಂದು ತಿಳಿಯದೇ ಹೊರತು, 'ಕರ್ತೃವೇ ಇಲ್ಲ' ಎಂದು ತಿಳಿಸಲಾಗಿಲ್ಲ. ಆದುದರಿಂದ ವೇದಲಕ್ಷಣವಾದ ಅಕರ್ತೃಕತ್ವಪ್ರಸಿದ್ಧಿಮತ್ತ್ವವು ಗೂಢಕತೃಥಕವಾಕ್ಯದಲ್ಲಿ ಇಲ್ಲದಿರುವುದರಿಂದ 'ಗೂಢಕರ್ತೃಕವಾಕ್ಯವೂ ವೇದಸಮವಾಗಲಿ' ಎಂದು ಪ್ರಶ್ನಿಸುವುದು ತಪ್ಪಲ್ಲವೇ ? ಈ ಸಂಶಯವನ್ನು ನಿವಾರಿಸಲು ಟೀಕಾಚಾರ್ಯರು ಆಚಾರ್ಯರ ಅಭಿಪ್ರಾಯ ವನ್ನು ಸ್ಫುಟಗೊಳಿಸುವರು- 'ಕೇನಚಿತ್ ಕೃತ್ವಾ' ಎಂದು. 'ಯಾರಿಂದಲೋ ವಾಕ್ಯ ಒಂದನ್ನು ರಚಿಸಿದ್ದು' ಎಂದು ಅರ್ಥೈಸದೇ 'ಕೇನಚಿತ್ ರಚಿತಂ ವಾಕ್ಯಂ ಅಕರ್ತೃಕತ್ವಪ್ರಸಿದ್ಧಿಂ ಕೃತ್ವಾ ' ಎಂದು ಅರ್ಥೈಸಲಾಗಿದೆ. ಅಂದರೆ ಗುಟ್ಟಾಗಿ ರಚಿಸಿದ ವಾಕ್ಯವನ್ನು 'ಅಕರ್ತೃಕ' ಎಂದೇ ಪ್ರಸಿದ್ಧಗೊಳಿಸಲಾಗಿದೆ. ಆಗ ಇಂತಹ ವಾಕ್ಯವು 'ವೇದ ಎಂದು ವ್ಯವಹೃತವಾಗಲಿ' ಎಂಬ ಸಂದೇಹಕ್ಕೆ ಎಡೆ ಇದೆ ಎಂದು ಭಾವ.

1. ಕಾಳಿದಾಸಾದಿ ಕವಿಗಳಿಂದ ರಚಿತವಾದ ರಘುವಂಶಾದಿ ಕಾವ್ಯವಾಕ್ಯಗಳ ಅಧ್ಯಯನದ ಪರಂಪರೆಯು ಕಾಳಿದಾಸಾದಿಗಳಲ್ಲಿ ವಿಚ್ಛಿತ್ತಿಯನ್ನು ಹೊಂದುವುದು. ಕಾಳಿದಾಸನಿಂದ ಹಿಂದಿರುವರು ಅದನ್ನು ಅಭ್ಯಸಿಸಲು ಶಕ್ಯವಿಲ್ಲ ತಾನೇ? ತನ್ನಿಮಿತ್ತ ಆ ವಾಕ್ಯಗಳು ಆತನ ಪ್ರತ್ಯಕ್ಷಾದಿ ಮೂಲಕವಾದದ್ದು ಎಂದು ಊಹಿಸಲಾಗುವುದು. ಅದರಂತೆ ಗೂಢಕತೃಕವಾಕ್ಯಕ್ಕೆ ಅಧ್ಯಯನಪರಂಪರೆಯ ವಿಚ್ಛಿತ್ತಿಯು ಇರುವುದರಿಂದ ಆ ವಾಕ್ಯಗಳು ಯಾವುದೋ ವ್ಯಕ್ತಿಯ ಪ್ರತ್ಯಕ್ಷಾದಿಮೂಲವಾದದ್ದು ಎಂದು ಊಹಿಸಲಾಗುವುದು ಎಂದು ಭಾವ.

**ಸ್ವಯಂಪ್ರತಿಭಾತ ವೇದಗಳಲ್ಲಿ ವೇದಲಕ್ಷಣ**

**ನ ಚ ಸ್ವಯಂಪ್ರತಿಭಾತವೇದೈಃ ದೃಷ್ಟಮವೇದವಾಕ್ಯಂ ಭವತಿ, ಪರಮ್ಪರಾಸಿದ್ಧವೇದವಾಕ್ಯಾನುಸಾರಿತ್ವಾತ್ ।**

ವೇದಗಳನ್ನು ಸ್ವಯಂ ಸಾಕ್ಷಾತ್‌ಕರಿಸಿಕೊಳ್ಳುವ ವ್ಯಕ್ತಿಗಳಿಂದ ದೃಷ್ಟವಾದ (ವೇದವಾಕ್ಯವು) ಅವೇದವಾಕ್ಯವಾಗಲಾರದು, ಪರಂಪರೆಯಿಂದ ಸಿದ್ಧವಾದ ವೇದವಾಕ್ಯದ ಅನುಸಾರಿಯಾದುದರಿಂದ.

ನನು, ನಾಧ್ಯೇತೃಪರಂಪರಾಽಭಾವೇನ ಗೂಢಕರ್ತೃಕಸ್ಯ ವೇದಲಕ್ಷಣಾಭಾವೋಽನುಮಾತುಂ ಶಕ್ಯತೇ । 'ಅಧ್ಯಯನೇನ ವಿನಾ ವಸಿಷ್ಠಾದಯೋ ವೇದಾನ್ ಪಶ್ಯನ್ತಿ' ಇತಿ ಭವದಙ್ಗೀಕಾರಾತ್ । ತತಶ್ಚ ಸ್ವಯಮೇವ ಪ್ರತಿಭಾತೋ ವೇದೋ ಯೇಷಾಂ ತೈರ್ದೃಷ್ಟಸ್ಯ ಪರಂಪರಾಽಭಾವೇನ ವೇದಲಕ್ಷಣಾಭಾವಾಪತ್ತ್ಯಾ ವೇದತ್ವಾಭಾವಾಪತ್ತೇಃ । ಅನ್ಯಥಾಽನೈಕಾಂತ್ಯಪ್ರಸಙ್ಗಾತ್? ಇತ್ಯತ ಆಹ **'ನ ಚ ಸ್ವಯಂ'** ಇತಿ । **ಭವತಿ** - ಪ್ರಸಜ್ಯತ ಇತ್ಯರ್ಥಃ । ಅಪ್ರಸಙ್ಗೇ ಹೇತುಮಾಹ **'ಪರಂಪರಾಸಿದ್ಧ..'** ಇತಿ । ಅಧ್ಯಾಪಕಪರಂಪರಾವತ್ತ್ವೇನ ಯತ್ ಪ್ರಸಿದ್ಧಂ ವೇದವಾಕ್ಯಂ **ತದನುಸಾರಿತ್ವಾತ್**- ತತ್ ಸಮಾನತ್ವಾತ್ ।

ಸರಿ, 'ಗೂಢಕರ್ತೃಕವಾಕ್ಯದಲ್ಲಿ ವೇದದ ಲಕ್ಷಣವು (ಅಪ್ರಸಿದ್ಧ ಕರ್ತೃಕತ್ವವು) ಇಲ್ಲ ಅಧ್ಯೇತೃವಿನ ಪರಂಪರೆ ಇಲ್ಲದಿರುವುದರಿಂದ' ಎಂದು ಅನುಮಾನವನ್ನು ಹೇಳಲು ಅವಕಾಶವಿಲ್ಲ. 'ಅಧ್ಯಯನವಿಲ್ಲದೇ (ಗುರುಗಳಿಂದ ಉಪದೇಶ ವಿಲ್ಲದೆ) ವಸಿಷ್ಠಾದಿ ಮುನಿಗಳು ವೇದಗಳನ್ನು ಸಾಕ್ಷಾತ್‌ಕರಿಸಿಕೊಂಡಿರುವರು' ಎಂದು ನೀವು ಅಂಗೀಕರಿಸಿರುವುದರಿಂದ.[1] ಆದುದರಿಂದ (ಸ್ವಯಂ ಪ್ರತಿಭಾತವಾದ ವೇದಗಳು ಇವೆ ಎಂದು ಒಪ್ಪಿದ್ದರಿಂದ) ಯಾರಿಗೆ ವೇದಗಳು ಸ್ವಯಂ

1. ಜನ್ಮಾಂತರೇ ಶ್ರುತಾಸ್ತಾಸ್ತು ....' ಎನ್ನುವ ಪ್ರಮಾಣವನ್ನು ಮುಂದೆ ಹೇಳುವುದರಿಂದ ಎಂದು ಭಾವ.

ಪ್ರತಿಭಾತವಾಗಿದೆಯೋ ಅವರಿಂದ[1] ಪ್ರತ್ಯಕ್ಷೀಕರಿಸಿಕೊಂಡ ವೇದವಾಕ್ಯಕ್ಕೆ ಪರಂಪರೆಯು ಇಲ್ಲದಿರುವುದರಿಂದ ವೇದದ ಲಕ್ಷಣವು ಇಲ್ಲದಿರುವ ಪ್ರಸಂಗವು ಒದಗೀತು. ಹಾಗಾಗದ ಪಕ್ಷದಲ್ಲಿ (ಸ್ವಯಂ ಪ್ರತಿಭಾತವಾದ ವಾಕ್ಯಗಳಿಗೆ ವೇದತ್ವವನ್ನು ಒಪ್ಪಿದರೆ) (ಹೇತುವು) ವ್ಯಭಿಚಾರಿಯಾದೀತು[2]. ಆದುದರಿಂದ ಉತ್ತರಿಸುತ್ತಾರೆ '**ನ ಚ ಸ್ವಯಂ**' ಎನ್ನುವುದರಿಂದ. **ಭವತಿ**- ಪ್ರಾಪ್ತವಾದೀತು ಎಂದು ಅರ್ಥ. ( ಈ ಅನಿಷ್ಟ)ಪ್ರಸಂಗವು ಏಕೆ ಇಲ್ಲ? ಎನ್ನುವುದಕ್ಕೆ ಕಾರಣವನ್ನು ಹೇಳುತ್ತಾರೆ. '**ಪರಂಪರಾಸಿದ್ಧ...**' ಎನ್ನುವುದರಿಂದ. 'ಅಧ್ಯಾಪಕ ಪರಂಪರೆಯಿಂದ ಪ್ರಾಪ್ತವಾದದ್ದು' ಎಂದು ಯಾವ ವೇದ ವಾಕ್ಯವು ಪ್ರಸಿದ್ಧವಾಗಿದೆಯೋ, **ತದನುಸಾರಿತ್ವಾತ್**- ಅದಕ್ಕೆ ಸಮಾನವಾದುದರಿಂದ.

**ಏತದುಕ್ತಂ ಭವತಿ- ಪರಂಪರಾ ನಾಮ ಅಧ್ಯೇತೃಣಾಮಧ್ಯಾಪಕಾನಾಂ ಚ 'ಪೂರ್ವತನಮೇವೇದಮಧೀಮಹೇಽಧ್ಯಾಪಯಾಮಶ್ಚ ' ಇತಿ ಪ್ರತಿಪತ್ತಿಃ । ನ ತ್ವಧ್ಯಯನಾವಿಚ್ಛೇದಃ । ತದಭಾವಶ್ಚ, ಗೂಢಕರ್ತೃಕಸ್ಯ ವೇದಲಕ್ಷಣರಾಹಿತ್ಯೇ ಹೇತುತ್ವೇನೋಪಾತ್ತಃ । ನ ಚಾಸೌ ಸ್ವಯಂ ಪ್ರತಿಭಾತ-ವೇದೈರ್ದೃಷ್ಟೇ ವರ್ತತೇ । ತಸ್ಯಾಪಿ ಪರಂಪರಾಸಿದ್ಧವೇದವಾಕ್ಯಾನ್ತರವತ್ 'ಪ್ರಾಕ್ತನಮೇವೈತತ್' ಇತಿ ತತ್ಪ್ರತಿಪತ್ತಿವಿಷಯತ್ವಾತ್ । ಅತೋ ನಾವೇದತ್ವಪ್ರಸಙ್ಗೋ ನಾಪ್ಯನ್ಯತರಾನೈಕಾನ್ತ್ಯಮಿತಿ ।**

---

1. ಮೂಲದಲ್ಲಿ 'ನ ಚ ಸ್ವಯಂ ಪ್ರತಿಭಾತವೇದೈರ್ದೃಷ್ಟಮ್.... । ಎಂದು ಇದೆ. 'ಸ್ವಯಂ ಪ್ರತಿಭಾತ ವೇದಗಳಿಂದ ಕಂಡ' ಎಂದು ಅರ್ಥವು ಝಟಿತಿ ಭಾಸವಾಗುವುದು. ಈ ಅರ್ಥವು ಪ್ರಕೃತಕ್ಕೆ ವಿಸಂಗತ, ಆದುದರಿಂದ ಟೀಕೆಯಲ್ಲಿ ಬಹುವ್ರೀಹಿಸಮಾಸ ಎಂದು ಸೂಚಿಸುತ್ತಿರುವರು. ಆಗ ಈ ಮೂಲವಾಕ್ಯದ ಭಾವವು 'ವೇದಗಳನ್ನು ಸ್ವಯಂ ಸಾಕ್ಷಾತ್ಕರಿಸಿಕೊಂಡ ವ್ಯಕ್ತಿಗಳಿಂದ ದೃಷ್ಟವಾದ' ಎಂಬ ಪ್ರಕೃತ ಸಂಗತವಾದ ಅರ್ಥವನ್ನು ತಿಳಿಸಿದಂತಾಗುವುದು.

2. ಗೂಢಕರ್ತೃಕ ವಾಕ್ಯದಲ್ಲಿ ಅಧ್ಯೇತೃ ಪರಂಪರೆಯು ಇಲ್ಲದಿರುವುದರಿಂದ ವೇದತ್ವವು ಇಲ್ಲ ಎಂದು ಹಿಂದೆ ಅನುಮಾನಿಸಲಾಗಿದೆ. ಸ್ವಯಂಪ್ರತಿಭಾತವಾದ ವೇದದಲ್ಲೂ ಅಧ್ಯೇತೃಪರಂಪರೆಯು ಇಲ್ಲದಿರುವುದರಿಂದ ಅದೂ ಅವೇದಗಳಾಗಲಿ, ಅವು ವೇದಗಳು ಎಂದು ಒಪ್ಪಿದಲ್ಲಿ ಅಧ್ಯೇತೃಪರಂಪರಾಭಾವಾತ್ ಎನ್ನುವ ಹೇತುವು ವ್ಯಭಿಚರಿತವಾಗುವುದು ಎಂದು ಭಾವ.

ಇಷ್ಟನ್ನು ಹೇಳಿದಂತಾಗುವುದು. (ಅಧ್ಯೇತೃ)ಪರಂಪರಾ' ಎಂದರೆ ಕಲಿಯುವವಗೆ ಮತ್ತು ಕಲಿಸುವವಗೆ 'ಇದನ್ನು ಈ ಮೊದಲೇ(ಜನ್ಮಾಂತರದಲ್ಲಿ) ಅಭ್ಯಸಿಸಿದ್ದೆ' ಮತ್ತು 'ಈ ಹಿಂದೆ ಇದನ್ನು ಉಪದೇಶಿಸಿದ್ದೆ' ಎಂಬ ಅರಿವು[1]. (ವಿಚ್ಛಿನ್ನ ಪರಂಪರತ್ವಾತ್ ಅಂದರೆ) ಕೇವಲ ಅಧ್ಯಯನದ ವಿಚ್ಛೇದನವಲ್ಲ. ಗೂಢಕರ್ತೃಕವಾಕ್ಯದಲ್ಲಿ ವೇದದ ಲಕ್ಷಣವು ಇಲ್ಲ ಎಂದು ಸಾಧಿಸಲು ಅದರ ಅಭಾವವನ್ನು ಹೇತುವನ್ನಾಗಿ ಸ್ವೀಕರಿಸಲಾಗಿದೆ[2]. ಸ್ವಯಂ ಪ್ರತಿಭಾತ ವೇದಿಗಳು ಕಂಡ ವಾಕ್ಯಗಳಲ್ಲಿ (ಈ ಹಿಂದೆ ಹೇಳಿದ) ಅರಿವಿನ ಅಭಾವವಿಲ್ಲ. 'ಈ ವಾಕ್ಯಗಳೂ ಸಹ ಪರಂಪರಾಸಿದ್ಧವಾದ (ಪ್ರಸಿದ್ಧ ವೇದ ವಾಕ್ಯಗಳಂತೆ) ಪ್ರಾಚೀನವಾದವುಗಳು ಇವು' ಎಂಬ ಅರಿವಿಗೆ ವಿಷಯವಾಗಿರುವುದರಿಂದ. ಆದುದರಿಂದ (ಪ್ರತ್ಯಕ್ಷೀಕರಿಸಿಕೊಂಡ ವಾಕ್ಯಗಳಲ್ಲಿ) ವೇದತ್ವಾಭಾವಕ್ಕೆ ಅವಕಾಶವಿಲ್ಲ, (ವಿಚ್ಛಿನ್ನ ಪರಂಪರತ್ವಾತ್' ಎಂಬ ಹೇತುವಿಗೆ) ಅನ್ಯತರಾನೈಕಾಂತ್ಯವು (ವಾದಿಗಳ ಅಭಿಮತದಂತೆಯೂ)ಇಲ್ಲ[3].

---

1.ವೇದವನ್ನು ಸಾಕ್ಷಾತ್‌ಕರಿಸಿಕೊಂಡ ಮುನಿಯು 'ಈ ಹಿಂದಿನ ಜನ್ಮದಲ್ಲಿ ನಾನು ಅಭ್ಯಸಿಸಿದ ವೇದವನ್ನೇ ಇಂದು ಕಂಡು ಕೊಂಡಿರುವೆ' ಎಂಬುದಾಗಿ ತಿಳಿದಿರುತ್ತಾನೆ. ಅಧ್ಯಾಪಕ ಮುನಿಯು ಈ ವ್ಯಕ್ತಿಯು ಸಾಕ್ಷಾತ್‌ಕರಿಸಿಕೊಂಡ ವೇದವಾಕ್ಯಗಳು ಈ ಹಿಂದೆ ಅಧ್ಯಯನದ ಪರಂಪರೆಯಲ್ಲಿ ಇದ್ದವುಗಳು ಎಂಬುದನ್ನು ನೆನಪಿಸಿಕೊಳ್ಳುತ್ತಾನೆ. ಹಾಗಾಗಿ ಆ ವಾಕ್ಯಗಳಿಗೆ ಅಧ್ಯಯನ ಪರಂಪರೆಯ ವಿಚ್ಛಿತ್ತಿ ಇಲ್ಲ ಎಂದು ಭಾವ.

2. ವಿಮತಂ ವಾಕ್ಯಂ ಏತತ್ ಪ್ರತ್ಯಕ್ಷಾದಿ ಮೂಲಂ ಅಸ್ಮಿನ್ ವಿಚ್ಛಿನ್ನಪರಂಪರತ್ವಾತ್' ಎಂಬುವ ಅನುಮಾನದಲ್ಲಿ 'ವಿಚ್ಛಿನ್ನ ಪರಂಪರತ್ವಾತ್' ಎಂಬುವ ಹೇತುವಿನ ಭಾವ ಹೀಗಿದೆ. 'ಸಾಕ್ಷಾತ್‌ಕರಿಸಿಕೊಂಡ ವಾಕ್ಯವು ಈ ಹಿಂದಿನ ಅಧ್ಯಯನ ಪರಂಪರೆಯಲ್ಲಿ ಇದ್ದುದು' ಎಂಬ ಅರಿವು ಗುರು-ಶಿಷ್ಯರಲ್ಲಿ ಇರುವುದು. ಈ ರೀತಿಯ ಅರಿವಿನ ಅಭಾವ ಪ್ರಕೃತದಲ್ಲಿ ಹೇತು. ಗೂಢಕರ್ತೃಕವಾಕ್ಯದಲ್ಲಿ ಕರ್ತೃವಿಗೆ ಈ ಹಿಂದೆ ಅಧ್ಯಯನದಲ್ಲಿದ್ದುದು ಎಂಬ ಅರಿವಿಲ್ಲ, ಅಧ್ಯಾಪಕನಿಗೂ ಆ ಅರಿವಿಲ್ಲ. ಆದುದರಿಂದ ಆ ವಾಕ್ಯದಲ್ಲಿ ವೇದತ್ವ ಲಕ್ಷಣವಿಲ್ಲ ಎಂದು ಸಾಧಿಸಬಹುದು ಎಂದು ಭಾವ.

3. ಸಿದ್ಧಾಂತಿಗಳು ಮಾತ್ರ ವೇದವನ್ನು ಅಪೌರುಷೇಯ ಎಂದು ಒಪ್ಪಿರುತ್ತಾರೆ. ಪ್ರತಿವಾದಿಗಳು ಸಮಗ್ರವೇದಗಳಿಗೆ ಪೌರುಷೇಯತ್ವವನ್ನೇ ಒಪ್ಪಿರುವದರಿಂದ ಟೀಕೆಯಲ್ಲಿ 'ಅನ್ಯತರಾ-ನೈಕಾಂತ್ಯಂ' ಎಂದು ಹೇಳಿರುವರು.

**ಸಾಮಾನ್ಯನು ತನ್ನನ್ನು ವೇದದ್ರಷ್ಟಾ ಎಂದು ಬಿಂಬಿಸಿಕೊಳ್ಳಲಾರನು**

**ವೇದದ್ರಷ್ಟೄಣಾಮುಕ್ತಗುಣತ್ವಾಚ್ಚ ತೇಷಾಮ್ । ಉಕ್ತಂ ಚ ಬ್ರಹ್ಮಾಣ್ಡೇ-**

**ವಿಂಶಲ್ಲಕ್ಷಣತೋಽನೂನಸ್ತಪಸ್ವೀ ಬಹುವೇದವಿತ್ ।**
**ವೇದ ಇತ್ಯೇವ ಯಂ ಪಶ್ಯೇತ್ ಸ ವೇದೋ ಜ್ಞಾನದರ್ಶನಾತ್ ॥ ಇತಿ ।**

ಆ ವೇದದ್ರಷ್ಟೃಗಳಿಗೆ (ಶಾಸ್ತ್ರಗಳಲ್ಲಿ )ತಿಳಿಸಿದ (ಕೆಲವು) ಗುಣಗಳು ಇರುವುದರಿಂದಲೂ(ಸಾಮಾನ್ಯಮನುಷ್ಯನು ತನ್ನನ್ನು ವೇದದ್ರಷ್ಟಾ ಎಂದು ಬಿಂಬಿಸಿಕೊಳ್ಳಲು ಶಕ್ಯವಿಲ್ಲ) . ಬ್ರಹ್ಮಾಂಡಪುರಾಣದಲ್ಲಿ ತಿಳಿಸಲಾಗಿದೆ- (ವೇದದ್ರಷ್ಟೃವಿನ ಗುಣಗಳಲ್ಲಿ) ಇಪ್ಪತ್ತು ಗುಣಗಳಿಗೆ ಕಡಿಮೆ ಇಲ್ಲದ ಗುಣಗಳನ್ನು ಹೊಂದಿರುವ, ತಪಸ್ವಿಗಳಾದ, ಅನೇಕ ವೇದಗಳನ್ನು ತಿಳಿದಿರುವ (ವ್ಯಕ್ತಿಯು ದಿವ್ಯ) ಜ್ಞಾನದಿಂದ ಸಾಕ್ಷಾತ್ಕರಿಕೊಳ್ಳುವುದರಿಂದ ಯಾವುದನ್ನು 'ವೇದ' ಎಂದು ಕಾಣುವನೋ, ಅದು ವೇದ, ಎಂದು.

**ನನು, ಏವಂ ತರ್ಹಿ, ಗೂಢಕರ್ತೃಕೇ ಪರಂಪರಾಽಭಾವಸ್ಯ ಹೇತೋ-ರಸಿದ್ಧಿಃ ಸ್ಯಾತ್ । ವಸಿಷ್ಠಾದಯ ಇವ ಗೂಢೋಽಪಿ ಕರ್ತಾ 'ಪ್ರಾಕ್ಸಿದ್ಧ-ಮೇವೇದಂ ಮಯಾ ದೃಷ್ಟಮ್' ಇತಿ ವದತ್ಯೇವೇತಿ ಚೇನ್ನ । ತದ್ವಚನಸ್ಯಾನೃತತ್ವಾತ್ । ನನು,'ವಸಿಷ್ಠಾದಯೋ ವೇದಾನಾಂ ಪುರಾತನಾನಾಂ ದ್ರಷ್ಟಾರ ಏವ ತಥಾ ವದನ್ತಿ, ಅಯಂ ತು, ಅದೃಷ್ಟ್ವೈವಾನೃತಭಾಷೀ' ಇತಿ ಕುತೋ ನಿಶ್ಚಯಃ ? ತಥಾ ಚ ಸನ್ದಿಗ್ಧಾನೈಕಾನ್ತ್ಯಂ , ಸಂದಿಗ್ಧಾಸಿದ್ಧಿರ್ವಾ? ಇತ್ಯತ ಆಹ 'ವೇದದ್ರಷ್ಟೄಣಾಮ್' ಇತಿ ।**

ಸರಿ, ಹೀಗೆ ಹೇಳುವುದಾದಲ್ಲಿ , ಗೂಢಕರ್ತೃಕವಾಕ್ಯದಲ್ಲಿ 'ಪರಂಪರಾಽ-ಭಾವಾತ್' ಎಂಬ ಹೇತುವು ಅಸಿದ್ಧವಾದೀತು. ವಶಿಷ್ಠಾದಿಗಳಂತೆ ಗೂಢ-ಕರ್ತೃವೂ ಸಹ 'ಹಿಂದೆ ಪ್ರಸಿದ್ಧವಾದುದನ್ನೇ ನಾನು ಕಂಡಿರುವೆ' ಎಂದೇ ಹೇಳುತ್ತಾನೆ ಎಂದೆನ್ನಲಾಗದು[1]. ಆತನ ಮಾತುಗಳು ಸುಳ್ಳಾದುದರಿಂದ.

1. ಗೂಢಕರ್ತೃವು ಮೋಸಗಾರ, ಆದುದರಿಂದ ಆತ 'ಈ ವಾಕ್ಯಗಳು ಹಿಂದಿನ ಅಧ್ಯಯನ ಪರಂಪರೆಯಲ್ಲಿ ಇತ್ತು' ಎಂದೇ ವಾದಿಸುವನು ಆದುದರಿಂದ 'ಅಚ್ಛಿನ್ನಪರಂಪರಾತ್ವವನ್ನು' ಆತನು ಒಪ್ಪದಿರುವುದರಿಂದ ಹೇತ್ವಸಿದ್ಧಿ ಎಂದು ಶಂಕಿಸಬಹುದಲ್ಲವೆ? ಎಂದು ಪೃಚ್ಛಕನ ಭಾವ.

ಹಾಗಾದಲ್ಲಿ, 'ಪುರಾತನವಾದ ವೇದಗಳ ದ್ರಷ್ಟೃಗಳಾದ ವಸಿಷ್ಠಾದಿಗಳೇ ಹಾಗೆ (ಸತ್ಯವನ್ನು) ಹೇಳುತ್ತಾರೆ, (ಗೂಢಕರ್ತೃವು ವೇದಗಳನ್ನು) ಕಾಣದೆ ಸುಳ್ಳನ್ನು ನುಡಿಯುವನು' ಎಂದು ಹೇಗೆ ನಿಶ್ಚಯವಾಗುವುದು ? ಹಾಗಾದುದರಿಂದ ಸಂದಿಗ್ಧಾನೈಕಾಂತ್ಯ, ಅಥವಾ ಸಂದಿಗ್ಧಾಸಿದ್ಧಿಯೋ (ಪ್ರಾಪ್ತವಾಗುವುದು) ಎಂದು[1], ಉತ್ತರಿಸುತ್ತಾರೆ '**ವೇದದ್ರಷ್ಟೄಣಾಂ**' ಎನ್ನುವುದರಿಂದ.

**ವೇದದ್ರಷ್ಟೄಣಾಂ ಯೇ ಗುಣಾ ಉಕ್ತಾ ಆಗಮೇಷು ತದ್ವತ್ತ್ವಾತ್ ತೇಷಾಂ ವಶಿಷ್ಠಾದೀನಾಂ ಪ್ರಾಕ್ತನವೇದದ್ರಷ್ಟೃತ್ವಂ ನಿಶ್ಚೇತುಂ ಶಕ್ಯತೇ । ಇತರಸ್ಯ ತು ತದಭಾವಾದನೃತವಾದಿತ್ವಂ ನಿಶ್ಚೀಯತೇ ಇತಿ ಚಾರ್ಥಃ । 'ಉಕ್ತ'ಶಬ್ದಸ್ಯ ನಿತ್ಯಸಾಪೇಕ್ಷತ್ವಾತ್ ಸಮಾಸಃ । ಅಥವಾ ವೇದದ್ರಷ್ಟೄಣಾಂ** ತಥಾ ಅಭಿಮತಾನಾಂ **ತೇಷಾಂ** ವಸಿಷ್ಠಾದೀನಾಮಿತ್ಯನ್ವಯಃ । ಗುಣಶಬ್ದೇನ ಚ ವೇದದ್ರಷ್ಟೃಲಕ್ಷಣಮ್ ಉಚ್ಯತ ಇತಿ । ಕೇ ತೇ **ಗುಣಾಃ** ಕುತ್ರ ಚ ವೇದದ್ರಷ್ಟೄಣಾಂ ಲಕ್ಷಣತ್ವೇನೋಕ್ತಾ ? ಇತ್ಯತ ಆಹ '**ಉಕ್ತಂ ಚ**'ಇತಿ । 'ಏವಂ ಲಕ್ಷಣಕಾ ವೇದಸ್ಯ ದ್ರಷ್ಟಾರ ಃ' ಇತ್ಯೇದುಕ್ತಂ ಚೇತ್ಯರ್ಥಃ । ತತ್ ಪಠತಿ '**ವಿಂಶದ್**' ಇತಿ ॥ ವಿಂಶತಿಶಬ್ದಪರ್ಯಾಯೋ ವಿಂಶಚ್ಛಬ್ದಃ । ಶಾಸ್ತ್ರೇ ಯಾನ್ಯುತ್ತಮಸ್ಯ ಪುರುಷಸ್ಯ ದ್ವಾತ್ರಿಂಶಲ್ಲಕ್ಷಣಾನ್ಯುಕ್ತಾನಿ ತೇಷಾಂ ಮಧ್ಯೇ ವಿಂಶಲ್ಲಕ್ಷಣತೋ ಅನೂನಲಕ್ಷಣವಾನ್, ವೇದ ಇತ್ಯೇವ - ಪ್ರಾಕ್ತನ ಏವಾಯಮ್ ಇತ್ಯೇವ ಯಂ- ವಾಕ್ಯವಿಶೇಷಂ **ಜ್ಞಾನದರ್ಶನಾತ್**- ದಿವ್ಯದೃಷ್ಟ್ಯಾ ಪಶ್ಯೇತ್ । ಅತ್ರ ಲಿಙ್ಗಮವಿವಕ್ಷಿತಮ್ । ಸ್ತ್ರೀಣಾಮಪಿ ವೇದದರ್ಶನಸದ್ಭಾವಾತ್ । ಅರ್ಥಾದ್ ಅತ್ರ ಪ್ರಕೃತೋಪಯೋಗೋ ದ್ರಷ್ಟವ್ಯಃ ।**

1. ಗೂಢಕರ್ತೃಕನು ಸತ್ಯವನ್ನು ನುಡಿಯುತ್ತಿರುವನೋ ಅಥವಾ ಸುಳ್ಳನ್ನೋ ಎಂಬುವುದು ನಿಶ್ಚಯವಿಲ್ಲ, ಆದುದರಿಂದ ಆತನ ವಚನಗಳಲ್ಲಿ ಪರಂಪರಾವಿಚ್ಛಿತ್ತಿಯು ಉಂಟೋ ಇಲ್ಲವೋ ಎಂಬುವುದು ನಿಶ್ಚಯವಾಗಲಿಲ್ಲ ತನ್ನಿಮಿತ್ತ ಹೇತುವಿನ ಸಂದೇಹವಿದೆ. ಹಾಗಾಗಿ ವ್ಯಭಿಚಾರದ ಸಂದೇಹವಿದೆ. ಅಥವಾ ಗೂಢಕರ್ತೃಕವಾಕ್ಯದಂತೆ ಸ್ವಯಂಪ್ರತಿಭಾತವಾದ ವೇದವಾಕ್ಯಗಳಲ್ಲಿ ಸಾಧ್ಯವಾದ ವೇದತ್ವವು ಉಂಟೋ ಇಲ್ಲವೋ ಎಂಬ ಸಂದೇಹದಿಂದ ಸಂದಿಗ್ಧಾಸಿದ್ಧಿ ಎಂದು ತಿಳಿಯುವುದು.

ವೇದದ್ರಷ್ಟೃಗಳಿಗೆ ಯಾವ ಗುಣಗಳನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆಯೋ ಆ ಗುಣಗಳನ್ನು ಹೊಂದಿರುವುದರಿಂದ ಆ ವಶಿಷ್ಠಾದಿಗಳಿಗೆ ಹಿಂದಿನ ವೇದಗಳ ದ್ರಷ್ಟೃತ್ವವು (ಉಂಟೆಂದು) ನಿಶ್ಚಯಿಸಲು ಶಕ್ಯವಿದೆ. ಅನ್ಯರಿಗಾದರೋ ಆ ಗುಣಗಳು ಇಲ್ಲದಿರುವುದರಿಂದ ಅನೃತವಾದಿತ್ವವು (ಉಂಟು ಎಂದು) ನಿಶ್ಚಯಿಸಲು ಶಕ್ಯವಿದೆ ಎಂದು ತಿರುಳು. '**ಉಕ್ತ**'ಶಬ್ದವು ನಿತ್ಯಸಾಪೇಕ್ಷವಾದುದರಿಂದ ಸಮಾಸವು (ಯುಕ್ತವಾಗಿದೆ)[1]. ಅಥವಾ ಮೂಲದಲ್ಲಿನ '**ವೇದದ್ರಷ್ಟೄಣಾಂ**' ಎನ್ನುವ ಶಬ್ದಕ್ಕೆ '**ತೇಷಾಂ**' ಎನ್ನುವ ಶಬ್ದದೊಡನೆ ಸಂಯೋಜಿಸುವುದು. (ಆಗ) **ವೇದದ್ರಷ್ಟೄಣಾಂ** – ವೇದ ದ್ರಷ್ಟೃಗಳು ಎಂದು ಸಮ್ಮತರಾದ, **ತೇಷಾಂ** – ವಶಿಷ್ಠಾದಿಗಳಿಗೆ (ಎಂದು ವಾಕ್ಯಾನ್ವಯ ಎಂದು ಭಾವ) (ಮೂಲದಲ್ಲಿನ) ಗುಣಶಬ್ದದಿಂದಲಾದರೋ ವೇದದ್ರಷ್ಟೃಗಳ ಲಕ್ಷಣವನ್ನು ತಿಳಿಸಲಾಗುವುದು[2]. ಆ ಗುಣಗಳ ಯಾವವು ? ವೇದದ್ರಷ್ಟೃವಿನ ಗುಣಗಳನ್ನು ಎಲ್ಲಿ ತಿಳಿಸಲಾಗಿದೆ ? ಆದುದರಿಂದ ಉತ್ತರಿಸುತ್ತಾರೆ '**ಉಕ್ತಂ ಚ**' ಎನ್ನುವುದರಿಂದ. 'ವೇದದ್ರಷ್ಟೃಗಳ ಲಕ್ಷಣವು ಹೀಗಿದೆ' ಎಂದು ಹೇಳಲಾಗಿದೆ ಎಂದು ಅರ್ಥ. ಅದನ್ನು ಹೇಳುತ್ತಾರೆ '**ವಿಂಶತ್**' ಎಂದು.

---

1. 'ಸಮರ್ಥಃ ಪದವಿಧಿಃ' (2.1.1.)ಎಂದು ಶಬ್ದ ಶಾಸ್ತ್ರದ ನಿಯಮ, ಅದರಂತೆ ಅನ್ವಿತವಾಗುವ ಪದಗಳಿಗೆ ಮಾತ್ರ ಸಮಾಸವು ಯುಕ್ತವಾಗುವುದು. ಪ್ರಕೃತ 'ಉಕ್ತಗುಣತ್ವಾಚ್ಚ' ಎನ್ನುವಲ್ಲಿನ 'ಉಕ್ತ' ಶಬ್ದವು 'ದ್ರಷ್ಟೄಣಾಂ' ಎನ್ನುವ ಶಬ್ದದೊಡನೆ ಅನ್ವಿತವಾಗುವುದು, 'ಗುಣ' ಪದದೊಡನೆ ಅನ್ವಯವು ಇಲ್ಲದಿರುವುದರಿಂದ, ಸಮಾಸಕ್ಕೆ ಯೋಗ್ಯವಾಗಿಲ್ಲ. ಆದುದರಿಂದ 'ಉಕ್ತಗುಣತ್ವಾತ್' ಎನ್ನುವುದು ಹೇಗೆ ಸರಿ ? ಎಂಬ ಸಂಶಯಕ್ಕೆ ಪರಿಹಾರ- 'ದೇವದತ್ತಸ್ಯ ಗುರುಕುಲಂ' ಎನ್ನುವಲ್ಲಿ ಗುರು ಶಬ್ದವು 'ದೇವದತ್ತ' ಪದದೊಡನೆ ಸಾಪೇಕ್ಷವಾದರೂ ಕುಲ ಶಬ್ದದೊಡನೆ ಸಮಾಸವು ರೂಢದಲ್ಲಿರುವಂತೆ, ಪ್ರಕೃತದಲ್ಲಿನ 'ಉಕ್ತ'ಪದವು ನಿತ್ಯಸಾಪೇಕ್ಷವಾದುದರಿಂದ ಅನ್ಯಪದದೊಡನೆ ಸಮಾಸಗೊಳ್ಳಬಹುದು ಎಂದು ಭಾವ.
2. 'ವೇದದ್ರಷ್ಟೃಗಳೆಂದು ಅಭಿಮತರಾದ ವಶಿಷ್ಠಾದಿಗಳಿಗೆ' ಎಂದು ಅರ್ಥೈಸಿದ ಮೇಲೆ 'ಉಕ್ತಗುಣವತ್ತ್ವಾತ್' ಎನ್ನುವ ಶಬ್ದದೊಡನೆ ಹೇಗೆ ಅನ್ವಯ ? ಆಗ 'ಗುಣ'ಶಬ್ದಕ್ಕೆ 'ವೇದದ್ರಷ್ಟೃಗಳ ಲಕ್ಷಣ' ಎಂದು ಅರ್ಥ. ಆಗ ಈ ವಾಕ್ಯದ ಒಟ್ಟು ಅಭಿಪ್ರಾಯ – 'ವೇದ ದ್ರಷ್ಟೃಗಳೆಂದು ಅಭಿಮತರಾದ ವಶಿಷ್ಠಾದಿಗಳಲ್ಲಿ, ಪುರಾಣಾದ್ಯುಕ್ತವಾದ ವೇದದ್ರಷ್ಟೃವಿನ, ಗುಣ-ಲಕ್ಷಣಗಳು ಇರುವುದರಿಂದ' ಎಂದು ಭಾವ.

'ವಿಂಶತ್' ಶಬ್ದವು 'ವಿಂಶತಿ' ಎಂಬ ಶಬ್ದದ ಪರ್ಯಾಯ[1]. ಶಾಸ್ತ್ರದಲ್ಲಿ ಶ್ರೇಷ್ಠಪುರುಷರಿಗೆ ಯಾವ 32 ಲಕ್ಷಣಗಳನ್ನು ತಿಳಿಸಿರುವರೋ ಅವುಗಳಲ್ಲಿ ಇಪ್ಪತ್ತು ಲಕ್ಷಣಗಳಿಗೆ ಕಡಿಮೆ ಇಲ್ಲದ ಲಕ್ಷಣಗಳನ್ನು ಹೊಂದಿದವನು, **ವೇದ ಇತ್ಯೇವ** - ಸನಾತನವಾದದ್ದೇ ಇದು, **ಯಂ** - ವಾಕ್ಯವಿಶೇಷವನ್ನು, **ಜ್ಞಾನದರ್ಶನಾತ್** - ದಿವ್ಯದೃಷ್ಟಿಯಿಂದ ಸಾಕ್ಷಾತ್‌ಕರಿಸಿಕೊಳ್ಳುವನು. ಪ್ರಕೃತದಲ್ಲಿ ಲಿಂಗವು ವಿವಕ್ಷಿತ ವಲ್ಲ. ಸ್ತ್ರೀಯರಲ್ಲೂ ಸಹ ವೇದದ್ರಷ್ಟಾರರು ಇರುವದರಿಂದ[2]. (ವಾಕ್ಯದ) ಅಭಿಪ್ರಾಯದಿಂದ ಪ್ರಕೃತವಿಷಯದಲ್ಲಿ ಉಪಯೋಗವನ್ನು ಕಾಣಬೇಕು[3].

### ವಾಕ್ಯತ್ವಾನುಮಾನದ ವಿಷಯದಲ್ಲಿ ಪ್ರಾಚೀನರ ಅಭಿಪ್ರಾಯ

**ಅಥವಾ 'ತಸ್ಯಾಕರ್ತೃಕತ್ವ..' ಇತ್ಯನೇನ 'ವೇದತ್ವಾಭಾವಃ' ವಾಕ್ಯತ್ವಾನು-ಮಾನಸ್ಯೋಪಾಧಿಃ ಉಚ್ಯತೇ । ಅತ್ರ ಕಿಮಿದಂ ವೇದತ್ವಂ, ಯದಭಾವಃ ಉಪಾಧಿತ್ವೇನಾಭಿಪ್ರೇಯತೇ? ನ ತಾವತ್ ವಾಕ್ಯತ್ವ-ಅದೃಷ್ಟವಿಷಯ-ವಾಕ್ಯತ್ವ-ಅದೃಷ್ಟವಿಷಯಪ್ರಮಾಣವಾಕ್ಯತ್ವಾನಾಮನ್ಯತಮಮ್, ತದಭಾವಸ್ಯ ಸಾಧ್ಯಾವ್ಯಾಪಕತ್ವಾತ್ । ನಾಪ್ಯಪೌರುಷೇಯತ್ವಂ,**

---

1. 'ಪಂಕ್ತಿವಿಂಶತಿತ್ರಿಂಶತ್......' (ಪಾ.ಸೂ. 5.1.59) ಸೂತ್ರದಲ್ಲಿ ತಿಳಿಸಿದಂತೆ 'ವಿಂಶತಿ' ಎಂದೇ ಸರ್ವತ್ರ ಪ್ರಯೋಗವು ಕಂಡಿದೆ. 'ವಿಂಶತ್' ಶಬ್ದವು ಛಾಂದಸ ಪ್ರಯೋಗ. 'ವಿಂಶತಿ' ಎಂದು ಈ ಶಬ್ದದ ಅರ್ಥ ಎಂದು ಭಾವ.

2. ಮೂಲದಲ್ಲಿ 'ತಪಸ್ವೀ' ಎಂದು ಪುಲ್ಲಿಂಗವಿದೆ. ವೇದದ್ರಷ್ಟಾರರಲ್ಲಿ ಗಾರ್ಗಿ ಮುಂತಾದ ಸ್ತ್ರೀಯರೂ ಇರುವರು ಆದುದರಿಂದ ಪುರುಷರು ಮಾತ್ರ ವೇದದ್ರಷ್ಟಾರರು ಸ್ತ್ರೀಯರಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. ಕಾರಣ ಪ್ರಕೃತದಲ್ಲಿ ಲಿಂಗವನ್ನು ವಿವಕ್ಷಿಸದೆ ಕೇವಲ ವಿಷಯವನ್ನು ವಿವಕ್ಷಿಸಲಾಗಿದೆ ಎಂದು ಭಾವ.

3. ಮೂಲದಲ್ಲಿ ಉಲ್ಲೇಖಿಸಿರುವ ಬ್ರಹ್ಮಾಂಡದ ವಾಕ್ಯದಿಂದ 'ಕನಿಷ್ಠ ಇಪ್ಪತ್ತು ಲಕ್ಷಣಗಳನ್ನು ಹೊಂದಿದ ವ್ಯಕ್ತಿಯು ಸಾಕ್ಷಾತ್‌ಕರಿಸಿಕೊಂಡ ವಾಕ್ಯಗಳಲ್ಲಿ 'ವೇದತ್ವವು' ಇರುತ್ತದೆ' ಎಂದು ತಿಳಿಸಿದೆ. ಆದರೆ 'ಎಲ್ಲ ವೇದದ್ರಷ್ಟಾರರಲ್ಲಿ ಕನಿಷ್ಠ ಇಪ್ಪತ್ತು ಲಕ್ಷಣಗಳು ಇರಬೇಕೆಂದು ತಿಳಿಸಿಲ್ಲ' ಎಂದು ಶಂಕಿಸಿದಲ್ಲಿ ಉತ್ತರಿಸಿರುತ್ತಾರೆ. ಇಪ್ಪತ್ತು ಲಕ್ಷಣಗಳನ್ನು ಹೊಂದಿದ ವ್ಯಕ್ತಿಯು ಕಂಡ ವಾಕ್ಯಗಳಲ್ಲಿ ಮಾತ್ರ ವೇದತ್ವವಿದೆ ಎಂದರೆ ಅರ್ಥಾತ್ ವೇದದ್ರಷ್ಟೃಗಳಲ್ಲಿ ಈ ಲಕ್ಷಣವಿರಬೇಕು ಎನ್ನುವುದು ಸಿದ್ಧವಾಗುವುದು. ಆದುದರಿಂದ ಪ್ರಕೃತ ಗೂಢಕರ್ತೃಕ ವಾಕ್ಯದಲ್ಲಿ ವೇದತ್ವವಿಲ್ಲ ಸ್ವಯಂಪ್ರತಿಭಾತವಾದ ವಾಕ್ಯಗಳಲ್ಲಿ ವೇದತ್ವ ಉಂಟು ಎಂದು ಸಾಧಿಸಲು ಈ ಬ್ರಹ್ಮಾಂಡಪುರಾಣದ ವಾಕ್ಯವು ಸಾಧಕವಾಗಿದೆ ಎಂದು ಭಾವ.

ತದಭಾವಸ್ಯೈವ ಸಾಧ್ಯತ್ವಾತ್ । ನಾಪಿ ವೈದಿಕಶಬ್ದಲಕ್ಷಣೋಪೇತತ್ವಂ, ತದಭಾವಸ್ಯ ಭಾರತಾದಿಷು ಸಾಧ್ಯಾವ್ಯಾಪಕತ್ವಾತ್ ಯಥೋಕ್ತಮ್ -

ವಿಶುದ್ಧತ್ವಪ್ರಸನ್ನತ್ವಾಕ್ಲಿಷ್ಟತ್ವಾಶ್ರಾವ್ಯತಾದಯಃ ।
ವೇದಧರ್ಮಾ ಹಿ ದೃಶ್ಯನ್ತೇ ವ್ಯಾಸಾದಿವಚನೇಷ್ವಪಿ ॥ ಇತಿ ।

ಅಧ್ಯಯನನಿಯಮವಿಶೇಷಾಸ್ತು ಶಾಖಾಭೇದೇನಾವ್ಯವಸ್ಥಿತಾ ನೋಪಸಂಗ್ರಹೀತುಂ ಶಕ್ಯನ್ತೇ? ನಿಯಮಸಾಮಾನ್ಯಂ ತು ಭಾರತಾದಾವಪ್ಯಸ್ತೀತಿ ತದಭಾವೋಽಪಿ ಸಾಧ್ಯಾವ್ಯಾಪಕ ಏವ । ನಾಪಿ ನಿಯತಕ್ರಮವತ್ತ್ವಂ, ತಸ್ಯಾಪಿ ಭಾರತಾದೌ ಸದ್ಭಾವಾತ್ । ಕ್ರಮವ್ಯತ್ಯಾಸೇ ವೇದತ್ವಾಭಾವವತ್ ಭಾರತತ್ವಾಭಾವಾತ್ । ನಾಪಿ ವೇದವ್ಯವಹಾರಗೋಚರತ್ವಮ್ । ಇತಿಹಾಸಪುರಾಣಾದಿಷ್ವಪಿ ತದ್ಭಾವಾತ್ । ನಾಪಿ ಮುಖ್ಯತಸ್ತದ್ಗೋಚರತ್ವಮ್ । ತದಭಾವಸ್ಯ ಪಕ್ಷೇತರತ್ವಾತ್ । ಪ್ರತಿಪಕ್ಷಪರ್ಯವಸಾನೇ ಚಾಸಾಧಾರಣತ್ವಾದ್ ಇತ್ಯಾಶಙ್ಕ್ಯ, **'ಅವೇದತ್ವಾತ್'** ಇತಿ ವಕ್ತವ್ಯೇ ತನ್ನಿರ್ವಚನಾರ್ಥಂ **'ಅಕರ್ತೃಕತ್ವಪ್ರಸಿದ್ಧಿರಹಿತತ್ವಾತ್'** ಇತ್ಯುಕ್ತಮ್ । ಅಕರ್ತೃಕತ್ವಪ್ರಸಿದ್ಧಿಮತ್ತ್ವಂ ವೇದತ್ವಂ ತದ್ರಹಿತತ್ವಾದೇವ ತಸ್ಯ- ಲೌಕಿಕವಾಕ್ಯಸ್ಯ ಸಕರ್ತೃಕತ್ವಮ್ । ನ ತು ವಾಕ್ಯತ್ವಪ್ರಯುಕ್ತಮಿತ್ಯರ್ಥಃ ।

ಅಥವಾ 'ತಸ್ಯಾಕರ್ತೃಕತ್ವಪ್ರಸಿಧ್ಯಭಾವಾತ್' ಎಂಬುವುದರಿಂದ ವಾಕ್ಯತ್ವಾನುಮಾನಕ್ಕೆ 'ವೇದತ್ವಾಭಾವ' ಎಂಬುವುದು ಉಪಾಧಿ ಎಂದು ಹೇಳುತ್ತಾರೆ. ಇಲ್ಲಿ (ಉಪಾಧಿಯಲ್ಲಿ) 'ವೇದತ್ವ' ಎಂದರೇನು, ಯಾವುದರ ಅಭಾವವನ್ನು ಉಪಾಧಿ ಎಂದು ಅಭಿಮತಿಸುವಿರಿ? (ವೇದತ್ವ ಎಂದರೆ) 'ವಾಕ್ಯತ್ವ' 'ಅದೃಷ ವಿಷಯವಾಕ್ಯತ್ವ' 'ಅದೃಷ್ಟವಿಷಯಪ್ರಮಾಣವಾಕ್ಯತ್ವ' ಎಂಬ ಈ ಮೂರರಲ್ಲಿ ಯಾವ ಒಂದನ್ನೂ ಪ್ರಕೃತದಲ್ಲಿ ವಿವಕ್ಷಿಸಲಾಗದು, ಅದರ ಅಭಾವವು ಸಾಧ್ಯಾವ್ಯಾಪಕವಾದುದರಿಂದ[1]. ಇನ್ನು ('ವೇದತ್ವ' ಎಂದರೆ)

1. 'ವೇದಃ ಪೌರುಷೇಯಃ ವಾಕ್ಯತ್ವಾತ್ ಬೌದ್ಧವಾಕ್ಯವತ್' ಎಂದು ಪ್ರತಿವಾದಿಗಳ ಅನುಮಾನ. ಈ ಅನುಮಾನವು ಉಪಾಧಿದೋಷದಿಂದ ಕೂಡಿದೆ 'ವೇದತ್ವಾಭಾವವು' ಉಪಾಧಿ ಎಂದು ವಾದಿಗಳು ಹೇಳಬೇಕು, ವೇದತ್ವ ಎಂದರೆ ವಾಕ್ಯತ್ವ, ಅಥವಾ ಅದೃಷ್ಟ ವಿಷಯವಾಕ್ಯತ್ವ ಎಂದು

ಪುಟ 135ರಲ್ಲಿ........

'ಅಪೌರುಷೇಯತ್ವ' ಎಂದು ವಿವಕ್ಷಿಸಲು ಶಕ್ಯವಿಲ್ಲ. (ಪ್ರಕೃತಾನುಮಾನದಲ್ಲಿ) ಅದರ ಅಭಾವವೇ ಸಾಧ್ಯವಾದುದರಿಂದ[1]. ಇನ್ನು ('ವೇದತ್ವ' ಎಂದರೆ) ವೈದಿಕಶಬ್ದಲಕ್ಷಣೋಪೇತತ್ವ ಎಂದೂ ಹೇಳಲು ಶಕ್ಯವಿಲ್ಲ. ಭಾರತಾದಿಗಳಲ್ಲಿ ಅದರ ಅಭಾವವೇ (ಇರುವುದರಿಂದ ಪುನಃ) ಸಾಧ್ಯಾವ್ಯಾಪಕತ್ವವೇ ಬರುವುದರಿಂದ[2]. (ಮಹಾಭಾರತಾದಿಗಳಲ್ಲಿ ವೇದದ ಲಕ್ಷಣವು ಇದೆ ಎನ್ನಲು

...... ಪುಟ 134 ರಿಂದ

ಅಭಿಪ್ರೇತಿಸಿದಲ್ಲಿ ಇವುಗಳ ಅಭಾವವು ಉಪಾಧಿಯಾಯಿತು. ವಾಕ್ಯತ್ವಾನುಮಾನದ ದೃಷ್ಟಾಂತವಾದ ಬೌದ್ಧವಾಕ್ಯದಲ್ಲಿ ವಾಕ್ಯತ್ವ ಮತ್ತು ಅದೃಷ್ಟ ವಿಷಯವಾಕ್ಯತ್ವವೇ ಇದೆ. ಬೌದ್ಧವಾಕ್ಯಗಳು ಅದೃಷ್ಟವಾದ ಧರ್ಮ ಮೋಕ್ಷ ಇತ್ಯಾದಿಗಳನ್ನೂ ಉಪದೇಶಿಸುವ ವಾಕ್ಯಗಳಾಗಿವೆ, ಹಾಗಾಗಿ ಬೌದ್ಧವಾಕ್ಯದಲ್ಲಿ ವೇದತ್ವಾಭಾವವು ಇಲ್ಲ, ಆದರೆ ಅಲ್ಲಿ ಪೌರುಷೇಯತ್ವವೇ ಇದೆ. ಆದುದರಿಂದ ಉಪಾಧಿಯು ಸಾಧ್ಯದಿಂದ ಅವ್ಯಾಪಕವಾಗಿ, ವಾಕ್ಯತ್ವಾನುಮಾನಕ್ಕೆ ಉಪಾಧಿದೋಷವಿಲ್ಲ ಎಂದಾಯಿತು. ಇನ್ನು ವೇದತ್ವವೆಂದರೆ 'ಅದೃಷ್ಟವಿಷಯ- ಪ್ರಮಾಣವಾಕ್ಯತ್ವ' ಎಂದೂ ಹೇಳಲು ಶಕ್ಯವಿಲ್ಲ. ಬೌದ್ಧವಾಕ್ಯವು ಕೇವಲ ಅದೃಷ್ಟವಿಷಯಕ ವಾಕ್ಯಗಳಾಗಿವೆ ಹೊರತಾಗಿ ಪ್ರಾಮಾಣ್ಯವನ್ನು ಹೊಂದಿಲ್ಲ ಎಂದು ಬೌದ್ಧವಾಕ್ಯದಲ್ಲಿ ಉಪಾಧಿಯು ಇರುವುದರಿಂದ ಸಾಧ್ಯವ್ಯಾಪಕತ್ವವು ಪ್ರಾಪ್ತವಾದರೂ, ಪೌರುಷೇಯಗಳಾದ ಮಹಾಭಾರತಾದಿಗಳಲ್ಲಿ ಉಪಾಧಿಯ ಅಭಾವವಿಲ್ಲ, ಅದೃಷ್ಟವಿಷಯ- ಪ್ರಮಾಣವಾಕ್ಯತ್ವವೇ ಇರುವುದರಿಂದ. ಆದುದರಿಂದ ವೇದತ್ವವನ್ನು ಮೇಲೆ ತಿಳಿಸಿದ ಮೂರು ರೀತಿಯಲ್ಲಿ ಅರ್ಥೈಸಿದರೂ ವಾಕ್ಯತ್ವಾನುಮಾನವನ್ನು ಉಪಾಧಿದೋಷದಿಂದ ಯುಕ್ತ ಎಂದು ಸಾಧಿಸಲು ಶಕ್ಯವಿಲ್ಲ. ಪ್ರಕೃತ ವಾದವು ನೈಯಾಯಿಕರು ಹಾಗೂ ತತ್ವವಾದಿಗಳಿಗೆ ಪ್ರಸಕ್ತ ವಾಗಿದೆ. ಈ ವಾದಿ-ಪ್ರತಿವಾದಿಗಳ ಅಭಿಮತದಂತೆ ಬೌದ್ಧವಾಕ್ಯವು ಅಪ್ರಮಾಣ, ಮಹಾಭಾರತಾದಿಗಳು ಪ್ರಮಾಣ. ಈ ಮೇಲಿನ ವಾದವನ್ನು ಈ ನೆಲೆಯಲ್ಲಿ ಪರಿಶೀಲಿಸುವುದು ಎಂದು ಭಾವ.

1. ವೇದಃ ಪೌರುಷೇಯಃ ವಾಕ್ಯತ್ವಾತ್ ಬೌದ್ಧವಾಕ್ಯವತ್, ಎಂದು ಪ್ರಕೃತಾನುಮಾನ. ವೇದತ್ವಾಭಾವವನ್ನು ಉಪಾಧಿ ಎಂದು ಹೇಳಿದಲ್ಲಿ, ಅಪೌರುಷೇಯತ್ವಾಭಾವವನ್ನೇ ಉಪಾಧಿ ಎಂದು ತಿಳಿಸಿದಂತಾಗುವುದು. ಅಂದರೆ ಪೌರುಷೇಯತ್ವವನ್ನೇ-ಸಾಧ್ಯವನ್ನೇ ಉಪಾಧಿ ಎಂದು ಹೇಳಿದಂತಾಗುವುದು. ಸಾಧ್ಯಕ್ಕೆ ಸಾಧ್ಯವನ್ನೇ ಉಪಾಧಿ ಎಂದು ಹೇಳುವುದು ತರವಲ್ಲವೆಂದು ಭಾವ.

2. ಭಾರತಾದಿಗಳಲ್ಲಿ ವೈದಿಕ ಶಬ್ದಲಕ್ಷಣಗಳೇ ಇರುವುದರಿಂದ ವೈದಿಕ ಶಬ್ದ ಲಕ್ಷಣೋಪೇತತ್ವಾಭಾವವಿಲ್ಲ, ಅಲ್ಲಿಯಾದರೋ ಪೌರುಷೇಯತ್ವವೇ ಇದೆ. ಆದುದರಿಂದ ಸಾಧ್ಯವ್ಯಾಪಕತ್ವರೂಪ ಉಪಾಧಿಲಕ್ಷಣದ ಒಂದು ಘಟಕವು 'ವೇದತ್ವಾಭಾವರೂಪ' ಉಪಾಧಿ ಯಲ್ಲಿ ಬಾರದಿರುವುದರಿಂದ ವಾಕ್ಯತ್ವಾನುಮಾನವು ದುಷ್ಟವಾಗಲಿಲ್ಲ ಎಂದು ಭಾವ.

ಪ್ರಮಾಣವನ್ನು ತಿಳಿಸುತ್ತಾರೆ) ಹೀಗೆ ಹೇಳಲಾಗಿದೆ- ವಿಶುದ್ಧತ್ವ[1], ಪ್ರಸನ್ನತ್ವ[2], ಅಕ್ಲಿಷ್ಟತ್ವ[3], ಶ್ರಾವ್ಯತ್ವ[4], ಎಂದು[5]. ಇನ್ನು ಅಧ್ಯಯನದ ನಿಯಮವಿಶೇಷವನ್ನು (ವೇದತ್ವ ಎಂದು ಹೇಳಲೂ ಆಗದು) ಶಾಖಾಭೇದದಿಂದ ಅಧ್ಯಯನದ ವ್ಯವಸ್ಥಿತಿಯು ಇರುವುದರಿಂದ ಅದನ್ನು ಸಂಗ್ರಹಿಸುವುದು ಅಶಕ್ಯ[6]. ಇನ್ನು ಸಾಮಾನ್ಯವಾದ ನಿಯಮವಾದರೋ ಭಾರತಾದಿಗಳಲ್ಲೂ ಇದೆ[7]. ಪುನಃ ಸಾಧ್ಯಾವ್ಯಾಪಕವೇ ಆಯಿತು. 'ನಿಯತಕ್ರಮವನ್ನು ಹೊಂದಿರುವಿಕೆ' ಎಂದೂ ಹೇಳಲಾಗದು. ಈ ರೀತಿಯಾದ ವೇದತ್ವವೂ ಭಾರತಾದಿಗಳಲ್ಲೂ ಇರುವುದರಿಂದ[8]. ಕ್ರಮವು ವ್ಯತ್ಯಯಗೊಂಡಲ್ಲಿ (ವ್ಯತ್ಯಯಗೊಂಡ ವಾಕ್ಯದಲ್ಲಿ) ವೇದತ್ವವು ಇಲ್ಲದಂತೆ ಭಾರತತ್ವವೂ ಇಲ್ಲವಾಗುವುದರಿಂದ[9]. ಇನ್ನು 'ವೇದ'

---

1. ವರ್ಣ, ಪದ, ವಾಕ್ಯಗಳಲ್ಲಿ ದೋಷವಿಲ್ಲದಿರುವಿಕೆ.
2. ಜಪ-ಪಾರಾಯಣಾದಿಗಳಿಂದ ಸಿದ್ಧಿಯಾಗುವಿಕೆ.
3. ವಾಕ್ಯಾನ್ವಯ, ಶಬ್ದಾರ್ಥಾದಿಗಳು ಕ್ಲಿಷ್ಟವಾಗದಿರುವಿಕೆ.
4. ಶ್ರವಣದಿಂದ ಸಂತೋಷವಾಗುವಿಕೆ, ಮಂಗಳವಾಗುವಿಕೆ.
5. ವೇದದ ಈ ಗುಣಗಳು, ವ್ಯಾಸಾದಿ ಕೃತವಾಕ್ಯಗಳಲ್ಲೂ ಪರಿದೃಶ್ಯಮಾನವಾಗಿದೆ ಎಂದು ಭಾವ.
6. ವೇದ ಶಾಖೆಗಳು ಅನೇಕವಿದೆ. ಈ ಶಾಖೆಗಳ ಅಧ್ಯಯನದಲ್ಲಿ ಕ್ರಮಗಳು ಅನೇಕವಿಧವಿದೆ. ಪಂಚಶಿಖಾ, ತ್ರಿಶಿಖಾ , ಶ್ರವಾಣಾ ನಕ್ಷತ್ರದಂದು ವೇದಾಧ್ಯಯನ, ಪೌರ್ಣಮೆಯಂದು ವೇದಾಧ್ಯಯನ ಇತ್ಯಾದಿ ಅನೇಕಭೇದಗಳು ಕಂಡಿದೆ. ಹೀಗಾಗಿ 'ವೇದತ್ವ' ಎಂದರೆ ನಿಯತವಾದ ಒಂದು 'ಧರ್ಮ' ಎಂದು ಹೇಳಲು ಅಶಕ್ಯವಾಗಿದೆ ಎಂದು ಭಾವ.
7. ಗುರೂಪದೇಶವಿಲ್ಲದೆ ಸ್ವತಂತ್ರವಾಗಿ ಅಭ್ಯಸಿಸಬಾರದು, ಜನಸಮೂಹಾದಿಗಳು ನೆರದಲ್ಲಿ ಉಪದೇಶಿಸಬಾರದು ಇಂತಹ ಕೆಲವು ಸಾಮಾನ್ಯ ನಿಯಮವನ್ನು ವಿವಕ್ಷಿಸಿದಲ್ಲಿ, ಇಂತಹ ನಿಯಮಗಳು ಭಾರತಾದಿಗಳ ಅಧ್ಯಯನದಲ್ಲೂ ಇವೆ ಎಂದು ಭಾವ.
8. ನಿಯತಕ್ರಮವತ್ತ್ವಂ- ವೇದತ್ವಂ ಎಂದಲ್ಲಿ ಭಾರತಾದಿಗಳಲ್ಲೂ ನಿಯತಕ್ರಮತ್ತ್ವವು ಇದೆ. 'ಅಗ್ನಿಮೀಳೇ ಪುರೋಹಿತಂ' ಎಂದು ವೇದವು ಆರಂಭವಾಗುವಂತೆ ಭಾರತವೂ ಸಹ 'ನಾರಾಯಣಂ ನಮಸ್ಕೃತ್ಯ ..' ಎಂದೇ ಆರಂಭವಾಗುವುದು. ಹಾಗಾಗಿ ಪುನಃ ಸಾಧ್ಯಾವ್ಯಾಪಕತ್ವವು ಉಪಾಧಿಗೆ ಎಂದು ಭಾವ.
9. 'ಅಗ್ನಿಮೀಳೇ ಪುರೋಹಿತಂ' ಎಂದು ವೇದವಾಕ್ಯ, ಇದನ್ನು ಸ್ವಲ್ಪವ್ಯತ್ಯಯಗೊಳಿಸಿ 'ವಹ್ನಿಮೀಳೇ' ಇತ್ಯಾದಿಯಾಗಿ ಉಚ್ಚರಿಸಿದಲ್ಲಿ ಅದನ್ನು ವೇದವಾಕ್ಯವೆಂದು ಕರೆಯಲಾಗುವುದಿಲ್ಲ. ಹಾಗೆಯೇ ಮಹಾಭಾರತಾದಿಗಳ ವಾಕ್ಯವನ್ನು ವ್ಯತ್ಯಯಗೊಳಿಸಿ ಉಚ್ಚರಿಸಿದಲ್ಲಿ ಅದನ್ನೂ ವ್ಯಾಸವಾಕ್ಯವೆಂದು ವ್ಯವಹರಿಸಲಾಗದು ಎಂದು ಭಾವ.

ಎಂದು ವ್ಯವಹಾರಕ್ಕೆ ವಿಷಯವಾದದ್ದನ್ನು ವೇದ ಎಂದೂ ಹೇಳಲಾಗದು. ಇತಿಹಾಸಾದಿಗಳಲ್ಲೂ ಅದು (ವೇದ ಎಂಬ ವ್ಯವಹಾರವು) ಇರುವದರಿಂದ[1]. ಇನ್ನು 'ವೇದ' ಎಂಬ ಮುಖ್ಯವ್ಯವಹಾರಕ್ಕೆ ವಿಷಯವಾದದ್ದು ಎಂದೂ ಹೇಳಲು ಆಗದು. ಇದರ ಅಭಾವವೇ ಪಕ್ಷೇತರವಾಗುವುದರಿಂದ[2]. ಪ್ರತಿಪಕ್ಷಾನುಮಾನವಾಗಿ ಪರ್ಯವಸಾನಗೊಳಿಸಿದಲ್ಲಿ ಅಸಾಧಾರಣತ್ವ ರೂಪ ದೋಷ ಬರುವುದು? ಎಂದು ಆಶಂಕಿಸಿ[3], (ಮೂಲದಲ್ಲಿ) 'ಅವೇದತ್ವಾತ್' ಎಂದು ತಿಳಿಸುವ ಸಂದರ್ಭದಲ್ಲಿ ಅದರ (ಅವೇದತ್ವದ) ನಿರ್ವಚನವನ್ನು ತಿಳಿಸುವುದಕ್ಕಾಗಿ 'ಅಕರ್ತೃಕತ್ವ ಪ್ರಸಿದ್ಧಿರಹಿತತ್ವಾತ್' ಎಂದು ಹೇಳಲಾಗಿದೆ. 'ವೇದತ್ವ' ಎಂದರೆ 'ಅಕರ್ತೃಕತ್ವ ಪ್ರಸಿದ್ಧಿಮತ್ತ್ವ' ಎಂದು, ಲೌಕಿಕವಾಕ್ಯದಲ್ಲಿ ಕರ್ತೃತ್ವವಿರಲು ಕಾರಣ ವಾಕ್ಯತ್ವವಲ್ಲ, ಅಕರ್ತೃಕತ್ವ ಪ್ರಸಿದ್ಧಿರಾಹಿತ್ಯವು (ಸಕರ್ತೃಕತ್ವೇನ ಪ್ರಸಿದ್ಧಿಯು) ಕಾರಣ ಎಂದು ಭಾವ.

---

1. 'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಎಂದು ವೇದವಚನವೇ ಇದೆ, ಆದುದರಿಂದ ವೇದ ಎನ್ನುವ ವ್ಯವಹಾರಗೋಚರತ್ವವು ಭಾರತಾದಿಗಳಲ್ಲಿರುವುದರಿಂದ ಪುನಃ ಉಪಾಧಿಯು ಸಾಧ್ಯಾವ್ಯಾಪಕವಾಯಿತು ಎಂದು ಭಾವ.

2. ಇತಿಹಾಸಾದಿಗಳನ್ನು ಮುಖ್ಯವೇದವೆಂದು ಕರಯಲಾಗದಿದ್ದರೂ, ಮುಖ್ಯವಾದ 'ವೇದ' ಎಂಬ ವ್ಯವಹಾರವು ವೇದಗಳಲ್ಲೇ ಇದ್ದರೂ, 'ಮುಖ್ಯತಃ ವೇದ ಇತಿ ವ್ಯವಹಾರ-ಗೋಚರತ್ವಾಭಾವ'ವನ್ನು ಉಪಾಧಿ ಎಂದು ಹೇಳಿದಲ್ಲಿ, ' ಪರ್ವತತ್ವಾಭಾವ'ದಂತೆ ಇದೂ ಸಹ ಪಕ್ಷೇತರತ್ವದಲ್ಲಿಯೇ ಅವಸಾನಗೊಳ್ಳಲಿದೆ. ಪಕ್ಷೇತರತ್ವವನ್ನು ಉಪಾಧಿಯೆಂದು ಪರಿಗಣಿಸುವಂತಿಲ್ಲ ಎನ್ನುವುದು ಶಾಸ್ತ್ರನಿಯಮ ಎಂದು ಭಾವ.

3. ಉಪಾಧಿಯು ಸಾಧಕಾನುಮಾನಕ್ಕೆ ಸತ್ಪ್ರತಿಪಕ್ಷೋನ್ನಾಯಕ ಅಥವಾ ವ್ಯಭಿಚಾರೋನ್ನಾಯಕ ವಾಗಿರುತ್ತದೆ. ಪ್ರಕೃತ 'ವೇದಃ ಸಕರ್ತೃಕಃ ವಾಕ್ಯತ್ವಾತ್' ಎನ್ನುವ ಅನುಮಾನಕ್ಕೆ 'ಮುಖ್ಯತಃ ವೇದವ್ಯವಹಾರಗೋಚರತ್ವಾಭಾವ' ಎನ್ನುವದನ್ನು ಉಪಾಧಿ ಎಂದು ಹೇಳಿದಲ್ಲಿ ಉಪಾಧ್ಯಭಾವವು ಪ್ರತಿವಾದಿಗಳ ವಾಕ್ಯತ್ವಾನುಮಾನದ ಪ್ರತಿಪಕ್ಷಾನುಮಾನದಲ್ಲಿ ಹೇತುವಾಗಬೇಕು 'ವೇದಃ ಸಕರ್ತೃಕೋ ನ ಭವತಿ ಮುಖ್ಯತಃ ವೇದ ಇತಿ ವ್ಯವಹಾರವಿಷಯತ್ವಾತ್' ಎಂದು ಅನುಮಾನಾಕಾರವಾಯಿತು. ಆದರೆ ಈ ಹೇತುವು ಪಕ್ಷದಲ್ಲಿ ಮಾತ್ರವಿರುವುದರಿಂದ ಅಸಾಧಾರಣಾನೈಕಾಂತಿಕ ಎಂಬ ದೋಷವು ಪ್ರಾಪ್ತವಾಗುವುದು. ದೃಷ್ಟಾಂತದಲ್ಲಿ ಹೇತುವು ಇಲ್ಲದ ಪಕ್ಷದಲ್ಲಿ 'ಅಸಾಧಾರಣಾನೈಕಾಂತಿಕ' ಎನ್ನುವರು. ಸಕರ್ತೃಕತ್ವರಹಿತವಾದ ಸಪಕ್ಷವಾದ ಗಗನದಲ್ಲಿ ಹೇತುವು- ವೇದ ಇತಿ ವ್ಯವಹಾರವಿಷಯತ್ವವು ಇಲ್ಲ , ಕೇವಲ ಪಕ್ಷದಲ್ಲಿ ಮಾತ್ರ ಎದೆ ಎಂದು ಭಾವ.

ನನು, ಏತಲ್ಲಕ್ಷಣಂ ಗೂಢಕರ್ತೃಕೇऽಪಿ ವಾಕ್ಯೇ ಅಸ್ತಿ, ಇತಿ ತಸ್ಯಾಪಿ 'ವೇದತ್ವಂ' ಪ್ರಾಪ್ತಂ । ತಥಾ ಚ ತದಭಾವಸ್ಯ ಸಾಧ್ಯಾವ್ಯಾಪಕತ್ವಮ್? ಇತ್ಯತ ಆಹ **'ನ ಚ ಕೇನಚಿತ್'** ಇತಿ । ಅಕರ್ತೃಕತ್ವಪ್ರಸಿದ್ಧಿಮತ್ತ್ವಂ ನಾಮ ಅನುಪಲಭ್ಯಮಾನೋಚಿತಕಾರಣತ್ವಮ್ । ವಾಕ್ಯಸ್ಯೋಚಿತಕಾರಣಂ ಪ್ರತ್ಯಕ್ಷಾದಿಕಂ, ವಿಪ್ರಲಂಭಾದಿಕಂ ವಾ । ತಚ್ಚ ಗೂಢಕರ್ತೃಕೇ ಪರಂಪರಾಭಾವೇನಾನುಮಾನೇನೋಪಲಭ್ಯತ ಏವೇತಿ ಕಥಂ ತಸ್ಯ ವೇದತ್ವ ಪ್ರಾಪ್ತಿಃ? ಇತ್ಯರ್ಥಃ ।

**ಅನು.**- ಹಾಗಾದಲ್ಲಿ, ಈ ಲಕ್ಷಣವು ಗೂಢಕರ್ತೃಕ ವಾಕ್ಯದಲ್ಲಿಯೂ ಇದೆ, ಅದಕ್ಕೂ (ಗೂಢಕರ್ತೃಕವಾಕ್ಯಕ್ಕೂ) ವೇದತ್ವವು ಪ್ರಾಪ್ತವಾಗುವುದು. ಹಾಗಾದಲ್ಲಿ ಅದರ ಅಭಾವಕ್ಕೆ (ಉಪಾಧ್ಯಭಾವಕ್ಕೆ) ಸಾಧ್ಯಾವ್ಯಾಪಕತ್ವವು? ಎಂದು ಆದುದರಿಂದ ಉತ್ತರಿಸುತ್ತಾರೆ 'ನ ಕೇನಚಿತ್' ಎಂದು.[1] 'ಅಕರ್ತೃಕತ್ವ-ಪ್ರಸಿದ್ಧಿಮತ್ತ್ವ' ಎಂದರೆ 'ಯೋಗ್ಯಕಾರಣವು ಉಪಲಬ್ಧವಾಗದಿರುವಿಕೆ' ಎಂದು ಅರ್ಥ. ವಾಕ್ಯಕ್ಕೆ ಉಚಿತಕಾರಣ ಪ್ರತ್ಯಕ್ಷಾದಿಗಳು ಮೂಲವಾಗಿರುವದೋ, ವಿಪ್ರಲಂಭಾದಿಗಳು ಉದ್ದೇಶವಾಗಿರುವುದೋ (ಆಗಿವೆ). ಇದಾದರೋ (ಉಚಿತಕಾರಣವಾದರೋ) ಗೂಢಕರ್ತೃಕವಾಕ್ಯದಲ್ಲಿ ಅಧ್ಯಯನ ಪರಂಪರೆ ಇಲ್ಲದಿರುವುದರಿಂದ ಅನುಮಾನದಿಂದ[3] ಉಪಲಭ್ಯವೇ ಆಗುವುದು ಎಂದು ಅದಕ್ಕೆ (ಗೂಢಕರ್ತೃಕವಾಕ್ಯಕ್ಕೆ) 'ವೇದತ್ವದ' (ಅಕರ್ತೃಕತ್ವಪ್ರಸಿದ್ಧಿಮತ್ತ್ವದ ) ಪ್ರಾಪ್ತಿಯು ಹೇಗೆ ಆಗುವುದು? ಎಂದು ಭಾವ.

**'ಅಕರ್ತೃಕತ್ವಪ್ರಸಿದ್ಧಿಮತ್ತ್ವ' ಎನ್ನುವ ಉಪಾಧಿಯು ದೋಷರಹಿತ**

ಏತೇನೈತದಪಿ ನಿರಸ್ತಮ್- ವೇದಸ್ಯ ಸಕರ್ತೃಕತ್ವನಿರಾಸಾತ್ ಪ್ರಾಗ್,

---

1. 'ಅಕರ್ತೃಕತ್ವ ಪ್ರಸಿದ್ಧಿರಹಿತತ್ವ' ಎನ್ನುವದು ವೇದದ ಲಕ್ಷಣ ಎಂದು ತಿಳಿಸಲಾಗಿದೆ, ಇದರ ಅಭಾವವು ಲೌಕಿಕವಾಕ್ಯದಲ್ಲಿದೆ ಎಂದು ವಾದಿಸಲಾಗಿದೆ. ಆದರೆ ಗೂಢಕರ್ತೃಕವಾಕ್ಯದಲ್ಲಿ ಈ ವೇದದ ಲಕ್ಷಣವಿದೆ, ಹಾಗಾಗಿ 'ಅಕರ್ತೃಕತ್ವ ಪ್ರಸಿದ್ಧಿರಹಿತತ್ವ' ರೂಪ ಉಪಾಧಿಗೆ ಸಾಧ್ಯಾವ್ಯಾಪಕತ್ವ ದೋಷವು ಪುನಃ ಪ್ರಾಪ್ತವಾಯಿತು ಎಂದು ಭಾವ.

3. ವಿಮತಂ ವಾಕ್ಯಂ ಏತತ್ಪ್ರತ್ಯಕ್ಷಾದಿಮೂಲಂ ಅಸ್ಮಿನ್ ವಿಚ್ಛಿನ್ನಪರಂಪರತ್ವಾತ್. ಎಂದು ಅನುಮಾನವನ್ನು ಈ ಹಿಂದೆ ತಿಳಿಸಲಾಗಿದೆ. ಈ ಅನುಮಾನದಿಂದ ಕರ್ತೃಕತ್ವಪ್ರಸಿದ್ಧಿಯು ಗೂಢಕರ್ತೃಕವಾಕ್ಯದಲ್ಲಿ ಸಿದ್ಧವಾಗುವುದು ಎಂದು ಭಾವ.

**ಅಕರ್ತೃಕತ್ವಪ್ರಸಿದ್ಧಿಮತ್ತ್ವಸ್ಯಾಭಾವಾತ್ ಸಾಧನವ್ಯಾಪಕತ್ವಮಿತಿ । ಅಕರ್ತೃಕತ್ವಪ್ರಸಿದ್ಧಿಮತ್ತ್ವಸ್ಯಾನುಪಲಭ್ಯಮಾನಪ್ರತ್ಯಕ್ಷಾದಿಮೂಲತಯಾ ವ್ಯಾಖ್ಯಾತತ್ವಾತ್ । ತಸ್ಯಾಶ್ಚ ಈಶ್ವರಕರ್ತೃಕತ್ವವಾದಿಭಿರಪ್ಯಙ್ಗೀಕೃತತ್ವಾತ್ । 'ನ ಚ ಸ್ವಯಂಪ್ರತಿಭಾತ..' ಇತ್ಯಾದಿಕಂ ತು ಪರಂಪರಾಭಾವಸ್ಯ ಹೇತೋರ್ವ್ಯಭಿಚಾರಪರಿಹಾರಾರ್ಥತ್ವೇನ ಪೂರ್ವವದ್ ವ್ಯಾಖ್ಯೇಯಮಿತಿ । ತರ್ಕಪರಾಹತಂ ಚ ವಾಕ್ಯತ್ವಾನುಮಾನಮ್ । ಪೂರ್ವೋಕ್ತಕಲ್ಪನಾಗೌರವ-ಪ್ರಸಙ್ಗಾದಿತ್ಯುಕ್ತಪ್ರಾಯಮೇವ । ತಥಾ ವಕ್ಷ್ಯಮಾಣಶ್ರುತಿಪುರಾಣಾದಿ-ವಿರುದ್ಧಂ ಚ ।**

ಇದರಿಂದ (ವೇದತ್ವಂ ನಾವು 'ಅಪ್ರಸಿದ್ಧಕರ್ತೃಕತ್ವಂ' ಎಂದು ವಿವರಿಸಿದ್ದರಿಂದ) ಇದನ್ನು (ಈ ಮುಂದಿನ ಆಶಂಕೆಗಳನ್ನು) ಪರಿಹರಿಸಿದಂತಾಯಿತು. ವೇದಕ್ಕೆ ಸಕರ್ತೃಕತ್ವವನ್ನು ನಿರಾಕರಿಸುವ ಮುನ್ನ (ವೇದವು) ಅಕರ್ತೃಕ ಎಂದು ಪ್ರಸಿದ್ಧಿಯನ್ನು ಹೊಂದಿರುವುದಿಲ್ಲವಾದುದರಿಂದ (ಅಪ್ರಸಿದ್ಧಕರ್ತೃಕತ್ವ ರೂಪ ಉಪಾಧಿಯು) ಸಾಧನವ್ಯಾಪಕವೇ ಆಯಿತು ಎಂದು[1]. 'ಅಕರ್ತೃಕತ್ವಪ್ರಸಿದ್ಧಿಮತ್ತ್ವ'ವನ್ನು 'ಅನುಪಲಭ್ಯಮಾನ ಪ್ರತ್ಯಕ್ಷಾದಿ ಮೂಲತ್ವಂ' ಎಂದು ವ್ಯಾಖ್ಯಾನಿಸಿದ್ದರಿಂದ (ಉಪಾಧಿಗೆ ಸಾಧನವ್ಯಾಪಕತ್ವವು ಇಲ್ಲ). ಇಂತಹ ಅಕರ್ತೃಕತ್ವಪ್ರಸಿದ್ಧಿಮತ್ತ್ವವನ್ನು, (ವೇದವನ್ನು) ಈಶ್ವರಕರ್ತೃಕ ಎಂದು ವಾದಿಸುವವರೂ ಒಪ್ಪುವುದರಿಂದ[2]. 'ನ ಚ ಸ್ವಯಂ ಪ್ರತಿಭಾತ...'

1. ವೇದವು ಇತರ ಲೌಕಿಕವಾಕ್ಯದಂತೆ ಓರ್ವ ಕರ್ತೃವನ್ನು ಹೊಂದಿದೆ ಎಂದೇ ಪ್ರತಿವಾದಿಯು ವಾದಿಸುವನು ಆದುದರಿಂದ ಪ್ರತಿವಾದಿಯ ವಾದವನ್ನು ಖಂಡಿಸುವ ಮೊದಲು ವೇದದಲ್ಲಿ ಅಕರ್ತೃಕತ್ವಪ್ರಸಿದ್ಧಿಯೇ ಇಲ್ಲ ತಾನೆ ? ಹಾಗಾದಲ್ಲಿ ವಾಕ್ಯತ್ವರೂಪಸಾಧನವನ್ನು ಹೊಂದಿರುವ ಪಕ್ಷವಾದ ವೇದದಲ್ಲಿ ಅಕರ್ತೃಕತ್ವ ಪ್ರಸಿದ್ಧಿರಾಹಿತ್ಯ ರೂಪ ಉಪಾಧಿಯು ಇರುವುದರಿಂದ, ಉಪಾಧಿಯು ಸಾಧನವ್ಯಾಪಕವೇ ಆಯಿತು. ವಾಕ್ಯತ್ವಾನುಮಾನಕ್ಕೆ ಇದು ಉಪಾಧಿಯಾಗಲಾರದು ಎಂದು ಭಾವ.

2. ನೈಯ್ಯಾಯಿಕರೇ ಮುಂತಾದವರು ವೇದವನ್ನು ಲೌಕಿಕವಾಕ್ಯದಂತೆ ಕರ್ತೃವನ್ನು ಹೊಂದಿದೆ ಎಂದು ವಾದಿಸಿದರೂ, ಅವರ ದೃಷ್ಟಿಯಿಂದಲೂ ವೇದದಲ್ಲಿ 'ಅಕರ್ತೃಕತ್ವಪ್ರಸಿದ್ಧಿರಾಹಿತ್ಯವನ್ನು' ಸಾಧಿಸಬಹುದು. ಅಕರ್ತೃಕತ್ವಪ್ರಸಿದ್ಧಿರಾಹಿತ್ಯ ಎಂದರೆ 'ಅನುಪಲಭ್ಯಮಾನಪ್ರತ್ಯಕ್ಷಾದಿ-ಪ್ರಮಾಣಮೂಲತ್ವಂ' ಎಂದು ವ್ಯಾಖ್ಯಾನಿಸಲಾಗಿದೆ. ನೈಯಾಯಿಕಾದಿಗಳು ವೇದವು

ಪುಟ 140ರಲ್ಲಿ........

ಇತ್ಯಾದಿ (ಮೂಲಸ್ಥ ವಾಕ್ಯ)ಗಳನ್ನು **'ಪರಂಪರಾಭಾವಾತ್'** ಎಂಬ ಹೇತುವಿನ ವ್ಯಭಿಚಾರದ ಪರಿಹಾರಕ್ಕಾಗಿ ಹಿಂದಿನಂತೆ ವ್ಯಾಖ್ಯಾನಿಸಬೇಕು[1]. ವಾಕ್ಯತ್ವಾನುಮಾನವು (ಪ್ರತಿ) ತರ್ಕದಿಂದ ಪರಾಹತವೂ ಆಗಿದೆ[2]. ಹಿಂದೆ ಹೇಳಿದ ಕಲ್ಪನಾಗೌರವಪ್ರಸಂಗವು ಇರುವುದರಿಂದ ಎಂದು ತಿಳಿಸಿದಂತಾಯಿತು[3].

---

...... ಪುಟ 139 ರಿಂದ

ಈಶ್ವರಪ್ರಣೀತ ಎಂದು ಒಪ್ಪಿದ್ದರೂ ಸಹ 'ಈಶ್ವರನ ಪ್ರತ್ಯಕ್ಷಮೂಲದಿಂದ ಪ್ರಣೀತವಾದದ್ದು' ಎಂದು ಒಪ್ಪಲಾರರು. ಈಶ್ವರ ಜ್ಞಾನವು ನಿತ್ಯವಾದುದರಿಂದ ಪ್ರಮಾಪ್ರಮಾಬಹಿರ್ಭೂತ ಎಂದು ಒಪ್ಪಿರುವುದರಿಂದ ವೇದವನ್ನು 'ಈಶ್ವರ ಪ್ರತ್ಯಕ್ಷ ಮೂಲ' ಎಂದು ವಾದಿಸಲಾರರು. ತನ್ನಿಮಿತ್ತ 'ಅನುಪಲಬ್ಧಮಾನ ಪ್ರತ್ಯಕ್ಷಾದಿ ಮೂಲತ್ವವನ್ನು ' ವೇದದಲ್ಲಿ ಒಪ್ಪುವರು. ಆದುದರಿಂದ ಪ್ರಕೃತ ಪಕ್ಷವಾದ ವೇದದಲ್ಲಿ ಸಾಧನವು ಇಲ್ಲದಿರುವುದರಿಂದ ಉಪಾಧಿಗೆ ಸಾಧನಾವ್ಯಾಪಕತ್ವದ ಭಂಗವಿಲ್ಲ ಎಂದು ಭಾವ.

1. 'ನ ಚ ಕೇನಚಿತ್....' ಎಂಬ ಮೂಲವಾಕ್ಯವನ್ನು ಟೀಕಾದಲ್ಲಿ ''ವೇದಃ ಪೌರುಷೇಯಃ ವಾಕ್ಯತ್ವಾತ್' ಎಂಬ ಅನುಮಾನವು ಅಪ್ರಯೋಜಕ ಎನ್ನುವುದನ್ನು ಸಾಧಿಸುತ್ತದೆ' ಎಂದು ಹಿಂದೆ ವ್ಯಾಖ್ಯಾನಿಸಲಾಗಿತ್ತು, ಪ್ರಕೃತ 'ಅಥವಾ ತಸ್ಯ ..' ಇತ್ಯಾದಿ ವಾಕ್ಯಗಳಿಂದ 'ನ ಚ ಕೇನಚಿತ್....' ಎಂಬ ಮೂಲವಾಕ್ಯವು 'ವಾಕ್ಯತ್ವಾನುಮಾನವು ಉಪಾಧಿಗ್ರಸ್ತವಾಗಿದೆ ಎಂಬುವುದನ್ನುತಿಳಿಸುತ್ತದೆ ' ಎಂದು ವ್ಯಾಖ್ಯಾನಿಸಲಾಯಿತು. ಹಾಗಾದಲ್ಲಿ 'ನ ಚ ಸ್ವಯಂ ಪ್ರತಿಭಾತ .....' ಇತ್ಯಾದಿ ಮೂಲವಾಕ್ಯಗಳಿಗೂ ಬೇರೇ ರೀತಿಯಲ್ಲಿ ಸಂಯೋಜನೆಯು ಇದೆಯೋ ? ಎನ್ನುವ ಸಂದೇಹವನ್ನು ಪರಿಹರಿಸುತ್ತಾರೆ- 'ವಿಚ್ಛಿನ್ನ ಪರಂಪರತ್ವಾತ್ ಎಂಬ ಹೇತುವು ವ್ಯಭಿಚರಿತ' ಇತ್ಯಾದಿ ಸಂಶಯನಿವಾರಕ ಇತ್ಯಾದಿ ರೀತಿಯಲ್ಲಿ ಹಿಂದಿನಂತೆಯೇ ವ್ಯಾಖ್ಯಾನಿಸುವುದು ಎಂದು ಭಾವ.

2. 'ವೇದಃ ಪೌರುಷೇಯಃ ವಾಕ್ಯತ್ವಾತ್' ಎಂಬ ಅನುಮಾನವು ಪ್ರತಿತರ್ಕದಿಂದ ಖಂಡಿತ ವಾಗಿದೆ. 'ಅಪೌರುಷೇಯ ವಾಕ್ಯವನ್ನು ಒಪ್ಪದ ಪಕ್ಷದಲ್ಲಿ ಧರ್ಮಾದಿಗಳ ಸಿದ್ಧಿಯು ಆಗದೇ ಹೋದೀತು' ಎಂಬ ಪ್ರತಿತರ್ಕವು ವಾಕ್ಯತ್ವಾನುಮಾನವನ್ನು ನಿರಾಕರಿಸುತ್ತದೆ ಎಂದು ಭಾವ.

3. ಅಪೌರುಷೇಯವಾದ ವೇದವನ್ನು ಒಪ್ಪದ ಪಕ್ಷದಲ್ಲಿ, ಧರ್ಮಾದಿಸಿದ್ಧಿಗಾಗಿ ಲೋಕದಲ್ಲಿ ಎಲ್ಲೂ ಕಾಣದ ಓರ್ವ ಸರ್ವಜ್ಞನನ್ನು ಕಲ್ಪಿಸಬೇಕು. ಆ ಸರ್ವಜ್ಞತ್ವವನ್ನು ಬುದ್ಧಾದಿಗಳಲ್ಲಿ ಕಲ್ಪಿಸಬೇಕು. ಯಾವುದೋ ಧರ್ಮಬೋಧಕವಾಕ್ಯಗಳು ಬುದ್ಧಾದಿಗಳಿಂದ ನಿರ್ಮಿತವಾದದ್ದು ಎಂದು ಕಲ್ಪಿಸಬೇಕು. ಹೀಗೆ ಕಲ್ಪನಾಗೌರವಾದಿಗಳನ್ನು ಹಿಂದೆಯೇ ತಿಳಿಸಿಯಾಗಿದೆ ಎಂದು ಭಾವ.

ಹಾಗೆಯೇ ಮುಂದೆ ತಿಳಿಸಲಿರುವ ಶ್ರುತಿ ಪುರಾಣಾದಿಗಳಿಂದ ವಿರುದ್ಧವೂ ಆಗಿದೆ.

**ಅನುಮಾನದಿಂದ ವೇದದ ಪ್ರಾಮಾಣ್ಯವು ಸಿದ್ಧವಾಗಲಾರದು**

**ಏತೇನ 'ವೇದಾಃ ಸರ್ವಜ್ಞಪ್ರಣೀತಾ ವೇದತ್ವಾತ್ ವ್ಯತಿರೇಕೇಣ ಲೌಕಿಕವಾಕ್ಯವತ್' ಇತ್ಯಪಾಸ್ತಮ್- ವಿಪಕ್ಷೇ ಬಾಧಕಾಭಾವೇನಾಪ್ರಯೋ-ಜಕತ್ವಾತ್ । ಕಿಂಚ ವೇದಸ್ಯ ಸರ್ವಜ್ಞಪ್ರಣೀತತ್ವನಿಶ್ಚಯೇ ಸತಿ ಪ್ರಾಮಾಣ್ಯ-ನಿಶ್ಚಯಃ, ತನ್ನಿಶ್ಚಯೇ ಚ ಸರ್ವಜ್ಞತ್ವನಿಶ್ಚಯಃ, ತತಶ್ಚ ವಿಶೇಷಣ-ಪ್ರಸಿಧ್ಯಾಽನುಮಾನಪ್ರವೃತ್ತೌ ವೇದಪ್ರಾಮಾಣ್ಯನಿಶ್ಚಯ ಇತಿ ಚಕ್ರಕ-ಪ್ರಸಂಗಃ । ಪ್ರಕಾರಾನ್ತರೇಣ ಸರ್ವಜ್ಞತ್ವಸಿದ್ಧೇಃ ನಿರಸ್ತತ್ವಾತ್ । ಪ್ರಮಾಣಾನ್ತರಾಣಿ ತತ್ರತತ್ರ ನಿರಸಿಷ್ಯನ್ತ ಇತಿ ।**

ಇದರಿಂದ (ವಾಕ್ಯತ್ವಾನುಮಾವು ಉಪಾಧಿಗ್ರಸ್ತ ಎಂದು ಹೇಳಿದ್ದರಿಂದ) 'ವೇದಾಃ ಸರ್ವಜ್ಞಪ್ರಣೀತಾಃ ವೇದತ್ವಾತ್ ವ್ಯತಿರೇಕೇಣ ಲೌಕಿಕವಾಕ್ಯವತ್' ಎಂಬ ಅನುಮಾನವೂ ಖಂಡಿತವಾಯಿತು[1]. ವಿಪಕ್ಷದಲ್ಲಿ ಬಾಧಕವಿಲ್ಲದಿರು ವುದರಿಂದ (ಈ ಹೇತು) ಅಪ್ರಯೋಜಕ[2]. ಮತ್ತೂ ಸಹ, ವೇದವು ಸರ್ವಜ್ಞನಿಂದ ನಿರ್ಮಿತವಾಗಿದೆ ಎಂದು ನಿಶ್ಚಯವಾದಲ್ಲಿ ವೇದದ ಪ್ರಾಮಾಣ್ಯವು ನಿಶ್ಚಯವಾಗುವುದು. ಅದು (ವೇದದ ಪ್ರಾಮಾಣ್ಯವು) ನಿಶ್ಚಿತವಾದಲ್ಲಿ (ಅದರ ನಿರ್ಮಾತೃವು) ಸರ್ವಜ್ಞ ಎಂದು ನಿಶ್ಚಯವಾಗುತ್ತದೆ. ಆದುದರಿಂದ ವಿಶೇಷಣ ಪ್ರಸಿದ್ಧಿಯಿಂದ ಅನುಮಾನವು ಪ್ರವೃತ್ತವಾದಲ್ಲಿ ವೇದದ ಪ್ರಾಮಾಣ್ಯವು

---

1. ವೇದಗಳು ಓರ್ವ ಸರ್ವಜ್ಞನಿಂದ ನಿರ್ಮಿತವಾಗಿವೆ ವೇದತ್ವವನ್ನು ಹೊಂದಿರುವುದರಿಂದ. ವ್ಯತಿರೇಕದೃಷ್ಟಾಂತ (ವಿರುದ್ಧೋದಾಹರಣ) ಲೌಕಿಕವಾಕ್ಯ. ಕಾಳಿದಾಸಾದಿ ವಾಕ್ಯಗಳಲ್ಲಿ ಸರ್ವಜ್ಞ ಪ್ರಣೀತತ್ವವು ಇಲ್ಲ, ವೇದತ್ವವೂ ಇಲ್ಲ . ವೇದದಲ್ಲಿ ವೇದತ್ವವಿದೆ ಆದುದರಿಂದ ಸರ್ವಜ್ಞಪ್ರಣೀತತ್ವವಿದೆ ಎಂದು ಈ ಅನುಮಾನದ ಭಾವ.

2. 'ವೇದದಲ್ಲಿ ವೇದತ್ವವಿರಲಿ, ಸರ್ವಜ್ಞಪ್ರಣೀತತ್ವವು ಇಲ್ಲದಿರಲಿ' ಎಂದು ಶಂಕಿಸಿದಲ್ಲಿ ಏನೂ ಬಾಧಕವಿಲ್ಲ. ಪ್ರಸಿದ್ಧಾನುಮಾನದಲ್ಲಿ ಹೀಗೆ ಹೇಳಲು ಆಗುವುದಿಲ್ಲ. 'ಧೂಮವಿರಲಿ, ವಹ್ನಿ ಇಲ್ಲದಿರಲಿ' ಎಂದು ಹೇಳಿದಲ್ಲಿ, ವಹ್ನಿಯು ಇಲ್ಲವೆಂದಾದಲ್ಲಿ (ಕಣ್ಣಿಗೆ ಕಾಣುವ) ಧೂಮವೂ ಇಲ್ಲವಾಗಬೇಕಾದೀತು. ಎಂದು ಬಾಧಕವನ್ನು ಹೇಳಲು ಅವಕಾಶವಿದೆ. ವಹ್ನಿ-ಧೂಮಗಳಿಗೆ ಕಾರ್ಯಕಾರಣ ಭಾವ ಸಂಬಂಧವಿರುವುದರಿಂದ. ಪ್ರಕೃತದಲ್ಲಿ ಹಾಗಿಲ್ಲ ಎಂದು ಭಾವ.

ನಿಶ್ಚಯವಾಗುತ್ತದೆ, ಹೀಗೆ ಚಕ್ರಕ ಪ್ರಸಂಗ[1]. 'ಬೇರೆ ಉಪಾಯಗಳಿಂದ ಸರ್ವಜ್ಞತ್ವದ ಸಿದ್ಧಿಯು ಆಗುವುದು' ಎನ್ನುವುದನ್ನು ಈ ಹಿಂದೆಯೇ ನಿರಾಕರಿಸಲಾಗಿದೆ[2]. ಪ್ರಮಾಣಾಂತರಗಳನ್ನು ಅಲ್ಲಲ್ಲಿ ನಿರಾಕರಿಸಲಾಗುವುದು[3].

**-: ವೇದಾಪೌರುಷೇತ್ವದಲ್ಲಿ ಇತರಾಶಂಕೆಗಳ ನಿರಾಕರಣೆಯು ಸಮಾಪ್ತ :-**

## ॥ ಪ್ರಾಮಾಣ್ಯಸ್ವತಸ್ತ್ವವಾದಾರಂಭ ॥

ವೇದವು ಅಪೌರುಷೇಯವಾದಲ್ಲಿ ಅದರ ಪ್ರಾಮಾಣ್ಯ ಸಂರಕ್ಷಣೆಯು ಹೇಗೆ? ವಾಕ್ಯದಲ್ಲಿನ ಪ್ರಾಮಾಣ್ಯವು ಅದರ ವಕ್ತೃವಿನ ಅಧೀನ, ಎಂದು ಸಂದೇಹಿಸುವುದು ತರವಲ್ಲ. ಅರಿವೊಂದರ ಪ್ರಾಮಾಣ್ಯವನ್ನು ಯುಕ್ತಿ

---

1. ನೈಯಾಯಿಕರು ಈ ರೀತಿಯಲ್ಲಿ ತಮ್ಮ ವಾದವನ್ನು ಮಂಡಿಸಿರುವರು- ವೇದಗಳು ಪ್ರಮಾಣ, ಸರ್ವಜ್ಞನಾದ ಈಶ್ವರನಿಂದ ಪ್ರಣೀತವಾಗಿರುವುದರಿಂದ. ಈಶ್ವರನು ಸರ್ವಜ್ಞನು, 'ಯಃ ಸರ್ವಜ್ಞಃ ಸರ್ವವಿತ್' ಎಂದು ಪ್ರಮಾಣಭೂತವಾದ ವೇದಗಳು ತಿಳಿಸಿರುವುದರಿಂದ ಎಂದು. ಆದರೆ ಸರ್ವಜ್ಞನಾದ ಈಶ್ವರನಿಂದ ವೇದವು ಪ್ರಣೀತವಾದದ್ದು ಎಂದು ನಿಶ್ಚಿತವಾದಲ್ಲಿ ಪ್ರಕೃತಾನುಮಾನದ ಸಾಧ್ಯವಾದ ವೇದಪ್ರಾಮಾಣ್ಯವು ನಿಶ್ಚಿತವಾಗುವುದು. ಈಶ್ವರನು ಸರ್ವಜ್ಞ ಎನ್ನುವುದು ಎರಡನೇ ಅನುಮಾನದ (ಸಾಧ್ಯ)ವಿಶೇಷಣ, ಅದು ವೇದದ ಪ್ರಾಮಾಣ್ಯವು ನಿಶ್ಚಯವಾದಲ್ಲಿ ಆಗುವುದು. ಒಟ್ಟಿನಲ್ಲಿ ಈ ಎರಡು ಅನುಮಾನಗಳ ಸಾಧ್ಯಗಳು ಸಿದ್ಧವಾಗಬೇಕಾದಲ್ಲಿ ವೇದದ ಪ್ರಾಮಾಣ್ಯ , ವೇದಗಳಿಗೆ ಸರ್ವಜ್ಞಪ್ರಣೀತತ್ವ, ಮತ್ತು ಈಶ್ವರನಿಗೆ ಸರ್ವಜ್ಞತ್ವ ಈ ಮೂರು ಅಂಶಗಳು ಸಿದ್ಧವಾಗಬೇಕು. ಆದರೆ ಈ ಮೂರು ಅಂಶಗಳ ಸಿದ್ಧಿಯು ಪರಸ್ಪರ ಅಂಶಾಂತರಗಳ ಸಿದ್ಧಿಯ ನೆರವಿನಿಂದಾಗುವುದು. ಇದನ್ನು ಶಾಸ್ತ್ರದಲ್ಲಿ ಚಕ್ರಕಾಪತ್ತಿದೋಷ ಎಂದು ಹೇಳುವರು.

2. 'ಮೇಲೆ ತಿಳಿಸಿದ ಮೂರು ಅಂಶಗಳಲ್ಲಿ ಒಂದಾದ ಸರ್ವಜ್ಞತ್ವವು ಉಳಿದ ಅಂಶಗಳ ಸಿದ್ಧಿಯನ್ನು ಆಶ್ರಯಿಸದೆ, ಕೇವಲ ಅನುಮಾನದಿಂದ ಸಿದ್ಧವಾಗುವುದು. ಅಂದರೆ- ಯಾವುದೇ ರೀತಿಯ ಆಮಿಷಾದಿಗಳು ಬುದ್ಧಾದಿಗಳಲ್ಲಿ ಕಾಣದಿರುವುದರಿಂದ ಅವರು ಸರ್ವಜ್ಞರು ಎಂದು ಊಹಿಸುತ್ತೇವೆ' ಇತ್ಯಾದಿ ಅನುಮಾನಗಳಿಂದ ಸಾಧಿಸುತ್ತೇವೆ ಎಂದು ಹೇಳಲು ಆಗದು. ಈ ಹಿಂದೆ ಸರ್ವಜ್ಞತ್ವಸಿದ್ಧಿಯ ಎಲ್ಲ ವಿಧಾನಗಳನ್ನು ನಿರಾಕರಿಸಲಾಗಿದೆ ಎಂದು ಭಾವ.

3. 'ಋಚಃ ಸಾಮಾನಿ ಜಜ್ಞಿರೇ' ಇತ್ಯಾದಿಯಾಗಿ ವೇದಗಳೇ ತನ್ನ ಉತ್ಪತ್ತಿಯನ್ನು ತಿಳಿಸಿದೆ. ಆದುದರಿಂದ ವೇದವು ಪೌರುಷೇಯ ಎನ್ನುವದನ್ನು ವೇದವೇ ಸಾರುತ್ತಿರುವಾಗ ಅಪೌರುಷೇಯ ಎನ್ನುವದು ತಪ್ಪಲ್ಲವೆ? ಎಂಬಿತ್ಯಾದಿ ಸಂದೇಹಗಳು ತರವಲ್ಲ. ಈ ಮುಂತಾದ ವಾಕ್ಯಗಳು ವೇದದ ಪ್ರಕಟವಾದ ಸಂಗತಿಗಳನ್ನು , ಅವಾಂತರಾಭಿಮಾನಿಯ ದೇಹದ ಉತ್ಪತ್ತಿ ಈ ಮುಂತಾದವುಗಳನ್ನು ತಿಳಿಸುತ್ತವೆ ಎಂದು ಮುಂದೆ ತಿಳಿಸಲಾಗುವುದು (ಪು. 260ರಲ್ಲಿ).

ಯಿಂದಲೋ ಅಥವಾ ಸಂವಾದಿ ಪ್ರಾಮಾಣಾಂತರದಿಂದಲೋ ಅರಸಿದಲ್ಲಿ, ಮೊದಲ ಅರಿವಿನ ಪ್ರಮಾಣಸಾಧಕಪ್ರಮಾಣದ ಪ್ರಾಮಾಣ್ಯವನ್ನು ಅರಸಲು ಮತ್ತೊಂದು ಪ್ರಾಮಾಣವನ್ನು ಅರಸಬೇಕು. ಹಾಗಾದಲ್ಲಿ ಪ್ರಮಾಣಪರಂಪರೆ ಯನ್ನು ಅರಸುತ್ತಾ ಪರ್ಯವಸನಾವೇ ಇಲ್ಲದ ಪ್ರಸಂಗವು ಒದಗೀತು. ಅನುಭವವನ್ನು ಗಮನಿಸಿದಾಗ ಅರಿವಿನೊಡನೆ ಅದರ ಪ್ರಾಮಾಣ್ಯವೂ ಗೃಹೀತವಾಗಿರುವುದು ತಿಳಿಯುವುದು. ಸಂದೇಹಾದಿಗಳು ಇದ್ದಲ್ಲಿ ಮಾತ್ರ ಪ್ರಮಾಣಾಂತರದ ಅನ್ವೇಷಣೆಯ ಅಗತ್ಯವಿರುವುದು ತಿಳಿಯುವುದು.

**ಪ್ರಾಮಾಣ್ಯದ ಅರಿವು ಸ್ವತಃ**

**ಪ್ರಾಮಾಣ್ಯಂ ಚ ಸ್ವತ ಏವ ,ಅನ್ಯಥಾऽನವಸ್ಥಾನಾತ್ ।**

ಪ್ರಾಮಾಣ್ಯದ ಗ್ರಹಿಕೆಯು ಸ್ವತಃ ( ಜ್ಞಾನಗ್ರಹಿಕೆಯ ಸಾಮಗ್ರಿಗಳಿಂದಲೇ) ಗೃಹೀತವಾಗುವುದು, ಹಾಗಾಗದ ಪಕ್ಷದಲ್ಲಿ (ಪ್ರಥಮಪ್ರಮಾಣದ ಪ್ರಾಮಾಣ್ಯಗ್ರಾಹಕ ಪ್ರಮಾಣಕ್ಕೂ ಪ್ರಮಾಣಾಂತರದಿಂದ ಪ್ರಾಮಾಣ್ಯಗ್ರಹಣ ಎಂದು) ಅನವಸ್ಥೆಯು ಪ್ರಾಪ್ತವಾಗುವುದರಿಂದ.

ಯದುಕ್ತಂ ವಾಕ್ಯತ್ವಾದ್ಯನುಮಾನಂ ವಿಪಕ್ಷೇ ಬಾಧಕಾಭಾವಾದಪ್ರಯೋ-ಜಕಮಿತಿ, ತದಸತ್, ತಥಾಹಿ- ಸಂವಾದೇನ ಖಲು ಪ್ರಮಾಣಾನಾಂ ಪ್ರಾಮಾಣ್ಯಮನುಮಾತವ್ಯಮ್ । ಸಂವಾದಶ್ಚ ಸಜಾತೀಯೇನ ವಿಜಾತೀ-ಯೇನ ವಾ ಭವತಿ । ತತ್ರ ವೇದಸ್ಯ ನ ತಾವತ್ ಸಜಾತೀಯ-ಸಂವಾದೋऽಸ್ತಿ, 'ಸದಾಗಮೈಕವಿಜ್ಞೇಯಂ' ಇತಿ ತದ್ವಿಷಯಸ್ಯ ಪ್ರಮಾಣಾ-ನ್ತರಾಗೋಚರತ್ವಾಭ್ಯುಪಗಮಾತ್। ನಾಪ್ಯರ್ಥಕ್ರಿಯಾಸಾಮರ್ಥ್ಯಾದಿಕಂ ವಿಜಾತೀಯಮಸ್ತಿ , ಮೋಕ್ಷಾದೇಃ ಪ್ರತ್ಯಕ್ಷಾದ್ಯವೇದ್ಯತ್ವಾತ್ ।

ತಥಾ ಚಾऽಪ್ತೋಕ್ತತ್ವೇನೈವ ತತ್ಪ್ರಾಮಾಣ್ಯಮನುಮಾತವ್ಯಮ್ । ಪ್ರಮಾಣಜನ್ಯತ್ವೇನೈವ ತಜ್ಜನ್ಯಜ್ಞಾನಪ್ರಾಮಾಣ್ಯಮಪಿ । ತಥಾಚಾಹ ಕಣಾದಃ-'ತದ್ವಚನಾದಾಮ್ನಾಯಪ್ರಾಮಾಣ್ಯಮ್' ಇತಿ । ಅಕ್ಷಪಾದೋऽಪಿ-'ತತ್ಪ್ರಾಮಾಣ್ಯಮಾಪ್ತಪ್ರಾಮಾಣ್ಯಾತ್' ಇತಿ । ತತಶ್ಚ ವೇದಸ್ಯಾಕರ್ತೃಕತ್ವೇ ಪ್ರಾಮಾಣ್ಯಾಸಿದ್ಧಿಪ್ರಸಙ್ಗಸ್ಯ ಬಾಧಕಸ್ಯ ವಿದ್ಯಮಾನತ್ವಾತ್ ಕಥಮಪ್ರಯೋ-ಜಕತ್ವಂ ವಾಕ್ಯತ್ವಾದ್ಯನುಮಾನಸ್ಯ? ಅತ ಏವಾಕರ್ತೃಕತ್ವಾದ್ಯನುಮಾನಮಪಿ

**ಪ್ರತಿಕೂಲತರ್ಕಪರಾಹತಮ್ । ಉಪಾಧೇರಪಿ ಸಾಧ್ಯವ್ಯಾಪಕತಾಭಙ್ಗಃ ಸಿಧ್ಯತಿ । ಯಥೋಕ್ತಮ್ -**

**ಅನುಕೂಲೇನ ತರ್ಕೇಣ ಸನಾಥೇ ಸತಿ ಸಾಧನೇ ।**
**ಸಾಧ್ಯವ್ಯಾಪಕತಾಭಙ್ಗಾತ್ ಪಕ್ಷೇ ನೋಪಾಧಿಸಂಭವಃ ॥ ಇತಿ ।**

**ತತ್ರಾಹ 'ಪ್ರಾಮಾಣ್ಯಂ ಚ' ಇತಿ । ಸರ್ವೇಷಾಮಪಿ ಜ್ಞಾನಾನಾಂ ಯಥಾರ್ಥತ್ವಲಕ್ಷಣಂ ಪ್ರಾಮಾಣ್ಯಂ ಸ್ವತಏವ- ಜ್ಞಾನಗ್ರಾಹಕೇಣೈವ 'ಗೃಹ್ಯತೇ' ಇತಿ ಶೇಷಃ ।**

ವಾಕ್ಯತ್ವಾನುಮಾನಕ್ಕೆ ವಿಪಕ್ಷದಲ್ಲಿ ಬಾಧಕವಿಲ್ಲದರುವುದರಿಂದ ಅಪ್ರಯೋಜಕ ಎಂದು ಈ ಹಿಂದೆ ಹೇಳಲಾಗಿದೆ, ಅದು ಸರಿಯಲ್ಲ[1]. ಏಕೆಂದರೆ - ಪ್ರಮಾಣ-ಗಳಿಗೆ (ಜ್ಞಾನಕರಣಗಳಿಗೆ) ಪ್ರಾಮಾಣ್ಯವನ್ನು ಸಂವಾದದಿಂದ ಅನುಮಾನಿಸ-ಬೇಕು[2]. ಸಂವಾದವಾದರೋ ಸಜಾತೀಯ, ವಿಜಾತೀಯ ಎಂದು ಎರಡು ವಿಧವಾಗಿದೆ[3]. ಪ್ರಕೃತ ವೇದಕ್ಕೆ ಸಜಾತೀಯ ಸಂವಾದವಿಲ್ಲ. 'ಸದಾಗಮೈಕ-ವಿಜ್ಞೇಯಂ' ಎಂದು, ವೇದವು ತಿಳಿಸುವ ವಿಷಯವು ಪ್ರಮಾಣಾಂತರದಿಂದ

---

1. 'ವೇದಃ ಪೌರುಷೇಯಃ ವಾಕ್ಯತ್ವಾತ್' ಎನ್ನುವ ಅನುಮಾನಕ್ಕೆ, 'ವೇದದಲ್ಲಿ ವಾಕ್ಯತ್ವರೂಪ ಹೇತುವಿರಲಿ ಆದರೆ ಪೌರುಷೇಯತ್ವವು ಇಲ್ಲದಿರಲಿ, ಯಾವುದೇ ಬಾಧಕವಿಲ್ಲ'ಎಂಬ ಅಪ್ರಯೋಜಕತ್ವ ಶಂಕೆಯು ಸರಿಯಾದುದಲ್ಲ ಎಂದು ಭಾವ.

2. 'ಇದು ಸರೋವರ' ಎಂದು ಜ್ಞಾನವು ಪ್ರತ್ಯಕ್ಷದಿಂದ ಬರುತ್ತದೆ. ಈ ಪ್ರತ್ಯಕ್ಷವು ಪ್ರಾಮಾಣಿಕವಾದದ್ದು , ಏಕೆಂದರೆ 'ಜನರು ನೀರಿಗಾಗಿ ಆ ಕಡೆಗೆ ಧಾವಿಸುತ್ತಿರುವುದರಿಂದ' ಎಂಬ ಅನುಮಾನರೂಪ ಸಂವಾದವು ಇರುವುದರಿಂದ ಎಂದು ಭಾವ.

3. 'ದೇವದತ್ತನು ಯೋಗ್ಯ' ಎಂದು ರಾಮನು ಹೇಳುತ್ತಾನೆ. ಆಗ ಹರಿಯೂ ಹೇಳುತ್ತಾನೆ 'ಅಹುದು ದೇವದತ್ತನು ಯೋಗ್ಯ' ಎಂದು. ರಾಮನ ಮಾತಿಗೆ ಹರಿಯ ಮಾತು 'ಸಂವಾದಿ' ಇದನ್ನು ಸಜಾತೀಯ ಸಂವಾದ ಎನ್ನುತ್ತಾರೆ. ಅಥವಾ 'ದೇವದತ್ತನು ಯೋಗ್ಯ, ಈ ಮಾತು ಸತ್ಯ, ಆತನು ಸತ್ಕುಲದಲ್ಲಿ ಹುಟ್ಟಿದವನಾದುದರಿಂದ' ಎಂಬ ಅನುಮಾನ. ಇದನ್ನೂ ವಿಜಾತೀಯ ಸಂವಾದ ಎಂದು ತಿಳಿಯುವುದು. 'ಸತ್ಕುಲಪ್ರಸೂತನು ' ಎಂಬ ಅನುಮಾನವು 'ದೇವದತ್ತನು ಯೋಗ್ಯ' ಎಂಬ ಅರಿವಿನ ಪ್ರಾಮಾಣ್ಯವನ್ನುಸ್ಥಾಪಿಸುವುದು. ಸಜಾತೀಯ ಸಂವಾದದಲ್ಲಿ ಸಂವಾದಿಗೆ (ಮೊದಲ ಅರಿವಿಗೆ) ವಿಷಯವಾದದ್ದೇ ಸಂವಾದಕ್ಕೂ (ಎರಡನೆಯ ಅರಿವಿಗೂ) ವಿಷಯವಾಗಿರುತ್ತದೆ. ವಿಜಾತೀಯಸಂವಾದದಲ್ಲಿ ಸಂವಾದಿಯ (ಮೊದಲ ಅರಿವಿನ) ಪ್ರಾಮಾಣ್ಯವನ್ನು ಸಂವಾದವು (ಎರಡನೆಯ ಅರಿವು) ಗ್ರಹಿಸುವುದು ಎಂದು ಭಾವ.

ಅಗೋಚರ ಎಂದು (ತತ್ವವಾದಿಗಳು) ಒಪ್ಪಿರುವುದರಿಂದ. ಫಲೋತ್ಪಾದಕ ಸಾಮರ್ಥ್ಯಾದಿರೂಪ ವಿಜಾತೀಯ ಸಂವಾದಗಳೂ ಇಲ್ಲ, ಮೋಕ್ಷಾದಿಗಳು (ವೇದೋಕ್ತ ಫಲಗಳು) ಪ್ರತ್ಯಕ್ಷಾದಿಗಳ ಅರಿವಿಗೆ ಬಾರದೇ ಇರುವುದರಿಂದ[1].

ಹಾಗಾಗಿ , ಆಪ್ತೋಕ್ತವಾದುದರಿಂದಲೇ ಅದರ (ವೇದದ) ಪ್ರಾಮಾಣ್ಯ-ವನ್ನು ಊಹಿಸಬೇಕು[2]. ಪ್ರಮಾಣಭೂತವಾದ (ವೇದದಿಂದ) ಜನ್ಯವಾದುದ-ರಿಂದಲೇ, ಅದರಿಂದ (ವೇದದಿಂದ) ಜನ್ಯವಾದ ಅರಿವಿನ ಪ್ರಾಮಾಣ್ಯವೂ (ನಿಶ್ಚಯವಾಗುವುದು)[3]. ಹಾಗೆಯೇ ಕಣಾದರು ಹೇಳಿರುವರು- 'ತದ್ವಚನಾದಾಮ್ನಾಯಪ್ರಾಮಾಣ್ಯಂ' ಎಂದು[4]. ಅಕ್ಷಪಾದರೂ ಸಹ 'ತತ್ಪ್ರಾಮಾಣ್ಯಮಾಪ್ತಪ್ರಾಮಾಣ್ಯಾತ್'ಎಂದು[5]. ಆದುದರಿಂದ

1. 'ಇದು ನೀರು' ಎಂದು ಅರಿವು ಪ್ರಾಪ್ತವಾಗುವುದು. ನಂತರದಲ್ಲಿ ನೀರನ್ನು ಕುಡಿಯುವನು, ಕುಡಿದಾಗ ಬಾಯಾರಿಕೆ ಪರಿಹಾರವಾಗುವುದು. ಹಾಗಾಗಿ 'ಇದು ನೀರು ಎಂಬ ಅರಿವು ಯಥಾರ್ಥ' ಎಂದು ಊಹಿಸಬಹುದು. ಇದನ್ನು ಅರ್ಥಕ್ರಿಯಾಕಾರಿತ್ವ- ಫಲೋತ್ಪಾದಕ ಸಾಮರ್ಥ್ಯ ಎಂದು ತಿಳಿಯುವುದು. ಪ್ರಕೃತ ವೇದೋಕ್ತಫಲವು ಮೋಕ್ಷ. ಇದರ ದರ್ಶನವು ಯಾರಿಗೂ ಇಲ್ಲದಿರುವುದರಿಂದ. ಅರ್ಥಕ್ರಿಯಾಕಾರಿತ್ವರೂಪ ವಿಜಾತೀಯ ಸಂವಾದವೂ ವೇದಕ್ಕೆ ಇಲ್ಲ ಎಂದು ಭಾವ.

2. ವೇದವು ಪ್ರಮಾಣ ಆಪ್ತನಾದ ಬ್ರಹ್ಮನಿಂದ ಉಪದಿಷ್ಟವಾಗಿರುವುದರಿಂದ ತಂದೆಯ ಉಪದೇಶದಂತೆ, ಎಂಬ ಅನುಮಾನದಿಂದ ವೇದದ ಪ್ರಾಮಾಣ್ಯವನ್ನು ತಿಳಿಯಬೇಕು ಎಂದು ಭಾವ.

3. 'ವೇದದ ಪ್ರಾಮಾಣ್ಯವು ಆಪ್ತನಿಂದ ನಿರ್ಮಿತವಾದುದರಿಂದ' ಎಂದೇ ನಿರ್ಣಯಿಸಬೇಕಿಲ್ಲ. ವೇದೋಕ್ತವಾದದು ಸತ್ಯವಾದಲ್ಲಿ, ಅದರ ಪ್ರಾಮಾಣ್ಯ ನಿಶ್ಚಯವಾಗಬಹುದಲ್ಲವೆ ? ಉದಾ- ದಾರಿಹೋಕನು ಹೇಳುವನು 'ಮುಂದೆ ಕೆರೆಯಿದೆ' ಎಂದು, ಕೆರೆಯು ಕಂಡಲ್ಲಿ 'ದಾರಿಹೋಕನ ಮಾತು ಪ್ರಾಮಾಣ' ಎಂದು ತಿಳಿಯುವುದು ಹಾಗೆಯೇ ವೇದದ ಪ್ರಾಮಾಣ್ಯವನ್ನೂ ನಿಶ್ಚಯಿಸ ಬಹುದಲ್ಲವೆ? ಎಂದು ಸಂದೇಹಿಸಲಾಗದು. ವೇದೋಕ್ತಫಲ ಮೋಕ್ಷಾದಿಗಳು, ಈ ಹಿಂದೆ ತಿಳಿಸಿದಂತೆ ಪ್ರತ್ಯಾಕ್ಷಾದಿಗಳಿಂದ ಅವು ತಿಳಿಯವು. ಹಾಗಾಗಿ 'ವೇದೋಕ್ತವು ಸತ್ಯವಾದಲ್ಲಿ ವೇದವು ಪ್ರಮಾಣ' ಎಂದು ನಿಶ್ಚಯಿಸಲಾಗದು. ಆದುದರಿಂದ ವೇದದ ಪ್ರಾಮಾಣ್ಯವು ಆಪ್ತೋಕ್ತಿಯಿಂದಲೇ ನಿಶ್ಚಯಿಸಬೇಕು. ಪ್ರಮಾಣಭೂತವಾದ ವೇದದಿಂದ ಪ್ರತಿಪಾದಿತವಾದುದರಿಂದ ವೇದಜನ್ಯ ಜ್ಞಾನಕ್ಕೆ ಪ್ರಾಮಾಣ್ಯವನ್ನು ನಿಶ್ಚಯಿಸಬೇಕು ಎಂದು ಭಾವ.

4. 'ಈಶ್ವರನ ಮಾತುಗಳಾದುದರಿಂದ ವೇದಗಳು ಪ್ರಮಾಣ' ಎಂದು.

5. 'ಆಪ್ತನ ಮಾತುಗಳಾದುದರಿಂದ ವೇದವು ಪ್ರಮಾಣ' ಎಂದು.

(ಆಪ್ತೋಕ್ತಿಯು ವೇದದ ಪ್ರಾಮಾಣ್ಯದ ನಿಶ್ಚಾಯಕವಾದುದರಿಂದ) 'ವೇದವು ಸಕರ್ತೃಕವಲ್ಲ' ಎಂದಲ್ಲಿ 'ಪ್ರಾಮಾಣ್ಯಾಸಿದ್ಧಿ' ಎಂಬ ಬಾಧಕವು ಇರುವುದರಿಂದ. ವಾಕ್ಯತ್ವಾದಿ ಅನುಮಾನಗಳು ಅಪ್ರಯೋಜಕವು ಹೇಗಾದೀತು?[1]. ಆದುದರಿಂದಲೇ[2] ಅಕರ್ತೃಕತ್ವಾದ್ಯನುಮಾನವು ಪ್ರತಿತರ್ಕದಿಂದ ಪರಾಹತವಾಯಿತು[3]. ಉಪಾಧಿಗೆ ಸಾಧ್ಯವ್ಯಾಪಕತ್ವ ಭಂಗವು ಸಿದ್ಧಿಯಾಗುವುದು[4]. (ಪ್ರಾಚೀನರು) ಹೀಗೆ ತಿಳಿಸಿದ್ದಾರೆ - ಸಾಧನವು ಅನುಕೂಲತರ್ಕದಿಂದ ಯುಕ್ತವಾಗಿದ್ದಲ್ಲಿ, ಸಾಧ್ಯವ್ಯಾಪಕತ್ವಕ್ಕೆ ಭಂಗ ಬರುವುದರಿಂದ (ಅಂತಹ ಅನುಮಾನಕ್ಕೆ) ಉಪಾಧಿದೋಷವು ಸಂಭವಿಸುವದಿಲ್ಲ[5]. ಇಂತಹ ಸಂದೇಹಕ್ಕೆ ಉತ್ತರಿಸುತ್ತಾರೆ '**ಪ್ರಾಮಾಣ್ಯಂ ಚ**'

---

1. 'ವೇದದಲ್ಲಿ ವಾಕ್ಯತ್ವವಿರಲಿ ಪೌರುಷೇಯತ್ವವು ಬೇಡ 'ಎಂದು ಅಪ್ರಯೋಜಕತ್ವವನ್ನು ತಿಳಿಸಲಾಗಿತ್ತು. ಪ್ರಕೃತ ವೇದವನ್ನು ಪೌರುಷೇಯ ಎಂದು ಒಪ್ಪದ ಪಕ್ಷದಲ್ಲಿ ಅದರ ಪ್ರಾಮಾಣ್ಯದ ನಿಶ್ಚಯವಾಗದೇ ಹೋದೀತು ಎಂಬ ಬಾಧಕವಿರುವುದರಿಂದ ವಾಕ್ಯತ್ವಾನುಮಾನವು ಅಪ್ರಯೋಜಕವಲ್ಲ ಎಂದು ಪ್ರತಿವಾದಿಯ ಭಾವ.

2. ವಾಕ್ಯತ್ವಾನುಮಾನದಲ್ಲಿ ಅಪ್ರಯೋಜಕತ್ವದ ಶಂಕೆಯು ಇಲ್ಲದಿರುವುದರಿಂದ.

3. 'ವೇದಃ ಅಕರ್ತೃಕಃ ವೇದತ್ವಾತ್, ಅಪ್ರಮಿತಕರ್ತೃಕತ್ವಾತ್, ಅವಿಚ್ಛಿನ್ನಪರಂಪರತ್ವಾತ್' ಎಂಬಿತ್ಯಾದಿ ಅಕರ್ತೃಕತ್ವಾನುಮಾನವು. 'ವೇದದಲ್ಲಿ ವೇದತ್ವಾದಿಗಳು ಇರಲಿ, ಅಕರ್ತೃಕತ್ವವು ಇಲ್ಲದಿರಲಿ. ವೇದವು ಅಕರ್ತೃಕವಾದಲ್ಲಿ , ಅದರ ಪ್ರಾಮಾಣ್ಯದ ನಿಶ್ಚಯವಾಗದೇ ಹೋದೀತು' ಎಂಬ ಪ್ರತಿತರ್ಕದಿಂದ ಪರಾಹತವಾಗುವುದು ಎಂದು ಭಾವ.

4. ವೇದಃ ಸಕರ್ತೃಕಃ ವಾಕ್ಯತ್ವಾತ್ ಎನ್ನುವ ಅನುಮಾನಕ್ಕೆ ತತ್ವವಾದಿಗಳು ಅಕರ್ತೃಕತ್ವ-ಪ್ರಸಿದ್ಧ್ಯಭಾವವನ್ನು ಉಪಾಧಿ ಎಂದು ತಿಳಿಸಿದ್ದರು. ಪ್ರಕೃತ ಪಕ್ಷವಾದ ವೇದದಲ್ಲಿ ಸಕರ್ತೃಕತ್ವವೇ ಪ್ರಸಿದ್ಧವಾದುದರಿಂದ, ಅಕರ್ತೃಕತ್ವ ಪ್ರಸಿದ್ಧ್ಯಭಾವವು- ಉಪಾಧಿಯು ಸಕರ್ತೃಕತ್ವರೂಪ ಸಾಧ್ಯದಿಂದ ಅವ್ಯಾಪಕವಾಯಿತು ಎಂದು ಭಾವ.

5. ವೇದಃ ಪೌರುಷೇಯಃ (ಸಕರ್ತೃಕಃ) ವಾಕ್ಯತ್ವಾತ್' ಎಂದು ಪ್ರತಿವಾದಿಯ ಅನುಮಾನ. ಈ ಅನುಮಾನಕ್ಕೆ ವಾದಿಗಳು ಅಕರ್ತೃಕತ್ವಪ್ರಸಿದ್ಧ್ಯಭಾವವನ್ನು ಉಪಾಧಿ ಎಂದು ಹೇಳಿದರು. ಆದರೆ ವಾಕ್ಯತ್ವಾನುಮಾನಕ್ಕೆ ಉಪಾಧಿಯನ್ನು ಹೇಳಲು ಶಕ್ಯವಿಲ್ಲ. ಏಕೆಂದರೆ ವಾಕ್ಯತ್ವಾನುಮಾನವು ಅನುಕೂಲತರ್ಕದಿಂದ ಕೂಡಿದೆ. ಯಾವ ಹೇತುವು ಅನುಕೂಲ ತರ್ಕದಿಂದ ಯುಕ್ತವಾಗಿರುವುದೋ ಅದು ಪಕ್ಷದಲ್ಲಿ ಸಾಧ್ಯದ ಅಸ್ತಿತ್ವವನ್ನು ನಿಶ್ಚಯಗೊಳಿಸುವುದು. ವಸ್ತುತಃ ಪಕ್ಷವು 'ಸಂದಿಗ್ಧಸಾಧ್ಯವಾನ್' ಎನ್ನುವುದು ಪ್ರಸಿದ್ಧ. ಆದರೆ, ಅನುಕೂಲತರ್ಕ ಸಹಿತವಾದ ಹೇತುವು ಪಕ್ಷದಲ್ಲಿ ಸಾಧ್ಯವನ್ನು ನಿಶ್ಚಯಗೊಳಿಸುವುದು. ಸಾಧ್ಯ ನಿಶ್ಚಿತವಾದಲ್ಲಿ, ಉಪಾಧಿಗೆ ಸಾಧ್ಯವ್ಯಾಪಕತ್ವಭಂಗವು ನಿಶ್ಚಯವಾಗುವುದು ಎಂದು ಭಾವ.

ಎಂದು. ಎಲ್ಲ ಜ್ಞಾನಗಳ ಯಾಥಾರ್ಥ್ಯ ರೂಪ ಪ್ರಾಮಾಣ್ಯವು ಸ್ವತ ಏವ - ಜ್ಞಾನಗ್ರಾಹಕ ಸಾಮಗ್ರಿಯಿಂದಲೇ 'ಗೃಹ್ಯತೇ' (ಗ್ರಹಿಸಲಾಗುವುದು) ಎಂದು ಶೇಷ ಪೂರ್ಣಗೊಳಿಸಿಕೊಳ್ಳಬೇಕು.

**ಪ್ರಾಮಾಣ್ಯದ ಗ್ರಹಿಕೆಗೆ ಆಪ್ತೋಕ್ತತ್ವಾದಿಗುಣಗಳು ಅನಗತ್ಯ**

**ಏತದುಕ್ತಂ ಭವತಿ - ಭವೇದೇವಂ ಯದಿ ಜ್ಞಾನಂ ಮನಸಾऽವಸೇಯಂ, ತದೀಯಂ ಯಾಥಾರ್ಥ್ಯಂ ಉಕ್ತವಿಧಯಾ ಸಂವಾದೇನಾನುಮೇಯಮ್ ಇತಿ ಪರತಃ ಪ್ರಾಮಾಣ್ಯಗ್ರಹಣಂ ಸ್ಯಾತ್ । ನ ಚೈವಂ, ಕಿಂ ನಾಮ? ಜ್ಞಾನಂ ಸಾಕ್ಷಿವೇದ್ಯಂ, ತಚ್ಚ ವಕ್ಷ್ಯತೇ । ತತ್ಪ್ರಾಮಾಣ್ಯಮಪಿ ಸಾಕ್ಷಿಪ್ರತ್ಯಕ್ಷ-ವೇದ್ಯಮೇವ । ಇಂದ್ರಿಯಲಿಙ್ಗಶಬ್ದಾನಾಂ ತು ಯಥಾರ್ಥಜ್ಞಾನಸಾಧನತ್ವ-ಲಕ್ಷಣಂ ಪ್ರಾಮಾಣ್ಯಮ್, ಅನ್ವಯ-ವ್ಯತಿರೇಕಾವಸೇಯಮ್ । ತಥಾ ಚ 'ಕುತ್ರಾಪಿ ಪ್ರಾಮಾಣ್ಯಗ್ರಹಣೇ ನಾऽಪ್ತೋಕ್ತತ್ವಾದೇರುಪಯೋಗಃ' ಇತಿ ।**

ಇಷ್ಟು ತಿಳಿಸಿದಂತಾಗುವುದು- ಒಂದು ವೇಳೆ ಜ್ಞಾನವು ಮನದಿಂದ ಗೃಹೀತವಾದಲ್ಲಿ, ಅದರ ಪ್ರಾಮಾಣ್ಯವನ್ನು ನೀವು ತಿಳಿಸಿದಂತೆ 'ಸಂವಾದದಿಂದ ಊಹಿಸಬೇಕು' ಎಂದು ಪ್ರಾಮಾಣ್ಯದ ಗ್ರಹಣವು ಪರತಃ ಎಂದಾಗುತ್ತಿತ್ತು. ಹೀಗಲ್ಲ, ಮತ್ತೆ ಏನು ? ಜ್ಞಾನವು ಸಾಕ್ಷಿಯಿಂದ ವೇದ್ಯ, ಇದನ್ನು ಮುಂದೆ ವಿವರಿಸಲಾಗುವುದು. ಆ ಜ್ಞಾನದ ಪ್ರಾಮಾಣ್ಯವೂ ಸಹ ಸಾಕ್ಷಿಯಿಂದಲೇ ವೇದ್ಯವಾಗುವುದು. ಇಂದ್ರಿಯ, ಹೇತು, ಆಗಮ ಇವುಗಳಲ್ಲಿರುವ ಯಥಾರ್ಥಜ್ಞಾನಸಾಧನತ್ವರೂಪವಾದ ಪ್ರಾಮಾಣ್ಯವು ಅನ್ವಯ ವ್ಯತಿರೇಕಗಳಿಂದ ತಿಳಿಯಬೇಕು[1]. ಹಾಗಾಗಿ ಯಾವ ಸಂದರ್ಭದಲ್ಲೂ ಸಹ ಪ್ರಾಮಾಣ್ಯದ ಅರಿವಿಗೆ ಆಪ್ತೋಕ್ತತ್ವಾದಿಗಳ ಅಗತ್ಯ ಇಲ್ಲ ಎಂದು[2].

---

1. ಜನ್ಯವಾದ ಜ್ಞಾನವು ಯಥಾರ್ಥವಾದಲ್ಲಿ ಜ್ಞಾನಸಾಧನಗಳ ಪ್ರಾಮಾಣ್ಯವನ್ನು, ಜನ್ಯವಾದ ಜ್ಞಾನವು ಅಪ್ರಮಾಣವಾದಲ್ಲಿ ಸಾಧನಗಳು ಅಪ್ರಮಾಣ ಎಂದು ತಿಳಿಯಬೇಕು ಎಂದು ಭಾವ.

2. ಸಜಾತೀಯ ವಿಜಾತೀಯಸಂವಾದವನ್ನು 'ಆಪ್ತೋಕ್ತತ್ವಾದಿ' ಎಂಬಲ್ಲಿರುವ ಆದಿ ಪದದಿಂದ ಪರಿಗ್ರಹಿಸಬೇಕು.

**ಜ್ಞಾನಗ್ರಾಹಕಸಾಮಗ್ರಿಯಿಂದಲೇ ಪ್ರಾಮಾಣ್ಯದ ಗ್ರಹಣ**

**'ಜ್ಞಾನಗ್ರಾಹಕಮಾತ್ರೇಣೈವ ತತ್ಪ್ರಾಮಾಣ್ಯಗ್ರಹಣಮ್' ಇತ್ಯೇತತ್ ಕುತಃ? ಇತ್ಯತ ಆಹ 'ಅನ್ಯಥಾ' ಇತಿ । ಪ್ರಾಮಾಣ್ಯಂ ತಾವದವಶ್ಯಂ ಕೇನಚಿತ್ ಪ್ರಮಾಣೇನ ಜ್ಞಾತವ್ಯಮ್, ಅನ್ಯಥಾ ತದಭಾವಪ್ರಸಙ್ಗಾತ್ । ನಚ ಜ್ಞಾನಗ್ರಾಹಕಾತಿರಿಕ್ತೇನ ತದ್ಗ್ರಹಣಂ ಸಂಭವತಿ । ತತ್ಪ್ರಾಮಾಣ್ಯಸ್ಯಾ-ಪ್ಯನ್ಯೇನ ಗ್ರಹಣಾಙ್ಗೀಕಾರೇಽನವಸ್ಥಾನಾತ್ । ತಸ್ಯ ಸ್ವತಸ್ತ್ವೇ ಪ್ರಥಮಸ್ಯೈವ ತಥಾತ್ವಾಙ್ಗೀಕಾರೋಪಪತ್ತೇಃ । ಅತಃ ಪರಿಶೇಷಾತ್ ಸ್ವತಸ್ತ್ವಸಿದ್ಧಿಃ ।**

'ಜ್ಞಾನವನ್ನು ಗ್ರಹಿಸುವ ಸಾಮಗ್ರಿಯಿಂದಲೇ ಜ್ಞಾನದ ಪ್ರಾಮಾಣ್ಯವೂ ಗ್ರಹೀತವಾಗುತ್ತದೆ' ಎಂದೇಕೆ (ಒಪ್ಪಬೇಕು)? ಉತ್ತರಿಸುತ್ತಾರೆ 'ಅನ್ಯಥಾ' ಎನ್ನುವುದರಿಂದ. ಅವಶ್ಯವಾಗಿ ಪ್ರಾಮಾಣ್ಯವನ್ನು ಯಾವುದಾದರೂ ಒಂದು ಪ್ರಮಾಣವು ಗ್ರಹಿಸಲೇಬೇಕು. ಇಲ್ಲದ ಪಕ್ಷದಲ್ಲಿ ಪ್ರಾಮಾಣ್ಯವೇ ಇಲ್ಲದೇ ಹೋಗಬೇಕಾದೀತು. 'ಜ್ಞಾನವನ್ನು ಗ್ರಹಿಸುವ ಸಾಮಗ್ರಿಯಿಂದ ಭಿನ್ನವಾದ ಸಾಮಗ್ರಿಯಿಂದ ಪ್ರಾಮಾಣ್ಯವನ್ನು ಗ್ರಹಿಸುವುದು' ಎಂದು ಹೇಳಲಾಗದು. 'ಅದರ ಪ್ರಾಮಾಣ್ಯವನ್ನು ಮತ್ತೊಂದು (ಪ್ರಮಾಣವು) ಗ್ರಹಿಸುತ್ತದೆ' ಎಂದು ಒಪ್ಪಿದಲ್ಲಿ ಅನವಸ್ಥಾ ದೋಷ ಬರುವುದರಿಂದ[1]. 'ಮೊದಲ ಅರಿವಿನ ಪ್ರಾಮಾಣ್ಯವನ್ನು ಎರಡನೆಯ ಜ್ಞಾನವು ಗ್ರಹಿಸುತ್ತದೆ, ಹಾಗೆ ತನ್ನಲ್ಲಿಯ ಪ್ರಾಮಾಣ್ಯವನ್ನು ತಾನೇ ಗ್ರಹಿಸಿಕೊಳ್ಳುತ್ತದೆ' ಎಂದು ಎನ್ನಲಾಗುವುದು. ಎರಡನೆಯ ಜ್ಞಾನಕ್ಕೆ ತನ್ನ ಪ್ರಾಮಾಣ್ಯವನ್ನೂ ಗ್ರಹಿಸುವ ಸಾಮರ್ಥ್ಯವನ್ನು ಒಪ್ಪುವುದಾದಲ್ಲಿ ಮೊದಲ ಜ್ಞಾನಕ್ಕೇ ಆ ಸಾಮರ್ಥ್ಯವನ್ನು ಒಪ್ಪುವುದರಿಂದಲೇ ಎಲ್ಲವೂ ಉಪಪನ್ನವಾಗುವುದು. ಆದುದರಿಂದ ಅಂತ್ಯವಾಗಿ (ಜ್ಞಾನದ ಪ್ರಾಮಾಣ್ಯವು) ಸ್ವತಃ ಎಂದೇ ಸಿದ್ಧವಾಗುವುದು.

---

1. 'ಅಯಂ ಘಟಃ' ಎಂದು ಜ್ಞಾನ. ಈ ಜ್ಞಾನದ ಪ್ರಾಮಾಣ್ಯವನ್ನು ಮತ್ತೊಂದು ಜ್ಞಾನವು ಗ್ರಹಿಸಬೇಕು ಎಂದು ಒಪ್ಪಿದಲ್ಲಿ, ಈ ಪ್ರಾಮಾಣ್ಯವನ್ನು ಗ್ರಹಿಸುವ ಜ್ಞಾನದ ಪ್ರಾಮಾಣ್ಯವನ್ನು ಮತ್ತೊಂದು ಜ್ಞಾನ, ಅದರ ಪ್ರಾಮಾಣ್ಯಕ್ಕೆ ಮತ್ತೊಂದು ಅರಿವು ಹೀಗೆ ಕೊನೆ ಇಲ್ಲದಂತಾಗುವುದು ಎಂದು ಭಾವ.

**ಜಡವಾದ ಅರಿವಿಗೆ ಸ್ವಪ್ರಕಾಶತ್ವವನ್ನು ಒಪ್ಪಲಾಗದು**

**ತಥಾ ಚ ಪ್ರಯೋಗಃ- 'ಜ್ಞಾನಗತಂ ಯಾಥಾರ್ಥ್ಯಂ ತದ್‌ಗ್ರಾಹಕೇಣೈವ ಗ್ರಾಹ್ಯಂ, ಗ್ರಾಹಕಾನ್ತರಾನುಪಪತ್ತೌ ಸತ್ಯಾಂ ಗೃಹ್ಯಮಾಣತ್ವಾತ್, ಯದ್ಯತೋಽನ್ಯೇನಾನುಪಪದ್ಯಮಾನಗ್ರಹಣಂ ಗೃಹ್ಯತೇ ತತ್ ತೇನೈವ ಗ್ರಾಹ್ಯಂ, ಯಥಾ ಚಕ್ಷುಷೋಽನ್ಯೇನಾನುಪಪದ್ಯಮಾನಸಾಕ್ಷಾತ್ಕಾರಂ ಸಾಕ್ಷಾತ್ಕ್ರಿಯಮಾಣಂ ರೂಪಂ ಚಕ್ಷುಷೈವ ಸಾಕ್ಷಾತ್ಕ್ರಿಯತೇ' ಇತಿ । ನ ಚ ವಿಶೇಷಣಾಸಿದ್ಧಿಃ, ಗ್ರಾಹಕಾನ್ತರಸ್ಯಾನವಸ್ಥಾಪ್ರಸಙ್ಗೇನ ನಿರಸ್ತತ್ವಾತ್ । ನ ಚ 'ಸಾಕ್ಷಿವೇದ್ಯತ್ವೇಽಪ್ಯನವಸ್ಥಾಪ್ರಸಙ್ಗಃ ಸಮಾನ ಏವ' ಇತಿ ವಾಚ್ಯಮ್ । 'ಸಾಕ್ಷೀ ಸ್ವಯಂ ಪ್ರಕಾಶಃ, ಸ್ವಾತ್ಮಾನಂ ಸ್ವಪ್ರಾಮಾಣ್ಯಂ ಚ ಗೋಚರಯತಿ' ಇತ್ಯಙ್ಗೀಕಾರಾತ್ । ಜ್ಞಾನಸ್ಯೈವ ತಥಾಭಾವೋಽಭ್ಯುಪಗಮ್ಯತಾಮ್? ಇತಿ ಚೇತ್, ಅನ್ತಃಕರಣವೃತ್ತೇಃ ಜ್ಞಾನಸ್ಯ ಜಡತ್ವೇನ ಸ್ವಯಂಪ್ರಕಾಶತ್ವಾಯೋಗಾದಿತಿ ।**

ಹಾಗಾದಲ್ಲಿ ಹೀಗೆ ಊಹಿಸುವುದು- ಜ್ಞಾನದಲ್ಲಿರುವ ಯಥಾರ್ಥತೆಯನ್ನು ಜ್ಞಾನವನ್ನು ಗ್ರಹಿಸುವ ಸಾಮಗ್ರಿಯೇ ಗ್ರಹಿಸುತ್ತದೆ, (ಆ ಪ್ರಾಮಾಣ್ಯವು) ಗ್ರಾಹಕಾಂತರವಿಲ್ಲದೆ ಗೃಹೀತವಾಗಿರುವುದರಿಂದ, ಯಾವ ಪದಾರ್ಥವು ಇತರಗ್ರಾಹಕಗಳಿಂದ ಗೃಹೀತವಾಗದೆ ಗೃಹೀತವಾಗುವುದೋ, ಅದು ಆ ಗ್ರಾಹಕದಿಂದಲೇ ಗೃಹೀತವಾಗಿರಬೇಕು. ಹೇಗೆ ರೂಪವು ನಯನೇತರಗಳಿಂದ ಗೃಹೀತವಾಗದೆ ಗೃಹೀತವಾಗುವುದೋ, ಆ ರೂಪವು ನಯನೇಂದ್ರಿಯದಿಂದಲೇ ಗೃಹೀತವಾಗಬೇಕು. ವಿಶೇಷಣಾಸಿದ್ಧಿ ಎನ್ನಲಾಗದು[1]. ಗ್ರಾಹಕಾಂತರ ವನ್ನು ಒಪ್ಪಿದಲ್ಲಿ ಅನವಸ್ಥಾ ಪ್ರಸಂಗವಿದೆ ಎಂದು ನಿರಾಕರಿಸಿರುವುದರಿಂದ. (ಜ್ಞಾನದಲ್ಲಿನ ಪ್ರಾಮಾಣ್ಯವನ್ನು) ಸಾಕ್ಷಿಯು ಗ್ರಹಿಸುವುದು ಎಂದು ಒಪ್ಪಿದರೂ ಅನವಸ್ಥಾಪ್ರಸಂಗವು ಸಮಾನವೇ

---

1. ಗ್ರಾಹಕಾಂತರಾನುಪಪತ್ತೌ ಸತ್ಯಾಂ ಗೃಹ್ಯಮಾಣತ್ವಾತ್ ಎನ್ನುವ ಹೇತುವಿನಲ್ಲಿ ವಿಶೇಷಣಭೂತವಾದ 'ಗ್ರಾಹಕಾಂತರಾನುಪಪತ್ತೌ' ಎನ್ನುವ ಭಾಗವು ಪ್ರತಿವಾದಿಗೆ ಸಮ್ಮತವಲ್ಲ. ಅಂದರೆ ಪ್ರಾಮಾಣ್ಯವು ಗೃಹೀತವಾಗಿದೆ ಆದರೆ 'ಪ್ರಮಾಣಾಂತರದಿಂದ ಅಗೃಹೀತ' ಎನ್ನುವ ಅಂಶದಲ್ಲಿ ಸಮ್ಮತಿ ಇಲ್ಲ ಎಂದು ಶಂಕಿಸಬಾರದು ಎಂದು ಭಾವ.

ಎಂದೆನ್ನಲಾಗದು[1]. ಸ್ವಯಂ ಜ್ಞಾನರೂಪವಾದ ಸಾಕ್ಷಿಯು ತನ್ನನ್ನು ಮತ್ತು ತನ್ನಲ್ಲಿಯ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಜ್ಞಾನಕ್ಕೇ ಆ ಸ್ವಭಾವವು ಇದೆ (ಸಾಕ್ಷಿಯಂತೆ ಸ್ವಯಂ ಪ್ರಕಾಶ) ಎಂದು ಒಪ್ಪಿ ಎಂದರೆ (ಆಗದು) ಅಂತಃಕರಣದ ಪರಿಮಾಣವಾದ ಜ್ಞಾನವು ಜಡವಾದುದರಿಂದ ಸ್ವಪ್ರಕಾಶತ್ವವು ಯುಕ್ತವಾಗದು ಎಂದು[2].

**ಪ್ರಾಮಾಣ್ಯವೂ ಪರತಃ ಎಂದಾದಲ್ಲಿ ಅನವಸ್ಥಾ ತಪ್ಪದು**

**ನನು 'ಪ್ರಾಮಾಣ್ಯಂ ಪರತೋ ಜ್ಞಾಯತೇಽನಭ್ಯಾಸದಶಾಯಾಂ ಸಾಂಶಯಿಕತ್ವಾತ್, ಅಪ್ರಾಮಾಣ್ಯವತ್' । ಅಪ್ರಾಮಾಣ್ಯಂ ಹಿ ಜ್ಞಾನಗ್ರಾಹಕಾತಿರಿಕ್ತೇನ ವಿಸಂವಾದಾದಿನಾ ಲಿಂಗೇನಾನುಮೇಯಮ್? ಇತ್ಯತೋ ವಾಽಽಹ 'ಅನ್ಯಥಾ' ಇತಿ । ಅನವಸ್ಥಾಲಕ್ಷಣಪ್ರತಿ-ಕೂಲತರ್ಕಪರಾಹತಮನುಮಾನಮ್ ।**

ಸರಿ, ಪ್ರಾಮಾಣ್ಯವು ಪರತಃ (ಜ್ಞಾನಗ್ರಾಹಕಾನ್ಯಸಾಮಗ್ರಿಯಿಂದ) ವೇದ್ಯವಾಗಿದೆ. ಅಭ್ಯಾಸವಿಲ್ಲದ ಸಂದರ್ಭದಲ್ಲಿ (ಅರಿವು ಪ್ರಾಪ್ತವಾಗುವ

---

1. ಜ್ಞಾನದ ಪ್ರಾಮಾಣ್ಯವನ್ನು ಮಾನಾಂತರವು ಗ್ರಹಿಸುವುದು ಎಂದು ಒಪ್ಪಿದಲ್ಲಿ, ಆ ಎರಡನೆಯ ಮಾನದ ಪ್ರಾಮಾಣ್ಯವನ್ನು ಮೂರನೆಯ ಪ್ರಮಾಣ, ಅದಕ್ಕೆ ಮಾನಾಂತರ ಎಂದು ಒಪ್ಪಬೇಕು ಆಗ ಅನವಸ್ಥಾ ಎಂದು ವಾದಿಗಳು ತಿಳಿಸಿದ್ದರು. ಪ್ರಕೃತ ಜ್ಞಾನದ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸಿದಲ್ಲಿ ಸಾಕ್ಷಿಯ ಪ್ರಾಮಾಣ್ಯವನ್ನು ಗ್ರಹಿಸಲು ಮತ್ತೊಂದು ಮಾನಾಂತರವನ್ನು ಒಪ್ಪಲೇಬೇಕು ಪುನಃ ಅನವಸ್ಥಾ ದೋಷ ? ಎಂದು ಭಾವ.

2. ಘಟ, ಪಟಗಳು ಬಾಹ್ಯಪದಾರ್ಥಗಳು. ಇವುಗಳನ್ನು ತಿಳಿಯಲು ಚಕ್ಷುರಾದಿಗಳು ಕರಣಗಳು. ಚಕ್ಷುರಾದಿ ಇಂದ್ರಿಯಗಳಿಂದ ಜನ್ಯವಾದ ಜ್ಞಾನಕ್ಕೆ ಮನವು ಅಧಿಕರಣವಾಗಿದೆ. ಸಾಕ್ಷಿಯು ಆ ಜ್ಞಾನದ ಗ್ರಾಹಕವಾಗಿದೆ. ಈ ಸಾಕ್ಷಿಯು ಈ ಜ್ಞಾನವನ್ನು ಗ್ರಹಿಸುವಾಗ ಅದರಲ್ಲಿನ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಅಹಂ ಸುಖೀ, ಅಹಂ ದುಃಖೀ, ಅಹಂ ಜ್ಞಾನವಾನ್, ಇತ್ಯಾದಿ ಜ್ಞಾನಗಳನ್ನು ಗ್ರಹಿಸುವದು ಸಾಕ್ಷಿ, ಈ ಸಾಕ್ಷಿಯು ಜ್ಞಾನವನ್ನು ಮತ್ತು ಜ್ಞಾನದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಸಾಕ್ಷಿಯು ಜ್ಞಾನಸ್ವರೂಪವಾದುದರಿಂದ ತನ್ನ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಆದರೆ ಜ್ಞಾನವೇ ವಿಷಯವನ್ನು ಗ್ರಹಿಸುವಂತೆ ತನ್ನಲ್ಲಿಯ ಪ್ರಾಮಾಣ್ಯವನ್ನೂ ಗ್ರಹಿಸಲಿ ಎಂದು ಒಪ್ಪಲಾಗದು. ಮನದ ಪರಿಣಾಮವಾದ ಜ್ಞಾನವು ಜಡ. ಜಡಕ್ಕೆ ಸ್ವಪ್ರಕಾಶತ್ವನ್ನು ಒಪ್ಪಲಾಗದು. ಇದು ಶಾಸ್ತ್ರಕಾರರಿಂದ ಒಪ್ಪಿತವಾದ ವಿಷಯ ಎಂದು ಭಾವ.

ಹೊಸಪರಿಯ ಸಂದರ್ಭದಲ್ಲಿ) ಸಂಶಯವು ಇರುವುದರಿಂದ ಅಪ್ರಾಮಾಣ್ಯದಂತೆ. (ಜ್ಞಾನದಲ್ಲಿನ) ಅಪ್ರಾಮಾಣ್ಯವನ್ನು ಜ್ಞಾನಗ್ರಾಹಕಗಳಿಂದ ಭಿನ್ನವಾದ ವಿಸಂವಾದಾದಿ ಹೇತುಗಳಿಂದ ಅನುಮಾನಿಸಲಾಗುವುದು? ಆದುದರಿಂದ ಉತ್ತರಿಸುತ್ತಾರೆ '**ಅನ್ಯಥಾ**' ಎಂದು. (ಪ್ರಾಮಾಣ್ಯವನ್ನು ಪರತಃ ಎಂದು ಸಾಧಿಸುವ ಈ ಅನುಮಾನವು) ಪ್ರತಿಕೂಲತರ್ಕದಿಂದ ನಿರಾಕೃತವಾಗಿದೆ[1].

---

1. 'ಇದಂ ರಜತಂ' ಎಂದು ಭ್ರಮಾತ್ಮಕಜ್ಞಾನ. ಈ ಜ್ಞಾನವು ಭ್ರಮಾತ್ಮಕ ಎಂದು ನಮ್ಮ ಅರಿವಿಗೆ ಹೇಗೆ ಬರುತ್ತದೆ ? 'ಈ ಅರಿವಿಗೆ ವಿಷಯವಾದ ರಜತವು ಅರ್ಥಕ್ರಿಯಾಕಾರಿ (ಪ್ರಯೋಜನಕಾರಿ) ಅಲ್ಲವಾದುದರಿಂದ ಇದು ಅಪ್ರಮಾಣ' ಎಂದು ತೀರ್ಮಾನಿಸಲಾಗುವುದು. 'ಇದಂ ರಜತಂ' ಎಂದು ಗ್ರಹಿಸಲು ಯಾವ ಸಾಮಗ್ರಿಗಳ ಅವಶ್ಯಕತೆ ಇದೆಯೋ ಅಷ್ಟೇ ಸಾಮಗ್ರಿಗಳು ಅದರಲ್ಲಿನ ಅಪ್ರಾಮಾಣ್ಯವನ್ನು ಗ್ರಹಿಸಲು ಸಮರ್ಥವಾಗಿಲ್ಲ. ಈ ಜ್ಞಾನಕ್ಕೆ ವಿಸಂವಾದಿಯಾದ 'ಇದು ರಜತವಲ್ಲ, ಅರ್ಥಕ್ರಿಯಾಕಾರಿಯಾಗದಿರುವದರಿಂದ' ಎಂಬ ಜ್ಞಾನವು, ಅದರಲ್ಲಿನ ಅಪ್ರಾಮಾಣ್ಯದ ಅರಿವಿಗೆ ಅವಶ್ಯಕವಾಗಿದೆ, ಹೀಗಾಗಿ 'ಅಪ್ರಾಮಾಣ್ಯಂ ಪರತಃ' ಎನ್ನಲಾಗುವುದು. 'ಅಯಂ ಘಟಃ' ಎಂಬ ಅರಿವು ಬರಲು ಯಾವ ಸಾಮಗ್ರಿಗಳು ಆವಶ್ಯಕವೋ ಅಷ್ಟೇ ಸಾಮಗ್ರಿಯಿಂದ ಅದರಲ್ಲಿ ಪ್ರಾಮಾಣ್ಯವನ್ನು ಗ್ರಹಿಸಲಾಗುತ್ತದೆ. ಹೀಗಾಗಿ ಪ್ರಾಮಾಣ್ಯವನ್ನು ಸ್ವತಃ ಎನ್ನುತ್ತಾರೆ. ಅಪ್ರಾಮಾಣ್ಯದಂತೆ ಪ್ರಾಮಾಣ್ಯವನ್ನೂ ಸಹ ಸಂವಾದಿ ಇತ್ಯಾದಿ ಅನ್ಯಸಾಮಗ್ರಿಯು ಗ್ರಹಿಸುತ್ತದೆ ಎಂದು ಹೇಳಲಾಗದು. 'ಪ್ರಾಮಾಣ್ಯವನ್ನು ಅನ್ಯಸಾಮಗ್ರೀಗ್ರಾಹ್ಯ' ಎಂದು ಒಪ್ಪಿದಲ್ಲಿ ಆ ಅನ್ಯಸಾಮಗ್ರಿಯ (ಸಂವಾದಿ ಜ್ಞಾನದ) ಪ್ರಾಮಾಣ್ಯವನ್ನು ಗ್ರಹಿಸಲು ಮತ್ತೊಂದು ಸಂವಾದಿಯನ್ನು, ಅದರ ಪ್ರಾಮಾಣ್ಯವನ್ನು ಗ್ರಹಿಸಲು ಇನ್ನೊಂದು ಸಂವಾದಿ ಎಂದು ಅನವಸ್ಥಾ ಪ್ರಸಂಗವಿದೆ. ಪ್ರಾಮಾಣ್ಯವನ್ನು ಪರತಃ ಎಂದು ಒಪ್ಪಿದ ಪಕ್ಷದಲ್ಲಿ ಅನವಸ್ಥಾ ದೋಷಪ್ರಾಪ್ತವಾದೀತು ಎಂಬುದಾಗಿ ಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಸಾಧಿಸುವ ಅನುಮಾನವು ಪ್ರತಿತರ್ಕದಿಂದ ನಿರಾಕೃತವಾಗುವುದು ಎಂದು ಭಾವ. ಇನ್ನು ಪ್ರಾಮಾಣ್ಯವು ಸ್ವತಃ ಎಂದಾದಲ್ಲಿ ಅನಭ್ಯಾಸದಶಾದಲ್ಲಿ (ಪರಿಚಯ ಇಲ್ಲದ ಸಂದರ್ಭದಲ್ಲಿ )ಜ್ಞಾನವು ಸಂಶಯಾತ್ಮಕವಾಗಿರುತ್ತದೆ. ಜ್ಞಾನಗ್ರಾಹಕ ಸಾಮಗ್ರಿಗಳೇ ಪ್ರಾಮಾಣ್ಯವನ್ನೂ ಗ್ರಹಿಸುವುದಾದಲ್ಲಿ, ಈ ಸಂದರ್ಭದಲ್ಲಿ ಏಕೆ ಗ್ರಹಿಸುವುದಿಲ್ಲ ? ಆದುದರಿಂದ ಪ್ರಾಮಾಣ್ಯವನ್ನು ಪರತಃ ಎನ್ನಬೇಕು ಎಂಬುದು ಪ್ರತಿವಾದಿಯ ಅಭಿಪ್ರಾಯ. ಅನಭ್ಯಾಸದಶಾದಲ್ಲಿ ಪ್ರಾಮಾಣ್ಯವನ್ನು ಗ್ರಹಣ ಮಾಡದಿರಲು ಪ್ರತಿಬಂಧಕವಿದೆ. ಸಂವಾದಿಯು ಪ್ರತಿಬಂಧಕವನ್ನು ಮಾತ್ರ ಪರಿಹರಿಸುತ್ತದೆ, ಪ್ರತಿಬಂಧಕದ ನಾಶಾನಂತರದಲ್ಲಿ ಸಾಕ್ಷಿಯೇ ಆ ಜ್ಞಾನದಲ್ಲಿನ ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ಮುಂದೆ ತಿಳಿಸಲಿದ್ದಾರೆ.

ಪೂರ್ವೋತ್ತರ ಗ್ರಂಥಗಳಿಗೆ ವಿರೋಧವಿಲ್ಲ

**ನ ಚೋಕ್ತಯುಕ್ತ್ಯಧೀನತ್ವಂ ಪ್ರಾಮಾಣ್ಯಸ್ಯ, ಬುದ್ಧಿದೋಷನಿರಾಸ-ಮಾತ್ರಕಾರಣತ್ವಾದ್ ಯುಕ್ತೀನಾಮ್ । ಅದುಷ್ಟಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ ।**

ಪ್ರಾಮಾಣ್ಯವು ಹಿಂದೆ ತಿಳಿಸಲಾದ (ಅಪೌರುಷೇಯತ್ವಾತ್ ವೇದಸ್ಯ ಇತ್ಯಾದಿ) ಯುಕ್ತಿಯ ಅಧೀನ ಎನ್ನುವುದು ತರವಲ್ಲ, (ಹಿಂದೆ ತಿಳಿಸಲಾದ) ಯುಕ್ತಿಗಳು ಬುದ್ಧಿದೋಷನಿರಸನಕ್ಕೆ (ಮನೋನಿಷ್ಠವಾದ ಅಪ್ರಾಮಾಣ್ಯಶಂಕಾ ನಿರಸನಕ್ಕೆ) ಕಾರಣವಾದುದರಿಂದ. ಬುದ್ಧಿದೋಷರಹಿತರಿಗೆ (ಸಂಶಯ ರಹಿತರಿಗೆ)ಪ್ರಾಮಾಣ್ಯವು ಸ್ವತಃ ಸಿದ್ಧವಾಗುವುದರಿಂದ.

**ನನು 'ಅಪೌರುಷೇಯತ್ವಾದ್, ವೇದಸ್ಯ' ಇತ್ಯಪೌರುಷೇಯತಯಾ ನಿರ್ದೋಷತ್ವೇನ ವೇದಸ್ಯ ತತ ಏವ ತಜ್ಜನ್ಯಜ್ಞಾನಸ್ಯಾಪಿ ಪ್ರಾಕ್ಪ್ರಾಮಾಣ್ಯಮನುಮಿತಮ್ । ತತ್ಕಥಮಿದಾನೀಂ 'ಪ್ರಾಮಾಣ್ಯಂ ಚ ಸ್ವತ ಏವ' ಇತ್ಯುಚ್ಯತೇ? ಇತ್ಯತ ಆಹ 'ನ ಚ' ಇತಿ । ಪ್ರಾಮಾಣ್ಯಸ್ಯ ಇತಿ ವಿಷಯೇಣ ವಿಷಯಿಣೋ ಜ್ಞಾನಸ್ಯೋಪಲಕ್ಷಣಂ , 'ನ ಚಾಪೌರುಷೇಯ-ತ್ವಾದ್ಯುಕ್ತಯುಕ್ತ್ಯಾ ವೇದಪ್ರಮಾಣ್ಯಂ ಜ್ಞಾಪಿತಂ ಪ್ರಾಗ್' ಇತ್ಯರ್ಥಃ । ಪ್ರಾಮಾಣ್ಯಜ್ಞಾಪನಾಯ ಯುಕ್ತೇರುಪನ್ಯಸ್ತತ್ವಾತ್ ಕಥಂ ನೇತ್ಯತ ಆಹ? 'ಬುದ್ಧಿ...' ಇತಿ । ಅನೃತವ್ಯಾಘಾತಾದಿದರ್ಶನೇನ ವೇದವಿಷಯಾ ಯಾಽಪ್ರಾಮಾಣ್ಯಶಙ್ಕಾ ಸಾ ಬುದ್ಧಿದೋಷೇತ್ಯುಚ್ಯತೇ ।**

'ಅಪೌರುಷೇಯತ್ವಾತ್ ವೇದಸ್ಯ' ಎಂಬ ವಾಕ್ಯದಿಂದ (ವೇದವು) ಅಪೌರುಷೇಯವಾದುದರಿಂದ ನಿರ್ದುಷ್ಟ, ಆದುದರಿಂದ ವೇದದ (ಪ್ರಾಮಾಣ್ಯವನ್ನು),ಆದುದರಿಂದ (ವೇದವು ಪ್ರಮಾಣವಾದುದರಿಂದ) ಅದರಿಂದ (ವೇದದಿಂದ) ಜನ್ಯವಾದ ಜ್ಞಾನದ ಪ್ರಾಮಾಣ್ಯವನ್ನು, ಈ

ಮೊದಲು ಅನುಮಾನಿಸಲಾಗಿದೆ[1]. ಈಗ 'ಪ್ರಾಮಾಣ್ಯಂ ಸ್ವತಃ' ಎಂದು ಹೇಗೆ ಹೇಳುವಿರಿ? ಆದುದರಿಂದ ಉತ್ತರಿಸುತ್ತಾರೆ 'ನ ಚ' ಎನ್ನುವುದರಿಂದ 'ಪ್ರಾಮಾಣ್ಯಸ್ಯ' ಎಂಬ ಶಬ್ದವು ವಿಷಯದಿಂದ ವಿಷಯಿಯಾದ ಜ್ಞಾನಕ್ಕೆ ಉಪಲಕ್ಷಣವಾಗಿದೆ[2]. ಹಿಂದೆ ಅಪೌರುಷೇಯತ್ವಾದಿ ಯುಕ್ತಿಯಿಂದ ವೇದಪ್ರಾಮಾಣ್ಯವನ್ನು ಸೂಚಿಸಲಾಗಿಲ್ಲ ಎಂದು (ಮೂಲದ) ಅರ್ಥ. ಪ್ರಾಮಾಣ್ಯದ ಜ್ಞಾನಕ್ಕೆ ಯುಕ್ತಿಯನ್ನು ಹೇಳಿರುವಿರಿ, ಹೇಗೆ ಹೇಳಿಲ್ಲ ಎನ್ನುವಿರಿ?[3]

1. ವೇದಾಃ ಪ್ರಮಾಣಂ ನಿರ್ದುಷ್ಟತ್ವಾತ್ ಸಮ್ಮತವಾಕ್ಯವತ್ ; ವೇದಾಃ ನಿರ್ದುಷ್ಟಾಃ ಅಪೌರುಷೇಯತ್ವಾತ್ ಪುರುಷನಿಬಂಧನದೋಷಾಭಾವಾತ್ ಎಂದು ಅನುಮಾನದಿಂದ ವೇದಗಳಿಗೆ ಪ್ರಾಮಾಣ್ಯವನ್ನು ಸಾಧಿಸಲಾಗಿದೆ. 'ಪ್ರಮಾಣಭೂತ ವೇದಜನ್ಯವಾದುದರಿಂದ ವೇದೋಕ್ತವಾದದ್ದು ಪ್ರಮಾಣ' ಎಂದು ವೇದಜನ್ಯ ಜ್ಞಾನಕ್ಕೆ ಪ್ರಾಮಾಣ್ಯವನ್ನು ಸಾಧಿಸಿದ್ದರಿಂದ, ಅನುಮಾನದಿಂದ ಪ್ರಾಮಾಣ್ಯವನ್ನು ನಿಶ್ಚಯಗೊಳಿಸಿದಂತಾಗಿದೆ. ಆದುದರಿಂದ ಪ್ರಾಮಾಣ್ಯವು ಸ್ವತಃ ಎನ್ನುವುದು ಹೇಗೆ ? ಎಂದು ಪ್ರಶ್ನೆಯ ಭಾವ.

2. ಮೂಲದಲ್ಲಿ 'ಯುಕ್ತ್ಯಧೀನತ್ವಂ ಪ್ರಾಮಾಣ್ಯಸ್ಯ' ಎಂದಿದೆ. ಇಲ್ಲಿ 'ಪ್ರಾಮಾಣ್ಯ' ಶಬ್ದಕ್ಕೆ ಪ್ರಾಮಾಣ್ಯದ ಮತ್ತು ಅದರ ಜ್ಞಾನದ ಎಂಬ ಅರ್ಥವು ಪ್ರಕೃತಕ್ಕೆ ಅಗತ್ಯವಿದೆ. ಆದುದರಿಂದ ಪ್ರಾಮಾಣ್ಯ ಶಬ್ದವು ಅದರ ಜ್ಞಾನಕ್ಕೂ ಉಪಲಕ್ಷಣವಾಗಿದೆ ಎಂದು ಟೀಕೆಯಲ್ಲಿ ತಿಳಿಸಿದರು. ಶಬ್ದದಿಂದ ನೇರವಾಗಿ ಬೋಧವಾಗುವ ಅರ್ಥವನ್ನು 'ವಾಚ್ಯಾರ್ಥ' ಎಂದು. ಅರ್ಥದ ಅರ್ಥವನ್ನು (ಶಬ್ದದಿಂದ ನೇರವಾಗಿ ಬೋಧಿತವಾಗದೇ ಇರುವ ಅರ್ಥವನ್ನು) ಲಕ್ಷಣಾರ್ಥ, ಉಪಲಕ್ಷಣ, ಎಂದು ಶಾಸ್ತ್ರದಲ್ಲಿ ತಿಳಿಸಲಾಗಿದೆ. ಈ ರೀತಿಯಾಗಿ ಉಪಲಕ್ಷಣವಾಗಬೇಕಾದಲ್ಲಿ ಲಕ್ಷ್ಯಕ್ಕೂ ಉಪಲಕ್ಷಣಾರ್ಥಕ್ಕೂ ಸಂಬಂಧವಿರಬೇಕು. ಉದಾಹರಣೆಗೆ 'ಬೆಕ್ಕಿನಿಂದ ಹಾಲನ್ನು ರಕ್ಷಿಸು' ಎಂದು ಹೇಳಿದಾಗ ಕೇವಲ ಬೆಕ್ಕಿನಿಂದ ಮಾತ್ರ ಹಾಲನ್ನು ಕಾಪಾಡುವುದಲ್ಲ, ಹಾಲನ್ನು ಅಪಹರಿಸುವ ನಾಯಿ ಮುಂತಾದ ಇತರ ಪ್ರಾಣಿಗಳಿಂದಲೂ ರಕ್ಷಿಸಬೇಕು ಎಂದು ಆ ಮಾತಿನ ಅರ್ಥ. ವಸ್ತುತಃ 'ಬೆಕ್ಕು' ಎನ್ನುವ ಶಬ್ದಕ್ಕೆ 'ನಾಯಿ ಮುಂತಾದ ಪ್ರಾಣಿ' ಎಂಬ ಅರ್ಥವಿಲ್ಲ, ಇದು ಪರಂಪರೆಯ ಅರ್ಥ–ಲಕ್ಷಣಾರ್ಥ. ಈ ಪರಂಪರಾರ್ಥವನ್ನು ಹೇಗೆ ಊಹಿಸುವುದು? ಬೆಕ್ಕು ಎಂದರೆ ಪ್ರಕೃತದಲ್ಲಿ ಕೇವಲ ಬೆಕ್ಕಲ್ಲ, 'ದಧ್ಯುಪಘಾತಕದ್ರವ್ಯ'– 'ಹಾಲನ್ನು ಅಪಹರಿಸುವ ಪ್ರಾಣಿಗಳು ಯಾವುವೋ ಅವೆಲ್ಲವೂ' ಎಂದು ಶಾಸ್ತ್ರದಲ್ಲಿ ನಿರ್ಣಯಿಸಿರುತ್ತಾರೆ. ಹಾಗೆಯೆ ಪ್ರಕೃತದಲ್ಲಿ 'ಪ್ರಾಮಾಣ್ಯ' ಎನ್ನುವ ಶಬ್ದದಿಂದ ವಾಚ್ಯವಾದ ವಿಷಯದೊಡನೆ 'ಪ್ರಾಮಾಣ್ಯದಜ್ಞಪ್ತಿ'ಯನ್ನು ಪರಿಗ್ರಹಿಸಬೇಕು. ಅದನ್ನು ಸ್ವೀಕರಿಸಲು ಸೂಚಕವಾದ ಸಂಬಂಧವು ವಿಷಯ–ವಿಷಯಿಭಾವ ಸಂಬಂಧ ಎಂದು ಭಾವ.

3. 'ನ ಚ ಏತೇಷಾಂ ವಚನಾನಾಂ ಅಪ್ರಾಮಾಣ್ಯಂ ಅಪೌರುಷೇಯತ್ವಾತ್ ವೇದಸ್ಯ' ಎಂದು ಹಿಂದೆ ಹೇಳಲಾಗಿದೆಯಲ್ಲವೆ ? ಎಂದು ಪ್ರಶ್ನೆಯ ಭಾವ.

ಆದುದರಿಂದ ಉತ್ತರಿಸುತ್ತಾರೆ. 'ಬುದ್ಧಿ...' ಎಂದು. ವೇದವಾಕ್ಯಗಳಲ್ಲಿ ಅನೃತತ್ವ-ವ್ಯಾಘಾತತ್ವಾದಿಗಳು ಕಂಡಿರುವುದರಿಂದ ವೇದಗಳ ಬಗ್ಗೆ ಯಾವ ಅಪ್ರಾಮಾಣ್ಯದ ಶಂಕೆಯು ಬಂದಿತ್ತೋ ಅದನ್ನು ಬುದ್ಧಿದೋಷವೆಂದು ಹೇಳಲಾಗುವುದು[1].

**ಪೂರ್ವೋತ್ತರ ವಚನಗಳಲ್ಲಿ ವಿರೋಧಾಭಾವದ ಸ್ಫುಟೀಕರಣ**

**ಅಯಮಭಿಸಂಧಿಃ- ಸಾಕ್ಷ್ಯೇವ ಜ್ಞಾನಂ ತತ್ಪ್ರಾಮಾಣ್ಯಂ ಚ ವಿಷಯೀಕರ್ತುಂ ಕ್ಷಮಃ । ಕಿನ್ತು ಕಾರಣಾನ್ತರೋನಿಪಾತಜೇನ ಮಾನಸಾಪರಾಧೇನ ಪ್ರತಿಬದ್ಧೋ ಜ್ಞಾನಮಾತ್ರಂ ಗೃಹೀತ್ವಾ ತತ್ಪ್ರಾಮಾಣ್ಯಗ್ರಹಣಸ್ಯ ನೇಷ್ಟೇ । ಯಥಾ ಸ್ವಯಮೇವ ಗತಿಸಮರ್ಥೋಽಪಿ ಗಜೋ ಗೋಕ್ಷುರಕಾದಿನಾ ಪ್ರತಿಬದ್ಧೋ ನ ಚಲಿತುಂ ಕ್ಷಮತೇ । ತತ್ರ ತು ಯುಕ್ತ್ಯನುಸಂಧಾನ ಲಕ್ಷಣಪರೀಕ್ಷಾಽವಸರಃ । ಸಾ ಚ ಬುದ್ಧಿದೋಷಮಾತ್ರಂ ನಿರಸ್ಯತಿ । ತಸ್ಮಿನ್ ನಿರಸ್ತೇ ಸಾಕ್ಷೀ ಸ್ವಮಹಿಮ್ನೈವ ಪ್ರಾಮಾಣ್ಯಂ ಗೋಚರಯತಿ । ಯಥಾ ಗೋಕ್ಷುರಕಾದ್ಯಪಸರಣೇ ಸ್ವಯಮೇವ ಗಜೋ ಗಚ್ಛತಿ । ತತಃ ಪ್ರಾಚೀನೋ ಯುಕ್ತ್ಯುಪನ್ಯಾಸಃ ಸಾಕ್ಷಿಣಃ ಪ್ರಾಮಾಣ್ಯಗ್ರಹಣಪ್ರತಿಬನ್ಧಕಬುದ್ಧಿದೋಷನಿರಾಸಾರ್ಥಮೇವ ಕೃತಃ, ನತು ಪ್ರಾಮಾಣ್ಯಜ್ಞಾಪನಾರ್ಥಮಿತಿ ನ ಪೂರ್ವೋಕ್ತವಿರೋಧ ಇತಿ ।**

ಈ ವಾದದ ಅಭಿಪ್ರಾಯವು ಹೀಗಿದೆ- ಸಾಕ್ಷಿಯೇ ಜ್ಞಾನವನ್ನು ಅದರ ಪ್ರಾಮಾಣ್ಯವನ್ನೂ ಗ್ರಹಿಸಲು ಸಮರ್ಥ. ಆದರೆ ಕಾರಣಾಂತರಗಳಿಂದ ಉಂಟಾದ ಮಾನಸಾಪರಾಧದಿಂದ ಪ್ರತಿಬದ್ಧವಾದ (ಸಾಕ್ಷಿಯು) ಜ್ಞಾನವನ್ನು ಮಾತ್ರ ಗ್ರಹಿಸಿ ಅದರ ಪ್ರಾಮಾಣ್ಯವನ್ನು ಗ್ರಹಿಸಲು ಸಮರ್ಥವಾಗುವುದಿಲ್ಲ. ಹೇಗೆ ಸ್ವಯಂ ಗಮನ ಸಾಮರ್ಥ್ಯವನ್ನು ಹೊಂದಿರುವ ಆನೆಯು, ಕಲ್ಲು ಮುಳ್ಳುಗಳ ತಡೆಯಿಂದ ಪ್ರತಿಬದ್ಧವಾಗಿ ನಡೆಯಲು ಅಸಮರ್ಥವಾಗಿರುತ್ತದೆ. ಇಂತಹ ಸಂದರ್ಭದಲ್ಲಿ (ಮಾನಸಾಪರಾಧದಿಂದ ಪ್ರಾಮಾಣ್ಯವನ್ನು ಸಾಕ್ಷಿಯು

---

1. ಬೌದ್ಧಾದಿ ಸಮಯಿಗಳ ವಾದದಿಂದ ವೇದದ ವಿಷಯದಲ್ಲಿ ಅಪ್ರಾಮಾಣ್ಯಶಂಕೆಯು ಪ್ರಾಪ್ತವಾಗಿದ್ದಿತು. ಇದು ಪ್ರಾಮಾಣ್ಯದ ನಿಶ್ಚಯಕ್ಕೆ ತಡೆಯಾಗಿತ್ತು. ಆ ಬುದ್ಧಿದೋಷವನ್ನು ಈ ಅನುಮಾನಗಳು ನಿರಾಕರಿಸಲು ಪ್ರಾಮಾಣ್ಯವನ್ನು ಸಾಕ್ಷಿಯು ಸ್ವತಃ ಪರಿಗ್ರಹಿಸುವುದು ಎಂದು ಭಾವ.

ಗ್ರಹಿಸದೇ ಇರುವ ಸಂದರ್ಭದಲ್ಲಿ.) ಯುಕ್ತಿಯ ಅನುಸಂಧಾನ ರೂಪವಾದ ಪರೀಕ್ಷೆಗೆ ಅವಕಾಶವಿದೆ. ಅದಾದರೋ (ಯುಕ್ತಿಯ ಅನುಸಂಧಾನವಾದರೋ) ಬುದ್ಧಿಯ ದೋಷವನ್ನು ಮಾತ್ರ ಪರಿಹರಿಸುತ್ತದೆ (ಪ್ರಾಮಾಣ್ಯವನ್ನು ಗ್ರಹಿಸುವದಿಲ್ಲ). ಅದು (ಬುದ್ಧಿದೋಷವು) ನಿರಾಸಗೊಳ್ಳಲು ಸಾಕ್ಷಿಯು ತನ್ನ ಪ್ರಭಾವದಿಂದಲೇ ಪ್ರಾಮಾಣ್ಯವನ್ನು ಗ್ರಹಿಸುವುದು. ಹೇಗೆ ಕಲ್ಲು ಮುಳ್ಳು ಮುಂತಾದ ತಡೆಯು ಹೋಗಲು ಆನೆಯು ಸ್ವತಃ ಸಾಗುವುದೋ (ಹಾಗೆ). ಆದುದರಿಂದ ಹಿಂದೆ ಹೇಳಿದ ('ಅಪೌರುಷೇಯತ್ವಾತ್...' ಎನ್ನುವ) ಯುಕ್ತಿಯು (ವೇದದ) ಪ್ರಾಮಾಣ್ಯದ ಗ್ರಹಿಕೆಗಳ ಪ್ರತಿಬಂಧಕವಾದ ಮಾನಸದೋಷದ ನಿರಾಸಕ್ಕೆ ಸಾರ್ಥಕವಾಯಿತೇ ಹೊರತು (ವೇದದ) ಪ್ರಾಮಾಣ್ಯದ ಗ್ರಹಿಕೆಗಾಗಿ ಅಲ್ಲ. ಆದುದರಿಂದ ಹಿಂದಿನ ಈಗಿನ ಮಾತುಗಳಿಗೆ ವಿರೋಧವಿಲ್ಲ ಎಂದು.

#### 'ಪ್ರಾಮಾಣ್ಯಂ ಪರತಃ' ಎಂಬ ವಾದಿಗಳ ಅಭಿಮತದ ವಿಮರ್ಶೆ

**ಏತೇನೈತದಪಿ ನಿರಸ್ತಮ್, ಯದಾಹೋದಯನಃ- 'ಯದಿ ಪ್ರಾಮಾಣ್ಯಂ ಸ್ವತೋ ಜ್ಞಾಯೇತ, ತದಾ ಕದಾಚಿದಪಿ ಪ್ರಾಮಾಣ್ಯಸಂಶಯೋ ನ ಸ್ಯಾತ್, ಜ್ಞಾನತ್ವಸಂಶಯವತ್, ನಿಶ್ಚಿತೇ ತದನವಕಾಶಾತ್ । ನ ಹಿ ಸಾಧಕಬಾಧಕ-ಪ್ರಮಾಣಾಭಾವಮವಧೂಯ ಸಮಾನಧರ್ಮಾದಿದರ್ಶನಾದೇವಾಸೌ । ತಥಾ ಸತಿ ತದನುಚ್ಛೇದಪ್ರಸಙ್ಗಾತ್ । ಅಥ ಪ್ರಮಾಣವದಪ್ರಮಾಣೇಽಪಿ ತತ್ಪ್ರತ್ಯಯದರ್ಶನಾತ್ ವಿಶೇಷಾದರ್ಶನಾತ್, ಭವತಿ ಶಙ್ಕೇತ್ಯಭಿ-ಪ್ರಾಯಃ । ತತ್ಕಿಂ ಪ್ರಮಾಣಜ್ಞಾನೋಪಲಮ್ಭೇಽಪಿ ನ ತತ್ ಪ್ರಾಮಾಣ್ಯ-ಮುಪಲಬ್ಧಂ, ಪ್ರಮಾಣಜ್ಞಾನಮೇವ ವಾ ನೋಪಲಬ್ಧಮ್? ಆದ್ಯೇ ಕಥಂ ಸ್ವತಃ ಪ್ರಾಮಾಣ್ಯಗ್ರಹಃ? ಪ್ರತ್ಯಯಪ್ರತೀತಾವಪಿ ತದಪ್ರತೀತೇಃ । ದ್ವಿತೀಯೇ ಕಥಂ ತತ್ರ ಶಙ್ಕಾ ? ಧರ್ಮಿಣ ಏವಾನುಪಲಬ್ಧೇಃ , ಇತಿ ।**

ಇದರಿಂದ (ಹಿಂದಿನ ಉಪನ್ಯಾಸದಿಂದ ) ಇದೂ ಸಹ (ಈ ಮುಂದಿನ ಸಂದೇಹವನ್ನೂ) ಉತ್ತರಿಸಿದಂತಾಯಿತು- ಉದಯನರು ಹೀಗೆ ಹೇಳುವರು- ಒಂದು ವೇಳೆ ಪ್ರಾಮಾಣ್ಯದ ಗ್ರಹಿಕೆಯು ಸ್ವತಃ ಆಗುವುದಾದಲ್ಲಿ, ಆಗ ಯಾವ ಸಂದರ್ಭದಲ್ಲೂ ಸಹ (ಜ್ಞಾನದಲ್ಲಿನ) ಪ್ರಾಮಾಣ್ಯದ ಸಂದೇಹವೇ

ಇಲ್ಲದಂತಾದೀತು. ಜ್ಞಾನತ್ವದ ಸಂಶಯದಂತೆ. (ಪ್ರಾಮಾಣ್ಯದ) ನಿಶ್ಚಯವಾದಲ್ಲಿ (ಪ್ರಾಮಾಣ್ಯದ) ಸಂದೇಹಕ್ಕೆ ಅವಕಾಶವಿಲ್ಲವಾದುದರಿಂದ[1]. ಸಾಧಕ, ಬಾಧಕ ಪ್ರಮಾಣಗಳನ್ನು ಪರಿಗಣಿಸದೇ ಕೇವಲ ಸಮಾನ ಧರ್ಮಾದಿಗಳ ಜ್ಞಾನದಿಂದಲೇ ಇದು (ಈ ಸಂದೇಹ) ಎನ್ನಲಾಗದು[2]. ಹಾಗಾದಲ್ಲಿ ಸಂಶಯದ ನಿರಾಕರಣೆಯೇ ಆಗದೆ ಹೋದೀತು[3]. ಮತ್ತೆ, ಪ್ರಮಾಣಭೂತಜ್ಞಾನದಂತೆ,

1. 'ಪ್ರಾಮಾಣ್ಯಂ ಸ್ವತಃ' ಎಂದರೆ 'ಜ್ಞಾನವನ್ನು ಗ್ರಹಿಸಲು ಯಾವ ಸಾಮಗ್ರಿಗಳ ಆವಶ್ಯಕತೆ ಇದೆಯೋ ಅಷ್ಟೇ ಸಾಮಗ್ರಿಗಳು ಜ್ಞಾನದಲ್ಲಿನ ಪ್ರಾಮಾಣ್ಯವನ್ನೂ ಗ್ರಹಿಸುತ್ತವೆ' ಎನ್ನುವುದು. ಜ್ಞಾನವನ್ನು ಗ್ರಹಿಸುವ ಸಾಮಗ್ರಿಗಳೇ ಜ್ಞಾನದಲ್ಲಿರುವ ಜ್ಞಾನತ್ವ ರೂಪ ಧರ್ಮವನ್ನೂ ಗ್ರಹಿಸುತ್ತವೆ. ಆದುದರಿಂದ ಜ್ಞಾನದ ಗ್ರಹಣವಾದಾಗ ಇದು ಜ್ಞಾನವೋ ಅಜ್ಞಾನವೋ ಅಂದಾಗಲಿ, ನನ್ನಲ್ಲಿ ಜ್ಞಾನವು ಉಂಟೋ ಇಲ್ಲವೋ ಎಂದು ಯಾರಿಗೂ ಸಂದೇಹವಿರುವದಿಲ್ಲ. ಕಾರಣ ಜ್ಞಾನತ್ವದ ಗ್ರಹಣವೂ ಆಗಿರುವುದರಿಂದ. ಹಾಗೆ, ಪ್ರಕೃತದಲ್ಲಿ ಜ್ಞಾನಗ್ರಹಣಾನಂತರದಲ್ಲಿ ಆದರೊಡನೆ ಅದರಲ್ಲಿನ ಪ್ರಾಮಾಣ್ಯವೂ ಗೃಹೀತವಾದಲ್ಲಿ ಈ ಜ್ಞಾನವು ಪ್ರಮಾಣವೋ ಅಪ್ರಮಾಣವೋ? ಎಂದು ಯಾರಿಗೂ ಎಂದೂ ಸಂಶಯವು ಬಾರದಿರಬೇಕಿತ್ತು. ಆದರೆ ಅನುಭವ ಇದರ ವಿರುದ್ಧವಾಗಿದೆ ಎಂದು ಭಾವ.

2. ವೃಕ್ಷದ ಅರಿವಾಗಿದೆ, ವೃಕ್ಷತ್ವರೂಪ ಸಾಧಾರಣಧರ್ಮದ ಅರಿವಾಗಿದೆ. ತದ್ಗತವಾದ ವಿಶೇಷಧರ್ಮವಾದ ಚೂತತ್ವದ ಅರಿವೂ ಆಗಿದೆ, ಆದರೂ ವೃಕ್ಷತ್ವದ ಅರಿವಿನಿಂದ-ಸಾಧಾರಣಧರ್ಮದ ಅರಿವಿನಿಂದ 'ಇದಂ ಪನಸೋ ವಾ ಚೂತೋ ವಾ' ಎಂಬ ಸಂದೇಹವು ಉಂಟಾಗಬಹುದು ಎಂದು ಹೇಳುವುದು ತರವಲ್ಲ.

3. ದೂರದಲ್ಲಿ ಮರ ಒಂದನ್ನು ಕಂಡ ವ್ಯಕ್ತಿಗೆ 'ಈ ಮರವು ಮಾವೋ ಹಲಸೋ' ಎಂದು ಸಂದೇಹವು ಬರುತ್ತದೆ. ಆ ವ್ಯಕ್ತಿಗೆ ಆ ಮರದಲ್ಲಿನ ವಿಶೇಷಧರ್ಮದ ಅರಿವು ಇಲ್ಲದೆ ಇರುವ ಸಂದರ್ಭದಲ್ಲಿ ಮಾತ್ರ ಈ ಸಂದೇಹ. ಆ ಮರದಲ್ಲಿನ ವಿಶೇಷಧರ್ಮದ ಅರಿವು ಆದರೆ, ಸಂದೇಹವು ಉಳಿಯದೇ 'ಇದು ಮಾವಿನ ಮರ' ಎಂದೇ ಅರಿವಾಗುವುದು ಅನುಭವದಿಂದ ದಿಟವಾಗಿದೆ. ಆದರೆ ಪ್ರಕೃತದಲ್ಲಿ ವಿಶೇಷ ಸೂಚಕದ ಅರಿವಿದ್ದರೂ ಸಂದೇಹವು ಉಂಟಾಗುವುದು ಎಂದು ಒಪ್ಪಿದಲ್ಲಿ ಎಂದೂ ಸಂದೇಹದ ನಿವೃತ್ತಿಯೇ ಆಗದೇ ಹೋದೀತು. ಆದುದರಿಂದ ಸಾಧಕ ಬಾಧಕ ಪ್ರಮಾಣದ ಅರಿವಿದ್ದರೆ ಸಂಶಯಕ್ಕೆ ಅವಕಾಶವಿಲ್ಲ ಎನ್ನುವುದು ನಿಶ್ಚಯವಾಗುವುದು. ಪ್ರಕೃತದಲ್ಲಿ ಜ್ಞಾನವು ಗೃಹೀತವಾಗಿರೆ, ತದ್ಗತ ಪ್ರಾಮಾಣ್ಯವೂ ಸ್ವತಃ ಆಗಿದ್ದರೆ ಅದೂ ಗೃಹೀತವಾಗಲೇಬೇಕು. ಆದರೆ ಪ್ರಾಮಾಣ್ಯದ ಸಂಶಯವು ಅನೇಕ ಸಂದರ್ಭದಲ್ಲಿ ಇದೆ, ಆದುದರಿಂದ ಜ್ಞಾನಗ್ರಾಹಕ ಸಾಮಗ್ರಿಗಿಂತ ಹೆಚ್ಚಿನ ಸಾಮಗ್ರಿಯ ಅವಶ್ಯಕತೆಯು ಪ್ರಾಮಾಣ್ಯದ ಗ್ರಹಣದಲ್ಲಿದೆ ಎಂದು ಒಪ್ಪಿದಂತಾಗಿ, ಪ್ರಾಮಾಣ್ಯವು ಸ್ವತಃ ಎನ್ನುವ ವಾದವು ಭಗ್ನವಾಯಿತು ಎಂದು ಭಾವ.

ಅಪ್ರಮಾಣಭೂತಜ್ಞಾನದಲ್ಲಿಯೂ, 'ಇದಂ ಪ್ರಮಾಣಂ' ಎಂದು ಜ್ಞಾನವು ಕಂಡಿದ್ದರಿಂದ, (ಯಥಾರ್ಥಜ್ಞಾನ ಮತ್ತು ಅಯಥಾರ್ಥಜ್ಞಾನಗಳಲ್ಲಿನ) ವಿಶೇಷದ (ವಿಶೇಷವಾದ ಸೂಚಕದ) ಅರಿವು ಇಲ್ಲದೇ ಹೋದುದರಿಂದ ಶಂಕೆಗೆ ಅವಕಾಶವಿದೆ ಎಂದು ಆಭಿಪ್ರಾಯ[1]. ಪ್ರಮಾಣಭೂತವಾದ ಜ್ಞಾನವು ಉಪಲಬ್ಧವಾಗಿದ್ದರೂ ಅದರಲ್ಲಿನ ಪ್ರಾಮಾಣ್ಯವು ಉಪಲಬ್ಧವಾಗಲಿಲ್ಲ ಎಂದು ಅಭಿಪ್ರಾಯವೋ ? ಅಥವಾ ಪ್ರಮಾಣಭೂತವಾದ ಜ್ಞಾನವೇ ಉಪಲಬ್ಧವಾಗಿಲ್ಲ ಎಂದು ಅಭಿಪ್ರಾಯವೋ? ಮೊದಲ ಪಕ್ಷವನ್ನು ಒಪ್ಪಿದಲ್ಲಿ, ಪ್ರಾಮಾಣ್ಯಗ್ರಹಣವು ಸ್ವತಃ ಎನ್ನುವುದು ಹೇಗೆ ? ಜ್ಞಾನವು ಪ್ರತೀತವಾದರೂ ಅದರಲ್ಲಿನ ಪ್ರಾಮಾಣ್ಯದ ಪ್ರತೀತಿಯಾಗಿಲ್ಲ ಆದುದರಿಂದ[2]. ಎರಡನೇ ಪಕ್ಷದಲ್ಲಿ (ಪ್ರಮಾಣಭೂತವಾದ ಜ್ಞಾನವೇ ಉಪಲಬ್ಧವಾಗಿಲ್ಲ ಎನ್ನುವ ಪಕ್ಷದಲ್ಲಿ) ಸಂದೇಹಕ್ಕೆ ಅವಕಾಶವೆಲ್ಲಿ ? ಧರ್ಮಿಯೇ ಗೃಹೀತವಾಗದಿರುವುದರಿಂದ[3].

---

1. 'ಅಯಂ ಘಟಃ' ಎಂಬ ಜ್ಞಾನದಲ್ಲಿನ ಪ್ರಾಮಾಣ್ಯವನ್ನು ಸಾಕ್ಷಿಯು ಹೇಗೆ ಗ್ರಹಿಸುವುದೋ, ಹಾಗೆ 'ಇದಂ ರಜತಂ' ಎಂಬ ಜ್ಞಾನದಲ್ಲಿಯೂ ಪ್ರಾಮಾಣ್ಯವನ್ನು ಗ್ರಹಿಸುವುದು. ಅಂದರೆ ಜ್ಞಾನದ ಜೊತೆಯಲ್ಲಿ ಅದರ ಪ್ರಾಮಾಣ್ಯವನ್ನೂ ಆ ಸಾಮಗ್ರಿಗಳು ಗ್ರಹಿಸುತ್ತವೆ. ಅಂದರೆ ಇಲ್ಲದ ಪ್ರಾಮಾಣ್ಯವನ್ನೂ ಈ ಸಾಮಗ್ರಿಯು ಕೆಲವು ಸಂದರ್ಭದಲ್ಲಿ ಗ್ರಹಿಸುತ್ತದೆ. ಹಾಗಾಗಿ ಗ್ರಹಿಸಿರುವ ಪ್ರಾಮಾಣ್ಯವು ಸತ್ಯವೋ ಮಿಥ್ಯವೋ ? ಎಂಬ ಸಂದೇಹಕ್ಕೆ ಅವಕಾಶವಿದೆ. ಪ್ರಾಮಾಣ್ಯದ ಸಂದೇಹದಿಂದ ,ಪ್ರಾಮಾಣ್ಯಕ್ಕೆ ವಿಷಯವಾದ ಜ್ಞಾನದಲ್ಲೂ ಸಂದೇಹವು ಪ್ರಾಪ್ತವಾಗಬಹುದು ಎಂದು ಭಾವ.

2. ಜ್ಞಾನವನ್ನು ಗ್ರಹಿಸುವ ಸಾಮಗ್ರಿಯೇ ಅದರಲ್ಲಿನ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದು ಒಪ್ಪಿರುವಾಗ, ಜ್ಞಾನಗೃಹೀತವಾದರೂ ಅದರಲ್ಲಿನ ಪ್ರಾಮಾಣ್ಯವು ಗೃಹೀತವಾಗಿಲ್ಲ ಎಂದಾದಲ್ಲಿ ಪ್ರಾಮಾಣ್ಯಸ್ವತಸ್ತ್ವಕ್ಕೆ ಭಂಗ ಎಂದು ಭಾವ.

3. ವೃಕ್ಷಜ್ಞಾನ ಬಂದಲ್ಲಿ ಮಾವೋ, ಹಲಸೋ? ಎಂದು ಸಂದೇಹಕ್ಕೆ ಎಡೆ ಇದೆ. ಧರ್ಮಿಯಾದ ವೃಕ್ಷವೇ ಗೃಹೀತವಾಗದ ಪಕ್ಷದಲಿ ಸಂದೇಹಕ್ಕೆ ಎಡೆಯೇ ಇಲ್ಲ. ಪ್ರಕೃತದಲ್ಲಿ ಜ್ಞಾನವೇ ಗೃಹೀತವಾಗದೇ ಇದ್ದಲ್ಲಿ ಅದು ಪ್ರಮೆಯೋ ಭ್ರಮೆಯೋ ಎಂಬ ಸಂದೇಹಕ್ಕೆ ಅವಕಾಶವಿಲ್ಲ. ಸಂದೇಹವು ಉಪಲಬ್ಧವಾಗಿರುವುದರಿಂದ ಧರ್ಮಿಯಾದ ಜ್ಞಾನವು ಉಪಲಬ್ಧವಾದರೂ ಅದರಲ್ಲಿನ ಪ್ರಾಮಾಣ್ಯವು ಗೃಹೀತವಾಗಿಲ್ಲವಾದುದರಿಂದ ಪ್ರಾಮಾಣ್ಯವು ಸ್ವತಃ ಎನ್ನುವದು ತರವಲ್ಲ ಎಂದು ಭಾವ.

**ಉದಯನರ ಸಂದೇಹದ ಪರಿಹಾರ**

**ಧರ್ಮ್ಯುಪಲಬ್ಧಾವಪಿ ವ್ಯಾಘಾತಾದಿದರ್ಶನೇನ ಸಾಕ್ಷಿಣಿ ಪ್ರತಿಬದ್ಧೇ ಪ್ರಾಮಾಣ್ಯವಿಷಯೇ ಮನಸಿ ಸಂಶಯಾದ್ಯುಪಪತ್ತೇಃ । 'ಯುಕ್ತೀನಾಂ ಬುದ್ಧಿದೋಷನಿರಾಸಮಾತ್ರಕಾರಣತ್ವಂ ನ ತು ವೇದಪ್ರಾಮಾಣ್ಯಜ್ಞಪ್ತಿ ಕಾರಣತ್ವಮ್' ಇತ್ಯೇತತ್ ಕುತಃ? ಇತ್ಯತ ಆಹ 'ಅದುಷ್ಟ' ಇತಿ । ಯಸ್ಮಿನ್ ಸತ್ಯೇವ ಯದ್ ಭವತಿ ನಾಸತಿ ತತ್ ಖಲು ಕಾರಣಮ್ । ಸತೀಷ್ವೇವ ಯುಕ್ತಿಷು ಬುದ್ಧಿದೋಷನಿರಾಸೋ ಭವತಿ ನಾಸತೀಷು । ಪ್ರಾಮಾಣ್ಯಂತು, ಅನೃತಪುನರುಕ್ತವ್ಯಾಘಾತಾದ್ಯನುಸಂಧಾನರೂಪಬುದ್ಧಿದೋಷರಹಿತಾನಾಂ ಪುಂಸಾಂ ಸ್ವತ ಏವ- ಯುಕ್ತ್ಯಪೇಕ್ಷಾಂ ವಿನೈವ ಸಿದ್ಧಮ್, ಇತ್ಯನುಭವ-ಸಿದ್ಧಮ್ । ತಸ್ಮಾದುಉಕ್ತವ್ಯವಸ್ಥೈವ ಯುಕ್ತಾ ಇತಿ ।**

ಧರ್ಮಿಯ (ಜ್ಞಾನದ) ಉಪಲಬ್ಧಿಯು ಇದ್ದರೂ, ವ್ಯಾಘಾತಾದಿಗಳ ದರ್ಶನದಿಂದ ಸಾಕ್ಷಿಯು ಪ್ರಾಮಾಣ್ಯದ ಗ್ರಹಿಕೆಯ ವಿಷಯದಲ್ಲಿ ಪ್ರತಿಬದ್ಧ ವಾಗಲು, ಮನದಲ್ಲಿ ಸಂದೇಹ ಮುಂತಾದವುಗಳು ಉತ್ಪನ್ನವಾಗುವುದರಿಂದ. '(ಅಪೌರುಷೇಯತ್ವಾದಿ) ಯುಕ್ತಿಗಳು ಬುದ್ಧಿಯಲ್ಲಿನ ದೋಷಗಳನ್ನು ಮಾತ್ರ ನಿರಾಕರಿಸುತ್ತವೆ, ವೇದಗತ ಪ್ರಾಮಾಣ್ಯದ ಜ್ಞಾನಕ್ಕೆ ( ಈ ಯಿಕ್ತಿಗಳು) ಕಾರಣವಲ್ಲ ಎನ್ನುವುದು ಏಕೆ (ಯುಕ್ತಿಯೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ಏಕೆ ಒಪ್ಪಬಾರದು)? ಆದುದರಿಂದ ಉತ್ತರಿಸುತ್ತಾರೆ 'ಅದುಷ್ಟ' ಎನ್ನುವುದರಿಂದ. 'ಯಾವದು ಇದ್ದರೆ ಯಾವುದು ಉಂಟಾಗುವುದೋ, ಇಲ್ಲದೆ ಇದ್ದಲ್ಲಿ (ಅದು ಇಲ್ಲವೋ) ಅದನ್ನು ಕಾರಣ' ಎನ್ನುವರು. (ಪ್ರಕೃತದಲ್ಲಿ) ಯುಕ್ತಿಗಳಿದ್ದಲ್ಲಿ ಬುದ್ಧಿ ದೋಷದ ನಿರಾಕರಣೆ ಯಾಗುವದು, ಇಲ್ಲದೆ ಇದ್ದಲ್ಲಿ ನಿರಾಕರಣೆ ಇಲ್ಲ[1]. ಪ್ರಾಮಾಣ್ಯವಾದರೋ ಅನೃತ, ಪುನರುಕ್ತಿ , ವ್ಯಾಘಾತ ಮುಂತಾದವುಗಳ ಅನುಸಂಧಾನ ರೂಪವಾದ ಬುದ್ಧಿದೋಷವಿಲ್ಲದ ವ್ಯಕ್ತಿಗಳಿಗೆ ಸ್ವತ ಏವ- ಯುಕ್ತಿಯ ಅಪೇಕ್ಷೆ ಇಲ್ಲದೇ ಸಿದ್ಧವಾಗುವುದು ಎನ್ನುವುದು ಅನುಭವ

3.ಅಪ್ರಾಮಾಣ್ಯದ ಶಂಕೆ ಬಂದಾಗ ಮಾತ್ರ, ಜಿಜ್ಞಾಸುಗಳು ಯುಕ್ತ್ಯಾದಿಗಳ ಅನ್ವೇಷಣೆಗೆ ಯತ್ನಿಸುವರು. ಶಂಕೆ ಇಲ್ಲದ ಸಂದರ್ಭದಲ್ಲಿ ಯುಕ್ತಿಗಳ ಅನ್ವೇಷಣಕ್ಕೆ ಯತ್ನಿಸುವದಿಲ್ಲ. ಇದರಿಂದ ಪ್ರಾಮಾಣ್ಯಗ್ರಹಣಕ್ಕೆ ಯುಕ್ತಿಯು ಎಲ್ಲ ಸಂದರ್ಭದಲ್ಲೂ ಅವಶ್ಯಕವಲ್ಲ ಎಂದು ಭಾವ.

ಸಿದ್ಧವಾಗಿದೆ. ಆದುದರಿಂದ ಈ ಹಿಂದೆ ಹೇಳಿದ ವ್ಯವಸ್ಥೆಯೇ ಯುಕ್ತವಾದದ್ದು ಎಂದು.

**ಸಂವಾದಾನ್ವಯವ್ಯತಿರೇಕಾನುವಿಧಾಯಿತ್ವಾತ್ ಪ್ರಾಮಾಣ್ಯಜ್ಞಪ್ತೇಃ ತತ್ಕಾರ್ಯತ್ವಮಿತ್ಯೇತದಪ್ಯನೇನೈವ ನಿರಸ್ತಮ್, ವ್ಯತಿರೇಕಾಭಾವಸ್ಯಾನುಭವಸಿದ್ಧತ್ವಾತ್ । ಏತೇನೈವಾನಭ್ಯಾಸದಶಾಯಾಂ ಸಾಂಶಯಿಕತ್ವಸ್ಯ ಅಸಿದ್ಧಿರಪ್ಯುಕ್ತಾ ವೇದಿತವ್ಯಾ । ಬುದ್ಧಿದೋಷಾಭಾವೇಽನಭ್ಯಾಸದಶಾಽಽಪನ್ನ-ಜ್ಞಾನಪ್ರಾಮಾಣ್ಯಸ್ಯಾಪಿ ನಿಷ್ಕಂಪಸ್ಯೈವ ಪ್ರತೀಯಮಾನತ್ವಾತ್ । ಕ್ವಚಿತ್ ಸಂಶಯಸ್ಯಾನ್ಯಥೋಪಪನ್ನತ್ವಾದಿತಿ ।**

(ಪ್ರಾಮಾಣ್ಯದ ಜ್ಞಪ್ತಿಯು) ಸಂವಾದದ ಅನ್ವಯ-ವ್ಯತಿರೇಕಗಳನ್ನು[1] ಅನುಸರಿಸಿ ಇರುವುದರಿಂದ ಪ್ರಾಮಾಣ್ಯದ ಅರಿವು ಸಂವಾದದ ಕಾರ್ಯ ಎಂದು ಸಿದ್ಧವಾಗುವುದು ಎನ್ನುವ (ಶಂಕೆಯೂ) ಸಹ ಈ (ಹಿಂದಿನ) ಉಪನ್ಯಾಸದಿಂದಲೇ ನಿರಾಕೃತವಾಯಿತು, ಇದರ ವಿರುದ್ಧವಾದುದೇ ಅನುಭವವಿದ್ದಲ್ಲಿ ಸಿದ್ಧವಾದುದರಿಂದ[2]. ಈ (ಹಿಂದಿನ) ಉಪನ್ಯಾಸದಿಂದಲೇ 'ಅನಭ್ಯಾಸ-ದಶಾಯಾಂ ಸಾಂಶಯಿಕತ್ವಾತ್' ಎಂಬ ಹೇತುವಿಗೆ ಅಸಿದ್ಧಿಯನ್ನು ತಿಳಿಸಿದಂತಾಯಿತು ಎಂದು ತಿಳಿಯುವುದು. ಬುದ್ಧಿದೋಷವಿಲ್ಲದ ಸಂದರ್ಭದಲ್ಲಿ, ಅನಭ್ಯಾಸಾವಸ್ಥೆಯಲ್ಲೂ ಸಹ ಜ್ಞಾನಪ್ರಾಮಾಣ್ಯವು ಗೃಹೀತವಾಗಿ ನಿಷ್ಕಂಪಪ್ರವೃತ್ತಿಯೇ ಕಂಡಿರುವುದರಿಂದ. ಕೆಲವು ಸಂದರ್ಭದಲ್ಲಿ ಕಂಡ ಸಂಶಯಕ್ಕೆ ಬೇರೇ ಕಾರಣವು ಇರುವುದರಿಂದ[3].

---

1. ಸಂವಾದವಿದ್ದಾಗ ಪ್ರಾಮಾಣ್ಯದ ಜ್ಞಾನ ಎನ್ನುವುದು ಅನ್ವಯ, ಸಂವಾದವಿಲ್ಲದೇ ಇದ್ದಲ್ಲಿ ಪ್ರಾಮಾಣ್ಯದ ಜ್ಞಾನವಿಲ್ಲ ಎನ್ನುವದು ವ್ಯತಿರೇಕ.
2. 'ಅಯಂ ಘಟಃ' 'ಇದಂ ಮಧುರಂ' ಇತ್ಯಾದಿ ಜ್ಞಾನದ ಪ್ರಾಮಾಣ್ಯವನ್ನು ಯುಕ್ತ್ಯಾದಿ ಸಂವಾದವನ್ನು ಅಪೇಕಿಸದೇ ಗ್ರಹಣವಾದುದು ಎಲ್ಲರ ಅನುಭವದಲ್ಲಿದೆ ಎಂದ ಭಾವ.
3. ಅನಭ್ಯಾಸಾವಸ್ಥೆಯಲ್ಲಿ ಎಲ್ಲೆಡೆಯೂ ನಿಷ್ಕಂಪಪ್ರವೃತ್ತಿಯಿಲ್ಲ. ಕೆಲವು ಸಂದರ್ಭದಲ್ಲಿ ಸಂಶಯವೇ ಇದೆ. ಜ್ಞಾನಗೃಹೀತವಾಗಿದ್ದರೂ ಅದರಲ್ಲಿನ ಪ್ರಾಮಾಣ್ಯವು ಗೃಹೀತವಾಗಿಲ್ಲ ಆದುದರಿಂದ ಅಪ್ರಾಮಾಣ್ಯದಂತೆ ಪ್ರಾಮಾಣ್ಯವೂ ಪರತಃ ಎಂಬ ಸಂದೇಹವನ್ನು 'ಧರ್ಮ್ಯುಪಲಬ್ಧಾವಪಿ ವ್ಯಾಘಾತಾದಿ ದರ್ಶನೇನ...' ಇತ್ಯಾದಿ ಹಿಂದಿನ ವಾಕ್ಯಗಳಿಂದ 'ಸಾಕ್ಷಿಯು ಅಂತಹ ಸಂದರ್ಭದಲ್ಲಿ ತಟಸ್ಥವಾಗಿರುತ್ತದೆ ಮನದಲ್ಲಿ ಸಂಶಯವು ಮೂಡುವುದು' ಎಂದು ಉತ್ತರಿಸಲಾಗಿದೆ ಎಂದು ಭಾವ.

**'ಪ್ರಾಮಾಣ್ಯಂ ಪರತಃ' ಎಂದಾದಲ್ಲಿ ಅನವಸ್ಥಾ ಅಪರಿಹಾರ್ಯ**

ಸ್ಯಾದೇತತ್, ಜಲಾದಿಜ್ಞಾನೇ ಜಾತೇ ಸತಿ ,ತತ್ಪ್ರಾಮಾಣ್ಯಶಙ್ಕಾಯಾಂ ಪ್ರವೃತ್ತಿಸಾಮರ್ಥ್ಯಂ ವಾ ತಜ್ಜಾತೀಯತ್ವಂ ವಾ ಪ್ರಮಾಣಾನ್ತರಂ ತನ್ನಿಶ್ಚಯಾರ್ಥಮಪೇಕ್ಷತೇ । ತದೀಯಪ್ರಾಮಾಣ್ಯಶಙ್ಕಾಯಾಮಪಿ ಪ್ರಮಾಣಾನ್ತರಮ್ । ಯತ್ ಪ್ರಾಮಾಣ್ಯೇ ತು ಶಙ್ಕೈವ ನೋದೇತಿ ತತ್ರ ಪ್ರಮಾಣಾನ್ತರಸಂವಾದೋಽಪಿ ನಾಪೇಕ್ಷ್ಯತೇ । ಅತಃ ಪ್ರಾಮಾಣ್ಯಗ್ರಹಣಸ್ಯ ಪರತಸ್ತ್ವೇಽಪಿ ನಾನವಸ್ಥಾಽಸ್ತಿ । ಅಸ್ತಿ ಚಾಸಾವರ್ಥೋ ಯಃ ಸ್ವಪ್ನೇಽಪಿ ನ ವ್ಯಭಿಚರತಿ । ತಥಾಹಿ, ಜಲಜ್ಞಾನಾಜ್ಜಲಾರ್ಥಿನಃ ಪ್ರವೃತ್ತಿಃ, ಪ್ರವೃತ್ತಸ್ಯ ಪ್ರಾಪ್ತಿಃ, ಪ್ರಾಪ್ತಸ್ಯ ಪಾನಂ, ಪಾನೇ ಸತಿ, ಉದನ್ಯಾನಿಮಿತ್ತದುಃಖೋಪಶಾನ್ತಿಃ ತೃಪ್ತಿಶ್ಚ, ತತೋ ದುಃಖಾಭಾವಸ್ಯ ಸುಖಸ್ಯ ಚಾನುಭವಃ । ನ ಚ ಜಲಾದಿ ಜ್ಞಾನಸ್ಯೇವ ದುಃಖಾಭಾವಾದಿಜ್ಞಾನಸ್ಯಾಪಿ ಪ್ರಾಮಾಣ್ಯೇ ಕಸ್ಯಚಿತ್ ಶಙ್ಕಾಽಸ್ತಿ । ತತ್ ಕಸ್ಯ ಹೇತೋಃ? ಜಲಾದಿಜ್ಞಾನಸ್ಯ ಮರುಮರೀಚಿಕಾದೌ ವ್ಯಭಿಚಾರದರ್ಶನಾದ್, ದುಃಖನಿವೃತ್ಯಾದಿಜ್ಞಾನಸ್ಯ ಕ್ವಾಪಿ ವ್ಯಭಿಚಾರಾ-ದರ್ಶನಾತ್ । ಅವಶ್ಯಂ ಚೈತತ್, ಸ್ವತಃ ಪ್ರಾಮಾಣ್ಯಗ್ರಹಣ-ವಾದಿನಾಽಪ್ಯಙ್ಗೀಕರ್ತವ್ಯಮ್ । ಅನ್ಯಥಾಽ ಪ್ರಾಮಾಣ್ಯಶಙ್ಕಾನಿವೃತ್ತಯೇ ಯುಕ್ತ್ಯನುಸಂಧಾನಾತ್ಮಕಪರೀಕ್ಷಾಪೇಕ್ಷಾಯಾಂ ತತ್ರಾಪಿ ಪರೀಕ್ಷಾನ್ತರಾ-ಪೇಕ್ಷಯಾಽನವಸ್ಥಾನಸ್ಯ ದುರ್ವಾರತ್ವಾತ್ । ಉಕ್ತಂ ಚ 'ನ ಪರೀಕ್ಷಾಽನವಸ್ಥಾ ಸ್ಯಾತ್ ಸಾಕ್ಷಿಸಿದ್ಧೇ ತ್ವಸಂಶಯಾತ್' (ಅನುವ್ಯಾ.3.4.153.)ಇತಿ ।

(ನಿಮ್ಮ ಈ ವಾದವು) ಯೋಗ್ಯವಾಗುತಿತ್ತು, ಜಲಾದಿಗಳ ಜ್ಞಾನವು ಉಂಟಾಗಲು ಆ ಜ್ಞಾನದ ಪ್ರಾಮಾಣ್ಯದಲ್ಲಿ ಸಂದೇಹವಿದ್ದಲ್ಲಿ, (ಜಲಾದಿಗಳನ್ನು ಉದ್ದೇಶಿಸಿ) ಪ್ರವೃತ್ತಿ ಉಂಟಾಗಲು (ನಿಃಶಂಕಾ ಪ್ರವೃತ್ತಿಯು ಉಂಟಾಗಲು) (ಪೂರ್ವಜ್ಞಾನಕ್ಕೆ) ಸದೃಶವಾದ ಮತ್ತೊಂದು ಪ್ರಮಾಣವನ್ನು ಅದರ (ಪೂರ್ವಜ್ಞಾನದ ಪ್ರಾಮಾಣ್ಯದ) ನಿಶ್ಚಯಕ್ಕಾಗಿ ಅಪೇಕ್ಷಿಸಲಾಗುವುದು. ಆ ಸಂವಾದಿಜ್ಞಾನದ ಪ್ರಾಮಾಣ್ಯದ ನಿಶ್ಚಯಕ್ಕಾಗಿ ಮತ್ತೊಂದು ಪ್ರಮಾಣವನ್ನು (ಅಪೇಕ್ಷಿಸಲಾಗುವುದು) ಯಾವ ಜ್ಞಾನದ ಪ್ರಾಮಾಣ್ಯದಲ್ಲಿ ಶಂಕೆ ಇಲ್ಲವೋ

ಅಂತಹ ಸಂದರ್ಭದಲ್ಲಿ ಪ್ರಮಾಣಾಂತರದ ಸಂವಾದವನ್ನು ಅಪೇಕ್ಷಿಸಲಾಗುವುದಿಲ್ಲ. ಆದುದರಿಂದ ಪ್ರಾಮಾಣ್ಯದ ಅರಿವು ಪರತಃ ಎಂದು ಒಪ್ಪಿದರೂ ಸಹ ಅನವಸ್ಥಾ (ದೋಷವು )ಇಲ್ಲ. ಅಂತಹ (ಪ್ರಾಮಾಣ್ಯದ ಶಂಕೆಯೇ ಇಲ್ಲದಂತಹ) ಒಂದು ಸಂದರ್ಭವಿದೆ. ಸ್ವಪ್ನದಲ್ಲೂ ವ್ಯಭಿಚರಿತವಾಗದಿರುವುದು. ಹೀಗಿದೆ- ಜಲದ ಜ್ಞಾನದಿಂದ ಜಲಾಭಿಲಾಷಿಯು ಪ್ರವೃತ್ತನಾಗುವನು, ಪ್ರವೃತ್ತನಾದವಗೆ (ಜಲವು) ಪ್ರಾಪ್ತವಾಗುವುದು, ಪ್ರಾಪ್ತವಾದ(ಜಲವನ್ನು) ಪಾನಮಾಡುವನು. ಕುಡಿದಲ್ಲಿ ಬಾಯಾರಿಕೆಯ ನಿಮಿತ್ತವಾದ ದುಃಖವು ಶಾಂತವಾಗಿ, ತೃಪ್ತಿಯನ್ನು ಹೊಂದುವನು. ಆದರಿಂದ ದುಃಖಾಭಾವದ, ಸುಖದ ಅನುಭವವು (ಪ್ರಾಪ್ತವಾಗುವುದು). ಜಲಾದಿ ಜ್ಞಾನದಂತೆ ದುಃಖಾಭಾವಾದಿ ಜ್ಞಾನಗಳಲ್ಲಿ ಯಾರಿಗೂ ಎಂದೂ ಪ್ರಾಮಾಣ್ಯದ ಶಂಕೆ ಇಲ್ಲ. ಅದು (ಸುಖೀ ದುಃಖೀ ಇತ್ಯಾದಿ ಅರಿವುಗಳಲ್ಲಿ ಎಂದೂ ಯಾರಿಗೂ ಸಂದೇಹವು ಇಲ್ಲದಿರುವುದು) ಯಾವ ಕಾರಣದಿಂದ? ಜಲಾದಿ ಜ್ಞಾನವು ಬಿಸಿಲುಗುದುರೆ ಮುಂತಾದವುಗಳಲ್ಲಿ ವ್ಯಭಿಚರಿತವಾದದ್ದು ಕಂಡಿರುವುದರಿಂದ, ದುಃಖನಿವೃತ್ತಿ ಮುಂತಾದ ಜ್ಞಾನಕ್ಕೆ ಎಂದೂ ವ್ಯಭಿಚಾರವು ಕಾಣದಿರುವುದರಿಂದ[1]. ಈ ವಾದವನ್ನು 'ಪ್ರಾಮಾಣ್ಯವನ್ನು ಸ್ವತಃ' ಎಂದು ವಾದಿಸುವವರೂ ಅವಶ್ಯವಾಗಿ ಒಪ್ಪಲೇಬೇಕು. ಹೀಗೆ ಒಪ್ಪದ ಪಕ್ಷದಲ್ಲಿ ಅಪ್ರಾಮಾಣ್ಯದ ಶಂಕೆಯ ನಿವೃತ್ತಿಗಾಗಿ ಯುಕ್ತಿಯ ಅನುಸಂಧಾನಾತ್ಮಕವಾದ ಪರೀಕ್ಷೆಯನ್ನು ಅಪೇಕ್ಷಿಸಲಾಗಿದೆ, ಆ ಯುಕ್ತಿಯಲ್ಲಿ ಅಪ್ರಾಮಾಣ್ಯಶಂಕೆಯನ್ನು ನಿವಾರಿಸಲು ಮತ್ತೊಂದು ಸಂವಾದಿಯನ್ನು ಅರಸಬೇಕು, ಹೀಗೆ ಅನವಸ್ಥಾ ಅಪರಿಹಾರ್ಯವಾದೀತು. 'ನ ಪರೀಕ್ಷಾಽನವಸ್ಥಾಸ್ಯಾತ್ ಸಾಕ್ಷಿಸಿದ್ಧೇತ್ವಸಂಶಯಾತ್' (ಸಾಕ್ಷಿಯಿಂದ ಸಿದ್ಧವಾದ ವಿಷಯದಲ್ಲಿ ಸಂದೇಹವಿಲ್ಲದ ಪ್ರಯುಕ್ತ ಪರೀಕ್ಷಾನವಸ್ಥಾ ಇಲ್ಲ) ಎಂದು (ನಿಮ್ಮ ಗ್ರಂಥದಲ್ಲಿಯೇ) ಹೇಳಲಾಗಿದೆ, ಎಂದು.

---

1. 'ಇದಂ ಜಲಂ' ಎಂದು ಜ್ಞಾನವು. ಬಿಸಿಲುಗುದುರೆಯನ್ನು ಕಂಡಾಗಲೂ ಬರುತ್ತದೆ, ಸರೋವರವನ್ನು ಕಂಡಾಗಲೂ ಬರುತ್ತದೆ. ಅಂದರೆ ಇದಂ ಜಲಂ ಎನ್ನುವ ಅರಿವು ನಿಯತವಾಗಿ ಸತ್ಯವಾಗಿಲ್ಲ. ಆದರೆ, 'ಅಹಂ ಸುಖೀ, ಅಹಂ ದುಃಖೀ' ಇತ್ಯಾದಿ ಅರಿವು ಎಂದೂ ಅಪ್ರಾಮಾಣವಾದದ್ದು ಯಾರ ಅನುಭವದಲ್ಲೂ ಇಲ್ಲ ಎಂದು ಭಾವ.

**ಆಕಾಂಕ್ಷಾವನ್ನೇ ಬುದ್ಧಿದೋಷ ಎಂದು ತಿಳಿಯುವುದು**

**ನ ಚಾऽಕಾಂಕ್ಷಾಯಾಮೇವ ಪ್ರಮಾಣಾನ್ತರಾಪೇಕ್ಷತ್ವಾದನವಸ್ಥಾಭಾವ ಇತಿ ವಾಚ್ಯಮ್ । ಆಕಾಂಕ್ಷಾಯಾ ಏವ ಬುದ್ಧಿದೋಷಾತ್ಮಕತ್ವಾತ್ ।**

(ಪ್ರಾಮಾಣ್ಯದ) ಸಂದೇಹವು ಇದ್ದಾಗ ಮಾತ್ರ ಪ್ರಮಾಣಾಂತರದ ಅಪೇಕ್ಷೆಯು ಪ್ರಾಪ್ತವಾಗುವುದರಿಂದ ಅನವಸ್ಥಾ ದೋಷವಿಲ್ಲ ಎಂದು ಹೇಳಲಾಗದು. ಸಂದೇಹವೇ ಬುದ್ಧಿದೋಷವಾದುದರಿಂದ (ಬುದ್ಧಿದೋಷದ ನಿವಾರಣೆಗಾಗಿ ಮಾತ್ರ ಪ್ರಮಾಣಾಂತರದ ಆಗತ್ಯ , ಪ್ರಾಮಾಣ್ಯವು ಸ್ವತಃ ಎಂಬ ನಮ್ಮ ಮತವನ್ನೇ ಒಪ್ಪಿದಂತಾಯಿತು).

ತತ್ರಾಹ 'ನ ಚ' ಇತಿ । **ಆಕಾಂಕ್ಷಾಯಾಂ-** ಪ್ರಾಮಾಣ್ಯಶಙ್ಕಾಯಾಂ ಸತ್ಯಾಮ್ । **ಪ್ರಮಾಣಾನ್ತರಾಪೇಕ್ಷತ್ವಾತ್,** 'ಪ್ರಾಮಾಣ್ಯಜ್ಞಪ್ತೇಃ' ಇತಿ ಶೇಷಃ। ಕುತೋ ನ ವಾಚ್ಯಮ್? ಇತಿ ಚೇತ್, ಯತ ಏವಂ ವದತಾ 'ಪ್ರಾಮಾಣ್ಯ-ಶಙ್ಕಾನಿವೃತ್ತಾವೇವ ಪ್ರಮಾಣಾಂತರಸಂವಾದಸ್ಯೋಪಯೋಗೋ ನ ಪ್ರಾಮಾಣ್ಯಜ್ಞಪ್ತೌ' ಇತ್ಯುಕ್ತಂ ಸ್ಯಾತ್ । ಅನ್ಯಥಾ ಶಙ್ಕಾऽಭಾವೇऽಪಿ ಪ್ರಾಮಾಣ್ಯಜ್ಞಾನಾರ್ಥಂ ಪ್ರಮಾಣಾಂತರಸಂವಾದಾವಶ್ಯಂಭಾವೇನ, ಅನವಸ್ಥಾ ತಾದವಸ್ಥ್ಯಾತ್ । ತಥಾ ಚಾಸ್ಮನ್ಮತಮೇವ ಅಙ್ಗೀಕೃತಂ ಭವೇತ್ । ತತ್ ಕಥಮ್? ಇತ್ಯತ ಆಹ **'ಆಕಾಂಕ್ಷಾಯಾ ಏವ'** ಇತಿ । ಪರೇಣೋಕ್ತಮ್ 'ಆಕಾಂಕ್ಷಾನಿವೃತ್ತೌ ಪ್ರಮಾಣಾನ್ತರಸ್ಯೋಪಯೋಗಃ' ಇತಿ । ಅಸ್ಮಾಭಿಸ್ತು 'ಬುದ್ಧಿದೋಷನಿರಾಸಾರ್ಥಃ' ಇತಿ । ಆಕಾಂಕ್ಷಾ ಚ ಬುದ್ಧಿ ದೋಷಶ್ಚ ಇತ್ಯನರ್ಥಾನ್ತರಮಿತಿ ।

ಅವಶ್ಯವೇದ್ಯತ್ವಾಭಾವಾನ್ ನಾನವಸ್ಥಾ ಇತ್ಯಭಿಪ್ರಾಯಃ? ಇತಿ ಚೇನ್ನ । ನಿಃಶಙ್ಕಾಪ್ರವೃತ್ತೌ ಅವಶ್ಯವೇದ್ಯತ್ವಾತ್ । ಜ್ಞಾನೇ ಹಿ ಜ್ಞಾತೇ ತತ್ಪ್ರಾಮಾ-ಣ್ಯಾನುಪಲಬ್ಧೌ ಕಥಂ ಸಂಶಯೋ ನ ಸ್ಯಾತ್? ಸತಿ ಚ ಪ್ರಾಮಾಣ್ಯಸಂಶಯೇ ಅರ್ಥಸಂಶಯೋऽಪಿ ಕಥಂ ನ ಭವೇತ್ ? ತತಶ್ಚ ಕಥಂ ನಿಃಶಙ್ಕಾಪ್ರವೃತ್ತಿಃ ಸ್ಯಾತ್?

ಈ ಸಂದರ್ಭದಲ್ಲಿ ಹೇಳುತ್ತಾರೆ 'ನ ಚ' ಎಂದು. **ಆಕಾಂಕ್ಷಾಯಾಂ-** ಪ್ರಾಮಾಣ್ಯದ ಶಂಕೆಯು ಇರಲಾಗಿ[1]. **ಪ್ರಮಾಣಾಂತರಾಪೇಕ್ಷತ್ವಾತ್** (ಮೂಲದ ಈ ಶಬ್ದದ ಪೂರ್ವದಲ್ಲಿ) 'ಪ್ರಾಮಾಣ್ಯಜ್ಞಪ್ತೇಃ' ಎಂದು ಶೇಷಪೂರಣ ಮಾಡಿಕೊಳ್ಳಬೇಕು[2]. ಏಕೆ ಹೇಳಬಾರದು? ಎಂದಲ್ಲಿ, ಯಾವಕಾರಣದಿಂದ ಈ ರೀತಿ ವಾದಿಸುವವರು, 'ಪ್ರಾಮಾಣ್ಯದ ಶಂಕೆಯ ನಿವೃತ್ತಿಗಾಗಿ ಮಾತ್ರ ಪ್ರಮಾಣಾಂತರ ಸಂವಾದದ ಅವಶ್ಯಕತೆ, ಪ್ರಾಮಾಣ್ಯದ ಅರಿವಿಗಾಗಿ ಅಲ್ಲ' ಎಂದು ಒಪ್ಪಿಕೊಂಡಂತಾಯಿತು (ಆದುದರಿಂದ). ಹೀಗಾಗದ ಪಕ್ಷದಲ್ಲಿ (ಪ್ರಾಮಾಣ್ಯ) ಸಂದೇಹ ಇಲ್ಲದ ಸಂದರ್ಭದಲ್ಲೂ, ಸಹ ಪ್ರಾಮಾಣ್ಯದ ಅರಿವಿಗಾಗಿ ಪ್ರಮಾಣಾಂತರದ ಸಂವಾದ ಅವಶ್ಯಕವಾಗುವುದರಿಂದ, (ಪುನಃ) ಅನವಸ್ಥಾ ಪ್ರಾಪ್ತವಾಗುವುದರಿಂದ. ಹಾಗಾದಲ್ಲಿ ನಮ್ಮ ಮತವನ್ನೇ ಅಂಗೀಕರಿಸಿದಂತಾಗುವುದು. ಅದು ಹೇಗೆ? ಆದುದರಿಂದ ಉತ್ತರಿಸುತ್ತಾರೆ **'ಆಕಾಂಕ್ಷಾ ಏವ'** ಎನ್ನುವದರಿಂದ. 'ಆಕಾಂಕ್ಷಾ ನಿವೃತ್ತಿಗಾಗಿ ಪ್ರಮಾಣಾಂತರದ ಉಪಯೋಗ' ಎಂದು ಪರವಾದಿಗಳು ಹೇಳುವರು. ನಾವು 'ಬುದ್ಧಿದೋಷದ ನಿವೃತ್ತಿಗಾಗಿ' ಎಂದು. ಆಕಾಂಕ್ಷಾ ಮತ್ತು ಬುದ್ಧಿದೋಷ (ಇವರೆಡೂ ಶಬ್ದಗಳು ಪ್ರಕೃತಸಂರ್ಭದಲ್ಲಿ) ಪರ್ಯಾಯ ಪದಗಳಂತೆ[3].

---

1. ಪ್ರಾಪ್ತವಾದ ಅರಿವಿನಲ್ಲಿ ಪ್ರಾಮಾಣ್ಯದ ಸಂದೇಹವು ಇದ್ದಲ್ಲಿ ಪ್ರಮಾಣಾಂತರದ ಆಕಾಂಕ್ಷೆಯು ಉಂಟಾಗುವುದು ಎಂದು ಭಾವ.

2. ಪ್ರಾಪ್ತವಾದ ಜ್ಞಾನದಲ್ಲಿ ಪ್ರಾಮಾಣ್ಯದ ಶಂಕೆಯು ಇರಲಾಗಿ, ಆ ಪ್ರಾಮಾಣ್ಯದ ನಿಶ್ಚಯಕ್ಕಾಗಿ ಪ್ರಮಾಣಾಂತರದ (ಸಂವಾದದ) ಅಪೇಕ್ಷೆ, ಪ್ರಾಮಾಣ್ಯದ ಶಂಕೆಯು ಇಲ್ಲದ ಪಕ್ಷದಲ್ಲಿ ಪ್ರಮಾಣಾಂತರದ ಆಕಾಂಕ್ಷೆಯು ಇಲ್ಲದಿರುವುದರಿಂದ ಅನವಸ್ಥಾದೋಷವು ಬಾರದು ಎಂದು ಭಾವ.

3. ಸಂದೇಹಾದಿಗಳೇ ಬುದ್ಧಿದೋಷ, ಇದರ ತನ್ನಿವೃತ್ತಿಗಾಗಿ ಪ್ರಮಾಣಾಂತರದ ಅನ್ವೇಷಣೆ ಎಂದು ಸಿದ್ಧಾಂತಿಗಳ ಮತ. ಉದಯನರಾದರೋ ಸಂದೇಹದ ನಿವೃತ್ತಿಗಾಗಿ ಪ್ರಮಾಣಾಂತರದ ಅಗತ್ಯ ಎನ್ನುವರು. ಅವರೂ ಪ್ರಾಮಾಣ್ಯದ ಅರಿವಿಗಾಗಿ ಪ್ರಮಾಣಾಂತರವನ್ನು ಬಯಸದಿರುವುದರಿಂದ 'ಪ್ರಾಮಾಣ್ಯಂ ಸ್ವತಃ' ಎನ್ನುವದನ್ನು ಒಪ್ಪಿದಂತೇ ಆಯಿತು ಎಂದು ಭಾವ.

(ಜ್ಞಾನದಲ್ಲಿನ ಪ್ರಾಮಾಣ್ಯಕ್ಕೆ) ಅವಶ್ಯ ವೇದ್ಯತ್ವವಿಲ್ಲದ ಪ್ರಯುಕ್ತ ಅನವಸ್ಥಾದೋಷವಿಲ್ಲ ಎಂದೆನ್ನಲಾಗದು[1]. ನಿಃಶಂಕಾಪ್ರವೃತ್ತಿಗಾಗಿ (ಪ್ರಾಮಾಣ್ಯದ ಅರಿವು) ಅವಶ್ಯ ವೇದ್ಯವಾಗಿರುವುದರಿಂದ. ಜ್ಞಾನಪ್ರಾಪ್ತಿಯ ನಂತರದಲ್ಲಿ ಅದರಲ್ಲಿನ ಪ್ರಾಮಾಣ್ಯದ ಅರಿವಾಗದಿದ್ದಲ್ಲಿ ಸಂಶಯವು ಏಕೆ ಬರಲಾರದು ? ಪ್ರಾಮಾಣ್ಯದ ಸಂದೇಹ ಇದ್ದಲ್ಲಿ (ಜ್ಞಾನಕ್ಕೆ ವಿಷಯವಾದ) ಅರ್ಥದಲ್ಲಿನ ಸಂದೇಹವು ಹೇಗೆ ಇಲ್ಲದಾದೀತು ? ಆದುದರಿಂದ ನಿಃಶಂಕಾ ಪ್ರವೃತ್ತಿಯು ಹೇಗಾದೀತು[2]?

**ಸಂದೇಹವು ಪ್ರವೃತ್ತಿಗೆ ಪ್ರತಿಬಂಧಕವಲ್ಲ ಎನ್ನುವುದು ತರವಲ್ಲ**

ಯದ್ಯಪಿ ಲೋಕೇ ಸಂಶಯತೋಽಪಿ ಪ್ರವೃತ್ತಿರ್ಭವತಿ । ತಥಾಽಪಿ ನ ಬಹುತರಶರೀರಾಽಽಯಾಸವಿತ್ತವ್ಯಯಾಽದಿಸಾಧ್ಯಾ ಪಾರತ್ರಿಕೀ ಪ್ರವೃತ್ತಿಸ್ತಥಾ ಭವಿತುಮರ್ಹತಿ । ಜ್ಞಾನಂ ಸ್ವರೂಪೇಣೈವ ಪ್ರವೃತ್ತಿಹೇತುರ್ನತು ತತ್ ಜ್ಞಾನಮಪೇಕ್ಷ್ಯತೇ? ಇತಿ ಚೇನ್ನ । ತಥಾಽಪಿ ಸುಖಾದಿವತ್ ಸತ್ತ್ಯಾಂ ಸಾಮಗ್ರ್ಯಾಂ ವೇದ್ಯತ್ವಾಪರಿಹಾರಾತ್ । ಸುಖಾದಿಕಮಬುಭಿಪ್ಸಿತಗ್ರಾಹ್ಯಂ ನತು ತಥಾ ಜ್ಞಾನಮ್ । ಅನ್ಯಥಾ ಸುಷುಪ್ತ್ಯಾದ್ಯಭಾವಪ್ರಸಙ್ಗಾತ್? ಇತಿ ಚೇನ್ನ । ತಥಾಸತ್ಯಪ್ರಾಮಾಣಿಕಸ್ಯ ಜ್ಞಾನಸ್ಯಾಸತ್ವಪ್ರಸಙ್ಗಾತ್ । ಸಾಕ್ಷಿ-ವೇದ್ಯತ್ವಪಕ್ಷೇ ಸುಷುಪ್ತ್ಯಾದ್ಯಭಾವಪ್ರಸಙ್ಗಾಭಾವಾತ್ । ಕಿಂಚ ಪರ-ಲೋಕಾರ್ಥಪ್ರವೃತ್ತಿಮತೋ ಬುಭುತ್ಸಾಽಪ್ಯವರ್ಜನೀಯೈವ । ಅನ್ಯಥಾ ಕಥಂ ತತ್ಪ್ರಾಮಾಣ್ಯನಿಶ್ಚಯಾಯ ತಜ್ಜಾತೀಯತ್ವಾದಿಕ-ಮನ್ವಿಷ್ಯತೇ ? ಇತಿ ।

---

1. ಜ್ಞಾನವು ಪ್ರಾಪ್ತವಾದ ನಂತರ ಅದರಲ್ಲಿನ ಪ್ರಾಮಾಣ್ಯದ ಅರಿವು ಅವಶ್ಯವೇದ್ಯವಲ್ಲ. ಅವಶ್ಯವೇದ್ಯವಾಗಿದ್ದಲ್ಲಿ ಪ್ರಮಾಣಾಂತರದ ಸಂವಾದದ ಅವಶ್ಯಕತೆ, ಆಗ ಅನವಸ್ಥಾ. ಪ್ರಕೃತ ಹಾಗಾಗದು ಎಂದು ಭಾವ.

2. 'ಇದಂ ಜಲಂ' ಎಂಬ ಅರಿವು ಪ್ರಾಪ್ತವಾದಾಗ, ಈ ಅರಿವಿನ ಪ್ರಾಮಾಣ್ಯವು ನಿಶ್ಚಿತವಾಗಿಲ್ಲ ಎಂದಾದಲ್ಲಿ, ಈ ಅರಿವಿಗೆ ವಿಷಯವಾದ ನೀರಿನ ಅಸ್ತಿತ್ವದಲ್ಲೂ ಸಂದೇಹ ಏರುವುದು. ಜಲಾರ್ಥಿಯು ನೀರಿಗಾಗಿ ಪ್ರವೃತ್ತನಾಗಬೇಕಾದಲ್ಲಿ ನೀರಿನ ಅಸ್ತಿತ್ವದಲ್ಲಿ ಸಂದೇಹವಿದ್ದಲ್ಲಿ ನಿಃಶಂಕಾಪ್ರವೃತ್ತಿಯು ಆಗಲಾರದು ಎಂದು ಭಾವ.

**ಅನು.**- ವಸ್ತುತಃ ಪ್ರಪಂಚದಲ್ಲಿ ಸಂದೇಹವಿದ್ದರೂ ಪ್ರವೃತ್ತಿಯು ಇದೆ[1]. ಆದರೂ ಬಹಳ ಶಾರೀರಿಕಶ್ರಮ, ಹಣವ್ಯಯ ಇತ್ಯಾದಿಗಳಿಂದ ಸಾಧ್ಯವಾದ ಪರಲೋಕದ ವಿಷಯದಲ್ಲಿ (ಯಜ್ಞಾದಿ ಕ್ರಿಯೆಗಳಲ್ಲಿ) ಹಾಗೆ (ಕೃಷ್ಯಾದಿಗಳಲ್ಲಿ ಪ್ರವೃತ್ತಿಯು ಉಂಟಾದಂತೆ) ಪ್ರವೃತ್ತಿಯು ಉಂಟಾಗಲಾರದು. ಜ್ಞಾನವು ಸ್ವರೂಪದಿಂದಲೇ ಪ್ರವೃತ್ತಿಗೆ ಕಾರಣ, ಹೊರತಾಗಿ ಅದರ (ಜ್ಞಾನದ) ಅರಿವನ್ನು ಅಪೇಕ್ಷಿಸುವುದಿಲ್ಲ ಎನ್ನಲಾಗದು[2]. ಹಾಗಾದರೂ (ಕೇವಲ ವಸ್ತುವಿನ ಅಸ್ತಿತ್ವವೇ ಪ್ರವೃತ್ತಿಗೆ ಕಾರಣವಾದರೂ) ಸುಖಾದಿಗಳಂತೆ, ವಸ್ತುವು (ಜ್ಞಾನವು) ಇರಲಾಗಿ ಅದರ ಅರಿವು ಅನಿವಾರ್ಯವಾದುದರಿಂದ[3]. ಸುಖಾದಿಗಳು, ಅರಿಯಬೇಕು ಎಂಬ ಇಚ್ಛೆ ಇಲ್ಲದಿದ್ದರೂ ಅರಿವಿಗೆ ಬರುವುದು. ಜ್ಞಾನವು ಹಾಗಲ್ಲ (ತಿಳಿಯಬೇಕೆಂಬ ಇಚ್ಛೆ ಇಲ್ಲದವರಿಗೆ ಅದರ ಅರಿವು ಇರಲಾರದು). ಹೀಗಲ್ಲದ ಪಕ್ಷದಲ್ಲಿ ಸುಷುಪ್ತ್ಯಾದಿಗಳು ಇಲ್ಲದ ಪ್ರಸಂಗ ಒದಗೀತು ಎಂದು ಹೇಳಲಾಗದು[4]. ಹಾಗಾದಲ್ಲಿ (ಜ್ಞಾನದ ಅರಿವು ಇರುವುದಿಲ್ಲ ಎಂದು ಒಪ್ಪಿದಲ್ಲಿ)

---

1. ಮಳೇ ಬೀಳುವುದೂ ನಿಶ್ಚಿತವಲ್ಲ, ಬೆಳೆಯ ಸಮೃದ್ಧಿಯ ನಿಶ್ಚಯವಿಲ್ಲ ಆದರೂ ಕೃಷಿಯಲ್ಲಿ ಕೃಷಿಕರು ಪ್ರವೃತ್ತರಾಗುವರು. ಹೀಗೆ ವ್ಯಾಪಾರ ಇತ್ಯಾದಿಗಳಲ್ಲೂ ಪ್ರವೃತ್ತಿಕಂಡಿದೆ ಎಂದು ಭಾವ.

2. ಪ್ರವೃತ್ತಿಗೆ ಅರಿವು ಕಾರಣ ಎಂಬುವುದು ಅವಿವಾದಿತ. ಆದರೆ ಅರಿವಿನ ಅರಿವು ಪ್ರವೃತ್ತಿಗೆ ನಿಮಿತ್ತವಲ್ಲ. ಬೆಂಕಿ ಇದ್ದಲ್ಲಿ ದಹನಕ್ರಿಯೆ ನಡೆಯುವುದು, ಬೆಂಕಿಯ ಅರಿವು ಅವಶ್ಯವಿಲ್ಲ. ಹಾಗೆ ಪ್ರವೃತ್ತಿಗೆ ವಸ್ತುವಿನ ಜ್ಞಾನವು ಮಾತ್ರ ಅವಶ್ಯಕ, ಆದುದರಿಂದ ಜ್ಞಾನದ ಜ್ಞಾನ, ಮತ್ತು ಅದರ ಪ್ರಾಮಾಣ್ಯದ ಜ್ಞಾನ ಇವೆಲ್ಲವೂ ಅನಾವಶ್ಯಕ ಎಂದು ಪ್ರತಿವಾದಿಯ ಆಶಯ.

3. ಸುಖ ದುಃಖಾದಿಗಳು ಇದ್ದಲ್ಲಿ ಅದರ ಅರಿವು ಇದ್ದೇ ಇರುತ್ತದೆ, ಆದುದರಿಂದಲೇ ಅವುಗಳನ್ನು ' ಜ್ಞಾತೈಕಸತ್' ಎಂದು ಕರೆಯುವರು. ಅದರಂತೆ ಜ್ಞಾನವೂ ಸತ. ಅದು ಆತ್ಮನಲ್ಲಿ ಇದ್ದಲ್ಲಿ ಅದರ ಅರಿವೂ ಅನಿವಾರ್ಯವಾಗಿದೆ ಎಂದು ಭಾವ.

4. ಸುಖಾದಿಗಳಂತೆ ಜ್ಞಾನವೂ ಇಚ್ಛೆ ಇಲ್ಲದವನ ಅರಿವಿಗೆ ಬರುವುದು ಎಂದು ಒಪ್ಪಿದರೆ, ಸುಷುಪ್ತಿಕಾಲ, ಮೂರ್ಛಾಕಾಲದಲ್ಲೂ ಅರಿವಿನ ಅರಿವು ಇರಬೇಕಾದೀತು. ಅರಿವಿನ ಅರಿವಿದೆ ಎಂದಾದಲ್ಲಿ ಸುಷುಪ್ತಿಯೇ ಇಲ್ಲ ಎಂದು ಒಪ್ಪಿದಂತಾಗುವುದು. ಸುಷುಪ್ತಿ ಎಂದರೆ ಜ್ಞಾನೋಪರಮಾವಸ್ಥೆ. ಆದುದರಿಂದ ಜ್ಞಾನದ ಅರಿವು ಇಚ್ಛೆ ಇಲ್ಲದವಗೆ ಪ್ರಾಪ್ತವಾಗುವುದಿಲ್ಲ, ಆದುದರಿಂದ ಜ್ಞಾನವು ಕೇವಲ ತನ್ನ ಅಸ್ತಿತ್ವದಿಂದಲೇ ಪ್ರವೃತ್ತಿಗೆ ಕಾರಣವಾಗುವುದು ಎಂದು ಒಪ್ಪಬೇಕು ಎಂದು ಪ್ರತಿವಾದಿಯ ಭಾವ.

ಪ್ರಮಾಣವಿಲ್ಲದ ಜ್ಞಾನವು ಅಸತ್ತಾಗುವ ಪ್ರಸಂಗವು ಒದಗೀತು[1] (ಅರಿವು) ಸಾಕ್ಷಿವೇದ್ಯ ಎಂದು ಒಪ್ಪಿದರೆ 'ಸುಷುಪ್ತ್ಯಾದಿಗಳು ಇಲ್ಲದೆ ಹೋಗ ಬೇಕಾದೀತು' ಎಂಬ ಪ್ರಸಂಗವು ಇಲ್ಲದಿರುವುದರಿಂದ[2]. ಮತ್ತೂ ಸಹ (ಜ್ಞಾನವು ಅಪೇಕ್ಷಿತನಿಂದ ಮಾತ್ರಗ್ರಾಹೀ ಎಂದೇ ಒಪ್ಪಿದರೂ ಸಹ ) ಪರಲೋಕಪ್ರಾಪ್ತಿಗಾಗಿ ಯತ್ನಿಸುವವಗೆ ಜ್ಞಾನದ ಅಪೇಕ್ಷೆಯು ಅತ್ಯವಶ್ಯವೂ ಆಗಿದೆ. ಹಾಗಾಗದ ಪಕ್ಷದಲ್ಲಿ (ಬುಭುತ್ಸಾವು ಇಲ್ಲದೆ ಹೋದಲ್ಲಿ) ಅದರ ಪ್ರಾಮಾಣ್ಯನಿಶ್ಚಯಕ್ಕಾಗಿ (ಸ್ವರ್ಗಾದಿಗಳನ್ನು ಬೋಧಿಸುವ ವೇದಗಳ ಪ್ರಾಮಾಣ್ಯ ನಿಶ್ಚಯಕ್ಕಾಗಿ ) ತತ್ಸದೃಶವಾದ ಸಂವಾದಿ ಪ್ರಮಾಣವನ್ನು ಏತಕ್ಕಾಗಿ ಅನ್ವೇಷಿಸುತ್ತಾನೆ?[3] ಎಂದು.

**ಸಾಕ್ಷಿಯು ಪ್ರಾಮಾಣ್ಯಗ್ರಾಹಕ ಎಂಬ ನಿಯಮವು ಸಾಪವಾದ**

**ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಙ್ಕೇತಿ ಪರತೋಽಪ್ರಾ-ಮಾಣ್ಯಮ್ । ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಮ್ ।**

---

1. ಘಟಾದಿ ಬಾಹ್ಯ ಪದಾರ್ಥಗಳು ನಮ್ಮ-ನಿಮ್ಮ ಅರಿವಿಗೆ ಬಾರದಿದ್ದರೂ, ಅದರ ಅಸ್ತಿತ್ವಕ್ಕೆ ಧಕ್ಕೆ ಇರುವದಿಲ್ಲ. ಸುಖ, ಜ್ಞಾನ ಮುಂತಾದ ಅಂತಃಪದಾರ್ಥವು ಇದೆ ಎನ್ನಲು ಅದರ ಅರಿವೇ ಪ್ರಮಾಣ. ಪ್ರಕೃತ ಪ್ರತಿವಾದಿಗಳು ಜ್ಞಾನದ ಅರಿವಿನ ಅಗತ್ಯವಿಲ್ಲ ಎಂದು ಅಭಿಮತಿಸಿರುವರು. ಜ್ಞಾನದ ಅರಿವಿಲ್ಲ ಎಂದಾದಲ್ಲಿ ಜ್ಞಾನವೇ ಇಲ್ಲ, ಅಸತ್ ಎಂದು ಒಪ್ಪಿದಂತಾಗುವುದು ಎಂದು ಭಾವ.

2. ಪ್ರತಿವಾದಿಗಳು ಜ್ಞಾನವನ್ನು ಮನವು ಗ್ರಹಿಸುವುದು ಎಂದು ಒಪ್ಪಿರುವರು, ವಾದಿಗಳು ಸಾಕ್ಷಿವೇದ್ಯ ಎಂದು ಒಪ್ಪಿರುವರು. ಜ್ಞಾನವು ಸುಖಾದಿಗಳಂತೆ ಅನಪೇಕ್ಷಿತವಾದರೂ ಗ್ರಾಹ್ಯ ಎಂದು ಒಪ್ಪಿದಲ್ಲಿ, ಸುಷುಪ್ತಿಕಾಲದಲ್ಲೂ ಮನವು ಜಾಗೃತವಾಗಿದ್ದು ಜ್ಞಾನವನ್ನು ಗ್ರಹಿಸಬೇಕಾದೀತು, ಹಾಗಾಗಿ ಸ್ವಾಪವೇ ಇಲ್ಲದಂತಾದೀತು ಎಂದು ಹೇಳಲಾಗದು. ತತ್ತ್ವವಾದಿಗಳು ಸ್ವಾಪ ಎಂದರೆ ಮನದ ಉಪರತಿ, ಜ್ಞಾನವನ್ನು ಸಾಕ್ಷಿಯು ಗ್ರಹಿಸುತ್ತದೆ ಎಂದು ಒಪ್ಪಿರುವುದರಿಂದ, ಜ್ಞಾನವು ಅಬುಭುತ್ಸಿತಗ್ರಾಹ್ಯವಾದರೂ , ಮನವು ಉಪರತವಾದರೂ, ಸಾಕ್ಷಿಯು ಸುಷುಪ್ತಿಕಾಲದಲ್ಲೂ ಜಾಗ್ರತವಾಗಿದ್ದು ಜ್ಞಾನವನ್ನು ಗ್ರಹಿಸುವುದು. ಸ್ವಾಪಕ್ಕೆ ಯಾವ ಬಾಧಕವೂ ಇಲ್ಲ ಎಂದು ಭಾವ.

3. ಪ್ರಕೃತವಾದವು ಅನವಸ್ಥಾ ಪರಿಹಾರಕ್ಕಾಗಿ. 'ಪ್ರಾಮಾಣ್ಯವು ಪರತಃ ಎಂದು ಒಪ್ಪಿದರೂ ಆಕಾಂಕ್ಷಾ ರಾಹಿತ್ಯದಿಂದ ಅನವಸ್ಥಾ ಪರಿಹಾರವು' ಎಂದು ಹೇಳಲಾಗಿದೆ. ಆದರೆ ಸ್ವರ್ಗಾದಿಗಳನ್ನು ಬೋಧಿಸುವ ವೇದಗಳ ಪ್ರಾಮಾಣ್ಯದ ನಿಶ್ಚಯಕ್ಕಾಗಿ ಪ್ರಮಾಣಾಂತರ ಸಂವಾದವು ಅವಶ್ಯವಿದೆ. ಹಾಗಾದಲ್ಲಿ ಬುಭುತ್ಸಾ ಇದೆ ಎಂದು ಒಪ್ಪಲೇ ಬೇಕು. ಹಾಗಾಗಿ ಪ್ರಕೃತದಲ್ಲಿ ಅನವಸ್ಥಾ ಅಪರಿಹಾರ್ಯ ಎಂದು ಭಾವ.

ಬುದ್ಧಿದೋಷವಿದ್ದಾಗಲೇ ಅಪ್ರಾಮಾಣ್ಯದ ಶಂಕೆ, ಆದುದರಿಂದ ಅಪ್ರಾಮಾಣ್ಯವು ಪರತಃ (ಎಂದು ತಿಳಿಯುವುದು). ಪ್ರಾಮಾಣ್ಯವಾದರೋ (ಸಾಕ್ಷಿಯಿಂದ) ಸ್ವತಃ ಸಿದ್ಧವಾಗಿದೆ.

**ಯದ್ಯೇವಂ 'ಜ್ಞಾನಗ್ರಾಹಕಮಾತ್ರೇಣೈವ ಪ್ರಾಮಾಣ್ಯಗ್ರಹಣಮ್' ಇತಿ ಪ್ರಾಮಾಣ್ಯಸ್ಯ ಸ್ವತಸ್ತ್ವಂ ಸ್ಯಾತ್, ತದಾ 'ಜ್ಞಾನಗ್ರಾಹಕಸ್ಯ ಸಾಕ್ಷಿಣಃ ಪ್ರಾಮಾಣ್ಯಗ್ರಹಣಂ ಸ್ವಭಾವಃ' ಇತ್ಯುಕ್ತಂ ಭವತಿ । ಪರಾನಪೇಕ್ಷಸ್ಯ ಸ್ವಭಾವತ್ವಾತ್ । ತಥಾ ಚ ಬೌದ್ಧಾದಿವಾಕ್ಯಜನಿತಜ್ಞಾನಸ್ಯಾಪಿ ಸಾಕ್ಷೀ ಪ್ರಾಮಾಣ್ಯಂ ಗೃಹ್ಣೀಯಾತ್, ಸ್ವಭಾವಸ್ಯಾನಪಾಯಾತ್ । ಸ ಚ 'ಅವ್ಯಭಿಚಾರೀ' ಇತ್ಯಙ್ಗೀಕರಣೀಯಮ್ । ಅನ್ಯಥಾ ಪರೀಕ್ಷಾಽನವಸ್ಥಾಯಾ ದುಷ್ಪರಿಹಾರತ್ವಾಪತ್ತೇಃ । ತತಶ್ಚ ತದಪಿ ಪ್ರಮಾಣಮಾಪದ್ಯೇತ? ಇತ್ಯಾಹ 'ದುಷ್ಟ..' ಇತಿ ॥**

ಒಂದು ವೇಳೆ ಹೀಗಾದಲ್ಲಿ (ಪ್ರಾಮಾಣ್ಯವು ಸ್ವತಃ ಎಂದಾದಲ್ಲಿ) 'ಜ್ಞಾನವನ್ನು ಗ್ರಹಿಸುವ ಸಾಮಗ್ರಿಗಳಿಂದಲೇ ಪ್ರಾಮಾಣ್ಯದ ಗ್ರಹಣವೂ ಆಗುತ್ತದೆ' ಎಂದಾಯಿತು, ಆಗ 'ಜ್ಞಾನವನ್ನು ಗ್ರಹಿಸುವ ಸಾಕ್ಷೀಂದ್ರಿಯದ ಸ್ವಭಾವ ಪ್ರಾಮಾಣ್ಯವನ್ನು ಗ್ರಹಿಸುವುದು' ಎಂದು ಹೇಳಿದಂತಾಯಿತು. 'ಸ್ವಭಾವ ಎಂದರೆ, ಮತ್ತೊಂದನ್ನು ಬಯಸದೆ ಇರುವುದು' ಎಂದು ಒಪ್ಪಿರುವುದರಿಂದ. ಹಾಗಾದಲ್ಲಿ, ಬೌದ್ಧಾದಿ ವಾಕ್ಯ ಜನಿತವಾದ ಜ್ಞಾನಕ್ಕೂ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸಲಿ, ಸ್ವಭಾವವನ್ನು ಪರಿತ್ಯಜಿಸಲು ಅಶಕ್ಯವಾದುದರಿಂದ. ಆ ಸ್ವಭಾವವನ್ನು 'ಅವ್ಯಭಿಚರಿತ' ಎಂದು ಅಂಗೀಕರಿಸಬೇಕು. ಹಾಗೆ ಒಪ್ಪದ ಪಕ್ಷದಲ್ಲಿ (ಸಾಕ್ಷಿಯು ಎಲ್ಲೆಡೆಯೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದಲ್ಲಿ) ಪರೀಕ್ಷಾ ಅನವಸ್ಥಾವು ಅಪರಿಹಾರ್ಯವಾಗಬೇಕಾದೀತು[1]. ಆದುದರಿಂದ ಅದೂ ಸಹ (ಬೌದ್ಧಾದಿವಾಕ್ಯಗಳೂ ಸಹ)

---

1. ಸಾಕ್ಷಿಯು ಕೆಲವೊಮ್ಮೆ ಪ್ರಾಮಾಣ್ಯವನ್ನು ಗ್ರಹಿಸುವುದು ಕೆಲವೊಮ್ಮೆ ಗ್ರಹಿಸಲಾರದು ಎಂದಾದಲ್ಲಿ, ಅದರ ಪ್ರಾಮಾಣ್ಯವೇ ಸಂದೇಹಕ್ಕೆ ಎಡೆಯಾಗಿ ಪ್ರಾಮಾಣ್ಯಪರೀಕ್ಷೆಯು ಅನಿವಾರ್ಯವಾಗಿ ಅನವಸ್ಥಾ ಅಪರಿಹಾರ್ಯವಾದೀತು ಎಂದು ಭಾವ.

ಪ್ರಮಾಣವಾಗಬೇಕಾದೀತು[1]. ಆದುದರಿಂದ ಉತ್ತರಿಸುತ್ತಾರೆ 'ದುಷ್ಟ..' ಎಂದು.

'ಜ್ಞಾನಗ್ರಾಹಕಃ ಸಾಕ್ಷೀ ಪ್ರಮಾಣತಯೈವ ಗೃಹ್ಣಾತಿ' ಇತ್ಯುತ್ಸರ್ಗ ಏವ । ವಿಸಂವಾದಲಕ್ಷಣಾತ್ ಪರತಃ- ಅಪವಾದಾತ್, ಅಪ್ರಾಮಾಣ್ಯಂ ಚ ಗೃಹ್ಣಾತಿ । 'ಸಹಕಾರಿಣಃ ಸಹಜಶಕ್ತಿಂ ಪ್ರತಿಬಧ್ಯ ವಿಪರೀತಶಕ್ತಿಂ ಜನಯನ್ತಿ' ಇತಿ ಹಿ ಪ್ರಸಿದ್ಧಮ್ । ದಾವದಹನದಗ್ಧಾನಾಂ ವೇತ್ರಬೀಜಾನಾಂ ವೇತ್ರಾಙ್ಕುರಮಜನಯಿತ್ವಾ ಕದಲೀಕಾಂಡಜನಕತ್ವಸ್ಯ ದರ್ಶನಾತ್ । ಅಸ್ತಿ ಚ ಬೌದ್ಧಾದಿವಾಕ್ಯಜನಿತವಿಜ್ಞಾನಸ್ಯ ವಿಸಂವಾದ ಇತಿ, ತದಪ್ರಮಾಣತಯಾ ಸಾಕ್ಷೀ ಗೃಹ್ಣಾತಿ । ವಿಸಂವಾದದರ್ಶನಮಪ್ರಾಮಾಣ್ಯಗ್ರಹಣಕಾರಣಮಿತ್ಯತ್ರ ದೃಷ್ಟಾನ್ತೋ 'ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಙ್ಕಾ' ಇತಿ । ವಿಸಂವಾದದೋಷಕಲುಷಿತಮನಸಾಂ ಪುಂಸಾಂ ವೇದಜನಿತವಿಜ್ಞಾನೇಽ-ಪ್ರಾಮಾಣ್ಯಶಙ್ಕಾ 'ದೃಷ್ಟಾ' ಏವ, ಇತಿ- ಹೇತೋರಿತಿ । ನಾತ್ರಾ ಪ್ರಾಮಾಣ್ಯಶಙ್ಕಾ ಸಾಕ್ಷಿಣಃ ಕಿನ್ತು ಮನಸ ಏವ । 'ಯತ್ ಕ್ವಚಿದ್ ವ್ಯಭಿಚಾರಿ ಸ್ಯಾದ್ ದರ್ಶನಂ ಮಾನಸಂ ಹಿ ತತ್' (ಅನುವ್ಯಾ.3.4.155.) ಇತ್ಯುಕ್ತತ್ವಾತ್ । ಅತಃ ಸಾಮಾನ್ಯಮಾತ್ರೇ ದೃಷ್ಟಾನ್ತೋಽಯಮಿತಿ ಜ್ಞಾತವ್ಯಮ್ ।

'ಜ್ಞಾನಗ್ರಾಹಕವಾದ ಸಾಕ್ಷಿಯು (ಜ್ಞಾನದಲ್ಲಿನ) ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ' ಎನ್ನುವದು ಉತ್ಸರ್ಗ[2]. ಪರತಃ- (ವಿಸಂವಾದವು

1. ಸಾಕ್ಷಿಯು ಪ್ರಾಮಾಣಿಕವಾದ ವೇದಾದಿಗಳಲ್ಲಿನ ಪ್ರಾಮಾಣ್ಯವನ್ನು ಗ್ರಹಿಸುವಂತೆ, ಅಪ್ರಾಮಾಣಿಕವಾದ ಬೌದ್ಧಾದಿ ವಾಕ್ಯಗಳಲ್ಲೂ ಪ್ರಾಮಾಣ್ಯವನ್ನು ಗ್ರಹಿಸಲಿ, ಸಾಕ್ಷಿಜ್ಞಾನವಾದರೋ ಎಂದೂ ಎಲ್ಲೂ ವ್ಯಭಿಚರಿತವಾಗುವದಿಲ್ಲ ತಾನೆ?ಎಂದು ಭಾವ.

2. ನಿಯಮಗಳು ಎರಡು ವಿಧ ಬಾಧಕರಹಿತ, ಬಾಧಕಸಹಿತ ಎಂದು. 'ಸೂರ್ಯನು ಪೂರ್ವದಲ್ಲಿ ಉದಿಸುವನು' ಈ ನಿಯಮವು ಬಾಧಕ ರಹಿತವಾದದ್ದು. 'ವೃಕ್ಷವು ಫಲಿಸುವುದು' ಬಾಧಕಸಹಿತವಾದದ್ದು. ಕಾರಣ ಕೆಲವು ವೃಕ್ಷಗಳು ಫಲಿಸದೇ ಇರುವುದೂ ಕಂಡಿದೆ. ಯಾವ ನಿಯಮಕ್ಕೆ ಬಾಧಕ ಕಂಡಿರೆಯೋ ಅದನ್ನು ಉತ್ಸರ್ಗನಿಯಮ, ಸಾಪವಾದ ನಿಯಮ

ಪುಟ 169ರಲ್ಲಿ........

ಪ್ರಾಪ್ತವಾದಲ್ಲಿ) ಅಪವಾದದಿಂದ(ಆಹಿತ ಶಕ್ತಿಯಿಂದ ಸಹಿತವಾದ ಸಾಕ್ಷಿಯು ಕೆಲವೊಮ್ಮೆ) ಅಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. 'ಸಹಕಾರಿಗಳು (ವಸ್ತುವಿನ) ಸಹಜ ಶಕ್ತಿಯನ್ನು ತಡೆದು, ವಿಪರೀತಶಕ್ತಿಯನ್ನು ಉಂಟು ಮಾಡುವುವು' ಎನ್ನುವುದು ಪ್ರಸಿದ್ಧವಾಗಿದೆ. ಕಾಡುಕಿಚ್ಚಿನಲ್ಲಿ ಬೆಂದ ಬಿದರಿನ ಬೀಜಗಳು ಬಿದರಿನ ಮೊಳಕೆಯನ್ನು ಉತ್ಪಾದಿಸದೇ (ಕಾಡು) ಬಾಳೆಯ ಉತ್‌ಪತ್ತಿಗೆ ಕಾರಣ ವಾದದ್ದು ಕಂಡಿರುವುದರಿಂದ . (ಪ್ರಕೃತದಲ್ಲಿ) ಬೌದ್ಧಾದಿ ವಾಕ್ಯಜನ್ಯಜ್ಞಾನದ ವಿಷಯದಲ್ಲಿ ವಿಸಂವಾದವಿದೆ. ಆದುದರಿಂದ ಸಾಕ್ಷಿಯು ಆ ಜ್ಞಾನವನ್ನು 'ಅಪ್ರಮಾಣ' ಎಂದು ಗ್ರಹಿಸುತ್ತದೆ. ವಿಸಂವಾದದ ಅರಿವು ಅಪ್ರಾಮಾಣ್ಯದ ಗ್ರಹಿಕೆಗೆ ಕಾರಣ ಎನ್ನಲು ಉದಾಹರಣೆಯನ್ನು (ತಿಳಿಸಲಾಗಿದೆ) **'ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಂಕಾ'** ಎಂದು. ವಿಸಂವಾದರೂಪ ದೋಷದಿಂದ ಕೂಡಿದ ಮನದ ಮನುಜರಿಗೆ ವೇದದಿಂದ ಜನ್ಯವಾದ ಜ್ಞಾನದಲ್ಲಿ ಅಪ್ರಾಮಾಣ್ಯ ಶಂಕೆಯ ಕಂಡೇ ಇದೆ, ಇತಿ- ಕಾರಣದಿಂದ ಎಂದು[1]. ಇಲ್ಲಿ

---

...... ಪುಟ 168 ರಿಂದ

ಮುಂತಾದ ಹೆಸರುಗಳಿಂದ ಶಾಸ್ತ್ರಗಳಲ್ಲಿ ಹೆಸರಿಸಿರುತ್ತಾರೆ. ಶಾಸ್ತ್ರಗಳಲ್ಲಿ ಉತ್ಸರ್ಗ ನಿಯಮಕ್ಕೆ 'ಮಾ ಹಿಂಸ್ಯಾತ್ ಸರ್ವಭೂತಾನಿ' ಎನ್ನುವುದನ್ನು ಉದಾಹರಿಸಿರುತ್ತಾರೆ. 'ಪ್ರಾಣಿಹಿಂಸೆ ಮಾಡಬಾರದು' ಈ ನಿಯಮಕ್ಕೆ ಅಪವಾದವಿದೆ. ಯಜ್ಞದಲ್ಲಿ ಹಿಂಸೆ ಮಾಡಲು ಅವಕಾಶವಿದೆ. ಇಂತಹ ನಿಯಮಗಳನ್ನು ಸಾಪವಾದ ನಿಯಮ ಎನ್ನವರು. ಪ್ರಕೃತದಲ್ಲಿ 'ಸಾಕ್ಷಿಯು ಪ್ರಾಮಾಣ್ಯವನ್ನೇ ಗ್ರಹಿಸುತ್ತದೆ' ಎನ್ನುವ ನಿಯಮವು ಸಾಪವಾದವಾಗಿದೆ, ಕೆಲವು ಸಂದರ್ಭದಲ್ಲಿ ಅಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದು ಭಾವ.

1. 'ದುಷ್ಟಬುದ್ಧೀನಾಂ......' ಎನ್ನುವ ಮೂಲವಾಕ್ಯದಲ್ಲಿರುವ 'ಇತಿ' ಶಬ್ದಕ್ಕೆ ಅನ್ವಯವೂ ಕಾಣುತ್ತಿಲ್ಲ. ಆದುದರಿಂದ ಟೀಕಾದಲ್ಲಿ ಇತಿ ಶಬ್ದವು ಹೇತ್ವರ್ಥಕ ಎಂದು ತಿಳಿಸಿರುವರು. ಮತ್ತು ಅವಧಾರಣಾರ್ಥಕವಾದ 'ಏವ' ಶಬ್ದಕ್ಕೆ ಅಧ್ಯಾಹೃತವಾದ 'ದೃಷ್ಟಾ' ಎನ್ನುವ ಶಬ್ದದೊಡನೆ ಅನ್ವಯ, ಪರತಃ ಎನ್ನುವುದನ್ನು ಆವರ್ತಿಮಾಡಿಕೊಳ್ಳುವುದು ಎಂದು ತಿಳಿಸಿರುವುದು. ಒಟ್ಟು ಮೂಲದ ಅರ್ಥ – ಪರತಃ (ಜ್ಞಾನಕಾರಣ ಸಾಮಗ್ರಿಯಿಂದ) ಭಿನ್ನವಾದ ವಿಸಂವಾದ ಲಕ್ಷಣರೂಪವಾದ ದೋಷದಿಂದ (ಸಾಕ್ಷಿಯು ಕೆಲವೊಮ್ಮೆ ಅಪ್ರಾಮಾಣ್ಯವನ್ನೂ ಗ್ರಹಿಸುತ್ತದೆ.) **ದುಷ್ಟಬುದ್ಧೀನಾಂ-** ವಿಸಂವಾದದೋಷದಿಂದ ಕಲುಷಿತವಾದ ಮನದ ಮನುಜರಿಗೆ ವೇದಜನಿತಜ್ಞಾನದಲ್ಲಿ **ಅಪ್ರಾಮಾಣ್ಯಶಂಕಾ-** ಅಪ್ರಾಮಾಣ್ಯದ ಶಂಕೆಯು, **ದೃಷ್ಟಾ ಏವ-** ಕಂಡೇ ಇದೆ, **ಇತಿ-**ಈ ಕಾರಣದಿಂದ **ಅಪ್ರಾಮಾಣ್ಯಂ-** ಅಪ್ರಾಮಾಣ್ಯವು ಪರತಃ ಎಂದು ತಿಳಿಯುವುದು.

(ವೇದ ಜನಿತ ಜ್ಞಾನದಲ್ಲಿ) ಅಪ್ರಾಮಾಣ್ಯದ ಶಂಕೆಯು ಸಾಕ್ಷಿಯಿಂದ ಗೃಹೀತವಾದದ್ದಲ್ಲ, ಮತ್ತೆ ಮನಸ್ಸಿನಿಂದಲೇ (ಗೃಹೀತವಾಗಿದೆ)[1]. 'ಎಲ್ಲಿಯಾದರೂ ವ್ಯಭಿಚಾರ ಕಂಡಲ್ಲಿ ಆ ಜ್ಞಾನವನ್ನು ಮಾನಸ ಎಂದು ತಿಳಿಯುವುದು' ಎಂದು ಹೇಳಿರುವುದರಿಂದ. ಆದುದರಿಂದ ಈ ದೃಷ್ಟಾಂತವು ಸಾಮಾನ್ಯದೃಷ್ಟಾಂತ ಎಂದು ತಿಳಿಯುವುದು [2].

**ಅಪ್ರಾಮಾಣ್ಯವು ಜ್ಞಾನಗ್ರಾಹಕಮಾತ್ರ ಗ್ರಾಹ್ಯವಲ್ಲ**

**ಅಥವಾ, ಯದಿ ಪ್ರಾಮಾಣ್ಯಂ ಜ್ಞಾನಗ್ರಾಹಕಮಾತ್ರಗ್ರಾಹ್ಯಂ ಸ್ಯಾತ್, ತರ್ಹ್ಯಪ್ರಾಮಾಣ್ಯಮಪಿ ತಥಾ ಸ್ಯಾತ್, ಜ್ಞಾನಧರ್ಮತ್ವಾವಿಶೇಷಾತ್ । ತಥಾ ಚ ವೇದಜನಿತಜ್ಞಾನಸ್ಯ ಪ್ರಾಮಾಣ್ಯಮಿವ ಅಪ್ರಾಮಾಣ್ಯಮಪಿ ಸಾಕ್ಷಿಗೃಹೀತಮಿತ್ಯಾಪನ್ನಮ್? ಇತ್ಯತ ಆಹ 'ದುಷ್ಟ ಬುದ್ಧೀನಾಮೇವ' ಇತಿ । ನ ಪ್ರಾಮಾಣ್ಯಮಿವಾಪ್ರಾಮಾಣ್ಯಮಪಿ ಜ್ಞಾನಗ್ರಾಹಕಮಾತ್ರಗ್ರಾಹ್ಯಂ, ಯೇನೋಕ್ತದೋಷಃ ಸ್ಯಾತ್ । ಕಿಮ್ ತರ್ಹಿ? ಪರತೋ- ವಿಸಂವಾದದರ್ಶನಾತ್ ಅನುಮೀಯತೇ । ನ ಚ ವೇದಜನಿತಜ್ಞಾನಸ್ಯ ತತ್ತ್ವತೋ ವಿಸಂವಾದೋಽಸ್ತಿ । ಕುತೋಽಯಂ ವಿಭಾಗಃ? ಇತ್ಯತ ಉಕ್ತಮ್**

---

1. ಸಾಕ್ಷಿ ಜ್ಞಾನವು ನಿಶ್ಚಿತರೂಪದಲ್ಲಿರುತ್ತದೆ. ಸಂದೇಹಾತ್ಮಕ ಈ ಜ್ಞಾನವು ಮನೋಜನ್ಯ ಎಂದು ಭಾವ.

2. ಎಲ್ಲಿ ಧೂಮವಿದೆಯೋ ಅಲ್ಲಿ ವಹ್ನಿಯು' ಎನ್ನುವ ಪ್ರಸಿದ್ಧ ದೃಷ್ಟಾಂತ ವಾಕ್ಯದಂತೆ ಇದೂ ಸಹ, 'ಎಲ್ಲಿ ವಿಸಂವಾದಾದಿಗಳಿಂದ ದುಷ್ಟಬುದ್ಧಿಯು ಇರುವುದೋ ಅಲ್ಲಿಯೇ ಅಪ್ರಾಮಾಣ್ಯದ ಶಂಕೆಯು ಇರುವುದು, ಎಲ್ಲಿ ಇಲ್ಲವೋ ಅಲ್ಲಿ ಅಪ್ರಾಮಾಣ್ಯದ ಆಶಂಕೆಯು ಎಲ್ಲ' ಎನ್ನುವುದು ಒಂದು ದೃಷ್ಟಾಂತವಾಕ್ಯ ಎಂದು ತಿಳಿಸಲಾಗಿದೆ. ಆದರೆ 'ವಿಸಂವಾದ ಸಹಕೃತವಾದ ಸಾಕ್ಷಿಯು ಬೌದ್ಧಾದಿ ವಾಕ್ಯಗಳಲ್ಲಿ ಅಪ್ರಾಮಾಣ್ಯದ ನಿಶ್ಚಯಜ್ಞಾನವನ್ನೇ ಗ್ರಹಿಸುವುದು,ಅದೇ ವಿಸಂವಾದ ಸಹಕೃತವಾದ ಮನಸ್ಸು ವೇದಗಳಲ್ಲಿ ಮಾತ್ರ ಅಪ್ರಾಮಾಣ್ಯಶಂಕೆಯನ್ನು ಸಂದೇಹಜ್ಞಾನವನ್ನು ಗ್ರಹಿಸುವುದು' ಎಂದು ತಿಳಿಸಲಾಗಿದೆ. ಇದು ಅಸಂಗತವಲ್ಲವೆ? ಎಂಬ ಸಂದೇಹವನ್ನು ನಿರಾಕರಿಸುವರು 'ಸಾಮಾನ್ಯಮಾತ್ರ ..' ಎನ್ನುವ ಟೀಕಾವಾಕ್ಯದಿಂದ. ದೋಷವು ಉಭಯತ್ರವೂ 'ಅಪ್ರಾಮಾಣ್ಯದ ಗ್ರಹಿಕೆಗೆ ಕಾರಣವಾಗಿದೆ ' ಎಂದು ಸಾಮಾನ್ಯತಃ ದೃಷ್ಟಾಂತ-ದಾರ್ಷ್ಟಾಂತಿಕ ಭಾವವನ್ನು ಪ್ರಕೃತದಲ್ಲಿ ವಿವಕ್ಷಿಸಲಾಗಿದೆ ಎಂದು ಅಭಿಪ್ರಾಯ.

**'ದುಷ್ಟ..' ಇತಿ' ಅನೇನಾಪ್ರಾಮಾಣ್ಯಗ್ರಹಣಸ್ಯ ಯುಕ್ತ್ಯನುಸಂಧಾನ ಏವ ಭಾವೋಽನ್ಯಥಾಽಭಾವ ಉಕ್ತೋ ವೇದಿತವ್ಯಃ ।**

ಅಥವಾ, ಜ್ಞಾನಗತಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುವದಾದಲ್ಲಿ ಅಪ್ರಾಮಾಣ್ಯವನ್ನೂ ಗ್ರಹಿಸಲಿ, (ಪ್ರಾಮಾಣ್ಯ-ಅಪ್ರಾಮಾಣ್ಯಗಳೆರಡರಲ್ಲೂ) ಜ್ಞಾನಧರ್ಮತ್ವವು ಸಾಮಾನ್ಯವಾದುದರಿಂದ[1]. ಹಾಗಾದಲ್ಲಿ ವೇದಜನಿತಜ್ಞಾನದ ಪ್ರಾಮಾಣ್ಯದಂತೆ, ಅಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುತ್ತದೆ ಎಂದಾದೀತು[2], ಆದುದರಿಂದ ಉತ್ತರಿಸುತ್ತಾರೆ **'ದುಷ್ಟಬುದ್ಧೀನಾಂ'** ಎಂದು ಪ್ರಾಮಾಣ್ಯದಂತೆ ಅಪ್ರಾಮಾಣ್ಯವೂ ಸಹ ಜ್ಞಾನಗ್ರಾಹಕ ಸಾಮಗ್ರೀಮಾತ್ರ-ಗ್ರಾಹ್ಯವಲ್ಲ. ಹಾಗಾಗಿದ್ದಲ್ಲಿ (ನೀವು) ಹೇಳಿದ ದೋಷ ಬಂದೀತು. ಹಾಗಾದರೆ ಏನು ? **ಪರತಃ** - ವಿಸಂವಾದದಿಂದ ಊಹಿಸಲಾಗುವುದು. (ಪ್ರಕೃತ) ವೇದಜನಿತಜ್ಞಾನಕ್ಕೆ ಯಥಾರ್ಥವಾಗಿ ವಿಸಂವಾದವಿಲ್ಲ. ಈ ರೀತಿಯಾಗಿ ವಿಭಾಗಿಸಲು ಕಾರಣವೇನು[3] ? ಆದುದರಿಂದ ಉತ್ತರಿಸುತ್ತಾರೆ **'ದುಷ್ಟಬುದ್ಧೀನಾಂ'** ಎಂದು. ಇದರಿಂದ 'ಅಪ್ರಾಮಾಣ್ಯದ ಗ್ರಹಿಕೆಗೆ ಯುಕ್ತಿಯ ಅನುಸಂಧಾನವು ಇರಲೇ ಬೇಕು, (ಯುಕ್ತಿಯು ಅನುಸಂಧಾನವು) ಇಲ್ಲ ಎಂದಾದಲ್ಲಿ, (ಅಪ್ರಾಮಾಣ್ಯದ ಗ್ರಹಿಕೆಯು) ಇಲ್ಲ' ಎಂದು ಹೇಳಿದಂತಾಯಿತು ಎಂದು ತಿಳಿಯುವುದು[4].

---

1. ಘಟವನ್ನು ಸಾಕ್ಷಾತ್ಕರಿಸುವ ಚಕ್ಷುಸ್ಸು, ಘಟದಲ್ಲಿರುವ ಘಟತ್ವ, ಏಕತ್ವ, ಕೃಷ್ಣರೂಪ ಇವೆಲ್ಲವನ್ನೂ ಗ್ರಹಿಸುತ್ತದೆ. ಇವೆಲ್ಲವೂ ಘಟದ ಧರ್ಮಗಳಾಗಿವೆ ಮತ್ತು ಚಾಕ್ಷುಷ ಪ್ರತ್ಯಕ್ಷಕ್ಕೆ ವಿಷಯವಾಗಿವೆ. ಹಾಗೆ ಪ್ರಕೃತ ಪ್ರಾಮಾಣ್ಯ ಅಪ್ರಾಮಾಣ್ಯ ಎರಡೂ ಧರ್ಮಗಳು ಜ್ಞಾನನಿಷ್ಠಧರ್ಮಗಳಾಗಿವೆ. ಜ್ಞಾನವನ್ನು ಗ್ರಹಿಸುವ ಸಾಕ್ಷಿಯು ಜ್ಞಾನಧರ್ಮವಾದ ಪ್ರಾಮಾಣ್ಯವನ್ನು ಗ್ರಹಿಸುವಂತೆ ಅಪ್ರಾಮಾಣ್ಯವನ್ನೂ ಗ್ರಹಿಸಲಿ ಎಂದು ಆಶಯ.

2. ಅಪ್ರಾಮಾಣ್ಯವನ್ನೂ ಸಾಕ್ಷಿಯು ಗ್ರಹಿಸುವುದು ಎಂದಾದಲ್ಲಿ 'ಅಪ್ರಾಮಾಣ್ಯವೂ ಸ್ವತಃ' ಎಂದು ಒಪ್ಪಬೇಕಾದೀತು 'ಪರತಃ' ಎಂಬ ನಿಯಮವು ಇಲ್ಲವಾದೀತು ಎಂದು ಆಶಯ.

3. ಪ್ರಾಮಾಣ್ಯ-ಅಪ್ರಾಮಾಣ್ಯಗಳು ಜ್ಞಾನದ ಧರ್ಮಗಳೇ ಆಗಿದ್ದರೂ ಒಂದು ಧರ್ಮವು ಸ್ವತಃ, ಮತ್ತೊಂದು ಧರ್ಮವು ಪರತಃ ಗ್ರಹೀತವಾಗುವುದು ಎಂಬ ವಿಭಾಗವೇಕೆ ? ಎಂದು ಭಾವ.

4. ಅನ್ವಯವ್ಯತಿರೇಕ ವ್ಯಾಪ್ತಿಯು ಈ ವಿಷಯದಲ್ಲಿ ಪ್ರಮಾಣ ಎಂದು ತಿಳಿಸಿದಂತಾಯಿತು.

'ದುಷ್ಟಬುದ್ಧೀನಾಂ' ಇತಿ, 'ಅಪ್ರಾಮಾಣ್ಯಶಂಕಾ' ಇತಿ ಚ ಪ್ರಕೃತ-ವೇದಜನ್ಯಜ್ಞಾನಾಪೇಕ್ಷಯೋಕ್ತಮ್, ವಸ್ತುತಸ್ತು 'ವಿಸಂವಾದಾನುಸಂಧಾನ-ವತಾಮೇವಾಪ್ರಾಮಾಣ್ಯಜ್ಞಪ್ತಿಃ ನ ತದ್ರಹಿತಾನಾಂ' ಇತ್ಯವ್ಯಭಿಚರಿತಾ-ನನ್ಯಥಾಸಿದ್ಧಾನ್ವಯವ್ಯತಿರೇಕಸದ್ಭಾವಾತ್ 'ಅನುಮೇಯಮೇವಾ-ಪ್ರಾಮಾಣ್ಯಮ್, ನ ಪುನಃ ಜ್ಞಾನಗ್ರಾಹಕಮಾತ್ರಗ್ರಾಹ್ಯಮ್' ಇತ್ಯುಕ್ತಂ ಜ್ಞಾತವ್ಯಮ್ । 'ಪ್ರಾಮಾಣ್ಯಗ್ರಹಣಸ್ಯ ತು ಯುಕ್ತ್ಯನುಸಂಧಾನಾಪೇಕ್ಷಾ ನಾಸ್ತಿ' ಇತಿ ಪ್ರಾಗೇವೋಕ್ತಮ್ 'ಅದುಷ್ಟಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ' ಇತಿ ।

'ದುಷ್ಟಬುದ್ಧೀನಾಂ' ಎಂದು, 'ಅಪ್ರಾಮಾಣ್ಯಶಂಕಾ' ಎಂದು ಹೇಳಿದ್ದು, ಪ್ರಸಕ್ತವಾದ ವೇದಜನ್ಯಜ್ಞಾನವನ್ನು ಉದ್ದೇಶಿಸಿ[1], ವಸ್ತುತಃ, 'ವಿಸಂವಾದಾನುಸಂಧಾನವಿದ್ದವಗೇ ಅಪ್ರಾಮಾಣ್ಯದ ಜ್ಞಾನ, ಅದು (ವಿಸಂವಾದಾನುಸಂಧಾನವು) ಇಲ್ಲದವಗೆ (ಅಪ್ರಾಮಾಣ್ಯಜ್ಞಾನ) ಇಲ್ಲ' ಎನ್ನುವುದು ಅವ್ಯಭಿಚರಿತ ಅನನ್ಯಥಾಸಿದ್ಧವಾದ ಅನ್ವಯ, ವ್ಯತಿರೇಕ ವ್ಯಾಪ್ತಿಯಿಂದ ಸಿದ್ಧವಾದುದರಿಂದ ಅಪ್ರಾಮಾಣ್ಯವು ಅನುಮೇಯವೇ[2].

---

1. ವಿಸಂವಾದಸಹಕೃತ ಸಾಕ್ಷಿಯು ಬೌದ್ಧಾದಿ ವಾಕ್ಯಗಳಲ್ಲಿ ಅಪ್ರಾಮಾಣ್ಯವನ್ನೇ ಗ್ರಹಿಸುವುದು ಅನುಭವದಲ್ಲಿದೆ. ಹೀಗಿರುವಾಗ ಮೂಲದಲ್ಲಿ 'ಅಪ್ರಾಮಾಣ್ಯಶಂಕಾ' ಎಂದು ಹೇಳಿದ್ದು ಏಕೆ? ಎಂಬ ಸಂದೇಹಕ್ಕೆ ಉತ್ತರಿಸುತ್ತಾರೆ. 'ಅಪ್ರಾಮಾಣ್ಯ ಶಂಕಾ' ಎಂದದ್ದು, ಬೌದ್ಧರು ಹೇಳಿದ ಅನೃತತ್ವ, ವ್ಯಾಹತತ್ವ, ಪೌನರುಕ್ತಿ ಮುಂತಾದ ಯುಕ್ತ್ಯನುಸಂಧಾನದಿಂದ ವೇದದ ವಿಷಯದಲ್ಲಿ ಅಪ್ರಾಮಾಣ್ಯದ ಸಂದೇಹವನ್ನು ಮಾತ್ರ ಮನವು ಗ್ರಹಿಸುತ್ತದೆ. ಸಾಕ್ಷಿಯು ವೇದವನ್ನು ಅಪ್ರಮಾಣವೆಂದು ಗ್ರಹಿಸಲಾರದು. ಕಾರಣ- ಪೌನರುಕ್ತ್ಯಾದಿಗಳು ವೇದದಲ್ಲಿ ಆಪಾತತಃ ತೋರುವವು, ಹಾಗಾಗಿ ಇಲ್ಲದ ಅಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸಲಾರದು, ತಟಸ್ಥವಾಗಿರುತ್ತದೆ. ಇದನ್ನು ಸೂಚಿಸಲು ಆಚಾರ್ಯರು '....ಶಂಕಾ' ಎಂದು ಹೇಳಿರುವರು ಎಂದು ಭಾವ.

2. 'ಯತ್ರಯತ್ರ ವಿಸಂವಾದಃ ತತ್ರತತ್ರ ಅಪ್ರಾಮಾಣ್ಯಜ್ಞಪ್ತಿಃ, ಯತ್ರ ನ ವಿಸಂವಾದಃ ನ ತತ್ರ ಅಪ್ರಾಮಾಣ್ಯ ಜ್ಞಪ್ತಿಃ' ಎಂದು ಎಲ್ಲೂ ಈ ನಿಯಮಕ್ಕೆ ಬಾಧಕವಿಲ್ಲದ ಪ್ರಬಲವಾದ ಅನ್ವಯ-ವ್ಯತಿರೇಕ ವ್ಯಾಪ್ತಿಯು ಅನುಭವದಲ್ಲಿದೆ ಎಂದು ಭಾವ.

ಹೊರತು ಜ್ಞಾನಗ್ರಾಹಕ (ಸಾಮಗ್ರೀ) ಮಾತ್ರಗ್ರಾಹ್ಯವಲ್ಲ[1]. ಎಂದು ತಿಳಿಯುವುದು. 'ಪ್ರಾಮಾಣ್ಯಗ್ರಹಿಕೆಯಾದರೋ ಯುಕ್ತ್ಯಾದಿಗಳ (ಜ್ಞಾನಗ್ರಾಹಕ ಸಾಮಗ್ರಿಯಿಂದ ಭಿನ್ನವಾದವುಗಳ) ಅವಶ್ಯಕತೆ ಇಲ್ಲ' ಎಂದು ಈ ಮೊದಲೇ ತಿಳಿಸಲಾಗಿದೆ. 'ಅದುಷ್ಟ ಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ' (ಬುದ್ಧಿ ದೋಷ ಇಲ್ಲದ ಮನುಜನಿಗೆ ಪ್ರಾಮಾಣ್ಯವು ಸ್ವತಃ ಸಿದ್ಧವಾಗಿರುವುದರಿಂದ.) ಎಂದು.

**ನನು, ಏವಂ ಸತಿ 'ವಿಸಂವಾದಾಭಾವೇ ಸತಿ ಪ್ರಾಮಾಣ್ಯಂ ಪ್ರತೀಯತೇ' ಇತಿ ತದಪಿ ಪರತ ಏವ ಸ್ಯಾತ್, ನ ಸ್ವತಃ? ಇತ್ಯತ ಆಹ- 'ಪ್ರಾಮಾಣ್ಯಂ ಚ' ಇತಿ । ನ ಹಿ ದಾಹಾಭಾವ ಏವ ವೇತ್ರಬೀಜಂ ವೇತ್ರಾಙ್ಕುರಂ ಜನಯತಿ, ಇತ್ಯೇತಾವತಾ ದಾಹಾಭಾವೋ ವೇತ್ರಾಙ್ಕುರಸ್ಯ ಕಾರಣಂ ಭವತಿ । ಕಿಂತು ತತೋ ವಿಪರೀತಕಾರ್ಯಾನುತ್ಪಾದೇ ಸತಿ ವೇತ್ರಬೀಜಂ ಸ್ವಮಹಿಮ್ನೈವಾಙ್ಕುರಂ ಕರೋತಿ । ಅನ್ಯಥೋತ್ಸರ್ಗಾಪವಾದೌ ಕ್ವಾಪಿ ನ ಸ್ಯಾತಾಮ್ ಇತಿ ಭಾವಃ ।. ಕಿಂಚ ಅಪ್ರಾಮಾಣ್ಯಗ್ರಹಣಕಾರಣಾಭಾವಸ್ಯಾಪಿ ಪ್ರಾಮಾಣ್ಯಗ್ರಹಣೋಪಯೋಗಾಙ್ಗೀಕಾರೇಽಪಿ ನ ಪ್ರಕೃತೇ ಕಾಚಿದಸ್ಮಾಕಂ ಹಾನಿರಿತಿ ।**

ಸರಿ ಹಾಗಾದಲ್ಲಿ 'ಎಲ್ಲಿ ವಿಸಂವಾದವಿಲ್ಲವೋ ಅಲ್ಲಿ ಪ್ರಾಮಾಣ್ಯದ ಜ್ಞಪ್ತಿ' ಎಂದು ಪ್ರಾಮಾಣ್ಯವು ಪರತಃ ಎಂದೇ ಆಯಿತು. ಸ್ವತಃ ಆಗಲಿಲ್ಲ?ಎಂದಲ್ಲಿ ಉತ್ತರಿಸುತ್ತಾರೆ. '**ಪ್ರಾಮಾಣ್ಯಂ ಚ**' ಎಂದು. ದಾಹಾಭಾವವಿದ್ದಲ್ಲಿ ಬಿದರಿನ ಬೀಜವು ಬಿದರಿನ ಅಂಕುರಕ್ಕೆ ಕಾರಣವಾಗಿದೆ ಎಂದ ಮಾತ್ರಕ್ಕೆ ದಾಹಾಭಾವವು ವೇತ್ರಾಂಕುರಕ್ಕೆ ಕಾರಣವಾಗುವುದಿಲ್ಲ. ಆದರೆ ದಾಹಾಭಾವದಿಂದ ವಿರುದ್ಧಕಾರ್ಯವಾಗದೇ, ವೇತ್ರಬೀಜವು ತನ್ನ ಸಹಜ ಶಕ್ತಿಯಿಂದ ವೇತ್ರಾಂಕುರವನ್ನು ಉತ್ಪತ್ತಿಗೊಳಿಸುವುದು. ಹೀಗೆ ಒಪ್ಪದ ಪಕ್ಷದಲ್ಲಿ ಯಾವ ಸ್ಥಳದಲ್ಲೂ ಸಹ 'ಉತ್‌ಸರ್ಗ, ಅಪವಾದ' ಎನ್ನುವ ವ್ಯವಹಾರವೇ

---

1. ಜ್ಞಾನಗ್ರಾಹಕೇತರವಾದ ವಿಸಂವಾದಾದಿ ಇತರ ಸಾಮಗ್ರಿಯ ಆವಶ್ಯಕತೆಯು ಅಪ್ರಾಮಾಣ್ಯಗ್ರಹಿಕೆಯಲ್ಲಿದೆ ಎಂದು ಭಾವ.

ಇಲ್ಲದಾಗಬೇಕಿತ್ತು ಎಂದು ಭಾವ[1]. ಮತ್ತೂ ಸಹ, ಅಪ್ರಾಮಾಣ್ಯಗ್ರಹಣ-ಕಾರಣದ ಅಭಾವವೇ ಪ್ರಾಮಾಣ್ಯಗ್ರಹಣಕ್ಕೆ ಕಾರಣ ಎಂದು ಒಪ್ಪಿದರೂ ಪ್ರಕೃತದಲ್ಲಿ (ವೇದ ಪ್ರಾಮಾಣ್ಯವಿಷಯದಲ್ಲಿ) ನಮಗೆ ಯಾವ ಹಾನಿಯೂ ಇಲ್ಲ ಎಂದು[2].

-: ಪ್ರಾಮಾಣ್ಯಸ್ವತಸ್ತ್ವವಾದ ಸಮಾಪ್ತ :-

## ॥ ವರ್ಣನಿತ್ಯತ್ವವಾದಾರಂಭಃ ॥

ವೇದಾಪೌರುಷೇಯತ್ವದಲ್ಲಿ ಮತ್ತೊಂದು ಸಂದೇಹ. ವರ್ಣಗಳ ಸಮೂಹವೇ ವೇದ. ವರ್ಣಗಳಾದರೋ ಉಚ್ಚಾರಣೆಯಿಂದ ಉತ್ಪನ್ನವಾಗುವವು. ಘಟಕಗಳು ಉತ್ಪನ್ನವಾದಲ್ಲಿ ಘಟಿತವು ನಿತ್ಯವಾಗಲು ಹೇಗೆ ಶಕ್ಯ ? ವಸ್ತುತಃ ವರ್ಣವು ಅನಿತ್ಯವಾದರೂ ವೇದದ ನಿತ್ಯತ್ವಕ್ಕೆ ಯಾವ ಬಾಧಕವೂ ಇಲ್ಲ. ವೇದಗಳು ನಿತ್ಯ ಅಂದರೆ 'ಹಿಂದಿನಂತೆ ಆನುಪೂರ್ವಿಯನ್ನು ಹೊಂದಿರುವುದು' ಎಂದು ವಿಶ್ಲೇಶಿಸಲಾಗಿದೆ. ಆದರೂ ವರ್ಣಗಳು ನಿತ್ಯ

---

1. 'ಮಾ ಹಿಂಸ್ಯಾತ್ ಸರ್ವಭೂತಾನಿ' ಎನ್ನುವ ನಿಯಮ ಉತ್ಸರ್ಗ ನಿಯಮ ಏಕೆಂದರೆ ಯಾಗೀಯ ಹಿಂಸೆಯಲ್ಲಿ ಈ ನಿಮಯಕ್ಕೆ ಅಪವಾದವಿದೆ. 'ಮಾ ಹಿಂಸ್ಯಾತ್' ಎನ್ನುವುದಕ್ಕೆ 'ಯಾಗೀಯ ಹಿಂಸೇತರ ಹಿಂಸೆ' ಎಂದು ಅರ್ಥವನ್ನು ಅಭಿಪ್ರೇತಿಸಿದಲ್ಲಿ, ಈ ನಿಯಮಕ್ಕೆ ಎಲ್ಲಿಯೂ ಅಪವಾದವಿಲ್ಲ ಎಂದಾಗುವುದು. 'ವೇತ್ರಬೀಜವು ವೇತ್ರಾಂಕುರಕ್ಕೆ ಕಾರಣ' ಇದು ಉತ್ಸರ್ಗನಿಯಮ. ದಾವಾಗ್ನಿದಗ್ಧವಾದ ವೇತ್ರಬೀಜವು ಕದಲೀಕಾಂಡಕ್ಕೆ ಕಾರಣ ಎನ್ನುವುದು ಅಪವಾದ. ಅಗ್ನಿದಗ್ಧವಲ್ಲದ ವೇತ್ರಬೀಜವೇ ಕದಲೀಕಾಂಡಕ್ಕೆ ಕಾರಣ ಎಂದು ವಾದಿಸಿದಲ್ಲಿ 'ಔತ್ಸರ್ಗಿಕನಿಯಮ' ಎಂಬ ವ್ಯವಹಾರವೇ ಲೋಪವಾಗಬೇಕಾದೀತು ಎಂದು ಭಾವ.
2. 'ವೇದವು ಅಪೌರುಷೇಯ ಎಂದಾದಲ್ಲಿ ಆಪ್ತೋಕ್ತತ್ವರೂಪ ಗುಣವಿಲ್ಲದ ವೇದವು ಅಪ್ರಮಾಣ' ಎಂದು ಪ್ರಕೃತದಲ್ಲಿ ವಾದವು ಆರಂಭವಾಗಿತ್ತು. ಆದರೆ ಈಗ ಪ್ರತಿವಾದಿಯು 'ಪ್ರಾಮಾಣ್ಯವು ಸ್ವತಃ ಅಲ್ಲ ಪರತಃ, ಕಾರಣ ಅಪ್ರಾಮಾಣ್ಯಕಾರಣಸಾಮಗ್ರಿಯ ಅಭಾವವು ಪ್ರಾಮಾಣ್ಯಗ್ರಹಣಕ್ಕೆ ಕಾರಣ' ಎಂದು ವಾದಿಸುತ್ತಿರುವನು. ಇಂತಹ ಪ್ರಾಮಾಣ್ಯಪರತ್ವದಿಂದ ವಾದಿಗಳಿಗೆ ಯಾವ ಹಾನಿಯೂ ಇಲ್ಲ. ಆಪ್ತೋಕ್ತತ್ವಗುಣವು ಪ್ರಾಮಾಣ್ಯಕ್ಕೆ ಕಾರಣ ಎಂದು ಸಾಧಿಸಿದ್ದಲ್ಲಿ, ವೇದವು ಪೌರುಷೇಯ ಎಂದು ಒಪ್ಪಬೇಕಾಗಿ ವಾದಿಗಳಿಗೆ ಹಾನಿಯಾಗುತ್ತಿತ್ತು. ಪ್ರಕೃತದಲ್ಲಿ ವೇದಕ್ಕೆ ಅಪ್ರಾಮಾಣ್ಯಕ್ಕೆ ಕಾರಣವಾದ ಯಾವ ಸಾಮಗ್ರಿಯೂ ಇಲ್ಲದಿರುವುದರಿಂದ ಪ್ರಾಮಾಣ್ಯಕ್ಕೆ ಯಾವಹಾನಿಯೂ ಇಲ್ಲ , ಅಪೌರುಷೇಯತ್ವಕ್ಕೂ ಧಕ್ಕೆಯಿಲ್ಲ ಎಂದು ಭಾವ.

ಎನ್ನುವುದು ಪ್ರಾಮಾಣಿಕ. 'ಸೋಽಯಂ ಗಕಾರಃ' ಎಂಬ ಅಬಾಧಿತ ಪ್ರತ್ಯಭಿಜ್ಞೆಯು ಇರುವುದರಿಂದ. ವರ್ಣಗಳು ನಿತ್ಯವಾದಲ್ಲಿ ಕೆಲವು ಸಂದೇಹಗಳು ಎದುರಾಗುವುದು, ತನ್ನಿಮಿತ್ತ ಆ ಸಂದೇಹಗಳನ್ನು ತಿಳಿಸಿ ಪರಿಹರಿಸುವರು. ಲಿಪಿಯೇ ಹೇಗೆ ಅಕ್ಷರಗಳು ಅಲ್ಲವೋ ಹಾಗೆಯೇ ಉತ್ಪತ್ತಿನಾಶಗಳನ್ನು ಹೊಂದಿರುವ ಧ್ವನಿಯೇ ವರ್ಣಗಳಲ್ಲ ಎಂದು.

**ವರ್ಣಗಳ ಸಮೂಹವಾದ ವೇದಕ್ಕೆ ಅಪೌರುಷೇಯತ್ವವು ಹೇಗೆ?**

**ನನು, ತಥಾಽಪಿ ನಾಪೌರುಷೇಯತ್ವಂ ವೇದಸ್ಯೋಪಪದ್ಯತೇ । ತಸ್ಯ ವರ್ಣಸಮುದಾಯರೂಪತ್ವಾತ್, ವರ್ಣಾನಾಂ ಚ ಉಚ್ಚಾರಣೇನ ಉತ್ಪದ್ಯಮಾನತ್ವಾತ್ । ನ ಚ 'ಉತ್ಪತ್ತಿಮತಾಂ ಸಮುದಾಯಿನಾಂ ಸಮುದಾಯೋ ನೋತ್ಪತ್ತಿಮಾನ್' ಇತಿ ಯುಜ್ಯತೇ । ನ ಚ ವಾಚ್ಯಂ 'ಪ್ರಾಗುಚ್ಚಾರಣಾದನುಪಲಬ್ಧಾ ವರ್ಣಾ ಉಚ್ಚಾರಣೇ ಸತ್ಯುಪಲಬ್ಧಾಃ ಪುನರ್ನೋಪಲಭ್ಯನ್ತೇ' ಇತ್ಯೇವಾನುಭವ ಸಿದ್ಧಮ್, ನತು ತೇಷಾಮುತ್ಪತ್ತಿಃ ವಿನಾಶೋ ವಾ । ನಚೋಪಲಬ್ಧ್ಯನುಪಲಬ್ಧಿಮಾತ್ರೇಣೋತ್ಪತ್ತ್ಯಾದ್ಯ-ಧ್ಯವಸಾಯೋ ಯುಕ್ತಃ । ತಥಾಸತಿ ಉಪಲಭ್ಯಾಽನುಪಲಬ್ಧಾನಾಂ ಘಟಾದೀನಾಂ ತದ್ವೈವೋತ್ಪತ್ತ್ಯಾದಿಪ್ರಸಙ್ಗಾದಿತಿ । ವರ್ಣಾಸ್ತಾವನ್ ನ ಘಟಾದಿವದನ್ಯತ ಆಗತ್ಯಾನ್ಯತ್ರ ಗತಾ ಅಮೂರ್ತತ್ವಾತ್, ತದಪಿ ಗುಣತ್ವಾತ್, ದ್ರವ್ಯತ್ವೇಽಪಿ ಸರ್ವಗತತ್ವಾತ್ । ಅಣುತ್ವೇಽತೀಂದ್ರಿಯತ್ವಾಪತ್ತೇಃ । ಮಧ್ಯಮಪರಿಮಾಣತ್ವೇ ನಿತ್ಯತ್ವವಿರೋಧಾತ್ ।**

ಸರಿ ಹಾಗಾದರೂ[1], ಸಹ ವೇದಗಳಿಗೆ ಅಪೌರುಷೇಯತ್ವವು ಯುಕ್ತವಾಗದು. ವೇದಗಳು ವರ್ಣಗಳ ಸಮುದಾಯವಾಗಿರುವುದರಿಂದ, ವರ್ಣಗಳಾದರೋ ಉಚ್ಚಾರಣಕಾಲದಲ್ಲೇ ಉತ್ಪನ್ನವಾಗುವುದರಿಂದ. ಹುಟ್ಟನ್ನು ಹೊಂದಿರುವ ಸಮುದಾಯಿಗಳಿಂದಾದ ಸಮುದಾಯವು ಹುಟ್ಟನ್ನು ಹೊಂದಿಲ್ಲ ಎನ್ನುವುದು ಸರಿಯಾಗಲಾರದು[2]. ಮೊದಲು ಉಪಲಬ್ಧವಾಗಿರದ ವರ್ಣಗಳು

1. ಪ್ರಾಮಾಣ್ಯವು ಸ್ವತಃ ಎಂದು ಒಪ್ಪಿದರೂ ಸಹ.

2. ಅನಿತ್ಯ ಅವಯವಗಳಿಂದಾದ ಅವಯವಿಯನ್ನು ನಿತ್ಯ ಎಂದು ಒಪ್ಪಲು ಹೇಗೆ ಶಕ್ಯವಿಲ್ಲವೋ ಹಾಗೆಯೇ ಉತ್ಪನ್ನವಾದ ವರ್ಣಗಳ ಸಮೂಹವೇ ವೇದ, ಅಂತಹ ವೇದವನ್ನು ನಿತ್ಯ ಎಂದು ಒಪ್ಪಲು ಸಾಧ್ಯವಿಲ್ಲ ಎಂದು ಭಾವ.

ಉಚ್ಚಾರಣೆಯಿಂದ ಉಪಲಬ್ಧವಾಗುವುವು. ನಂತರದಲ್ಲಿ ಪುನಃ ಅದೃಶ್ಯ ವಾಗುವವು ಎಂದೇ ಅನುಭವವಿದೇ ಹೊರತು, ವರ್ಣಗಳು ಉತ್ಪನ್ನವಾದವು ನಷ್ಟವಾದವು ಎಂದಿಲ್ಲ. ಉಪಲಬ್ಧಿ ಅನುಪಲಬ್ಧಿ ಮಾತ್ರದಿಂದ ಉತ್ಪತ್ತಿ ನಾಶಗಳನ್ನು ನಿಶ್ಚಯಿಸುವುದು ಸರಿಯಲ್ಲ. ಹಾಗಾದಲ್ಲಿ ಘಟಾದಿಗಳಿಗೆ ಉಪಲಬ್ಧಿ ಮಾತ್ರದಿಂದಲೇ ಉತ್ಪತ್ತಿಯನ್ನು ಒಪ್ಪಬೇಕಾದೀತು[1]. (ಮೂರ್ತ ಗಳಾದ) ಘಟಾದಿಗಳು ಬೇರೆಡೆಯಿಂದ ತಂದು ಮತ್ತೊಂದೆಡೆಗೆ ಕೊಂಡೊಯ್ಯ ಬಹುದು. ಆದರೆ ವರ್ಣಗಳಿಗೆ ಆ ರೀತಿ ಹೇಳಲಾಗದು, ಅವು ಅಮೂರ್ತ ಪದಾರ್ಥಗಳು ಆದುದರಿಂದ. (ವರ್ಣಗಳು) ಗುಣವಾದುದರಿಂದ ಅಮೂರ್ತ ಪದಾರ್ಥ[2]. ದ್ರವ್ಯ ಎಂದಾದರೂ ಸರ್ವತ್ರ ವ್ಯಾಪ್ತವಾದುದರಿಂದ[3]. ಅಣು ಎಂದಾದಲ್ಲಿ ಇಂದ್ರಿಯಗಳಿಗೆ ಗೋಚರವೇ ಆಗದಿರಬೇಕಾದೀತು[4]. ಮಧ್ಯಮ ಪರಿಮಾಣ ಉಳ್ಳದ್ದು (ಎನ್ನಲಾಗದು) ನಿತ್ಯತ್ವಕ್ಕೆ ವಿರುದ್ಧವಾದುದರಿಂದ[5].

---

1. ಗೃಹದಲ್ಲಿದ್ದ ಘಟವನ್ನು ಹೊರತಂದಾಗ ಉಪಲಬ್ಧವಾಯಿತು. ಒಳಗೆ ತೆಗೆದು ಕೊಂಡುಹೋದಾಗ ಅನುಪಲಬ್ಧವಾಯಿತು. ಉಪಲಬ್ಧವಾದಾಗಲೇ ಉತ್ಪನ್ನವಾಯಿತು, ಅನುಪಲಬ್ಧವಾದಾಗ ನಾಶ ಹೊಂದಿತು ಎಂದು ಹೇಗೆ ಅನುಭವವಿಲ್ಲವೋ ಹಾಗೆಯೇ ಪ್ರಕೃತದಲ್ಲಿಯೂ ಎಂದು ಭಾವ.

2. ಘಟ ಪಟಾದಿ ಮೂರ್ತದ್ರವ್ಯಗಳಿಗೆ ಗಮನಾಗಮನಗಳು ಕಂಡಿದೆ. ಅಮೂರ್ತವಾದ ಗುಣಗಳಿಗೆ ಗಮನಾಗಮನಗಳು ಕಂಡಿಲ್ಲ. ಪ್ರಕೃತ ವರ್ಣಗಳು (ವರ್ಣವ್ಯಂಜಕ ಶಬ್ದಗಳು) ಗುಣ, ತನ್ನಿಮಿತ್ತ ಅಮೂರ್ತಪದಾರ್ಥ. ಅಮೂರ್ತಕ್ಕೆ ಗಮನಾಗಮನಾದಿಗಳು ಯುಕ್ತವಾಗದು ಎಂದು ಭಾವ.

3. ವರ್ಣಗಳು ಗುಣಗಳೇ ಅಲ್ಲ ಅವುಗಳನ್ನು ದ್ರವ್ಯ ಎಂದು ಒಪ್ಪಿರುವೆವು, ಹಾಗಾದಲ್ಲಿ ಗಮನಾಗಮನವು ಸಂಭಾವಿತ, ತನ್ನಿಮಿತ್ತವಾದ ಉಪಲಬ್ಧ್ಯನುಪಲಬ್ಧಿಯೂ ಸಂಭಾವಿತ ಎನ್ನಲಾಗದು. ಅವುಗಳನ್ನು ದ್ರವ್ಯ ಎಂದು ಒಪ್ಪಿದರೂ ಗಗನದಂತೆ ಸರ್ವತ್ರ ವ್ಯಾಪ್ತವಾದುದರಿಂದ ಗಮನಾಗಮನವನ್ನು ವರ್ಣಗಳಿಗೆ ಒಪ್ಪಲಾಗದು ಎಂದು ಭಾವ.

4. ವರ್ಣಗಳು ದ್ರವ್ಯವೇ ಆದರೂ ಗಗನದಂತೆ ವ್ಯಾಪ್ತವಲ್ಲ ಅಣು ಎಂದು ಒಪ್ಪುವೆವು ಎಂದು ಹೇಳಲಾಗದು, ವರ್ಣಗಳು ಅಣುವಾದಲ್ಲಿ ಇಂದ್ರಿಯಗಳಿಂದ ಗ್ರಹಿಕೆಯಾಗದೇ ಹೋದೀತು. ಆದುದರಿಂದ ಅಣುದ್ರವ್ಯ ಎಂದು ಒಪ್ಪಲಾಗದು ಎಂದು ಭಾವ.

5. ಮಧ್ಯಮಪರಿಣಾಮವನ್ನು ಹೊಂದಿದ ದ್ರವ್ಯಗಳು ಅನಿತ್ಯವಾಗಿವೆ. ಪ್ರಕೃತ ವರ್ಣಗಳನ್ನು ನಿತ್ಯ ಎಂದು ಸಾಧಿಸುವ ವಾದಿಯು ವರ್ಣಗಳು ಮಧ್ಯಮ ಪರಿಮಾಣವನ್ನು ಹೊಂದಿವೆ ಎಂದು ಒಪ್ಪಿದಲ್ಲಿ ಅನಿತ್ಯತ್ವವನ್ನೂ ಒಪ್ಪಬೇಕಾದೀತು ಎಂದು ಭಾವ.

**ವರ್ಣಗಳ ಉಪಲಬ್ಧ್ಯನುಪಲಬ್ಧಿಗಳು ನಿತ್ಯತ್ವಕ್ಕೆ ಬಾಧಕಗಳಲ್ಲವೆ?**

**ನಾಪಿ ಕೇನಚಿತ್ ಪ್ರಾಗಾವೃತತ್ವಾದನುಪಲಬ್ಧಾ ಆವರಣಾಪಗತೌ ಉಪಲಭ್ಯ ಪುನಸ್ತದುಪನಿಪಾತಾನ್ ನೋಪಲಭ್ಯತೇ, ಆವರಕಾನುಪಲಮ್ಭಾತ್, ಅಮೂರ್ತತ್ವೇನ ಆವರಣಾನುಪಪತ್ತೇಶ್ಚ । ನ ಚ ಇಂದ್ರಿಯದೋಷಾದನುಪಲಬ್ಧಿಃ, ವರ್ಣಾನ್ತರೋಪಲಬ್ಧೇಃ । ನ ಚ ಶ್ರೋತುಃ ಅನವಧಾನಾತ್, ಅವಧಾನೇಽಪ್ಯನುಪಲಮ್ಭಾತ್ । ನಚಾತೀಂದ್ರಿಯಾಃ, ಉಚ್ಚಾರಣೇಽಪ್ಯನುಪಲಬ್ಧಿಪ್ರಸಙ್ಗಾತ್ । ನ ಚ ಸಹಕಾರ್ಯಭಾವಃ, ಅನ್ವಯ ವ್ಯತಿರೇಕವತಃ ತಸ್ಯಾನುಪಲಮ್ಭಾತ್। ಉಚ್ಚಾರಣಂ ಸಹಕಾರೀತಿ ಚೇನ್ನ, ನ ಕಿಞ್ಚಿತ್ ಕುರ್ವತಃ ಸಹಕಾರಿತ್ವಾನುಪಪತ್ತೇಃ । ನ ಚ ವ್ಯಞ್ಜಕಂ, ಭಿನ್ನದೇಶತ್ವಾತ್ । ಉಚ್ಚಾರಣಂ ಹಿ ವಕ್ತೃವಕ್ತ್ರೇ ವರ್ತತೇ ವರ್ಣಾಸ್ತು ಶ್ರೋತೃಶ್ರೋತ್ರದೇಶೇ ಪ್ರತೀಯನ್ತೇ । ನ ಹಿ ವಿಭಿನ್ನದೇಶಯೋಃ ಘಟಾಲೋಕಯೋಃ ವ್ಯಂಗವ್ಯಞ್ಜಕಭಾವೋಽಸ್ತಿ । ತಸ್ಮಾದಾಗಮನಾದ್ಯನುಪಪತ್ತೌ ಉಚ್ಚಾರಣಾನನ್ತರೋಪಲಬ್ಧವರ್ಣಾನಾಂ ತದುತ್ಪಾದ್ಯತ್ವೇನೈವ ಉಪಪದ್ಯತೇ । ಅನ್ಯಥಾ ಕುಲಾಲಾದಿ-ವ್ಯಾಪಾರಾನನ್ತರಮ್ ಉಪಲಭ್ಯಮಾನಘಟೋಽಪಿ ತದನುತ್ಪಾದ್ಯ ಆಪದ್ಯೇತ?**

ಯಾವುದೋ ಆವರಣದಿಂದ ಮೊದಲು ವರ್ಣಗಳು ಆವೃತವಾಗಿದ್ದವು, ಆದುದರಿಂದ ಉಪಲಬ್ಧವಾಗಿರಲಿಲ್ಲ, ಆವರಣವು ಸರಿಯಲು ಉಪಲಬ್ಧವಾದುವು, ಪುನಃ ಆವೃತವಾಗಲು ಅನುಪಲಬ್ಧವಾದವು ಎಂದೂ ಹೇಳಲಾಗದು. ಆವರಣದ ಉಪಲಬ್ಧಿ ಇಲ್ಲದಿರುವುದರಿಂದ, ಮತ್ತು (ವರ್ಣಗಳು) ಅಮೂರ್ತದ್ರವ್ಯವಾದುದರಿಂದ (ಅವುಗಳಿಗೆ) ಆವರಣವು ಅನುಪಪನ್ನವಾಗುವದರಿಂದ[1]. ಇಂದ್ರಿಯದಲ್ಲಿ ದೋಷವಿರುವುದರಿಂದ ಅನುಪಲಬ್ಧವಾಗಿವೆ ಎಂದೆನ್ನಲಾಗದು[2]. ಬೇರೇ ವರ್ಣಗಳ ಉಪಲಬ್ಧಿ

1. ಮೂರ್ತಗಳಾದ ಘಟಾದಿಗಳಿಗೆ ಮಾತ್ರ ಆವರಣಾದಿಗಳು ಕಂಡಿವೆ. ಅಮೂರ್ತವಾದ ರಸಾದಿ ಗುಣಗಳಿಗೆ ಆವರಣವು ಕಂಡಿಲ್ಲ ಎಂದು ಭಾವ.

2. ಪದಾರ್ಥಗಳಿದ್ದರೂ ಇಂದ್ರಿಯದಲ್ಲಿ ದೋಷವಿದ್ದಲ್ಲಿ ಅದರ ಪ್ರತ್ಯಕ್ಷವಾಗದಿರುವುದು ಕಂಡಿದೆ. ಪ್ರಕೃತವಲ್ಲೂ ಹಾಗೆ ಎಂದು ಕಲ್ಪಿಸಲು ಆಗದು ಎಂದು ಭಾವ.

ಇರುವುದರಿಂದ. ಶ್ರೋತೃವಿಗೆ ಅವಧಾನ ಇಲ್ಲದಿರುವುದರಿಂದ (ಅನುಪಲಬ್ಧಿ) ಎಂದೆನ್ನಲಾಗದು. ಅವಧಾನವಿದ್ದರೂ ಉಪಲಬ್ಧಿಯಾಗದೇ ಇರುವುದರಿಂದ[1]. (ವರ್ಣಗಳು) ಅತೀಂದ್ರಿಯ ಎನ್ನಲಾಗದು. ಉಚ್ಚರಿಸಿದರೂ ಉಪಲಬ್ಧಿಯಾಗದೇ ಹೋಗಬೇಕಾದೀತು. ಸಹಕಾರಿ ಇಲ್ಲ ಆದುದರಿಂದ (ಉಪಲಬ್ಧಿಯು ಇಲ್ಲ) ಎಂದೆನ್ನಲಾಗದು[2]. ಅಂತಹ ಅನ್ವಯ-ವ್ಯತಿರೇಕಗಳನ್ನು ಹೊಂದಿರುವ ವಸ್ತುವಿನ ಉಪಲಬ್ಧಿ ಇಲ್ಲದೇ ಇರುವುದರಿಂದ[3]. ಉಚ್ಚಾರಣೆಯೇ (ವರ್ಣದ ಉಪಲಬ್ಧಿಗೆ) ಸಹಕಾರಿ ಎಂದು ಹೇಳಲಾಗದು. ಏನೂ ಮಾಡದ (ಯಾವ ರೀತಿಯಲ್ಲೂ ಉಪಕಾರ ಮಾಡದ) ವಸ್ತುವಿಗೆ ಸಹಕಾರಿತ್ವವು ಕೂಡುವುದಿಲ್ಲ. (ಉಚ್ಚಾರಣೆಯು ವರ್ಣಗಳ ಉಪಲಬ್ಧಿಗೆ) ವ್ಯಂಜಕ ಎಂದೆನ್ನಲಾಗದು.ವಿಭಿನ್ನ ದೇಶಗಳಲ್ಲಿರುವುದರಿಂದ. ಉಚ್ಚಾರಣೆಯು ಹೇಳುವವನ ಮುಖದಲ್ಲಿದೆ. ವರ್ಣಗಳಾದರೋ ಕೇಳುಗನ ಕರ್ಣಗಳಲ್ಲಿ ತೋರುವವು. ವಿಭಿನ್ನದೇಶಗಳಲ್ಲಿರುವ ಘಟ, ಬೆಳಕುಗಳಿಗೆ ವ್ಯಂಗ್ಯ-ವ್ಯಂಜಕಭಾವವಿಲ್ಲ[4]. ಆದುದರಿಂದ ( ಈ ಮೇಲೆ ತಿಳಿಸಿರುವ ಕಾರಣಗಳಿಂದಲೂ, ವರ್ಣಗಳಿಗೆ ) ಗಮನಾದಿಗಳು ಇಲ್ಲದಿರಲು, ಉಚ್ಚಾರಣಾನಂತರದಲ್ಲಿ ಉಪಲಬ್ಧವಾದ ವರ್ಣಗಳಿಗೆ ಆಗಲೇ ಉತ್ಪತ್ತಿಯು ಸರಿಯಾಗುವುದು. ಹಾಗಾಗದ ಪಕ್ಷದಲ್ಲಿ (ಉಚ್ಚಾರಣೆಯಿಂದ ವರ್ಣಗಳು ಉತ್ಪನ್ನವಾಗುವುದು ಎಂದು ಒಪ್ಪದ ಪಕ್ಷದಲ್ಲಿ) ಕುಲಾಲನ ವ್ಯಾಪಾರದ ನಂತರ

---

1. ಮನದ ಏಕಾಗ್ರತೆಯು ಇರುವಾಗಲೂ ಉಚ್ಚಾರಣೆಯು ಇಲ್ಲದ ಸಂದರ್ಭದಲ್ಲಿ ವರ್ಣಗಳ ಉಪಲಬ್ಧಿಯು ಕಂಡಿಲ್ಲ ಎಂದು ಭಾವ.

2. ವರ್ಣಗಳು ಅತೀಂದ್ರಿಯಗಳಲ್ಲ, ಇಂದ್ರಿಯಕ್ಕೆ ಗೋಚರವಾಗುವ ವಸ್ತುವೇ, ಆದರೂ ವರ್ಣಗೋಚರವಾಗಲು ಒಂದು ಸಹಕಾರಿಯಾದ ವಸ್ತುವಿದೆ, ಆ ವಸ್ತುವು ಇಲ್ಲದ ನಿಮಿತ್ತವಾಗಿ ನಿತ್ಯವಾದ ವರ್ಣಗಳು ಗೋಚರವಾಗುವುದಿಲ್ಲ ಎಂದು ಭಾವ.

3. ವರ್ಣಗಳ ಉಪಲಬ್ಧಿಗೆ ಒಂದು ವಸ್ತುವನ್ನು ಸಹಕಾರಿ ಎಂದು ಒಪ್ಪಬೇಕಾದಲ್ಲಿ, ಆ ಸಹಕಾರಿಯಾದ ವಸ್ತುವಿನ ಅಸ್ತಿತ್ವದಲ್ಲಿ ಮಾತ್ರ ವರ್ಣಗಳ ಉಪಲಬ್ಧಿಯಾಗಬೇಕು, ಆ ವಸ್ತುವಿನ ಅಸ್ತಿತ್ವವಿಲ್ಲದ ಸಂದರ್ಭದಲ್ಲಿ ವರ್ಣಗಳ ಉಪಲಬ್ಧಿಯಾಗದೇ ಇರಬೇಕು. ಅಂತಹ ಯಾವ ವಸ್ತುವೂ ಪ್ರಕೃತದಲ್ಲಿ ಉಪಲಬ್ಧವಾಗಿಲ್ಲ ಎಂದು ಭಾವ.

4. ಅಂಗಳದಲ್ಲಿರುವ ಬೆಳಕು, ಮನೆಯ ಕಗ್ಗತ್ತಲಿನಲ್ಲಿರುವ ಘಟದ ವ್ಯಂಜಕವಾಗಲಾರದು. ಬೆಳಕು ಘಟಗಳು ಏಕದೇಶದಲ್ಲಿರಬೇಕು ಎಂದು ಭಾವ.

ಉಪಲಬ್ಧವಾದ ಘಟವೂ ಸಹ (ಕುಲಾಲನಿಂದ) ಉತ್ಪನ್ನವಾದುದಲ್ಲ ಎಂದು ವಾದಿಸಬೇಕಾದೀತು.

**ವರ್ಣಗಳು ನಿತ್ಯ**

**ನಚ 'ಉಚ್ಚಾರಣ ಕಾಲ ಏವ ವರ್ಣಾನಾಮುತ್ಪತ್ತಿಃ' ಇತಿ ವಾಚ್ಯಮ್। 'ತದೇವೇದಂ ವಚನಮ್' ಇತಿ ಪ್ರತ್ಯಭಿಜ್ಞಾವಿರೋಧಾತ್ ।**

'ಉಚ್ಚಾರಣಕಾಲದಲ್ಲಿಯೇ ವರ್ಣಗಳ ಉತ್ಪತ್ತಿ' ಎನ್ನುವುದು ತರವಲ್ಲ. 'ಅದೇ ಈ ವಚನ (ವರ್ಣ)' ಎಂಬ ಪ್ರತ್ಯಭಿಜ್ಞೆಯ ವಿರೋಧವು ಇರುವುದರಿಂದ.

**ತದೇವಂ ಸಮುದಾಯಿನಾಂ ವರ್ಣಾನಾಂ ಪುರುಷವ್ಯಾಪಾರೋತ್ಪಾದ್ಯ-ಮಾನಾನಾಂ ವೀಚೀತರಙ್ಗನ್ಯಾಯೇನ ಶ್ರೋತ್ರದೇಶೇ ವರ್ಣಾನ್ತರಜನಕತ್ವಂ, ತೇಷಾಂ ಚೋಪಲಬ್ಧಿರಿತ್ಯೇವಂ ತತ್ಸಮುದಾಯರೂಪಸ್ಯ ವೇದಸ್ಯಾಪಿ ಪೌರುಷೇಯತ್ವಮೇವ ಯುಕ್ತಂ? ಇತ್ಯತ ಆಹ 'ನಚೋಚ್ಚಾರಣಕಾಲ' ಇತಿ ।**

ಆದುದರಿಂದ ಈ ರೀತಿಯಾಗಿ (ವೇದದ) ಅಂಗಗಳಾದ, ಪುರುಷರ ವ್ಯಾಪಾರದಿಂದ ಉತ್ಪನ್ನವಾದ[1], ವರ್ಣಗಳು ವೀಚೀತರಂಗದ ನಿಯಮದಂತೆ (ಅಲೆಗಳು ಮತ್ತೊಂದು ಅಲೆಯನ್ನು ಸೃಷ್ಟಿಸುವಂತೆ )ಕೇಳುಗನ ಕಿವಿಗಳಲ್ಲಿ ವರ್ಣಾಂತರವನ್ನು ಉತ್ಪತ್ತಿಮಾಡುವುದರಿಂದ ಅವುಗಳ (ವರ್ಣಗಳ) ಉಪಲಬ್ಧಿ[2]. ಹೀಗಾದುದರಿಂದ ಆ ವರ್ಣಗಳ ಸಮೂಹರೂಪವಾದ

---

1. ತುಟಿ, ನಾಲಿಗೆ ಮುಂತಾದ ಅವಯವಗಳ ಚಾಲನೆ ಮುಂತಾದ ವ್ಯಾಪಾರದಿಂದ ಧ್ವನಿಯು ಉತ್ಪನ್ನವಾಗಲು, ಆಧ್ವನಿಯು ವರ್ಣದ ಉತ್ಪಾದಕವಾಗುವುದು ಎಂದು ಭಾವ.

2. ಉಚ್ಚಾರಣೆಯು ವರ್ಣಗಳ ಅಭಿವ್ಯಕ್ತಿಗೆ ಸಹಕಾರಿಯಲ್ಲ ಉಚ್ಚಾರಣೆ ಮತ್ತು ವರ್ಣಗಳು ವಿಭಿನ್ನ ದೇಶದಲ್ಲಿರುವುದರಿಂದ ಎಂದು ಹಿಂದೆ ಪ್ರಸ್ತಾಪವಾಗಿತ್ತು. ಈ ವರ್ಣಗಳ ಉತ್ಪತ್ತಿಗೆ ಉಚ್ಚಾರಣೆ ಕಾರಣ ಎಂದು ವಾದಿಸುವವರಿಗೂ ಕಾರಣ-ಕಾರ್ಯಗಳು ವಿಭಿನ್ನ ದೇಶದಲ್ಲಿರುವದು ಪ್ರತಿಬಂಧಕವಲ್ಲವೆ? ಎಂಬ ಸಂದೇಹಕ್ಕೆ ಉತ್ತರಿಸುತ್ತಾರೆ. ಕೆರೆಯ ಮಧ್ಯದಲ್ಲಿ ಎದ್ದ ಅಲೆಯು ಅಲೆಯ ಪರಂಪರೆಯನ್ನು ಸೃಷ್ಟಿಸಿ ತೀರವನ್ನು ಸೇರುವಂತೆ ಹೇಳುಗನ ಮುಖದಲ್ಲಿ ಉತ್ಪನ್ನವಾದ ಧ್ವನಿ ತರಂಗದ ಪರಂಪರೆಯು ಕೇಳುಗನ ಕಿವಿಯನ್ನು ತಲುಪುವದು ಎಂದು ಅಭಿಮತ.

ವೇದಗಳಿಗೆ ಪೌರುಷೇಯತ್ವವೇ ಯುಕ್ತ ಎಂದು ಸಂದೇಹಿಸಿದಲ್ಲಿ ಉತ್ತರಿಸುತ್ತಾರೆ. 'ನ ಚೋಚ್ಚಾರಣಕಾಲೇ' ಎಂದು.

**ಸಾಮೀಪಿಕಾಧಿಕರಣೇ ಸಪ್ತಮೀ । ಉಚ್ಚಾರಣಕಾಲಾನಂತರಮೇವ ಇತ್ಯರ್ಥಃ । ಉಚ್ಚಾರಣಸ್ಯ ಕಾಲಃ ಉಚ್ಚಾರಣಕಾಲಃ, ಆನಂತರ್ಯಲಕ್ಷಣಃ ಸಂಬಂಧಃ ಷಷ್ಠ್ಯರ್ಥ ಇತಿ ವಾ । ತದನನ್ತರಮೇವ ವಿನಾಶಶ್ಚೇತ್ಯಪಿ ದ್ರಷ್ಟವ್ಯಮ್ । ಕುತೋ ನ ವಾಚ್ಯಮ್? ಇತ್ಯತೋ 'ವ್ಯಞ್ಜಕಭಾವಾ-ಭಾವಾಭ್ಯಾಮೇವ ಉಪಲಮ್ಭಾನುಪಲಮ್ಭೌ, ಉಚ್ಚಾರಣನ್ತು ವ್ಯಞ್ಜಕತ್ವೇನೋಪಯುಜ್ಯತೇ, ವ್ಯಞ್ಜಕಾಶ್ಚ ಧ್ವನಯಃ, ತೇ ಚ ನಾಭಸಾಃ' ಇತ್ಯಾದಿಕಂ ವಕ್ತುಂ, ಅಸ್ಯಾಶ್ಚ ಕಲ್ಪನಾಯಾ ವರ್ಣನಾಮಾನಾದಿನಿತ್ಯ-ತ್ವವ್ಯವಸ್ಥಿತಾವೇವ ಸಮ್ಭವಾತ್, ತತ್ಸಾಧಕಮುತ್ಪತ್ತ್ಯಾದ್ಯಙ್ಗೀಕಾರೇ ಚ ಬಾಧಕಂ ಪ್ರಮಾಣಂ ಹೇತುತ್ವೇನಾಹ 'ತದೇವೇದಂ' ಇತಿ । 'ಉಚ್ಯತೇ-ಅಭಿಧೀಯತೇ, ಅರ್ಥೋಽನೇನ' ಇತಿ ವರ್ಣೋಽತ್ರ ವಚನಶಬ್ದೇನ ಗೃಹ್ಯತೇ । ಪೂರ್ವಂ ಗಕಾರಂ ಶ್ರುತವತಃ ಪುನಃ ತಚ್ಛಬ್ದಶ್ರವಣೇ 'ಸ ಏವಾಯಂ ಗಕಾರಃ' ಇತಿ ತಾವತ್ ಪ್ರತ್ಯಭಿಜ್ಞಾ ಜಾಯತೇ । ಸಾ ಚ ಶ್ರುತ-ಶ್ರೂಯಮಾಣಗಕಾರಾಭೇದಂ ಗೋಚರಯನ್ತ್ಯುಚ್ಚಾರಣಜನ್ಯತ್ವಂ ವಿರುಣದ್ಧಿ । ನ ಹಿ ಪ್ರಾಕ್ತನಸ್ಯೇದಾನೀನ್ತನೇನೋತ್ಪತ್ತಿರ್ಯುಜ್ಯತೇ । ಏವಂ ಪೂರ್ವಂ ಪೂರ್ವತರಮಿತ್ಯನಾದಿನಿತ್ಯತೈವ ವರ್ಣಾನಾಂ ಪ್ರತ್ಯಭಿಜ್ಞಯಾ ಸಿದ್ಧ್ಯತಿ ।**

ಸಮೀಪಾರ್ಥಕ ಸಪ್ತಮೀ, ಉಚ್ಚಾರಣಾನಂತಾರವೇ ಎಂದು ಅರ್ಥ[1]. ಅಥವಾ 'ಉಚ್ಚಾರಣಸ್ಯಕಾಲಃ – ಉಚ್ಚಾರಣಕಾಲಃ' (ಎಂದು ಷಷ್ಠೀ

---

1. ಉಚ್ಚಾರಣೆಗೂ, ವರ್ಣಕ್ಕೂ ಕಾರ್ಯಕಾರಣಭಾವವನ್ನು ಒಪ್ಪಿರುವವರು ಮೊದಲು ಉಚ್ಚಾರಣೆ ನಂತರದಲ್ಲಿ ವರ್ಣಗಳ ಉತ್ಪತ್ತಿ ಎಂದು ಒಪ್ಪಿದಂತಾಗುವುದು. ಪ್ರಕೃತದಲ್ಲಿ 'ಉಚ್ಚಾರಣಕಾಲೇ ಏವ' ಎಂದು ಮೂಲದಲ್ಲಿ ಹೇಳಲಾಗಿದೆ. ಅಧಿಕರಣಾರ್ಥಕವಾದ ಸಪ್ತಮೀ ವಿಭಕ್ತಿಗೆ ವ್ಯಾಕರಣ ಶಾಸ್ತ್ರದಲ್ಲಿ 'ಸಮೀಪ' ಎಂಬ ಅರ್ಥವನ್ನು ತಿಳಿಸಿದ್ದಾರೆ. ಹಾಗಾಗಿ ಉಚ್ಚಾರಣಾನಂತರದ ಕಾಲದಲ್ಲಿ ಎಂಬ ಅರ್ಥವು ಪ್ರಾಪ್ತವಾಗುವುದು. ಮುಖ್ಯವಾಗಿ ಸಪ್ತಮಿಗೆ ನಾಲ್ಕು ಅರ್ಥಗಳನ್ನು ತಿಳಿಸಲಾಗಿದೆ. 'ಸಪ್ತಮ್ಯಧಿಕರಣೇ ಚ' (ಪಾ.ಅ.1.4.45.) ಎಂಬ ಸೂತ್ರದ ವ್ಯಾಖ್ಯಾನದ ಸಂದರ್ಭದಲ್ಲಿ. ಸ್ಥಾಲ್ಯಾಂ ಪಚತಿ, ಕಟೇ ಆಸ್ತೇ- ಈ ಎರಡೂ

ಪುಟ 181ರಲ್ಲಿ.......

ತತ್ಪುರುಷಸಮಾಸವನ್ನು ಆಶ್ರಯಿಸಿದಲ್ಲಿ) ಆನಂತರ್ಯ ಎಂಬ ಸಂಬಂಧಾರ್ಥಕ ಷಷ್ಠೀ ಎಂದು (ತಿಳಿಯುವುದು). ಉತ್ಪತ್ತಿಯ ಅನಂತರದಲ್ಲಿ (ವರ್ಣಗಳ) ನಾಶ ಎಂದೂ ತಿಳಿಯುವುದು. ಏತಕ್ಕಾಗಿ ಹೀಗೆ ಹೇಳಬಾರದು ? ಈ ಕಾರಣದಿಂದ- '(ವರ್ಣಗಳ) ವ್ಯಂಜಕದ ಇರುವಿಕೆ ಇಲ್ಲದಿರುವಿಕೆಗಳಿಂದಲೇ (ವರ್ಣಗಳ) ಉಪಲಬ್ಧಿ ಅನುಪಲಬ್ಧಿಗಳು (ಉಪಪನ್ನವಾಗುತ್ತಿರಲು), ಉಚ್ಚಾರಣೆಯು (ವರ್ಣದ) ವ್ಯಂಜಕದ (ಧ್ವನಿಯ) ಜನಕವಾಗಿ ಉಪಯುಕ್ತವಾಗಿದೆ, ವ್ಯಂಜಕಗಳಾದರೋ ಧ್ವನಿಗಳು, ಅವುಗಳಾದರೋ (ಧ್ವನಿಗಳಾದರೋ) ಆಕಾಶಕ್ಕೆ ಸಂಬಂಧಪಟ್ಟವು (ಆಕಾಶದ ಗುಣ)' ಇದೇ ಮುಂತಾದವನ್ನು ತಿಳಿಸಲು( ಆ ಮೊದಲು) ಈ ಎಲ್ಲ ಕಲ್ಪನೆಗಳು (ಧ್ವನಿಯು ವರ್ಣವ್ಯಂಜಕ, ಉಚ್ಚಾರಣೆಯು ಧ್ವನಿಯ ಜನಕ ಇತ್ಯಾದಿಗಳು) ವರ್ಣಗಳು ಅನಾದಿ-ನಿತ್ಯವೆಂದು ವ್ಯವಸ್ಥಿತವಾದಲ್ಲಿ ಯುಕ್ತವಾಗುವುದು, ಅದರ (ವರ್ಣಗಳ ಅನಾದಿ-ನಿತ್ಯತ್ವದ) ಸಾಧಕವಾದದ್ದು (ವರ್ಣಗಳ ಅನಾದಿ-ನಿತ್ಯತ್ವವನ್ನು) ಒಪ್ಪದ ಪಕ್ಷದಲ್ಲಿ ಬಾಧಕಪ್ರಮಾಣವನ್ನು ಕಾರಣ ಎಂಬುವುದಾಗಿ ಹೇಳುತ್ತಾರೆ '**ತದೇವೇದಂ**' ಎಂದು. (ಮೂಲದಲ್ಲಿನ) ವಚನಶಬ್ದದಿಂದ ವರ್ಣವನ್ನು ಪರಿಗ್ರಹಿಸಲಾಗಿದೆ, 'ಉಚ್ಯತೇ- ಅಭಿಧೀಯತೇ ಅರ್ಥಃ ಅನೇನ' ಎಂದು[1]. ಮೊದಲು ಗಕಾರವನ್ನು ಕೇಳಿದ ವ್ಯಕ್ತಿಯು ಪುನಃ

---

...... ಪುಟ 180 ರಿಂದ

ಸಂದರ್ಭದಲ್ಲಿ ಕ್ರಿಯೆಗೆ ಆಧಾರಾರ್ಥದಲ್ಲಿ ಸಪ್ತಮಿಯು ಇದೆ. ಒಂದು ಕರ್ಮದ ದ್ವಾರಾ ಕ್ರಿಯೆಗೆ ಆಧಾರ, ಮತ್ತೊಂದು ಕರ್ತೃವಿನ ದ್ವಾರಾ ಕ್ರಿಯೆಗೆ ಆಧಾರ ಎಂದು ತಿಳಿಯುವುದು. ನದ್ಯಾಂ ಘೋಷಃ- ಸಮೀಪಾರ್ಥದಲ್ಲಿ ಸಪ್ತಮಿ, ತರ್ಕೇ ಕುಶಲಃ- ವಿಷಯಾರ್ಥದಲ್ಲಿ ಸಪ್ತಮೀ, ಆತ್ಮಾ ಸರ್ವಸ್ಮಿನ್ ಸ್ಥಿತಃ- ಅಭಿವ್ಯಾಪಕಾರ್ಥದಲ್ಲಿ ಸಪ್ತಮೀ, ಎಂದು. ಪ್ರಕೃತ 'ನದ್ಯಾಂ ಘೋಷಃ' ಎನ್ನುವಲ್ಲಿ 'ನದೀಸಮೀಪೇ ಘೋಷಃ' ಎಂಬ ಅರ್ಥವಿರುವಂತೆ ಉಚ್ಚಾರಣಾನಂತರದ ಕಾಲದಲ್ಲಿ ಎಂದು ಅರ್ಥ ಎಂದು ಭಾವ.

1. ಪ್ರಕೃತದಲ್ಲಿ ವರ್ಣನಿತ್ಯತ್ವದ ವಿಚಾರವು ಪ್ರಸ್ತಾಪವಾಗಿದೆ. ಅದನ್ನು ನಿರಾಕರಿಸುವುದು ಪ್ರಕೃತಕ್ಕೆ ಸಂಗತವಾಗುತ್ತದೆ. ಆದುದರಿಂದ ವಚನ ಶಬ್ದವು ವಾಕ್ಯ ಎಂಬ ಪ್ರಸಿದ್ಧಾರ್ಥದಲ್ಲಿ ಇದ್ದರೂ ವಚನ ಶಬ್ದವು ವರ್ಣವನ್ನು ತಿಳಿಸುತ್ತದೆ ಎಂದು ತಿಳಿಸಲು ಟೀಕೆಯಲ್ಲಿ ಈ ವಚನ ಶಬ್ದದ ನಿರ್ವಚನವನ್ನು ತಿಳಿಸಿರುವರು- 'ಪದಾರ್ಥವು ಯಾವುದರಿಂದ ಉಕ್ತವಾಗುವುದೋ ಅದು ವಚನ' ಅದು ವರ್ಣವೂ ಆಗಬಹುದು ವಾಕ್ಯವೂ ಆಗಬಹುದು ಎಂದು ಭಾವ.

ಆ ಶಬ್ದವನ್ನು ಕೇಳಿದಲ್ಲಿ 'ಅದೇ ಈ ಗಕಾರ' ಎಂದು ಪ್ರತ್ಯಭಿಜ್ಞೆಯು ಬರುತ್ತದೆ. ಇದಾದರೋ ( ಈ ಪ್ರತ್ಯಭಿಜ್ಞೆಯಾದರೋ) ಹಿಂದೆ ಕೇಳಿದ ಈಗ ಕೇಳುತ್ತಿರುವ ಗಕಾರಗಳಿಗೆ ಅಭೇದವನ್ನು ತಿಳಿಸುತ್ತಾ, ಉಚ್ಚಾರಣದಿಂದ (ವರ್ಣವು) ಜನ್ಯ ಎಂಬುವದನ್ನು (ಎಂಬ ವಾದವನ್ನು) ನಿರಾಕರಿಸುತ್ತದೆ. ಹಿಂದಿನ (ಗಕಾರಕ್ಕೆ) ಈಗ ಪುನಃ ಉತ್ಪತ್ತಿಯು ಯುಕ್ತವಾಗುವುದಿಲ್ಲ. ಇದೇ ರೀತಿಯಾಗಿ ಹಿಂದಿನದು ಆದರ ಹಿಂದಿನದು ಎಂದು ಅನಾದಿ ನಿತ್ಯತ್ವವನ್ನೇ ವರ್ಣಗಳಿಗೆ (ಈ) ಪ್ರತ್ಯಭಿಜ್ಞೆಯು ಸಾಧಿಸುತ್ತದೆ.

**ವರ್ಣನಿತ್ಯತ್ವಕ್ಕೆ ಸಂಬಂಧಿಸಿದ ಸಂದೇಹಗಳ ನಿರಾಕರಣೆ**

ಅತ್ರ ಕೇಚಿತ್- 'ತಾನೇವ ಶಾಟಕಾನಾಚ್ಛಾದಯಾಮಃ' 'ತಾನೇವ ಶಾಲೀನ್ ಭುಞ್ಜ್ಮಃ' ಇತಿವತ್ 'ತ ಏವೇಮೇ ವರ್ಣಾಃ' ಇತಿ ವ್ಯಪದೇಶ-ಮಾತ್ರಮಿತ್ಯಾಚಕ್ಷತೇ । ತದಸತ್, ಪ್ರತ್ಯಭಿಜ್ಞಾನಸ್ಯ ಸಾಕ್ಷಿಸಿದ್ಧತ್ವಾತ್, ತದಿದಮುಕ್ತಮ್ **'ಪ್ರತ್ಯಭಿಜ್ಞಾ'** ಇತಿ । 'ಪ್ರತ್ಯಭಿಜ್ಞೈವೇಯಂ ನ ವ್ಯಪದೇಶಮಾತ್ರಮ್' ಇತಿ ।

ಅಪರೇ ತು- 'ಗತ್ವಾದಿಜಾತಿವಿಷಯಾ ಪ್ರತ್ಯಭಿಜ್ಞಾ ನ ವರ್ಣವಿಷಯಾ' ಇತ್ಯಾಹುಃ । ತದಪ್ಯಸತ್, ಸಾಮಾನ್ಯನಿತ್ಯತಾಯಾಃ ಪ್ರಮಾಣವಿರುದ್ಧ-ತ್ವಾತ್ । ವರ್ಣವಿಷಯತ್ವಸ್ಯ ಸ್ಪಷ್ಟಪ್ರತಿಭಾಸತ್ವಾಚ್ಚ ।

ಅನ್ಯೇ ತು ಮನ್ಯನ್ತೇ- 'ಗೌಃ'ಇತ್ಯತ್ರ ಗಕಾರ-ಔಕಾರ-ವಿಸರ್ಜನೀಯೈಃ ವರ್ಣೈಃ ವ್ಯಙ್ಗ್ಯಃ 'ಪದಸ್ಫೋಟಃ' ಏವ ಪ್ರತ್ಯಭಿಜ್ಞಾಯತ ಇತಿ । ಏತದಪ್ಯಯುಕ್ತಂ- ವರ್ಣಾತಿರಿಕ್ತೇ ಸ್ಫೋಟೇ ಪ್ರಮಾಣಾಭಾವಾತ್ । ಏಕಂ ಪದಂ ಇತಿ ಪ್ರತ್ಯಕ್ಷಂ ಪ್ರಮಾಣಮ್? ಇತಿ ಚೇನ್ನ । ಭಿನ್ನೇಷ್ವಪಿ ವರ್ಣೇಷ್ವೇಕಾರ್ಥಾಭಿಧಾನೋಪಾಧಿನಾ ಏಕತ್ವಸ್ಯ ಸಂಭವಾತ್ । ಏಕದೇಶಾವಸ್ಥಾನೇನ ನಿಮಿತ್ತೇನಾನೇಕೇಷ್ವೇವ ತರುಷು 'ವನಂ' ಇತಿವತ್ । ತದಪಿ, **'ವರ್ಣಾನಾಮ್'** ಇತಿ ಪ್ರಕೃತೇ **'ವಚನಮ್'** ಇತಿ ಗ್ರಹಣೇನ **ಸೂಚಿತಮ್** ।

ಈ ವಿಷಯದಲ್ಲಿ ಕೆಲವರು (ಹೀಗೆ ಅಭಿಮತಿಸುತ್ತಾರೆ)- 'ಅದೇ ಶಾಟಿಯನ್ನು ಹೊದೆಯುತ್ತಿದ್ದೇವೆ' 'ಅದೇ ಅಕ್ಕಿಯನ್ನು ಊಟ ಮಾಡುತ್ತಿದ್ದೇವೆ'

ಇದರಂತೆ.'ಆ ವರ್ಣಗಳೇ ಇವು' ಎನ್ನುವುದು ಹೇಳಿಕೆ ಮಾತ್ರ ಎಂದು ವಾದಿಸುತ್ತಾರೆ[1]. ಇದು (ಈ ವಾದಸರಣಿಯು) ಸರಿಯಾದುದಲ್ಲ. ಪ್ರತ್ಯಭಿಜ್ಞೆಯು ಸಾಕ್ಷಿ ಸಿದ್ಧವಾದುದರಿಂದ. ಈ ವಿಷಯವನ್ನು ಹೇಳಲಾಗಿದೆ **'ಪ್ರತ್ಯಭಿಜ್ಞಾ'** ಎಂದು. (ಸೋಽಯಂ ಗಕಾರಃ) ಎನ್ನುವುದು ಕೇವಲ ಹೇಳಿಕೆಯಲ್ಲ, ಪ್ರತ್ಯಭಿಜ್ಞಾ ಎಂದು[2].

ಮತ್ತೆ ಕೆಲವರು. (ಸೋಽಯಂ ಗಕಾರಃ) ಎನ್ನುವ ಪ್ರತ್ಯಭಿಜ್ಞೆಯು ವರ್ಣವಿಷಯಕವಲ್ಲ (ವರ್ಣಗತವಾದ) ಗತ್ವಾದಿ ಜಾತಿ ವಿಷಯಕ ಎಂದು[3]. ಇದು ಸರಿಯಾದುದಲ್ಲ. ಜಾತಿಯ ನಿತ್ಯತ್ವವು ಪ್ರಮಾಣವಿರುದ್ಧವಾಗಿರುವುದರಿಂದ[4]. ಮತ್ತು (ಸೋಽಯಂ ಗಕಾರಃ ಎನ್ನುವ ಪ್ರತ್ಯಭಿಜ್ಞೆಯು) ವರ್ಣವನ್ನೇ ವಿಷಯೀಕರಿಸುತ್ತಿರುವುದು ಸ್ಪಷ್ಟವಾಗಿರುವುದರಿಂದಲೂ[5].

---

1. ಹೊಸ ಹೊದಿಕೆಯನ್ನು ಹೊದಿಯುವಾಗ ಈ ಹೊಸ ಹೊದಿಕೆಯು ಹಳೆಯ ಹೊದಿಕೆಗೆ ಸದೃಶವಾಗಿದ್ದಲ್ಲಿ, 'ಬಳಸಿದ ಶಾಟಿಯೇ ಇದು'ಎಂದು ಹೇಳುವ ವಾಡಿಕೆ ಇದೆ. ಹಾಗೆಯೇ ಹಿಂದೆ ಭೋಜನ ಮಾಡಿ ನಶಿಸಿದ ಅಕ್ಕಿಯಂತೆ ಇರುವ ಇಂದಿನ ಅಕ್ಕಿಯನ್ನು ಕಂಡೂ 'ಅದೇ ಅಕ್ಕಿ ಇದು' ಎಂದು ಹೇಳುವ ರೂಢಿಯೂ ಇದೆ. ಸಾದೃಶ್ಯ ಇರುವಲ್ಲಿ ಇಂತಹ ಹೇಳಿಕೆಗಳು ಇವೆ. ಆದುದರಿಂದ ಈ ಹೇಳಿಕೆಗಳು ಹಿಂದಿನ ಇಂದಿನ ಪದಾರ್ಥಗಳಿಗೆ ಅಭೇದವನ್ನು ಸಾಧಿಸಲು ಸಮರ್ಥಗಳಲ್ಲ ಎಂದು ಭಾವ.

2. ಸಾಕ್ಷಿಸಿದ್ಧವಾದ ಪ್ರತ್ಯಭಿಜ್ಞಾಕ್ಕೆ ಪ್ರಬಲ ಬಾಧಕವಿಲ್ಲದೇ ಅಮುಖ್ಯಾರ್ಥವನ್ನು ಕಲ್ಪಿಸುವುದು ಯುಕ್ತವಲ್ಲ. ಹಳೆಯಶಾಟಿಯು ನಾಶವಾಗಿದ್ದು,ಹಳೆಯ ಅಕ್ಕಿಯನ್ನು ಭುಂಜಿಸಿದ್ದು, ಅದೇ ಶಾಟಿ, ಅದೇ ಅಕ್ಕಿ, ಎಂಬ ಪ್ರತ್ಯಭಿಜ್ಞೆಗಳಿಗೆ ಪ್ರಬಲ ಬಾಧಕಗಳು ಇವೆ, ಪ್ರಕೃತದಲ್ಲಿ ವರ್ಣದ ವಿಷಯದಲ್ಲಿ ಬಾಧಕವು ಇಲ್ಲ ಎಂದು ಭಾವ.

3. ಸೋಽಯಂ ಗಕಾರಃ' ಇತ್ಯಾದಿ ಪ್ರತ್ಯಭಿಜ್ಞೆಯು ನಿತ್ಯವಾದ ವರ್ಣಗತವಾದ ಗತ್ವಾದಿ ಜಾತಿಯನ್ನು ಗ್ರಹಿಸುತ್ತದೆ ಹೊರತಾಗಿ ವರ್ಣವನ್ನು ಗ್ರಹಿಸುತ್ತಿಲ್ಲ. ಆದುದರಿಂದ ಈ ಪ್ರತ್ಯಭಿಜ್ಞೆಯಿಂದ ವರ್ಣಗಳ ನಿತ್ಯತ್ವವು ಸಿದ್ಧವಾಗಲಾರದು ಎಂದು ಪೂರ್ವಪಕ್ಷಿಯ ಭಾವ.

4. ವ್ಯಕ್ತಿಗಳು ಅನಿತ್ಯ, ಆ ವ್ಯಕ್ತಿನಿಷ್ಠವಾದ ಜಾತಿ ಮಾತ್ರ ನಿತ್ಯ. ಘಟ ಅನಿತ್ಯವಾದರೂ ಘಟದಲ್ಲಿ ರುವ ಘಟತ್ವ ಜಾತಿಯು ನಿತ್ಯ ಎಂದು. ನೈಯ್ಯಾಯಿಕರು ಅಭಿಮತಿಸಿರುವರು. 'ವ್ಯಕ್ತಿಯು ಅನಿತ್ಯವಾದಲ್ಲಿ ವ್ಯಕ್ತಿನಿಷ್ಠವಾದ ಜಾತಿರೂಪವಾದ ಧರ್ಮವೂ ಅನಿತ್ಯ' ಎಂದು ಜಾತಿನಿರಾಕರಣ ಪ್ರಸಂಗದಲ್ಲಿ ನಿರಾಕರಿಸಲಾಗಿದೆ ಎಂದು ಭಾವ.

5. ಸೋಽಯಂ ಗಕಾರಃ ಎನ್ನುವ ಪ್ರತ್ಯಭಿಜ್ಞೆಯು ಜಾತಿಯನ್ನು ವಿಷಯೀಕರಿಸುತ್ತಿಲ್ಲ ವರ್ಣವನ್ನೇ ವಿಷಯೀಕರಿಸುತ್ತದೆ. ಆದುದರಿಂದ ಪ್ರತ್ಯಭಿಜ್ಞೆಯು ವರ್ಣನಿತ್ಯತ್ವವನ್ನೇ ತಿಳಿಸುತ್ತಿದೆ ಹೊರತು, ಜಾತಿವಿಷಯಕ ಎನ್ನುವುದು ತರವಲ್ಲ ಎಂದು ಭಾವ.

ಮತ್ತೆ ಕೆಲವರು- 'ಗೌಃ' ಎನ್ನುವಲ್ಲಿ ಗಕಾರ, ಔಕಾರ, ಮತ್ತು ವಿಸರ್ಗ ಈ ಮೂರು ವರ್ಣಗಳಿಂದ ವ್ಯಂಗ್ಯವಾಗುವ ಪದಸ್ಫೋಟವೇ ಪ್ರತ್ಯಭಿಜ್ಞೆಯಿಂದ ಬೋಧಿತವಾಗಿದೆ ಎಂದು[1].

ಇದೂ ಸರಿಯಾದುದಲ್ಲ. ವರ್ಣಗಳಿಂದ ಭಿನ್ನವಾದ ಸ್ಫೋಟವು ಇದೆ ಎನ್ನಲು ಪ್ರಮಾಣ ಇಲ್ಲದಿರುವುದರಿಂದ. (ರಾಮಃ, ವನಂ, ಇತ್ಯಾದಿಗಳು) 'ಒಂದು ಪದ' ಎಂದು ಪ್ರತ್ಯಕ್ಷವಿದೆ. ಅದೇ (ಸ್ಫೋಟದ ವಿಷಯದಲ್ಲಿ) ಪ್ರಮಾಣ[2]. ಎಂದು ಹೇಳಲು ಆಗದು. ಭಿನ್ನಗಳೇ ಆಗಿದ್ದರೂ ವರ್ಣಗಳು ಒಂದು ವಸ್ತುವನ್ನು ಬೋಧಿಸುವ ನಿಮಿತ್ತದಿಂದ 'ಒಂದು ಪದ' (ಎನ್ನುವ ವ್ಯವಹಾರವು) ಸಂಭಾವಿತವಾಗಿರುವದರಿಂದ. ಒಂದೇ ದೇಶದಲ್ಲಿದೆ ಎನ್ನುವ ನಿಮಿತ್ತದಿಂದ ಅನೇಕ ಮರಗಳಲ್ಲಿ 'ಕಾಡು' ಎನ್ನುವಂತೆ[3]. ಇದನ್ನೂ ಸಹ

1. ಪದಸ್ಫೋಟ, ವಾಕ್ಯಸ್ಫೋಟ ಎಂದು ವೈಯಾಕರಣಿಗಳು ಅಭಿಮತಿಸಿರುವರು. 'ರಾಮಃ ವನಂ ಗಚ್ಛತಿ' ಎಂದು ಒಂದು ವಾಕ್ಯವಿದೆ. 'ರಾಮನು ಕಾಡಿಗೆ ಹೋದನು' ಎಂದು ಇದರ ಅರ್ಥ. 'ರಾಮಃ' ಎನ್ನುವ ಪದದಲ್ಲಿ ರ, ಆ, ಮ ಮತ್ತು ವಿಸರ್ಗ ನಾಲ್ಕು ವರ್ಣಗಳಿವೆ. ನಾಲ್ಕು ವರ್ಣಗಳೂ ಪ್ರತ್ಯೇಕವಾಗಿ 'ರಾಮನು' ಎನ್ನುವದನ್ನು ತಿಳಿಸುವುದಿಲ್ಲ. ಹಾಗೆಯೇ ಈ ವಾಕ್ಯದಲ್ಲಿರುವ ಮೂರು ಪದಗಳು ಪ್ರತ್ಯೇಕವಾಗಿ 'ರಾಮನು ಕಾಡಿಗೆ ಹೋದನು' ಎನ್ನುವದನ್ನು ತಿಳಿಸುವುದಿಲ್ಲ. ಆದುದರಿಂದ ಪದಶ್ರವಣದ ನಂತರ ಆ ಪದಗತವರ್ಣಗಳಿಂದ ಒಂದು ಸ್ಫೋಟವು ಅಭಿವ್ಯಕ್ತವಾಗುವುದು, ಇದು ಪದಸ್ಫೋಟ. ವಾಕ್ಯಶ್ರವಣಾನಂತರ ವಾಕ್ಯಗತ ಪದಗಳಿಂದ ಮತ್ತೊಂದು ಸ್ಫೋಟವು ಅಭಿವ್ಯಕ್ತವಾಗುವುದು, ಇದು ವಾಕ್ಯಸ್ಫೋಟ . ಮೊದಲ ಸ್ಫೋಟವು ಪದದ ಅಭಿಪ್ರಾಯವನ್ನು ಎರಡನೆಯ ಸ್ಫೋಟವು ವಾಕ್ಯದ ಅಭಿಪ್ರಾಯವನ್ನು ತಿಳಿಸುತ್ತದೆ ಎಂದು ಅಭಿಮತಿಸಿರುವರು.

2. 'ರಾಮಃ' ಎಂಬುವದನ್ನು 'ಒಂದು ಪದ' ಎಂದು ವ್ಯವಹರಿಸುತ್ತಾರೆ. ನಾಲ್ಕು ಭಿನ್ನವಾದ ವರ್ಣಗಳ ಸಮುದಾಯವನ್ನು 'ಒಂದು ಪದ' ಎಂದು ವ್ಯವಹರಿಸುವ ಪ್ರತ್ಯಕ್ಷವೇ ವರ್ಣಾತಿರಿಕ್ತವಾದ ಸ್ಫೋಟ ಎಂಬ ವಸ್ತುವಿದೆ ಎನ್ನಲು ಪ್ರಮಾಣ. ಹಾಗೆಯೇ ವಾಕ್ಯಾತಿರಿಕ್ತ ಸ್ಫೋಟವಿದೆ ಎನ್ನಲು 'ಒಂದು ವಾಕ್ಯ' ಎನ್ನುವ ಪ್ರತ್ಯಕ್ಷವೇ ಪ್ರಮಾಣ ಎಂದು ಭಾವ.

3. ಅನೇಕ ವೃಕ್ಷಗಳು ನಿಬಿಡವಾಗಿದ್ದಲ್ಲಿ ಕಾಡು ಎನ್ನುವರು. ಅನೇಕ ವೃಕ್ಷಗಳನ್ನು 'ಏಕದೇಶಸ್ಥಿತಿ' ಎಂಬ ನಿಮಿತ್ತದಿಂದ 'ಏಕಂ ವನಂ' ಎಂಬುದಾಗಿ ವ್ಯವಹರಿಸುವಂತೆ, ಅನೇಕ ಅಕ್ಷರಗಳು ಸೇರಿ ಒಂದು ವಸ್ತುವನ್ನು ತಿಳಿಸುವ ನಿಮಿತ್ತ 'ಏಕಂ ಪದಂ' ಎಂಬ ವ್ಯವಹಾರ, ಅನೇಕಪದಗಳು ಒಂದು ವಿಷಯವನ್ನು ಪ್ರತಿಪಾದಿಸುವುದರಿಂದ 'ಒಂದು ವಾಕ್ಯ' ಎಂಬ ವ್ಯವಹಾರಗಳು ಇವೆ ಎಂದು ಭಾವ.

'ವರ್ಣಾನಾಂ' ಎಂದು ಪ್ರಕೃತವಾಗಿದ್ದರೂ ('ಉಚ್ಚಾರಣಕಾಲ ಏವ ವರ್ಣಾಣಾಂ'ಎಂದು ವರ್ಣವನ್ನು ಪರಿಗ್ರಹಿಸಿದ್ದರೂ, 'ವಚನವನ್' ('ತದೇವೇದಂ ವಚನಂ' ಎಂದು) ಎಂದು ಪರಿಗ್ರಹಿಸಿರುವುದರಿಂದ ಸೂಚಿಸಿರುವರು.

**ಸ್ಫೋಟವು ಪ್ರಮಾಣಪ್ರಮಿತವಲ್ಲ**

ನ ವರ್ಣಾಃ ಪ್ರತ್ಯೇಕಮರ್ಥಮಭಿದಧತಿ ಅನೇಕ ವರ್ಣೋಚ್ಚಾರಣ-ವೈಯರ್ಥ್ಯಾಪತ್ತೇಃ । ನಾಪಿ ಸಮುದಿತಾಃ, ಕ್ರಮವತಾಂ ಸಮುದಾಯಾ-ನುಪಪತ್ತೇಃ । ನಿತ್ಯತ್ವೇಽಪಿ ಪ್ರತೀತಾನಾಮೇವಾರ್ಥಾಭಿಧಾಯಕತ್ವಮ್ । ಪ್ರತೀತಯಶ್ಚ ಕ್ರಮಭಾವಿನ್ಯ ಇತಿ, ನ ಸಮುದಾಯಃ ಸಂಭವತಿ । ಅತೋ ವರ್ಣೈರನುಪಪದ್ಯಮಾನಮರ್ಥಾಭಿಧಾನಂ ತದರಿಕ್ತಂ ಪದಸ್ಫೋಟಂ ಕಲ್ಪಯತಿ? ಇತಿ ಚೇನ್ನ । ಏಕಬುದ್ಧ್ಯಾರೂಢತ್ವೇನ ವರ್ಣಾನಾಮೇವಾ-ರ್ಥಾಭಿಧಾಯಕತ್ವೋಪಪತ್ತೇಃ । ತದಿದಮುಕ್ತಂ **'ವಚನಂ'** ಇತಿ । ಏವಮೇವ ಪದಾತಿರಿಕ್ತವಾಕ್ಯಸ್ಫೋಟನಿವಾರಣಾಯ ವರ್ಣೇಷು ಪ್ರಕೃತೇಷ್ವಪಿ **'ತದ್ವದ್ವೇದಸ್ಯ'** ಇತಿ ವೇದಗ್ರಹಣಂ, **'ತದೇವೇದಂ ವಾಕ್ಯಂ'** ಇತಿ ವಾಕ್ಯಗ್ರಹಣಂ ಚ ಕರಿಷ್ಯತಿ ।

ವರ್ಣಾನಾಮೇವ ಪದಬುದ್ಧಿವಿಷಯಾಣಾಮನ್ವಿತಸ್ವಾರ್ಥಾಭಿಧಾಯ-ಕತ್ವೇನ ವಾಕ್ಯಾರ್ಥವೇದನಸಂಭವೇನ ತದರಿಕ್ತವಾಕ್ಯಸ್ಫೋಟಕಲ್ಪಕಾ-ಭಾವಾದಿತಿ। ಅನ್ಯಥಾ ವರ್ಣಾನಾಂ ಸ್ಫೋಟವ್ಯಞ್ಜಕತ್ವಮಪ್ಯನುಪಪನ್ನಮ್ । ಪ್ರತ್ಯೇಕಸಮುದಿತವಿಕಲ್ಪಸ್ಯ ತತ್ರಾಪಿ ಸಂಭವಾತ್ । ಪ್ರಥಮೋಚ್ಚಾರಿತೇನೈವ ವರ್ಣೇನಾಭಿವ್ಯಕ್ತೋಽಪಿ ಸ್ಫೋಟೋ ದ್ವಿತೀಯಾದ್ಯುಚ್ಚಾರಣೇನ ವಿಶದೀ-ಕ್ರಿಯತೇ? ಇತಿ ಚೇನ್ನ । ನಿರವಯವಸ್ಯ ವೈಶದ್ಯಾವೈಶದ್ಯಕಲ್ಪನಾನುಪ-ಪತ್ತೇಃ । ನ ಚ ಗಕಾರಮಾತ್ರಶ್ರವಣೇನಾವಿಶದಾಽಪಿ ಪದಪ್ರತೀತಿರನು-ಭೂಯತೇ । ಅತೋ 'ವರ್ಣವಿಷಯೈವಾ ಇಯಂ ಪ್ರತ್ಯಭಿಜ್ಞಾ' ಇತಿ ಸ್ಥಿತಮ್ ।

(ಒಂದು ಪದದಲ್ಲಿ ಘಟಿತವಾದ) ವರ್ಣಗಳು ಪ್ರತ್ಯೇಕವಾಗಿ ಅರ್ಥವನ್ನು ತಿಳಿಸಲಾರವು. (ಪ್ರತ್ಯೇಕವಾಗಿ ಅರ್ಥಾಭಿಧಾಯಕವಾದಲ್ಲಿ) ಅನೇಕವರ್ಣಗಳ

ಉಚ್ಚಾರಣೆಯು ವ್ಯರ್ಥವಾಗಬೇಕಾದೀತು. ಸಮುದಿತವಾದವುಗಳು (ವರ್ಣಗಳು ಅರ್ಥವನ್ನು ಹೇಳುತ್ತವೆ) ಎಂದು ಹೇಳಲಾಗದು. ಕ್ರಮವಾಗಿ ಉತ್ಪನ್ನವಾಗುವ (ವರ್ಣಗಳ) ಸಮುದಾಯವೇ ಉತ್ಪನ್ನವಾಗಲಾರದು. (ವರ್ಣಗಳು) ನಿತ್ಯತ್ವವನ್ನು ಹೊಂದಿದ್ದರೂ, ಪ್ರತೀತವಾದವುಗಳೇ (ಪ್ರತೀತವಾದ ವರ್ಣಗಳಿಗೇ) ಅರ್ಥಾಭಿಧಾಯಕವಾಗಿರುವುದು ಕಂಡಿದೆ. ಪ್ರತೀತಿ ಯಾದರೋ ಕ್ರಮಜನ್ಯವಾದದು ಹೀಗಾಗಿ ಸಮುದಾಯ ಅಸಂಭವ[1]. ಆದುದರಿಂದ ವರ್ಣಗಳಿಂದ ಬೋಧಿತವಾಗದ ಅರ್ಥವನ್ನು ಹೇಳುವ ವರ್ಣಗಳಿಂದ ಭಿನ್ನವಾದ ಪದಸ್ಫೋಟವನ್ನು ಕಲ್ಪಿಸಲಾಗುವುದು ಎಂದು ಹೇಳಲಾಗದು. (ವರ್ಣಗಳು) ಒಂದು ಬುದ್ಧಿಯಲ್ಲಿ ಆರೂಢವಾಗುವುದರಿಂದ, ಆ ವರ್ಣಗಳಿಗೇ ಅರ್ಥಬೋಧಕತ್ವವು ಯುಕ್ತವಾಗುತ್ತದೆ[2]. ಇಷ್ಟು ವಿಷಯವನ್ನು 'ವಚನಂ' ಎನ್ನುವುದರಿಂದ ತಿಳಿಸಿರುವರು[3]. ಇದೇ ರೀತಿಯಲ್ಲಿ

1. 'ಗಜಾನನ' ಎನ್ನುವುದು ಒಂದು ಪದ. ಈ ಪದದಲ್ಲಿನ ಒಂದೊಂದೇ ಅಕ್ಷರವು ಗಣಪತಿಯನ್ನು ಬೋಧಿಸಲಾರದು. ಬೋಧಿಸುವುದು ಎಂದು ಒಪ್ಪಿದಲ್ಲಿ ಬೋಧಿಸುವ ಅಕ್ಷರದ ಹೊರತಾಗಿ ಉಳಿದ ಅಕ್ಷರಗಳು ವ್ಯರ್ಥವಾಗಬೇಕಾದೀತು. ಇನ್ನು ಒಂದೇ ಅಕ್ಷರಕ್ಕೆ ಬೋಧಕತ್ವವು ಇಲ್ಲದಿದ್ದರೂ ಅಕ್ಷರಗಳ ಸಮುದಾಯಕ್ಕೆ ಅಂತಹ ಒಂದು ಶಕ್ತಿಯು ಇದೆ ಎಂದು ಕಲ್ಪಿಸಲೂ ಆಗದು. ಸಮುದಾಯ ಎಂದರೆ ಒಟ್ಟಿಗೆ ಇರುವಿಕೆ. ಅರಣ್ಯದಲ್ಲಿ ವೃಕ್ಷಗಳು, ಕೊಟ್ಟಿಗೆಯಲ್ಲಿ ಗೋವುಗಳು ಏಕಕಾಲದಲ್ಲಿ, ಏಕದೇಶದಲ್ಲಿರುತ್ತವೆ. ಇವುಗಳನ್ನು ಸಮುದಾಯ ಎನ್ನುವರು. ಪ್ರಕೃತ ವರ್ಣಗಳು ನಿತ್ಯವಾದವುಗಳು ಏಕಾಲದಲಿದ್ದರೂ, ಅವು ಉಚ್ಚಾರಣದಿಂದ ಕ್ರಮವಾಗಿ ಪ್ರಕಟಗೊಂಡಾಗ ಪದಾರ್ಥಬೋಧಕವಾಗುವುವು. ಆದರೆ ಅವು ಏಕಕಾಲದಲ್ಲಿ ಪ್ರಕಟಗೊಳ್ಳುವುದಿಲ್ಲ, ಭಿನ್ನಕಾಲದಲ್ಲಿ ಪ್ರಕಟಗೊಳ್ಳುವ ಆ ವರ್ಣಗಳಲ್ಲಿ ಸಮುದಾಯತ್ವವು ಕೂಡದು ಎಂದು ಭಾವ.

2. 'ಉಚ್ಚಾರಣೆಯಿಂದ ಕ್ರಮವಾಗಿ ಪ್ರಕಟಿತವಾದ ವರ್ಣಗಳೇ ಶ್ರೋತೃವಿನ ಬುದ್ಧಿಯಲ್ಲಿ ಆರೂಢವಾಗಿ, ಬುದ್ಧ್ಯಾರೂಢವಾದ ಆ ವರ್ಣಗಳು ವಸ್ತುವನ್ನು ತಿಳಿಸುತ್ತವೆ' ಎಂದು, ಪ್ರಮಿತ ವಸ್ತುಗಳಿಂದಲೇ ವ್ಯವಹಾರವನ್ನು ಕೂಡಿಸಬಹುದು, ಅದಕ್ಕಾಗಿ ಪ್ರಮಿತವಲ್ಲದ ಸ್ಫೋಟವನ್ನು ಕಲ್ಪಿಸುವ ಅಗತ್ಯವಿಲ್ಲ ಎಂದು ಭಾವ.

3. ಪ್ರಕೃತದಲ್ಲಿ ವರ್ಣನಿತ್ಯತ್ವದ ವಿಚಾರ ಪ್ರಸ್ತುತವಾಗಿದೆ. ವರ್ಣಗಳ ನಿತ್ಯತ್ವವನ್ನು ತಿಳಿಸಲು ಆಚಾರ್ಯರು 'ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಯನ್ನು ಪ್ರಮಾಣವಾಗಿ ಹೇಳಿದ್ದರು. ಪ್ರಕೃತ 'ತದೇವೇದಂ ವಚನಂ' ಎನ್ನುವ ವಾಕ್ಯವಿಷಯಕ ಪ್ರತ್ಯಭಿಜ್ಞೆಯನ್ನು ಉದಾಹರಿಸುತ್ತಿರುವರು. ಈ ಪ್ರತ್ಯಭಿಜ್ಞೆಗಳನ್ನು ಉದಾಹರಿಸಿದ್ದುದರ ಅಭಿಪ್ರಾಯವು ಈ ಪದಸ್ಫೋಟದ ವಾದವನ್ನು ನಿರಾಕರಿಸಲು ಎಂದು ಭಾವ.

ಪದಾತಿರಿಕ್ತವಾದ ವಾಕ್ಯಸ್ಫೋಟವಾದವನ್ನು ನಿರಾಕರಿಸಲು 'ವರ್ಣೇಷು' ಎಂದು ಪ್ರಕೃತವಾಗಿದ್ದರೂ '**ತದ್ವದ್ವೇದಸ್ಯ**' (ಮುಂದೆ ವರ್ಣನಿತ್ಯತ್ವ ವಾದವನ್ನು ಸಮಾಪನೆಗೊಳಿಸುವ ಸಂದರ್ಭದಲ್ಲಿ) ಎಂದು 'ವೇದ' ಎಂಬ ಪದವನ್ನು ಪರಿಗ್ರಹಿಸಿರುವವರು, '**ತದೇವೇದಂ ವಾಕ್ಯಂ**' ಎಂದು 'ವಾಕ್ಯ' ಎಂಬ ಪದವನ್ನು ಪರಿಗ್ರಹಿಸುವರು. ಪದ-ಬುದ್ಧಿವಿಷಯಕಗಳಾದ ವರ್ಣಗಳೇ ಅನ್ವಿತಸ್ವಾರ್ಥಗಳನ್ನು ಬೋಧಿಸುವುದರಿಂದ ವಾಕ್ಯಾರ್ಥದ ಅರಿವು ಉಂಟಾಗುವುದರಿಂದ, ಅದರಿಂದ ಅತಿರಿಕ್ತವಾದ (ವರ್ಣಾತಿರಿಕ್ತವಾದ) ವಾಕ್ಯಸ್ಫೋಟಕ್ಕೆ ಕಲ್ಪಕವು ಇಲ್ಲದಿರುವುದರಿಂದ ಎಂದು[1]. ಪ್ರತ್ಯೇಕ, ಸಮುದಿತ ಎನ್ನುವ ವಿಕಲ್ಪವು ಇಲ್ಲೂ ಸಂಭಾವಿತವಾಗಿರುವುದರಿಂದ[2]. ಮೊದಲು ಉಚ್ಚಾರಣೆಗೊಂಡ ವರ್ಣದಿಂದ ಅಭಿವ್ಯಕ್ತಗೊಂಡ ಸ್ಫೋಟವು ದ್ವಿತೀಯಾದಿ ವರ್ಣಗಳಿಂದ ವಿಶದಗೊಳ್ಳುವುದು ಎಂದು ಹೇಳಲಾಗದು. ನಿರವಯವಾದ ಸ್ಫೋಟಕ್ಕೆ ವಿಶದ ಸಂಕ್ಷೇಪ ಎಂದು ಕಲ್ಪಿಸಲಾಗದಾದುದರಿಂದ[3]. ('ಗಂಗಾ' ಎನ್ನುವ ಪದವನ್ನು ಉಚ್ಚರಿಸುವಾಗ) ಗಕಾರ ಶ್ರವಣಮಾತ್ರದಿಂದ ಪದದ

1. ಒಂದೇ ಅಕ್ಷರವು ಪದಸ್ಫೋಟದ ವ್ಯಂಜಕವಲ್ಲ, ಹಾಗೆಯೇ ಒಂದೇ ಪದವೂ ಸಹ. ಆದುದರಿಂದ ಏಕ ಬುಧ್ಯಾರೂಢವಾದ ವರ್ಣ-ವಾಕ್ಯಗಳಿಂದಲೇ ಸ್ಫೋಟವು ಅಭಿವ್ಯಕ್ತವಾಗುವುದು ಎಂದು ಕಲ್ಪಿಸುವ ಬದಲು,ಏಕ ಬುಧ್ಯಾರೂಢವಾದ ವರ್ಣ-ಪದಗಳೇ ಅರ್ಥ ಬೋಧಕ ಎಂದು ವ್ಯವಹಾರವು ಯುಕ್ತವಾಗುತ್ತಿರಲು, ವರ್ಣ-ಪದ-ವಾಕ್ಯಾತಿರಿಕ್ತವಾದ ಸ್ಫೋಟದ ಕಲ್ಪನೆಗೆ ಅವಕಾಶವಿಲ್ಲ ಎಂದು ಭಾವ.

2. ವರ್ಣವೇ ಪದಾರ್ಥಸ್ಫುರಣ ಮಾಡುವುದು ಎಂದು ವಾದಿಸುವವರಿಗೆ ಸ್ಫೋಟವಾದಿಗಳು ವಿಕಲ್ಪಿಸಿ ಪ್ರಶ್ನಿಸಿದ್ದರೂ. ಒಂದೇ ವರ್ಣವು ಪದಾರ್ಥವನ್ನು ತಿಳಿಸುವುದಾದಲ್ಲಿ ಉಳಿದ ವರ್ಣಗಳು ವ್ಯರ್ಥ. ಉಚ್ಚಾರಣದಿಂದ ಪ್ರಕಟಗೊಳ್ಳುವ ವರ್ಣದ ಸಮುದಾಯವಿಲ್ಲವಾದುದರಿಂದ ಪದಾರ್ಥದ ಸ್ಫುರಣ ಹೇಗೆ ? ಇತ್ಯಾದಿ ಈ ಎಲ್ಲ ವಿಕಲ್ಪಗಳು ವರ್ಣ-ಪದ-ವಾಕ್ಯಸ್ಫೋಟ-ಗಳನ್ನು ಒಪ್ಪುವವರಿಗೂ ಅನ್ವಯಿಸುವುದು. ಅವರಾದರೂ ಏಕ ಬುದ್ಧಿಸ್ಥಿತವಾದ ವರ್ಣಗಳಿಂದ ಪದಸ್ಫೋಟ ಎಂದು ಒಪ್ಪಬೇಕು. ವರ್ಣಗಳು ಏಕಬುದ್ಧಿಸ್ಥಿತ ಎಂದು ಒಪ್ಪಿದ ಮೇಲೆ, ಏಕ ಬುದ್ಧಿಸ್ಥಿತವಾದ ವರ್ಣಗಳೇ ಪದಾರ್ಥವನ್ನು ತಿಳಿಸುತ್ತವೆ ಎಂದು ಹೇಳಲು ಅವಕಾಶವಿರುವಾಗ ಅಪ್ರಾಮಾಣಿಕವಾದ ಸ್ಫೋಟವನ್ನು ಏಕೆ ಕಲ್ಪಿಸಬೇಕು ಎಂದು ಭಾವ.

3. ಸ್ಫೋಟವನ್ನು ಅಂಗೀಕರಿಸುವ ವಾದಿಗಳು ಸ್ಫೋಟವನ್ನು ನಿರವಯವ ಎಂದು ಒಪ್ಪಿರುವರು. ಹೀಗಾಗಿ ಸ್ಫೋಟವು ಪ್ರಕಟಗೊಂಡಲ್ಲಿ ಸಂಪೂರ್ಣವಾಗಿಯೇ ಪ್ರಕಟವಾಗುತ್ತದೆ ಆದುದರಿಂದ ಸ್ಫುಟಾಸ್ಫುಟವಿಭಾಗವು ಸ್ಫೋಟದಲ್ಲಿ ಸಲ್ಲದು ಎಂದು ಭಾವ.

ಪ್ರತೀತಿಯು ಪೂರ್ಣವಾಗದು ಎಂದು ಅನುಭವವು ಇದೆ[1]. ಆದುದರಿಂದ ವರ್ಣವಿಷಯಕವೇ ಈ ಪ್ರತ್ಯಭಿಜ್ಞಾ ('ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಯು) ಎಂದು ಸ್ಥಿರವಾಯಿತು.

**-: ವರ್ಣನಿತ್ಯತ್ವವಾದ ಸಮಾಪ್ತಿ :-**

**॥ ಪ್ರತ್ಯಭಿಜ್ಞೆಯ ಯಥಾರ್ಥತ್ವವಾದಾರಂಭ ॥**

ಸೋಽಯಂ ಗಕಾರಃ ಎನ್ನುವ ಪ್ರತ್ಯಭಿಜ್ಞೆಯು ನ್ಯಿತ್ವದ ಸಾಧಕವಾಗಲಾರದು. ಅತಿ ಸಾದೃಶ್ಯವಿರುವ ಸ್ಥಳದಲ್ಲಿ ಈ ರೀತಿಯಲ್ಲಿ ವ್ಯವಹರಿಸುವ ರೂಢಿಯು ಇದೆ. 'ನೆನ್ನಯ ಅಕ್ಕಿಯೇ ಇವು' ಇತ್ಯಾದಿಯಾಗಿ ವ್ಯವಹಾರದಲ್ಲಿರುವುದು ಸರ್ವ ವಿದಿತ. ಎಂದು ಸಂದೇಹಿಸುವುದು ತರವಲ್ಲ. ಯಾವುದೇ ಅರಿವಿಗೆ ಪ್ರಬಲವಾದ ಬಾಈಧಕವಿಲ್ಲದೇ ಅಪ್ರಾಮಾಣ್ಯವನ್ನು ಹೇಳುವುದು ಯೋಗ್ಯವಲ್ಲ. ನೆನ್ನೆಯದೇ ಅಕ್ಕಿ ಎನ್ನುವುದು ಭ್ರಾಂತಿ. ಆ ಅಕ್ಕಿಯನ್ನು ಭಕ್ಷಿಸಿದ್ದಾಗಿದೆ. ಇಲ್ಲಿ ಆ ತರಹದ ಬಾಧಕವು ಇಲ್ಲ.

**ಪ್ರತ್ಯಭಿಜ್ಞೆಗಳೆಲ್ಲವೂ ಭ್ರಾಂತಿಯಾಗಲಾರದು**

**ನ ಚ ಸಾದೃಶ್ಯಾತ್ ಪ್ರತ್ಯಭಿಜ್ಞಾ ಭ್ರಾನ್ತಿರಿತಿ ವಾಚ್ಯಮ್ । 'ಸೋಽಯಂ ದೇವದತ್ತಃ' ಇತ್ಯಾದೇರಪಿ ತಥಾತ್ವಾಪತ್ತೇಃ ।**

ಸಾದೃಶ್ಯವಿರುವುದರಿಂದ( 'ನೆನ್ನೆಯ ಅನ್ನ' ಎನ್ನುವಂತೆ 'ತದೇವೇದಂ ವಚನಮ್') ಎನ್ನುವ ಪ್ರತ್ಯಭಿಜ್ಞೆಯೂ ಭ್ರಾಂತಿ ಎನ್ನವುದು ತರವಲ್ಲ. 'ಆ ದೇವದತ್ತನೇ ಇವನು' ಈ ಮುಂತಾದವುಗಳೂ ಸಹ ಹಾಗೇ ಆಗಬೇಕಾದೀತು.

**ಅಸ್ತು, ತಥಾಽಪಿ ನಾನಯಾ ವರ್ಣಾನಾಂ ನಿತ್ಯತ್ವಂ ಸಿದ್ಧ್ಯತಿ । ಯತಃ ಪೂರ್ವೋಚ್ಚರಿತೇನ ಗಕಾರೇಣೇದಾನೀಮುಚ್ಚರಿತಸ್ಯ ಗಕಾರಸ್ಯ ಸಾದೃಶ್ಯಾತ್, ತನ್ನಿಬಂಧನಾ ಭ್ರಾನ್ತಿರೇವೇಯಮ್ । ಯಥಾ ಪರಿಲೂನಪುನರ್ಜಾತ-ಕುನ್ತಲಕಲಾಪಯೋಃ ಸಾದೃಶ್ಯಾತ್ 'ಸ ಏವಾಯಂ ಕುನ್ತಲಕಲಾಪ' ಇತಿ**

---

1. ಗಕಾರಮಾತ್ರ ಶ್ರವಣವಾದಾಗ ಪದವು ಸ್ಫುಟವಾಗಲಿಲ್ಲ, ಮುಂದಿನ ವರ್ಣಗಳ ಉಚ್ಚಾರಣಾನಂತರ ಪದವು ಸ್ಫುಟವಾಯಿತು ಎಂದೇ ಎಲ್ಲರ ಅನುಭವವು ಇದೆ ಹೊರತಾಗಿ ಸ್ಫೋಟದ ಅನುಭವವು ಯಾರಿಗೂ ಇಲ್ಲ ಎಂದು ಭಾವ.

**ಪ್ರತ್ಯಭಿಜ್ಞಾ ಭ್ರಾಂತಿಃ? ಇತ್ಯತ ಆಹ 'ನ ಚ ಸಾದೃಶ್ಯಾತ್' ಇತಿ । ಕುತೋ ನ ವಾಚ್ಯಮ್? ಇತಿ ಚೇದ್ ವೈಷಮ್ಯಾತ್ । ಯುಕ್ತಂ ಕುನ್ತಲಕಲಾಪ-ಪ್ರತ್ಯಭಿಜ್ಞಾಯಾ ಭ್ರಾನ್ತಿತ್ವಕಲ್ಪನಮ್ । ಪರಿಲೂನಕುನ್ತಲಕಲಾಪಸ್ಯ ಭೂಮೌ ಪತಿತಸ್ಯ ದರ್ಶನೇನ 'ನಾಯಮಸೌ' ಇತಿ ಬಾಧಕಪ್ರತ್ಯಯೋದಯಾತ್ । ನ ಚಾತ್ರ ತಥಾ ಬಾಧಕಪ್ರತ್ಯಯೋऽಸ್ತಿ । ಏವಮೇವ ಭ್ರಾನ್ತಿತ್ವಕಲ್ಪನೇ ಚಾತಿಪ್ರಸಙ್ಗ ಇತಿ ಭಾವಃ ।**

ಇರಲಿ, ಆದರೂ ಈ ಪ್ರತ್ಯಭಿಜ್ಞೆಯಿಂದಲೇ ವರ್ಣಗಳಿಗೆ ನಿತ್ಯತ್ವವು ಸಿದ್ಧವಾಗುವುದಿಲ್ಲ. ಏಕೆಂದರೆ ಹಿಂದೆ ಉಚ್ಚರಿಸಿದ ಗಕಾರದಿಂದ ಈಗ ಉಚ್ಚರಿಸಿದ ಗಕಾರಕ್ಕೆ ಸಾದೃಶ್ಯವಿರುವುದರಿಂದ, ತನ್ನಿಮಿತ್ತಕವಾದ ಈ ಪ್ರತ್ಯಭಿಜ್ಞೆಯು ಭ್ರಾಂತಿಯೇ[1]. ಹೇಗೆ ಕತ್ತರಿಸಿದ ಪುನಃ ಬೆಳೆದ ಕೂದಲ ಸಮೂಹಗಳಲ್ಲಿ ಸಾದೃಶ್ಯವಿರುವುದರಿಂದ 'ಅದೇ ಕೂದಲ ಸಮೂಹ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿಯೇ? ಎಂದು ಆದುದರಿಂದ ಉತ್ತರಿಸುತ್ತಾರೆ. '**ನ ಚ ಸಾದೃಶ್ಯಾತ್**' ಎಂದು. ಏಕೆ ಹೇಳ ಬಾರದು ? (ಈ ಎರಡು ಪ್ರತ್ಯಭಿಜ್ಞೆಗಳಲ್ಲಿ) ವ್ಯತ್ಯಾಸವಿರುವುದರಿಂದ. ಕೂದಲಸಮೂಹದ ವಿಷಯಕವಾದ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಕಲ್ಪಿಸುವುದು ಯುಕ್ತವೇ ಆಗಿದೆ. ಕತ್ತರಿಸಿದ ಕೂದಲ ಸಮೂಹವು ಭೂಮಿಯಲ್ಲಿ ಬಿದ್ದದ್ದು ಕಾಣುತ್ತಿರುವುದರಿಂದ 'ಇದು ಅದು ಅಲ್ಲ (ಬೆಳೆದ ಕೂದಲಸಮೂಹವು ಕತ್ತರಿಸಿದ ಕೂದಲಸಮೂಹವಲ್ಲ )' ಎಂದು ಬಾಧಕಜ್ಞಾನವಿರುವುದರಿಂದ. ಪ್ರಕೃತದಲ್ಲಿ ಆ ರೀತಿಯಾದ ಬಾಧಕ ಜ್ಞಾನವಿಲ್ಲ. ಹಾಗೆಯೇ (ಬಾಧಕ ಜ್ಞಾನವಿಲ್ಲದೆ, ಪ್ರತ್ಯಭಿಜ್ಞೆಗೆ) ಭ್ರಾಂತಿತ್ವವನ್ನು ಕಲ್ಪಿಸಿದಲ್ಲಿ ಅತಿಪ್ರಸಂಗ ಎಂದು ಹೃದಯ[2].

### ತೀವ್ರತ್ವಾದಿ ವರ್ಣಧರ್ಮಗಳು ವರ್ಣಗಳ ಭೇದಕಗಮಕಗಳಾಗಲಾರವು

**ನನು ವರ್ಣೇಷ್ವಪಿ ತೀವ್ರತ್ವ-ಮಂದ್ರತ್ವಾದಿವಿರುದ್ಧಧರ್ಮಾಧ್ಯಾಸೇನ ಭೇದಾನುಮಾನಂ ಪ್ರತ್ಯಭಿಜ್ಞಾಬಾಧಕಂ ವಿದ್ಯತೇ । ವಿರುದ್ಧಧರ್ಮಾಧಿ-**

---

1. ಪ್ರತ್ಯಭಿಜ್ಞೆಯು ಸಾದೃಶ್ಯವನ್ನು ತಿಳಿಸುತ್ತದೆ , ಆದುದರಿಂದ ವರ್ಣಾನಿತ್ಯತ್ವದಲ್ಲಿ ಈ ಪ್ರತ್ಯಭಿಜ್ಞೆಯು ಸಾವಕಾಶಪ್ರಮಾಣ ಎಂದು ವಾದಿಸಲು ಅವಕಾಶವಿದೆ ಎಂದು ಭಾವ.
2. 'ಸೋऽಯಂ ದೇವದತ್ತಃ' ಎನ್ನುವ ಪ್ರತ್ಯಭಿಜ್ಞೆಯೂ ಭ್ರಾಂತಿಯಾದೀತು ಎಂದು ಭಾವ.

ಕರಣಾನಾಮಪ್ಯಭೇದೇ ಕುತ್ರಾಪಿ ಭೇದಾಭಾವ ಪ್ರಸಙ್ಗೇನ ನಿರವಕಾಶಮನುಮಾನಂ ಪ್ರತ್ಯಭಿಜ್ಞಾಪ್ರತ್ಯಕ್ಷಮಪಿ ಬಾಧಿತುಂ ಕ್ಷಮತ ಏವೇತಿ ಚೇತ್? ಕಿಂ ಯಾದೃಶತಾದೃಶೋ ವಿರುದ್ಧಧರ್ಮಾಧ್ಯಾಸೋ ಭಾವಭೇದಹೇತುರಙ್ಗೀಕ್ರಿಯತೇ ಉತ ವಿಶಿಷ್ಟಃ ? ಆದ್ಯೇಽತಿಪ್ರಸಙ್ಗಮಾಹ **'ಸೋಽಯಂ'** ಇತಿ । ತಥಾತ್ವೇ ದೇವದತ್ತಾದೇರಪಿ ಶಿಖೀ ಮುಂಡೀ ಜಟೀ ಇತಿ ವಿರುದ್ಧಧರ್ಮಾಧ್ಯಾಸೇನ ಭೇದಪ್ರಾಪ್ತೇಃ 'ಸೋಽಯಂ ದೇವದತ್ತ' ಇತ್ಯಾದೇರಪಿ ಪ್ರತ್ಯಭಿಜ್ಞಾಯಾ ಭ್ರಾನ್ತಿತ್ವಪ್ರಾಪ್ತೇಃ । 'ಯತ್ರ ದೇಶಕಾಲಪುರುಷಾವಸ್ಥಾದಿಭೇದಸ್ಯ ವ್ಯವಸ್ಥಾಪಕಸ್ಯಾಭಾವಃ ತತ್ರೈವ ವಿರುದ್ಧಧರ್ಮಾಧ್ಯಾಸೋ ಭೇದಹೇತುಃ' ಇತಿ ದ್ವಿತೀಯ ಏವ ಪಕ್ಷೋಽಙ್ಗೀಕರಣೀಯಃ, ಯಥಾ ಜೀವೇಶ್ವರಯೋಃ ಸರ್ವಜ್ಞತ್ವಾಲ್ಪಜ್ಞತ್ವಾ-ದಿರೂಪಃ । ನ ಚ ತಥಾವಿಧೋ ವಿರುದ್ಧದರ್ಮಾಧ್ಯಾಸೋ ವರ್ಣೇಷ್ವಸ್ತಿ । ಏಕಸ್ಯೈವ ವರ್ಣಸ್ಯ ಕಾಲಭೇದೇನೋಚ್ಚಾರಯಿತೃಪುರುಷಭೇದೇನ ನಾಸಿಕಾದಿಸ್ಥಾನಭೇದೇನ ವಿರುದ್ಧಧರ್ಮಾಧ್ಯಾಸೋಪಪತ್ತೇಃ । 'ಕೇನಾಪಿ ಪ್ರಮಾಣೇನ[1] ಜ್ಞಾನದ್ವಯಪ್ರಾಮಾಣ್ಯಾನುಪಪತ್ತೌ ಖಲ್ವನ್ಯತರಸ್ಯಾ-ಪ್ರಾಮಾಣ್ಯಮಙ್ಗೀಕರ್ತವ್ಯಮ್' ಇತ್ಯಾಶಯಃ ।

ಅನು.- ಆದರೆ, ವರ್ಣಗಳಲ್ಲೂ ಸಹ ತೀವ್ರತ್ವ , ಮಂದ್ರತ್ವ ಮೊದಲಾದ ವಿರುದ್ಧದರ್ಮಗಳು ಕಂಡಿರುವುದರಿಂದ (ಪೂರ್ವದ ಮತ್ತು ಈಗಿನ ಗಕಾರಾದಿ ವರ್ಣಗಳಲ್ಲಿ) ಭೇದಾನುಮಾನವು ('ವಿಮತಾಃ ಗಕಾರಾಃ ವಿಭಿನ್ನಾಃ ವಿರುದ್ಧಧರ್ಮಾಧಿಕರಣತ್ವಾತ್' ಎನ್ನುವ ಅನುಮಾನವು) ಪ್ರತ್ಯಭಿಜ್ಞೆಗೆ ('ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಗೆ) ಬಾಧಕವಾಗಿದೆ. ವಿರುದ್ಧಧರ್ಮಾಧಿಕರಣಗಳಲ್ಲಿ (ವರ್ಣಗಳಲ್ಲಿ) ಅಭೇದವನ್ನೇ (ಒಪ್ಪವುದಾದಲ್ಲಿ) ಮತ್ತೆಲ್ಲಿಯೂ ಭೇದವೂ ಇಲ್ಲದ ಪ್ರಸಂಗವಿರುವುದರಿಂದ ಅನುಮಾನವು (ವರ್ಣಗಳು ವಿರುದ್ಧ ಧರ್ಮಗಳಿಗೆ ಅಧಿಕರಣಗಳಾದುದರಿಂದ ಅಭಿನ್ನಗಳಲ್ಲ ಎನ್ನುವ ಅನುಮಾನವು) ನಿರವಕಾಶವಾದುದರಿಂದ

1. 'ಪ್ರಕಾರೇಣ' ಇತಿ ಶ್ರೀನಿವಾಸತೀರ್ಥೀಯಸಮ್ಮತೋ ಪಾಠಃ ।

ಪ್ರತ್ಯಭಿಜ್ಞೆಯನ್ನು ಬಾಧಿಸಲು ಸಮರ್ಥವೇ ಆಗಿದೆ[1], ಎಂದಲ್ಲಿ 'ವಿರುದ್ಧ ಧರ್ಮಾಧ್ಯಾಸವು ಪದಾರ್ಥಗಳಲ್ಲಿ ಭೇದಸಾಧಕ' ಎಂದು ಎಲ್ಲ ವಿರುದ್ಧಧರ್ಮಗಳಿಗೆ ಒಪ್ಪಲಾಗುವುದೋ ಅಥವಾ ವಿಶಿಷ್ಟವಾದ ಧರ್ಮಗಳಿಗೆ ಮಾತ್ರವೋ? ಮೊದಲಪಕ್ಷದಲ್ಲಿ ಅತಿಪ್ರಸಂಗವನ್ನು ಹೇಳುತ್ತಾರೆ **'ಸೋಽಯಮ್'** ಎಂದು. ಹಾಗಾದಲ್ಲಿ (ಯಾವುದಾದರೂ ವಿರುದ್ಧಧರ್ಮ ಗಳಿಗೆ ಭೇದಸಾಧಕತ್ವವನ್ನು ಒಪ್ಪುವುದಾದಲ್ಲಿ ) ದೇವದತ್ತಾದಿಗಳೂ ಸಹ, ಜುಟ್ಟನ್ನು ಹೊಂದಿದಾಗ, ತಲೆಯನ್ನು ಬೋಳಿಸಿದಾಗ ಜಟಾಧಾರಿಯಾದಾಗ ವಿರುದ್ಧಧರ್ಮಗಳನ್ನು ಹೊಂದಿರುವುದರಿಂದ ಭೇದವು ಪ್ರಾಪ್ತವಾಗುವದರಿಂದ 'ಸೋಽಯಂ ದೇವದತ್ತಃ' ಇದೇ ಮೊದಲಾದ ಪ್ರತ್ಯಭಿಜ್ಞೆಯೂ ಸಹ ಭ್ರಾಂತಿ ಎಂದಾಗಬೇಕಾದೀತು. 'ಎಲ್ಲಿ ದೇಶ, ಕಾಲ, ಪುರುಷ, ಅವಸ್ಥೆ ಮುಂತಾದ ಭೇದದ ವ್ಯವಸ್ಥಾಪಕಗಳು ಇಲ್ಲವೋ ಅಲ್ಲಿ ಮಾತ್ರ ವಿರುದ್ಧಧರ್ಮದ ಅಧ್ಯಾಸವು (ವಿಶಿಷ್ಟಧರ್ಮಾಧ್ಯಾಸವು) ಭೇದಕ್ಕೆ ಸಾಧಕವಾಗಿದೆ' ಎಂದು ಎರಡನೆಯ ಪಕ್ಷವನ್ನೇ ಒಪ್ಪಬೇಕು[2]. ಹೇಗೆ ಜೀವೇಶ್ವರರಲ್ಲಿ 'ಸರ್ವಜ್ಞತ್ವ' 'ಅಲ್ಪಜ್ಞತ್ವ' ಮುಂತಾದವುಗಳು[3]. ಪ್ರಕೃತದಲ್ಲಿ ಅಂತಹ ವಿರುದ್ಧ

1. 'ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಯು ಸಾಕ್ಷಿಪ್ರತ್ಯಕ್ಷಜನ್ಯವಾದದು 'ಪೂರ್ವೋತ್ತರಗಕಾರೌ ಭಿನ್ನೌ ತಾರತ್ವಮಂದ್ರತ್ವರೂಪವಿರುದ್ಧಧರ್ಮಾದಿಕರಣತ್ವಾತ್' ಎಂಬುದು ಅನುಮಾನ. ಅಭೇದಸಾಧಕಪ್ರತ್ಯಕ್ಷವು, ಭೇದಸಾಧಕವಾದ ಅನುಮಾನಕ್ಕಿಂತಲೂ ಪ್ರಬಲವಾದುದರಿಂದ, ಅನುಮಾನವು ಪ್ರತ್ಯಕ್ಷವನ್ನು ಬಾಧಿಸಲಾರದು ಎನ್ನುವಂತಿಲ್ಲ. ವಸ್ತುತಃ ಅನುಮಾನವು ಪ್ರತ್ಯಕ್ಷಕ್ಕಿಂತ ಸ್ವಭಾವತಃ ದುರ್ಬಲವೇ ಆಗಿದ್ದರೂ, ಅನುಮಾನವು ಪ್ರಕೃತದಲ್ಲಿ ನಿರವಕಾಶವಾದದ್ದು, ಪ್ರತ್ಯಭಿಜ್ಞೆಯು ಸಾವಕಾಶವಾದದ್ದು. ಸಾವಕಾಶನಿರವಕಾಶಗಳಲ್ಲಿ ನಿರವಕಾಶವೇ ಪ್ರಬಲ, ಆದುದರಿಂದ ಅನುಮಾನವು ಪ್ರತ್ಯಭಿಜ್ಞೆಯನ್ನು ಬಾಧಿಸುತ್ತದೆ ಎಂದು ಭಾವ.

2. ಒಬ್ಬನೇ ದೇವದತ್ತನು ಒಂದು ಕಾಲದಲ್ಲಿ ತಲೆಯ ತುಂಬಾ ಕೂದಲನ್ನು ಬೆಳೆಸಿಕೊಂಡು ಜಟಾಧಾರಿಯಾಗಬಹುದು. ಮತ್ತೆ ಕೆಲಸಂದರ್ಭದಲ್ಲಿ ತಲೆಯನ್ನು ಬೋಳಿಸಿಕೊಂಡು ಇರಬಹುದು. ಕಾಲದಿಂದ ವಿರುದ್ಧಧರ್ಮವನ್ನು ಓರ್ವವ್ಯಕ್ತಿಯಲ್ಲೇ ಸಂಯೋಜಿಸಬಹುದು. ಹಾಗೆಯೇ ಓರ್ವವ್ಯಕ್ತಿ ಒಬ್ಬನಿಗೆ ತಂದೆ, ಮತ್ತೊಬ್ಬನಿಗೆ ಮಗನೂ ಆಗಬಹುದು ಇಂತಹ ಧರ್ಮಗಳು ಭೇದ ಸಾಧಕಗಳಲ್ಲ ಎಂದು ಭಾವ.

3. ಜೀವನಲ್ಲಿ ಸರ್ವಜ್ಞತ್ವವನ್ನು ಯಾವದೇಶಕಾಲಗಳ ವ್ಯವಸ್ಥೆಯಿಂದಲೂ ಹೊಂದಿಸಲಾಗದು. ಹಾಗೆಯೇ ಈಶ್ವರನಲ್ಲಿ ಅಲ್ಪಜ್ಞತ್ವವನ್ನು ಹೊಂದಿಸಲಾಗದು. ಇಂತಹ ಧರ್ಮಗಳು ಪದಾರ್ಥದಲ್ಲಿ ಭೇದವನ್ನು ಸಾಧಿಸುವವು ಎಂದು ಭಾವ.

ಧರ್ಮಾಧ್ಯಾಸವು ವರ್ಣಗಳಲ್ಲಿ ಇಲ್ಲ. ಒಂದೇ ವರ್ಣವು ಕಾಲಭೇದದಿಂದ, ಉಚ್ಚರಿಸುವ ವ್ಯಕ್ತಿಯ ಭೇದದಿಂದ, ಉಚ್ಚರಿಸುವ ವ್ಯಕ್ತಿಯ ನಾಸಿಕಾದಿಸ್ಥಾನದ ಭೇದದಿಂದ (ಮಂದ್ರತ್ವ ತೀವ್ರತ್ವ ರೂಪವಾದ) ವಿರುದ್ಧಧರ್ಮಾಧ್ಯಾಸವನ್ನು ಹೊಂದುವುದರಿಂದ. (ವಿರುದ್ಧವಾದ) ಎರಡು ಜ್ಞಾನಗಳಿಗೆ ಯಾವುದೇ ಪ್ರಮಾಣಗಳಿಂದ (ಪ್ರಕಾರದಿಂದ) ಪ್ರಾಮಾಣ್ಯವನ್ನು ಹೊಂದಿಸಲು ಆಗದ ಪಕ್ಷದಲ್ಲಿ ಯಾವುದಾದರೂ ಒಂದಕ್ಕೆ (ಒಂದು ಜ್ಞಾನಕ್ಕೆ) ಅಪ್ರಾಮಾಣ್ಯವನ್ನು ಒಪ್ಪಬೇಕಾದೀತು ಎಂದು ಅಭಿಮತ[1].

#### ವೈಶೇಷಿಕರೂ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಸಾಧಿಸಲಾರರು

**ನನು ವೈಶೇಷಿಕಾದಯೋ ದೇವದತ್ತಾದೇರಪಿ ಪಾರ್ಥಿವದ್ರವ್ಯಸ್ಯ ಪಾಕೇನ ಪ್ರತಿಕ್ಷಣಮುತ್ಪತ್ತಿವಿನಾಶೌ ಅಙ್ಗೀಕುರ್ವಾಣಾಃ 'ಸೋಽಯಂ.... ' ಇತಿ ಪ್ರತ್ಯಭಿಜ್ಞಾಯಾ ಭ್ರಾಂತಿತ್ವಮಙ್ಗೀಕುರ್ವನ್ತ ಏವ, ತತ್ ಕಥಮಿದಮಾಪಾದನಮ್? ಇತಿ ಚೇತ್। ಸತ್ಯಮ್, ತಥಾಽಪಿ ಪಾರ್ಥಿವಪರಮಾಣುಷು ರೂಪಾದಿಪರಿವರ್ತನೇನಾಕಾಶಾದಿಷು ಚ ಶಬ್ದಾದಿಭಾವಾಭಾವೇನ, ಪ್ರಾಪ್ತಸ್ಯ ಅತಿಪ್ರಸಙ್ಗಸ್ಯ ಕಃ ಪ್ರತೀಕಾರಃ ? ಏತದೇವ ವಿಶದಯಿತುಂ 'ಇತ್ಯಾದೇಃ' ಇತಿ 'ಆದಿ' ಗ್ರಹಣಂ ಕೃತಮ್ ।**

ಆದರೆ, ವೈಶೇಷಿಕಾದಿಗಳು ದೇವದತ್ತ ಮೊದಲಾದವರ ಪಾರ್ಥಿವ-ದ್ರವ್ಯಗಳಿಗೂ ಸಹ (ಅವರ ಶರೀರಗಳಿಗೆ) ಪಾಕದಿಂದ ಪ್ರತಿಕ್ಷಣದಲ್ಲೂ ಉತ್ಪತ್ತಿನಾಶಗಳನ್ನು ಒಪ್ಪಿರುವರು, (ಆದುದರಿಂದ)'ಸೋಽಯಂ....' ಎನ್ನುವ

---

1. 'ಬೆಟ್ಟದಲ್ಲಿ ಬೆಂಕಿಯು ಇದೆ' 'ಬೆಟ್ಟದಲ್ಲಿ ಬೆಂಕಿಯು ಇಲ್ಲ' ಎಂದು ಹೇಳಿಕೆಗಳಿವೆ. ಇವು ವಸ್ತುತಃ ಪರಸ್ಪರ ವಿರುದ್ಧವಾದುದೇ ಆದರೂ ಇವೆರಡೂ ಅಪ್ರಾಮಾಣಿಕವೇ ಆಗಬೇಕೆಂದಿಲ್ಲ. ಬೆಟ್ಟದಲ್ಲಿ ಒಣಕಟ್ಟಿಗೆ ಇರುವಲ್ಲಿ ಬೆಂಕಿಯು ಇದೆ, ನೀರಿನ ಝರಿಯು ಇರುವಲ್ಲಿ ಬೆಂಕಿಯು ಇಲ್ಲ, ಎಂದು ದೇಶಭೇದದಿಂದಲೇ ಎರಡೂ ಹೇಳಿಕೆಗಳನ್ನು ಸತ್ಯವೆಂದು ಸಾಧಿಸಲು ಶಕ್ಯವಿದೆ. ಈ ತರಹದ ಅವಕಾಶವಿಲ್ಲದ ಸಂದರ್ಭದಲ್ಲಿ ಮಾತ್ರ ಒಂದು ಅರಿವಿಗೆ ಅಪ್ರಾಮಾಣ್ಯವನ್ನು ಕಲ್ಪಿಸಲಾಗುವುದು. ಪ್ರಕೃತ ಗಕಾರಾದಿ ವರ್ಣಗಳಲ್ಲಿ ತೋರುವ ಸಾಂದ್ರತ್ವಾದಿ ವಿರುದ್ಧ ಧರ್ಮಗಳನ್ನು ಒಂದೇ ವರ್ಣದಲ್ಲಿ ವಕ್ತೃಭೇದದಿಂದ ಹೊಂದಿಸಬಹುದು. ಆದುದರಿಂದ 'ಗಕಾರೌ ಭಿನ್ನೌ ವಿರುದ್ಧಧರ್ಮಾಧ್ಯಾಸಾತ್' ಎಂಬ ಅನುಮಾನದಿಂದ 'ಸೋಽಯಂಗಕಾರಃ' ಎನ್ನುವ ಪ್ರತ್ಯಭಿಜ್ಞೆಗೆ ಅಪ್ರಾಮಾಣ್ಯವನ್ನು ಸಾಧಿಸಲು ಆಗದು ಎಂದು ಭಾವ.

ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನೇ ಒಪ್ಪಿರುವವರು. ಆದುದರಿಂದ ಹೇಗೆ ತಾನೇ (ಅವರನ್ನು ಉದ್ದೇಶಿಸಿ) ಈ ಆಪಾದನೆಯನ್ನು ಮಾಡಲಾಗುವುದು[1]? ಸರಿಯೇ, ಆದರೂ ರೂಪಾದಿಗಳ ಪರಿವರ್ತನೆಯಿಂದ ಪಾರ್ಥಿವ ಪರಮಾಣುಗಳಲ್ಲಿ, ಶಬ್ದಾದಿಗಳ ಭಾವಾಭಾವದಿಂದ ಆಕಾಶಾದಿಗಳಲ್ಲಿ ಪ್ರಾಪ್ತವಾದ ಅತಿಪ್ರಸಂಗಕ್ಕೆ ಏನು ಪ್ರತೀಕಾರ ? ಇದನ್ನೇ ಸೂಚಿಸಲು 'ಇತ್ಯಾದೇಃ' ಎಂದು (ಮೂಲದಲ್ಲಿ) ಆದಿ ಶಬ್ದವನ್ನು ಪರಿಗ್ರಹಿಸಿರುವರು[2].

---

1. ವೈಶೇಷಿಕರ ಶಾಸ್ತ್ರದಲ್ಲಿ ಪಾರ್ಥಿವ ಪದಾರ್ಥಗಳನ್ನು ಕ್ಷಣಿಕ ಎಂದೇ ಅಭಿಮತಿಸಲಾಗಿದೆ. ಬಿಸಿಲು, ಗಾಳಿ, ಮಳೆಗಳಿಂದ ನಿರಂತರವಾಗಿ ಪಾರ್ಥಿವಪದಾರ್ಥಗಳಿಗೆ ಪರಮಾಣುವಿನ ಸಂಯೋಗ-ವಿಯೋಗಗಳು ಆಗುತ್ತಲೇ ಇರುತ್ತವೆ. ಪರಮಾಣುವಿನ ಸಂಯೋಗವಾಯಿತು ಎಂದರೆ ಹೊಸ ಪದಾರ್ಥವು ಉತ್ಪನ್ನವಾಯಿತು. ಪರಮಾಣುವಿನ ವಿಯೋಗವಾಯಿತು ಎಂದರೆ ಪದಾರ್ಥವು ನಾಶವಾಯಿತು ಎಂದೇ ಅವರ ನಂಬಿಗೆ. ಹಾಗಾಗಿ ಒಂದು ಪದಾರ್ಥಕ್ಕೆ ಪರಮಾಣುವಿನ ಸಂಯೋಗವಾಗಲಿ, ವಿಯೋಗವಾಗಲಿ ಆದರೆ, ಆಗ ಆ ಪದಾರ್ಥವು ಪರಮಾಣುಪರ್ಯಂತ ನಷ್ಟವಾಗಿ ಮನುಷ್ಯರ ಅದೃಷ್ಟದಿಂದ ಪುನಃ ಹೊಸದಾಗಿ ರೂಪುಗೊಳ್ಳುತ್ತದೆ ಎಂದು. ಆದುದರಿಂದ ಎಲ್ಲ ಪಾರ್ಥಿವಪದಾರ್ಥಗಳನ್ನು ಕ್ಷಣಿಕ ಎಂದೇ ಅಭಿಮತಿಸಿರುತ್ತಾರೆ. ಪ್ರಕೃತ 'ಸೋಽಯಂ ದೇವದತ್ತಃ' ಎನ್ನುವ ಪ್ರತ್ಯಭಿಜ್ಞೆಯೂ ಭ್ರಾಂತಿ ಎಂದೇ ಒಪ್ಪುವರು. ಹಾಗಾಗಿ ವರ್ಣನಿತ್ಯತ್ವಕ್ಕೆ ಸಾಧಕವಾಗಿ ಹೇಗೆ ಈ ಆಪಾದನೆಯನ್ನು ವೈಶೇಷಿಕರನ್ನು ಉದ್ದೇಶಿಸಿ ಹೇಳಲಾಗದು ?

2. ವೈಶೇಷಿಕರು ಪಾರ್ಥಿವ ಪದಾರ್ಥಗಳಿಗೆ ಅನಿತ್ಯತ್ವವನ್ನು ಒಪ್ಪಿದ್ದರೂ ಪಾರ್ಥಿವಪರಮಾಣು ಮತ್ತು ಆಕಾಶಾದಿಗಳಿಗೆ ನಿತ್ಯತ್ವವನ್ನು ಒಪ್ಪಿದ್ದಾರೆ. ಪಾರ್ಥಿವ ಪರಮಾಣುವಿನಲ್ಲಿನ ರೂಪವು, ಮಳೆ ಗಾಳಿ ಬಿಸಿಲು ಮೊದಲಾದ ಪಾಕಗಳಿಂದ ಬದಲಾಗುವುದು. ರೂಪವು ಬದಲಾದ ನಿಮಿತ್ತ ಪರಮಾಣುವನ್ನು ಅನಿತ್ಯ ಎನ್ನಲು ಸಾಧ್ಯವೇ ? ಹಾಗೆಯೇ ಶಬ್ದವು ಆಕಾಶದ ಗುಣ. ಕೆಲವು ಬಾರಿ ಆಕಾಶದಲ್ಲಿ ಶಬ್ದವು ತೋರುತ್ತದೆ, ಮತ್ತೆ ಕೆಲವು ಬಾರಿ ತೋರುವುದಿಲ್ಲ. ಈ ಶಬ್ದದ ಭಾವಾಭಾವಗಳಿಂದ ಆಕಾಶವನ್ನು ಅನಿತ್ಯ ಎಂದು ಹೇಳಲು ಸಾಧ್ಯವೇ ? ಸಾಮಾನ್ಯವಾದ ವಿರುದ್ಧಧರ್ಮಾಧ್ಯಾಸದಿಂದ ಹೇಗೆ ಪರಮಾಣು-ಆಕಾಶಗಳಲ್ಲಿ ಅನಿತ್ಯತ್ವವನ್ನು ಸಾಧಿಸಲು ಶಕ್ಯವಿಲ್ಲವೋ ಹಾಗೆಯೇ ಪ್ರಕೃತದಲ್ಲಿ ಗಕಾರಾದಿಗಳಲ್ಲಿ ತೋರುವ ತೀವ್ರತ್ವ ಮಂದ್ರತ್ವ ಮುಂತಾದ ಸಾಮಾನ್ಯಗುಣಗಳಿಂದ ಗಕಾರಾದಿಗಳನ್ನು ಅನಿತ್ಯ ಎಂದು ಸಾಧಿಸಲಾಗದು. ಪ್ರಕೃತದಲ್ಲಿ ಭೇದಸಾಧಕವಾದ ಅಂತಹ ವಿಶೇಷಧರ್ಮಗಳು ವರ್ಣಗಳಲ್ಲಿ ಇಲ್ಲ. ಆಕಾಶ ಮತ್ತು ಪರಮಾಣು ಮುಂತಾದ ಪದಾರ್ಥಗಳ ದೃಷ್ಟಾಂತದಿಂದ ವೈಶೇಷಿಕರನ್ನೂ ಒಪ್ಪಿಸಲಾಗುವುದು. ಈ ಸಂಗತಿಯನ್ನು ಆಚಾರ್ಯರು 'ಸೋಽಯಂ ದೇವದತ್ತಃ, ಇತ್ಯಾದೇಃ' ಎನ್ನುವಲ್ಲಿನ 'ಆದಿ' ಪದದಿಂದ ಸೂಚಿಸಿರುವರು ಎಂದು ಭಾವ.

**ಕಿಂಚ ಪಾಕೇನ ದೇವದತ್ತಾದೇರಪ್ಯಾಪರಮಾಣುವಿನಾಶೇ, ಪುನರ್ದ್ವ್ಯಣುಕಾದಿಕ್ರಮೇಣೋತ್ಪಾದಾಙ್ಗೀಕಾರೇಣ ಪ್ರತ್ಯಭಿಜ್ಞಾಭ್ರಾನ್ತಿತ್ವಾಭ್ಯುಪಗಮಃ ಅನುಪಪನ್ನ ಏವ । ತಥಾಸತಿ ಸೌಗತ್ಯೈಃ ಸಹ ವಿವಾದಾಭಾವಪ್ರಸಙ್ಗಾತ್ । ಪಾರ್ಥಿವಂ ಹಿ ಸರ್ವಂ ದ್ರವ್ಯಂ ದೇವದತ್ತಸಮಾನಮ್ । ಆಪ್ಯ-ತೈಜಸ- ವಾಯವೀಯಾನಾಂ ಚ ವಾಯೂಪಘಾತಾದಿ ಮಾತ್ರೇಣಾವಯವಾಪಗಮೋಽಸ್ತ್ಯೇವ । ಆಕಾಶಸ್ಯ ಸ್ಥಾಯಿತ್ವಂ ತೈರಂಪ್ಯಙ್ಗೀಕೃತಮೇವ । ಆತ್ಮಾ ತು ಸ್ವರೂಪತ ಏವ ನಾಙ್ಗೀಕೃತಃ ।**

ಮತ್ತೂ ಸಹ ಪಾಕದಿಂದ ದೇವದತ್ತಾದಿಗಳಿಗೆ (ಅವರ ಶರೀರಕ್ಕೆ) ಪರಮಾಣು ಪರ್ಯಂತ ನಾಶ, ಮತ್ತೆ ದ್ವ್ಯಣುಕಾದಿ ಸಂಯೋಗದಿಂದ ಉತ್ಪತ್ತಿಯನ್ನು ಒಪ್ಪುವುದರಿಂದ (ಸೋಽಯಂ ದೇವದತ್ತಃ ಎನ್ನುವ ) ಪ್ರತ್ಯಭಿಜ್ಞೆಗೆ ಭ್ರಾಂತಿಯನ್ನು ಒಪ್ಪುವುದು (ವೈಶೇಷಿಕರಿಗೆ) ಅನುಪಪನ್ನವಾಗಿದೆ. ಹಾಗಾದಲ್ಲಿ (ಪ್ರತ್ಯಭಿಜ್ಞೆಗೆ ಭ್ರಾಂತಿಯನ್ನು ಒಪ್ಪುವದಾದಲ್ಲಿ ವೈಶೇಷಿಕರಿಗೆ) ಬೌದ್ಧರೊಡನೆ ವಿವಾದವೇ ಇಲ್ಲದೇ ಹೋಗಬೇಕಾದೀತು. ಎಲ್ಲ ಪಾರ್ಥಿವದ್ರವ್ಯಗಳು ದೇವತ್ತನಿಗೆ (ಶರೀರಕ್ಕೆ) ಸಮಾನ[1]. ಜಲೀಯ, ತೈಜಸ, ವಾಯವೀಯ, ಪರಮಾಣುಗಳಲ್ಲೂ ಸಹ ವಾಯುವಿನ ಘರ್ಷಣೆಯ ಮಾತ್ರದಿಂದಲೇ ಅವಯವಗಳ ಸಂಯೋಗ ವಿಯೋಗಗಳು ಉಂಟು[2]. ಆಕಾಶಕ್ಕೆ ಸ್ಥಾಯಿತ್ವವನ್ನು

---

1. ದೇವದತ್ತನ ಶರೀರವು ಪಾಕದಿಂದ ನಿತ್ಯ ಉತ್ಪತ್ತಿ-ನಾಶವನ್ನು ಹೊಂದುವುದು ಎಂದು ಒಪ್ಪಿದಲ್ಲಿ ಸಕಲ ಪಾರ್ಥಿವ ಪದಾರ್ಥಕ್ಕೂ ಆ ರೀತಿಯ ಉತ್ಪತ್ತಿ ನಾಶಗಳನ್ನು ಒಪ್ಪಬೇಕು. ಆಗ ಸಕಲ ಪಾರ್ಥಿವ ಪದಾರ್ಥಗಳು ಕ್ಷಣಿಕ ಎಂದು ಒಪ್ಪಿದಂತಾಗಿ ಬೌದ್ಧರಿಗೂ ನಿಮಗೂ ವಿವಾದವಿಲ್ಲ. ನೀವೂ ಬೌದ್ಧರಂತೆ 'ಸರ್ವಂ ಕ್ಷಣಿಕಮ್' ಎನ್ನುವದನ್ನು ಒಪ್ಪಿದಂತಾಗುವುದು ಎಂದು ಭಾವ.

2. ಪಾರ್ಥಿವ ಪದಾರ್ಥಗಳು ಸ್ಥಾಯಿಯಾಗದಿದ್ದರೂ ಜಲೀಯ-ವಾಯವೀಯಾದಿ ಪರಮಾಣುಗಳು ನಿತ್ಯ ಎಂದು ಒಪ್ಪಿರುವುದರಿಂದ ಬೌದ್ಧರಿಗೂ ವೈಶೇಷಿಕರಿಗೂ ಭಿನ್ನ ಪ್ರತಿಪಾದನೆಗಳು ಇವೆ, ಆದುದರಿಂದ ಬೌದ್ಧರ ಸಾಮ್ಯ ಇಲ್ಲ ಎಂದು ಹೇಳಲಾಗದು. ಅವುಗಳಲ್ಲಿಯೂ ಸಹ ಪರಮಾಣುವಿನ ಸಂಯೋಗ-ವಿಯೋಗಗಳು ಇವೆ. ಆದುದರಿಂದ ಅವೂ ಸಹ ಅನಿತ್ಯಗಳೇ ಆಗುತ್ತವೆ ಎಂದು ಭಾವ.

ಅವರೂ (ಬೌದ್ಧರೂ) ಒಪ್ಪಿರುತ್ತಾರೆ. ಆತ್ಮವನ್ನಾದರೋ ಸ್ವರೂಪತಃ. (ಅವರು) ಒಪ್ಪಿರುವದೇ ಇಲ್ಲ[1].

**ತಥಾ ಕರ್ಮ-ಸಾಮಾನ್ಯ-ವಿಶೇಷ-ಸಮವಾಯಾ ಗುಣಾಶ್ಚ ದ್ರವ್ಯಾತಿರಿಕ್ತಾ ನ ಸಂತ್ಯೇವ । ಕೇವಲಂ ಪರಮಾಣುಷು ವಿವಾದೋ ಅವಶಿಷ್ಯತೇ । ತೇಷಾಂ ಚಾತೀಂದ್ರಿಯತ್ವೇನಾಸ್ಮತ್ಪ್ರತ್ಯಭಿಜ್ಞಾऽಗೋಚರತ್ವೇನ ಸ್ಥಾಯಿತ್ವಸಾಧನೋಪಾಯಾಭಾವಃ । ನಿಬಿಡಾವಯವಂ ಸ್ಫಟಿಕಾದಿಕಂ ವಿವಾದಪದಮ್? ಇತಿ ಚೇನ್ನ । ತಸ್ಯಾಪಿ ಪ್ರಬಲವಾತಾತಪಾದ್ಯಭಿಘಾತೇನಾವಯವಾಪಗಮಸ್ಯಾವರ್ಜನೀಯತ್ವಾತ್ । 'ಪೂರ್ವಾಪರಕಾಲ-ವಿಕಲಕಾಲವರ್ತಿತ್ವಂ ಕ್ಷಣಿಕತ್ವಂ' ಬೌದ್ಧೈರಙ್ಗೀಕೃತಮ್, ವೈಶೇಷಾಕಾದಿಭಿಸ್ತ್ವಾಶುತರವಿನಾಶಿತ್ವಮ್? ಇತಿ ಚೇತ್ । ಸತ್ಯಮ್, ಅಯನ್ತು ವಿವಾದೋ ನ ಪ್ರತ್ಯಭಿಜ್ಞಾಮಾತ್ರೇಣ ನಿರಸನೀಯಃ ।**

ಹಾಗೆಯೇ ಕರ್ಮ, ಸಾಮಾನ್ಯ , ವಿಶೇಷ, ಸಮವಾಯ ಮತ್ತು ಗುಣ ಇವು ದ್ರವ್ಯಕ್ಕಿಂತಲೂ ಭಿನ್ನವಾಗಿಲ್ಲ[2]. ಕೇವಲ ಪರಮಾಣುವಿನಲ್ಲಿ ಮಾತ್ರ ವಿವಾದವು ಉಳಿಯುವುದು. ಅವುಗಳಾದರೋ ಇಂದ್ರಿಯಾಗೋಚರವಾದುದರಿಂದ ನಮ್ಮ ಪ್ರತ್ಯಭಿಜ್ಞೆಗೆ (ಪರಮಾಣುವಿನ ಸ್ಥಾಯಿತ್ವವು)ಗೋಚರವಾಗದೇ ಇರುವುದರಿಂದ

1. ಆತ್ಮನ ವಿಚಾರದಿಂದಲೂ ಇವರೀರ್ವರಲ್ಲಿ ವಿವಾದವಿದೆ ಎಂದು ಹೇಳಲಾಗದು. ಬೌದ್ಧರು ಆತ್ಮವನ್ನು ಪೃಥಕ್ ಪದಾರ್ಥ ಎಂದು ಒಪ್ಪಿರುವುದಿಲ್ಲ. ಜ್ಞಾನ ಸುಖ ದುಃಖ ಸಂಸ್ಕಾರಗಳಿಗೆ ಆಶ್ರಯವಾದ ಆಲಯಜ್ಞಾನವೇ ಜೀವ ಎಂದು ಅಭಿಮತಿಸಿರುತ್ತಾರೆ ಎಂದು ಭಾವ.

2. ವೈಶೇಷಿಕರಮತದಲ್ಲಿ ದ್ರವ್ಯ , ಗುಣ, ಕರ್ಮ, ಸಾಮಾನ್ಯ, ವಿಶೇಷ ಸಮವಾಯ ಅಭಾವ ಎಂದು ಏಳು ಪದಾರ್ಥಗಳನ್ನು ಒಪ್ಪಿರುತ್ತಾರೆ. ಇವುಗಳಲ್ಲಿ ದ್ರವ್ಯದ ಹೊರತಾಗಿ ಉಳಿದ ಪದಾರ್ಥಗಳನ್ನು ವೈಶೇಷಿಕರು ದ್ರವ್ಯದಂತೆ ಕ್ಷಣಿಕ ಎಂದು ಒಪ್ಪಿಲ್ಲ. ಸಾಮಾನ್ಯ ಸಮವಾಯ ಇವುಗಳನ್ನು ನಿತ್ಯ ಎಂದೇ ಅಭಿಮತಿಸಿರುತ್ತಾರೆ. ಹೀಗಾಗಿ ಈ ಸ್ಥಾಯಿ ವಸ್ತುವಿನ ವಿಷಯಕವಾದ ವಿವಾದವು ಇರುವುದರಿಂದ ಇವರೀರ್ವರಲ್ಲಿ ಸಾಮ್ಯವಿಲ್ಲ ಎಂದು ವಾದಿಸಲು ಶಕ್ಯವಿಲ್ಲ. ಸಾಮಾನ್ಯ ವಿಶೇಷ ಗುಣ ಮುಂತಾದವುಗಳು ದ್ರವ್ಯದಿಂದ ವ್ಯತಿರಿಕ್ತವಾಗಿರುವುದಿಲ್ಲ. ಅಂದರೆ ಘಟ, ಪಟಗಳು ಹೇಗೆ ಪೃಥಕ್ಕಾಗಿ ತೋರುವವೋ ಹಾಗೆ ಸಾಮಾನ್ಯಾದಿಗಳು ದ್ರವ್ಯದಿಂದ ಪೃಥಕ್ಕಾಗಿ ತೋರುವುದಿಲ್ಲ. ಆದುದರಿಂದ ಸಾಮಾನ್ಯಾದಿಗಳು ಆಶ್ರಯಿಸಿಕೊಂಡಿರುವ ದ್ರವ್ಯದಲ್ಲಿ ಇರದ ಸ್ಥಾಯಿತ್ವವು ಆಶ್ರಿತವಾದ ಸಾಮಾನ್ಯಾದಿಗಳಲ್ಲಿ ಇದೆ ಎಂದು ಸಾಧಿಸಲು ಶಕ್ಯವಿಲ್ಲ ಎಂದು ಭಾವ

ಸ್ಥಾಯಿತ್ವವನ್ನು ಸಾಧಿಸಲು ಉಪಾಯವಿಲ್ಲ ಎಂದು ಭಾವ[1]. ಇನ್ನು ನಿಬಿಡಾವಯವವನ್ನು ಹೊಂದಿರುವ ಸ್ಫಟಿಕ ಮುಂತಾದ ವಸ್ತುಗಳು ವಿವಾದಕ್ಕೆ ಸ್ಥಾನ ಎಂದು ಹೇಳಲು ಶಕ್ಯವಿಲ್ಲ. ಸ್ಫಟಿಕಾದಿಗಳೂ ಸಹ ಪ್ರಬಲವಾದ ಗಾಳಿ ಬಿಸಿಲುಗಳ ಆಘಾತದಿಂದ ಅವಯವಗಳ ಉಪಚಯ-ಅಪಚಯಗಳನ್ನು ಹೊಂದುವುದು ಅನಿವಾರ್ಯವಾದುದರಿಂದ[2]. 'ಹಿಂದಿನ, ಮುಂದಿನ ಎಂದು ಕಾಲದಲ್ಲಿ ವಿಭಾಗವನ್ನು ಮಾಡಲಾಗದ ಕಾಲವನ್ನು 'ಕ್ಷಣಿಕ'[3] ಎಂದು ಸೌಗತರು ಅಭಿಮತಿಸಿರುತ್ತಾರೆ. ವೈಶೇಷಿಕರಾದರೂ 'ಅತಿಬೇಗ ನಾಶವನ್ನು ಹೊಂದುವಿಕೆ' ಎಂದು ಅಭಿಮತಿಸಿದ್ದಾರೆ ಅಲ್ಲವೆ ? ಅಹುದು, ಆದರೆ ಈ ವಿವಾದವು ಕೇವಲ ಪ್ರತ್ಯಭಿಜ್ಞೆಯಿಂದ ನಿರಾಕರಿಸಲು ಆಗದು[4].

---

1. 'ತಾ ಏವ ಪರಮಾಣವಃ' ಎನ್ನುವ ಪ್ರತ್ಯಭಿಜ್ಞೆಯಲ್ಲಿ ಪರಮಾಣುಗಳಂತೆ ನಿತ್ಯತ್ವವು ತೋರುವುದು ಎಂದು ವೈಶೇಷಿಕರು ಸೌಗತರೊಡನೆ ವಾದಿಸಬೇಕು. ಆದರೆ ಪರಮಾಣುಗಳು ಅತೀಂದ್ರಿಯಗಳಾದುದರಿಂದ 'ತಾ ಏವ ಪರಮಾಣವಃ' ಎಂಬ ಪ್ರತ್ಯಭಿಜ್ಞೆಯನ್ನು ಉಲ್ಲೇಖಿಸಲು ಅವಕಾಶವಿಲ್ಲ ಎಂದು ಭಾವ.

2. ನಿಬಿಡಾವಯವಗಳಾದವುಗಳೂ ಸಹ ಪ್ರಬಲ ಗಾಳಿ, ಸೂರ್ಯ ಕಿರಣಗಳ ಆಘಾತದಿಂದ ಪರಮಾಣುವಿನ ಸಂಪರ್ಕ ಮತ್ತು ವಿಯೋಗಗಳನ್ನು ಹೊಂದುವುದರಿಂದ, ದೇವದತ್ತಾದಿಗಳ ಶರೀರದಂತೆ ಅವೂ ಸಹ ಕ್ಷಣಿಕಗಳೇ ಆಗಿವೆ. ಆದುದರಿಂದ ಸ್ಥಾಯಿ ಪದಾರ್ಥವನ್ನು ಸಾಧಿಸಲು ವೈಶೇಷಿಕರಿಗೆ ಸಾಧ್ಯವಿಲ್ಲ ಎಂದು ಭಾವ.

3. ಒಂದು ಕಾಲವಿಶೇಷದಲ್ಲಿ ಪೂರ್ವಕಾಲ ಉತ್ತರಕಾಲ ಎಂದು ಎಂದು ವಿಭಾಗವನ್ನು ಮಾಡಲು ಅವಕಾಶವಿದೆ. ಆದರೆ ಯಾವ ಅಲ್ಪಕಾಲದಲ್ಲಿ ಆಕಾಲದ ಪೂರ್ವಾಪರಗಳನ್ನು ವಿಭಜಿಸಿ ಅವಗಾಹಿಸಲು ಶಕ್ಯವಿಲ್ಲವೋ ಆ ಕಾಲವಿಶೇಷವನ್ನು ಕ್ಷಣಿಕ ಎಂದು ಬೌದ್ಧರು ವ್ಯವಹರಿಸುವರು.

4. ಬೌದ್ಧರು ಪದಾರ್ಥಗಳು ಏಕ ಕ್ಷಣ ಮಾತ್ರ ವೃತ್ತಿಗಳು ಎಂದು ಒಪ್ಪಿರುತ್ತಾರೆ. ವೈಶೇಷಿಕರು ತ್ರಿಕ್ಷಣ ವೃತ್ತಿಗಳು ಎಂದು ಒಪ್ಪಿರುತ್ತಾರೆ, ಹಾಗಾಗಿ ಪ್ರಮೇಯದಲ್ಲಿ ವಿವಾದವಿದೆ ಎಂದು ಉತ್ತರಿಸಲು ಆಗದು. 'ಸೋಽಯಂ...' ಎನ್ನುವ ಪ್ರತ್ಯಭಿಜ್ಞೆಯು ಈ ಸೂಕ್ಷ್ಮವಾದ ಕಾಲದ ವ್ಯತ್ಯಾಸವನ್ನು ಗ್ರಹಿಸಲಾರದು. ಆದುದರಿಂದ ಸೌಗತರನ್ನು ಖಂಡಿಸಲು ಪ್ರತ್ಯಭಿಜ್ಞೆಯಿಂದ ಶಕ್ಯವಿಲ್ಲ. ಆದುದರಿಂದ ವೈಶೇಷಿಕರು 'ಸೋಽಯಂ ದೇವದತ್ತಃ' ಎಂಬ ಪ್ರತ್ಯಭಿಜ್ಞೆಯು ಮಿಥ್ಯಾ ಎಂದು ವಾದಿಸುವಂತಿಲ್ಲ.

ಪುಟ 197ರಲ್ಲಿ........

**ಪ್ರತ್ಯಭಿಜ್ಞಾವಾಕ್ಯದಲ್ಲಿನ ಅವಧಾರಣದ ರಹಸ್ಯ**

ನನು, ಅಸ್ಮಾಭಿರಪಿ ದೇವದತ್ತಾದೇರಾಶುತರವಿನಾಶಿತ್ವೇನ ಭೇದೋಽಙ್ಗೀಕ್ರಿಯತ ಏವ? ಸತ್ಯಂ, ಪರಿಣಾಮವಾದೇಽಭೇದಸ್ಯಾಪಿ ವಿದ್ಯಮಾನತ್ವೇನ 'ಸೋಽಯಂ' ಇತಿ ಪ್ರತ್ಯಭಿಜ್ಞಾನಸ್ಯಾಭ್ರಾಂತಿತ್ವೋಪಪತ್ತೇಃ । ಅವಯವೋಪಚಯನಿಮಿತ್ತಕಪರಿಣಾಮಭೇದದರ್ಶನೇನ ದೇವದತ್ತಾದೌ ಪರಿಣಾಮೋಽಙ್ಗೀಕ್ರಿಯತೇ । ನಚ 'ವರ್ಣೇಷು ಪರಿಣಾಮಜ್ಞಾಪಕಂ ಕಿಮಪ್ಯಸ್ತಿ' ಇತ್ಯನ್ಯಾಭೇದಃ ಕೂಟಸ್ಥನಿತ್ಯತ್ವಂ ಚಾಭ್ಯುಪಗಮ್ಯತೇ । ಅತ ಏವಾತ್ರ 'ಸೋಽಯಮ್' ಇತಿ ನಿರವಧಾರಣಮುಕ್ತಂ, ತತ್ರ ತು 'ತದೇವೇದಮ್' ಇತಿ ಸಾವಧಾರಣಮಿತಿ । ವಿರುದ್ಧಧರ್ಮಾಧಿಕರಣತ್ವಮಾತ್ರಸ್ಯ - ಭೇದಹೇತುತ್ವಮಙ್ಗೀಕೃತ್ಯ ಪ್ರತ್ಯಭಿಜ್ಞಾಭ್ರಾನ್ತಿತ್ವಾಙ್ಗೀಕಾರೇಽತಿಪ್ರಸಙ್ಗ ಇತಿ ।

ವಸ್ತುತಃ, ನಾವೂ ಸಹ ದೇವದತ್ತಾದಿಗಳ (ಶರೀರವು) ಶೀಘ್ರವಾಗಿ ನಾಶವನ್ನು ಹೊಂದುವದು, ಆದುದರಿಂದ (ನೆನ್ನೆಯ ಹಾಗೂ ಇಂದಿನ ದೇವದತ್ತನ ಶರೀರಗಳಿಗೆ) ಭೇದವನ್ನೇ ಅಂಗೀಕರಿಸಲಾಗಿದೆ. ಅಹುದು, ಪರಿಣಾಮವಾದದ ರೀತ್ಯಾ ಅಭೇದವೂ ಇರುವುದರಿಂದ 'ಸೋಽಯಂ'

---

...... ಪುಟ 196 ರಿಂದ

ಪದಾರ್ಥಗಳು ಆಶುತರವಿನಾಶಿ ಮತ್ತು ಕ್ಷಣಿಕ ಎಂಬ ಪ್ರಮೇಯಗಳಿಂದ ಬೌದ್ಧವೈಶೇಷಿಕರಲ್ಲಿ ತಾತ್ವಿಕ ಭೇದವಿದ್ದರೂ ಈ ಸಣ್ಣ ಸ್ಥಾಯಿತ್ವವನ್ನು ಪ್ರತ್ಯಭಿಜ್ಞೆಯಿಂದ ಸಾಧಿಸಲು ಶಕ್ಯವಿಲ್ಲ ಎಂದು ಉತ್ತರಿಸಲಾಗಿದೆ. ಆದರೆ 'ಸೋಽಯಂ ದೇವದತ್ತಃ ಇತ್ಯಾದೇಃ' ಎಂದು ಆದಿ ಪದದಿಂದ ಸೂಚಿತವಾದ 'ಸೋಽಯಂ ಪರಮಾಣುಃ, ಸೋಽಯಮಾಕಾಶಃ' ಎನ್ನುವ ಪ್ರತ್ಯಭಿಜ್ಞೆಗಳನ್ನು ನಿತ್ಯತ್ವದ ಸಾಧನೆಗಾಗಿ, ವೈಶೇಷಿಕರನ್ನು ಉದ್ದೇಶಿಸಿ ತತ್ವವಾದಿಗಳಾದ ನಾವು ತಿಳಿಸುವೆವು. ಅತೀಂದ್ರಿಯಗಳಾದ ಆಕಾಶ ಪರಮಾಣು ವಿಷಯಕ ಪ್ರತ್ಯಭಿಜ್ಞೆಯೇ ಇರಲಾರದಲ್ಲವೆ? ಹಾಗಾದಲ್ಲಿ ಸೋಽಯಂ ದೇವದತ್ತಃ ಎನ್ನುವ ಪ್ರತ್ಯಭಿಜ್ಞೆಯು ಸಾದೃಶ್ಯ ವಿಷಯಕ ಎನ್ನುವ ವೈಶೇಷಿಕರವಾದವನ್ನು ನಿರಾಕರಿಸುವ ಬಗೆಯು ಹೇಗೆಂದರೆ- ವೈಶೇಷಿಕರೂ ಯೋಗಿಗಳನ್ನು ಒಪ್ಪಿರುವರು. ಯೋಗಿಗಳಿಗೆ ಅತೀಂದ್ರಿಯ ಪದಾರ್ಥಗಳ ಪ್ರತ್ಯಕ್ಷವಿರುವುದರಿಂದ ಅವರಿಗೆ ಆಕಾಶವಿಷಯಕ ಪ್ರತ್ಯಭಿಜ್ಞೆಯು ಪ್ರಾಪ್ತವಾಗುವುದರಿಂದ ನಮಗೆ ವೈಶೇಷಿಕರನ್ನು ನಿರಾಕರಿಸಲು ಯಾವ ಅಡಚಣೆಗಳು ಇಲ್ಲ ಎಂದು ಭಾವ.

ಎನ್ನುವ ಪ್ರತ್ಯಭಿಜ್ಞೆಗೆ ಅಭ್ರಾಂತಿತ್ವವು ಉಪಪನ್ನವಾಗುವುದು. (ದೇವದತ್ತಾದಿ ಶರೀರಗಳ) ಅವಯವಗಳಲ್ಲಿನ ಉಪಚಯ ಮತ್ತು ಅಪಚಯದ ನಿಮಿತ್ತವಾಗಿ ಪರಿಮಾಣದಲ್ಲಿ ಭೇದವು ಕಂಡಿರುವುದರಿಂದ ದೇವದತ್ತಾದಿ (ಶರೀರ)ಗಳಲ್ಲಿ ಪರಿಣಾಮವನ್ನು ಒಪ್ಪಲಾಗಿದೆ. ವರ್ಣಗಳಲ್ಲಿ ಪರಿಣಾಮದ ಸೂಚಕವಾದದ್ದು ಯಾವುದು ಇಲ್ಲವಾದುದರಿಂದ ಕೂಟಸ್ಥನಿತ್ಯತ್ವವನ್ನೇ (ನಿರುಪಾಧಿಕ ನಿತ್ಯತ್ವವನ್ನು ಆಕಾಶದಂತೆ ನಿತ್ಯತ್ವವನ್ನೇ) ಅಂಗೀಕರಿಸಲಾಗಿದೆ. ಆದುದರಿಂದಲೇ ಅಲ್ಲಿ (ದೇವದತ್ತಾದಿ ವಿಷಯಕ ಪ್ರತ್ಯಭಿಜ್ಞಾದಲ್ಲಿ)'ಸೋಽಯಂ' ಎಂದು ಅವಧಾರಣ ರಹಿತವಾಗಿಯೂ, ಇಲ್ಲಿಯಾದರೋ(ವರ್ಣವಿಷಯಕ ಪ್ರತ್ಯಭಿಜ್ಞಾದಲ್ಲಿ) 'ತದೇವೇದಂ' ಎಂದು ಅವಧಾರಣ ಸಹಿತವಾಗಿ ಹೇಳಲಾಗಿದೆ ಎಂದು. (ವರ್ಣಗಳು ಸಾಂದ್ರತ್ವ ತಾರತ್ವ ಮುಂತಾದ ) ವಿರುದ್ಧಧರ್ಮಗಳಿಗೆ ಆಶ್ರಿತವಾಗಿದೆ ಎಂಬ (ಸಾಮಾನ್ಯ) ಕಾರಣದಿಂದ ('ತದೇವೇದಂ' ಎಂಬ) ಪ್ರತ್ಯಭಿಜ್ಞಾಕ್ಕೆ ಭ್ರಾಂತಿತ್ವವನ್ನು ಒಪ್ಪಿದಲ್ಲಿ ಅತಿಪ್ರಸಂಗವು (ಪ್ರಾಪ್ತವಾಗುವುದು) ಎಂದು[1].

---

1. ದೇವದತ್ತ ನಿತ್ಯನಾದರೂ ಆತನ ಶರೀರವು ಅನಿತ್ಯ. ಶರೀರಕ್ಕೆ ನಿತ್ಯ ಅಪಚಯ-ಉಪಚಯಗಳಿವೆ. ಹೀಗಾಗಿ 'ಸೋಽಯಂ ದೇವದತ್ತಃ' ಎಂಬುವ ಪ್ರತ್ಯಭಿಜ್ಞೆಯು ಶರೀರಕ್ಕೆ ಸಂಬಂಧಿಸಿರುವುದರಿಂದ ತತ್ವವಾದಿಗಳಾದ ನಾವೂ ಸಹ ಸಾದೃಶ್ಯ ಬೋಧಕ ಎಂದು ಒಪ್ಪಿರುವೆವು. ಅದರಂತೆ 'ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಯನ್ನು ಸಹ ಸಾದೃಶ್ಯ ಬೋಧಕ ಎಂದು ಒಪ್ಪ ಬೇಕಾದೀತು ಎಂದು ಆಪಾದಿಸಲಾಗದು. ತತ್ವವಾದಿಗಳಾದ ನಾವು ದೇವದತ್ತಾದಿ ಶರೀರಗಳಲ್ಲಿನ ಅವಯವಗಳಲ್ಲಿ ಉಪಚಯಾಪಚಯಗಳು ಕಂಡಿರುವುದರಿಂದ ಶರೀರದಲ್ಲಿ ಪರಿಣಾಮವನ್ನು ಒಪ್ಪಿರುತ್ತೇವೆ ತನ್ನಿಮಿತ್ತವಾಗಿ ಶರೀರದಲ್ಲಿ ಮುಖ್ಯನಿತ್ಯತ್ವವಿಲ್ಲ. ವರ್ಣಗಳು ನಿರವಯವಗಳು, ತನ್ನಿಮಿತ್ತ ಉಪಚಯಾ-ಪಚಯಗಳಿಲ್ಲ, ಆಕಾಶದಂತೆ ನಿತ್ಯ. ಆದುದರಿಂದ ಯತ್‌ಕಿಂಚಿತ್ ವಿರುದ್ಧಧರ್ಮಗಳಿಗೆ ಅಧಿಕರಣವಾಗಿವೆ ಎಂಬ ಕಾರಣದಿಂದ ವರ್ಣಗಳಿಗೆ ಅನಿತ್ಯತ್ವವನ್ನು ಒಪ್ಪಿದಲ್ಲಿ ಆಕಾಶಾದಿಗಳಿಗೂ ಇಂತಹ ವಿರುದ್ಧಧರ್ಮಾಧಿಕರಣತ್ವವು ಕಂಡಿರುವುದರಿಂದ ಅವೂ ಸಹ ಅನಿತ್ಯಗಳಾಗಬೇಕಾದೀತು, ಎಂದು ಆಚಾರ್ಯರು ಅಭಿಮತಿಸಿರುವರು. ಈ ತಮ್ಮ ಅಭಿಪ್ರಾಯವನ್ನು 'ತದೇವೇದಂ ವಚನಂ' ಎನ್ನುವಲ್ಲಿ ಅವಧಾರಣಸಹಿತವಾದ ಪ್ರತ್ಯಭಿಜ್ಞೆಯನ್ನು 'ಸೋಽಯಂ ದೇವದತ್ತಃ' ಎನ್ನುವಲ್ಲಿ ಅವಧಾರಣರಹಿತ ಪ್ರತ್ಯಭಿಜ್ಞೆಯನ್ನು ಉದಾಹರಿಸುವ ಮುಖಾಂತರ ತಿಳಿಸಿರುವರು ಎಂದು ಭಾವ.

**ಬೌದ್ಧರೂ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಸಾಧಿಸಲಾರರು**

**ಸರ್ವಕ್ಷಣಿಕತ್ವಂ ವದತಾ ಬೌದ್ಧೇನ 'ಸೇಯಂ ದಿಗ್' ಇತ್ಯಾದಿ-ಪ್ರತ್ಯಭಿಜ್ಞಾಯಾ ಭ್ರಾನ್ತಿತ್ವಂ ನ ವಾಚ್ಯಮ್, ಪಞ್ಚಸ್ಕನ್ಧೇಭ್ಯೋಽನ್ಯತ್ವಾತ್ ।**

ಎಲ್ಲವನ್ನು ಕ್ಷಣಿಕ ಎಂದು ಹೇಳುವ ಬೌದ್ಧರು 'ಅದೇ ಈ ದಿಕ್ಕು' ಎನ್ನುವ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎಂದು ಹೇಳಲಾರರು, (ಈ ದಿಕ್ ಎಂಬ ಪದಾರ್ಥವು) ಪಂಚಸ್ಕಂಧದಿಂದ (ಕ್ಷಣಿಕಪದಾರ್ಥಗಳಿಂದ) ಭಿನ್ನವಾದುದರಿಂದ.

**ಭವೇದೇಷಾ ವಿಭೀಷಿಕಾ ವೈಶೇಷಿಕಾದೀನಾಂ, ತೈಃ ಸ್ಥಾಯಿನಃ ಪದಾರ್ಥಸ್ಯಾಙ್ಗೀಕೃತತ್ವಾತ್ । ಯಸ್ತು ಬೌದ್ಧಃ ಸರ್ವಸ್ಯ ಕ್ಷಣಿಕತ್ವಮಙ್ಗೀಕೃತ್ಯ, ಪ್ರತ್ಯಭಿಜ್ಞಾಮಾತ್ರಸ್ಯ ಭ್ರಾನ್ತಿತ್ವಮಙ್ಗೀಕರೋತಿ, ತಸ್ಯ ತು ತಥಾಙ್ಗೀಕಾರೇಽಪಿ ನ ಕಶ್ಚಿದತಿಪ್ರಸಙ್ಗಃ? ಇತ್ಯತ ಆಹ - 'ಸರ್ವೇತಿ' ದಿಕ್‌ಶಬ್ದೇನಾತ್ರಾಕಾಶೋ ಗೃಹ್ಯತೇ । ಅವ್ಯಾಕೃತಾಕಾಶಸ್ಯೈವ ದಿಕ್‌ತ್ವಜ್ಞಾಪನಾರ್ಥಮ್ । ಆದಿಗ್ರಹಣೇನ 'ಸೋಽಯಂ ವಿನಾಶಃ' ಇತ್ಯಸ್ಯ ಗ್ರಹಣಮ್ । ಕುತ ಇತ್ಯತ? ಆಹ 'ಪಂಚ...' ಇತಿ ॥**

ಈ ಭೀತಿಯು ('ಸೋಯಂ ದೇವದತ್ತಃ' ಎನ್ನುವ ಪ್ರತ್ಯಭಿಜ್ಞೆಯೂ ಭ್ರಾಂತಿಯಾಗಬೇಕಾದೀತು ಎನ್ನುವ ಭೀತಿಯು) ವೈಶೇಷಿಕಾದಿಗಳಿಗೆ ಇದ್ದೀತು. ಅವರು ನಿತ್ಯವಾದ ಪದಾರ್ಥಗಳನ್ನು ಒಪ್ಪಿರುವುದರಿಂದ. ಯಾವ ಬೌದ್ಧರು ಎಲ್ಲವನ್ನೂ ಕ್ಷಣಿಕ ಎಂದು ಒಪ್ಪಿ , ಎಲ್ಲ ಪ್ರತ್ಯಭಿಜ್ಞೆಗಳಿಗೂ ಭ್ರಾಂತಿತ್ವವನ್ನು ಒಪ್ಪಿರುತ್ತಾರೋ, ಆ ಬೌದ್ಧರು ಹಾಗೇ ಒಪ್ಪಿದರೂ ('ಸೋಽಯಂ ದೇವದತ್ತಃ' ಎನ್ನುವ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎಂದು ಒಪ್ಪಿದರೂ) ಯಾವುದೇ ಅತಿಪ್ರಸಂಗಗಳಿಲ್ಲ? ಎಂದು, ಆದುದರಿಂದ ಉತ್ತರಿಸುತ್ತಾರೆ 'ಸರ್ವ' ಎಂದು. ಪ್ರಕೃತ 'ದಿಕ್' ಶಬ್ದದಿಂದ ಆಕಾಶವನ್ನು ಪರಿಗ್ರಹಿಸುವುದು.

ಅವ್ಯಾಕೃತಾಕಾಶವನ್ನೇ 'ದಿಕ್' ಎಂದು ಸೂಚಿಸಲು[1]. ಆದಿ ಶಬ್ದವನ್ನು ಹೇಳಿದ್ದರಿಂದ 'ಸೋಽಯಂ ವಿನಾಶಃ' ಎಂಬುವದನ್ನು (ಪ್ರತ್ಯಭಿಜ್ಞೆಯನ್ನು) ಪರಿಗ್ರಹಿಸಬೇಕು. ಏಕೆ ? ಎಂದು ಪ್ರಶ್ನಿಸಿದಲ್ಲಿ ಉತ್ತರಿಸುತ್ತಾರೆ '**ಪಂಚ..**' ಎನ್ನುವುದರಿಂದ.

**'ರೂಪ-ಸಂಜ್ಞಾ-ವೇದನಾ-ಸಂಸ್ಕಾರ-ವಿಜ್ಞಾನಲಕ್ಷಣಾಃ ಪಂಚಸ್ಕಂಧಾ ಏವ ಅರ್ಥಕ್ರಿಯಾಕಾರಿತ್ವರೂಪಸತ್ವಯೋಗಾತ್ ಕ್ಷಣಿಕಾಃ । ತತ್ರ ರೂಪ-ರಸ-ಗಂಧ-ಸ್ಪರ್ಶ-ಶಬ್ದಾತ್ಮಕಾಃ ಪರಮಾಣವೋ ರೂಪಸ್ಕಂಧಃ । ಸವಿಕಲ್ಪಕಂ ಜ್ಞಾನಂ ಸಂಜ್ಞಾಸ್ಕಂಧಃ । ಸುಖದುಃಖೇ ವೇದನಾಸ್ಕಂಧಃ । ಸಮಾನಾನ್ತರ-ಪ್ರತ್ಯಯಃ ಸಂಸ್ಕಾರಸ್ಕಂಧಃ । ನಿರ್ವಿಕಲ್ಪಿಕಜ್ಞಾನಂ ವಿಜ್ಞಾನಸ್ಕಂಧಃ । ಆಕಾಶಸ್ಯ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಖ್ಯಯೋಃ ದ್ವಯೋಃ ವಿನಾಶಯೋಶ್ಚ ಪಞ್ಚಸ್ಕನ್ಧೇಭ್ಯೋಽನ್ಯತ್ವಾನ್ನಿತ್ಯತ್ವಮ್' ಇತಿ ಬೌದ್ಧಸಿದ್ಧಾಂತಃ । ಯಥೋಕ್ತಮ್-**

**'ಆಕಾಶೌ ದ್ವೌ ವಿನಾಶೌ ಚ ನಿತ್ಯಂ ತ್ರಯಮಸಂಸ್ಕೃತಮ್' ಇತಿ ।**

**ವಿನಾಶದ್ವಯಸ್ವರೂಪಂ ಚ-**

**'ಬುದ್ಧಿಪೂರ್ವವಿನಾಶೋ ಹಿ ಪ್ರತಿಸಂಖ್ಯಾನಿರೋಧಗೀಃ ।**
**ಅಬುದ್ಧಿಪೂರ್ವಕಸ್ತೇಷಾಂ ನಿರೋಧೋಽಪ್ರತಿಸಂಖ್ಯಯಾ ॥' ಇತಿ ।**

ರೂಪ, ಸಂಜ್ಞಾ, ವೇದನ, ಸಂಸ್ಕಾರ, ವಿಜ್ಞಾನ ಎಂಬ ಪಂಚಸ್ಕಂಧಗಳು

---

1. ವಸ್ತುತಃ ಬೌದ್ಧರೂ ಆಕಾಶಕ್ಕೆ ನಿತ್ಯತ್ವವನ್ನು ಒಪ್ಪಿರುವರು. ಆದುದರಿಂದ 'ಸೋಽಯಮಾಕಾಶಃ' ಎಂಬ ಪ್ರತ್ಯಭಿಜ್ಞೆಯು ಭ್ರಾಂತವಾಗಲಿ' ಎಂದು ಬೌದ್ಧರಿಗೂ ಅತಿಪ್ರಸಂಗವನ್ನು ಹೇಳಲು ಶಕ್ಯವಿದೆ. ಆದರೂ ಆಚಾರ್ಯರು ಪ್ರಸಿದ್ಧವಾದ ಆಕಾಶ ಶಬ್ದವನ್ನು ಪರಿತ್ಯಜಿಸಿ 'ದಿಕ್' ಶಬ್ದವನ್ನು ಪರಿಗ್ರಹಿಸಿದ್ದಾರೆ. ಆದುದರಿಂದ ಟೀಕೆಯಲ್ಲಿ ದಿಕ್‌ಶಬ್ದದಿಂದ ಅವ್ಯಾಕೃತಾಕಾಶವನ್ನು ಪರಿಗ್ರಹಿಸಬೇಕು ಎಂದು ಸೂಚಿಸಿದರು. ಆಚಾರ್ಯರು ಪ್ರಸಿದ್ಧವಾದ ಆಕಾಶ ಎನ್ನುವ ಶಬ್ದವನ್ನು ಪರಿತ್ಯಜಿಸಿ ದಿಕ್‌ಶಬ್ದವನ್ನು ಪರಿಗ್ರಹಿಸಲು ವಿಶೇಷ ಕಾರಣವಿದೆ, ವೈಶೇಷಿಕಾದಿಗಳು 'ದಿಕ್ಕನ್ನು ಆಕಾಶದಿಂದ ಭಿನ್ನ' ಎಂದು ಒಪ್ಪಿರುತ್ತಾರೆ. ಆ ವಾದವನ್ನು ನಿರಾಕರಿಸಲು, ದಿಕ್-ಆಕಾಶಗಳು ಒಂದೇ, ಇವು ಪ್ರತ್ಯೇಕ ಪದಾರ್ಥಗಳಲ್ಲ ಎಂದು ತಿಳಿಸಲು ದಿಕ್ ಶಬ್ದವನ್ನು ಪರಿಗ್ರಹಿಸಿರುವರು ಎಂದು ಭಾವ.

ಮಾತ್ರ ಕ್ಷಣಿಕಗಳು, ಇವುಗಳಲ್ಲಿ 'ಅರ್ಥಕ್ರಿಯಾಕಾರಿತ್ವ' ಎಂಬ ಸತ್ವವಿರುವುದರಿಂದ. ಬೌದ್ಧ ಶಾಸ್ತ್ರದಲ್ಲಿ, ರೂಪ, ರಸ, ಗಂಧ, ಸ್ಪರ್ಶ,ಶಬ್ದಾತ್ಮಕಗಳಾದ ಪರಮಾಣುಗಳನ್ನು 'ರೂಪಸ್ಕಂಧ' ಎಂದು, ಸವಿಕಲ್ಪಕಜ್ಞಾನವನ್ನು 'ಸಂಜ್ಞಾಸ್ಕಂಧ' ಎಂದು[1], ಸುಖದುಃಖಗಳನ್ನು ವೇದನಾಸ್ಕಂದವೆಂದು, ಸಮನಂತರಪ್ರತ್ಯಯವನ್ನು ಸಂಸ್ಕಾರಸ್ಕಂಧವೆಂದು[2], ನಿರ್ವಿಕಲ್ಪಕ ಜ್ಞಾನವನ್ನು ವಿಜ್ಞಾನಸ್ಕಂಧವೆಂದು (ತಿಳಿಸಿರುತ್ತಾರೆ)[3]. ಆಕಾಶ ಮತ್ತು ಪ್ರತಿಸಂಖ್ಯಾ ನಿರೋಧ, ಅಪ್ರತಿಸಂಖ್ಯಾನಿರೋಧಗಳೆಂಬ ಎರಡು ವಿನಾಶಗಳು ಪಂಚಸ್ಕಂಧಗಳಿಂದ ವಿಭಿನ್ನವಾದುದರಿಂದ ನಿತ್ಯವೆಂದು ಬೌದ್ಧ ಸಿದ್ಧಾಂತವು (ತಿಳಿಸುತ್ತದೆ). ಹೀಗೆ ತಿಳಿಸಿರುವರು - ವಿಕಾರರಹಿತವಾದ ಆಕಾಶ ಹಾಗೂ ಎರಡು ಬಗೆಯ ವಿನಾಶಗಳು, ಈ ಮೂರು ನಿತ್ಯ.' ಎಂದು. ವಿನಾಶದ್ವಯ ಸ್ವರೂಪವಾದರೋ - 'ಬುದ್ಧಿಪೂರ್ವಕವಾದ ನಾಶವನ್ನು ಪ್ರತಿಸಂಖ್ಯಾನಿರೋಧ ವೆಂದು, ಅಬುದ್ಧಿಪೂರ್ವಕ ನಾಶವನ್ನು ಅಪ್ರತಿಸಂಖ್ಯಾ ನಿರೋಧವೆಂದು (ಅವರು ಅಭಿಮತಿಸಿರುವರು)[4].

**ತಸ್ಮಾದಾಕಾಶಾದೀನಾಂ ನಿತ್ಯತ್ವಾತ್ ತದ್ವಿಷಯಪ್ರತ್ಯಭಿಜ್ಞಾಭ್ರಾನ್ತಿತ್ವಂ ಬೌದ್ಧೇನಾಪೀತಿ ನ ವಾಚ್ಯಮ್ । ಅಸ್ತಿ ಚಾಕಾಶಾದೀನಾಂ ಯಾದೃಶತಾದೃಶ-ವಿರುದ್ಧಧರ್ಮಾಧಿಕರಣತ್ವಮ್ । ತತಃ ತನ್ಮಾತ್ರಸ್ಯ ಭೇದಹೇತುತ್ವಾಙ್ಗೀಕೃತೌ**

1. ಕೇವಲ 'ಘಟ' ಎಂಬುವ ಜ್ಞಾನವನ್ನು ನಿರ್ವಿಕಲ್ಪಕಜ್ಞಾನ ಎಂದು, 'ಅಯಂ ಘಟಃ, 'ಅಯಂ ಕೃಷ್ಣ ಘಟಃ' ಇತ್ಯಾದಿ ಜ್ಞಾನವನ್ನು ಸವಿಕಲ್ಪಕ ಜ್ಞಾನ ಎಂದು ತಿಳಿಯುವುದು. ಈ ವಿಕಲ್ಪಿತ ಜ್ಞಾನವೇ ವ್ಯವಹಾರಕ್ಕೆ ಕಾರಣವಾದುದು ಎಂದು ಶಾಸ್ತ್ರಗಳಲ್ಲಿ ಒಪ್ಪಿರುತ್ತಾರೆ.

2. ರಾಗ-ದ್ವೇಷ-ಮೋಹಜನ್ಯವಾದ ವಾಸನಾವನ್ನು ಸಮನಂತರ ಪ್ರತ್ಯಯವೆಂದು ಅಭಿಮತಿಸಿರುವರು.

3. ಈ ಐದು ಸ್ಕಂಧಗಳಲ್ಲಿ ರೂಪಸ್ಕಂಧ ಮಾತ್ರ ಬಾಹ್ಯ ಉಳಿದ ನಾಲ್ಕು ಸ್ಕಂಧಗಳು ಅಂತಃ ಪದಾರ್ಥಗಳೆಂದು ತಿಳಿಯುವುದು.

4. ಇಲಿಯನ್ನು ಬೆಕ್ಕು ತಿನ್ನುತ್ತದೆ, ಕೋಲಿನಿಂದ ಗಡಿಗೆಯನ್ನು ನಾಶಗೊಳಿಸಲಾಗುವುದು. ಈ ವಿಧವಾದ ನಾಶಗಳನ್ನು ಬುದ್ಧಿಪೂರ್ವಕನಾಶವೆನ್ನುವರು. ಪ್ರತಿಯೊಂದು ವಸ್ತುವೂ ಕ್ಷಣಿಕ, ಅಂದರೆ ನಿರಂತರ ಉತ್ಪತ್ತಿ-ನಾಶಗಳನ್ನು ಹೊಂದುತ್ತಿರುತ್ತವೆ. ಈ ಪ್ರಾಕೃತಿಕ ನಾಶವನ್ನು 'ಪ್ರತಿಸಂಖ್ಯಾನಾಶ'. ಬುದ್ಧಿಪೂರ್ವಕನಾಶವನ್ನು ವಿಸಂತಾನನಾಶ ಎಂದು, ಪ್ರಾಕೃತಿಕನಾಶವನ್ನು ಸಸಂತಾನನಾಶ ಎಂದೂ ವ್ಯವಹರಿಸುವರು. ಎಂದು ಭಾವ.

**ಆಕಾಶಾದೀನಾಮಪಿ ಭೇದಪ್ರಸಙ್ಗೇನ ತದ್ವಿಷಯಪ್ರತ್ಯಭಿಜ್ಞಾಯಾ ಅಪಿ ಭ್ರಾಂತಿತ್ವಂ ಸ್ಯಾದಿತಿ ಸಮ್ಭವತ್ಯೇವ ಬೌದ್ಧಂ ಪ್ರತ್ಯತಿಪ್ರಸಙ್ಗಾಭಿಧಾನಮಿತಿ ಭಾವಃ । ಯದ್ಯಪ್ಯತ್ರ ಸರ್ವಕ್ಷಣಿಕತ್ವನಿರಾಕರಣೇನಾಪ್ಯುತ್ತರಂ ಶಕ್ಯತೇ ವಕ್ತುಮ್, ತಥಾಽಪ್ಯತಿಪ್ರಸಙ್ಗಕಥನಪ್ರಸ್ತಾವೇ ಏತದ್ ವ್ಯುತ್ಪಾದನ- ಸ್ಯೈವೋಚಿತತ್ವಾನ್ನ ತದತ್ರೋಕ್ತಮ್ । ಕೃತಶ್ಚಾನ್ಯತ್ರ ಸರ್ವಕ್ಷಣಿಕತ್ವನಿರಾಸಃ ।**

ಆದುದರಿಂದ (ಬೌದ್ಧರರೀತ್ಯಾ) ಆಕಾಶಾದಿಗಳಿಗೆ ನಿತ್ಯತ್ವವಿರುವುದರಿಂದ 'ಆಕಾಶವಿಷಯಕ ಪ್ರತ್ಯಭಿಜ್ಞೆಯನ್ನು ಭ್ರಾಂತಿ' ಎಂದು ಬೌದ್ಧರೂ ಹೇಳಲಾರರು. ಆಕಾಶದಲ್ಲಾದರೂ ಅಂತಹ-ಇಂತಹ ವಿರುದ್ಧಧರ್ಮಾಧಿಕರಣತ್ವವು ಇದೆ. ಆದುದರಿಂದ ಅಂತಹುದಕ್ಕೆ (ಸಾಮಾನ್ಯವಾದ ವಿರುದ್ಧ ಧರ್ಮಾಧಿಕರಣತ್ವಕ್ಕೆ) ಭೇದಕಾರಣತ್ವವನ್ನು ಒಪ್ಪಿದಲ್ಲಿ ಆಕಾಶಾದಿಗಳಲ್ಲೂ ಭೇದವನ್ನು ಒಪ್ಪುವ ಪ್ರಸಂಗವಿರುವುದರಿಂದ, 'ಆ ವಿಷಯಕವಾದ ಪ್ರತ್ಯಭಿಜ್ಞೆಗೆ ('ಆಕಾಶವಿಷಯಕ ವಾದ ಪ್ರತ್ಯಭಿಜ್ಞೆಗೆ) ಭ್ರಾಂತಿತ್ವವು ಒದಗೀತು' ಎಂದು ಬೌದ್ಧರನ್ನು ಉದ್ದೇಶಿಸಿ ಅತಿಪ್ರಸಂಗವನ್ನು ಹೇಳಲು ಅವಕಾಶವಿದೆ ಎಂದು ಭಾವ. ವಸ್ತುತಃ (ಬೌದ್ಧರ) ಸರ್ವಕ್ಷಣಿಕತ್ವವಾದವನ್ನು ನಿರಾಕರಿಸುವುದರಿಂದಲೇ ಉತ್ತರಿಸಲು ಶಕ್ಯವಿದೆ, ಆದರೂ (ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎಂದು ಒಪ್ಪಿದಲ್ಲಿ) ಅತಿಪ್ರಸಂಗವನ್ನು ಹೇಳುವ ಸಂದರ್ಭವಿದು, ಆದುದರಿಂದ ಇದನ್ನೇ (ಪ್ರತ್ಯಭಿಜ್ಞಾ ಭ್ರಾಂತಿಯನ್ನೇ) ತಿಳಿಸುವುದು ಉಚಿತವೆಂದು, ಅದನ್ನು (ಸರ್ವಕ್ಷಣಿಕತ್ವವಾದದ ಖಂಡನೆಯನ್ನು) ಹೇಳಲಿಲ್ಲ. ಸರ್ವ ಕ್ಷಣಿಕತ್ವವಾದವನ್ನು ಬೇರೇ ಸಂದರ್ಭದಲ್ಲಿ ನಿರಾಕರಿಸಲಾಗಿದೆ.

#### 'ಪಂಚಸ್ಕಂಧೇಭ್ಯಃ' ರೂಪದ ಸಾಧುತ್ವ

**'ಪಞ್ಚಸ್ಕಂಧೇಭ್ಯಃ' ಇತಿ 'ವಿಶೇಷಣಂ ವಿಶೇಷ್ಯೇಣ....' ಇತ್ಯನೇನ ವಿಶೇಷಣಸಮಾಸೋಽಯಂ, ನತು 'ತದ್ಧಿತಾರ್ಥಃ...' ಇತ್ಯಾದಿನಾ ಸಮಾಹಾರ ದ್ವಿಗುಃ । ಅತಃ ಪಞ್ಚಸ್ಕಂಧ್ಯಾ ಇತಿ ನೋಕ್ತಮ್ ।**

'ಪಂಚಸ್ಕಂಧೇಭ್ಯಃ' ಎಂದು 'ವಿಶೇಷಣಂ ವಿಶೇಷ್ಯೇಣ....' ಎಂಬ ಸೂತ್ರದ ಅನ್ವಯ ಇದು ವಿಶೇಷಣಸಮಾಸ, ಹೊರತಾಗಿ 'ತದ್ಧಿತಾರ್ಥೋತ್ತರ ಪದ

ಸಮಾಹಾರೇ ಚ' ಎಂಬ ಸೂತ್ರವನ್ನು ಅನುಸರಿಸಿ ದ್ವಿಗು ಸಮಾಸವಲ್ಲ. ಆದುದರಿಂದ 'ಪಂಚಸ್ಕಂಧ್ಯಾ' ಎಂದು ಹೇಳಲಿಲ್ಲ[1].

**ವಿಜ್ಞಾನ-ಶೂನ್ಯವಾದಿಗಳೂ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಸಾಧಿಸಲಾರರು**

**ನ ಚ ದಿಶ ಏವ ಭ್ರಾನ್ತಿಕಲ್ಪಿತಾಃ, ವಿಜ್ಞಾನಶೂನ್ಯಯೋರಪಿ ಸಾಮ್ಯಾತ್ ।**

ದಿಕ್ಕುಗಳು ಭ್ರಾಂತಿ ಕಲ್ಪಿತ ಎನ್ನವುದು ತರವಲ್ಲ, ವಿಜ್ಞಾನಶೂನ್ಯಗಳೂ ಸಮಾನವಾದುದರಿಂದ (ಕಲ್ಪಿತವಾಗಬೇಕಾದೀತು).

**ಅತ್ರ ಬೌದ್ಧೈಕದೇಶಿನೌ ವಿಜ್ಞಾನಶೂನ್ಯವಾದಿನೌ ಆಹತುಃ । ಸ್ಯಾದಯಂ**

---

1. 'ತದ್ಧಿತಾರ್ಥೋತ್ತರಪದಸಮಾಹಾರೇ ಚ' (ಪಾ.ಸೂ.2.1.51.) ಎಂಬ ಸೂತ್ರವು 'ಸಮಾಹಾರಾರ್ಥಕವಾದ ದಿಕ್ ಮತ್ತು ಸಂಖ್ಯಾವಾಚಕ ಶಬ್ದಗಳು ಸಮಾಸಗೊಳ್ಳುವವು' ಎಂದು ತಿಳಿಸುತ್ತದೆ. ಈ ಸೂತ್ರದ ಅನ್ವಯ ಸಮಾಸವನ್ನು ವಿವಕ್ಷಿಸಿದಲ್ಲಿ, 'ಸಂಖ್ಯಾಪೂರ್ವೋದ್ವಿಗುಃ' (ಪಾ.ಸೂ.2.1.52.) ಎಂಬ ಸೂತ್ರದ ಪ್ರಕಾರ ಸಂಖ್ಯಾವಾಚಕ ಶಬ್ದವು ಪೂರ್ವದಲ್ಲಿ ಇರುವುದು. ಆಗ 'ಪಂಚಾನಾಂ ಸ್ಕಂಧಾನಾಂ ಸಮಾಹಾರಃ' ಎಂದು ವಿಗ್ರಹ ವಾಕ್ಯವು ಸಂಪನ್ನವಾಗುವುದು.'ದ್ವಿಗೋರೇಕಚನಮ್' (ಪಾ.ಸೂ.2.4.1.) ಎನ್ನುವ ಸೂತ್ರದ ನಿಯಮದಂತೆ ದ್ವಿಗುಸಮಾಸವಾದಲ್ಲಿ ಏಕವಚನವು, 'ದ್ವಿಗೋಃ' (ಪಾ.ಸೂ.2.4.21.) ಎನ್ನುವ ಸೂತ್ರದ ನಿಯಮದಂತೆ 'ಜೀಪ್' ಅಂದರೆ 'ಈ' ಕಾರವು ಪ್ರಾಪ್ತವಾದಲ್ಲಿ 'ಪಂಚಸ್ಕಂಧ-ಈ' ಎಂದು ಸಿದ್ಧವಾಗುವುದು. 'ಯಸ್ಯೇತಿ ಚ' (ಪಾ.ಸೂ.6.4.148.) ಎನ್ನುವ ಸೂತ್ರದ ನಿಯಮದಂತೆ ಧಕಾರದಲ್ಲಿನ ಅಕಾರಕ್ಕೆ ಲೋಪವು ಒದಗಲು 'ಪಂಚಸ್ಕಂಧೀ' ಎಂದು ರೂಪವು ಸಿದ್ಧವಾಗುವುದು. ಇದರ ತೃತೀಯಾ ವಿಭಕ್ತಿಯ ರೂಪವು ಪಂಚಸ್ಕಂಧ್ಯಾ ಎಂದಾಗುವುದೇ ಹೊರತು 'ಪಂಚಸ್ಕಂಧೇಭ್ಯಃ' ಎಂದು ಬಹುವಚನಾಂತರೂಪವು ಹೇಗೆ ಎಂಬ ಸಂದೇಹಕ್ಕೆ ಉತ್ತರಿಸಿರುವರು. ಇಲ್ಲಿ ದ್ವಿಗುಸಮಾಸವನ್ನು ವಿವಕ್ಷಿಸಲಾಗಿಲ್ಲ, 'ವಿಶೇಷಣಂ ವಿಶೇಷ್ಯೇಣ ಬಹುಲಂ' (ಪಾ.ಸೂ.2.1.57.)- ಭೇದಕವು ಭೇದ್ಯದಿಂದ ಸಮಾಸಗೊಳ್ಳುವುದು ಎಂಬ ನಿಯಮದಂತೆ ಕರ್ಮಧಾರಯ ಸಮಾಸವನ್ನು ವಿವಕ್ಷಿಸಲಾಗಿದೆ. ಪಂಚ ಚ ತೇ ಸ್ಕಂಧಾಶ್ಚ - ಪಂಚಸ್ಕಂಧಾಃ, ತೇಭ್ಯಃ - ಪಂಚಸ್ಕಂದೇಭ್ಯಃ ಎಂದು ಸಿದ್ಧವಾಗುವುದು. 'ಪಂಚಪಾತ್ರಮ್' ಮುಂತಾದ ಸಂದರ್ಭದಂತೆ ಇಲ್ಲಿಯೂ ದ್ವಿಗು ಸಮಾಸವನ್ನು ವಿವಕ್ಷಿಸಿದರೂ, ಸ್ತ್ರೀತ್ವ ಮತ್ತು ಈ ಕಾರಗಳನ್ನು ನಿಷೇಧಿಸಲು ಅವಕಾಶವಿಲ್ಲವೇ? ಎಂದು ಸಂದೇಹಿಸಲಾಗದು, ಪಾತ್ರಾದಿ ಗಣದಲ್ಲಿ ಸ್ಕಂಧ ಶಬ್ದವು ಪರಿಗಣಿತವಾಗಿಲ್ಲ ಮತ್ತು ಸ್ಕಂದೇಭ್ಯಃ ಎಂದು ಬಹುವಚನವು ಪ್ರಾಪ್ತವಾಗಲಾರದು, ಎಂದು ಭಾವ.

ಪ್ರಸಙ್ಗಃ ಸೌತ್ರಾನ್ತಿಕಾದೀನಾಂ, ಯೈರ್ದಿಶೋ ನಿತ್ಯತ್ವಮಙ್ಗೀಕೃತಂ ನಾಸ್ಮಾಕಮ್ । 'ವಿಜ್ಞಾನಾತಿರಿಕ್ತಂ ಶೂನ್ಯಾತಿರಿಕ್ತಂ ವಾ ಸರ್ವಂ ಭ್ರಾನ್ತಿಕಲ್ಪಿತಮ್' ಇತ್ಯಙ್ಗೀಕಾರಾತ್ । ತತ್ರ ದಿಗೇವ ಭ್ರಾಂತಿಕಲ್ಪಿತಾ, ಕುತಸ್ತಸ್ಯಾ ನಿತ್ಯತ್ವಂ, ಕುತಸ್ತರಾಂ ತತ್ಪ್ರತ್ಯಭಿಜ್ಞಾಯಾ ಅಭ್ರಾನ್ತಿತ್ವಂ, ಯೇನಾತಿಪ್ರಸಙ್ಗಃ ಸ್ಯಾದ್? ಇತ್ಯತ ಆಹ 'ನ ಚ ದಿಶ ಏವ' ಇತಿ । 'ದಿಗ್' ಇತಿ ಪ್ರಕೃತೇಽಪಿ 'ದಿಶಃ' ಇತಿ ಬಹುವಚನಂ 'ದಿಶಾಂ ಬಹುತ್ವಮಪಿ ಸತ್ಯಮ್' ಇತಿ ಜ್ಞಾಪನಾರ್ಥಮ್ । ತೇನ 'ಏಕೈವ ದಿಗ್, ಉಪಚಾರೇಣ ದಶವ್ಯವಹಾರಭಾಗ್' ಇತಿ ವದಂತೋ ವೈಶೇಷಿಕಾದಯೋ ನಿರಸ್ತಾ ಭವನ್ತಿ । ಶ್ರುತಿಸ್ಮೃತಿಲೋಕವ್ಯವಹಾರಸಿದ್ಧಸ್ಯ ದಶತ್ವಸ್ಯ ನಿಷ್ಕಾರಣಮುಪಚಾರತ್ವ-ಗ್ರಹಣಾನುಪಪತ್ತೇಃ ।

ಕುತೋ ನ? ಇತಿ ಚೇತ್ ಕಿಂ ದಿಶಾಂ ಭ್ರಾಂತಿಕಲ್ಪಿತತ್ವಂ ಕೇನಚಿತ್ ಪ್ರಮಾಣೇನೋಚ್ಯತೇ, ಏವಮೇವ ವಾ ? ನಾದ್ಯಃ, ಪ್ರಪಂಚಮಿಥ್ಯಾ-ತ್ವಾನುಮಾನಾನಾಮನ್ಯತ್ರ ದೂಷಿತತ್ವಾತ್ । ಅಸಾಧಾರಣಪ್ರಮಾಣ-ಸ್ಯಾನುಪಲಮ್ಭಾತ್ । ನ ದ್ವಿತೀಯಃ, ಅತಿಪ್ರಸಙ್ಗಾದ್ ಇತ್ಯಾಹ 'ವಿಜ್ಞಾನ...' ಇತಿ । ಪ್ರಮಾಣೇನ ವಿನೈವ ಭ್ರಾಂತಿಕಲ್ಪಿತತ್ವಕಲ್ಪನಸ್ಯ ಸತ್ಯತ್ವೇನಾಭ್ಯುಪ-ಗತಯೋಃ ವಿಜ್ಞಾನಶೂನ್ಯಯೋಃ ವಿಷಯೇಽಪಿ ಕರ್ತುಂ ಶಕ್ಯತ್ವಾತ್, ತಯೋರಪಿ ಭ್ರಾನ್ತಿಕಲ್ಪಿತತ್ವಮಾಪದ್ಯೇತ ।

ಇಲ್ಲಿ ('ಸೇಯಂ ದಿಕ್' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿಯಾಗಲಿ' ಎಂಬುವ ಆಪಾದನದ ವಿಷಯದಲ್ಲಿ) ಬೌದ್ಧರಲ್ಲಿ ಮತ್ತೊಂದು ಪಂಗಡದವರಾದ ವಿಜ್ಞಾನಶೂನ್ಯವಾದಿಗಳು ಪ್ರಶ್ನಿಸುತ್ತಾರೆ. ಈ ಆಪಾದನಾಪ್ರಸಂಗವು (ಬೌದ್ಧರಲ್ಲಿ ಒಂದು ಗುಂಪಿನವರಾದ) ಸೌತ್ರಾಂತಿಕರಿಗೆ (ಬಾಧಕವು) ಆದೀತು, ಅವರು ದಿಕ್‌ಗೆ ನಿತ್ಯತ್ವವನ್ನು ಒಪ್ಪಿರುವುದರಿಂದ, ನಮಗಲ್ಲ. 'ವಿಜ್ಞಾನ ಅಥವಾ ಶೂನ್ಯದಿಂದ ಅತಿರಿಕ್ತವಾದ ಎಲ್ಲವನ್ನೂ ಭ್ರಾಂತಿಕಲ್ಪಿತ' ಎಂದು ಒಪ್ಪಿರುವುದರಿಂದ. ಪ್ರಕೃತದಲ್ಲಿ ದಿಕ್ಕೇ ಭ್ರಾಂತಿಕಲ್ಪಿತ, ಅದಕ್ಕೆ ಎಲ್ಲಿಂದ ನಿತ್ಯತ್ವವು ಪ್ರಾಪ್ತವಾಗಬೇಕು? ಮತ್ತೆಲ್ಲಿಂದ (ದಿಕ್ಕುಗಳು ನಿತ್ಯ ಎಂದು ಸಾರುವ) ಆ ಪ್ರತ್ಯಭಿಜ್ಞೆಗೆ ಸತ್ಯತ್ವವು? ಅದರಿಂದ (ದಿಕ್ಕಿಗೆ ಸತ್ವತ್ವವನ್ನು ಒಪ್ಪಿದರೆ) ಅತಿಪ್ರಸಂಗ

ಬಂದೀತು? ಎಂದು, ಆದುದರಿಂದ ಉತ್ತರಿಸುತ್ತಾರೆ 'ನ ಚ ದಿಶಃ' ಎಂದು. 'ದಿಗ್' ಎಂದು ಪ್ರಸಕ್ತವಾಗಿದ್ದರೂ[1] 'ದಿಶಃ' ಎಂದು ಬಹುವಚನವು (ಬಹುವಚನದ ನಿರ್ದೇಶನವು) ದಿಕ್ಕುಗಳ ಬಹುತ್ವವೂ ದಿಟ ಎಂದು ತಿಳಿಸಲು (ಉಕ್ತವಾಗಿದೆ). ಹೀಗೆ (ಬಹುವಚನಾಂತವಾಗಿ) ನಿರ್ದೇಶಿಸಿದ್ದರಿಂದ 'ಒಂದೇ ದಿಕ್ಕು, ಉಪಚಾರದಿಂದ ಹತ್ತು ಎಂದು ವ್ಯವಹಾರವನ್ನು ಹೊಂದಿದೆ' ಎಂದು ಹೇಳುವ ವೈಶೇಷಿಕಾದಿಗಳು ನಿರಾಕೃತರಾದರು. ಶ್ರುತಿ ಸ್ಮೃತಿ ಮತ್ತು ಲೋಕವ್ಯವಹಾರಗಳಿಂದ ಸಿದ್ಧವಾದ ದಶತ್ವವನ್ನು ಅಕಾರಣವಾಗಿ 'ಉಪಚಾರ' ಎಂದು ಹೇಳುವುದು ಉಪಪನ್ನವಾಗದು.

ಏಕೆ (ದಿಕ್ಕು ಭ್ರಾಂತಿಕಲ್ಪಿತ) ಅಲ್ಲ ? ಎಂದಲ್ಲಿ ದಿಕ್ಕುಗಳು ಭ್ರಾಂತಿ ಕಲ್ಪಿತ ಎಂಬುದನ್ನು ಯಾವುದಾದರೂ ಪ್ರಮಾಣದಿಂದ ಹೇಳಲಾಗುವುದೋ ? ಅಥವಾ ಹೀಗೆಯೋ? ಮೊದಲಪಕ್ಷವು ಸರಿಯಾಗದು, ಪ್ರಪಂಚ ಮಿಥ್ಯಾತ್ವವನ್ನು ಸಾಧಿಸುವ ಪ್ರಮಾಣಗಳನ್ನು ಬೇರೆಡೆ ನಿರಾಕರಿಸಿರುವುದರಿಂದ[2]. ಅಸಾಧಾರಣ ಪ್ರಮಾಣವು ಉಪಲಬ್ಧವಾಗದಿರುವುದರಿಂದಲೂ[3]. ಎರಡನೆಯ ಪಕ್ಷವೂ (ಪ್ರಮಾಣರಹಿತವಾಗಿ ದಿಕ್‌ಗೆ ಮಿಥ್ಯಾತ್ವವನ್ನು ಒಪ್ಪುವೆವು ಎನ್ನುವ ಪಕ್ಷವು) ಸರಿಯಾಗದು, ಅತಿಪ್ರಸಂಗ ಬರುವುದರಿಂದ ಎಂದು ತಿಳಿಸುತ್ತಾರೆ. 'ವಿಜ್ಞಾನ...' ಎನ್ನುವುದರಿಂದ. ಪ್ರಮಾಣವಿಲ್ಲದೇ ಭ್ರಾಂತಿಕಲ್ಪಿತ ಎಂದು ಹೇಳಿದಲ್ಲಿ, (ಬೌದ್ಧರು) ಸತ್ಯವೆಂದು ಒಪ್ಪಿರುವ ವಿಜ್ಞಾನ ಶೂನ್ಯಗಳನ್ನೂ ಸಹ ಭ್ರಾಂತಿಕಲ್ಪಿತ ಎಂದು ಹೇಳಲು ಶಕ್ಯವಿರುವುದರಿಂದ ಅವುಗಳಿಗೂ ಸಹ ಭ್ರಾಂತಿಕಲ್ಪಿತತ್ವವನ್ನು ಆಪಾದಿಸಲಾಗುವುದು.

1. ಹಿಂದಿನ ಖಂಡದಲ್ಲಿ 'ಸೇಯಂ ದಿಕ್' ಎಂದು ಪ್ರತ್ಯಭಿಜ್ಞೆಯಲ್ಲಿ ದಿಕ್ ಎಂದು ಏಕವಚನಾಂತವಾಗಿ ಪ್ರಸಕ್ತವಾಗಿದ್ದರೂ ಎಂದು ಭಾವ.

2. 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' (2.2.29.)ಎನ್ನುವ ಬ್ರಹ್ಮಸೂತ್ರದ ಭಾಷ್ಯದಲ್ಲಿ ಎಂದು ಭಾವ.

3. ಪ್ರಪಂಚಮಿಥ್ಯಾತ್ವವಾದವನ್ನು ನಿರಾಕರಿಸಿರುವದರಿಂದ 'ಸಕಲ ಪ್ರಪಂಚವೇ ಮಿಥ್ಯಾ, ಪ್ರಪಂಚಾಂತರ್ಗತವಾದ ದಿಕ್ಕೂ ಮಿಥ್ಯಾ' ಎಂದು ವಾದಿಸಲಾಗದು. ಆದರೆ ದಿಕ್ಕಿಗೆ ಮಾತ್ರ ಭ್ರಾಂತಿಯನ್ನು ಹೇಳುವ ಪ್ರಮಾಣದಿಂದ ದಿಗ್ ಭ್ರಾಂತಿಯನ್ನು ಸಾಧಿಸುವೆವು ಎಂದೆನ್ನಲಾಗದು. ದಿಕ್ಕಿಗೆ ಮಾತ್ರ ಮಿಥ್ಯಾತ್ವವನ್ನು ಸಾಧಿಸುವ ಅಸಾಧಾರಣ ಪ್ರಮಾಣವು-ವಿಶೇಷಪ್ರಮಾಣವೂ ಉಪಲಬ್ಧವಾಗಿಲ್ಲ ಎಂದು ಭಾವ.

**ದಿಕ್ಕುಗಳು ಕಲ್ಪಿತಗಳಲ್ಲ**

**ನ ಚಾದಿತ್ಯೋದಯಾದಿನೈವ ದಿಕ್ಕಲ್ಪನಾ, ಅನ್ಧಕಾರೇಽಪಿ ದಿಗ್ ಮಾತ್ರಪ್ರತೀತೇಃ ।**

ಅಂಧಕಾರದಲ್ಲೂ ದಿಕ್ಕಿನ ಪ್ರತೀತಿಯು ಇರುವುದರಿಂದ, ಆದಿತ್ಯೋದಯ ದಿಂದಲೇ ದಿಕ್ಕಲ್ಪನೆಯು ಇಲ್ಲ.

ನನು ಯಸ್ಯ ಸ್ವರೂಪಮೇವ ಪರೋಪಾಧಿನಿಬಂಧನಂ ತನ್ಮಿಥ್ಯಾ , ಯಥಾ ಅಙ್ಗುಲ್ಯವಷ್ಟಬ್ಧನಯನೋಪಾಧಿನಿಮಿತ್ತೋಽಪರಶ್ಚಂದ್ರಮಾಃ, ಪರೋಪಾಧಿ ಕಂ ಚ ದಿಕ್‌ಸ್ವರೂಪಮ್, ಆದಿತ್ಯೋದಯಾದಿನೈವ ದಿಕ್‌ಕಲ್ಪನಾತ್ । ತತ್ಕಥಂ ದಿಶೋ ಭ್ರಾಂತಿಕಲ್ಪಿತತ್ವೇ ಪ್ರಮಾಣಾಭಾವಃ? ಇತ್ಯತ ಆಹ 'ನ ಚಾದಿತ್ಯ..' ಇತಿ । ಕುತೋ ನ? ಇತಿ ಚೇತ್ , ದಿಕ್‌ಸಾಮಾನ್ಯಸ್ವರೂಪಮಾದಿತ್ಯೋ-ದಯಾದಿಕಲ್ಪ್ಯಂ ಉತ ತದ್ವಿಶೇಷಸ್ವರೂಪಮ್? ನಾದ್ಯಃ, ಇತ್ಯಾಹ 'ಅಂಧಕಾರೇಽಪಿ...' ಇತಿ । ಪರಾಭಿಮತೋಪಾಧ್ಯಭಾವೋಪಲಕ್ಷಣಂ ಅನ್ಧಕಾರಗ್ರಹಣಮ್ । ಯದಿ ದಿಕ್‌ಸ್ವರೂಪಮೌಪಾಧಿಕಂ ಸ್ಯಾತ್ ತರ್ಹಿ ಉಪಾಧಿಂ ವಿನಾ ನೋಪಲಭ್ಯೇತ ? ನಹಿ ನಯನಸ್ಯಾಙ್ಗುಲ್ಯವಷ್ಟಮ್ಭೇನ ವಿನಾಽಪರಶ್ಚಂದ್ರಮಾ ಉಪಲಭ್ಯತೇ। ಉಪಲಭ್ಯತೇ ಚ ಉಪಾಧಿತ್ವ-ಭಿಮತಾದಿತ್ಯೋದಯಾದ್ಯಭಾವೇಽಪಿ ದಿಕ್‌ಸ್ವರೂಪಮ್ । ತತ್ಕಥಂ ತದುಪಾಧಿಕಂ ಸ್ಯಾತ್? ಅವಕಾಶ ಮಾತ್ರಂ ದಿಗುಚ್ಯತೇ । ತಚ್ಚ ಪರನಿರಪೇಕ್ಷೇಣೈವ ಸಾಕ್ಷಿಣಾ ಸರ್ವಾವಸ್ಥಾಸು ಪ್ರಾಣಭೃನ್ಮಾತ್ರಸ್ಯ ಸಿದ್ಧಮ್ । ಕಥಮನ್ಯಥಾಽನ್ಧಕಾರೇ ಕರಪ್ರಸಾರಣಮಪಿ ಕುರ್ಯುಃ ?

'ಯಾವ ವಸ್ತುವಿನ ಸ್ವರೂಪವೇ ಪರೋಪಾಧಿಯ ಅಧೀನವೋ ಅದು ಮಿಥ್ಯಾ, ಹೇಗೆ ಬೆರಳಿನಿಂದ ಅವಷ್ಟಬ್ಧವಾದ ನಯನೋಪಾಧಿಯಿಂದ ಎರಡನೇ ಚಂದ್ರನು (ಮಿಥ್ಯಾಭೂತನೋ ಹಾಗೆ)'[1]. ದಿಕ್ಕಿನ ಸ್ವರೂಪವಾದರೋ

---

1. ಕಣ್ಣನ್ನು ಬೆರಳಿನಿಂದ ತಿವಿದುಕೊಂಡು ವಸ್ತುವನ್ನು ಕಂಡಲ್ಲಿ ಇರುವ ಒಂದೇ ವಸ್ತುವು ಎರಡಾಗಿ ಕಾಣುತ್ತದೆ. ಆ ಎರಡನೆಯ ವಸ್ತುವು ಮಿಥ್ಯಾ, ಪ್ರಸಿದ್ಧವಾದ ದೃಷ್ಟಾಂತ ಎರಡನೆಯ ಚಂದ್ರ. ಹೀಗೆ ಯಾವ ವಸ್ತುವಿನ ಜ್ಞಾನವು ಔಪಾಧಿಕವಾಗುತ್ತದೋ ಅದು ಮಿಥ್ಯಾ ಎಂದು ಭಾವ.

ಪರೋಪಾಧಿಕವೇ ಆಗಿದೆ, ಸೂರ್ಯೋದಯದಿಂದಲೇ ದಿಕ್ಕಿನ ಕಲ್ಪನೆ. ಆದುದರಿಂದ 'ದಿಕ್ಕಿನ ಕಲ್ಪನೆ ಭ್ರಾಂತವಾದದ್ದು , ಎನ್ನಲು ಪ್ರಮಾಣ ಇಲ್ಲ' ಎನ್ನುವುದು ಹೇಗಾದೀತು? ಹೀಗೆ ಪ್ರಶ್ನಿಸಿದಲ್ಲಿ ಉತ್ತರಿಸುತ್ತಾರೆ '**ನ ಚಾದಿತ್ಯೋದಯಾದಿ....**' ಎಂದು. ಏಕೆ ಹಾಗೆ ಹೇಳಬಾರದು ಎಂದರೆ, ದಿಕ್‌ಸಾಮಾನ್ಯದ ಸ್ವರೂಪವನ್ನೇ ಆದಿತ್ಯೋದಯವು ಕಲ್ಪಿಸುತ್ತದೋ , ಅಥವಾ ದಿಕ್‌ವಿಶೇಷಗಳ ಸ್ವರೂಪವನ್ನೋ ? ಮೊದಲ ಪಕ್ಷ ಸರಿಯಾಗದು ಎಂದು ತಿಳಿಸುತ್ತಾರೆ. '**ಅಂಧಕಾರೇಽಪಿ**' ಎಂದು. ಬೌದ್ಧರು ಅಭಿಪ್ರೇತಿಸಿದ ಉಪಾಧಿಯ ರಾಹಿತ್ಯವನ್ನು ಉಪಲಕ್ಷಿಸಲು 'ಅಂಧಕಾರ' ಎನ್ನುವದು ಪರಿಗ್ರಹಿಸಲಾಗಿದೆ[1]. ಒಂದು ವೇಳೆ ದಿಕ್ಕಿನ ಸ್ವರೂಪವು ಔಪಾಧಿಕ ಎಂದಾದಲ್ಲಿ ಆಗ ಉಪಾಧಿಯು ಇಲ್ಲದೆ (ದಿಕ್ಕು) ಉಪಲಬ್ಧವಾಗಬಾರದು. ಕಣ್ಣಿನಲ್ಲಿ ಬೆರಳಿನ ಅವಷ್ಟಂಭವು ಇಲ್ಲದೆ ಮತ್ತೊಂದು ಚಂದ್ರನು ಕಾಣಲಾರದು. ಆದರೆ (ಅಂಧಕಾರದಲ್ಲಿ) ಉಪಾಧಿಯೆಂದು ಭಾವಿಸಿದ ಸೂರ್ಯೋದಯವು ಇಲ್ಲದಿದ್ದರೂ ಸಹ ದಿಕ್ಕಿನ ಸ್ವರೂಪವು ಉಪಲಬ್ಧವಾಗಿದೆ. ಆದುದರಿಂದ ಅದು (ಸೂರ್ಯೋದಯವು)ಹೇಗೆ (ದಿಕ್ಕಿನ ಸ್ವರೂಪಜ್ಞಾನಕ್ಕೆ) ಉಪಾಧಿಯಾದೀತು? ಆಕಾಶವನ್ನೇ 'ದಿಕ್' ಎಂದು ಕರೆಯಲಾಗಿದೆ. ಆ ಆಕಾಶವಾದರೋ, ಮತ್ತೊಂದರ ಆಪೇಕ್ಷೆ ಇಲ್ಲದೆ, ಸಾಕ್ಷಿಯಿಂದಲೇ ಎಲ್ಲ ಸಂದರ್ಭಗಳಲ್ಲೂ ಪ್ರಾಣಿ ಸಾಮಾನ್ಯಕ್ಕೆ ಸಿದ್ಧವಾಗಿದೆ. ಹಾಗಾಗದ ಪಕ್ಷದಲ್ಲಿ (ಪ್ರಾಣಿಸಾಮಾನ್ಯಕ್ಕೆ ಅನ್ಯನಿರಪೇಕ್ಷವಾಗಿ ಆಕಾಶದ ಗ್ರಹಣವಾಗದ ಪಕ್ಷದಲ್ಲಿ) ಕಗ್ಗತ್ತಲೆಯಲ್ಲೂ ಕೈ ಚಾಚುವುದನ್ನು ಹೇಗೆ ಮಾಡಲಾಗುವುದು[2]?

---

1. ಬೌದ್ಧರು 'ಸೂರ್ಯೋದಯವು ದಿಕ್ಕಿನ ಕಲ್ಪನೆಗೆ ಉಪಾಧಿ' ಎಂದು ಅಭಿಮತಿಸಿರುವರು. 'ಅಂಧಕಾರದಲ್ಲಿ ಬೌದ್ಧರು ಅಭಿಮತಿಸಿದ ಸೂರ್ಯೋದಯರೂಪವಾದ ಉಪಾಧಿಯು ಇಲ್ಲ' ಎಂದು ತಿಳಿಸಲು ಮೂಲದಲ್ಲಿ 'ಅಂಧಕಾರದಲ್ಲಿ' ಎಂದು ತಿಳಿಸಿರುವರು ಎಂದು ಭಾವ.

2. ಪ್ರಾಣಿ ಸಾಮಾನ್ಯವು ಕಗ್ಗತ್ತಲೆಯಂತಹ ಸಂದರ್ಭದಲ್ಲಿಯೂ ಸಹ ಕೈ ಕಾಲುಗಳನ್ನು ಚಾಚುವುದು ಮುಂತಾದ ಕ್ರಿಯೆಗಳನ್ನು ನಡೆಸುತ್ತದೆ. ತಮ್ಮ ಸುತ್ತಲೂ ಆಕಾಶದ (ಅವಕಾಶದ) ಜ್ಞಾನವಿಲ್ಲದೇ ಹೋದಲ್ಲಿ ಇಂತಹ ಚೇಷ್ಟೆಗಳನ್ನು ಜೀವಿಗಳು ಮಾಡದೇ ಹೋಬೇಕಾದೀತು. ಸೂರ್ಯೋದಯವನ್ನು ಕಾಣುವವನು ಕಾಣುವ ಸಾಮರ್ಥ್ಯವು ಇಲ್ಲದ ಕುರುಡನೂ ಎಲ್ಲರಿಗೂ ಸಹ ತಮ್ಮ ಸುತ್ತಲಿನ ಅವಕಾಶದ ಅರಿವು ಇರುವುದರಿಂದ ಆಕಾಶದಿಂದ ಅಭಿನ್ನವಾದ ದಿಕ್ಕಿನ ಅರಿವು ಇದೆ, ಅದು ನಿರುಪಾಧಿಕವಾದದ್ದು ಎಂದು ಸಿದ್ಧವಾಗುವುದು ಎಂದು ಭಾವ.

**ದ್ವಿತೀಯೇಽಪಿ ಕಿಂ ದಿಗ್ವಿಶೇಷಸ್ವರೂಪಮಾತ್ರಮಾದಿತ್ಯೋದಯಾದಿನಾ ಕಲ್ಪ್ಯಮ್? ಉತ ತದೀಯಂ ಪ್ರಾಚ್ಯಾದಿತ್ವಮ್? ತತ್ರಾಽದ್ಯಸ್ಯೈತದೇವೋತ್ತರಂ 'ಅನ್ಧಕಾರೇಽಪಿ' ಇತಿ । ಅವಕಾಶಭಾಗಾ ಏವ ಹಿ ದಿಗ್ವಿಶೇಷಾಃ। ತೇಽಪ್ಯಾದಿತ್ಯೋದಯಾದಿನಿರಪೇಕ್ಷೇಣ ಸಾಕ್ಷಿಣೈವ ಪ್ರತೀಯನ್ತೇ । ಕಥಮನ್ಯಥಾ ತದಭಾವೇಽಪಿ ಮೂರ್ತಾನ್ತರಾವಷ್ಟಬ್ಧಾಕಾಶಭಾಗಪರಿತ್ಯಾಗೇನ ಭಾಗಾನ್ತರೇ ಕರಪ್ರಸರಣಾದಿಕಂ ಕ್ರಿಯತೇ ? ನ ಚ ಭಾಗಾನಾಮೌಪಾಧಿಕತ್ವಂ, ಸ್ವತೋ ನಿರ್ಭಾಗಸ್ಯೋಪಾಧಿನಾಽಪಿ ಸಂಬನ್ಧಾಭಾವಾತ್ । ಪ್ರಾಚ್ಯಾದಿತ್ವಂ ಚ ಯದಿ ತತ್ ಸ್ವಲಕ್ಷಣಂ ತದಾ ಏತದೇವೋತ್ತರಮ್ 'ಅಂಧಕಾರೇಽಪಿ' ಇತಿ । ಅಥ ಪ್ರಾಚ್ಯಾದಿ ಶಬ್ದವಾಚ್ಯತ್ವಂ ತದಪಿ ಶಬ್ದಾರ್ಥಸಂಬನ್ಧಸ್ಯೌತ್ಪತ್ತಿಕತ್ವೇನ ನ ಕಾಲ್ಪನಿಕಮ್ ।**

ಎರಡನೆಯ ಪಕ್ಷದಲ್ಲೂ ಸಹ (ದಿಕ್‌ವಿಶೇಷದ ಸ್ವರೂಪವು ಕಾಲ್ಪನಿಕ ಎನ್ನುವ ಪಕ್ಷದಲ್ಲಿ) ದಿಕ್ಕಿನ ವಿಶೇಷದ ಸ್ವರೂಪವೇ ಸೂರ್ಯೋದಯಾದಿಗಳಿಂದ ಕಲ್ಪಿತವಾದದ್ದೋ ಅಥವಾ ಅದಕ್ಕೆ ಸಂಬಂಧಿಸಿದ ಪೂರ್ವತ್ವಾದಿಗಳೋ[1]? ಇವುಗಳಲ್ಲಿ ಮೊದಲಪಕ್ಷಕ್ಕೆ ಅದೇ ಉತ್ತರ 'ಅಂಧಕಾರೇಽಪಿ' ಎಂದು. ದಿಗ್ವಿಶೇಷಗಳು ಎಂದರೆ ಅವಕಾಶದ ಭಾಗಗಳೇ. ಅವಾದರೋ ಸೂರ್ಯೋದಯಾದಿಗಳನ್ನು ಅಪೇಕ್ಷಿಸದೇ ಸಾಕ್ಷಿಯಿಂದಲೇ ತೋರುವವು. ಹಾಗಾಗದ ಪಕ್ಷದಲ್ಲಿ, ಸೂರ್ಯೋದಯಾದಿಗಳು ಇಲ್ಲದ ಸಂದರ್ಭದಲ್ಲೂ ಸಹ, ಬೇರೆಯ ಘನ ಪದಾರ್ಥಗಳಿಂದ ಆಕ್ರಮಿತವಾದ ಆಕಾಶವನ್ನು ಪರಿತ್ಯಜಿಸಿ ಭಾಗಾಂತರದಲ್ಲಿ ಕರಪ್ರಸರಣಾದಿಗಳನ್ನು ಹೇಗೆ ಮಾಡಲಾಗುವುದು[2]?

---

1. ಸೂರ್ಯೋದಯಾದಿಗಳಿಂದ ಹಿಂದೆ ಇಲ್ಲದ ವೈಶಿಷ್ಟ್ಯವೇ ದಿಕ್ಕಿನಲ್ಲಿ ಪ್ರಾಪ್ತವಾಗುವುದೋ ಅಥವಾ ದಿಗ್ವಿಶೇಷದಲ್ಲಿ ಪ್ರಾಚೀತ್ವ, ಉದೀಚೀತ್ವ ಈ ಮುಂತಾದ ಧರ್ಮಗಳು ಕಲ್ಪಿತವಾಗುವುವೋ ಎಂಬುವುದು ವಿಕಲ್ಪದ ಭಾವ.

2. ಕತ್ತಲೆಯ ಸಂದರ್ಭದಲ್ಲಿ ಕಣ್ಣಿದ್ದವರು, ಅಂಧನು ಎಲ್ಲ ಸಂದರ್ಭದಲ್ಲೂ ಗೋಡೆ ಮುಂತಾದ ಪದಾರ್ಥಗಳು ಅಡ್ಡಲಾದಾಗ ಎಡ-ಬಲ ಮುಂತಾದ ಭಾಗಗಳಲ್ಲಿ ತಮ್ಮ ಚಲನೆ ಮುಂತಾದ ವ್ಯಾಪಾರಗಳನ್ನು ನಡೆಸುವರು. ಇದರಿಂದ ಅವರಿಗೆ ಅವಕಾಶ ವಿಶೇಷಗಳು ಇವೆ ಎನ್ನುವದು ಮತ್ತೊಂದು ಉಪಾಧಿಯ ಅಪೇಕ್ಷೆಯಿಲ್ಲದೆ ಭಾಸವಾಗಿದೆ ಎಂದು ತಿಳಿಯುವುದು ಎಂದು ಭಾವ.

(ದಿಕ್ಕಿನಲ್ಲಿ ತೋರುವ) ವಿಭಾಗಗಳನ್ನು ಉಪಾಧಿಯಿಂದ ಕಲ್ಪಿತ (ಆದುದರಿಂದ ದಿಗ್ವಿಶೇಷಗಳು ಮಿಥ್ಯಾ) ಎಂದು ಹೇಳಲಾಗದು[1]. ಸ್ವತಃ ನಿರ್ಭಾಗವಾದುದಕ್ಕೆ (ಆಕಾಶಕ್ಕೆ) ಉಪಾಧಿಯಿಂದ ಸಂಬಂಧವಾಗಲಾರದು ಆದುದರಿಂದ[2]. ಒಂದು ವೇಳೆ ಪ್ರಾಚೀತ್ವಾದಿಗಳು ಸಹ ದಿಕ್ಕಿನ ಒಂದು ಭಾಗದ ಸ್ವರೂಪವೇ ಎಂದಾದಲ್ಲಿ ಅದೇ (ಹಿಂದಿನದೇ) ಉತ್ತರ **'ಅಂಧಕಾರೇಽಪಿ'** ಎಂದು[3]. ಇನ್ನು ಪ್ರಾಚ್ಯಾದಿ

---

1. ದಿಕ್ಕು ಅಖಂಡವಾದದ್ದು, ಆದುದರಿಂದ ಅಲ್ಲಿ ತೋರುವ ಎಡ-ಬಲ ಮುಂತಾದ ವಿಭಾಗವಿಶೇಷವು ಉಪಾಧಿಕಲ್ಪಿತವಾದುದ್ದು ಎಂದು ಸಂದೇಹಿಸಲಾಗದು ಎಂದು ಭಾವ.

2. ವಸ್ತ್ರದಲ್ಲಿ ಮೊದಲು ಭಾಗವಿರುತ್ತದೆ. ಆದ್ದರಿಂದಲೇ ತುದಿಗೂ ಸೆರಗಿಗೂ ಬಣ್ಣವನ್ನು ಲೇಪ ಮಾಡುವರು. ಬಣ್ಣದ ಲೇಪದಿಂದ ಇದ್ದ ಭಾಗವು ಪ್ರಕಟವಾಗುವುದು. ನಿರ್ಭಾಗವಾದ ಆಕಾಶಕ್ಕೆ ಉಪಾಧಿಯ ಸಂಬಂಧವನ್ನು ಹೇಳಲಾಗದು. ಉಪಾಧಿಯ ಸಂಬಂಧವಿಲ್ಲದೇ ಹೋದಲ್ಲಿ, ಔಪಾಧಿಕವಿಭಾಗವನ್ನು ಕಲ್ಪಿಸಲು ಶಕ್ಯವಿಲ್ಲ. ಸಮಗ್ರಾಕಾಶಕ್ಕೆ ಉಪಾಧಿ ಸಂಬಂಧವಾದಲ್ಲಿ ಅದು ವಿಭಾಗದ ಜ್ಞಾನಕ್ಕೆ ಕಾರಣವಾಗಲಾರದು. ಸಮಗ್ರವಸ್ತ್ರಕ್ಕೆ ಬಣ್ಣವನ್ನು ಬಳಿದಲ್ಲಿ ಅಂಚು, ಸೆರಗು ಇತ್ಯಾದಿ ವಿಭಾಗಜ್ಞಾನಕ್ಕೆ ಅದು ಹೇಗೆ ಸಹಕಾರಿಯಾಗದೋ ಹಾಗೆ. ಆದುದರಿಂದ ದಿಗ್ವಿಶೇಷವನ್ನು ಮಿಥ್ಯಾ ಎಂದು ಹೇಳಲಾಗದು ಎಂದು ಭಾವ.

3. ಪ್ರಸಕ್ತ ಪ್ರಬಂಧದಲ್ಲಿ, ದಿಕ್ ಕಲ್ಪಿತ ಎಂದು ಬೌದ್ಧರು ಆಶಂಕಿಸಿದಾಗ ಬೌದ್ಧರನ್ನು ಪ್ರಶ್ನಿಸಲಾಯಿತು- ದಿಕ್‌ಸಾಮಾನ್ಯವೇ ಕಲ್ಪಿತವೋ, ಅಥವಾ ದಿಗ್ವಿಶೇಷವೋ? ಎಂದು. ಮೊದಲಪಕ್ಷವನ್ನು ವಿಮರ್ಶಿಸಿ, ಎರಡನೆಯ ಪಕ್ಷವನ್ನು ವಿಮರ್ಶಿಸುತ್ತಾ ಎರಡನೆಯ ಪಕ್ಷದಲ್ಲಿ ಪುನಃ ವಿಕಲ್ಪಿಸುವರು ದಿಕ್ಕಿನ ವಿಶೇಷದ ಸ್ವರೂಪವೇ ಸೂರ್ಯೋದಯಾದಿಗಳಿಂದ ಕಲ್ಪಿತವಾದದ್ದೋ ಅಥವಾ ಅದಕ್ಕೆ ಸಂಬಂಧಿಸಿದ ಪೂರ್ವತ್ವಾದಿಗಳೋ? ಎಂದು ವಿಕಲ್ಪಿಸಿ, ಉಪಾಧಿಯಾದ ಸೂರ್ಯೋದಯವು ಇಲ್ಲದ ಅಂಧಕಾರದ ಸಂದರ್ಭದಲ್ಲೂ ಸಹ ದಿಗ್ವಿಶೇಷದ ಅರಿವು ಇರುವದರಿಂದ ಕಲ್ಪಿತ ಎನ್ನುವುದು ತರವಲ್ಲ ಎಂದು ಉತ್ತರಿಸಲಾಗಿದೆ. ಪ್ರಕೃತ 'ದಿಕ್ಕಿನಲ್ಲಿ ತೋರುವ ಪ್ರಾಚೀತ್ವ ,ಪ್ರತೀಚೀತ್ವ ಮುಂತಾದವು ಕಲ್ಪಿತ' ಎನ್ನುವ ಎರಡನೇ ವಿಕಲ್ಪದ ಎರಡನೆಯ ಪಕ್ಷವನ್ನು ಪುನಃ ವಿಭಜಿಸಿ ಪ್ರಶ್ನಿಸುತ್ತಿರುವರು. ಕಲ್ಪಿತವಾದ ಪ್ರಾಚೀತ್ವವು ದಿಗ್ಭಾಗದ ಸ್ವರೂಪವೇ ಕಲ್ಪಿತವೋ ಅಥವಾ ಈ ದಿಗ್ವಿಶೇಷಗಳಲ್ಲಿ ರುವ ಪ್ರಾಚೀ ಮುಂತಾದ ಶಬ್ದವಾಚ್ಯತ್ವ ವು ಕಲ್ಪಿತ ಎಂದೋ? ಎಂದು . ಮೊದಲ ಪಕ್ಷವನ್ನು ಒಪ್ಪಿದಲ್ಲಿ ಉತ್ತರಿಸಿವರು. 'ಅಂಧಕಾರದಲ್ಲೂ ಸಹ 'ಇದು ಪ್ರಾಚೀ, ಪ್ರತೀಚೀ ಎಂಬ ಅರಿವಿರುತ್ತದೆ. ಆಗ ಕಲ್ಪಕವಾದ ಸೂರ್ಯೋದಯಾದಿ ಉಪಾಧಿಯು ಇರುವುದಿಲ್ಲ, ಆದುದರಿಂದ ಆಗ ಪ್ರಾಚ್ಯಾದಿಗಳು ತೋರದೆ ಇರಬೇಕಿತ್ತು' ಎಂದು.

ಶಬ್ದವಾಚ್ಯತ್ವವೂ ಸಹ ಕಲ್ಪಿತ ಎಂದು ಹೇಳಲಾಗದು, ಶಬ್ದಾರ್ಥಗಳ ಸಂಬಂಧವು ಔತ್ಪತ್ತಿಕವಾದುದರಿಂದ (ಸ್ವಾಭಾವಿಕವಾದುದರಿಂದ) ಕಲ್ಪಿತವಲ್ಲ.[1]

**ಸೂರ್ಯೋದಯದ ನಿರೀಕ್ಷೆಯು ದಿಗಂತರಭ್ರಾಂತಿಯ ನಿವಾರಣೆಗಾಗಿ**

**ಕಾದಾಚಿತ್ಕಭ್ರಾನ್ತಿರೇವಾದಿತ್ಯೋದಯಾದಿದರ್ಶನಾನ್ನಿವರ್ತತೇ । ಸಾ ಚ ವಿಜ್ಞಾನಶೂನ್ಯಯೋರಪಿ ಭವತೀತಿ ತೇಷಾಂ ಮತಂ ವಾದಿವಿಪ್ರತಿಪತ್ತೇಃ । ಅತೋ ದಿಶಃ ಸ್ಥಿರಾ ಏವೇತಿ ಸಿಧ್ಯತಿ ಶೂನ್ಯವದೇವ ।**

ಕೆಲವೊಮ್ಮೆ (ದಿಕ್ಕಿನ ವಿಷಯದಲ್ಲಿ ಪ್ರಾಪ್ತವಾದ) ಭ್ರಾಂತಿಯು ಆದಿತ್ಯೋದಯದಿಂದ ನಿವಾರಿತವಾಗುವುದು. ಅದಾದರೋ (ಭ್ರಾಂತಿಯ ನಿವಾರಣೆಯಾದರೋ) ವಿಜ್ಞಾನಶೂನ್ಯಗಳ ವಿಷಯದಲ್ಲೂ ಇದೆ, ಏಕೆಂದರೆ ಅವರ (ಬೌದ್ಧರ) ಸಿದ್ಧಾಂತದ ವಿಷಯದಲ್ಲಿ ವಾದಿಗಳಲ್ಲಿ ವಿವಾದವು ಇರುವುದರಿಂದ. ಅದುದರಿಂದ ಶೂನ್ಯದಂತೆ ದಿಕ್ಕು ಸ್ಥಿರ ಎಂದೇ ಸಿದ್ಧವಾಗುವುದು.

ಏವಂ ತರ್ಹಿ, ದಿಕ್ಪ್ರತೀತ್ಯರ್ಥಿನಃ ಕಿಮಿತ್ಯಾದಿತ್ಯೋದಯಾದಿಕಂ ಪ್ರತೀಕ್ಷನ್ತೇ? ಇತ್ಯತ ಆಹ **'ಕಾದಾಚಿತ್ಕ..'** ಇತಿ । ದಿಕ್ಸ್ವರೂಪ-ತದ್ವಿಶೇಷಯೋಃ ಸಿದ್ಧತ್ವೇಽಪಿ ದಿಗನ್ತರೇ ದಿಗನ್ತರತ್ವಭ್ರಾನ್ತಿಂ ನಿವರ್ತಯಿತು-ಮೇವ ತತ್ಪ್ರತೀಕ್ಷಣಮ್ । ಸಾ ಚ ಭ್ರಾನ್ತಿರಪಿ ನ ಸರ್ವದಾ । ಅತಸ್ತತ್-ಪ್ರತೀಕ್ಷಣಮಪಿ ನ ಸರ್ವದೇತಿ ಸೂಚಯಿತುಂ **'ಕಾದಾಚಿತ್ಕ...'** ಇತ್ಯುಕ್ತಮ್ । ತೇನ ದಿಕ್ಪ್ರತೀತೌ ಆದಿತ್ಯೋದಯಾದ್ಯಪೇಕ್ಷಾಭಾವಃ ಸ್ಪಷ್ಟೀಕೃತೋ ಭವತಿ । ಅನೇನ ಪ್ರಾಚ್ಯಾದಿಶಬ್ದವ್ಯುತ್ಪತ್ತೌ ಆದಿತ್ಯೋ-ದಯಾದೀನಾಮುಪಲಕ್ಷಣತ್ವೇನೋಪಾತ್ತತ್ವಾತ್ ತದರ್ಥಮುಪಯೋಗ ಇತಿ ಸೂಚಿತಮ್ । ದಿಗನ್ತರೇ ದಿಗನ್ತರಭ್ರಮಸ್ಯ ತದ್ವಿಷಯತ್ವಾತ್ ।

1. ಟೀಕೆಯಲ್ಲಿ ಪ್ರಯೋಗಿಸಲಾದ 'ಔತ್ಪತ್ತಿಕ' ಶಬ್ದದ ಅರ್ಥ-'ಶಬ್ದ ಮತ್ತು ಪದಾರ್ಥಗಳ ಸಂಬಂದವನ್ನು ನಿತ್ಯ' ಎಂದು ತಿಳಿಸುವ ಜೈಮಿನಿಗಳ ಸೂತ್ರವು 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ' ಎಂಬುವುದು.ಇಲ್ಲಿ ಔತ್ಪತ್ತಿಕ ಎಂಬ ಶಬ್ದವನ್ನು ಸ್ವಾಭಾವಿಕ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ಈ ಸೂತ್ರಸ್ಥ ಶಬ್ದವನ್ನೇ ಟೀಕೆಯಲ್ಲಿ ಬಳಸಲಾಗಿದೆ ಎಂದು ತಿಳಿಯುವುದು.

ಹಾಗಾದಲ್ಲಿ (ಆದಿತ್ಯೋದಯಾದಿಗಳಿಂದ ದಿಕ್ಕಿನ ಕಲ್ಪನೆಯು ಇಲ್ಲ ಎಂದಾದಲ್ಲಿ) ದಿಕ್ಕಿನ ಅರಿವನ್ನು ಬಯಸುವವನು ಏತಕ್ಕಾಗಿ ಸೂರ್ಯೋದಯಾದಿಗಳನ್ನು ನಿರೀಕ್ಷಿಸುತ್ತಾನೆ ? ಆದುದರಿಂದ ಉತ್ತರಿಸುತ್ತಾರೆ **'ಕಾದಾಚಿತ್.....'** ಎಂದು. ದಿಕ್ ಮತ್ತು ಆದರ ವಿಶೇಷಗಳು ಸಿದ್ಧವಾಗಿದ್ದರೂ ಒಂದು ದಿಕ್ಕಿನಲ್ಲಿ ಮತ್ತೊಂದು ದಿಕ್ಕಿನ ಭ್ರಾಂತಿಯನ್ನು ನಿವಾರಿಸಿಕೊಳ್ಳಲು ಮಾತ್ರ ಸೂರ್ಯೋದಯದ ಪ್ರತೀಕ್ಷೆ. 'ಆ ಭ್ರಾಂತಿಯಾದರೋ ಯಾವಾಗಲೂ ಇರದು. ಆದುದರಿಂದ ಸೂರ್ಯೋದಯದ ನಿರೀಕ್ಷೆಯು ಸಹ ಯಾವಾಗಲೂ ಇರದು' ಎಂದು ಸೂಚಿಸಲು **'ಕಾದಾಚಿತ್ಕ..'** ಎಂದು ಹೇಳಲಾಗಿದೆ. ಹೀಗೆ (ಭ್ರಾಂತಿ ನಿವೃತ್ತಿಗಾಗಿ ಮಾತ್ರ ಆದಿತ್ಯೋದಯವನ್ನು ನಿರೀಕ್ಷಿಸಲಾಗುವುದು ಎಂದು ಪ್ರತಿಪಾದಿಸಿದ್ದರಿಂದ) ದಿಕ್ಕಿನ ಅರಿವಿಗೆ ಸೂರ್ಯೋದಯದ ಅಪೇಕ್ಷೆಯಿಲ್ಲ ಎನ್ನುವುದನ್ನು ಸ್ಫುಟಗೊಳಿಸಿದಂತಾಯಿತು. ಹೀಗೆ ಉಪಪಾದಿಸಿದ್ದರಿಂದ, ಪ್ರಾಚ್ಯಾದಿ ಶಬ್ದದ ವ್ಯುತ್ಪತ್ತಿಗೆ (ದಿಗ್ವಿಶೇಷವನ್ನು ಪೂರ್ವ ಮುಂತಾದ ಶಬ್ದದಿಂದ ವ್ಯವಹರಿಸಲು) ಆದಿತ್ಯೋದಯಾದಿಗಳನ್ನು ಉಪಲಕ್ಷಣವಾಗಿ ಸ್ವೀಕರಿಸಿದ್ದರಿಂದ, ಅದಕ್ಕಾಗಿ (ದಿಗಂತರ ಭ್ರಾಂತಿ ನಿವೃತ್ತಿಗಾಗಿ) ಮಾತ್ರ ಉಪಯೋಗ ಎನ್ನುವುದನ್ನು ಸೂಚಿಸಿದಂತಾಯಿತು. ದಿಗಂತರದಲ್ಲಿ ದಿಗಂತರ ಭ್ರಮೆಗೆ ಆದು (ಸೂರ್ಯೋದಯವು) ವಿಷಯವಾದುದರಿಂದ[1].

---

1. ಎರಡು ಪಶುಗಳು ನಿಂತಿರುತ್ತವೆ, ಅದರಲ್ಲಿ ಹಸುವು ಯಾವುದು ? ಯಾವುದನ್ನು ಗೋ ಶಬ್ದದಿಂದ ವ್ಯವಹರಿಸಬೇಕು? ಎಂಬ ಸಂದೇಹ ಬಂದಾಗ 'ಸಾಸ್ನಾದಿಗಳನ್ನು ಹೊಂದಿರುವುದನ್ನು ಗೋವು ಎಂಬ ಶಬ್ದದಿಂದ ವ್ಯವಹರಿಸುವುದು' ಎಂದು ತಿಳಿದವರು ಹೇಳುತ್ತಾರೆ. ಆದುದರಿಂದ ಗೋಶಬ್ದದ ವ್ಯುತ್ಪತ್ತಿಗೆ ಸಾಸ್ನಾದಿಮತ್ತ್ವವು ಕಾರಣ. ಪ್ರಕೃತದಲ್ಲಿ ದಿಗಂತರದಲ್ಲಿ ದಿಗಂತರ ಭ್ರಾಂತಿ ಬಂದಾಗ 'ಇದು ಪ್ರಾಚೀ' ಎಂಬ ವ್ಯುತ್ಪತ್ತಿಗೆ ಅಥವಾ ಇದು ಪ್ರತೀಚಿಯಲ್ಲ ಎಂಬ ವ್ಯವಹಾರಕ್ಕೆ ಆದಿತ್ಯೋದಯವು ಹೇಗೆ ಕಾರಣವಾಗುವುದು ? ಆದಿತ್ಯೋದಯವು ಗೋವಿನಲ್ಲಿನ ಸಾಸ್ನಾದಂತೆ ವಸ್ತುವಿರುವ ಪರ್ಯಂತ ಇರುವ ವಿಶೇಷಣವಲ್ಲ ತಾನೆ ? ಆದುದರಿಂದ ಆದು ದಿಗ್‌ವಿಶೇಷದ ವ್ಯವಹಾರಕ್ಕೆ-ವ್ಯುತ್ಪತ್ತಿಗೆ ಕಾರಣವಲ್ಲ ಎನ್ನುವಂತಿಲ್ಲ. ವ್ಯುತ್ಪತ್ತಿ ಬರಲು ಎರಡು ವಿಧ ಸಾಮಗ್ರಿಗಳು ಕಾರಣ. ಒಂದು ಸಾಸ್ನಾದಂತೆ ವಸ್ತುವಿರುವ ಪರ್ಯಂತ ಇರುವ ವಿಶೇಷಣ, ಇದನ್ನು 'ಯಾವ್ದದ್‌ದ್ರವ್ಯ ಭಾವಿ' ಎನ್ನುತ್ತಾರೆ ಶಾಸ್ತ್ರದಲ್ಲಿ. ಮತ್ತೊಂದು ಉಪಲಕ್ಷಕ, ಅಂದರೆ ವಸ್ತುವಿನೊಡನೆ ನಿರಂತರ

ಪುಟ 212ರಲ್ಲಿ........

...... ಪುಟ 211 ರಿಂದ

ಸಂಬಧವನ್ನು ಹೊಂದಿರುವುದಿಲ್ಲ. ಉದಾಹರಣಗೆ ದೇವದತ್ತನ ಮನೆ ಯಾವುದು? ಎಂಬ ಸಂದೇಹವು ಇದ್ದಾಗ ತಿಳಿದವರು ಹೇಳುತ್ತಾರೆ 'ಕೆಂಪು ಬಣ್ಣದ ಮನೆ ದೇವದತ್ತನ ಮನೆ' ಎಂದು. ಮನೆ ಇರುವ ಪರ್ಯಂತ ಕೆಂಪು ಬಣ್ಣ ಇರುತ್ತದೆ ಎನ್ನಲಾಗದು ಕಾಲಾಂತರದಲ್ಲಿ ಬೇರೆಯ ಬಣ್ಣವನ್ನು ಆ ಮನೆಯು ಹೊಂದಬಹುದು. ಮತ್ತು ದೇವದತ್ತನ ಮನೆ ಮಾತ್ರ ಕೆಂಪುಬಣ್ಣವನ್ನು ಹೊಂದಿರಬೇಕೆಂದಿಲ್ಲ. ಆದರೂ ಅದು 'ಇದು ದೇವದತ್ತನ ಮನೆ' ಎಂದು ವ್ಯವಹರಿಸಲು-ವ್ಯುತ್ಪತ್ತಿಗೆ ಕಾರಣವಾಗಿದೆ. ಪಕೃತ ಸೂರ್ಯೋದಯವು ದಿಕ್ಕಿನೊಡನೆ ನಿರಂತರ ಸಂಬಂಧವನ್ನು ಹೊಂದದಿದ್ದರೂ ಕೆಲವೇ ಸಂದರ್ಭದಲ್ಲಿ ಸಂಬಂಧವನ್ನು ಹೊಂದಿದ್ದರೂ 'ಇದು ಪ್ರಾಚೀ' ಎನ್ನುವ ವ್ಯವಹಾರಕ್ಕೆ-ವ್ಯುತ್ಪತ್ತಿಗೆ ಕಾರಣವಾಗಿದೆ. ಈ ಅಬಿಪ್ರಾಯವನ್ನು ಸೂಚಿಸಲು ಟೀಕಾದಲ್ಲಿ 'ಉಪಲಕ್ಷಣತ್ವೇನೋಪಾತ್ತತ್ವಾತ್' ಎಂದು ತಿಳಿಸಿರುತ್ತಾರೆ.

ಸರಿ ಆದರೆ, ಇದು ಪ್ರಾಚಿಯೋ ಪ್ರತೀಚಿಯೋ ಎಂಬ ಸಂಶಯ ಬಂದಾಗ, ಅಥವಾ ಪ್ರಾಚಿಯಲ್ಲಿ ಪ್ರತೀಚಿಯ ಭ್ರಮೆಯು ಬಂದಾಗ ಇದರ ನಿವೃತ್ತಿಗಾಗಿ ಆದಿತ್ಯೋದಯವು ಕಾರಣವಾಗುವುದೇ ಹೊರತು 'ಇಯಂ ಪ್ರಾಚೀ' ಎಂಬ ವ್ಯುತ್ಪತ್ತಿಗೆ ಕಾರಣವಲ್ಲ. ಭ್ರಮಾ ನಿವೃತ್ತಕವಾದದನ್ನು ವ್ಯುತ್ಪತ್ತಿಗೆ ಕಾರಣ ಎಂದು ಒಪ್ಪಿದಲ್ಲಿ 'ಇದಂ ರಜತಂ' ಎಂಬ ಭ್ರಮೆಯ ನಿವೃತ್ತಿಗೆ ಕಾರಣವಾದದ್ದು 'ನಾತ್ರ ರಜತಂ' ಎಂಬ ಜ್ಞಾನ. ರಜತಾಭಾವ ಜ್ಞಾನವನ್ನು ಶುಕ್ತಿ ಶಬ್ದದ ಪ್ರವೃತ್ತಿಯಲ್ಲಿ (ಶುಕ್ತಿ ಶಬ್ದದಿಂದ ಶುಕ್ತಿಯನ್ನು ವ್ಯವಹರಿಸಲು)ನಿಮಿತ್ತ ಎಂದು ಒಪ್ಪಿದಲ್ಲಿ ಘಟಾದಿಗಳಲ್ಲೂ ಈ (ರಜತಾಭಾವದ) ಜ್ಞಾನವಿರುವುದರಿಂದ, ಘಟಾದಿಗಳನ್ನು 'ಶುಕ್ತಿ' ಎಂಬ ಶಬ್ದದಿಂದ ವ್ಯವಹರಿಸಬೇಕಾದೀತು. ಆದುದರಿಂದ ಆದಿತ್ಯೋದಯವು 'ಇಯಂ ಪ್ರಾಚೀ' ಎಂಬ ವ್ಯವಹಾರಕ್ಕೆ-ವ್ಯುತ್ಪತ್ತಿಗೆ ಕಾರಣವಲ್ಲ. ಹೀಗಾಗಿ ಟೀಕಾದಲ್ಲಿ ಆದಿತ್ಯೋದಯವು ಉಪಲಕ್ಷಣತಯಾ ವ್ಯುತ್ಪತ್ತಿಗೆ ಕಾರಣ ಎಂದದ್ದು ತಪ್ಪಲ್ಲವೆ ? ಎಂಬ ಸಂದೇಹಕ್ಕೆ ಉತ್ತರಿಸುತ್ತಾರೆ- 'ದಿಗಂತರೇ' ಎಂದು. 'ದಿಗಂತರದಲ್ಲಿ ದಿಗಂತರಭ್ರಾಂತಿ' ಎಂದರೆ 'ಈ ದಿಕ್ಕಿನಲ್ಲಿ ಸೂರ್ಯೋದಯವಾಗುವುದು' ಎನ್ನುವ ಭ್ರಾಂತಿ ಎಂದು ಭಾವ. ಆದಿತ್ಯೋದಯವು ಈ ರೀತಿಯ ಭ್ರಾಂತಿಯ ನಿವಾರಕ. 'ಈ ಮನೆಯ ಎದರು ಭಾಗದಲ್ಲಿ ಸೂರ್ಯೋದಯವು ಆಗುವುದು, ಆದುದರಿಂದ ಈ ದಿಕ್ಕು ಪೂರ್ವ' ಎಂದು ರಾತ್ರಿಕಾಲದಲ್ಲಿ ಭ್ರಾಂತನಾದವಗೆ , ಪ್ರಾತಃಕಾಲದಲ್ಲಿ ಮನೆಯ ಹಿಂಭಾಗದಲ್ಲಿ ಸೂರ್ಯೋದಯವನ್ನು ಕಂಡಾಗ ದಿಗ್ಭ್ರಾಂತಿಯು ನಿವೃತ್ತಿಯಾಗುವುದು. ಆದುದರಿಂದ ಭ್ರಾಂತಿಗೆ ವಿಷಯ ಮುಖ್ಯವಾಗಿ ದಿಕ್ ಅಲ್ಲ ಸೂರ್ಯೋದಯವು ಯಾವ ದಿಗ್ಭಾಗದಲ್ಲಿ ಎನ್ನುವುದು ಎಂದು ತಿಳಿಸಲಾಗಿದೆ. ಗವಾದಿಗಳಲ್ಲಿ ಸಾಸ್ನಾದಿ ಇರುವಂತೆ ನಿರಂತರ ಪೂರ್ವದಿಕ್ಕಿನಲ್ಲಿ ಸೂರ್ಯೋದಯವು ಇಲ್ಲದಿದ್ದರೂ, ರಕ್ತವರ್ಣಾದಿಗಳು 'ಇದು ದೇವದತ್ತನ ಮನೆ' ಎಂದು ವ್ಯವಹರಿಸಲು ಕಾರಣವಾಗುವಂತೆ, ಇದೂ ಸಹ 'ಪ್ರಾಚೀ' ಇತ್ಯಾದಿ ವ್ಯವಹಾರಕ್ಕೆ ಕಾರಣವಾಗಿದೆ ಎಂದು ಭಾವ.

**ದಿಕ್‌ಶಬ್ದವು, ಪಿತಾ-ಪುತ್ರಾದಿಶಬ್ದಗಳಂತೆ ಸಸಂಬಂಧಿ ಶಬ್ದ**

ನನು ದಿಶೋ ವಾಸ್ತವತ್ವೇ ಸ್ತಂಭಾದಿವದ್ ವ್ಯವಸ್ಥಿತತ್ವಂ ಸ್ಯಾತ್ । ಸ್ತಂಭೋ ಹಿ, ಸರ್ವಾನ್ ಪ್ರತಿ ಸ್ತಂಭ ಏವ । ನಚೈವಂ ದಿಕ್, ಅಸ್ಮಾಕಂ ಪ್ರಾಚೀ ಅನ್ಯೇಷಾಂ ಪ್ರತೀಚಿತ್ವಾತ್ । ಮೈವಂ, ಕಿಂ ದಿಕ್‌ಸ್ವರೂಪಮಧಿಕೃತ್ಯ ಏತದುಚ್ಯತೇ ಉತ ಪ್ರಾಚ್ಯಾದಿ ಶಬ್ದವಾಚ್ಯತ್ವಮ್? ನಾದ್ಯಃ, ಸ್ವರೂಪಸ್ಯ ವ್ಯವಸ್ಥಿತತ್ವಾತ್ । ನ ದ್ವಿತೀಯಃ, ಸಂಬಂಧಿಶಬ್ದತ್ವಾತ್ । 'ನ ಹಿ ಪಿತಾಪುತ್ರಾದಿಶಬ್ದಾ ಅವ್ಯವಸ್ಥಿತಾ ಇತ್ಯೇತಾವತಾ, ಪಿತಾಪುತ್ರಾದಿಸ್ವರೂಪಂ ತಚ್ಛಬ್ದವಾಚ್ಯತ್ವಂ ವಾಽವಾಸ್ತವಂ ಭವತಿ' ಇತಿ ।

ಸರಿ, ದಿಕ್ಕುಗಳು ವಾಸ್ತವವೇ ಆಗಿದ್ದಲ್ಲಿ ಕಂಬ ಮೊದಲಾದವುಗಳಂತೆ ವ್ಯವಸ್ಥಿತವಾಗಿ ಇರಬೇಕಿತ್ತು . ಸ್ತಂಭವಾದರೋ ಎಲ್ಲರಿಗೂ ಸ್ತಂಭವೇ. ದಿಕ್ಕಾದರೋ ಹಾಗಲ್ಲ, ನಮಗೆ ಪೂರ್ವವಾದದ್ದು ಮತ್ತೊಬ್ಬರಿಗೆ ಪಶ್ಚಿಮವಾಗಿರುವುದರಿಂದ. ಇದು ಹಾಗಲ್ಲ, ದಿಕ್ಕಿನ ಸ್ವರೂಪವನ್ನೇ ಹೀಗೆ (ಅವ್ಯವಸ್ಥಿತ ಎಂದು) ಹೇಳುತ್ತೀರೋ ಅಥವಾ ಪೂರ್ವ ಮೊದಲಾದ ಶಬ್ದವಾಚ್ಯತ್ವವನ್ನೋ ? ಮೊದಲಪಕ್ಷವು ಸರಿಯಲ್ಲ.(ದಿಕ್ಕಿನ) ಸ್ವರೂಪವೂ ವ್ಯವಸ್ಥಿತವೇ ಆಗಿದೆ[1]. ಎರಡನೆಯ ಪಕ್ಷವೂ ಸರಿಯಲ್ಲ. ಸಂಬಂಧಿ ಶಬ್ದವಾದುದರಿಂದ. ತಂದೆ, ಮಗ ಮೊದಲಾದ ಶಬ್ದಗಳು ಅವ್ಯವಸ್ಥಿತವಾಗಿದೆ ಎಂಬ ಮಾತ್ರಕ್ಕೆ 'ತಂದೆ ಮೊದಲಾದ ವ್ಯಕ್ತಿಗಳಾಗಲೀ, ತಂದೆ ಮೊದಲಾದ ಶಬ್ದಗಳಿಂದ ವ್ಯವಹಾರಗಳಾಗಲೀ ಅವಾಸ್ತವವಾಗುವದಿಲ್ಲ' ಎಂದು[2].

---

1. ಭಾರತೀಯರಿಗೆ ಹಿಮಾಲಯ ಉತರ್ತದಿಕ್ಕಿನಲ್ಲಿದ್ದರೂ, ಚೀನಿಯರಿಗೆ ದಕ್ಷಿಣದಲ್ಲಿದೆ. ಹೀಗೆ ಪೂರ್ವ,ಪಶ್ಚಿಮ ಇತ್ಯಾದಿ ವ್ಯವಹಾರವು ಭಿನ್ನ ದೇಶದಲ್ಲಿರವ ವ್ಯಕ್ತಿಗಳ ದೃಷ್ಟಿಯಿಂದ ಅವ್ಯವಸ್ಥಿತವಾಗಿದ್ದರೂ, ಇದು ದಿಕ್ಕು ಎನ್ನುವುದರಲ್ಲಿ ಯಾವ ಅವ್ಯವಸ್ಥಿತೆಯು ಇಲ್ಲ ಎಂದು ಭಾವ.

2. ಪಾಂಡುವಿಗೆ ಅರ್ಜುನನು ಪುತ್ರ , ಅಭಿಮನ್ಯುವಿಗೆ ತಂದೆ, ಹೀಗಾಗಿ ಅರ್ಜುನನಾಗಲೀ, ಮಗ ತಂದೆ ಎಂಬುವ ವ್ಯವಹಾರವಾಗಲಿ ಅವಾಸ್ತವಗಳಲ್ಲ. ಸಸಂಬಂಧಿಕ ಪದಾರ್ಥಗಳಲ್ಲಿ ಈ ರೀತಿಯ ವ್ಯವಹಾರಗಳಿವೆ ಎಂದು ಭಾವ.

**ಭ್ರಾಂತಿಜ್ಞಾನದಲ್ಲಿನ ಎಲ್ಲ ಅಂಶಗಳೂ ಅಸತ್ಯವಲ್ಲ**

**ನನು, ಯದಿ ದಿಶೋ ಭ್ರಾನ್ತಿವಿಷಯತ್ವಮಙ್ಗೀಕೃತಂ, ತದಾ ಮಿಥ್ಯಾತ್ವಂ ಸಿದ್ಧಮೇವ, ಶುಕ್ತಿರಜತಾದಿವತ್? ಇತಿ ಚೇತ್, ಕಿಮಾರೋಪ್ಯತಯಾ ಭ್ರಾನ್ತಿವಿಷಯತ್ವಂ ಮಿಥ್ಯಾತ್ವೇ ಹೇತುತ್ವೇನ ವಿವಕ್ಷಿತಮುತಾಧಿಷ್ಠಾನತಯಾ ಅಥ ಸಾಧಾರಣಮ್ ? ಆದ್ಯೇ ಸಿದ್ಧ ಸಾಧನಮಾರೋಪ್ಯಾಯಾ ದಿಶೋ ಮಿಥ್ಯಾತ್ವೇನಾಙ್ಗೀಕಾರಾತ್, ಆರೋಪ್ಯಸ್ಯ ಮಿಥ್ಯಾತ್ವೇಽಪಿ ಪ್ರಧಾನಸ್ಯ ಸತ್ಯತ್ವೋಪಪತ್ತೇಃ । ದ್ವಿತೀಯತೃತೀಯೌ ನಿರಾಕರೋತಿ 'ಸಾ ಚ' ಇತಿ । ಸಾ-ಭ್ರಾಂತಿಶ್ಚ 'ಸತ್ಯತ್ವೇನಾಙ್ಗೀಕೃತಯೋಃ ವಿಜ್ಞಾನಶೂನ್ಯಯೋಃ ಅಧಿಷ್ಠಾನ-ವಿಷಯೇಽಪಿ ಭವತಿ' ಇತಿ , ತೇಷಾಂ - ವಿಜ್ಞಾನವಾದಿನಾಂ, ಶೂನ್ಯವಾದಿನಾಂ ಚ ಸಂಮತಮ್ ।**

ಸರಿ, ಒಂದು ವೇಳೆ ದಿಕ್ಕು ಭ್ರಮಾಜ್ಞಾನಕ್ಕೆ ವಿಷಯವಾಗಿದೆ ಎಂದು ಒಪ್ಪಿದಲ್ಲಿ, ಆಗ (ದಿಕ್ಕಿಗೆ) ಮಿಥ್ಯಾತ್ವವು ಸಿದ್ಧವೇ ಆಗುತ್ತದೆ[1], ಶುಕ್ತಿರಜತಾದಿಗಳಂತೆ? ಎಂದಲ್ಲಿ. (ಭ್ರಾಂತಿಜ್ಞಾನದಲ್ಲಿ) ಆರೋಪಿತತಯಾ ವಿಷಯವಾಗುವದು ಮಿಥ್ಯಾತ್ವಕ್ಕೆ ಕಾರಣ ಎಂದು ವಿವಕ್ಷಿಸಲಾಗುವುದೋ ? ಅಥವಾ ಅಧಿಷ್ಠಾನತಯಾ (ವಿಷಯವಾದದ್ದನ್ನು ಮಿಥ್ಯಾ ಎಂದು ವಿವಕ್ಷಿಸಲಾಗು-ವುದೋ)? ಅಥವಾ ಸಾಧಾರಣವಾದದ್ದೋ ? ಮೊದಲ ಪಕ್ಷವಾದಲ್ಲಿ ಸಿದ್ಧವಾದುದನ್ನು ಸಾಧಿಸಿದಂತಾಗುವುದು. ಆರೋಪಿತವಾದ ದಿಕ್ಕಿಗೆ ಮಿಥ್ಯಾತ್ವವನ್ನು ಒಪ್ಪಿರುವುದರಿಂದ[2]. ಆರೋಪಿತವಾದದ್ದು ಮಿಥ್ಯೆಯಾದರೂ

---

1. ಬೇರೇಬೇರೇ ಕಾಲದಲ್ಲಿ, ಬೇರೇಬೇರೇವ್ಯಕ್ತಿಗಳ, ಭ್ರಮಾ ಜ್ಞಾನಕ್ಕೆ ಎಲ್ಲ ದಿಕ್ಕುಗಳೂ ಸಹ ವಿಷಯವಾಗಿರುವುದರಿಂದ ಎಲ್ಲ ದಿಕ್ಕುಗಳು ಮಿಥ್ಯಾ ಎಂದು ಅವರ ಅಭಿಮತಿ.

2. 'ಇದಂ ರಜತಂ' ಎನ್ನುವ ಭ್ರಮಾಜ್ಞಾನದಲ್ಲಿ 'ಇದಂ' ಶಬ್ದದಿಂದ ವಾಚ್ಯವಾದ ಶುಕ್ತಿಯು ಅಧಿಷ್ಠಾನ, ರಜತವು ಆರೋಪಿತವಾದದ್ದು. 'ಇದಂ ರಜತಂ' ಎನ್ನುವ ಜ್ಞಾನದಲ್ಲಿ ಆರೋಪಕ್ಕೆ ವಿಷಯವಾದ ರಜತವು ಮಿಥ್ಯಾ ಎಂದು ಎಲ್ಲರೂ ಒಪ್ಪಿರುತ್ತಾರೆ. ಹಾಗೆ ಪ್ರಕೃತದಲ್ಲಿ ಪೂರ್ವದಿಕ್ಕಿನಲ್ಲಿ 'ಇಯಂ ಪ್ರತೀಚೀ' ಎಂದು ಆರೋಪಿಸಿದಾಗ, ಆರೋಪಿತವಾದ ಪ್ರತೀಚೀತ್ವವು ಮಿಥ್ಯಾ ಎಂದು ಹೇಳಿದಲ್ಲಿ ಸಿದ್ಧವಾದುದನ್ನು ಸಾಧಿಸಿದಂತಾಯಿತು ಎಂದು ಭಾವ.

ಪ್ರಧಾನವಾದುದಕ್ಕೆ ಸತ್ಯತ್ವವು ಉಪಪನ್ನವಾದುದರಿಂದ[1]. ಎರಡನೆಯ ಮತ್ತು ಮೂರನೆಯ ಪಕ್ಷಗಳನ್ನು ನಿರಾಕರಿಸುತ್ತಾರೆ. 'ಸಾ ಚ' ಎನ್ನುವುದರಿಂದ. 'ಸಾ- ಆ ಭ್ರಾಂತಿಯಾದರೋ, ಸತ್ಯವೆಂದು (ಬೌದ್ಧರಿಂದ) ಅಂಗೀಕೃತವಾದ ಅಧಿಷ್ಠಾನಗಳಾದ ವಿಜ್ಞಾನ ಶೂನ್ಯಗಳ ವಿಷಯದಲ್ಲೂ ಉಂಟು' ಎಂದು, ತೇಷಾಂ- ವಿಜ್ಞಾನವಾದಿಗಳಿಗೆ ಮತ್ತು ಶೂನ್ಯವಾದಿಗಳಿಗೆ ಸಮ್ಮತವಾಗಿದೆ.

**ಕಥಮ್? ಇತ್ಯತ ಆಹ- 'ವಾದಿ...' ಇತಿ । ಅಸ್ತಿ ಖಲು ವಾದಿನಾಂ ವಿಜ್ಞಾನವಿಷಯೇ ಶೂನ್ಯವಿಷಯೇ ಚ ವಿಪ್ರತಿಪತ್ತಿಃ? ನೋಕ್ತರೂಪಂ ವಿಜ್ಞಾನಂ ಶೂನ್ಯಂ ವಾ 'ತತ್ತ್ವಮ್' ಇತಿ ವೈಶೇಷಕಾದಿಭಿರಭ್ಯುಪೇತತ್ವಾತ್ । 'ಸಾ ಚ ತೇಷಾಂ ವಿಪ್ರತಿಪತ್ತಿರ್ಭ್ರಾಂತಿಃ' ಇತಿ ಪರೇಣಾವಶ್ಯಮಙ್ಗೀಕಾರ್ಯಮ್ । ತಥಾ ಚೋಕ್ತವಿಧಯಾ ಭ್ರಾನ್ತಿವಿಷಯತ್ವಮ್, ಅನೈಕಾನ್ತಿಕಮಿತಿ । ಪ್ರಕೃತಮುಪಸಂಹರತಿ 'ಅತೋ ದಿಶ' ಇತಿ । 'ಅತಃ - ಬಾಧಕಪ್ರಮಾಣಾಭಾವಾತ್ ; ಸಾಧಕಸ್ಯ ಸಾಕ್ಷಿಣೋ ಭಾವಾಚ್ಚ ವಿಜ್ಞಾನಶೂನ್ಯವದ್ದಿಶಃ ಸತ್ಯಾ ಏವ' ಇತಿ ಬಹಿರೇವೋಪಸಂಹರ್ತವ್ಯಮ್ । ತತೋಽಯಂ ದ್ವಿತೀಯಸ್ಥೈರ್ಯೋಪಸಂಹಾರಃ । ತತ್ರ 'ಅತ' ಇತಿ 'ಪ್ರತ್ಯಭಿಜ್ಞಾನಾದ್' ಇತ್ಯರ್ಥಃ । ಕೈಶ್ಚಿದ್ವಿಜ್ಞಾನವಾದಿಭಿರ್ವಿಜ್ಞಾನಸ್ಯ ಸ್ಥೈರ್ಯಂ ನಾಙ್ಗೀಕೃತಮಿತಿ 'ಶೂನ್ಯವದೇವ' ಇತ್ಯುಕ್ತಮ್ । ಅನೇನ ಪ್ರಾಗುಕ್ತಸ್ಯಾತಿಪ್ರಸಙ್ಗಸ್ಯ ವಿಪರ್ಯಯೇ ಪರ್ಯವಸಾನಂ ಚೋಕ್ತಂ ಭವತಿ ।**

ಹೇಗೆ ? ಆದುದರಿಂದ ಉತ್ತರಿಸುತ್ತಾರೆ 'ವಾದಿ....' ಎಂದು. ವಿಜ್ಞಾನ ಮತ್ತು ಶೂನ್ಯದ ವಿಷಯದಲ್ಲಿ ವಾದಿಗಳಲ್ಲಿ ವಿಪ್ರತಿಪತ್ತಿಯು ಇದೆ. (ಬೌದ್ಧರು) ಹೇಳಿದಂತೆ ವಿಜ್ಞಾನ ಶೂನ್ಯಗಳನ್ನು 'ತತ್ತ್ವ' (ಸತ್ಯ) ಎಂದು ವೈಶೇಷಿಕಾದಿಗಳು ಒಪ್ಪದೇ ಇರುವುದರಿಂದ. ಆ ವಿಪ್ರತಿಪತ್ತಿಯನ್ನಾದರೋ 'ಅವರುಗಳಿಗೆ (ವೈಶೇಷಿಕರಿಗೆ) ಭ್ರಾಂತಿ' ಎಂದು ಪರರಿಂದ (ಬೌದ್ಧರಿಂದ) ಅವಶ್ಯವಾಗಿ

---

1. ಶುಕ್ತಿಯಲ್ಲಿ ಆರೋಪಿತವಾದ ರಜತವು ಮಿಥ್ಯೆಯಾದರೂ, ರಜತಸಂಸ್ಕಾರಕ್ಕೆ ಕಾರಣವಾದ ಆಪಣದಲ್ಲಿರುವ ಪ್ರಧಾನವಾದ ರಜತವು ಸತ್ಯವೇ ಆಗಿರುವಂತೆ, ಪೂರ್ವದಿಕ್ಕಿನಲ್ಲಿ ಆರೋಪಿತವಾದ ಪ್ರಾಚೀತ್ವವು ಮಿಥ್ಯೆಯಾದರೂ ಪ್ರಧಾನವಾದ ಪ್ರಾಚಿಯು ಸತ್ಯತ್ವವನ್ನು ಹೊಂದಿರುವುದು ಎಂದು ಭಾವ.

ಒಪ್ಪಲೇ ಬೇಕು[1]. ಹಾಗಾದಲ್ಲಿ , (ನೀವು)ಹೇಳಿದಂತೆ ಭ್ರಾಂತಿವಿಷಯತ್ವವು (ಎಂಬ ಹೇತುವು) ವ್ಯಭಿಚರಿತವಾಯಿತು ಎಂದು[2]. ಪ್ರಸ್ತುತವಾದುದನ್ನು (ವಾದವನ್ನು) ಉಪಸಂಹರಿಸುತ್ತಾರೆ 'ಅತೋ ದಿಶಃ' ಎನ್ನುವುದರಿಂದ. ಅತಃ- ಬಾಧಕಪ್ರಮಾಣ ಇಲ್ಲದಿರುವುದರಿಂದ[3], ಸಾಧಕವಾದ ಸಾಕ್ಷಿ ಇರುವುದರಿಂದಲೂ 'ವಿಜ್ಞಾನ ಶೂನ್ಯಗಳಂತೆ ದಿಕ್ಕೂ ಸಹ ಸತ್ಯ' ಎಂದು ಊಹೆಯಿಂದ (ಪ್ರಕೃತ ವಾದವನ್ನು) ಉಪಸಂಹರಿಸಬೇಕು[4]. ಆದುದರಿಂದ (ಪ್ರಥಮ ಮತ್ತು ತೃತೀಯ ಆಕ್ಷೇಪಗಳನ್ನು ಅಧ್ಯಾಹರಣ ಮಾಡಿಕೊಂಡಿದ್ದರಿಂದ) ಇದು ('ಅತೋ ದಿಶಃ ಸ್ಥಿರಾ ಏವ' ಎಂದು ಹೇಳಿರುವುದು) ಎರಡನೇ ರೀತಿಯ (ವರ್ಣ)ಸ್ಥೈರ್ಯದ ಉಪಸಂಹಾರ (ಎಂದು ತಿಳಿಯುವುದು). ಅಲ್ಲಿ (ಈ ಎರಡನೇ ಸ್ಥೈರ್ಯೋಪಸಂಹಾರದಲ್ಲಿ)

---

1. 'ವೈಶೇಷಿಕರು ಶೂನ್ಯ ಮತ್ತು ವಿಜ್ಞಾನದ ಬಗ್ಗೆ ಭ್ರಾಂತಿಯನ್ನು ಹೊಂದಿದ್ದಾರೆ' ಎಂದು ಬೌದ್ಧರು ಹೇಳದ ಪಕ್ಷದಲ್ಲಿ ವೈಶೇಷಿಕರವಾದವು ಯಥಾರ್ಥ ಎಂದಾದೀತು, ಆದುದರಿಂದ ಶೂನ್ಯ ಮತ್ತು ವಿಜ್ಞಾನದ ವಿಷಯದಲ್ಲಿ ಅವರಿಗೆ ಭ್ರಾಂತಿಯು ಇದೆ, ಎಂದು ಒಪ್ಪಲೇ ಬೇಕು. ಒಪ್ಪಿದಲ್ಲಿ , ಶೂನ್ಯ ಮತ್ತು ವಿಜ್ಞಾನವು ಭ್ರಮಾಜ್ಞಾನಕ್ಕೆ ವಿಷಯವಾಯಿತು ಎಂದು ಭಾವ.
2. 'ದಿಶಃ ಮಿಥ್ಯಾ ಭ್ರಾಂತಿವಿಷಯತ್ವಾತ್ ಶುಕ್ತಿರಜತವತ್' ಎಂದು ಬೌದ್ಧರ ಯುಕ್ತಿ . ಈ ಭ್ರಾಂತಿ ವಿಷಯತ್ವರೂಪ ಹೇತುವು ವಿಜ್ಞಾನ-ಶೂನ್ಯಗಳಲ್ಲೂ ಇದೆ, ಆದರೇ ಅವು ಸತ್ಯವೇ ಆಗಿದೆ. ಆದುದರಿಂದ ಭ್ರಾಂತಿವಿಷಯತ್ವಾತ್ ಎಂಬ ಹೇತುವು ಅನ್ಯತರಾನ್ಯಕಾಂತ್ಯದಿಂದ ದುಷ್ಟ ಎಂದು ಭಾವ.
3. 'ದಿಕ್ಕು ಸತ್ಯ' ಎಂದು ಹೇಳಲು ಯಾವ ವಿಧವಾದ ಬಾಧಕಪ್ರಮಾಣ ಇಲ್ಲದಿರುವುದರಿಂದ.
4. 'ದಿಕ್ಕುಗಳೇ ಭ್ರಾಂತಿಕಲ್ಪಿತ ಇನ್ನು ಅದರ ನಿತ್ಯತ್ವವು ದೂರದಿಂದಲೇ ನಿರಾಕೃತವಾಯಿತು, ಮತ್ತೆಲ್ಲಿಂದ 'ಸೇಯಂ ದಿಕ್'ಎನ್ನುವ ಪ್ರತ್ಯಭಿಜ್ಞೆಗೆ ಅಭ್ರಾಂತಿತ್ವ (ಸತ್ಯತ್ವ)' ಎಂದು ಮೂರು ಆಕ್ಷೇಪಗಳನ್ನು ಬೌದ್ಧವಾದಿಗಳು ಪ್ರತಿಪಾದಿಸಿದ್ದರು. ಅದರಲ್ಲಿ ಪ್ರಥಮ ಆಕ್ಷೇಪಕ್ಕೆ ಉತ್ತರವು- ದಿಕ್‌ಗೆ ಸತ್ಯತ್ವವನ್ನು ಸಾಧಿಸಿದ್ದರಿಂದ 'ವಿಜ್ಞಾನ-ಶೂನ್ಯಗಳಂತೆ, ದಿಕ್ಕು ಸಹ ಭ್ರಾಂತಿಕಲ್ಪಿತವಲ್ಲ, ಸತ್ಯವೇ ಆಗಿದೆ.' ಎಂದು ಮೂಲದಲ್ಲಿ ಸ್ಫುಟವಾಗಿ ಕಾಣದ, ಮೂಲದ ಅಭಿಪ್ರಾಯವನ್ನು ಅಧ್ಯಾಹರಿಸಿಕೊಂಡು ಪ್ರಸಕ್ತವಾದವನ್ನು ಉಪಸಂಹರಿಸಿಕೊಳ್ಳುವುದು. ದಿಕ್ಕಿಗೆ ಸತ್ಯತ್ವವನ್ನು ಸಾಧಿಸಿದ್ದರಿಂದಲೇ 'ಮತ್ತೆಲ್ಲಿಂದ 'ಸೇಯಂ ದಿಕ್'ಎನ್ನುವ ಪ್ರತ್ಯಭಿಜ್ಞೆಯ ಸತ್ಯತ್ವ' ಎಂಬ ಮೂರನೆಯ ಆಕ್ಷೇಪವನ್ನೂ ಉತ್ತರಿಸಿದಂತಾಯಿತು ಎಂದು ಭಾವ.

**'ಅತಃ'** ಎನ್ನುವುದಕ್ಕೆ 'ಪ್ರತ್ಯಭಿಜ್ಞಾನಾತ್' ಎಂದು ಅರ್ಥ[1]. ಬೌದ್ಧರಲ್ಲಿ ಕೆಲವರು ವಿಜ್ಞಾನಕ್ಕೂ ಸ್ಥೈರ್ಯವನ್ನು ಒಪ್ಪಿಲ್ಲ (ಕೇವಲ ಶೂನ್ಯಕ್ಕೆ ಮಾತ್ರ ಸ್ಥೈರ್ಯವನ್ನು ಒಪ್ಪಿದ್ದಾರೆ.)ಎಂದು **'ಶೂನ್ಯವದೇವ'** ಎಂದು ಹೇಳಲಾಗಿದೆ[2]. ಇದರಿಂದ (ದಿಕ್ಕಿಗೆ ಸ್ಥೈರ್ಯವನ್ನು ಸಾಧಿಸಿದ್ದರಿಂದ )ಹಿಂದೆ ಹೇಳಿದ ಅತಿಪ್ರಸಂಗಕ್ಕೆ ವಿಪರ್ಯಯದಲ್ಲಿ ಪರ್ಯವಸಾನವನ್ನು ('ದಿಕ್ಕು ಭ್ರಾಂತಿ ಕಲ್ಪಿತವಲ್ಲ, ದಿಕ್ಕು ಕಲ್ಪಿತವಾದಲ್ಲಿ ವಿಜ್ಞಾನ-ಶೂನ್ಯಗಳೂ ಕಲ್ಪಿತವಾಗಬೇಕಾದೀತು, ಆದುದರಿಂದ ದಿಕ್ಕು ಸ್ಥಿರ' ಎಂದು) ಹೇಳಿದಂತಾಯಿತು[3].

**ಪ್ರಕೃತ ವಾದದ ಕ್ರೋಢೀಕರಣ**

**ಅತಸ್ತದ್ವದ್ ವೇದಸ್ಯಾಪಿ ಸಥ್ಯೈರ್ಯಂ ಸಿದ್ಧಮ್ । 'ತದೇವೇದಂ ವಾಕ್ಯಮ್' ಇತಿ ಪ್ರತ್ಯಭಿಜ್ಞಾನಾತ್ ।**

---

1. ಪ್ರಥಮೋಪಸಂಹಾರದಲ್ಲಿ 'ಅತಃ - ಬಾಧಕಪ್ರಮಾಣವಿಲ್ಲದಿರುವುದರಿಂದ ' ಎಂದು ಅರ್ಥೈಸಲಾಗಿತ್ತು, ಪ್ರಕೃತದಲ್ಲಿ ಅತಃ- 'ಸೇಯಂ ದಿಕ್ ಎಂಬ ಪ್ರತ್ಯಭಿಜ್ಞೆಯು ಇರುವುದರಿಂದ' ಎಂದು ಅರ್ಥ. ಒಟ್ಟಿನಲ್ಲಿ ಮೂಲವಾಕ್ಯದ ಅರ್ಥವು- 1) ಬಾಧಕಪ್ರಮಾಣವು ಇಲ್ಲದಿರುವದರಿಂದ, ಸಾಕ್ಷಿರೂಪ ಸಾಧಕಪ್ರಮಾಣವು ಇರುವುದರಿಂದ ದಿಕ್ಕು ಸತ್ಯ. 2) 'ಸೇಯಂ ದಿಕ್' ಎಂಬ ಪ್ರತ್ಯಭಿಜ್ಞೆಯು ಇರುವುದರಿಂದ ದಿಕ್ಕು ಸತ್ಯ, ಎಂದು ಭಾವ.

2. ಹಿಂದೆ ದಿಕ್ಕಿಗೆ ಸ್ಥೈರ್ಯವನ್ನು ಸ್ಥಾಪಿಸಲು, 'ವಿಜ್ಞಾನಶೂನ್ಯಗಳು ಭ್ರಾಂತಿಗೆ ವಿಷಯವಾದ್ದರಿಂದ ಅವೂ ಅನಿತ್ಯವಾಗಬೇಕಾದೀತು' ಎಂದು ಪ್ರಸಂಗವನ್ನು ಹೇಳಲಾಗಿತ್ತು. ಪ್ರಕೃತ 'ಶೂನ್ಯವದೇವ' ಎಂದು ಕೇವಲ ಶೂನ್ಯವನ್ನು ಪರಿಗ್ರಹಿಸಲಾಗಿದೆ, ಅದರ ಅಭಿಪ್ರಾಯವನ್ನು ತಿಳಿಸಲಾಯಿತು ಎಂದು ಭಾವ.

3. ಸೋಽಯಂ ಗಕಾರಃ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿ ಎಂದು ಹೇಳಿದಲ್ಲಿ 'ಸೋಽಯಂ ದೇವದತ್ತಃ' ಎನ್ನುವ ಪ್ರತ್ಯಭಿಜ್ಞೆಯೂ ಭ್ರಾಂತಿಯಾಗಬೇಕಾದೀತು ಎಂದು ನೈಯ್ಯಾಯಿಕರಿಗೆ ಬಾಧಕಪ್ರಸಂಗವನ್ನು ತಿಳಿಸಲಾಗಿತ್ತು. ಆಗ ಸರ್ವವನ್ನೂ ಕ್ಷಣಿಕ ಎಂದು ಒಪ್ಪಿದ ಬೌದ್ಧರಿಗೆ ಈ ಪ್ರಸಂಗವು ಬಾಧಕವಲ್ಲ ಎಂದು ಪ್ರಶ್ನಿಸಲು 'ಸೇಯಂ ದಿಕ್' ಎನ್ನುವ ಪ್ರತ್ಯಭಿಜ್ಞೆಯು ಭ್ರಾಂತಿ ಎಂದಾದೀತು ಎಂದು ಬಾಧಕ ಪ್ರಸಂಗವನ್ನು ಹೇಳಲಾಯಿತು. ಬೌದ್ಧರಲ್ಲಿ ಕೆಲವರು ದಿಕ್ಕಿಗೂ ಕ್ಷಣಿಕತ್ವವನ್ನು ಒಪ್ಪಿರುವುದರಿಂದ ಈ ಬಾಧಕಪ್ರಸಂಗ ಹೇಗೆ? ಎಂದು ಪ್ರಶ್ನಿಸಲಾಗಿತ್ತು. ಪ್ರಕೃತ ಪ್ರಸಂಗವನ್ನು - 'ದಿಕ್ಕುಗಳು ಭ್ರಾಂತಿ ಕಲ್ಪಿತವಲ್ಲ, ದಿಕ್ಕುಗಳು ಭ್ರಮೆ ಎಂದಾದಲ್ಲಿ ವಿಜ್ಞಾನ-ಶೂನ್ಯಗಳೂ ಭ್ರಮೆಯಾಗಬೇಕಾದೀತು ಎಂದು ತಿಳಿಸಿ, 'ಆದುದರಿಂದ ದಿಕ್ಕು ಸ್ಥಿರ' ಎಂದು ವಿಪರ್ಯ ಪರ್ಯವಸಾನವನ್ನು ತಿಳಿಸಿದಂತಾಯಿತು ಎಂದು ಭಾವ.

ಆದುದರಿಂದ - 'ಅದೇ ಈ ವಾಕ್ಯ' ಎಂಬ ಪ್ರತ್ಯಭಿಜ್ಞಾವು ಇರುವುದರಿಂದ. ಅದರಂತೆ (ವರ್ಣದಂತೆ) ವೇದಕ್ಕೂ ಸ್ಥೈರ್ಯವು ಸಿದ್ಧವಾಯಿತು.

**ಅಸ್ತು, ದಿಶಾಂ ಸ್ಥೈರ್ಯಂ ಕಿಂ ಪ್ರಕೃತೇ? ಇತ್ಯತ ಆಹ 'ಅತಸ್ತದ್ವದ್' ಇತಿ । ಅತ ಇತಿ ಪರಾಮೃಷ್ಟಂ ದರ್ಶಯತಿ 'ತದೇವೇದಂ' ಇತಿ । ವೇದಸ್ಯ ಇತಿ ವಾಕ್ಯಂ ಇತಿ ಚ ವರ್ಣಾ ಏವೋಚ್ಯನ್ತೇ, ತೇಷಾಮೇವ ಪ್ರಕ್ರಾನ್ತ-ತ್ವಾತ್ । ತಾತ್ಪರ್ಯನ್ತು ಪ್ರಾಗೇವೋಕ್ತಮ್ ।**

**ಅಥವಾ, ವರ್ಣಸ್ಥೈರ್ಯವರ್ಣನಂ ಕುತ್ರೋಪಯುಕ್ತಮ್? ಇತ್ಯಾಶಙ್ಕ್ಯ 'ವೇದಸ್ಯಾಪಿ' ಇತ್ಯುಕ್ತಮ್ । 'ವರ್ಣಾನಾಂ ವೇದಸ್ಯಾಪಿ' ಇತಿ ಯೋಜನಾ । ವೇದಾಪೌರುಷೇಯತ್ವಸ್ಯ ಬಾಧಕತ್ವೇನ ವರ್ಣಾನಾಮುತ್ಪತ್ತಿ-ವಿನಾಶಿತ್ವಂ ಪರೇಣೋಪನ್ಯಸ್ತಮ್ । ತಸ್ಯ ಪರಿಹೃತತ್ವಾನ್ ನಿರಾಬಾಧಂ ವೇದಸ್ಯ ಸ್ಥೈರ್ಯಂ- ಅಪೌರುಷೇಯತ್ವಂ ಸಿಧ್ಯತಿ, ಇತಿ । ನ ಕೇವಲಂ ಬಾಧಕಾಭಾವಾತ್, ನಾಪ್ಯುಕ್ತಾನುಮಾನಾತ್, ಕಿಂತರ್ಹಿ? ಇತ್ಯತ ಆಹ - 'ತದೇವೇದಂ' ಇತಿ । 'ಯದ್ವರ್ಣಕ್ರಮಾದ್ಯುಪೇತಂ ಪೂರ್ವಂ ಮಯಾ ಶ್ರುತಂ ವಾಕ್ಯಂ ತದೇವ- ತದ್ವರ್ಣಕ್ರಮಾದ್ಯುಪೇತಮೇವ ಇದಂ-ಶ್ರೂಯಮಾಣಂ ವಾಕ್ಯಮ್' ಇತಿ । ಪ್ರತ್ಯಭಿಜ್ಞಾನಾದ್ ಅರ್ವಾಚೀನ-ಪುರುಷಸ್ವಾತಂತ್ರ್ಯಾಭಾವಸ್ತಾವತ್ ಪ್ರತೀಯತೇ । ಏವಂ 'ಪೂರ್ವಂ ಪೂರ್ವತರಂ ಪೂರ್ವತಮಮಪಿ' ಇತಿ ವ್ಯತ್ಯಾಸಾಭಾವಸ್ತಾವತ್ ಸಿದ್ಧಃ । ಆದಿಸೃಷ್ಟೌ ತು ವಕ್ಷ್ಯಾಮ ಇತಿ ಭಾವಃ ।**

ದಿಕ್ಕುಗಳು ಸ್ಥಿರವಾಗಲಿ, ಪ್ರಕೃತಕ್ಕೆ (ಪ್ರವೃತ್ತವಾದ ವಾದಕ್ಕೆ) ಏನು (ಸಂಗತಿ)? ಆದುದರಿಂದ ಉತ್ತರಿಸುತ್ತಾರೆ **'ಅತಸ್ತದ್ವತ್'** ಎನ್ನುವುದರಿಂದ. **'ಅತಃ'** ಎನ್ನುವುದರಿಂದ ಪರಾಮರ್ಶಿಸಿದ್ದನ್ನು ತಿಳಿಸುತ್ತಾರೆ. 'ತದೇವೇದಂ' ಎಂದು. 'ವೇದಸ್ಯ' ಮತ್ತು 'ವಾಕ್ಯಂ' ಎನ್ನುವವು ವರ್ಣಗಳನ್ನೇ ತಿಳಿಸುತ್ತವೆ,

ಅವುಗಳೇ (ವರ್ಣಗಳೇ) ಪ್ರಸಕ್ತವಾದುದರಿಂದ[1]. ಇದರ ಅಭಿಪ್ರಾಯ ವನ್ನಾದರೋ ಈ ಮೊದಲೇ ತಿಳಿಸಲಾಗಿದೆ[2].

ಅಥವಾ, ವರ್ಣಗಳ ನಿತ್ಯತ್ವದ ಪ್ರತಿಪಾದನೆಯಿಂದ ಏನು ಪ್ರಯೋಜನ? ಎಂದು ಶಂಕಿಸಿಕೊಂಡು **'ವೇದಸ್ಯಾಪಿ'** ಎಂದು ಉತ್ತರಿಸಲಾಗಿದೆ. 'ವರ್ಣಾನಾಂ ವೇದಸ್ಯಾಪಿ' ಎಂದು ಯೋಜಿಸಕೊಳ್ಳಬೇಕು[3]. ವೇದದ ಅಪೌರುಷೇಯತ್ವಕ್ಕೆ ಬಾಧಕವಾಗಿ ವರ್ಣಗಳ ಉತ್ಪತ್ತಿವಿನಾಶಿತ್ವವನ್ನು ಪರವಾದಿಯು ಉಪನ್ಯಸಿಸಿದ್ದನು[4]. ಅದರ (ವರ್ಣನಿತ್ಯತ್ವದ ಸಂದೇಹದ) ಪರಿಹಾರ ವಾದುದರಿಂದ ಯಾವುದೇ ಬಾಧವು ಇಲ್ಲದಂತೆ ವೇದದ **ಸ್ಥೈರ್ಯಂ**-ಅಪೌರುಷೇಯತ್ವವು ಸಿದ್ಧಿಸಿತು' ಎಂದು. ಕೇವಲ ಬಾಧಕವಿಲ್ಲದ್ದರಿಂದ ಅಲ್ಲ, ಕೇವಲ ಅನುಮಾನದಿಂದಲೂ ಅಲ್ಲ ಹಾಗಾದರೆ ಯಾವುದರಿಂದ ? ಉತ್ತರಿಸುತ್ತಾರೆ **'ತದೇವೇದಂ'** ಎನ್ನುವದರಿಂದ್. 'ಯಾವ ವರ್ಣಗಳ ಕ್ರಮ

1. 'ನಚೋಚ್ಚಾರಣಕಾಲ ಏವ ವರ್ಣಾನಾಮುತ್ಪತ್ತಿಃ 'ತದೇವೇದಂ ವಚನಂ' ಇತಿ ಪ್ರತ್ಯಭಿಜ್ಞಾವಿರೋಧಾತ್' ಎಂದು ವರ್ಣನಿತ್ಯತ್ವವಿಷಯಕ ವಾದವು ಪ್ರಸಕ್ತ ವಾದುದರಿಂದ ಎಂದು ಭಾವ.

1. ಪದಾತಿರಿಕ್ತವಾದ ಸ್ಫೋಟದ, ವಾಕ್ಯಾತಿರಿಕ್ತ ಸ್ಫೋಟದ ನಿರಾಕರಣವನ್ನು ಸೂಚಿಸಲು, ವರ್ಣದಸ್ಥೈರ್ಯವನ್ನು ಚರ್ಚಿಸುವ ಸಂದರ್ಭದಲ್ಲಿ, ಆಚಾರ್ಯರು 'ತದೇವೇದಂ ವಚನಂ' ಮತ್ತು 'ತದ್ವದ್ವೇಸ್ಯಾಪಿ' ಎಂದು 'ವೇದ, ವಾಕ್ಯ' ಈ ಶಬ್ದಗಳನ್ನು ಪರಿಗ್ರಹಿಸಿರುತ್ತಾರೆ ಎಂದು ಈ ಹಿಂದೆಯೇ ತಿಳಿಸಲಾಗಿದೆ. ಹಾಗಾಗಿ ಪ್ರಕೃತದಲ್ಲಿನ ಮೂಲದಲ್ಲಿನ 'ವೇದ, ವಾಕ್ಯ' ಎನ್ನುವ ಶಬ್ದಗಳು ವರ್ಣವನ್ನೇ ಬೋಧಿಸುವವು ಎಂದು ಭಾವ.

3. ಮೂಲದಲ್ಲಿ 'ಅತಸ್ತದ್ವದ್ವೇದಸ್ಯಾಪಿ ...' ಎಂದಿದೆ. ಆ ವಾಕ್ಯದ ಸಂಯೋಜನೆಯು- 'ಅತಃ- ವರ್ಣಾನಾಂ ನಿತ್ಯತ್ವಾತ್, ತದ್ವತ್- ತದ್ವರ್ಣವತ್, ವೇದಸ್ಯಾಪಿ ಸ್ಥೈರ್ಯಂ' ಎಂದು ಭಾವ.

4. ವರ್ಣಗಳೇ ಉತ್ಪತ್ತಿ ಮತ್ತು ವಿನಾಶವನ್ನು ಹೊಂದಿರುವಾಗ, ವರ್ಣಗಳಿಂದ ಘಟಿತವಾದ ವೇದಕ್ಕೆ ಅಪೌರುಷೇಯತ್ವವು (ನಿತ್ಯತ್ವವು) ಹೇಗೆ? ಎಂದು ಸಂದೇಹಿಸಿದ್ದರು ಎಂದು ಭಾವ.

5. ವೇದದ ಅಪೌರುಷೇಯತ್ವಕ್ಕೆ ಬಾಧಕವಾಗಿದ್ದ ವರ್ಣಗಳ ಅನಿತ್ಯತ್ವವನ್ನು ಪರಿಹರಿಸಿದ್ದರಿಂದ, ಅಥವಾ 'ವೇದಕರ್ತುರಪ್ರಸಿದ್ಧೇಃ....' ಎಂಬ ಅನುಮಾನದಿಂದ ಮಾತ್ರ ವೇದಾಪೌರುಷೇಯತ್ವವು ಸಿದ್ಧವಾದುದಲ್ಲ , ಇವುಗಳಿಗಿಂತಲೂ ಹೆಚ್ಚಿನ-ಪ್ರಮಾಣವಾದ 'ತದೇವೇದಂ ವಾಕ್ಯಂ' ಎನ್ನುವ ಪ್ರತ್ಯಭಿಜ್ಞೆಯು ಇರುವುದರಿಂದ- ಸಾಕ್ಷಿಪ್ರಮಾಣದಿಂದ ವೇದಾಪೌರುಷೇಯತ್ವವು ಸಿದ್ಧವಾಗಿದೆ ಎಂದು ಭಾವ.

ಮೊದಲಾದವುಗಳಿಂದ ಯುಕ್ತವಾದ ವಾಕ್ಯವನ್ನು ಈ ಹಿಂದೆ ನಾನು ಕೇಳಿದ್ದೇನೋ, **ತದೇವ** - ಅದೇ ವರ್ಣ-ಕ್ರಮ-ಮೊದಲಾದವುಗಳಿಂದ ಯುಕ್ತವಾದದ್ದೇ **ಇದಂ**- ಕೇಳುತ್ತಿರುವ ಈ ವಾಕ್ಯವು' ಎಂದು ಪ್ರತ್ಯಭಿಜ್ಞೆಯಿಂದ, ಆಧುನಿಕ ವ್ಯಕ್ತಿಯ ಸ್ವಾತಂತ್ರ್ಯಾಭಾವವು ತೋರುತ್ತದೆ[1]. ಇದೇ ರೀತಿ ಹಿಂದಿನ, ಅದರ ಹಿಂದಿನ ಇನ್ನೂ ಹಿಂದಿನಿಂದಲೂ (ಆನುಪೂರ್ವಿಯಲ್ಲಿ) ವ್ಯತ್ಯಯವು ಇಲ್ಲದಿರುವುದು ಸಿದ್ಧವಾಗಿದೆ. ಸೃಷ್ಟಿಯ ಪ್ರಾರಂಭದಲ್ಲಿಯಾದರೋ (ಯಾರು ಮೊದಲು ವೇದಗಳನ್ನು ಉಚ್ಚರಿಸಿದರು ಎನ್ನುವ ಸಂದೇಹಕ್ಕೆ ಉತ್ತರವನ್ನು) ಮುಂದೆ ಹೇಳಲಾಗುವುದು ಎಂದು ಭಾವ[2]

**-: ಪ್ರತ್ಯಭಿಜ್ಞಾಯಥಾರ್ಥತ್ವವಾದ ಸಮಾಪ್ತಿ :-**

## ॥ ಪೌರುಷೇಯವಾಕ್ಯಗಳಿಂದಲೇ ಧರ್ಮದ ಸಿದ್ಧಿ ॥

ಆಸ್ತಿಕರು ಎಂದು ಭಾವಿಸುವ, ವೇದವನ್ನು ಅಪೌರುಷೇಯ ಎಂದು ಒಪ್ಪದ ವಾದಿಗಳನ್ನು ಮಣಿಸುವ ವಾದದ ವಿವರವು ಇಲ್ಲಿದೆ. ವೇದದ ಕರ್ತಾ ಯಾರು ಎಂದು ತಿಳಿದಿಲ್ಲ ಆದ್ದರಿಂದ ಪುರುಷನಿರ್ಮಿತವಲ್ಲ ಎನ್ನುವುದು ತರವಾಗದು,

---

1. 'ನಾರಾಯಣಂ ನಮಸ್ಕೃತ್ಯ ...' ಇತ್ಯಾದಿ ವಾಕ್ಯಗಳ ಆನುಪೂರ್ವಿಯು ಶ್ರೀವ್ಯಾಸರಿಂದಲೇ ಮೊದಲು ಉತ್ಪನ್ನವಾಗಿದೆ. ಈ ಆನುಪೂರ್ವಿಯಲ್ಲಿ ಶ್ರೀವ್ಯಾಸರ ಸ್ವಾತಂತ್ರ್ಯವು ಇದೆ. ಆದರೆ 'ಅಗ್ನಿಮೀಳೇ ಪುರೋಹಿತಂ' ಇತ್ಯಾದಿ ವಾಕ್ಯಗಳ ಆನುಪೂರ್ವಿಯು ಇಂತಹ ವ್ಯಕ್ತಿಯಿಂದಲೇ ಮೊದಲು ಉತ್ಪನ್ನವಾದುದು ಎಂದು ಹೇಳಲು ಅವಕಾಶವಿಲ್ಲ, 'ತದೇವೇದಂ ವಾಕ್ಯಂ' ಎಂಬ ಪ್ರತ್ಯಭಿಜ್ಞೆಯು ಇರುವುದರಿಂದ. ಈ ಆನುಪೂರ್ವಿಯಲ್ಲಿ ವ್ಯಕ್ತಿಗತ ಸ್ವಾತಂತ್ರ್ಯವು ತೋರದು ಎಂದು ಭಾವ.

2. ನಮ್ಮ ಗುರುಗಳು ಅವರ ಗುರುಗಳ ಆನುಪೂರ್ವಿಯನ್ನು ಅನುಕರಿಸಿರಬಹುದು. ಹಾಗೆಯೇ ಅವರ ಹಿಂದಿನ ಗುರುಗಳ ಆನುಪೂರ್ವಿಯನ್ನು ಅವರು.... ' ಎಂದು ಊಹಿಸಬಹುದು. ಆದರೆ ಸೃಷ್ಟಿಯ ಆದಿಯಲ್ಲಿ ಅವರ ಹಿಂದಿನ ಗುರುವು ಇಲ್ಲದಿರುವುದರಿಂದ , ಆಗ ಉಪದಿಷ್ಟವಾದ ವೇದವು, ಉಪದೇಶಿಸಿದ ವ್ಯಕ್ತಿಯು ಆನುಪೂರ್ವಿಯ ಸ್ವತಂತ್ರಕರ್ತೃಕತ್ವವನ್ನು ಹೊಂದಿರಬೇಕಲ್ಲವೆ ? ಎಂಬ ಸಂದೇಹಕ್ಕೆ ಮುಂದೆ ಉತ್ತರಿಸುತ್ತೇವೆ. 'ನಿತ್ಯಾವೇದಾಃ ಸಮಸ್ತಾಶ್ಚ....' 'ಸರ್ಗೇ ಸರ್ಗೇಽಮುನೇನೈವ...' ಇತ್ಯಾದಿ ಸ್ಮೃತಿಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ ಎಂದು, ಎಂಬ ಭಾವ.

ಜಾನಪದಗೀತೆಗಳನ್ನೂ ಗಾದೆಗಳನ್ನೂ ಅಪೌರುಷೇಯ ಎಂದು ಪರಿಗಣಿಸಬೇಕಾದೀತು. ಇತ್ಯಾದಿ ಸಂದೇಹಗಳನ್ನು ನಿರಾಕರಿಸಿರುತ್ತಾರೆ. ಅಪೌರುಷೇಯವಾದ ವಾಣಿಯನ್ನು ಒಪ್ಪದೇ ಧರ್ಮದ ನಿರ್ಣಯ ಶಕ್ಯವಿಲ್ಲ ಎಂದು ಉಪದೇಶಿಸಿರುತ್ತಾರೆ.

**ಧರ್ಮದ ಸಿದ್ಧಿಗಾಗಿ, ಅಪೌರುಷೇಯವಾದ ವಾಕ್ಯವನ್ನು ಒಪ್ಪಲೇಬೇಕು**

**ನ ಚಾನುಮಾನಾದೀನಾಮಾಗಮಂ ವಿನಾ ಪ್ರಾಮಾಣ್ಯಂ ಧರ್ಮಾದಿಷು , ತದಗೋಚರತ್ವಾತ್ ।**

ಆಗಮದ ಸಹಾಯವಿಲ್ಲದ ಅನುಮಾನಾದಿಗಳು ಧರ್ಮಾದಿಗಳಲ್ಲಿ ಪ್ರಮಾಣವಾಗಲಾರದು, ಅದಕ್ಕೆ (ಅನುಮಾನಕ್ಕೆ ಧರ್ಮಾದಿಗಳು) ವಿಷಯವಲ್ಲವಾದುದರಿಂದ.

**ಕಿಞ್ಚ , ಸಾಮಾನ್ಯಸಿದ್ಧಿ ಪರಿಶೇಷಾಭ್ಯಾಮಪಿ ವೇದಸ್ಯಾಪೌರುಷೇಯತ್ವಂ ಸಿಧ್ಯತಿ । ತಥಾಹಿ- ಅಸ್ತಿ ತಾವತ್ ಧರ್ಮಾಧರ್ಮ-ಸ್ವರ್ಗ-ನರಕಾದಿಷು ಸರ್ವವಾದಿ ಸಂಪ್ರತಿಪತ್ತಿಃ । ಯಸ್ತು ತಾನ್ ನಾಙ್ಗೀಕರೋತಿ ಸೋಽಪಿ ಪೂರ್ವೋಕ್ತಪ್ರಕಾರೇಣ ಬೋಧನೀಯಃ, 'ತೇ ಚ ಪ್ರಮಾಣೋಪೇತಾ ವಸ್ತುತ್ವಾದ್, ಘಟವತ್'। ನ ಹ್ಯಪ್ರಮಾಣಿಕೇಽರ್ಥೇ ಸರ್ವೇಷಾಂ ಸಮ್ಪ್ರತಿಪತ್ತಿಃ ಸಮ್ಭವತಿ, ಅತಿಪ್ರಸಙ್ಗಾತ್ । ಏವಂ ಸರ್ವವಾದಿನಾಂ ಸಮ್ಪ್ರತಿಪತ್ತಿಮೂಲೇ ಧರ್ಮಾದಿವಿಷಯೇ ಪ್ರಮಾಣೇ ಸಾಮಾನ್ಯತಃ ಸಿದ್ಧೇ, ತಸ್ಯ ಪರಿಶೇಷೇಣಾಪೌರುಷೇಯತ್ವಂ ಸಾಧಯಿತುಂ ಪ್ರಸಕ್ತಪ್ರತಿಷೇಧಂ ತಾವತ್ ಕರೋತಿ 'ನಚಾನುಮಾನಾದೀನಾಂ' ಇತಿ । 'ಆಗಮಂ ವಿನಾ' ಇತಿ ।। 'ಅಪೌರುಷೇಯವಾಕ್ಯಂ ವಿನಾ' ಇತ್ಯರ್ಥಃ । ತತಶ್ಚ 'ಅನುಮಾನ-ಪ್ರತ್ಯಕ್ಷ-ಪೌರುಷೇಯವಾಕ್ಯಾನಾಮ್' ಇತ್ಯುಕ್ತಂ ಭವತಿ । ಪ್ರತ್ಯಕ್ಷಸ್ಯ ಧರ್ಮಾದಿ-ವಿಷಯತ್ವಮಸಮ್ಭಾವಿತಂ, ತಥಾ ಪೌರುಷೇಯಾಗಮಸ್ಯಾಪಿ, ಪೂರ್ವೋಕ್ತನ್ಯಾಯಾತ್ । ಕಿನ್ತು ಪ್ರಮಾಣತ್ವಮಾತ್ರೇಣ ತಯೋಃ ಪ್ರಸಕ್ತಿಃ । ಅನುಮಾನಸ್ತು ಸಮ್ಭಾವಿತಮಿತ್ಯತಃ ತದಾದಿತ್ವೇನ ಗ್ರಹಣಮ್ । ಕುತೋ ನ? ಇತ್ಯತ ಆಹ - 'ತತ್' ಇತಿ । ಧರ್ಮಾದೀನಾಮನುಮಾನಾದ್ಯ-ಗೋಚರತ್ವಾತ್ ।**

ಮತ್ತೂ ಸಹ ವೇದದ ಅಪೌರುಷೇಯತ್ವವು ಸಾಮಾನ್ಯಪ್ರಮಾಣದಿಂದ ಮತ್ತು ಪರಿಶೇಷಪ್ರಮಾಣದಿಂದ ಸಿದ್ಧವಾಗುತ್ತದೆ. ಹೇಗೆಂದರೆ- ಧರ್ಮ, ಅಧರ್ಮ, ನರಕ, ಸ್ವರ್ಗ ಮುಂತಾದವುಗಳ ಅಸ್ತಿತ್ವದಲ್ಲಿ ಎಲ್ಲ ವಾದಿಗಳಿಗೂ ಒಪ್ಪಿಗೆ ಇದ್ದೇ ಇದೆ. ಯಾರು ಅವುಗಳನ್ನು ಒಪ್ಪುವುದಿಲ್ಲವೋ ಅವರಿಗೂ (ಚಾರ್ವಾಕಾದಿಗಳಿಗೂ) ಹಿಂದೆ ತಿಳಿಸಿದ ರೀತಿಯಿಂದ ತಿಳಿಹೇಳಬೇಕು[1]. ಅವುಗಳಾದರೋ (ಧರ್ಮಾಧರ್ಮಗಳಾದರೋ) ಘಟದಂತೆ ಪ್ರಮಾಣಗಳಿಂದ ಪ್ರಮಿತವಾಗಿರಬೇಕು, ವಸ್ತುವಾದುದರಿಂದ. ಅಪ್ರಾಮಾಣಿಕವಾದ ವಸ್ತುವಿನಲ್ಲಿ ಎಲ್ಲರಿಗೂ (ಎಲ್ಲ ವಾದಿಗಳಿಗೂ) ಸಂಪ್ರತಿಪತ್ತಿಯು ಸಂಭಾವಿತವಲ್ಲ (ಹಾಗಾದಲ್ಲಿ) ಅತಿಪ್ರಸಂಗ ಒದಗೀತು[2]. ಹೀಗೆ ಎಲ್ಲ ವಾದಿಗಳಿಗೂ ಸಂಪ್ರತಿಪನ್ನವಾದ ಧರ್ಮಾದಿಗಳ ವಿಷಯದಲ್ಲಿ ಪ್ರಮಾಣವಿದೆ ಎಂದು ಸಾಮಾನ್ಯವಾಗಿ ಸಿದ್ಧವಾಗಲು, ಅದಕ್ಕೆ (ಧರ್ಮಾದಿಗಳನ್ನು ಬೋಧಿಸುವ ಪ್ರಮಾಣಕ್ಕೆ) ಪರಿಶೇಷವಾಗಿ ಅಪೌರುಷೇಯತ್ವವನ್ನು ಸಾಧಿಸಲು ಪ್ರಸಕ್ತವಾದದನ್ನು (ಧರ್ಮಾದಿ- ಸಾಧಕಗಳೆಂದು ವಿಭಿನ್ನವಾದಿಗಳು ಒಪ್ಪಿರಬಹುದಾದ ಅನುಮಾನಾದಿ- ಪ್ರಮಾಣಗಳನ್ನು) ಮೊದಲು ನಿಷೇಧಿಸುತ್ತಾರೆ. **'ನ ಚಾನುಮಾನಾದೀನಾಮ್'** ಎನ್ನುವುದರಿಂದ. **ಆಗಮಂ ವಿನಾ**- ಅಪೌರುಷೇಯವಾದ ವಾಕ್ಯದ ಹೊರತಾಗಿ ಎಂದು ಅರ್ಥ[3]. ಆದುದರಿಂದ (ಆಗಮಂ ವಿನಾ ಎನ್ನುವದಕ್ಕೆ ಅಪೌರುಷೇಯವಾಕ್ಯಗಳ ಹೊರತಾಗಿ ಎಂದು ಅರ್ಥಸಿದ್ದರಿಂದ) 'ಅನುಮಾನ, ಪ್ರತ್ಯಕ್ಷ, ಪೌರುಷೇಯ ವಾಕ್ಯಗಳಿಗೆ' ಎಂದು

---

1. ಯಾರು ಧರ್ಮಾಧರ್ಮಗಳನ್ನು ಒಪ್ಪುವುದಿಲ್ಲವೋ ಆತನು ಶಾಸ್ತ್ರಕಾರ ಎಂದು ವ್ಯವಹೃತನಾಗಲಾರ ಇತ್ಯಾದಿ ಕ್ರಮದಲ್ಲಿ.

2. ಪ್ರಮಾಣವಿಲ್ಲದೇ ಒಂದು ವಸ್ತುವನ್ನು ಒಪ್ಪುವದಾದಲ್ಲಿ ಶಶವಿಷಾಣವನ್ನೂ ಇದೆ ಎಂದು ಒಪ್ಪಬೇಕಾಗೀತು ಎಂದು ಭಾವ.

3. ಮೂಲದಲ್ಲಿ 'ಅನುಮಾನಾದಿಗಳು ಧರ್ಮಾದಿಗಳನ್ನು ಸಾಧಿಸಲು, ಆಗಮದ ನೆರವಿಲ್ಲದೆ ಪ್ರಮಾಣಗಳಾಗಲಾರವು' ಎಂದು ಸಾಮಾನ್ಯವಾಗಿ ತಿಳಿಸಲಾಗಿದೆ. ಬೌದ್ಧಾದಿ ಆಗಮಗಳನ್ನು ಅನುಮಾನಾದಿಗಳು ನೆರವನ್ನಾಗಿ ಪಡೆದು ಧರ್ಮಾದಿಗಳನ್ನು ಸಾಧಿಸಬಹುದೇ ? ಎಂಬ ಸಂದೇಹಕ್ಕೆ ಅವಕಾಶವಿದೆ. ಅದನ್ನು ನಿರಾಕರಿಸಲು ಟೀಕೆಯಲ್ಲಿ ಮೂಲದಲ್ಲಿನ ಆಗಮ ಶಬ್ದಕ್ಕೆ ಅಭಿಪ್ರೇತವಾದ ಅರ್ಥವನ್ನು ತಿಳಿಸಿರುತ್ತಾರೆ.

ಹೇಳಿದಂತಾಯಿತು[1]. ಪ್ರತ್ಯಕ್ಷಕ್ಕೆ ಧರ್ಮಾದಿಗಳು ವಿಷಯವಾಗುವುದು ಅಸಂಭಾವಿತ[2], ಹಾಗೆಯೇ ಹಿಂದೆ ಹೇಳಿದ ಯುಕ್ತಿಗಳಿಂದ, ಪೌರುಷೇಯಾಗಮಕ್ಕೂ ಸಹ (ಧರ್ಮಾದಿಗಳು ವಿಷಯವಾಗಲಾರದು)[3]. ಆದರೆ ಅವೆರಡೂ ಪ್ರಮಾಣವಾದುದರಿಂದ ಪ್ರಸ್ತಾಪ್ತಿಸಲಾಗಿದೆ[4]. ಅನುಮಾನವಾದರೋ (ಧರ್ಮಾದಿಗಳ ಬೋಧಕ ಎಂಬ) ಸಂಭಾವನೆ ಇದೆ, ಆದುದರಿಂದ ಅದನ್ನು ಮೊದಲು ಪರಿಗ್ರಹಿಸಲಾಗಿದೆ[4]. ಏಕೆ ಇಲ್ಲ ? ಉತ್ತರಿಸುತ್ತಾರೆ - **'ತದಗೋಚರತ್ವಾತ್'** ಎನ್ನುವುದರಿಂದ. ಧರ್ಮಾದಿಗಳು ಅನುಮಾನಾದಿಗಳಿಗೆ ಗೋಚರವಾಗದೇ ಇರುವುದರಿಂದ.

### ಅನುಮಾನದಿಂದ ಧರ್ಮವನ್ನು ಊಹಿಸಲು ಶಕ್ಯವಿಲ್ಲ

**ನನು, 'ಅನುಮಾನಾದೀನಿ ಧರ್ಮಾದಿಷು ಪ್ರಮಾಣಾನಿ ನ ಭವನ್ತಿ, ಧರ್ಮಾದೀನಾಂ ತದಗೋಚರತ್ವಾದ್' ಇತಿ ವ್ಯಧಿಕರಣತ್ವಮ್? ಮೈವಮ್-**

1. ಮೂಲದಲ್ಲಿ 'ಅನುಮಾನಾದೀನಾಂ' ಎಂದಿದೆ. ಇಲ್ಲಿ ಆದಿಶಬ್ದದಿಂದ ಪರಿಗ್ರಹೀತವಾದವುಗಳು ಯಾವುವು ? ಎಂಬುವುದನ್ನು ಟೀಕೆಯಲ್ಲಿ ಸ್ಫುಟಪಡಿಸಿರುತ್ತಾರೆ.

2. ಧರ್ಮಾದಿಗಳು ಅತೀಂದ್ರಿಯಗಳಾದುದರಿಂದ ಎಂದು ಭಾವ.

3. ದೇವದತ್ತಾದಿಗಳಂತೆ ಬುದ್ಧ-ಜಿನಾದಿಗಳಲ್ಲೂ ಅಜ್ಞಾನ, ವಿಪ್ರಲಂಭಾದಿ ದೋಷಗಳ ಸಂಭಾವನೆಯು ಇರುವುದರಿಂದ ಅವರ ಮಾತಿನಿಂದ ಧರ್ಮಾದಿಗಳು ಸಿದ್ಧವಾಗಲಾರದು, ಇತ್ಯಾದಿ ಯುಕ್ತಿಗಳಿಂದ ಎಂದು ಭಾವ.

4. ಪ್ರತ್ಯಕ್ಷ ಮತ್ತು ಪೌರುಷೇಯವಾಕ್ಯಗಳು ಧರ್ಮಾದಿಗಳ ಅರಿವಿಗೆ ಅಸಮರ್ಥವೆಂದಾದಲ್ಲಿ ಅವುಗಳನ್ನು ಏಕೆ ಉಲ್ಲೇಖಿಸಬೇಕು ? ಉತ್ತರಿಸುತ್ತಾರೆ - 'ಅವೂ ಅರಿವಿನ ಮೂಲ ಎನ್ನುವ ದೃಷ್ಟಿಯಿಂದ ಮಾತ್ರ ಅವುಗಳ ಉಲ್ಲೇಖ' ಎಂದು ಭಾವ.

4. ಮೂಲದಲ್ಲಿ 'ಅನುಮಾನಾದಿಗಳಿಗೆ ಧರ್ಮಾದಿ ವಿಷಯದಲ್ಲಿ ಪ್ರಾಮಾಣ್ಯವಿಲ್ಲ' ಎಂದು ಕಂಠತಃ ಅನುಮಾನವನ್ನು ತಿಳಿಸಿರುತ್ತಾರೆ. ಪ್ರಮಾಣಗಳನ್ನು ಉಲ್ಲೇಖಿಸುವಾಗ ಮೊದಲು ಪ್ರತ್ಯಕ್ಷವನ್ನು ಉಲ್ಲೇಖಿಸುವುದು ವಾಡಿಕೆ. ಅಥವಾ ಮುಖ್ಯಪ್ರಮಾಣ ಎಂದು ಆಗಮವನ್ನು ಉಲ್ಲೇಖಿಸುವುದೂ ಕಂಡಿದೆ. ಆದರೆ ಆಚಾರ್ಯರು ಇವೆರಡನ್ನೂ ಬಿಟ್ಟು ಅನುಮಾನವನ್ನು ಪ್ರಧಾನವಾಗಿ ಪ್ರಸ್ತಾಪಿಸಿರುವುದು ಏಕೆ? ಎಂಬ ಸಂದೇಹವನ್ನು ಪರಿಹರಿಸುವರು- ಅನುಮಾನಕ್ಕೆ ಅತೀಂದ್ರಿಯ ಪದಾರ್ಥಗಳನ್ನು ತಿಳಿಸುವ ಸಾಮರ್ಥ್ಯವಿದೆ. ಹಾಗಾಗಿ ಅನುಮಾನವು ಧರ್ಮಾದಿಗಳನ್ನು ಸಾಧಿಸಬಹುದು ಎಂಬ ಸಂಭಾವನೆ ಇರುವುದರಿಂದ ಅನುಮಾನವನ್ನು ಪ್ರಧಾನ ನೆಲೆಯಲ್ಲಿ ಪ್ರಸ್ತಾಪಿಸಿ, ಪ್ರತ್ಯಕ್ಷಾಗಮಗಳನ್ನು ಆದಿ ಶಬ್ದದಿಂದ ಸಂಗ್ರಹಿಸಲಾಗಿದೆ ಎಂದು ಭಾವ.

'ಯೋ ಯದ್ಗೋಚರೋ ನ ಭವತಿ ತತ್ರ ತನ್ನ ಪ್ರಮಾಣಮ್' ಇತಿ ವ್ಯಾಪ್ತಿ-ಸಮ್ಭವೇನಾದೂಷಣತ್ವಾತ್ । ಅಥವಾ 'ಅನುಮಾನಾದೀನಿ ಧರ್ಮಾದೌ ಪ್ರಮಾಣಾನಿ ನ ಭವನ್ತಿ ಅತದ್ಗೋಚರತ್ವಾತ್ । ಧರ್ಮಾದೀನಿ ವಾಽನುಮಾನಾದಿಭಿಃ ನ ಪ್ರಮೀಯನ್ತೇ ತದಗೋಚರತ್ವಾತ್' ಇತಿ ಪ್ರಯೋಗದ್ವಯಮತ್ರಾಭಿಪ್ರೇತಮ್ । ಏವಮಪಿ ಸಾಧ್ಯಾವಿಶಿಷ್ಟತಾ? ಇತಿ ಚೇನ್ನ । ಫಲಾಭಾವಸ್ಯ ಸಾಧ್ಯತ್ವಾತ್ । ಸಾಮರ್ಥ್ಯಾಭಾವಸ್ಯ ಸಾಧನತ್ವಾತ್ ।

ತಥಾಹಿ- 'ಪ್ರತ್ಯಕ್ಷಂ ನ ತಾವದ್ ಬಾಹ್ಯಂ, ತಸ್ಯ ರೂಪಾದಿಮತಿ ದ್ರವ್ಯೇ ತದೀಯೇಷು ಗುಣ-ಕರ್ಮ-ಸಾಮಾನ್ಯೇಷ್ವೇವ ಸಾಮರ್ಥ್ಯಾತ್' । ನಾಪಿ ಮಾನಸಮ್- ಸುಖಾದಿವದ್ ಧರ್ಮಾದೌ ಅನುವ್ಯವಸಾಯಾಭಾವಾತ್ । ಅನ್ಯಥಾ 'ಸುಖಮ್ ಅನುಭವಾಮಿ' ಇತಿವದ್ 'ಧರ್ಮಮನುಭವಾಮಿ' ಇತಿ ಸ್ಯಾತ್ । ಸ್ವರ್ಗಾದೀನಾನ್ತು ವಿಪ್ರಕೃಷ್ಟತ್ವಾನ್ ನ ಪ್ರತ್ಯಕ್ಷಗೋಚರತಾ । ನ ಚ 'ಯೋಗಾದಿಸಿದ್ಧಾನಾಂ ಪ್ರತ್ಯಕ್ಷಮಸ್ಮದತೀಂದ್ರಿಯಾರ್ಥವಿಷಯಮ್' ಇತಿ ವಾಚ್ಯಮ್ । ತಸ್ಯಾಪ್ಯಪೌರುಷೇಯವಾಕ್ಯಂ ವಿನಾಽಸಿದ್ಧೇಃ । ತದಿದಮುಕ್ತಮ್ 'ಆಗಮಂ ' ಇತಿ ॥

ಸರಿ, 'ಅನುಮಾನಾದೀನಿ, ಧರ್ಮಾದಿಷು ಪ್ರಮಾಣಾನಿ ನ ಭವಂತಿ ಧರ್ಮಾದೀನಾಂ ತದಗೋಚರತ್ವಾತ್' (ಅನುಮಾನಾದ್ಯಗೋಚರತ್ವಾತ್) ಎನ್ನುವುದು (ಎಂಬ ಅನುಮಾನವು) ವ್ಯಧಿಕರಣ (ಎಂಬ ದೋಷದಿಂದ ಯುಕ್ತವಾಗಿದೆ)[1]. ಇದು ಸರಿಯಲ್ಲ. 'ಯಾವ ವಸ್ತುವು ಯಾವ ಪ್ರಮಾಣದಿಂದ ಅರಿವಿಗೆ ಬರುವದಿಲ್ಲವೋ ಆ ವಸ್ತುವಿನ ವಿಷಯದಲ್ಲಿ ಅದು ಪ್ರಮಾಣವಾಗುವುದಿಲ್ಲ' ಎಂಬ ವ್ಯಾಪ್ತಿ ಇರುವುದರಿಂದ (ವೈಯಧಿಕರಣ್ಯವು

---

1. ಪ್ರಕೃತಾನುಮಾನದಲ್ಲಿ 'ತದಗೋಚರತ್ವಾತ್' ಎಂಬುದು ಹೇತುವು ಆಗಿದೆ. ಈ ಹೇತುವು ಪ್ರಕೃತ ಪಕ್ಷವಾದ 'ಅನುಮಾನಾದೀನಿ' ಎನ್ನುವುದರಲ್ಲಿ ಇಲ್ಲ, ಅನುಮಾನಾವೇದ್ಯತ್ವವು-ಅನುಮಾನದಿಂದ ಅರಿವಿಗೆ ಬಾರದಿರುವಿಕೆಯು ಧರ್ಮಾದಿಗಳಲ್ಲಿ ಇದೆ ಹೊರತು, ಪಕ್ಷವಾದ ಅನುಮಾನದಲ್ಲಿ ಇಲ್ಲ. ಹಾಗಾಗಿ ಅನುಮಾನವು ವೈಯಧಿಕರಣ್ಯ ಎಂಬ ದೋಷಯುಕ್ತವಾಗಿದೆ ಎಂದು ಭಾವ.

ಪ್ರಕೃತಾನುಮಾನಕ್ಕೆ) ದೋಷವಾಗದೇ ಇರುವುದುರಿಂದ[1]. ಅಥವಾ 'ಅನುಮಾನಾದೀನಿ ಧರ್ಮಾದೌ ಪ್ರಮಾಣಾನಿ ನ ಭವಂತಿ ಅತದ್ಗೋಚರತ್ವಾತ್' ಎಂದೋ, 'ಧರ್ಮಾದೀನಿ ಅನುಮಾನಾದಿಭಿಃ ನ ಪ್ರತೀಯಂತೇ ತದಗೋಚರತ್ವಾತ್' ಎಂದು ಎರಡು ( ರೀತಿಯಲ್ಲಿ) ಅನುಮಾನಗಳು ಪ್ರಕೃತದಲ್ಲಿ ಅಭಿಪ್ರೇತವಾಗಿದೆ.[2] ಹೀಗಾದರೂ ಸಹ (ಅನುಮಾನಕ್ಕೆ ವ್ಯೆಯಧಿ ಕರಣ್ಯರೂಪದೋಷವಿಲ್ಲದಿದ್ದರೂ ಸಹ ) 'ಸಾಧ್ಯಾವಿಶಿಷ್ಟತಾ[3] ರೂಪ

1.- ರೂಪವು ಶ್ರವಣೇಂದ್ರಿಯಪ್ರತ್ಯಕ್ಷಕ್ಕೆ ಗೋಚರವಾಗುವುದಿಲ್ಲ, ರೂಪದ ವಿಷಯದಲ್ಲಿ ಶ್ರವಣೇಂದ್ರಿಯಪ್ರತ್ಯಕ್ಷವು ಪ್ರಮಾಣವಲ್ಲ ಎನ್ನುವುದು ಅನುಭವಸಿದ್ಧ. ಹಾಗಾಗಿ 'ಯೋ ಯದ್ಗೋಚರೋ ನ ಭವತಿ........' ಎಂಬ ವ್ಯಾಪಿಯು ಸಾಮಾನ್ಯತಃ ಸಿದ್ಧವಾಗಿದೆ. ತನ್ನಿಮಿತ್ತ ಅನುಮಾನಾದಿಗಳು ಧರ್ಮಾದಿಗಳ ವಿಷಯದಲ್ಲಿ ಪ್ರಮಾಣವಲ್ಲ ಎಂದು ಸಾಧಿಸಬಹುದು. ಇಂತಹ ಸಂದರ್ಭಗಳಲ್ಲಿ ವೈಯಧಿಕರಣ್ಯ( ಪಕ್ಷದಲ್ಲಿ ಹೇತು ಇಲ್ಲದಿರುವಿಕೆ) ಎನ್ನುವುದು ದೋಷವಲ್ಲ. 'ಉಪರಿತನ ದೇಶಃ ವೃಷ್ಟಿಮಾನ್ ಅಧೋದೇಶೇ ನದೀ ಪೂರಾತ್' ಎಂಬಿತ್ಯಾದಿ ಅನುಮಾನಗಳಲ್ಲಿ ಹೇತುವು ಪಕ್ಷದಲ್ಲಿ ಇಲ್ಲದಿದ್ದರೂ ಈ ಅನುಮಾನವನ್ನು ಪ್ರಮಾಣವನ್ನಾಗಿ ಒಪ್ಪಿರುತ್ತಾರೆ ಅದರಂತೆ ಎಂದು ಭಾವ.

2. ಹಿಂದಿನ ಅನುಮಾನದಲ್ಲಿ ತದಗೋಚರತ್ವಾತ್- ಅನುಮಾನಕ್ಕೆ ವಿಷಯವಾಗದಿರು-ವುದರಿಂದ ಎಂಬುದನ್ನು ಹೇತುವೆಂದು ಪರಿಗಣಿಸಲಾಗಿತ್ತು. ಅನುಮಾನಕ್ಕೆ ವಿಷಯವಾಗ ದಿರುವಿಕೆಯು ಧರ್ಮಾದಿಗಳಲ್ಲಿರುವ ಗುಣ ಹೊರತಾಗಿ, ಅನುಮಾನದ ಗುಣವಲ್ಲ. ಹಾಗಾಗಿ ಹೇತುವು ಪಕ್ಷವಾದ ಅನುಮಾನದಲ್ಲಿ ಇಲ್ಲವಾದುದರಿಂದ ವೈಯಧಿಕರಣ್ಯ ಎಂಬ ದೋಷವಿದೆ ಎಂದು ಶಂಕಿಸಲಾಗಿತ್ತು ಪ್ರಕೃತ 'ಅತದ್‌ಗೋಚರತ್ವಾತ್- ಧರ್ಮಾದ್ಯವಿಷಯಕತ್ವಾತ್' ಎಂದು ಹೇತುವನ್ನು ಪರಿಷ್ಕರಿಸಿದ್ದರಿಂದ ವೈಯ್ಯಧಿಕರಣ್ಯ ರೂಪ ದೋಷವಿಲ್ಲ , ಅನುಮಾನದಲ್ಲಿ ಧರ್ಮಾದ್ಯವಿಷಯಕತ್ವ-ಧರ್ಮಾದಿಗಳನ್ನು ಗ್ರಹಿಸದೇ ಇರುವಿಕೆಯು ಇರುವುದರಿಂದ. ಎರಡನೆಯ ಅನುಮಾನದಲ್ಲಿ ಧರ್ಮಾದೀನಿ ಎನ್ನುವುದು ಪಕ್ಷ, ಪಕ್ಷದಲ್ಲಿ ಅನುಮಾನಾ-ಗೋಚರತ್ವವು ಹೇತುವು ಇದೆ, ಹಾಗಾಗಿ ವೈಯಧಿಕರಣ್ಯದೋಷದ ಪ್ರಸಕ್ತಿ ಇಲ್ಲವೆಂದು ಭಾವ.

3. ಹೇತು-ಸಾಧ್ಯಗಳು ಒಂದೇ ಆದಲ್ಲಿ ಈ 'ಸಾಧ್ಯಾವಿಶಿಷ್ಟತಾ ಎಂಬ ದೋಷವನ್ನು ಹೇಳುತ್ತಾರೆ. ಪ್ರಕೃತ ಅನುಮಾನಗಳಲ್ಲಾದರೋ 'ಅನುಮಾನವು, ಧರ್ಮಾದಿಗಳ ಅರಿವಿಗೆ ಕಾರಣವಲ್ಲ' ಎಂದು ಸಾಧ್ಯ , 'ಅನುಮಾನದಿಂದ ಧರ್ಮಾದಿಗಳ ಅರಿವು ಬಾರದಿರುವುದ-ರಿಂದ' ಎಂದು ಹೇತು. ಹಾಗೆಯೇ 'ಧರ್ಮಾದಿಗಳನ್ನು ಅನುಮಾನಾದಿಗಳಿಂದ ಅರಿಯ-ಲಾಗುವದಿಲ್ಲ, ಧರ್ಮಾದಿಗಳು ಅನುಮಾನಾದಿಗಳಿಂದ ಗೋಚರವಾಗದಿರುವುದರಿಂದ' ಎಂದು ಹೇಳಲಾಗಿದೆ. ಆಗ ಸಾಧ್ಯ ಮತ್ತು ಹೇತುಗಳಲ್ಲಿ ಭೇದವಿಲ್ಲದೆ ಇರುವುದರಿಂದ ಸಾಧ್ಯಾವಿಶಿಷ್ಟತಾ ಎಂಬ ದೋಷ ಎಂದು ಶಂಕೆಗೆ ಅವಕಾಶವಿದೆ ಎಂದು ಭಾವ.

ದೋಷವಿದೆ ಎಂದೆನ್ನಲಾಗದು. ಫಲಾಭಾವವು ಸಾಧ್ಯವಾಗಿಯೂ, ಸಾಮರ್ಥ್ಯಾಭಾವವು ಸಾಧನವಾದುದರಿಂದ[1].

ಏಕೆಂದರೆ (ಧರ್ಮಾದಿಗಳು ಏಕೆ ಪ್ರತ್ಯಕ್ಷಾದಿಗೋಚರವಲ್ಲ?) – (ಧರ್ಮಾದಿ ವಿಷಯಕ) ಪ್ರತ್ಯಕ್ಷಗಳಲ್ಲಿ ಬಾಹ್ಯಪ್ರತ್ಯಕ್ಷವು (ಪ್ರಮಾಣವು) ಆಗಲಾರದು, ಅದು (ಬಾಹ್ಯಪ್ರತ್ಯಕ್ಷವು) ರೂಪಾದಿಗಳನ್ನು ಹೊಂದಿರುವ ದ್ರವ್ಯದಲ್ಲಿ, ಅದಕ್ಕೆ ಸಂಬಂಧಿಸಿದ ಗುಣ, ಕರ್ಮ ಸಾಮಾನ್ಯಾದಿಗಳಲ್ಲಿ (ಇವುಗಳ ಅರಿವಿನಲ್ಲಿ) ಮಾತ್ರ (ಬಾಹ್ಯಪ್ರತ್ಯಕ್ಷವು) ಸಮರ್ಥವಾದುದರಿಂದ. ಮಾನಸಪ್ರತ್ಯಕ್ಷವೂ ಇಲ್ಲ, ಸುಖಾದಿಗಳಂತೆ ಧರ್ಮಾದಿ ವಿಷಯದಲ್ಲಿ ಅನುವ್ಯವಸಾಯ ಇಲ್ಲದಿರುವುದ-ರಿಂದ, ಹಾಗಾಗದ ಪಕ್ಷದಲ್ಲಿ (ಧರ್ಮಾದಿಗಳು ಮಾನಸಪ್ರತ್ಯಕ್ಷಕ್ಕೆ ಗೋಚರ ವಾಗುವದಾದಲ್ಲಿ) 'ಸುಖವನ್ನು ಅನುಭವಿಸುತ್ತೇನೆ' ಎನ್ನುವಂತೆ 'ಧರ್ಮವನ್ನು ಅನುಭವಿಸುತ್ತೇನೆ' ಎಂಬ ಅರಿವು ಇರಬೇಕಾಗಿತ್ತು[2]. ಸ್ವರ್ಗಾದಿಗಳು ದೂರ ದೇಶದಲ್ಲಿರುವ ವಸ್ತುಗಳಾದುದರಿಂದ ಪ್ರತ್ಯಕ್ಷಕ್ಕೆ ಗೋಚರವಾಗುವದಿಲ್ಲ[3]. ನಮ್ಮ ಇಂದ್ರಿಯಗಳಿಗೆ ಗೋಚರವಾಗದ ವಸ್ತುಗಳು ಯೋಗಾದಿಸಿದ್ಧಪುರುಷರ ಪ್ರತ್ಯಕ್ಷಕ್ಕೆ ಗೋಚರವಾಗುತ್ತದೆ ಎಂದು ಹೇಳಲು ಶಕ್ಯವಿಲ್ಲ. ಅದೂ ಸಹ (ಯೋಗಾದಿ ಸಿದ್ಧಪುರುಷರಿಗೆ ಧರ್ಮಾದಿಗಳ ಪ್ರತ್ಯಕ್ಷವು ಇದೆ ಎನ್ನುವುದೂ ಸಹ) ಅಪೌರುಷೇಯವಾದ ವಾಕ್ಯವಿಲ್ಲದೆ ಸಿದ್ಧವಾಗುವದಿಲ್ಲವಾದುದರಿಂದ. ಇದನ್ನೂ ಸಹ ಹೇಳಲಾಗಿದೆ '**ಆಗಮಂ ಹಿ**' ಎನ್ನುವುದರಿಂದ[4].

---

1. 'ಅನುಮಾನವು ಧರ್ಮಾದಿಗಳನ್ನು ಗ್ರಹಿಸಲಾರದು, ಧರ್ಮಾದಿಗಳ ಅರಿವನ್ನು ಉಂಟು ಮಾಡುವ ಸಾಮರ್ಥ್ಯವಿಲ್ಲದಿರುವುದರಿಂದ' ಎಂದು ಈ ಅನುಮಾನವನ್ನು ಪರಿಷ್ಕರಿಸಲಾಗುವುದು. 'ದಂಡಕ್ಕೆ ಪಟೋತ್ಪಾದಕ ಸಮರ್ಥ್ಯವಿಲ್ಲದ್ದರಿಂದ ದಂಡವು ಪಟಕ್ಕೆ ಕಾರಣವಲ್ಲ' ಎಂದು ಲೋಕದಲ್ಲಿ ವ್ಯವಹರಿಸುವಂತೆ ಈ ವ್ಯವಹಾರವೂ ಸಾಧು ಎಂದು ಭಾವ.

2. 'ಅಹಂ ಸುಖೀ' ಎಂದು ಸುಖದುಃಖಾದಿಗಳ ಅನುಭವದ ಅರಿವು ಇರುವಂತೆ ಧರ್ಮಾದಿಗಳ ಅನುಭವದ ಜ್ಞಾನವು ಯಾರಿಗೂ ಇಲ್ಲ ಎಂದು ಭಾವ.

3. ಇಂದ್ರಿಯಕ್ಕೂ ಸ್ವರ್ಗಕ್ಕೂ ಸನ್ನಿಕರ್ಷವೇ ಇಲ್ಲದಿರುವದರಿಂದ, ಸ್ವರ್ಗಾದಿಗಳು ಇಂದ್ರಿಯಪ್ರತ್ಯಕ್ಷಕ್ಕೆ ಗೋಚರವಾಗದು ಎಂದು ಭಾವ.

4. 'ಯೋಗಿಗಳಿಗೆ ಸ್ವರ್ಗ-ಧರ್ಮಾದಿ ಅದೃಷ್ಟಪದಾರ್ಥಗಳ ಪ್ರತ್ಯಕ್ಷಾನುಭವವು ಉಂಟು' ಎಂದು ತಿಳಿಸುವ ಅಪೌರುಷೇಯ ವಾಕ್ಯವಿಲ್ಲದೇ 'ಅವರ ಜ್ಞಾನಕ್ಕೆ ಅವು ವಿಷಯವಾಗಿದೆ' ಎಂದು ತಿಳಿಯಲು ಶಕ್ಯವಿಲ್ಲ ಎಂದು ಭಾವ.

**ಕೇವಲ ಯೋಗಿಯ ಮಾತಿನಿಂದ ಧರ್ಮದ ಸಿದ್ಧಿಯಾಗಲಾರದು**

**ಕಿಞ್ಚ ತೇಷಾಂ ತೇನ ಧರ್ಮಾದಿಸಿದ್ಧಾವಪಿ, ಅಸ್ಮಾಕಂ ತನ್ನಿಶ್ಚಯೋಪಾಯೋ ನಾಸ್ತಿ । ನಹ್ಯನ್ಯದೀಯೇನ ಪ್ರತ್ಯಕ್ಷೇಣಾನ್ಯಸ್ಯ ನಿಶ್ಚಯೋಽನುಷ್ಠಾನಂ ವಾ ಸಮ್ಭವತಿ । ನಾಪ್ಯನುಮಾನಮ್, ಅಪ್ರತಿಬದ್ಧಲಿಙ್ಗಾಭಾವಾತ್ । ಸಾಮಾನ್ಯತೋ ದೃಷ್ಟೇನ ಕಥಞ್ಚಿತ್ ಸ್ವರೂಪಮಾತ್ರಸಿದ್ಧಾವಪಿ ನ ಸಾಧನಫಲಸಮ್ಬನ್ಧರೂಪಃ ತದ್ವಿಶೇಷೋಽನುಮಾತುಂ ಶಕ್ಯಃ । ನ ಚ ತದನಿಶ್ಚಯೇಽನುಷ್ಠಾನಂ ಸಂಭವತಿ । ನಚೈವಂ ಧರ್ಮಮೀಮಾಂಸಾನುಪಪತ್ತಿಃ-ಅಪೌರುಷೇಯವಾಕ್ಯೇನ ಧರ್ಮಾದಿಪ್ರತಿಪತ್ತೌ ತದಿತಿಕರ್ತವ್ಯತಾತ್ವೇನ ಮೀಮಾಂಸಾಯಾ ಉಪಯೋಗಾಙ್ಗೀಕಾರಾತ್ । ಏತದಪ್ಯುಕ್ತಂ 'ಆಗಮಂ ವಿನಾ' ಇತಿ । ನ ಚ ಪೌರುಷೇಯಂ ವಾಕ್ಯಂ, ಪುರುಷಾಣಾಮಜ್ಞಾನಾದಿಸಮ್ಭವೇನ ಧರ್ಮಾದ್ಯುಪದೇಷ್ಟರ್ಯಾಶ್ವಾಸಾನುಪಪತ್ತೇಃ । ನ ಚ 'ಮನ್ವಾದಿಷ್ವಾಶ್ವಾಸೋ ದೃಶ್ಯತೇ' ಇತಿ ವಾಚ್ಯಮ್ । ಅಪೌರುಷೇಯಮೂಲತ್ವನಿಶ್ಚಯೇನೈವ ತತ್ರಾಪ್ಯಾಶ್ವಾಸಾತ್ । ಏತದಪ್ಯಭಿಹಿತಮ್ 'ಆಗಮಂ ವಿನಾ' ಇತಿ ।**

ಮತ್ತೂ ಸಹ ಅವರಿಗೆ (ಯೋಗಸಿದ್ಧರಿಗೆ) ಅದರಿಂದ (ಯೋಗಪ್ರತ್ಯಕ್ಷದಿಂದ) ಧರ್ಮಾದಿಗಳು ಸಿದ್ಧವಾದರೂ ಸಹ ನಮಗೆ ಅದರ (ಧರ್ಮದ) ನಿಶ್ಚಯದ ಉಪಾಯವಿಲ್ಲ. ಬೇರೊಬ್ಬನ ಪ್ರತ್ಯಕ್ಷದಿಂದ ಮತ್ತೊಬ್ಬನಿಗೆ ನಿಶ್ಚಯವಾಗಲೀ, (ಅಂತಹ ಧರ್ಮದ) ಅನುಷ್ಠಾನವಾಗಲೀ ಸಂಭಾವಿತವಲ್ಲ[1]. ಅನುಮಾನವೂ ಆಗಲಾರದು[2], ಧರ್ಮಾದಿಗಳಿಂದ ವ್ಯಾಪ್ತವಾದ ಹೇತುಗಳು ಇಲ್ಲದಿರುವುದರಿಂದ. ಸಾಮಾನ್ಯದರ್ಶನದಿಂದ ಹೇಗೋ (ಧರ್ಮದ)

1. ಧರ್ಮಾದಿಗಳು ಯೋಗಸಿದ್ಧರಿಗೆ ಪ್ರತ್ಯಕ್ಷವಾದರೂ ಸಾಮಾನ್ಯರಿಗೆ ಅದರ ನಿಶ್ಚಯವಾಗಲು ಶಕ್ಯವಿಲ್ಲ. ಜನಸಾಮಾನ್ಯರು ಆ ಯೋಗಿಯ ವಚನದಿಂದಲೇ ಧರ್ಮದ ಅರಿವನ್ನು ಮಾಡಿಕೊಳ್ಳಬೇಕು. ಪುನಃ ಆತನ ವಚನದಲ್ಲಿ ಪ್ರಾಮಾಣ್ಯಾದಿಗಳ ನಿಶ್ಚಯಾದಿಗಳ ಕ್ಲೇಶವು ತಪ್ಪಿದ್ದಲ್ಲ. ತನ್ನಿಮಿತ್ತ ಧರ್ಮದ ಅನುಷ್ಠಾನಾದಿಗಳಲ್ಲಿ ಸಾಮಾನ್ಯರು ಪ್ರವೃತ್ತರಾಗಲಾರರು. ಯೋಗಿಗೆ ಅದರ ಅರಿವಿದೆ ಎಂದು ಒಪ್ಪಿದ್ದರೂ ಪ್ರಯೋಜನವಿಲ್ಲ ಎಂಬ ಭಾವ.

2. ಈ ವಿಶ್ವದಲ್ಲಿ ಸಮಾನ ಪ್ರಯತ್ನಾದಿಗಳನ್ನು ಮಾಡಿದರೂ ಸಹ ಫಲಾದಿಗಳಲ್ಲಿ ವ್ಯತ್ಯಯಾದಿಗಳು ಕಂಡಿದೆ, ಪ್ರೇಕ್ಷಾವಂತರು ಜ್ಯೋತಿಷ್ಟೋಮಾದಿ ಯಜ್ಞಾದಿ ಕ್ರಿಯೆಗಳನ್ನು ಮಾಡುತ್ತಿರುವರು, ಅದು ಅತೀಂದ್ರಿಯವಾದ ಫಲವನ್ನು ಹೊಂದಿರುವುದು ಈ ಮುಂತಾದ ಕಾರಣಗಳಿಂದ ಧರ್ಮಾದಿಗಳನ್ನು ಊಹಿಸಬಹುದು ಎಂದೂ ಹೇಳಲಾಗದು ಎಂದು ಭಾವ.

ಸ್ವರೂಪಮಾತ್ರವು ಸಿದ್ಧವಾದರೂ 'ಇದು ಸಾಧನ, ಇದರ ಫಲ ಇದು' ಇತ್ಯಾದಿ ಧರ್ಮದ ವಿಶೇಷವನ್ನು ಅನುಮಾನಿಸಲು ಶಕ್ಯವಿಲ್ಲ[1]. ಅವುಗಳ (ವಿಶೇಷ ಧರ್ಮಗಳ ಮತ್ತು ಅವುಗಳ ಫಲದ) ನಿಶ್ಚಯವಿಲ್ಲದೇ (ಅವುಗಳ) ಅನುಷ್ಠಾನವು ಸಂಭಾವಿತವಾಗಲಾರದು. ಹಾಗಾದಲ್ಲಿ (ಅನುಮಾನದಿಂದ ಧರ್ಮದ ನಿಶ್ಚಯವಾಗದೇ ಹೋದಲ್ಲಿ) ಧರ್ಮಮೀಮಾಂಸಾ ಶಾಸ್ತ್ರದ (ಪೂರ್ವ ಮೀಮಾಂಸಾ ಶಾಸ್ತ್ರದ) ಉತ್ಪತ್ತಿಯಾಗದಿರಲಿ (ರಚನೆಯು ಆಗದಿರಲಿ) ಎನ್ನುವಂತಿಲ್ಲ. ಅಪೌರುಷೇಯ ವಾಕ್ಯಗಳಿಂದ ಧರ್ಮಾದಿಗಳ ಜ್ಞಾನವು ಪ್ರಾಪ್ತವಾಗಲು ಅದರ ಇತಿಕರ್ತವ್ಯತಾದ ನಿರ್ಣಯಕ್ಕಾಗಿ (ಮಾತ್ರ) ಮೀಮಾಂಸಾ ಶಾಸ್ತ್ರದ ಆಗತ್ಯತೆಯನ್ನು ಒಪ್ಪಿರುವುದರಿಂದ. ಇದನ್ನೂ ಸಹ ಹೇಳಲಾಗಿದೆ **'ಆಗಮಂ ವಿನಾ'**[2] ಎಂದು. ಪುರುಷನಿರ್ಮಿತವಾಕ್ಯವು (ಧರ್ಮಾದಿ ಬೋಧಕವೆನ್ನುವುದು) ತರವಲ್ಲ, ಪುರುಷರಲ್ಲಿ ಅಜ್ಞಾನ ಮುಂತಾದವು ಸಂಭಾವಿತವಾಗಿರುವುದರಿಂದ, ಧರ್ಮೋಪದೇಶಕನಲ್ಲಿ ವಿಶ್ವಾಸವು ಅನುಪಪನ್ನವಾಗಿರುವುದರಿಂದ. (ಧರ್ಮೋಪದೇಶಕರಾದ) ಮನು ಮುಂತಾದವರಲ್ಲಿ ವಿಶ್ವಾಸವು ಕಂಡಿದೆ ಎಂದು ಹೇಳುವುದು ತರವಲ್ಲ. (ಮನ್ವಾದಿಗಳ ಉಪದೇಶಗಳು) ಅಪೌರುಷೇಯದ (ವೇದದ) ಮೂಲವೆಂದು ನಿಶ್ಚಿತವಾದುದರಿಂದ ಆವುಗಳಲ್ಲಿ ವಿಶ್ವಾಸವನ್ನು ಮಾಡಲಾಗುವುದು. ಇದನ್ನೂ ಸಹ ತಿಳಿಸಿರುವರು **'ಆಗಮಂ ವಿನಾ'** ಎಂದು.

**ಅಪೌರುಷೇಯವಚನದಿಂದಲೇ ಧರ್ಮದ ಸಿದ್ಧಿ**

**ಅತೋಽಪೌರುಷೇಯವಾಕ್ಯೇನೈವ ಧರ್ಮಾದಿಸಿದ್ಧೇಃ ಸರ್ವವಾದಿನಾಮಪಿ ತದಙ್ಗೀಕಾರ್ಯಮ್ ।**

1. ಈ ವಿಶ್ವದಲ್ಲಿ ವಿಚಿತ್ರರೂಪದ ಪ್ರಾಣಿಗಳಿವೆ, ಚಿತ್ರವಿಚಿತ್ರ ಕಾರ್ಯಗಳು ನಡೆಯುತ್ತಿದೆ ಈ ಮುಂತಾದ ಅನೇಕ ವೈಚಿತ್ರ್ಯಗಳಿಗೆ ಕಾರಣವು ಬೇಕೇಬೇಕು. ಅದು 'ಧರ್ಮವೇ' ಎಂದು ಸಾಮಾನ್ಯವಾಗಿ ಧರ್ಮವನ್ನು ಊಹಿಸಲು ಶಕ್ಯವಿದ್ದರೂ, ಈ ಧರ್ಮದಿಂದ ಈ ರೀತಿಯಾದ ಫಲ. ದರ್ಭವನ್ನು ಪೂರ್ವಾಗ್ರವಾಗಿ ಹಾಸಬೇಕು, ಗೋಘೃತಾದಿಗಳನ್ನೇ ಹೋಮಾದಿಗಳಿಗೆ ಬಳಸಬೇಕು, ಸುರಾದಿಗಳನ್ನು ಸೇವಿಸಬಾರದು ಇತ್ಯಾದಿ ವಿಶೇಷಾಕಾರವಾದ ವಿಧಿ-ನಿಷೇಧಕ ರೂಪವಾದ ಧಾರ್ಮಿಕ ಕ್ರಿಯೆಗಳಿಗೆ ಇಂತಹದೇ ಫಲ, ಇತ್ಯಾದಿಗಳನ್ನು ಊಹಿಸಲು ಶಕ್ಯವೇ ಇಲ್ಲ ಎಂದು ಭಾವ.

2. ಕೇವಲ ಮೀಮಾಂಸಾ ಶಾಸ್ತ್ರವು ಧರ್ಮವನ್ನು ನಿಶ್ಚಯಿಸಲಾರದು, ಮೀಮಾಂಸಾ-ಸಹಕೃತವಾದ ವೇದವಾಕ್ಯಗಳಿಂದಲೇ ಧರ್ಮಾದಿಗಳ ನಿಶ್ಚಯವಾಗುವುದು ಎಂದು ಭಾವ.

ಆದುರಿಂದ ಅಪೌರುಷೇಯವಾಕ್ಯದಿಂದಲೇ ಧರ್ಮಾದಿಗಳ ಸಿದ್ಧಿಯಾಗುವುದರಿಂದ ಎಲ್ಲ ವಾದಿಗಳು ಅದನ್ನು (ಅಪೌರುಷೇಯ ವಾಕ್ಯವನ್ನು) ಒಪ್ಪಲೇಬೇಕು.

**ಏವಂ ಪ್ರಸಕ್ತ ಪ್ರತಿಷೇಧಂ ವಿಧಾಯ, ಇದಾನೀಂ ಪರಿಶೇಷ-ಸಿದ್ಧಾರ್ಥಮಾಹ 'ಅತ' ಇತಿ । ಅತ್ರ 'ಅನುಮಾನಾದಿಭಿರ್ಧರ್ಮಾದ್ಯಸಿದ್ಧೇಃ' ಇತಿ ವಕ್ತವ್ಯೇ 'ಅಪೌರುಷೇಯವಾಕ್ಯೇನೈವ ಧರ್ಮಾದಿಸಿದ್ಧೇಃ' ಇತಿ ವಚನಂ 'ಅಪೌರುಷೇಯವಾಕ್ಯಾಙ್ಗೀಕಾರೇ ತು ನ ಕಾಚಿದನುಪಪತ್ತಿಃ' ಇತಿ ಸೂಚಯಿತುಮ್ । ತಚ್ಚ ವಾಕ್ಯಂ ವೇದ ಏವ ಪರಿಶೇಷಾತ್ । ತದತರಿಕ್ತಾನಿ ಹಿ ಕರ್ತೃಪ್ರಸಿದ್ಧಮನ್ತಿ ನ ಚ ಧರ್ಮಾದಿವ್ಯವಸ್ಥಾಪಕಾಣಿ । ನ ಚೈವಂ ವೇದ ಇತಿ ಭಾವಃ । ನನ್ವೇವಂ ಸತಿ ವೇದೇನೈವ ಸರ್ವೇಷಾಂ ಧರ್ಮಾದಿಪ್ರತಿಪತ್ತಿರಿತ್ಯಾಯಾತಮ್ । (ತರ್ಹಿ ವಾದಿವಿಪ್ರತಿಪತ್ತಿರ್ನ ಸ್ಯಾತ್ ।) ಸತ್ಯಮೇವ ತತ್ । ಕಿನ್ತು ಧರ್ಮಾದಿಸ್ವರೂಪೇ ವೇದೇನ ಪ್ರತೀತೇ ತದ್ವಿಶೇಷೇಷು ತಮತಿಕ್ರಮ್ಯ ಸ್ವಮತಿದೋಷಾತ್ ವಾದಿನಾಂ ವಿಪ್ರತಿಪತ್ತಯಃ ಪ್ರತೀಯನ್ತೇ । ಅನ್ಯಥಾ ಧರ್ಮಾದೇರ್ಬುದ್ಧೌ ಆರೋಹಸ್ಯೈವಾ-ಸಮ್ಭವಾದಿತಿ ।**

ಹೀಗೆ ಪ್ರಸಕ್ತವಾದದನ್ನು ನಿಷೇಧಿಸಿ ಈಗ ಪರಿಶೇಷಪ್ರಮಾಣದಿಂದ ಸಿದ್ಧವಾದ ವಿಷಯವನ್ನು ಹೇಳುತ್ತಾರೆ 'ಅತಃ' ಎನ್ನುವುದರಿಂದ. ಇಲ್ಲಿ 'ಅನುಮಾನಾದಿಗಳಿಂದ ಧರ್ಮಾದಿಗಳ ಸಿದ್ಧಿಯಾಗದಿರುವುದರಿಂದ' ಎಂದು ಹೇಳುವ ಸಂದರ್ಭದಲ್ಲಿ **'ಅಪೌರುಷೇಯವಾಕ್ಯೇನೈವ ಧರ್ಮಾದಿಸಿದ್ಧೇಃ'** (ಅಪೌರುಷೇಯವಾಕ್ಯದಿಂದಲೇ ಧರ್ಮಾದಿಗಳ ಸಿದ್ಧಿಯಾಗುವುದರಿಂದ) ಎಂದು ಹೇಳಿರುವುದು, 'ಅಪೌರುಷೇಯವಾದ ವಾಕ್ಯವನ್ನು ಒಪ್ಪಿದಲ್ಲಿ ಯಾವ ವಿಧವಾದ (ಕಲ್ಪನಾಗೌರವಾದಿ)ಅನುಪಪತ್ತಿ' ಇಲ್ಲ ಎಂದು ಸೂಚಿಸಲು[1]. ಆ

1. ಮೂಲದಲ್ಲಿ 'ಧರ್ಮಾದಿಗಳ ವಿಷಯದಲ್ಲಿ ಕೇವಲ ಅನುಮಾನಾದಿಗಳು ಪ್ರಮಾಣವಾಗಲಾರದು' ಎಂದು ತಿಳಿಸಿ, 'ಅನುಮಾನಾದಿಗಳಿಂದ ಧರ್ಮಾದಿಗಳು ಸಿದ್ಧವಾಗುವುದಿಲ್ಲ' ಎಂದು ನಿಗಮನವನ್ನು ಮಾಡಬೇಕಿತ್ತು. ಆದರೆ ಇಲ್ಲಿ 'ಆದುದರಿಂದ ಅಪೌರುಷೇಯವಾಕ್ಯಗಳಿಂದಲೇ

ಪುಟ 230 ರಲ್ಲಿ........

(ಅಪೌರುಷೇಯ) ವಾಕ್ಯವಾದರೋ ಪರಿಶೀಲಿಸಲಾಗಿ ವೇದವೇ(ಎಂದು ನಿಶ್ಚಯವಾಗುವುದು). '(ವೇದದ ಹೊರತಾದ) ಇತರ ವಾಕ್ಯಗಳು ಕರ್ತೃಪ್ರಸಿದ್ಧಿಯನ್ನು ಹೊಂದಿವೆ, (ಆ ಪುರುಷನಿರ್ಮಿತ ವಾಕ್ಯಗಳು) ಧರ್ಮಾದಿಗಳ ವ್ಯವಸ್ಥಾಪಕಗಳಲ್ಲ, ವೇದಗಳಾದರೋ ಹಾಗಲ್ಲ' ಎಂದು ಭಾವ. ಹೀಗಾದಲ್ಲಿ, ವೇದದಿಂದಲೇ ಎಲ್ಲರಿಗೂ ಧರ್ಮಾದಿಗಳ ಅರಿವು ಎಂದಾಯಿತು. (ಹಾಗಾದಲ್ಲಿ ವಾದಿಗಳಲ್ಲಿ ಧರ್ಮದ ಬಗ್ಗೆ ಭಿನ್ನಾಭಿಪ್ರಾಯ ಇಲ್ಲದಿರ ಬೇಕಾದೀತು.) ಅದು ನಿಜವೇ. ಆದರೆ ಧರ್ಮಾದಿಗಳ ಸ್ವರೂಪವು ವೇದದಿಂದಲೇ ಪ್ರತೀತವಾದರೂ ಧರ್ಮಾದಿಗಳ ವಿಶೇಷ ವಿಷಯಗಳಲ್ಲಿ ಆ ವೇದವನ್ನು ಅತಿಕ್ರಮಿಸಿ ತಮ್ಮ ಬುದ್ಧಿದೋಷದಿಂದ ವಾದಿಗಳಿಗೆ ಭಿನ್ನಾಭಿಪ್ರಾಯಗಳು ಪ್ರತೀತವಾಗುವವು[1]. ಹಾಗಾಗದ ಪಕ್ಷದಲ್ಲಿ (ಧರ್ಮಸಾಮಾನ್ಯದ ಅರಿವು ವೇದದಿಂದ ಎಂದು ಒಪ್ಪದ ಪಕ್ಷದಲ್ಲಿ) ಧರ್ಮಾದಿಗಳು ಬುದ್ಧಿಯಲ್ಲಿ ಪ್ರತಿಪನ್ನವೇ ಆಗದಿರಬೇಕಾದೀತು ಎಂದು[2].

**-: ಅಪೌರುಷೇಯವಾಕ್ಯಗಳಿಂದಲೇ ಧರ್ಮದ ಸಿದ್ಧಿವಾದ ಸಮಾಪ್ತ :-**

...... ಪುಟ 11 ರಿಂದ

ಧರ್ಮಾದಿಗಳ ಸಿದ್ಧಿಯಾಗುವುದರಿಂದ' ಎಂದು ನಿಗಮನವನ್ನು ಮಾಡಿರುವರು. ಈ ರೀತಿಯಲ್ಲಿ ನಿಗಮನವನ್ನು ಮಾಡಿದ್ದರಿಂದ ಇಷ್ಟು ಸೂಚಿಸಿದಂತಾಗುವುದು- ಧರ್ಮಾದಿಗಳ ಸಿದ್ಧಿಗಾಗಿ 'ಬುದ್ಧಾದಿಗಳನ್ನು ಸರ್ವಜ್ಞರು' ಎಂದು ಎಲ್ಲೂ ಪ್ರಸಿದ್ಧವಲ್ಲದ್ದನ್ನು ಒಪ್ಪಬೇಕು, ಹಾಗೆಯೇ ಕೆಲವೊಂದು ವಾಕ್ಯಗಳನ್ನು 'ಬುದ್ಧಾದಿಗಳಿಂದ ಪ್ರಣೀತವಾಗಿದೆ' ಎಂದು ಕಲ್ಪಿಸಬೇಕು ಇತ್ಯಾದಿ ಅನೇಕ ಅಡಚಣೆಗಳಿವೆ, ಅಪೌರುಷೇಯವಾದ ವಾಕ್ಯವನ್ನು ಒಪ್ಪಿದಲ್ಲಿ ಇಂತಹ ಯಾವವಿಧವಾದ ಅಡಚಣೆಗಳು ಇಲ್ಲ ಎಂದು ಭಾವ.

1. 'ಮಾ ಹಿಂಸ್ಯಾತ್ ಸರ್ವಾ ಭೂತಾನಿ' ಎಂದು ಸಾಮಾನ್ಯವಾಗಿ ಧರ್ಮವು ವೇದದಿಂದಲೇ ಪ್ರತೀತವಾಗುವುದು. 'ಯಾಜ್ಞೀಯಾದಿ ಕರ್ಮಗಳಲ್ಲಿ ವಿಹಿತವಾದ ಹಿಂಸೆಯು ಪಾಪ ಸಾಧನವಲ್ಲ' ಎನ್ನುವ ವಿಶೇಷ ಸಂಗತಿಗಳನ್ನು ಮೀಮಾಂಸಾದಿಂದಲೇ ನಿಶ್ಚಯಿಸಬೇಕು. ಇಂತಹ ಸಂದರ್ಭಗಳಲ್ಲಿ ವಾದಿಗಳಲ್ಲಿ ವಿಪ್ರತಿಪತ್ತಿ ಬರುವ ಸಂಭಾವನೆಗಳಿವೆ. ಈ ಮೀಮಾಂಸೆಯು ಸ್ವಮನೀಷೋತ್ಥಿತವಾದುದರಿಂದ ವಿಪ್ರತಿಪತ್ತಿಗೆ ಅವಕಾಶವಿದೆ ಎಂದು ಭಾವ.

2. ಈ ವರೆಗಿನ ವಾದದಿಂದ 'ಧರ್ಮಾದಿಗಳ ಅರಿವು ಉಂಟಾಗುವದಾದಲ್ಲಿ, ವೇದದಿಂದಲೇ' ಎಂದು ಸಿದ್ಧವಾಗಿದೆ. ವೇದವನ್ನು ಒಪ್ಪದ ಪಕ್ಷದಲ್ಲಿ ಧರ್ಮಾದಿಗಳ ವಿಷಯಕವಾದ ಚರ್ಚೆ ಅನುಮಾನಾದಿಗಳಿಂದ ಆರಂಭವಾಗದಿರಬೇಕಾದೀತು. ಧರ್ಮ ಎಂಬ ಧರ್ಮಿಯೇ ಸಿದ್ಧವಾಗದಿರುವಾಗ, ಧರ್ಮ ವಿಷಯಕ ಅನುಮಾನವು ಆಶ್ರಯಾಸಿದ್ಧಿ ಮುಂತಾದ ದೂಷಣಕ್ಕೆ ಗುರಿಯಾಗುವುದು ಎಂದು.

## ॥ ಪ್ರಾಮಾಣ್ಯವು ಗುಣಾಧೀನವಲ್ಲ ॥

ಪ್ರಾಮಾಣ್ಯದ ಗ್ರಹಣವು ಸ್ವತಃ, ಜ್ಞಾನದ ಸಾಮಗ್ರಿಗಳ ನೆರವಿನಿಂದಲೇ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನೂ ಸಾಕ್ಷಿಯು ಗ್ರಹಿಸುತ್ತದೆ ಎಂದು ಈ ಹಿಂದೆ ವಿಶದಪಡಿಸಲಾಗಿದೆ. ಆದರೆ ಜನ್ಯವಾದ ಜ್ಞಾನದಲ್ಲಿ ಪ್ರಾಮಾಣ್ಯವು ಯಾವುದರಿಂದ ಜನ್ಯವಾಗುವುದು ಎಂಬ ಮುಖ್ಯ ಪ್ರಶ್ನೆಯು ಇದೆ. ವಾಕ್ಯವು ಪ್ರಮಾಣವೇ ಆಗದಿದ್ದಲ್ಲಿ ಸಾಕ್ಷಿಯು ಇಲ್ಲದ ಪ್ರಾಮಾಣ್ಯವನ್ನು ಗ್ರಹಿಸಲಾರದು ತಾನೇ? ಪ್ರಾಮಾಣ್ಯಕ್ಕೆ ಕಾರಣವಾದ ಆಪ್ತೋಕ್ತಿ ಎಂಬ ಗುಣವು ವೇದದಲ್ಲಿ ಇಲ್ಲ ಎಂದಾದಲ್ಲಿ ಈ ವಾಕ್ಯಗಳಿಗೆ ಪ್ರಾಮಾಣ್ಯವೇ ಇಲ್ಲವಾದೀತು ಎಂಬ ಮೂಲಭೂತಪ್ರಶ್ನೆಯನ್ನು ಇಲ್ಲಿ ಚರ್ಚಿಸಲಾಗಿದೆ. ಜ್ಞಾನವನ್ನು ಗ್ರಹಿಸುವ ಸಾಕ್ಷಿಯು ಅದರಲ್ಲಿನ ಪ್ರಾಮಾಣ್ಯವನ್ನು ಗ್ರಹಿಸುವದೋ ಹಾಗೆಯೇ ಜ್ಞಾನವು ಉತ್ಪನ್ನವಾಗುವಾಗಲೇ ಅದರ ಪ್ರಾಮಾಣ್ಯವೂ ಉತ್ಪನ್ನವಾಗುವುದು. ಪಿತ್ತನಿಮಿತ್ತವಾದ ಕಾಮಾಲೆ, ವಯೋನಿಮಿತ್ತವಾದ ಪೊರೆ ಮುಂತಾದ ದೋಷಗಳು ಇಲ್ಲದಿದ್ದಾಗ ಅಂತಹ ಕಣ್ಣಿನಿಂದ ಪ್ರಾಪ್ತವಾಗುವ ಅರಿವು ಪ್ರಮಾಣಭೂತವಾಗಿರುವುದು, ಅಂದರೆ ಜ್ಞಾನದಲ್ಲಿನ ಅಪ್ರಾಮಾಣ್ಯಕ್ಕೆ ದೋಷವು ಕಾರಣ, ಪ್ರಾಮಾಣ್ಯವು ಸಹಜ ಎಂದು ತಿಳಿಯುವುದು. ಹಾಗೆಯೇ ವಾಕ್ಯದಿಂದ ಪ್ರಾಪ್ತವಾಗುವ ಅರಿವಿನಲ್ಲೂ ಪ್ರಾಮಾಣ್ಯವು ಸಹಜ ವಾಗಿರುವುದು. ವಕ್ತೃವಿನಲ್ಲಿನ ದೋಷವೇ ವಾಕ್ಯದಲ್ಲಿನ ಅಪ್ರಾಮಾಣ್ಯಕ್ಕೆ ಕಾರಣ ಎಂಬುವುದು ಅನುಭವದಿಂದ ತಿಳಿದ ಸಂಗತಿ, ಇದನ್ನು ಆಚಾರ್ಯರು ವಿಶದ ಗೊಳಿಸಿರುವರು. ಪ್ರಾಮಾಣ್ಯದ ಜ್ಞಾನ ಮತ್ತು ಅದರ ಉತ್ಪತ್ತಿಯು ಸ್ವತಃ ಎನ್ನುವ ವಿಚಾರವನ್ನು ಶ್ರೀಮದಾಚಾರ್ಯರೇ ಪ್ರಥಮತಃ ಉಪದೇಶಿಸಿರುವರು. ಈ ವಿಚಾರವು ತತ್ವಶಾಸ್ತ್ರದಲ್ಲಿ ಅತಿ ಮೌಲಿಕವಾದ ವಿಚಾರ, ಎಲ್ಲ ವಿಚಾರಗಳ ಮುಖ್ಯ ಅಡಿಗಲ್ಲು.

### ವಾಕ್ಯದಲ್ಲಿನ ಪ್ರಾಮಾಣ್ಯಕ್ಕೆ ಆಪ್ತೋಕ್ತತ್ವದ ಆವಶ್ಯಕತೆಯಿಲ್ಲ

**ತತ್ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಮ್ ।**

ಅದರ (ವೇದದ) ಪ್ರಾಮಾಣ್ಯವಾದರೋ ಸ್ವತಃ ಸಿದ್ಧವಾಗಿದೆ.

**ನನು, ವಾಕ್ಯಸ್ಯ ಯಥಾರ್ಥಜ್ಞಾನಸಾಧನತ್ವಲಕ್ಷಣಂ ಪ್ರಾಮಾಣ್ಯಂ ಆಪ್ತೋಕ್ತತ್ವಗುಣಾಧೀನಂ ಸರ್ವತ್ರೋಪಲಬ್ಧಮ್ । ಅತ ಏವ ವಾಕ್ಯಜನ್ಯ-**

ಜ್ಞಾನಸ್ಯಾಪಿ ಯಾಥಾರ್ಥ್ಯರೂಪಂ ಪ್ರಾಮಾಣ್ಯಂ ವಾಕ್ಯಗತಾಽಽಪ್ತೋಕ್ತತ್ವ-ಗುಣಜನ್ಯಮ್ । ತಥಾಚ ವೇದಸ್ಯಾಪೌರುಷೇಯತಾಯಾಂ ಗುಣಾಭಾವಾತ್ ಪ್ರಾಮಾಣ್ಯಂ ನ ಸ್ಯಾತ್ । ನ ಹಿ ಬೀಜಸ್ಯ ಕಲಮತ್ವಾಭಾವೇ ಕಲಮಾಙ್ಕುರಂ ಪ್ರತಿ ಕಾರಣತ್ವಮಸ್ತಿ ? ಅತ ಏವ ಕಾರಣಾಭಾವಾತ್ ಜ್ಞಾನಸ್ಯಾಪಿ ಪ್ರಾಮಾಣ್ಯಂ ನ ಭವೇದ್ ಇತ್ಯಾಹ **'ತತ್ ಪ್ರಾಮಾಣ್ಯಂ ಚ'** ಇತಿ । ತಸ್ಯ-ವೇದಸ್ಯ ಯಾಥಾರ್ಥಜ್ಞಾನಜನಕತ್ವಲಕ್ಷಣಂ ಪ್ರಾಮಾಣ್ಯಮಾಪ್ತೋಕ್ತತ್ವ-ಲಕ್ಷಣಗುಣನಿರಪೇಕ್ಷೇಣ ಸ್ವರೂಪೇಣೈವ ಸಿದ್ಧಮ್ । ತಥಾ ಜ್ಞಾನಸ್ಯಾಪಿ ಯಥಾರ್ಥ್ಯರೂಪಂ ಪ್ರಾಮಾಣ್ಯಂ ಗುಣಾನಪೇಕ್ಷೇಣ ವಾಕ್ಯೇನೈವೋತ್ಪದ್ಯತೇ ಇತಿ ಸಿದ್ಧಮ್ ।

ಹಾಗಾದಲ್ಲಿ, ವಾಕ್ಯಕ್ಕೆ ಯಥಾರ್ಥಜ್ಞಾನಸಾಧನತ್ವರೂಪ ಪ್ರಾಮಾಣ್ಯವು ಆಪ್ತೋಕ್ತತ್ವವೆಂಬ ಗುಣದ ಅಧೀನವಾಗಿರುವುದು ಎಲ್ಲೆಡೆಯೂ ಕಂಡಿದೆ[1]. ಆದುದರಿಂದಲೇ ವಾಕ್ಯದಿಂದ ಉಂಟಾದ ಜ್ಞಾನಕ್ಕೂ ಸಹ ಪ್ರಾಮಾಣ್ಯವು ವಾಕ್ಯದಲ್ಲಿರುವ ಆಪ್ತೋಕ್ತತ್ವಗುಣದಿಂದಲೇ ಜನ್ಯವಾಗಬೇಕು. ಹಾಗಾದಲ್ಲಿ ಅಪೌರುಷೇಯವಾದ ವೇದದಲ್ಲಿ (ಆಪ್ತೋಕ್ತತ್ವರೂಪ) ಗುಣವಿಲ್ಲದಿರುವುದ-ರಿಂದ ಪ್ರಾಮಾಣ್ಯವೂ ಇಲ್ಲದಾದೀತು[2]. ಬೀಜದಲ್ಲಿ ಕಲಮತ್ವವಿಲ್ಲದ ಪಕ್ಷದಲ್ಲಿ, ಕಲಮಾಂಕುರಕ್ಕೆ ಕಾರಣವೂ ಆಗಲಾರದು. ಆದುದರಿಂದಲೇ (ಪ್ರಾಮಾಣ್ಯಕ್ಕೆ ಕಾರಣವಾದ ಆಪ್ತೋಕ್ತತ್ವರೂಪ) ಕಾರಣವಿಲ್ಲದಿರುವುದರಿಂದ (ವೇದಜನ್ಯ ವಾದ) ಜ್ಞಾನಕ್ಕೂ ಪ್ರಾಮಾಣ್ಯವಿಲ್ಲದೇ ಹೋದೀತು, ಆದುದರಿಂದ ಹೇಳುತ್ತಾರೆ

---

1. ಜ್ಞಾನಕರಣಗಳಾದ ಪ್ರತ್ಯಕ್ಷ, ಅನುಮಾನ ಮತ್ತು ವಾಕ್ಯಕ್ಕೆ ಪ್ರಾಮಾಣ್ಯವು ಪ್ರಮಾಸಾಧನತ್ವ ದಿಂದ ನಿಶ್ಚಿತವಾಗುವುದು. ಪ್ರಕೃತ ವಾಕ್ಯಕ್ಕೆ ಯಥಾರ್ಥಜ್ಞಾನಸಾಧನತ್ವವು ಪ್ರಾಪ್ತವಾಗ-ಬೇಕಿದ್ದಲ್ಲಿ ವಾಕ್ಯದಲ್ಲಿ ಆಪ್ತೋಕ್ತತ್ವರೂಪ ಗುಣವಿರಬೇಕು. ಅನಾಪ್ತನು ಹೇಳಿದ ವಾಕ್ಯಗಳಲ್ಲಿ ಪ್ರಾಮಾಣ್ಯವು ಇಲ್ಲದಿರುವುದು, ಆಪ್ತರು ಹೇಳಿದ ವಾಕ್ಯದಲ್ಲೇ ಪ್ರಾಮಾಣ್ಯವು ಇರುವುದು ಎಲ್ಲೆಡೆಯೂ ಕಂಡಿದೆ ಎಂದು ಭಾವ.

2. ಪ್ರತ್ಯಕ್ಷ- ಅನುಮಾನಗಳು ಶುದ್ಧವಾದಲ್ಲಿ -ದೋಷರಹಿತವಾದಲ್ಲಿ ಅದರಿಂದ ಬಂದ ಜ್ಞಾನವು ಪ್ರಮಿತವಾಗಿರುತ್ತದೆ. ಹಾಗೆಯೇ ವಾಕ್ಯವು ತನ್ನ ಪ್ರಾಮಾಣ್ಯಕ್ಕೆ ಕಾರಣವಾದ ಗುಣದಿಂದ ಯುಕ್ತವಾದಲ್ಲಿ ವಾಕ್ಯಜನ್ಯವಾದ ಜ್ಞಾನದಲ್ಲಿ ಪ್ರಾಮಾಣ್ಯವಿರಲು ಸಾಧ್ಯ. ವೇದವಾದರೋ ಅಪೌರುಷೇಯ, ಅದರಲ್ಲಿ ಆಪ್ತೋಕ್ತತ್ವರೂಪಗುಣವಿಲ್ಲ. ತನ್ನಿಮಿತ್ತ ವೇದಜನ್ಯಜ್ಞಾನದಲ್ಲಿ ಪ್ರಾಮಾಣ್ಯವಿಲ್ಲದಾದೀತು ಎಂದು ಭಾವ.

**'ತತ್ ಪ್ರಾಮಾಣ್ಯಂ ಚ'** ಎನ್ನುವುದರಿಂದ. ತಸ್ಯ - ವೇದಕ್ಕೆ ಯಥಾರ್ಥಜ್ಞಾನ-ಜನಕತ್ವರೂಪವಾದ ಪ್ರಾಮಾಣ್ಯವು, ಆಪ್ತೋಕ್ತತ್ವ ರೂಪವಾದ ಗುಣದ ಅಪೇಕ್ಷೆ ಇಲ್ಲದಂತೆ ಸ್ವಭಾವತಃ ಸಿದ್ಧವಾಗುವುದು. ಹಾಗೆಯೇ (ವೇದವಾಕ್ಯದಿಂದ ಜನ್ಯವಾದ) ಜ್ಞಾನಕ್ಕೂ ಸಹ ಯಾಥಾರ್ಥ್ಯರೂಪ ಪ್ರಾಮಾಣ್ಯವು ಗುಣವನ್ನು (ಆಪ್ತೋಕ್ತತ್ವವನ್ನು) ಅಪೇಕ್ಷಿಸದೇ ವಾಕ್ಯದಿಂದಲೇ ಉತ್ಪನ್ನವಾಗುವುದು ಎಂದೂ ಸಿದ್ಧವಾಗಿದೆ.

**ಪ್ರಾಮಾಣ್ಯೋತ್ಪತ್ತಿಯು ಗುಣಾಧೀನವಲ್ಲ**

**ಅಯಮಾಶಯಃ - ವೇದಸ್ಯಾಪೌರುಷೇಯತ್ವಂ ತಾವದ್ ಉಕ್ತವಕ್ಷ್ಯ-ಮಾಣಾನೇಕಪ್ರಮಾಣಸಿದ್ಧಮ್ । ಗುಣಸ್ಯ ಪೌರುಷೇಯವಾಕ್ಯೇಷು ಸನ್ನಿಧಿಃ ದೃಶ್ಯತೇ । ತತ್ರ ಕಿಂ ದರ್ಶನಾಶ್ರಯೇಣ ಪ್ರಾಮಾಣ್ಯಂ ಪ್ರತಿ ಗುಣಸ್ಯ ಕಾರಣತ್ವಮಭ್ಯುಪಗಮ್ಯ ವೇದಾಪೌರುಷೇಯತ್ವಂ ತ್ಯಾಜ್ಯಂ, ಉತ ಪ್ರಮಾಣಾನುಸಾರೇಣ ವೇದಾಪೌರುಷೇಯತ್ವಮಙ್ಗೀಕೃತ್ಯ, ಕ್ವಚಿದ್ಗುಣ-ಸನ್ನಿಧೇಃ ಯಾದೃಚ್ಛಿಕತ್ವಂ ಗೃಹೀತ್ವಾ ಗುಣಾನಾಂ ಪ್ರಾಮಾಣ್ಯಕಾರಣತ್ವಂ ತ್ಯಾಜ್ಯಮ್? ಇತಿ ಸಂಶಯೇ ದ್ವಿತೀಯಪಕ್ಷ ಏವಾಶ್ರಯಿತುಮುಚಿತಃ ।**

**ಸಾವಕಾಶೇನ ಏಕೇನಾನವಕಾಶಾನಾಂ ಬಹೂನಾಂ ಬಾಧಸ್ಯಾಯುಕ್ತತ್ವಾತ್, ವೈಪರೀತ್ಯಸ್ಯೈವೋಪಪನ್ನತ್ವಾತ್ । ದೃಶ್ಯತೇ ಚ ಯಾದೃಚ್ಛಿಕಸಂವಾದಿನೋಃ ಅನಾಪ್ತವಾಕ್ಯಸ್ಯ ಗುಣಾಭಾವೇಽಪಿ ಯಥಾರ್ಥಜ್ಞಾನಜನಕತ್ವಮ್ । ನ ಚ ತತ್ರ ವಾಕ್ಯಸ್ಯಾಕಾರಣತ್ವಮ್ । ಕಾರಣಾನ್ತರಾನಿರೂಪಣೇನ ಅಕಾರಣಕಾರ್ಯೋ-ತ್ಪತ್ತಿಪ್ರಸಙ್ಗಾದಿತಿ ।**

ಇದು ಅಭಿಪ್ರಾಯ- ವೇದಕ್ಕೆ ಅಪೌರುಷೇಯತ್ವವು ಈಗಾಗಲೇ ಹೇಳಿದ, ಮುಂದೆ ಹೇಳಲಿರುವ ಅನೇಕ ಪ್ರಮಾಣಗಳಿಂದ ಸಿದ್ಧವಾಗಿದೆ. (ಆಪ್ತೋಕ್ತತ್ವ ರೂಪ) ಗುಣಕ್ಕೆ ಪೌರುಷೇಯವಾಕ್ಯಗಳೊಡನೆ ಸಾನ್ನಿಧ್ಯವು ಕಂಡಿದೆ[1]. ಇಲ್ಲಿ (ಆಪ್ತೋಕ್ತತ್ವಗುಣಕ್ಕೂ ಪ್ರಾಮಾಣ್ಯಕ್ಕೂ ಸಾಹಚರ್ಯದ) ದರ್ಶನವನ್ನು ಅನುಸರಿಸಿ, ಪ್ರಾಮಾಣ್ಯವನ್ನು ಕುರಿತು ಗುಣಕ್ಕೆ ಕಾರಣತ್ವವನ್ನು ಒಪ್ಪಿ, ವೇದಕ್ಕೆ

1. ಎಲ್ಲಿ ಎಲ್ಲಿ ಆಪ್ತೋಕ್ತಿಯು ಕಂಡಿದೆಯೋ ಅಂತಹ ಪೌರುಷೇಯ ವಾಕ್ಯಗಳು ಪ್ರಮಾಣವಾಗಿರುವುದು ಕಂಡಿದೆ ಎಂದು ಭಾವ.

ಅಪೌರುಷೇಯತ್ವವನ್ನು ಪರಿತ್ಯಜಿಸಬೇಕೋ, ಅಥವಾ ಪ್ರಮಾಣಗಳನ್ನು ಅನುಸರಿಸಿ ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪಿ, ಕೆಲವೆಡೆ ಕಂಡ ಗುಣದ ಸಾನಿಧ್ಯವನ್ನು ಆಕಸ್ಮಿಕವಾದದ್ದು ಎಂದು ತಿಳಿದು ಗುಣಗಳಿಗೆ ಪ್ರಾಮಾಣ್ಯ-ಕಾರಣತ್ವವನ್ನು ಪರಿತ್ಯಜಿಸಬೇಕೋ? ಎಂಬ ಸಂದೇಹ ಬರಲು, ಎರಡನೆಯ ಪಕ್ಷವನ್ನು ಆಶ್ರಯಿಸುವುದೇ ಯೋಗ್ಯ.

ಸಾವಕಾಶವಾದ ಒಂದರಿಂದ (ಒಂದು ಪ್ರಮಾಣದಿಂದ) ನಿರವಕಾಶವಾದ ಅನೇಕ ಪ್ರಮಾಣಗಳಿಗೆ ಬಾಧವನ್ನು ಹೇಳುವುದು ಅಯುಕ್ತವಾದುದರಿಂದ, ವಿಪರೀತ ನಿರ್ಣಯವೇ ಯೋಗ್ಯವಾದುದರಿಂದ[1]. ಮತ್ತೂ ಸಹ ಯಾದೃಚ್ಛಿಕ ಸಂವಾದಿಯಾದ ಅನಾಪ್ತನ ವಾಕ್ಯಕ್ಕೆ (ಆಪ್ತೋಕ್ತತ್ವರೂಪ) ಗುಣವಿಲ್ಲದಿದ್ದರೂ ಸಹ ಯಥಾರ್ಥ ಜ್ಞಾನಜನಕತ್ವವು ಕಂಡಿದೆ[2]. ಅಲ್ಲಿ (ಯಥಾರ್ಥಜ್ಞಾನೋತ್ಪತ್ತಿಗೆ) ವಾಕ್ಯಕ್ಕೆ ಕಾರಣತ್ವವನ್ನು ಒಪ್ಪಿಲ್ಲ ಎಂದೆನ್ನಲಾಗದು. ಬೇರೆ ಯಾವುದೇ ಕಾರಣಗಳನ್ನು ಹೇಳದೇ ಇರುವುದರಿಂದ 'ಕಾರಣವಿಲ್ಲದೇ ಕಾರ್ಯವು ಉತ್ಪನ್ನವಾಯಿತು' ಎಂಬ ಅತಿಪ್ರಸಂಗವು ಒದಗೀತು ಎಂದು[3].

1. 'ಪ್ರಾಮಾಣಿಕವಾದ ಪೌರುಷೇಯವಾಕ್ಯಕ್ಕೆ ಆಪ್ತೋಕ್ತತ್ವಗುಣಕ್ಕೂ ಸಾಹಚರ್ಯ' ಎಂಬ ಒಂದೇ ಕಾರಣದಿಂದ ಅವೆರಡಕ್ಕೂ ಕಾರ್ಯಕಾರಣಭಾವವನ್ನು ಅನುಮಾನಿಸಲಾಗಿದೆ. ಆದರೆ ಪ್ರಮಾಣಭೂತವಾದ ವೇದದ ಅಪೌರುಷೇಯತ್ವದ ಬಗ್ಗೆ ಹಿಂದೆ ಹೇಳಿದ ಮುಂದೆ ಹೇಳಲಿರುವ ಅನೇಕ ನಿರವಕಾಶ ಪ್ರಮಾಣಗಳು ಇವೆ. ಆ ಎಲ್ಲವನ್ನು ಅಲ್ಲಗಳೆಯುವುದು ತರವಲ್ಲ ಎಂದು ಭಾವ.

2. ಓರ್ವ ಮೋಸಗೊಳಿಸಲು ಸುಳ್ಳನ್ನೇ ಹೇಳಿದ್ದರೂ ಅದೃಷ್ಟವಶಾತ್ ಆತ ಹೇಳಿದಂತೆಯೇ ಆ ವಸ್ತುವು ಇರುವ ಸಂದರ್ಭವನ್ನು 'ಯಾದೃಚ್ಛಿಕ ಸಂವಾದಿ' ಎಂದು ಕರೆಯುತ್ತಾರೆ. ಪ್ರಕೃತ ಈ ಸಂದರ್ಭದಲ್ಲಿ ಮೋಸಗಾರನ ಮಾತಿನಲ್ಲಿ ಪರರು ನಂಬಿರುವಂತೆ ಪ್ರಾಮಾಣ್ಯಕ್ಕೆ ಕಾರಣವಾದ ಆಪ್ತೋಕ್ತತ್ವ ರೂಪ ಗುಣವಿಲ್ಲದಿದ್ದರೂ ಆ ವಾಕ್ಯವು ಪ್ರಮಾಣವಾಗಿದೆ. ಆದುದರಿಂದ ಪ್ರಾಮಾಣ್ಯಕ್ಕೆ ಗುಣ ಕಾರಣವಲ್ಲ ಎಂದು ಭಾವ.

3. ಮೋಸಗಾರನಾದ ಅನಾಪ್ತನು 'ನದೀ ತೀರದಲ್ಲಿ ಹಣ್ಣುಗಳಿವೆ' ಎಂದು ಹೇಳಿದನು. ಆ ಮಾತನ್ನು ಕೇಳಿದ ಓರ್ವ ವ್ಯಕ್ತಿ ತೀರಕ್ಕೆ ಹೋದನು ಅದೃಷ್ಟವಶಾತ್ ಹಣ್ಣುಗಳಿದ್ದವು. ಹಣ್ಣಿದ್ದುದರಿಂದ ಆ ವಾಕ್ಯವು ಯಥಾರ್ಥಜ್ಞಾನಕ್ಕೆ ಕಾರಣವಾಗಿದೆ. ಒಂದು ವೇಳೆ ಈ ವಾಕ್ಯವು ಈ ಯಥಾರ್ಥವಾದ ಜ್ಞಾನಕ್ಕೆ ಕಾರಣವಲ್ಲ ಎಂದರೆ ಬೇರೆ ಯಾವುದು ಕಾರಣ ಎಂದು ನಿರೂಪಿಸಬೇಕು. ಈ ವಾಕ್ಯದ ಹೊರತಾಗಿ ಮತ್ತಾವುದನ್ನೂ ಕಾರಣ ಎಂದು ಹೇಳಲು ಶಕ್ಯವಿಲ್ಲ ಹೀಗಾಗಿ ಕಾರಣವಿಲ್ಲದೆ ಕಾರ್ಯವಾಯಿತು ಎಂದು ಒಪ್ಪಬೇಕಾದೀತು ಎಂದು ಭಾವ.

**ಏತೇನ 'ಪ್ರಮಾ ಜ್ಞಾನಹೇತ್ವತಿರಿಕ್ತಹೇತ್ವಧೀನಾ ಕಾರ್ಯತ್ವೇ ಸತಿ ತದ್ವಿಶೇಷತ್ವಾತ್, ಅಪ್ರಮಾಣವತ್' ಇತ್ಯಪಿ ಬಾಧಿತವಿಷಯತ್ವೇನ ಪರಾಸ್ತಮ್ ।**

ಇದರಿಂದ (ಜ್ಞಾನಸಾಮಗ್ರಿಗಳೇ ಅರಿವಿನಲ್ಲಿನ ಪ್ರಾಮಾಣ್ಯದ ಗ್ರಹಣಕ್ಕೂ ಕಾರಣ ಎಂದು ಹೇಳಿದ್ದರಿಂದ) 'ಜ್ಞಾನದಲ್ಲಿನ ಸತ್ಯತೆಯು ಜ್ಞಾನಕ್ಕೆ ಕಾರಣವಾದ ಸಾಮಗ್ರಿಯಿಂದ ಬೇರೆಯಾದ ಕಾರಣದ ಅಧೀನವಾಗಿದೆ (ಬೇರೇಯಾದ ಸಾಮಗ್ರಿಯಿಂದ ಉತ್ಪನ್ನವಾದ) ಕಾರ್ಯವಾಗಿದೆ ಹಾಗೂ ಜ್ಞಾನದ ವಿಶೇಷಧರ್ಮವಾದುದರಿಂದ, ಅಪ್ರಮಾದಂತೆ' ಎನ್ನುವ ಅನುಮಾನವೂ ಬಾಧಿತವಿಷಯವಾದುದರಿಂದ ನಿರಾಕೃತವಾಯಿತು[1].

---

1. ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಇವೆರಡೂ ಜ್ಞಾನದ ಧರ್ಮಗಳು. ಇವುಗಳಲ್ಲಿ ಅಪ್ರಾಮಾಣ್ಯವು ಜ್ಞಾನಸಾಮಗ್ರೀ ಮಾತ್ರಗ್ರಾಹ್ಯವಲ್ಲ. 'ಇದಂ ರಜತಂ' ಎನ್ನುವುದು ಒಂದು ಭ್ರಮಾಜ್ಞಾನ, ಈ ಜ್ಞಾನವು 'ಇದಂ' ಪದಾರ್ಥಕ್ಕೂ ಮತ್ತು ಚಕ್ಷುರಿಂದ್ರಿಯಕ್ಕೂ ಆದ ಸನ್ನಿಕರ್ಷ, ಈ ಮುಂತಾದ ಸಾಮಗ್ರಿಗಳಿಂಧ ಜನ್ಯವಾಗಿದೆ. ಆದರೆ ಈ ಜ್ಞಾನದಲ್ಲಿನ ಅಪ್ರಾಮಾಣ್ಯಕ್ಕೆ ಕಾರಣವಾದುದು ಚಕ್ಷುರಿಂದ್ರಿಯದ ಸನ್ನಿಕರ್ಷ ಮುಂತಾದ ಜ್ಞಾನಜನಕ ಸಾಮಗ್ರಿಗಳಲ್ಲ. ಮತ್ತೆ ಇದಂ ಪದಾರ್ಥದಲ್ಲಿರುವ ರಜತದ ಸಾದೃಶ್ಯಾದಿಗಳು ಅಪ್ರಾಮಾಣ್ಯಜ್ಞಾನಕ್ಕೆ ಕಾರಣವಾಗಿದೆ. ಜ್ಞಾನದ ಧರ್ಮವೇ ಆದ ಅಪ್ರಾಮಾಣ್ಯಕ್ಕೆ ಹೇಗೆ ಜ್ಞಾನ ಸಾಮಗ್ರೀ ಮಾತ್ರ ಕಾರಣವಾಗಿರದೆ, ಅತಿರಿಕ್ತವಾದ ದೋಷಾದಿಗಳು ಕಾರಣವಾಗಿವೆಯೋ ಹಾಗೆಯೇ ಜ್ಞಾನದ ಧರ್ಮವಾದ ಪ್ರಾಮಾಣ್ಯಕ್ಕೂ ಸಹ ಜ್ಞಾನಕಾರಣ ಸಾಮಗ್ರೀಭಿನ್ನವಾದದ್ದು ಕಾರಣವಾಗಲಿ ಎಂದು ಈ ಮೇಲಿನ ಅನುಮಾನದ ಅಭಿಪ್ರಾಯ. ಈ ಅನುಮಾನದಲ್ಲಿ 'ಕಾರ್ಯತ್ವೇ ಸತಿ ತದ್ವಿಶೇಷತ್ವಾತ್' ಎನ್ನುವುದು ಹೇತು. ಇಲ್ಲಿ ಕೇವಲ ಕಾರ್ಯತ್ವಾತ್ ಎಂದು ಹೇತುವನ್ನು ವಿವಕ್ಷಿಸಿದಲ್ಲಿ ಕಾರ್ಯವಾದ ಜ್ಞಾನದಲ್ಲಿ ಹೇತುವು ಇದೆ, ಆದರೆ ಅಲ್ಲಿ ಜ್ಞಾನಕಾರಣಾತಿರಿಕ್ತಕಾರಣತ್ವರೂಪ ಸಾಧ್ಯವು ಇಲ್ಲದಿರುವುದರಿಂದ ಹೇತುವು ವ್ಯಭಿಚರಿತವಾಗುತ್ತಿತ್ತು, ಆದಕ್ಕಾಗಿ ತದ್ವಿಶೇಷತ್ವಾತ್ ಎನ್ನುವುದನ್ನು ಸಂಯೋಜಿಸಲಾಗಿದೆ. ಕೇವಲ ಜ್ಞಾನವಿಶೇಷತ್ವಾತ್ ಎಂದು ಹೇತುವನ್ನು ವಿವಕ್ಷಿಸಿದಲ್ಲಿ ಈಶ್ವರಪ್ರಮಾದಲ್ಲಿ ವ್ಯಭಿಚಾರವು ಪ್ರಾಪ್ತವಾಗುವುದು. ಈಶ್ವರಪ್ರಮಾವು ಜ್ಞಾನವಿಶೇಷವಾಗಿದೆ, ಅದು ನಿತ್ಯವಾದುದರಿಂದ ಹೇತ್ವಧೀನತ್ವ ರೂಪ ಸಾಧ್ಯವು ಇಲ್ಲದಿರುವುದರಿಂದ. ಒಟ್ಟಿನಲ್ಲಿ 'ಜ್ಞಾನಕಾರಣಜನ್ಯತ್ವೇ ಸತಿ ತದಿತರಕಾರಣಕತ್ವಾತ್ ' ಎಂದು ಹೇತುವಿನ ಪರಿಷ್ಕಾರ ವಾಗುವುದು. ಜ್ಞಾನದ ಧರ್ಮಗಳಾದ, ಅಪ್ರಾಮಾಣ್ಯವು ಜ್ಞಾನಕಾರಣಾತಿರಿಕ್ತವಾದ

ಪುಟ 236ರಲ್ಲಿ........

**'ಎಲ್ಲ ಬಗೆಯ ವಾಕ್ಯಗಳೂ ಪ್ರಮಾಜನಕವಾಗಲಿ' ಎಂದಾಪಾದಿಸಲಾಗದು**

**ನನು, ಯದಿ ವಾಕ್ಯಮಾತ್ರಸ್ಯ ಯಥಾರ್ಥಜ್ಞಾನಜನಕತ್ವಂ ತದಾ ಬೌದ್ಧಾದಿವಾಕ್ಯಸ್ಯಾಪಿ ತತ್ ಸ್ಯಾತ್ । ತತಶ್ಚ ತಜ್ಜನ್ಯಂ ಜ್ಞಾನಂ ಯಥಾರ್ಥಮ್ ಆಪದ್ಯೇತ? ಇತಿ ಚೇತ್, ಮೈವಮ್- ತಸ್ಯಾಜ್ಞಾನ-ವಿಪ್ರಲಂಭಾದಿದೋಷಮೂಲತ್ವೇನಾಯಥಾರ್ಥಜ್ಞಾನಜನಕತ್ವಾತ್ । ವಾಕ್ಯ-ಗತಾ ಹಿ ದೋಷಾಸ್ತಸ್ಯ ಯಥಾರ್ಥಜ್ಞಾನಜನನಶಕ್ತಿಂ ಪ್ರತಿಬಧ್ಯ ವಿಪರೀತ-ಜ್ಞಾನಜನನಶಕ್ತಿಮ್ ಆವಿರ್ಭಾವಯನ್ತಿ । 'ಔತ್ಸರ್ಗಿಕತ್ವಾತ್ ಸ್ವತಃ ಪ್ರಾಮಾಣ್ಯಸ್ಯಾಪವಾದೇನ ಅಪ್ರಾಮಾಣ್ಯಂ ಭವತಿ' ಇತಿ ಕಿಮನುಪ-ಪನ್ನಮ್ ?**

ಹಾಗಾದಲ್ಲಿ, ಒಂದು ವೇಳೆ ಎಲ್ಲಾ ವಾಕ್ಯಗಳೂ ಯಥಾರ್ಥಜ್ಞಾನಜನಕಗಳು ಎಂದು ಒಪ್ಪಿದಲ್ಲಿ, ಬೌದ್ಧಾದಿಗಳ ವಾಕ್ಯಗಳಿಗೂ ಅದು (ಯಥಾರ್ಥಜ್ಞಾನ ಜನಕತ್ವವು) ಇದೆ ಎಂದಾದೀತು. ಹಾಗಾಗಿ ಅದರಿಂದ (ಬೌದ್ಧಾದಿ ವಾಕ್ಯಗಳಿಂದ) ಜನ್ಯವಾದ ಜ್ಞಾನವು ಯಥಾರ್ಥವಾಗಲಿ ಎಂದು ಆಪಾದಿಸಲಾಗುವುದು, ಎಂದರೆ ಅದು ಹಾಗಲ್ಲ- ಅವುಗಳು (ಬೌದ್ಧಾದಿ ವಾಕ್ಯಗಳು) ಅಜ್ಞಾನ, ಮೋಸಗಾರಿಕೆ ಮುಂತಾದ ದೋಷಮೂಲವಾದದು, ಆದುದರಿಂದ ಅಯಥಾರ್ಥಜ್ಞಾನಜನಕಗಳಾಗಿವೆ. ವಾಕ್ಯಗಳಲ್ಲಿರುವ ದೋಷಗಳಾದರೋ ಅದರ ಯಥಾರ್ಥಜ್ಞಾನಜನಕ ಶಕ್ತಿಯನ್ನು ತಡೆದು ವಿರುದ್ಧಜ್ಞಾನ ಜನನ

---

...... ಪುಟ 235 ರಿಂದ

ದೋಷಜನ್ಯ, ಪ್ರಾಮಾಣ್ಯವು ಜ್ಞಾನಕಾರಣಾತಿರಿಕ್ತ ಗುಣಜನ್ಯ ಎಂದು ತಿಳಿಸಿದಂತಾಯಿತು. ಆದರೆ ಈ ಅನುಮಾನವು ಬಾಧಿತವಾಗಿದೆ- ಪರರ ಅಭಿಪ್ರಾಯದಂತೆ ವಾಕ್ಯವೂ ಶಾಬ್ದಬೋಧಕ್ಕೆ ಮಾತ್ರಕಾರಣವಾಗುತ್ತದೆ ಅದರಲ್ಲಿನ ಪ್ರಾಮಾಣ್ಯವು ಆಪ್ತೋಕ್ತತ್ವ ರೂಪಗುಣದಿಂದ ಉತ್ಪನ್ನವಾಗುವುದು ಎಂದು. ಆದರೆ ಈ ಮೇಲೆ ಉದಾಹರಿಸಿದ ಯಾದೃಚ್ಛಿಕ ಸಂವಾದಿ ವಾಕ್ಯದಲ್ಲಿ ಆಪ್ತೋಕ್ತತ್ವ ಗುಣವಿಲ್ಲದಿದ್ದರೂ ಪ್ರಾಮಾಣ್ಯವಿದೆ, ಆದುದರಿಂದ ಗುಣಜನ್ಯ ಎಂಬ ನಿಯಮವು ಬಾಧಿತವಾಯಿತು ಎಂದು ಭಾವ. ವಸ್ತುತಃ ಪರರು ಹೇಳಿದ 'ಕಾರ್ಯತ್ವೇ ಸತಿ ತದ್ವಿಶೇಷತ್ವಾತ್' ಎಂಬ ಹೇತುವಿಗೆ ಯಾದೃಚ್ಛಿಕ ಸಂವಾದಿಯಾದ ವಾಕ್ಯದಲ್ಲಿ ವ್ಯಭಿಚಾರವನ್ನು ಹೇಳಬೇಕೇ ಹೊರತು ಬಾಧವು ಹೇಗೆ? ಜ್ಞಾನದಲ್ಲಿನ ಪ್ರಮಾವೂ ಸಹ ಒಂದು ಜ್ಞಾನವಿಶೇಷವೇ ಆಗಿದೆ . ಜ್ಞಾನಕ್ಕೆ ಜ್ಞಾನಾತಿರಿಕ್ತ ಸಾಮಗ್ರಿ ಕಾರಣ ಎಂದು ಒಪ್ಪಿದರೆ ಪ್ರಕೃತದಲ್ಲಿ ಬಾಧವು ಕಂಡಿದೆ ಎಂದು ಭಾವ.

ಶಕ್ತಿಯನ್ನು ಪ್ರಕಟಗೊಳಿಸುತ್ತವೆ[1]. ('ಪ್ರಾಮಾಣ್ಯವು ಸ್ವತಃ' ಎನ್ನುವುದು) ಸಾಪವಾದ ನಿಯಮವಾಗಿರುವುದರಿಂದ, ಪ್ರಾಮಾಣ್ಯದ (ಪರಿಗ್ರಹಣವು ಆಗಿರದ ಸಂದರ್ಭದಲ್ಲಿ) ಅಪವಾದದಿಂದ ಅಪ್ರಾಮಾಣ್ಯವೂ (ಅಪ್ರಾಮಾಣ್ಯದ ಗ್ರಹಣವು) ಉಂಟಾಗುವುದು ಎಂದಲ್ಲಿ ಅನುಪಪನ್ನ ವಾದುದು ಏನು [2]?

**ಅಪ್ರಾಮಾಣ್ಯವು ಪರತಃ' ಎಂದು ಒಪ್ಪಲೇ ಬೇಕು**

**ಅಪ್ರಾಮಾಣ್ಯಸ್ಯ ಚ ಪರತಸ್ತ್ವಾನಙ್ಗೀಕಾರೇ ದುಷ್ಟೇಂದ್ರಿಯಾದೇರಪಿ ಅಪ್ರಾಮಾಣ್ಯಹೇತುತ್ವಂ ನ ಸ್ಯಾತ್ । ತದನಙ್ಗೀಕಾರೇ ಚಾನುಭವ-ವಿರೋಧಃ । ಅತಃ 'ಪ್ರಾಮಾಣ್ಯಂ ಸ್ವತಃ, ಪರತೋಽಪ್ರಾಮಾಣ್ಯಮ್' ಇತಿ ಸಿದ್ಧಮ್ ।**

'ಅಪ್ರಾಮಾಣ್ಯವು ಪರತಃ' ಎಂದು ಒಪ್ಪದ ಪಕ್ಷದಲ್ಲಿ ದುಷ್ಟೇಂದ್ರಿಯಾದಿ ಗಳಿಗೆ ಅಪ್ರಾಮಾಣ್ಯಕಾರಣತ್ವವು ಇಲ್ಲದೇ ಹೋದೀತು. ಅದನ್ನು ಒಪ್ಪದ ಪಕ್ಷದಲ್ಲಿ ಅನುಭವದ ವಿರೋಧ. ಆದುದರಿಂದ 'ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ' ಎಂದು ಸಿದ್ಧವಾಯಿತು.

**ವಾಕ್ಯಗತಸ್ಯಾಪ್ರಾಮಾಣ್ಯಸ್ಯ ದೋಷಾಧೀನತ್ವಂ ಕುತಃ? ಇತ್ಯತಸ್ತದ್ವಿಪಕ್ಷೇ ಬಾಧಕೇನೋಪಪಾದಯತಿ 'ಅಪ್ರಾಮಾಣ್ಯಸ್ಯ ಚ' ಇತಿ । ವಾಕ್ಯಗತಸ್ಯ ಅಯಥಾರ್ಥಜ್ಞಾನಜನಕತ್ವಲಕ್ಷಣಸ್ಯಾಪ್ರಾಮಾಣ್ಯಸ್ಯ ಪರತಸ್ತ್ವಾನಙ್ಗೀಕಾರೇ-ಪುರುಷದೋಷನಿಬಂಧನತ್ವಾನಙ್ಗೀಕಾರೇ ಕಾಚಾದಿವ್ಯಭಿಚಾರಾದಿ-**

---

1. ಚಕ್ಷುರಿಂದ್ರಿಯಾದಿಗಳು ಸಾಮಾನ್ಯವಾಗಿ 'ಅಯಂ ಘಟಃ' ಇತ್ಯಾದಿಯಾಗಿ ಯಥಾರ್ಥಜ್ಞಾನವನ್ನೇ ಉಂಟು ಮಾಡುವವು. ಅವುಗಳಲ್ಲಿ ಕಾಚ, ಕಾಮಲಾದಿ ದೋಷವಿದ್ದಲ್ಲಿ 'ಶಂಖಃ ಪೀತಃ' ಇತ್ಯಾದಿ ಅಯಥಾರ್ಥ ಜ್ಞಾನಕ್ಕೆ ಕಾರಣವಾಗುವವು . ಹಾಗೇ ಶಬ್ದಗಳೂ ಸಹ ಯಥಾರ್ಥಜ್ಞಾನಕ್ಕೆ ಕಾರಣವಾಗುವವು. ವಕ್ತೃದೋಷಾದಿಗಳಿದ್ದಲ್ಲಿ ಅಯಥಾರ್ಥಜ್ಞಾನಕ್ಕೂ ಕಾರಣವಾಗುವವು ಎಂದು ಭಾವ.

2. ವೇತ್ರಬೀಜವು ವೇತ್ರಾಂಕುರವನ್ನು ಉತ್ಪಾದಿಸುವುದು ಎನ್ನುವುದು ಸಾಪವಾದ ನಿಯಮ, ದಾವದಗ್ಧವಾದಾಗ ಕದಲೀಕಾಂಡಕ್ಕೆ ಕಾರಣವಾಗುವುದು ಎನ್ನುವುದು ಈ ನಿಯಮಕ್ಕೆ ಅಪವಾದ. ಹಾಗೆ 'ಪ್ರಾಮಾಣ್ಯಂ ಸ್ವತಃ' ಎನ್ನುವದು ಸಾಪವಾದ ನಿಯಮ. ದೋಷವು ಇದ್ದಾಗ ಸಾಕ್ಷಿಯ ಸಹಜ ಶಕ್ತಿಯನ್ನು ತಡೆದು ಅಪ್ರಾಮಾಣ್ಯದ ಗ್ರಹಣಕ್ಕೆ ಕಾರಣವಾಗಬಹುದು ಎಂಬುವುದು ಅಪವಾದ ಎಂದು ಭಾವ.

**ದುಷ್ಟಯೋಃ** ಇಂದ್ರಿಯಲಿಂಗಯೋರಪಿ, **ಅಪ್ರಾಮಾಣ್ಯಹೇತುತ್ವಂ-** ಜ್ಞಾನಗತಾಯಾಥಾರ್ಥ್ಯಹೇತುತ್ವಂ ನ ಸ್ಯಾತ್ ।

ವಾಕ್ಯಗಳಲ್ಲಿರುವ ಅಪ್ರಾಮಾಣ್ಯಕ್ಕೆ ದೋಷಗಳು ಕಾರಣ ಎನ್ನುವುದು ಏಕೆ? ಎಂದರೆ ಹಾಗೆ ಒಪ್ಪದ ಪಕ್ಷದಲ್ಲಿ ಬಾಧಕವಿದೆ ಎಂದು ಉಪಪಾದಿಸುತ್ತಾರೆ **'ಅಪ್ರಾಮಾಣ್ಯಸ್ಯ ಚ'** ಎನ್ನುವುದರಿಂದ. ವಾಕ್ಯದಲ್ಲಿರುವ ಭ್ರಮಾಜ್ಞಾನಜನಕತ್ವ ಎಂಬ ಅಪ್ರಾಮಾಣ್ಯಕ್ಕೆ **ಪರತಸ್ತ್ವಾನಙ್ಗೀಕಾರೇ** - (ವಕ್ತೃ) ಪುರುಷನ ದೋಷವು ಕಾರಣವೆಂದು ಒಪ್ಪದಿದ್ದಲ್ಲಿ, ಕಾಮಾಲೆ ಮೊದಲಾದ, ದೋಷಗಳಿಂದ ಕೂಡಿದ ಇಂದ್ರಿಯಗಳಿಗೆ, ವ್ಯಭಿಚಾರಾದಿ ದೋಷಗಳಿಂದ ಕೂಡಿದ ಹೇತುಗಳಿಗೆ **ಅಪ್ರಾಮಾಣ್ಯಹೇತುತ್ವಂ-** (ಆ ಆ) ಜ್ಞಾನದಲ್ಲಿನ ಅಪ್ರಾಮಾಣ್ಯಕಾರಣತ್ವವು (ಆ ದೋಷಗಳಿಗೆ) ಇಲ್ಲದೇ ಹೋಗಬೇಕಾದೀತು[2].

**ಜ್ಞಾನದ ಅಪ್ರಾಮಾಣ್ಯಕ್ಕೆ ಕರಣದ ದೋಷವೇ ಕಾರಣ**

**ಪುರುಷದೋಷಾಣಾಂ ವಾಕ್ಯಾಪ್ರಾಮಾಣ್ಯನಿಮಿತ್ತತ್ವಾಭಾವೋ ಹಿ ದ್ವೇಧಾ ಭವತಿ । ತಸ್ಯಾಪ್ರಾಮಾಣ್ಯಾಭಾವೇನ, ಅಪ್ರಾಮಾಣ್ಯಸ್ಯ ಸ್ವತಸ್ತ್ವೇನ ವಾ । ಆದ್ಯೇ ದುಷ್ಟೇಂದ್ರಿಯಾದೇರಪ್ರಾಮಾಣ್ಯಂ ನ ಸ್ಯಾತ್ । ದ್ವಿತಿಯೇ ಕಾಚಾದೀನಾಮಪೀಂದ್ರಿಯಾದ್ಯಪ್ರಾಮಾಣ್ಯೇ ನಿಮಿತ್ತತ್ವಂ ನ ಸ್ಯಾತ್ । 'ಅಸ್ತಿ ಚ ದುಷ್ಟೇಂದ್ರಿಯಾದೇರಪ್ರಾಮಾಣ್ಯಂ ಕಾಚಾದೇಶ್ಚ ತನ್ನಿಮಿತ್ತತ್ವಮ್' ಇತಿ । ಉಭಯಸ್ಯಾಪ್ಯನಭ್ಯುಪಗಮೇ ಕಿಂ ಬಾಧಕಮ್? ಇತ್ಯತ ಆಹ 'ತದನಙ್ಗೀಕಾರೇ ಚ' ಇತಿ । ಯದಿ ದುಷ್ಟೇಂದ್ರಿಯಾದೇರಪ್ರಾಮಾಣ್ಯಂ ನಾಙ್ಗೀಕ್ರಿಯತೇ ತದಾಽಪಿ ದ್ವಯೀ ಗತಿಃ । ಜ್ಞಾನಕಾರಣತ್ವಾಭಾವೋ ವಾ ಯಾಥಾರ್ಥ್ಯಂ ವಾ । ಆದ್ಯೇ ಜ್ಞಾನಸ್ಯೇಂದ್ರಿಯಾದ್ಯನ್ವಯವ್ಯತಿರೇಕಾ-ನುವಿಧಾನಾನುಭವವಿರೋಧಃ । ಜ್ಞಾನಸ್ಯೈವಾನಙ್ಗೀಕಾರೇ ಸಾಕ್ಷ್ಯನುಭವ-ವಿರೋಧಃ । ದ್ವಿತೀಯೇ ತು ಬಾಧಾನುಭವವಿರೋಧಃ । ತೃತೀಯೇ ತ್ವಪ್ರಾಮಾಣ್ಯಸ್ಯ ಕಾಚಾದ್ಯನ್ವಯವ್ಯತಿರೇಕಾನುಭವವಿರೋಧ ಏವ ।**

2.'ಪೀತಃ ಶಂಖಃ' ಎಂಬ ಅಯಥಾರ್ಥಜ್ಞಾನಕ್ಕೆ ಚಕ್ಷುರಿಂದ್ರಿಯದಲ್ಲಿನ ದೋಷವಾದ ಕಾಮಾಲೆಯೇ ಕಾರಣ. 'ಅಗ್ನಿರನುಷ್ಣಃ' ಎಂಬ ಅಯಥಾರ್ಥಾನುಮಿತಿಗೆ 'ದ್ರವ್ಯತ್ವಾತ್' ಎಂಬ ವ್ಯಭಿಚರಿತವಾದ ಹೇತುವು ಕಾರಣ ಎನ್ನುವುದು ಎಲ್ಲರ ಅನುಭವದಿಂದ ಸಿದ್ಧವಾದದು. ಇದನ್ನು ಒಪ್ಪದೇ ಇರಬೇಕಾದೀತು ಎಂದು ಭಾವ.

ಪುರುಷದೋಷಗಳಿಗೆ (ಅಜ್ಞಾನ ವಿಪ್ರಲಂಭಕತ್ವಾದಿಗಳಿಗೆ) ವಾಕ್ಯಗಳ ಅಪ್ರಾಮಾಣ್ಯಕ್ಕೆ ಕಾರಣತ್ವವಿಲ್ಲ ಎನ್ನುವುದನ್ನು ಎರಡು ವಿಧದಲ್ಲಿ ವ್ಯವಸ್ಥೆಗೊಳಿಸಬಹುದು. ಅದಕ್ಕೆ (ಆ ದುಷ್ಟವಾಕ್ಯಕ್ಕೆ) ಅಪ್ರಾಮಾಣ್ಯವಿಲ್ಲ ಎನ್ನುವುದರಿಂದ ಅಥವಾ ಅಪ್ರಾಮಾಣ್ಯವು ಸ್ವತಃ ಎನ್ನುವುದರಿಂದ. ಮೊದಲ ಪಕ್ಷದಲ್ಲಿ ದುಷ್ಟೇಂದ್ರಿಯಾದಿಗಳಿಗೆ ಅಪ್ರಾಮಾಣ್ಯವಿಲ್ಲ ಎಂದಾದೀತು[1]. ಎರಡನೆಯ ಪಕ್ಷದಲ್ಲಿ (ಅಪ್ರಾಮಾಣ್ಯವು ಸ್ವತಃ ಎನ್ನುವ ಪಕ್ಷದಲ್ಲಿ) ಕಾಮಾಲಾದಿಗಳು (ದೋಷಗಳು) ಇಂದ್ರಿಯಾದಿಗಳ ಅಪ್ರಾಮಾಣ್ಯಕ್ಕೆ ಕಾರಣವಾಗದೇ ಹೋದೀತು. ಆದರೆ ದುಷ್ಟೇಂದ್ರಿಯಾದಿಗಳಿಗೆ ಅಪ್ರಾಮಾಣ್ಯ, ಕಾಮಾಲಾದಿಗಳಿಗೆ ಅದರ (ಅಪ್ರಾಮಾಣ್ಯದ) ಕಾರಣತ್ವವು ಇದೆ. ಇವೆರಡನ್ನು (ದುಷ್ಟೇಂದ್ರಿಯಗಳಿಗೆ ಅಪ್ರಾಮಾಣ್ಯವನ್ನು, ಕಾಮಲಾದಿ ದೋಷಗಳಿಗೆ ಅಪ್ರಾಮಾಣ್ಯಕಾರಣತ್ವವನ್ನು ) ಒಪ್ಪದಿದ್ದಲ್ಲಿ ಏನು ಬಾಧಕ ? ಆದುದರಿಂದ ಉತ್ತರಿಸುತ್ತಾರೆ – '**ತದನಙ್ಗೀಕಾರೇ ಚ**' ಎನ್ನುವುದರಿಂದ. ಒಂದು ವೇಳೆ ದುಷ್ಟೇಂದ್ರಿಯಗಳಿಗೆ ಅಪ್ರಾಮಾಣ್ಯವನ್ನು ಒಪ್ಪದಿದ್ದಲ್ಲಿ ಆಗಲೂ ಸಹ ಎರಡು ವಿಧವಾದ ವ್ಯವಸ್ಥೆಯನ್ನು (ಒಪ್ಪಬೇಕು). (ದುಷ್ಟೇಂದ್ರಿಯಗಳಿಗೆ) ಜ್ಞಾನಕಾರಣತ್ವವಿಲ್ಲ, ಅಥವಾ (ದುಷ್ಟೇಂದ್ರಿಯಜನ್ಯವಾದ ಜ್ಞಾನವು) ಯಥಾರ್ಥ ಎಂದು. ಮೊದಲ ಪಕ್ಷದಲ್ಲಿ (ದುಷ್ಟೇಂದ್ರಿಯಗಳಿಗೆ ಜ್ಞಾನಕಾರಣತ್ವ ವಿಲ್ಲ, ಎನ್ನುವ ಪಕ್ಷದಲ್ಲಿ) ಜ್ಞಾನಕ್ಕೂ ಇಂದ್ರಿಯಗಳಿಗೂ ಇರುವ ಅನ್ವಯ-ವ್ಯತಿರೇಕದ ಅನುಭವ ವಿರೋಧವು ಪ್ರಾಪ್ತವಾಗುವುದು. ಜ್ಞಾನವನ್ನೇ ಒಪ್ಪದ ಪಕ್ಷದಲ್ಲಿ ಸಾಕ್ಷಿಯ ಅನುಭವದ ವಿರೋಧ[2]. ಎರಡನೆಯ ಪಕ್ಷದಲ್ಲಿ

---

1. ಅಪ್ರಮಾಣಭೂತಜ್ಞಾನಜನಕತ್ವವನ್ನೇ ಅನುಪ್ರಮಾಣವಾದ ಇಂದ್ರಿಯಾದಿಗಳ 'ಅಪ್ರಾಮಾಣ್ಯ' ಎಂದು ಶಾಸ್ತ್ರದಲ್ಲಿ ವ್ಯವಹರಿಸುವರು. ಅದು ಇಲ್ಲ ಎಂದಾದೀತೆಂದು ಭಾವ.

2. ಇಂದ್ರಿಯಗಳಿಗೆ ಜ್ಞಾನಕಾರಣತ್ವವನ್ನೇ ಒಪ್ಪುವದಿಲ್ಲ ಎನ್ನುವ ಪಕ್ಷವನ್ನು ಬುದ್ಧಿಯಲ್ಲಿ ಪುನಃ ವಿಕಲ್ಪವನ್ನು ಮಾಡಿಕೊಂಡಿರುವರು. ' ಜ್ಞಾನಕ್ಕೆ ಇಂದ್ರಿಯಗಳು ಕಾರಣವಲ್ಲವೋ ಅಥವಾ ಜ್ಞಾನವೇ ಇಲ್ಲವೋ ಎಂದು ವಿಕಲ್ಪ. ಈ ವಿಕಲ್ಪದಲ್ಲಿ ಮೊದಲ ಪಕ್ಷವು ಸರಿಯಾಗದು, ಇಂದ್ರಿಯಗಳಿದ್ದಲ್ಲಿ ಜ್ಞಾನ, ಇಂದ್ರಿಯಗಳು ಇಲ್ಲದಿದ್ದಲ್ಲಿ ಜ್ಞಾನವಿಲ್ಲ ಎಂಬ ಅನ್ವಯವ್ಯತಿರೇಕಾನುಭವದ ವಿರೋಧ. ಜ್ಞಾನವೇ ಇಲ್ಲ ಎನ್ನುವ ಎರಡನೇ ಪಕ್ಷವನ್ನು ಒಪ್ಪಿದಲ್ಲಿ , 'ಜ್ಞಾನವಾನ್ ಅಹಂ' ಎಂಬ ಅನುವ್ಯವಸಾಯವು ಇದೆ. ಅದರ ವಿರೋಧ ಎಂದು ಭಾವ.

(ದುಷ್ಟೇಂದ್ರಿಯಗೃಹೀತವಾದ ಜ್ಞಾನವನ್ನು ಯಥಾರ್ಥ ಎಂದು ಒಪ್ಪಿದ ಪಕ್ಷದಲ್ಲಿ) ಬಾಧಾನುಭವದ ವಿರೋಧ [1]. ಮೂರನೇ ಪಕ್ಷದಲ್ಲಾದರೋ[2], (ಇಂದ್ರಿಯದ )ಅಪ್ರಾಮಾಣ್ಯಕ್ಕೆ ಕಾಚಾದಿಗಳ (ದೋಷಗಳ) ಅನ್ವಯ ವ್ಯತಿರೇಕದ ಅನುಭವದ ವಿರೋಧವೇ ಇದೆ[2].

**ಭ್ರಮಾಜ್ಞಾನಕ್ಕೂ ಕರಣದೋಷಕ್ಕೂ ವ್ಯಾಪ್ತಿಯು ಅಬಾಧಿತ**

**ನನು ಯಾದೃಚ್ಛಿಕಸಂವಾದಿಷು ಸತ್ಯಪಿ ದೋಷೇಽಪ್ರಾಮಾಣ್ಯಾಭಾವಾತ್ ಕಥಮಪ್ರಾಮಾಣ್ಯಸ್ಯ ದೋಷಾನ್ವಯವ್ಯತಿರೇಕಾನುವಿಧಾನಮ್ ? ಇತಿ ಚೇನ್ನ । 'ತಸ್ಯ ಸದ್ಭಾವ ಏವೋತ್ಪಾದೋ ನಾಸದ್ಭಾವೇ' ಇತ್ಯನ್ವಯ-ವ್ಯತಿರೇಕಯೋಃ ಕಾರ್ಯಕಾರಣಭಾವಹೇತುತ್ವಾತ್ । ಕಾರಣೇ ಸತ್ಯಪಿ ಕಾರ್ಯಾನುತ್ಪಾದಸ್ಯ ಸಾಮಗ್ರ್ಯಭಾವೇನ ಪ್ರತಿಬನ್ಧೇನ ವಾ ಉಪಪತ್ತಿರಿತಿ । ಅತ ಏವ ದೋಷಾಭಾವೋಽಪಿ ನ ಪ್ರಾಮಾಣ್ಯಕಾರಣಮ್ । ಯಾದೃಚ್ಛಿಕಸಂವಾದಿಷು ಸತ್ಯಪಿ ದೋಷೇ ಪ್ರಾಮಾಣ್ಯಜ್ಞಾನೋದಯಾತ್ ಇತ್ಯಾಶಯವಾನ್ ಉಪಸಂಹರತಿ - 'ಅತ' ಇತಿ ।**

---

1. 'ಶಂಖಃ ಪೀತಃ' ಎಂದು ಕಾಮಾಲೆ ದೋಷ ಯುಕ್ತವಾದ ಇಂದ್ರಿಯದಿಂದ ಜ್ಞಾನವು ಬಂದಿದೆ. ನಂತರದಲ್ಲಿ 'ಶಂಖಃ ನ ಪೀತಃ ಪಾಂಡುರ ಏವ' ಎಂದು ಬಾಧಜ್ಞಾನದ ಅನುಭವವಿದೆ. 'ಶಂಖಃ ಪೀತಃ;' ಎನ್ನುವುದು ಯಥಾರ್ಥವಾದಲ್ಲಿ ಬಾಧಜ್ಞಾನವು ಬರದೇ ಇರಬೇಕಿತ್ತು ಎಂದು ಭಾವ.

2. ಟೀಕೆಯಲ್ಲಿ ವಸ್ತುತಃ ಪ್ರಸ್ತುತವಾದದು ಎರಡೇ ಪಕ್ಷಗಳು. ದುಷ್ಟೇಂದ್ರಿಯಗಳಿಗೆ ಜ್ಞಾನಕಾರಣತ್ವವೇ ಇಲ್ಲವೋ ? ಅಥವಾ ದುಷ್ಟೇಂದ್ರಿಯಜನ್ಯವಾದ ಜ್ಞಾನವು ಯಥಾರ್ಥವೋ? ಎಂದು. ಅದರಲ್ಲಿ ಮೊದಲ ಪಕ್ಷವನ್ನು ಬುದ್ಧಿಯಿಂದ ಎರಡು ವಿಧದಲ್ಲಿ ವಿಭಜಿಸಿ ಹಿಂದೆ ಉತ್ತರಿಸಿದ್ದಾರೆ. ಅದೇ ರೀತಿಯಲ್ಲಿ ಎರಡನೆಯ ಪಕ್ಷವನ್ನು ಸಹ ಬುದ್ಧಿಯಿಂದ ವಿಭಜಿಸಿರುವರು. 'ಶಂಖಃ ಪೀತಃ' ಎನ್ನುವ ಜ್ಞಾನವು ಯಥಾರ್ಥ ಆದುದರಿಂದ ದುಷ್ಟೇಂದ್ರಿಯಕ್ಕೆ ಅಯಥಾರ್ಥ ಜ್ಞಾನಕಾರಣತ್ವವೇ ಇಲ್ಲ ಎಂದು ಅಭಿಪ್ರಾಯವೋ ಅಥವಾ ಇಂದ್ರಿಯಗತ ಕಾಮಲಾದಿ ದೋಷಗಳು ಇಂದ್ರಿಯವು ಗ್ರಹಿಸುವ ಅಯಥಾರ್ಥಜ್ಞಾನಕ್ಕೆ ಕಾರಣವಲ್ಲ ಎಂದು ಅಭಿಪ್ರಾಯವೋ ? ಎಂದು ವಿಕಲ್ಪಿಸಿ. ಮೊದಲ ಪಕ್ಷದಲ್ಲಿ 'ಶಂಖಃ ಪೀತ ಏವ' ಎಂಬ ಬಾಧಾನುಭವದ ವಿರೋಧವನ್ನು ತಿಳಿಸಲಾಗಿತ್ತು . ಎರಡನೆಯ ಪಕ್ಷವನ್ನು 'ತೃತೀಯೇತು' ಎನ್ನುವುದರಿಂದ ಉತ್ತರಿಸುತ್ತಿದ್ದಾರೆ ಎಂದು ತಿಳಿಯುವುದು.

2. ಕಾಚಾದಿ ದೋಷವಿದ್ದಲ್ಲಿ ಮಾತ್ರ ಇಂದ್ರಿಯಗಳು ಅಯಥಾರ್ಥಜ್ಞಾನ ಜನಕವಾಗುವುದು, ದೋಷವಿಲ್ಲದ ಸಂದರ್ಭದಲ್ಲಿ ಅಪ್ರಾಮಾಣ್ಯಜ್ಞಾನಜನಕತ್ವವು ಇಂದ್ರಿಯಗಳಲ್ಲಿ ಕಂಡಿಲ್ಲ ಎಂದು ಭಾವ.

ಹಾಗಾದಲ್ಲಿ, ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ ದೋಷವು ಇದ್ದರೂ ಸಹ (ಆ ವಾಕ್ಯಕ್ಕೆ) ಅಪ್ರಾಮಾಣ್ಯವು ಇಲ್ಲದಿರುವುದರಿಂದ ಅಪ್ರಾಮಾಣ್ಯಕ್ಕೆ ದೋಷದ ಅನ್ವಯ-ವ್ಯತಿರೇಕದ ಅನುವಿಧಾನವು ಹೇಗೆ? ಎಂದೆನ್ನಲಾಗದು[1]. 'ಅದರ (ದೋಷದ) ಆಸ್ತಿತ್ವವಿದ್ದಲ್ಲಿ ಮಾತ್ರ (ಅಪ್ರಾಮಾಣ್ಯದ) ಉತ್ಪತ್ತಿ ಇಲ್ಲದಿದ್ದಲ್ಲಿ ಇಲ್ಲ' ಎಂಬ ಅನ್ವಯವ್ಯತಿರೇಕದಿಂದ (ಅಪ್ರಾಮಾಣ್ಯ ಮತ್ತು ದೋಷಗಳ) ಕಾರ್ಯಕಾರಣಭಾವಕ್ಕೆ ಹೇತುತ್ವವನ್ನು (ಒಪ್ಪಿರುವದರಿಂದ). (ಯದೃಚ್ಛಿಕಸಂವಾದಿ ವಾಕ್ಯದಲ್ಲಿ ವಿಪ್ರಲಂಭಕತ್ವವೆಂಬ) ಕಾರಣವಿದ್ದರೂ ಕಾರ್ಯವು (ಅಪ್ರಾಮಾಣ್ಯವು) ಇಲ್ಲದಿರಲು, ಸಾಮಗ್ರಿಗಳ ಅಭಾವ ದಿಂದಲೋ ಪ್ರತಿಬಂಧಕದಿಂದಲೋ ಎಂದು ಉಪಪನ್ನವಾಗುವುದು[1]. ಆದುದರಿಂದಲೇ ದೋಷಾಭಾವವು ಪ್ರಾಮಾಣ್ಯಕ್ಕೆ ಕಾರಣವಲ್ಲ. ಯಾದೃಚ್ಛಿಕ ಸಂವಾದ ಸ್ಥಳದಲ್ಲಿ ದೋಷವಿದ್ದರೂ ಪ್ರಮಾಣಭೂತವಾದ ಜ್ಞಾನವು ಉಂಟಾದುದರಿಂದ ಎಂದು ಅಭಿಪ್ರೇತಿಸಿ (ಪ್ರಸಕ್ತ ವಾದವನ್ನು) ಪರಿಸಮಾಪ್ತಿ ಗೊಳಿಸುತ್ತಾರೆ '**ಅತಃ**' ಎನ್ನುವುದರಿಂದ.

**-: ಪ್ರಾಮಾಣ್ಯವು ಗುಣಾಧೀನವಲ್ಲ ವಾದವು ಸಮಾಪ್ತಿ :-**

---

1. ಸುಳ್ಳುಗಾರನು ಹೇಳಿದ ವಾಕ್ಯವು ಅಕಸ್ಮಾತ್ ಸತ್ಯವಾದ ಸಂದರ್ಭದಲ್ಲಿ ಆ ವಾಕ್ಯದಲ್ಲಿ ವಸ್ತುತಃ ದೋಷವಿದೆ. ಆದರೂ ಆ ವಾಕ್ಯವು ಅಪ್ರಾಮಾಣ್ಯದ ಜನಕವಾಗಿಲ್ಲ. ಆದುದರಿಂದ ದೋಷವಿದ್ದಲ್ಲಿ ಅಪ್ರಾಮಾಣ್ಯ, ದೋಷವಿಲ್ಲದ ಸಂದರ್ಭದಲ್ಲಿ ಅಪ್ರಾಮಾಣ್ಯವಿಲ್ಲ ಎಂಬ ಅನ್ವಯ-ವ್ಯತಿರೇಕವ್ಯಾಪ್ತಿಯ ಅನುವಿಧಾನಕ್ಕೆ ಅವಕಾಶವಿಲ್ಲ ಎಂಬ ಸಂದೇಹಕ್ಕೆ ಅವಕಾಶವಿಲ್ಲ ಎಂದು ಭಾವ.

1. ಯಾದೃಚ್ಛಿಕಸಂವಾದಿ ಸ್ಥಳದಲ್ಲಿ, ವಕ್ತೃವಿನಲ್ಲಿ ದೋಷವಿದೆ ಆದರೆ ಆ ವಾಕ್ಯದಲ್ಲಿ ಅಪ್ರಾಮಾಣ್ಯವಿಲ್ಲ, ಅಂದರೆ ಕಾರಣವಿದೆ ಕಾರ್ಯವಿಲ್ಲ. ಆದುದರಿಂದ ವ್ಯಾಪ್ತಿಗೆ ವ್ಯಭಿಚಾರ ಕಂಡಿದೆ ಎಂದು ಆಪಾದಿಸಬಾರದು. ನಮ್ಮ ಅಭಿಮತವು ಹೀಗಿದೆ 'ಅಪ್ರಾಮಾಣ್ಯವಿದ್ದಲ್ಲಿ ದೋಷವು ಇರುವುದು, ದೋಷವಿಲ್ಲದಿದ್ದಲ್ಲಿ ಅಪ್ರಾಮಾಣ್ಯವಿರದು' ಎಂಬ ಕಾರ್ಯಮುಖ ವಾದ ವ್ಯಾಪ್ತಿಯನ್ನು ಅಂಗೀಕರಿಸಲಾಗಿದೆ. ದೋಷವಿದ್ದರೂ ಅಪ್ರಾಮಾಣ್ಯವಿಲ್ಲ ಎಂದಾದಲ್ಲಿ ಕಾರ್ಯೋತ್ಪತ್ತಿಗೆ ಅನೇಕಕಾರಣಗಳಿರುತ್ತವೆ. ಆ ಕಾರಣಸಾಮಗ್ರಿಗಳಲ್ಲಿ ಕೆಲವು ಇಲ್ಲದೆಯೋ, ಅಥವಾ ಪ್ರತಿಬಂಧಕವಿರುವರಿಂದಲೋ ಕಾರ್ಯೋತ್ಪತ್ತಿಯಾಗಿಲ್ಲ ಎಂದು ಸಮಾಧಾನವನ್ನು ಹೇಳುವುದು ಸೂಕ್ತ ಎಂದು ಭಾವ.

## ॥ ವೇದಾಪೌರುಷೇಯತ್ವವು ಶ್ರುತಿಸ್ಮೃತಿಸಿದ್ಧ ॥

ಶ್ರೀಮದಾಚಾರ್ಯರು ವಿಷಯ ಒಂದನ್ನು ಮಂಡಿಸಿ, ಅದನ್ನು ಯುಕ್ತಿಯಿಂದ ಜಾಲಿಸಿ ಜಾಲಿಸಿ ಮನದಟ್ಟುಮಾಡಿಕೊಡುವರು. ಮನದಟ್ಟಾದ ವಿಷಯವನ್ನು ಶ್ರುತಿಸ್ಮೃತಿಗಳಿಂದ ಪುಷ್ಟೀಕರಿಸುವರು. 'ಕೇವಲ ಯುಕ್ತಿಯಿಂದ ವಿಷಯವು ಸಿದ್ಧವಾಗದು, ಹಾಗೆಯೇ ಯುಕ್ತಿವಿರುದ್ಧವಾದದ್ದು ಮಂಡನೆಗೆ ಅಯೋಗ್ಯವಾಗಿದೆ' ಎನ್ನುವುದು ಆಚಾರ್ಯರ ಸಿದ್ಧಾಂತ. ಹಾಗಾಗಿ ಅನೇಕ ಶ್ರುತಿಸ್ಮೃತಿಗಳನ್ನು, ಪ್ರತಿಪಾದಿಸಿದ ವಿಷಯಗಳಿಗೆ ಸಂವಾದಿಪ್ರಮಾಣಗಳನ್ನಾಗಿ ಉಪದೇಶಿಸುತ್ತಾರೆ. ವೇದ , ಆಮ್ನಾಯ , ಶ್ರುತಿ ಈ ಮುಂತಾದ ನಾಮಗಳೇ ವೇದದ ನಿತ್ಯತ್ವಕ್ಕೆ ಗಮಕ ಎನ್ನುತ್ತಾರೆ.

**ವಾಚಾ ವಿರೂಪ ನಿತ್ಯಯಾ । (ಋ.ಸಂ.8.75.6)**

(ಇಲ್ಲಿ ಉದಾಹರಿಸಲಾದ ಒಟ್ಟು ಆರು ಮಂತ್ರಗಳ ಪೂರ್ಣಪಾಠದೊಂದಿಗೆ ಭಾವಾನುವಾದ)

**ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಮ್ ॥**

**ಹೇ ವಿರೂಪ** - ವಿರೂಪನಾಮಕ ಋಷಿಯೇ, **ಅಭಿದ್ಯವೇ** - ಸುತ್ತಲೂ ಪ್ರಕಾಶಮಾನನಾದ, **ನೂನಂ**- ನಿಶ್ಚಯವಾಗಿಯೂ **ವೃಷ್ಣೇ**- (ಭಕ್ತರ ಅಭೀಷ್ಟಗಳನ್ನು) ಮಳೆಗರೆಯುವ, **ತಸ್ಮೈ**- ಆ ಬ್ರಹ್ಮನ (ಅನುಗ್ರಹಕ್ಕಾಗಿ), **ನಿತ್ಯಯಾ ವಾಚಾ** - ನಿತ್ಯವಾದ ವಾಕ್ಯಗಳಿಂದ ಅರ್ಥಾತ್ ವೇದಗಳಿಂದ, **ಸುಷ್ಟುತಿಂ**- ಮಂಗಳಕರವಾದ ಸ್ತೋತ್ರವನ್ನು **ಚೋದಸ್ವ** - (ಪಠಿಸುವಂತೆ) ಪ್ರೇರೇಪಿಸು.

**ನಿತ್ಯಯಾಽನಿತ್ಯಯಾ ಸ್ತೌಮಿ ಬ್ರಹ್ಮತತ್ಪರಮಂ ಪದಮ್, ಇತಿ ।**

**ಪರಮಂ ಪದಂ**- ಮುಖ್ಯಗಮ್ಯನಾದ **ಬ್ರಹ್ಮ**- ಪರಬ್ರಹ್ಮನನ್ನು **ನಿತ್ಯಯಾ**- ನಿತ್ಯವಾದ, **ಅನಿತ್ಯಯಾ** - ಅನಿತ್ಯವಾದ (ಅರ್ಥಾತ್ ನಿತ್ಯವಾದ ವೇದಗಳಿಂದ, ಅನಿತ್ಯವಾದ ಪುರಾಣಗಳಿಂದ) **ಸ್ತೌಮಿ**- ಸುತಿಸುತ್ತೇನೆ.

**ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾವ ಸ್ಮೃತಯೋ ಯಾಶ್ಚಾನ್ಯಾ ವಾಚಃ, ಇತಿ ಪೈಙ್ಗಿಶ್ರುತಿಃ ।**

**ಶ್ರುತಿಃ ವಾವ ನಿತ್ಯಾಃ**- ವೇದಗಳೇ ನಿತ್ಯವಾದ ವಾಕ್ಯಗಳು, **ಅನಿತ್ಯಾಃ ವಾವ ಸ್ಮೃತಯಃ** - ಅನಿತ್ಯವಾದ ವಾಕ್ಯಗಳು ಸ್ಮೃತಿಗಳು. **ಯಾಃ ಅನ್ಯಾಃ ಚ ವಾಚಃ**- ಮತ್ತೆ (ವೇದದಿಂದ) ಭಿನ್ನವಾದ ಎಲ್ಲ ವಾಕ್ಯಗಳೂ (ಅನಿತ್ಯಗಳು) ಎಂದು ಪೈಂಗಿಶ್ರುತಿ.

**ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ ।**
**ಅನಾದಿನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ ॥**
**ಇತಿ ಕಾತ್ಯಾಯನ ಶ್ರುತಿಃ ।**

(ಮುಮುಕ್ಷುಗಳಿಂದ) **ಪರಮಂ**- ಮುಖ್ಯವಾಗಿ **ವಿಜ್ಞೇಯಂ**- ಜ್ಞೇಯನಾದವನು **ಬ್ರಹ್ಮ** - (ಆ) ಬ್ರಹ್ಮನನ್ನು **ಪರಮಾ ಜ್ಞಾಪಿಕಾ** - ಮುಖ್ಯವಾಗಿ ತಿಳಿಸುವುದು, **ಶ್ರುತಿಃ**- ವೇದವು. **ತತ್ ಚ**- ಆ ಬ್ರಹ್ಮನಾದರೋ, **ಸಾ**- ಆ ಶ್ರುತಿಯು, **ಅನಾದಿನಿತ್ಯಾ**- ಆದಿ ಇಲ್ಲದವು ನಿತ್ಯವಾದವು. **ತಾಂ ವಿನಾ**- ಆ ಶ್ರುತಿಯ ಹೊರತಾಗಿ, **ಸಃ**- ಆ ಪರಮಾತ್ಮನು, **ನ ಗಮ್ಯತೇ**- ಅವಬೋಧಿತ-ನಾಗುವುದಿಲ್ಲ.

**ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ಬ್ರಹ್ಮವಿಷ್ಠಿತಂ ತಾವತೀವಾಕ್ । (ಋ.ಸಂ. 10.114.8)**

**ಸಹಸ್ರಂ ಮಹಿಮಾನಃ**- ಸಾವಿರ ಸಾವಿರ ಮಹಿಮೋಪೇತನಾದವನು, **ಸಹಸ್ರಧಾ** - (ಆ ಸಾವಿರಾರು ಮಹಿಮೆಗಳೂ) ಸಾವಿರಾರು ವಿಧವಾದವುಗಳು, **ಯಾವದ್ ಬ್ರಹ್ಮ ವಿಷ್ಠಿತಂ** - ಆ ಬ್ರಹ್ಮನು ಎಷ್ಟು ದೇಶಕಾಲಗಳಲ್ಲಿ ವ್ಯಾಪ್ತನಾಗಿರುವನೋ **ವಾಕ್**- ವೇದವಾಕ್ಯವು, **ತಾವತೀ** - ಅಷ್ಟು ದೇಶಕಾಲಗಳಲ್ಲಿ ವ್ಯಾಪ್ತವಾಗಿರುವುದು. ಬ್ರಹ್ಮನೂ ನಿತ್ಯ ಹಾಗೇ ವೇದವೂ ನಿತ್ಯ ಎಂದು ಭಾವ.

**ಕಶ್ಛನ್ದಸಾಂ ಯೋಗಮಾವೇದ ಧೀರಃ ಕೋ ಧಿಷ್ಣ್ಯಾಂ ಪ್ರತಿ ವಾಚಂ ಪಪಾದ ॥ (ಋ.ಸಂ. 10.114.9) ಇತ್ಯಾದಿ ಚ ॥ 6**

**ಛಂದಸಾಂ** - ವೇದಗಳ, **ಯೋಗಂ**- ವಾಚ್ಯವಾಚಕ ಭಾವ ಸಂಬಂಧವನ್ನು **ಕೋ ಧೀರಃ**- ಯಾವ ಜ್ಞಾನಿಯು **ಆ ವೇದ** ? - ಸರಿಯಾಗಿ ತಿಳಿದಾನು ? ಪೂರ್ಣವಾಗಿ ಯಾರೂ ತಿಳಿಯಲಾರರು ಎಂದು ಭಾವ. **ಧಿಷ್ಣ್ಯಂ** - ಬುದ್ಧಿಪೂರ್ವಕವಾಗಿ, **ವಾಚಂ**- ವೇದ ವಾಕ್ಯವನ್ನು **ಕಂ ಪ್ರತಿ**- ಅನ್ಯರನ್ನು ಉದ್ದೇಶಿಸಿ ಯಾರು ತಾನೆ **ಪಪಾದ**- ಪ್ರತಿಪಾದಿಸಿಯಾರು ? ಸಂಪೂರ್ಣವಾಗಿ ವೇದವನ್ನು ಯಾರೂ ಉಪದೇಶಿಸಲಾರರು ಎಂದು ಭಾವ. ವೇದದ ಅರ್ಥವನ್ನು ಪೂರ್ಣವಾಗಿ ಯಾರೂ ತಿಳಿಯಲಾರರು, ತಿಳಿದು ಉಪದೇಶಿಸಲಾರರು. ವೇದದ ಅರ್ಥ ಜ್ಞಾನವೇ ದುಸ್ತರವೆಂದಾದ ಮೇಲೆ ಇನ್ನು ಅಂತಹ ದುಸ್ತರವಾದ ವೇದಗಳನ್ನು ರಚಿಸಲಾದೀತೇ ? ಎಂದು ಭಾವ.[1]

**ಏವಮನುಮಾನಾದಿನಾ ಸಮರ್ಥಿತಂ ವೇದಾಪೌರುಷೇಯತ್ವಂ ಶ್ರುತಿ-ಪುರಾಣವಾಕ್ಯೈರಪಿ ಸಾಧಯತಿ 'ವಾಚಾ' ಇತಿ ॥ 'ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಮ್' (ಋ.ಸಂ.8.75.6.) ಇತಿ ಮಂತ್ರಸ್ಯಾಯಮರ್ಥಃ - ಅಭಿತೋ ದ್ಯೌಃ- ಪ್ರಕಾಶೋ, ಯಸ್ಯಾಸೌ - ಅಭಿದ್ಯುಃ, ತಸ್ಮೈ ಅಭಿದ್ಯವೇ, ವೃಷ್ಣೇ- ವರ್ಷಿತ್ರೇ, ನೂನಮ್- ನಿಶ್ಚಿತಮ್, ಹೇ ವಿರೂಪ, ನಿತ್ಯಯಾ ವಾಚಾ ವೇದಲಕ್ಷಣಯಾ ಸುಷ್ಟುತಿಂ- ಶೋಭನಾಂ ಸ್ತುತಿಂ ಚೋದಸ್ವ- ಪ್ರೇರಯ- ಕುರು, ಇತಿ ವಿರೂಪಋಷಿಂ ಪ್ರತಿ ಉಚ್ಯತೇ । 'ಇತಿ ಶ್ರುತಿಃ' ಇತಿ ಶೇಷಃ । ವಾಕ್‌ಶಬ್ದೋ ವಾಗಿಂದ್ರಿಯೇಽಪಿ ಪ್ರಸಿದ್ಧ ಇತಿ ಸ್ವಷ್ಟಾಂ**

---

1. ಅನುವ್ಯಾಖ್ಯಾನದಲ್ಲಿ 'ಕಶ್ಛಂದಸಾಂ.....' ಎನ್ನುವುದನ್ನು ಒಗಟಿನಂತೆ ಎಂದು ಅರ್ಥೈಸಲಾಗಿದೆ- ಪ್ರಶ್ನೆ ಮತ್ತು ಉತ್ತರಗಳೆರಡೂ ಈ ವಾಕ್ಯದಲ್ಲೇ ಅಡಗಿವೆ.

ಕಶ್ಛನ್ದಸಾಂ ಯೋಗಮಿತಿ ಶ್ರುತೇರ್ಯೋಗಾರ್ಥತತ್ತ್ವವಿತ್
ಬ್ರಹ್ಮೈಕೋ ನೈವ ಚಾನ್ಯೋಽಸ್ತಿ ಕ ಇತ್ಯಸ್ಯೋಭಯಾರ್ಥತಃ ॥ ಇತಿ ।
(ಅ.ವ್ಯಾ .1.4.20)

'ಕಃ ಛಂದಸಾಂ ಯೋಗಂ ಆ ವೇದ'- ಯಾರು ವೇದಗಳ ರಹಸ್ಯವನ್ನು ತಿಳಿದಿರುವನು ? ಎಂದು ಪ್ರಶ್ನೆ. 'ಕಃ ಛಂದಸಾಂ ಯೋಗಂ ಆ ವೇದ'- ವೇದಗಳ ರಹಸ್ಯವನ್ನು ಬ್ರಹ್ಮನು ತಿಳಿದಿರುವನು ಎಂದು ಉತ್ತರ.

**ವೇದವಿಷಯಾಂ ಶ್ರುತಿಂ ಪಠತಿ 'ನಿತ್ಯಯಾ' ಇತಿ । ಪರಮಂ ಪದಂ- ಪರಮಂ ಪ್ರಾಪ್ಯಂ, ಇತಿ ಮಂತ್ರಮುದಾಹೃತ್ಯ, ಬ್ರಾಹ್ಮಣಂ ನಿತ್ಯಾನಿತ್ಯಶಬ್ದವಿಷಯಂ ನಿರ್ದಿಶತಿ 'ಶ್ರುತಿರ್ವಾವ' ಇತಿ ॥ ಶ್ರುತಿದ್ವಯೇನ ನಿತ್ಯತ್ವಮೇವ ಪ್ರತೀತಂ ನ ತ್ವಪೌರುಷೇಯತ್ವಮ್? ಇತ್ಯತೋ ವಾಕ್ಯದ್ವಯಮುದಾಹರತಿ 'ವಿಜ್ಞೇಯಂ' ಇತಿ । ಪರಮಂ ವಿಜ್ಞೇಯಂ - ಮುಮುಕ್ಷೂಣಾಂ ಪ್ರಧಾನಂ ಪ್ರಮೇಯಮ್ । ಪರಮಾ ಜ್ಞಾಪಿಕಾ- ಪ್ರಧಾನಂ ಪ್ರಮಾಣಮ್ । 'ಅನಾದಿ..' ಇತಿ ತದುಭಯೋಪಪಾದನಮ್ । 'ವಿನಾ' ಇತಿ ಪರಮಜ್ಞಾಪಕತ್ವೇ ಯುಕ್ತ್ಯನ್ತರಮ್ । ಸಃ- ಬ್ರಹ್ಮಶಬ್ದೋಕ್ತಃ ಪರಮಾತ್ಮಾ । ಯಸ್ಯ ಸಹಸ್ರಂ- ಅಪರಿಮಿತಾ ಮಹಿಮಾನಃ ಪ್ರತ್ಯೇಕಮಪಿ ಸಹಸ್ರಧಾ- ಅಪರಿಮಿತವಿಧಾಃ, ತದ್ ಬ್ರಹ್ಮ ಯಾವದ್ದೇಶಕಾಲವ್ಯಾಪಿತಯಾ ವಿಷ್ಠಿತಂ- ವಿಶೇಷೇಣ ಸ್ಥಿತಂ ವಾಕ್- ವೇದವಾಗಪಿ, ತಾವತೀ- ತಾವದ್ದೇಶಕಾಲವ್ಯಾಪಿನೀ । ಪ್ರಾಜ್ಞೇನ ಕೇನ ಚಿತ್ ಪುರುಷೇಣ ವೇದಸ್ಯ ಕೃತತ್ವಾತ್ ಕಥಮೇತತ್? ಇತ್ಯತ ಉಕ್ತಮ್ 'ಕಶ್ಛಂದಸಾಂ' ಇತಿ । ಛಂದಸಾಂ- ವೇದಾನಾಂ, ಯೋಗಂ - ಅರ್ಥೈಃ ಸಹ ವಾಚ್ಯ-ವಾಚಕಭಾವ ಸಂಬಂಧಂ ಕೋ ಧೀರಃ- ಧೀಮಾನ್, ಆವೇದ- ಸಮ್ಯಗ್‌ವೇದ ? ನ ಕೋಪಿ । ದಿಷ್ಣ್ಯಾಂ-ಬುದ್ಧಿಪೂರ್ವಾಂ ವಾಚಂ - ವೇದವಾಚಂ , ಕಃ ಪ್ರತಿ ಪಪಾದ- ಪರಾನ್ ಪ್ರತಿ ಪ್ರತಿಪಾದಿತವಾನ್ ನ ಕೋಽಪಿ । ವೇದಾರ್ಥಸ್ಯ ಜ್ಞಾತಾ, ಜ್ಞಾತಾ ವ್ಯಾಖ್ಯಾತಾಽಪಿ ದುರ್ಲಭಃ, ಕಿಮುತ ತತ್‌ಕರ್ತಾ? ಇತಿ । 'ಇತಿ ಚ ಶ್ರುತಿಃ' ಇತಿ ಶೇಷಃ । 'ಪ್ರತ್ಯೇಕಮ್ ಅಭಿಪ್ರೇತಾರ್ಥಮಾಹ' ಇತ್ಯಧ್ಯಾಹಾರಃ ।**

ಹೀಗೆ ಅನುಮಾನಾದಿಗಳಿಂದ ವೇದಾಪೌರುಷೇಯತ್ವವನ್ನು ಸಮರ್ಥಿಸಿ, ಶ್ರುತಿ-ಪುರಾಣವಾಕ್ಯಗಳಿಂದಲೂ ಸಾಧಿಸುತ್ತಾರೆ. 'ವಾಚಾ' ಎಂದು. ತಸ್ಮೈನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಮ್ । ಎಂಬ ಮಂತ್ರದ ಅರ್ಥವು - **ಹೇ ವಿರೂಪ**-ವಿರೂಪನಾಮಕ ಋಷಿಯೇ, **ತಸ್ಮೈ ಅಭಿದ್ಯವೇ** - ಸುತ್ತಲೂ ಪ್ರಕಾಶಯುಕ್ತವಾದ್ದ ಆ, **ನೂನಂ**- ನಿಶ್ಚಿತವಾಗಿಯೂ **ವೃಷ್ಣೇ**- (ಅಭೀಷ್ಟಗಳನ್ನು) ಮಳೆಗರಿಯುವ (ಭಗವಂತನನ್ನು) ಉದ್ದೇಶಿಸಿ **ನಿತ್ಯಯಾ ವಾಚಾ**- ನಿತ್ಯವಾದ ವಚನಗಳಿಂದ

(ವೇದಗಳಿಂದ) **ಸುಷ್ಟುತಿಂ** ಮಂಗಳಕರವಾದ ಸ್ತುತಿಯನ್ನು **ಚೋದಸ್ವ** - (ನುಡಿಯುವಂತೆ) ಪ್ರೇರೇಪಿಸು ಎಂದು ವಿರೂಪ ಮುನಿಯನ್ನು ಉದ್ದೇಶಿಸಿ ಆದೇಶಿಸುತ್ತಿದೆ. 'ಇತಿ ಶ್ರುತಿಃ' ಎನ್ನುವುದನ್ನು ಅಧ್ಯಾಹಾರವನ್ನು ಮಾಡಿಕೊಳ್ಳಬೇಕು. '**ವಾಕ್**' ಶಬ್ದವು ವಾಗಿಂದ್ರಿಯದಲ್ಲೂ ಪ್ರಸಿದ್ಧವಾಗಿದೆ ಎಂದು ವೇದವೆಂದು ತಿಳಿಸುವ ಸ್ಪಷ್ಟ ಶ್ರುತಿಯನ್ನು ಹೇಳುತ್ತಾರೆ[1]. '**ನಿತ್ಯಯಾ**' ಎಂದು. **ಪರಮಂ ಪದಂ** - ಮುಖ್ಯಪ್ರಾಪ್ಯವಾದ (ಬ್ರಹ್ಮನನ್ನು) ಹೀಗೆ ಮಂತ್ರವನ್ನು ಉದಾಹರಿಸಿ ಬ್ರಹ್ಮನು ನಿತ್ಯ ಮತ್ತು ಅನಿತ್ಯ ಶಬ್ದಗಳಿಂದ ವಿಷಯನಾಗಿದ್ದಾನೆ ಎನ್ನುವದನ್ನು ವೇದವೇ ತಿಳಿಸುತ್ತದೆ[2] '**ಶ್ರುತಿರ್ವಾವ**' ಎಂದು. ಎರಡು ವೇದ ವಾಕ್ಯಗಳಿಂದ (ವೇದಗಳಿಗೆ) ನಿತ್ಯತ್ವ ಮಾತ್ರ ಪ್ರತೀತವಾಗುವುದೇ ಹೊರತು ಅಪೌರುಷೇಯತ್ವವಲ್ಲ ಎಂದು, ಆದುದರಿಂದ ಎರಡು ವಾಕ್ಯಗಳನ್ನು ಉದಾಹರಿಸಿದ್ದಾರೆ. '**ವಿಜ್ಞೇಯಂ**' ಎಂದು. **ಪರಮಂ ವಿಜ್ಞೇಯಂ**- ಮುಮುಕ್ಷುಗಳಿಗೆ ಮುಖ್ಯಪ್ರಮೇಯನಾದ **ಪರಮಾ ಜ್ಞಾಪಿಕಾ**- ಪ್ರಧಾನ ಪ್ರಮಾಣವು, '**ಅನಾದಿ**' ಎಂದು ಆ ಎರಡನ್ನೂ (ಮುಖ್ಯಪ್ರಮೇಯ-ನಾದ ಬ್ರಹ್ಮ ಮತ್ತು ಮುಖ್ಯಪ್ರಮಾಣವಾದ ವೇದ ಈ ಎರಡನ್ನು) ತಿಳಿಯುವುದು. '**ವಿನಾ**' ಎಂದು (ಬ್ರಹ್ಮನೇ) ಮುಖ್ಯಜ್ಞಾಪಕ ಎನ್ನುವ ವಿಷಯದಲ್ಲಿ ಮತ್ತೊಂದು ಯುಕ್ತಿಯು[3]. **ಸಃ**- ಬ್ರಹ್ಮಶಬ್ದದಿಂದ ಪ್ರತಿಪಾದಿತನಾದ ಪರಮಾತ್ಮನು. ಯಾವ ಬ್ರಹ್ಮನ, **ಸಹಸ್ರಂ**- ಅಪರಿಮಿತವಾದ

---

1. 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯಲ್ಲಿರುವ 'ವಾಕ್' ಶಬ್ದವು ವಚನ ಮತ್ತು ವಾಗಿಂದ್ರಿಯ ಎಂಬ ಎರಡೂ ಅರ್ಥದಲ್ಲಿ ಬಳಕೆಯಲ್ಲಿದೆ. ಇಂದ್ರಿಯ ನಿತ್ಯತ್ವವನ್ನು ಈ ಶ್ರುತಿಯು ಪ್ರತಿಪಾದಿಸುತ್ತದೋ ವಚನರೂಪವಾದ ವೇದವನ್ನೋ ಎಂದು ಸಂದೇಹಕ್ಕೆ ಅವಕಾಶವಿರುವುದರಿಂದ 'ನಿತ್ಯಯಾಽನಿತ್ಯಯಾ....' ಎಂಬ ಸ್ಫುಟ ಶ್ರುತಿಯನ್ನು ಮೂಲಕಾರರು ಉಲ್ಲೇಖಿಸಿದ್ದಾರೆ ಎಂದು ಭಾವ.

2. 'ನಿತ್ಯಯಾ ನಿತ್ಯಯಾ ಸ್ತೌಮಿ' ಎಂಬ ಪ್ರಮಾಣದಲ್ಲಿ ಉಕ್ತವಾದ ನಿತ್ಯಸ್ತುತಿ ಮತ್ತು ಅನಿತ್ಯಸ್ತುತಿ ಯಾವವು ಎನ್ನುವ ಸಂದೇಹಕ್ಕೆ ಉತ್ತವಾಗಿ ಮುಂದಿನ ಶ್ರುತಿ 'ಶ್ರುತಿರ್ವಾವ.. ಎನ್ನುವುದು ಎಂದುಭಾವ.

3. 'ವಿನಾ ತಾಂ ನ ಸ ಗಮ್ಯತೇ- ಬ್ರಹ್ಮನು ವೇದಗಳನ್ನು ಹೊರತುಪಡಿಸಿ ಅರಿವಿಗೆ ಬಾರನು' ಎಂದು ತಿಳಿಸಿದ್ದರಿಂದ ವೇದಗಳು ಬ್ರಹ್ಮನನ್ನು ವಿಶೇಷವಾಗಿ ಪ್ರತಿಪಾದಿಸುತ್ತವೆ ಎಂದು ತಿಳಿಸಿದಂತಾಯಿತು ಎಂದು ಭಾವ.

ಮಹಿಮೆಗಳು, **ಸಹಸ್ರಧಾ**- ಒಂದೊಂದು ಮಹಿಮೆಗಳು ಎಣಿಸಲಾರದಷ್ಟು ಬಗೆಗಳು. ಅಂತಹ ಬ್ರಹ್ಮನು, ಎಷ್ಟು ದೇಶಕಾಲಗಳಲ್ಲಿ ವ್ಯಾಪ್ತನಾಗಿ **ವಿಷ್ಠಿತಂ**- ವಿಶೇಷವಾಗಿ ಇರುವನೋ, **ವಾಕ್**- ವೇದಗಳೂ ಸಹ, **ತಾವತೀ**- ಅಷ್ಟು ದೇಶಕಾಲಗಳಲ್ಲಿ ವ್ಯಾಪ್ತವಾಗಿವೆ. ಯಾವುದೋ ಜ್ಞಾನಿಯೋರ್ವನಿಂದ ವೇದದ ನಿರ್ಮಾಣವಾಗಿದೆ,ಆದುದರಿಂದ , ಹೇಗೆ ಹೀಗೆ ಹೇಳುವಿರಿ ? ಆದುದರಿಂದ ಉತ್ತರಿಸುತ್ತಾರೆ '**ಕಶ್ಛಂದಸಾಂ**' ಎಂದು. **ಛಂದಸಾಂ**- ವೇದಗಳ. **ಯೋಗಂ** - ಸಂಬಂಧವನ್ನು - ವಾಚ್ಯವಾಚಕ ಭಾವ ಸಂಬಂಧವನ್ನು **ಕೋ ಧೀರಃ** - ಯಾವ ಬುದ್ಧಿವಂತನು, **ಆ ವೇದ** - ಸರಿಯಾಗಿ ತಿಳಿದಾನು ? ಯಾರೂ ಇಲ್ಲ. **ಧಿಷ್ಣ್ಯಂ**- ಬುದ್ಧಿಪೂರ್ವಕವಾಗಿ **ವಾಚಂ**- ವೇದವಾಕ್ಯವನ್ನು **ಕಃ ಪ್ರತಿಪಪಾದ**- ಮತ್ತೊಬ್ಬರನ್ನು ಉದ್ದೇಶಿಸಿ ಪ್ರತಿಪಾದಿಸಿಯಾನು ? ಯಾರೂ ಇಲ್ಲ. ವೇದಾರ್ಥವನ್ನು ತಿಳಿದವನು, ತಿಳಿದು ಉಪದೇಶಿಸುವನೂ ಸಹ ವಿರಳ. ಮತ್ತಿನ್ನೇನು ಅದರ ನಿರ್ಮಾತೃ ಎಂದು[1]. 'ಇತಿ ಚ ಶ್ರುತಿಃ' ಎಂದು ಅಧ್ಯಾಹಾರವನ್ನು ಮಾಡಿಕೊಳ್ಳಬೇಕು. ' (ಶ್ರುತಿಗಳು ನಮಗೆ) 'ಅಭಿಪ್ರೇತಾರ್ಥಮಾಹ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು.

**-: ವೇದಾಪೌರುಷೇಯತ್ವದ ಶ್ರುತಿಸ್ಮೃತಿಸಿದ್ಧಸಮರ್ಥನೆಯು ಸಮಾಪ್ತ :-**

## ॥ ವೇದಾಪೌರುಷೇಯತ್ವದಲ್ಲಿ ಇತರ ಸಂದೇಹಗಳ ನಿವಾರಣೆ ॥

ವೇದವಾಕ್ಯಗಳಲ್ಲಿ 'ಅಹಂ, ತ್ವಂ ಮುಂತಾದ ಪದಗಳು ಇವೆ. ವಿಶ್ವಾಮಿತ್ರ , ಮಾಂಧಾತಾ ಮುಂತಾದ ಚಾರಿತ್ರಿಕ ಪುರುಷರ ನಾಮಗಳು ಇವೆ. ತೈತ್ತಿರೀಯ, ಕಾಠಕ ಮುಂತಾದ ವ್ಯಕ್ತಿಗಳ ಹಿನ್ನೆಲೆಯ ಪ್ರಘಟ್ಟಗಳನ್ನು ಹೊಂದಿರುವ ವೇದಭಾಗಗಳು ಇವೆ. ವೇದ, ಪುರಾಣಗಳೇ ವೇದಗಳ ಉತ್ಪತ್ತಿಯನ್ನು ಸಾರಿ ಹೇಳಿರುವವು. ಈ ಮುಂತಾದವುಗಳು ವೇದದ ಪೌರುಷೇಯತ್ವಕ್ಕೆ ಹೆಗ್ಗುರುತುಗಳು. ಈ ಮುಂತಾದ ಸಂದೇಹಗಳಿಗೆ ಸಮರ್ಥ ಉತ್ತರವನ್ನು ಇಲ್ಲಿ ಕಾಣಬಹುದಾಗಿದೆ.

---

1. ವೇದದ ಅರ್ಥವನ್ನುತಿಳಿಯುವವರು, ಉಪದೇಶಿಸುವವರೇ ವಿರಳಾತಿವಿರಳ ಎಂದು ಮೇಲೆ ಅಂತಹ ವೇದಗಳನ್ನು ರಚಿಸುವವರು ಇರಲು ಸಾಧ್ಯವೇ ? ಖಂಡಿತ ಶಕ್ಯವಿಲ್ಲ ಎಂದು ಭಾವ.

ಪುರುಷಾಭಿಪ್ರಾಯವು ಅಪೌರುಷೇಯತ್ವಕ್ಕೆ ಬಾಧಕವಲ್ಲ

**ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ ।**
**ಸರ್ಗೇಸರ್ಗೇಽಮುನೈವೈತ ಉದ್ಗೀರ್ಯನ್ತೇ ತಥೈವ ಚ ।**
**ತತ್ಕ್ರಮೇಣೈವ ತೈರ್ವರ್ಣೈಃ ತೈಃ ಸ್ವರೈರೇವ ನಾನ್ಯಥಾ ।**

ಎಲ್ಲ ವೇದಗಳೂ ನಿತ್ಯ, (ಪ್ರಳಯಕಾಲದಲ್ಲಿಯೂ) ವಿಷ್ಣುವಿನ ಬುದ್ಧಿಯಲ್ಲಿ ಇದ್ದು ಶಾಶ್ವತವಾಗಿವೆ. ಪ್ರತಿ ಸೃಷ್ಟಿಯ ಆದಿಯಲ್ಲಿ ಆತನಿಂದಲೇ,ಅದೇ ಕ್ರಮದಿಂದ, ಅದೇ ವರ್ಣಗಳಿಂದ ಯುಕ್ತವಾಗಿ, ಅದೇ ಸ್ವರದಿಂದ ಯುಕ್ತವಾಗಿಯೇ ಉಚ್ಚರಿಸಲಾಗುವುದು, ಬೇರೇ ರೀತಿಯಿಂದ ಅಲ್ಲ.

ನನು, 'ವಿಧಿಃ, ನಿಯೋಗಃ, ಪ್ರೇರಣಾ' ಇತ್ಯನರ್ಥಾನ್ತರಂ, ಸ ಚ ಪ್ರೇರಕ-ಪುರುಷಧರ್ಮಃ । ಅತೋ ವೈದಿಕಾನಾಂ ವಿಧ್ಯುದ್ದೇಶಾನಾಂ ಲೌಕಿಕವತ್ ಸ್ವತಂತ್ರಕರ್ತೃಕತ್ವಮೇವೋಚಿತಮ್ । ತಥಾಽರ್ಥವಾದಾನಾಮಪಿ ಹಾನೋ-ಪಾದಾನಾಭಿಪ್ರಾಯೇಣ ಪ್ರವೃತ್ತತ್ವಾದಭಿಪ್ರಾಯಸ್ಯ ಚ ಸ್ವತಂತ್ರಕರ್ತೃ-ಧರ್ಮತ್ವಾತ್ । ಕಿಞ್ಚ ವೇದೇಽಹಮಾದಿಪದಾನಿ ಶ್ರೂಯನ್ತೇ, ತಾನಿ ಚ ಸ್ವತಂತ್ರವಕ್ತೃಕಾಣಿ ಲೌಕಿಕವಾಕ್ಯವತ್ । ತಸ್ಮಾದೇವಮಾದೀನಾಂ ಪೌರುಷೇಯತ್ವ ಮೇವ ? ಇತ್ಯತೋ 'ನಿತ್ಯಾವೇದಾಃ' ಇತ್ಯುಕ್ತ್ವಾ 'ಸಮಸ್ತಾಶ್ಚ' ಇತ್ಯಾಹ । ಕಥಮ್? ಇತಿ ಚೇತ್, 'ನ ಹಿ ವೇದೇ ವಯಂ ಪುರುಷಾಭಿಪ್ರಾಯಪ್ರವೇಶ ಏವ ನಾಸ್ತಿ' ಇತಿ ವದಾಮಃ । ತಥಾತ್ವೇ, ಸಂಕಲ್ಪಪ್ರಾರ್ಥನಾದಿವಾಕ್ಯಾನಾಮನರ್ಥಕತ್ವಪ್ರಸಙ್ಗಾದಿತಿ ಭಾವಃ । ಕಥಂ ತರ್ಹ್ಯಪೌರುಷೇಯತ್ವಮ್? ಇತ್ಯತ ಆಹ 'ಶಾಶ್ವತಾಃ' ಇತಿ । ಶಶ್ವದೇಕಪ್ರಕಾರಃ ಪೂರ್ವಂ ಸ್ಥಿತಾನ್ಯೇವ ವೇದವಾಕ್ಯಾನಿ ಕಾನಿಚಿತ್ ಕೈಶ್ಚಿತ್ ಪುರುಷೈಃ ಸ್ವಾಭಿಪ್ರಾಯಪ್ರವೇಶೇನ ಪ್ರಯುಜ್ಯನ್ತೇ ನತ್ವಪೂರ್ವಾಣಿ ಕ್ರಿಯನ್ತೇ ಇತ್ಯಾಶಯಃ ।

ಹಾಗಾದಲ್ಲಿ, 'ವಿಧಿ- ನಿಯೋಗ- ಪ್ರೇರಣ' ಇವು ಪರ್ಯಾಯ ಶಬ್ದಗಳು. ಆ ಪ್ರೇರಣೆಯಾದರೋ ಪ್ರೇರೇಪಿಸುವ ಪುರುಷನ ಧರ್ಮ. ಆದುದರಿಂದ ವೇದಗಳಲ್ಲಿರುವ ವಿಧಿವಾಕ್ಯಗಳು. ಉದ್ದೇಶವಾಕ್ಯಗಳು ಸ್ವತಂತ್ರಕರ್ತೃಕ

ಎನ್ನುವುದೇ ಉಚಿತ, ಲೌಕಿಕವಾಕ್ಯಗಳಂತೆ[1]. ಹಾಗೆ ಅರ್ಥವಾದ ವಾಕ್ಯಗಳೂ ಸಹ, 'ಸ್ವೀಕಾರ್ಯ' ಅಥವಾ 'ತಾಜ್ಯ' ಎನ್ನುವ ಅಭಿಪ್ರಾಯಗಳನ್ನು ತಿಳಿಸಲು ಪ್ರವೃತ್ತವಾದುದರಿಂದ, ಅಭಿಪ್ರಾಯವಾದರೋ ಸ್ವತಂತ್ರಕರ್ತೃವಿನ ಧರ್ಮ-ವಾದುದರಿಂದ (ಅರ್ಥವಾದ ವಾಕ್ಯವೂ ಲೌಕಿಕವಾಕ್ಯದಂತೆ ಸಕರ್ತೃಕವೇ ಆಗಬೇಕು)[2]. ಮತ್ತು ಸಹ ವೇದದಲ್ಲಿ 'ಅಹಂ' ಮುಂತಾದ ಪದಗಳು ಕೇಳುತ್ತವೆ. ಅವುಗಳಾದರೋ ಸ್ವತಂತ್ರವಕ್ತೃವನ್ನು ಹೊಂದಿರುವವು ಲೌಕಿಕ ವಾಕ್ಯದಂತೆ[3]. ಆದುದರಿಂದ ಇದೇ ಮುಂತಾದ ವಾಕ್ಯಗಳಿಗೆ ಪೌರುಷೇಯತ್ವವೇ (ಒಪ್ಪಬೇಕಾಗುವುದು) ಎಂದಾದಲ್ಲಿ? ಆದುದರಿಂದ '**ನಿತ್ಯಾಃ ವೇದಾಃ**' ಎಂದು ಉತ್ತರಿಸಿ, '**ಸಮಸ್ತಾಶ್ಚ**' ಎಂದು ಹೇಳಿದರು[4]. ಅದು ಹೇಗೆ ಎಂದರೆ, ನಾವು 'ವೇದದಲ್ಲಿ ಪುರುಷಾಭಿಪ್ರಾಯದ ಪ್ರವೇಶವೇ' ಇಲ್ಲ ಎಂದು ಹೇಳುವದಿಲ್ಲ. ಹಾಗಾದಲ್ಲಿ ಸಂಕಲ್ಪ, ಪ್ರಾರ್ಥನಾ ಮೊದಲಾದ ವಾಕ್ಯಗಳು ಅರ್ಥರಹಿತ

---

1. 'ಮನೆಗೆ ಹೋಗಿ', 'ಸದ್ದು ಮಾಡಬೇಡಿ' ಇತ್ಯಾದಿ ವಿಧಿ-ನಿಷೇಧಕವಾಕ್ಯಗಳಲ್ಲಿ ಸ್ವತಂತ್ರ ವಕ್ತೃವನ್ನು ಕಾಣುತ್ತೇವೆ. ಹಾಗೆಯೇ ವೇದದಲ್ಲಿರುವ 'ಸ್ವರ್ಗಕಾಮೋ ಯಜೇತ' ಇತ್ಯಾದಿ ವಿಧಿವಾಕ್ಯಗಳ ಹಿನ್ನೆಲೆಯಲ್ಲಿ ವಿಧಿಸುವ ವ್ಯಕ್ತಿಯೋರ್ವನು, 'ನ ಪ್ರಶ್ವಸಿತವ್ಯಮ್' ಇತ್ಯಾದಿ ನಿಷೇದಕವಾಕ್ಯಗಳ ಹಿನ್ನೆಲೆಯಲ್ಲಿ ನಿಷೇಧಿಸುವ ವ್ಯಕ್ತಿಯೋರ್ವನು ಇರಬೇಕಲ್ಲವೆ? ಎನ್ನುವದು ಈ ತರ್ಕದ ಭಾವ.

2. ದೇವತೆಗಳ, ಕರ್ಮಗಳ ಸ್ತುತಿಪರಕವಾದ, ಅನ್ಯಕರ್ಮಗಳ ನಿಂದಾಪರಕವಾದ ವಾಕ್ಯಗಳು ವೇದಗಳಲ್ಲಿವೆ. ಈ ವಾಕ್ಯಗಳು ಯಾವುದನ್ನು ಸ್ತುತಿಸುತ್ತವೋ ಅದು ಗ್ರಾಹ್ಯ ಎಂದು ತಿಳಿಸುವ ಅಭಿಪ್ರಾಯವನ್ನು ಹೊಂದಿರುತ್ತದೆ. ಹಾಗೆ ಯಾವುದನ್ನು ನಿಂದಿಸುತ್ತದೋ ಅದನ್ನು ತ್ಯಜಿಸಬೇಕು ಎಂಬ ಅಭಿಪ್ರಾಯಗಳನ್ನು ಹೊಂದಿರುತ್ತದೆ. ಹೀಗಾಗಿ ಈ ಅಭಿಪ್ರಾಯಗಳನ್ನು ತಿಳಿಸಬೇಕಾದಲ್ಲಿ ಆ ವಾಕ್ಯಕ್ಕೆ ಓರ್ವ ಕರ್ತೃವಿರಬೇಕಲ್ಲವೆ ? ಎಂದು ಸಂದೇಹದ ಭಾವ.

3. 'ಅಹಂ' ಶಬ್ದಸಹಿತವಾದ 'ಯೋಗಕ್ಷೇಮಂ ವಹಾಮ್ಯಹಂ' ಎನ್ನುವ ವಾಕ್ಯಕ್ಕೆ ಕೃಷ್ಣನು-ಭಗವಂತನು ಕರ್ತೃತಾನೆ ? ಹಾಗೆಯೇ 'ಅಹಂ ರುದ್ರೇಭಿಃ, ವಸುಭಿಃ ಚರಾಮಿ' ಇತ್ಯಾದಿ ವಾಕ್ಯಗಳಲ್ಲೂ ಸ್ವತಂತ್ರಕರ್ತೃವಿರಬೇಕಲ್ಲವೆ? ಎಂದು ಭಾವ.

4. ವೇದದ ಎಲ್ಲ ವಿಭಾಗದ ವಿಧಿವಾಕ್ಯ, ನಿಷೇಧಕ ವಾಕ್ಯ, ಅರ್ಥವಾದವಾಕ್ಯ, ಸಾಮಾನ್ಯ ವಾಕ್ಯಗಳೂ ಎಲ್ಲವೂ ಅಪೌರುಷೇಯವೇ ಆಗಿವೆ ಎಂದು ಭಾವ.

ಎಂದಾಗಬೇಕಾದೀತು ಎಂದು ಭಾವ[1]. ಹಾಗಾದಲ್ಲಿ , ಅಪೌರುಷೇಯತ್ವ ವು ಹೇಗೆ ? ಎಂದರೆ ಉತ್ತರಿಸುತ್ತಾರೆ. 'ಶಾಶ್ವತಾಃ' ಎಂದು. ನಿರಂತರ ಒಂದೇ ಕ್ರಮವನ್ನು ಹೊಂದಿರುವವು, ಹಿಂದೆ ಇರುವ ಕೆಲವು ವೇದ ವಾಕ್ಯಗಳನ್ನು ಕೆಲಪುರುಷರು ತಮ್ಮ ಅಭಿಪ್ರಾಯವನ್ನು ಸೇರಿಸಿ ಪ್ರಯೋಗಿಸುತ್ತಾರೆ. ಹಿಂದೆ ಇಲ್ಲದಿರುವುದನ್ನು ರಚಿಸುವದಿಲ್ಲ ಎಂದು ಅಭಿಮತ[2].

**ಆನುಪೂರ್ವಿಯು ಪೌರುಷೇಯವಾದರೂ ವೇದದ ಅಪೌರುಷೇಯತ್ವಕ್ಕೆ ಬಾಧಕವಿಲ್ಲ**

**ಏತೇನೈತದಪಿ ಪರಾಸ್ತಮ್ । ವರ್ಣಾಸ್ತಾವನ್ನಿತ್ಯತ್ವಾತ್ ಸರ್ವಗತತ್ವಾಚ್ಚ ಸ್ವತಃ ಕ್ರಮಶೂನ್ಯಾಃ । ನ ಚ ಕ್ರಮೇಣ ವಿನಾ ಪದವಾಕ್ಯಭಾವಃ । ನಾಪಿ ತಮನ್ತರೇಣ ಪ್ರಾಮಾಣ್ಯಮ್ । ಅತಃ ಕ್ರಮಃ ಪೌರುಷೇಯ ಏವ ಆಸ್ಥೇಯಃ । ತತ್ ಕಥಂ ವೇದಸ್ಯಾಪೌರುಷೇಯತ್ವಮ್? ಇತಿ । ನ ಹಿ ವಯಂ ವೇದಸ್ಯ ಕೂಟಸ್ಥ ನಿತ್ಯತಾಂ ಬ್ರೂಮಃ । ಕಿನ್ತು ಶಬ್ದತೋಽರ್ಥತಶ್ಚ ಸರ್ವದೈಕ-ಪ್ರಕಾರತಾಮೇವ । ತತಶ್ಚ ಕ್ರಮಸ್ಯ ಕೃತಕತ್ವೇಽಪಿ ಪುರುಷಾಭಿಪ್ರಾಯ-ಪ್ರವೇಶೇಽಪಿ ಸ್ವತಂತ್ರಸ್ಯ ವಕ್ತುರಭಾವಾದಪೌರುಷೇಯತ್ವ ಮುಪಪದ್ಯತೇ ।**

ಇದರಿಂದ (ಎಲ್ಲ ವೇದಗಳೂ ಶಾಶ್ವತ ಎಂದು ಹೇಳಿದ್ದರಿಂದ) ಇದೂ ಸಹ ( ಈ ಮುಂದಿನ ಸಂದೇಹವೂ) ನಿರಾಕೃತವಾಯಿತು. ವರ್ಣಗಳಾದರೋ ನಿತ್ಯ ಮತ್ತು ಎಲ್ಲೆಡೆ ವ್ಯಾಪ್ತ, ಸ್ವತಃ ಅವುಗಳಲ್ಲಿ ಕ್ರಮವಿಲ್ಲ. ಕ್ರಮವಿಲ್ಲದೇ ಪದ-ವಾಕ್ಯ ಎಂಬ ವ್ಯವಸ್ಥೆ ಇಲ್ಲ. ಪದ-ವಾಕ್ಯಗಳಿಲ್ಲದೆ (ಶಬ್ದಕ್ಕೆ) ಪ್ರಾಮಾಣ್ಯವೇ ಇಲ್ಲ. ಆದುದರಿಂದ (ವರ್ಣಗಳಲ್ಲಿನ) ಕ್ರಮವು

---

1. 'ಪಾಪೋಽಹಂ ಪಾಪಕರ್ಮಾಹಂ...' ಇತ್ಯಾದಿ ಪುರಾಣವಾಕ್ಯಗಳಿವೆ. ಇಲ್ಲಿ ವಸ್ತುತಃ 'ಅಹಂ' ಎಂದರೆ ಚತುರ್ಮುಖಬ್ರಹ್ಮ, ಆತನ ನುಡಿಯಾದುದರಿಂದ. ಆದರೆ ಅದನ್ನು ನಾವುಗಳೆಲ್ಲರೂ ಪ್ರಾರ್ಥನಾರೂಪದಲ್ಲಿ ಬಳಸುತ್ತೇವೆ. ಆಗ 'ಅಹಂ' ಶಬ್ದಕ್ಕೆ ನಾವುಗಳೇ ವಾಚ್ಯರಾಗುವೆವು. ಇಲ್ಲದಿದ್ದಲ್ಲಿ ಈ ಪ್ರಾರ್ಥನೆ ವ್ಯರ್ಥವಾಗಬೇಕಾದಿತು. ಹಾಗೆಯೇ ವೇದವಾಕ್ಯಗಳಲ್ಲಿನ 'ಶರೀರಂ ಮೇ ಶುದ್ಧ್ಯತಾಂ' ಇತ್ಯಾದಿ ವಾಕ್ಯಗಳಲ್ಲಿನ ಅಭಿಪ್ರಾಯಕ್ಕೆ ವೇದೋಚ್ಚಾರಕನೂ ಉದ್ದೇಶವಾಗಬಹುದು ಎಂದು ಭಾವ.

2. ಇಮಂ ಮೇ ವರುಣ.... ಆಯುಃ ಪ್ರಮೋಷೀಃ' ಎಂದು ಶುನಃಶೇಪನು ವರುಣನಲ್ಲಿ ಪ್ರಾರ್ಥಿಸಿದ್ದನು. ಅದನ್ನೇ ನಾವು ನಿತ್ಯ ಪಠಿಸುತ್ತೇವೆ ಆಗ 'ನಮ್ಮ ಆಯುವನ್ನು ಅಪಹರಿಸದಿರು' ಎಂದು ಪ್ರಾರ್ಥನೆಯಾಗುವುದು ಎಂದು ಅಭಿಪ್ರಾಯ.

ಪೌರುಷೇಯವೇ ಆಗಿರಬೇಕು. ಆದುದರಿಂದ ವೇದಕ್ಕೆ ಅಪೌರುಷೇಯತ್ವವು ಹೇಗೆ [1]? ನಾವು ವೇದಕ್ಕೆ ಕೂಟಸ್ಥ ನಿತ್ಯತ್ವವನ್ನು ಒಪ್ಪುವುದಿಲ್ಲ[2]. ಮತ್ತೇನು ಶಬ್ದದಿಂದ ಅರ್ಥದಿಂದ ಯಾವಾಗಲೂ ಒಂದೇ ರೀತಿ ಇರುವುದು ಎಂದು[3]. ಆದುದರಿಂದ ಕ್ರಮವು ಕೃತಕವಾದರೂ ಪುರುಷರ ಅಭಿಪ್ರಾಯದ ಪ್ರವೇಶವಾದರೂ ಸ್ವತಂತ್ರನಾದ ವಕ್ತೃವು (ವೇದಗಳಿಗೆ) ಇಲ್ಲದಿರುವುದರಿಂದ ಅಪೌರುಷೇಯತ್ವವು ಉಪಪದ್ಯಮಾನವಾಗುವುದು[4]. ಆದುದರಿಂದ ಕ್ರಮವು ಕೃತಕವಾದರೂ ಉಚ್ಚರಿಸುವ ವ್ಯಕ್ತಿಯ ಅಭಿಪ್ರಾಯದ ಪ್ರವೇಶವಿದ್ದರೂ, ಸ್ವತಂತ್ರವಾದ ವಕ್ತೃ ಇಲ್ಲದಿರುವುದರಿಂದ ವೇದದ ಅಪೌರುಷೇಯತ್ವವು ಉಪಪನ್ನವಾಗುವುದು.

### ಪ್ರಳಯಕಾಲದಲ್ಲೂ ವೇದದ ಪರಂಪರೆಗೆ ವಿಚ್ಛಿತ್ತಿಯು ಇಲ್ಲ

**ನನು, ಪ್ರಲಯೇ ವಿಚ್ಛೇದಾತ್ ಕಥಂ ಶಾಶ್ವತಾಃ? ಇತ್ಯತ ಆಹ 'ವಿಷ್ಣು ಬುದ್ಧಿಗಾಃ' ಇತಿ । ಅಪೌರುಷೇಯತ್ವೇ ಯುಕ್ತಿಕಥನಂ ಚೈತತ್ । ತಥಾ ಚ**

1. ವೇದ ಎಂದರೆ ವಾಕ್ಯ ಸಮೂಹ. ವಾಕ್ಯಗಳು ಎಂದರೆ ಅನೇಕ ಪದಗಳ ಗುಂಪು. ಪದಗಳು ಎಂದರೆ ವರ್ಣಗಳ ಮೇಲನ, ಆ ವರ್ಣಗಳು ಒಂದು ಕ್ರಮದಲ್ಲಿರಬೇಕು. ಆನುಪೂರ್ವಿಯ ಕ್ರಮದಲ್ಲಿ ವ್ಯತ್ಯಯಗೊಂಡಲ್ಲಿ 'ರಾಜ' 'ಜಾರ' ಎಂದು ಉಚ್ಚರಿಸಿದಲ್ಲಿ, ಅರ್ಥದಲ್ಲಿ ವ್ಯತ್ಯಯಗೊಳ್ಳುವುದು. ಅಥವಾ ಬೋಧಕವೇ ಆಗದೆ ಇರಬಹುದು. ಆದುದರಿಂದ ಕ್ರಮವನ್ನು ಒಪ್ಪಬೇಕು. ಈ ಕ್ರಮವು, ಕಾಲದೇಶಗಳಿಂದ ನಿತ್ಯವಾದ ವರ್ಣಗಳಲ್ಲಿ ಸ್ವತಃ ಒಪ್ಪಲಾಗದು. ಆದುದರಿಂದ ಪುರುಷ ಬುದ್ಧಿ ಕಲ್ಪಿತ ಎಂದೇ ಒಪ್ಪಬೇಕು. ಹಾಗಾಗಿ ವೇದಕ್ಕೆ ಪೌರುಷೇಯತ್ವವನ್ನು ಒಪ್ಪಬೇಕು ಎಂದು ಪೂರ್ವಪಕ್ಷಿಯ ಭಾವ.

2. ನಿತ್ಯತ್ವವು ಅನೇಕವಿಧದಲ್ಲಿದೆ. ಕೂಟ ಎಂದರೆ ಅವ್ಯಾಕೃತಾಕಾಶ. ಅದರಲ್ಲಿರುವ ನಿತ್ಯತ್ವವು ಶಶ್ವದೇಕಪ್ರಕಾರತ್ವರೂಪವಾದದ್ದು. ಅವ್ಯಾಕೃತಾಕಾಶದಲ್ಲಿರುವಂತಹ ನಿತ್ಯತ್ವವು ವೇದಗಳಿಗೆ ಒಪ್ಪಿತವಾಗಿಲ್ಲ ಎಂದು ಭಾವ.

3. 'ಅಗ್ನಿಮೀಳೇ'ಎಂದಿರುವ ವೇದವು 'ಈಳೇ ಅಗ್ನಿಂ' ಎಂದಾಗಲೀ 'ವಹ್ನಿಮೀಳೇ' ಎಂದಾಗಲೀ ಅಗ್ನಿಶಬ್ದಕ್ಕೆ ವಹ್ನಿ ಎಂಬ ಅರ್ಥದ ಬದಲಾಗಿ ಜಲ ಎಂದಾಗಲೀ ಯಾವ ಕಲ್ಪದಲ್ಲೂ ಬದಲಾಗುವುದಿಲ್ಲ ಎಂದು ಭಾವ.

4. ಉಪಾಧ್ಯಾಯರು ಉಚ್ಚಾರಣೆ ಮಾಡಿದಾಗ ವರ್ಣಗಳ ಕ್ರಮವು ಉತ್ಪನ್ನವಾಗುವುದು. ಆದರೂ ಆ ಉಪಾಧ್ಯಾಯರು ಪೂರ್ವದಲ್ಲಿನ ಕ್ರಮದ ಸದೃಶವಾದ ಕ್ರಮದಂತೆ ಉಚ್ಚರಿಸುತ್ತಾರೆ. ಅಂದರೆ 'ಅಗ್ನಿಮೀಳೇ' ಎಂದಿದ್ದರೆ 'ಅಗ್ನಿಮೀಳೇ' ಎಂದೇ ಉಚ್ಚರಿಸುತ್ತಾರೆ, ತನ್ನ ಬುದ್ಧಿಯಿಂದ ಸ್ವತಂತ್ರವಾದ ಹೊಸ ಕ್ರಮವನ್ನು ಬಳಸುವುದಿಲ್ಲ ಎಂದು ಭಾವ.

ವ್ಯಾಕರಿಷ್ಯತ್ಯಾಚಾರ್ಯಃ । ತಥಾऽಪಿ ಲೋಕೇ ಪುನಃ ಪ್ರವೃತ್ತಿಃ ಕಥಮ್? ಇತ್ಯತ ಆಹ **'ಸರ್ಗೇ'** ಇತಿ । ಸತಿ ಸಪ್ತಮೀಯಮ್ । ವೀಪ್ಸಾಯಾಂ ದ್ವಿರ್ವಚನಮ್ । ಉದ್ಗೀರ್ಯನ್ತೇ - ಉಚ್ಚಾರ್ಯಂತೇ - ಬ್ರಹ್ಮಾದೀನ್ ಪ್ರತ್ಯುಪದಿಶ್ಯನ್ತೇ । ತರ್ಹಿ ತಸ್ಯ ನಿಯಾಮಕಾಭಾವಾದನ್ಯಥಾऽಪ್ಯುಪದೇಶಃ ಸಂಭಾವ್ಯಃ? ಇತ್ಯತ ಉಕ್ತಮ್ **'ಏತ ಏವ'** ಇತಿ । ಪೂರ್ವಕಲ್ಪೇ ಪ್ರವೃತ್ತಾ ಏವ । ಕಿಂ ಶಬ್ದ ಮಾತ್ರಸಾಮ್ಯೇನಾರ್ಥಮಾತ್ರಸಾಮ್ಯೇನ ವಾ **'ಏತ ಏವ'** ಇತ್ಯುಚ್ಯನ್ತೇ । ನೈವಂ, ಕಿನ್ತು ಸರ್ವಪ್ರಕಾರೇಣೇತ್ಯಾಹ **'ತಥೈವ ಚ'** ಇತಿ । ತದ್ವಿವೃಣೋತಿ **'ತತ್‌ಕ್ರಮೇಣೈವ'** ಇತಿ । ಏವಂ ತೈರೇವ ಪದಾರ್ಥೈಃ ವಾಕ್ಯಾರ್ಥೈಶ್ಚೇತ್ಯಪಿ ದ್ರಷ್ಟವ್ಯಮ್ । ಇತ್ಥಂಭೂತಲಕ್ಷಣೇ ತೃತೀಯಾ ।

ಆದರೆ, ಪ್ರಲಯಕಾಲದಲ್ಲಿ (ಪರಂಪರೆಯ) ವಿಚ್ಛೇದವಾಗುವುದರಿಂದ (ವೇದಗಳು) 'ಶಾಶ್ವತಾಃ' ಎನ್ನುವದು ಹೇಗೆ ? ಆದುದರಿಂದ ಉತ್ತರಿಸುತ್ತಾರೆ **'ವಿಷ್ಣು ಬುದ್ಧಿಗಾಃ'** ಎಂದು. ಇದು (ವಿಷ್ಣು ಬುದ್ಧಿಗಾಃ ಎನ್ನುವುದು) ಅಪೌರುಷೇಯ ಎನ್ನುವುದಕ್ಕೆ (ಮತ್ತೊಂದು) ಯುಕ್ತಿಯನ್ನು ಹೇಳಿದಂತಾಯಿತು. ಹಾಗೆಯೇ ಆಚಾರ್ಯರು ಮುಂದೆ ವ್ಯಾಖ್ಯಾನಿಸಿದ್ದಾರೆ[1]. ಹಾಗಾದರೂ (ಈಶ್ವರ ಬುದ್ಧಿಯಲ್ಲಿ ವೇದಗಳು ವ್ಯವಸ್ಥಿತವಾಗಿದ್ದರೂ) ಲೋಕದಲ್ಲಿ ಪುನಃ ಪ್ರವೃತ್ತಿ ಹೇಗೆ ? ಆದುದರಿಂದ ಉತ್ತರಿಸುತ್ತಾರೆ **'ಸರ್ಗೇ'** ಎಂದು. ಇದು ಸತಿಸಪ್ತಮಿ[2]. 'ನೈರ್ಭರ್ಯ' ಎಂಬ ಭಾವದಲ್ಲಿ ದ್ವಿವಚನ[3]. **ಉದ್ಗೀರ್ಯಂತೇ**- ಹೇಳಲಾಗುವುದು- ಬ್ರಹ್ಮಾದಿಗಳನ್ನು ಉದ್ದೇಶಿಸಿ ಉಪದೇಶಿಸಲಾಗುವುದು. ಹಾಗಾದಲ್ಲಿ ಅದಕ್ಕೆ ನಿಯಾಮಕವಿಲ್ಲದ ಪ್ರಯುಕ್ತ, ಬೇರೆ ರೀತಿಯಲ್ಲೂ ಉಪದೇಶಿಸುವ ಸಂಭಾವನೆಯೂ ಇದೆ? ಆದುದರಿಂದ

---

1. 'ವೇದಾಃ ಅಪೌರುಷೇಯಾಃ ಸರ್ವಜ್ಞೇಶ್ವರಬುದ್ಧೌ ಸರ್ವದಾ ಪ್ರತೀಯಮಾನತ್ವಾತ್' ಎಂಬ ಅನುಮಾನದಿಂದ ಮುಂದೆ ಸಾಧಿಸಲಾಗಿದೆ ಎಂದು ಭಾವ.

2. 'ಸರ್ಗೇ' ಎನ್ನುವಲ್ಲಿನ ಸಪ್ತಮಿಗೆ ಅನ್ವಯವು ಈ ವಾಕ್ಯದಲ್ಲಿ ತೋರುತ್ತಿಲ್ಲ ಆದಕ್ಕಾಗಿ ಇದು ಸತಿಸಪ್ತಮಿ ಎಂದು ಟೀಕಾದಲ್ಲಿ ತಿಳಿಸಲಾಗಿದೆ 'ಸೃಷ್ಟಿಯು ಪ್ರಾಪ್ತವಾಗಲು' ಎಂದು ಅರ್ಥವು ಸಿದ್ಧಿಸುವುದು.

3. ಪ್ರತಿ ಸೃಷ್ಟಿಯು ಪ್ರಾಪ್ತವಾಗಲು ಭಗವಂತನು ಹಿಂದಿನಂತೆಯೇ ಉಪದೇಶಿಸುವನು ಎಂಬುವುದು ನಿಶ್ಚಯ ಎಂದು ಭಾವ.

ಉತ್ತರಿಸುತ್ತಾರೆ[1] 'ಏತ ಏವ' ಎಂದು. ಹಿಂದಿನ ಕಲ್ಪದಲ್ಲಿ (ಯಾವ ರೀತಿಯಲ್ಲಿ) ಪ್ರವೃತ್ತವಾಗಿದ್ದವೋ ಹಾಗೆ. ಇಲ್ಲಿ 'ಏತ ಏವ' (ಹಿಂದಿನಕಲ್ಪದಲ್ಲಿ ಪ್ರವೃತ್ತವಾದಂತೆ) ಎನ್ನುವುದರಿಂದ ಶಬ್ದಸಾಮ್ಯವನ್ನೋ ಅಥವಾ ಅರ್ಥಸಾಮ್ಯವನ್ನೋ ಯಾವುದನ್ನು ಪ್ರತಿಪಾದಿಸುತ್ತಿರುವಿರಿ ? ಹಾಗಲ್ಲ, ಹೇಗೆಂದರೆ ಎಲ್ಲ ರೀತಿಯಿಂದಲೂ ಎಂದು ತಿಳಿಸುತ್ತಾರೆ **'ತಥೈವ ಚ'** ಎನ್ನುವುದರಿಂದ. ಅದನ್ನೇ ವಿವರಿಸುತ್ತಿದ್ದಾರೆ **'ತತ್ಕ್ರಮೇಣ'** ಎನ್ನುವುದರಿಂದ. ಹೀಗೆ – ಪದಗಳಿಗೆ ಅದೇ ಅರ್ಥಗಳಿಂದ, ಅದೇ ವಾಕ್ಯಾರ್ಥಗಳಿಂದಲೂ ಸಹ ಎಂದು ತಿಳಿಯುವುದು[2]. ಇತ್ಥಂಭೂತಾರ್ಥದಲ್ಲಿ ತೃತೀಯಾ ವಿಭಕ್ತಿಯು ಪ್ರಾಪ್ತವಾಗಿದೆ[3].

---

1. ಪ್ರತಿಸೃಷ್ಟಿಯ ಆರಂಭದಲ್ಲಿ ಈಶ್ವರನೇ ಇದಂಪ್ರಥಮತಯಾ ಬ್ರಹ್ಮಾದಿಗಳಿಗೆ ಉಪದೇಶಿಸುವನು. ಗುರುಗಳ ಉಪದೇಶವಾದರೂ ಅವರ ಹಿಂದಿನ ಗುರುಗಳ ಉಪದೇಶವನ್ನು ಅನುಸರಿಸುತ್ತಿದ್ದರು. ಈಶ್ವರನಿಗೆ ಆ ನಿರ್ಬಂಧವಿಲ್ಲ. ಹಾಗಾಗಿ ಈಶ್ವರನು ಹಿಂದಿನ ಆನುಪೂರ್ವಿಯಿಂದ ವಿಭಿನ್ನವಾದ ಆನುಪೂರ್ವಿಯುಕ್ತವಾಗಿ ವೇದಗಳನ್ನು ಉಪದೇಶಿಸಿರಬಹುದಲ್ಲವೇ? ಆಗ ವೇದಗಳಲ್ಲಿನ ಅಪೌರುಷೇಯತ್ವವೆಂದರೆ 'ಪೂರ್ವಾನುಪೂರ್ವಿಸದೃಶಾನುಪೂರ್ವೀಕತ್ವ' ಎಂಬ ನಿಯಮಕ್ಕೆ ಭಂಗ ಬರಬಹುದಲ್ಲವೆ ? ಎಂದು ಪೂರ್ವಪಕ್ಷಿಯ ಆಶಯ.

2. 'ಅಗ್ನಿಮೀಳೇ...' ಇತ್ಯಾದಿಗಳು ಹಿಂದೆಯೂ ಹೀಗೆಯೇ ಇತ್ತು ಇಂದೂ ಹಾಗೇ ಇದೆ. 'ವಹ್ನಿಮೀಳೇ' ಇತ್ಯಾದಿಯಾಗಿ 'ಈಳೇ ವಹ್ನಿಂ' ಇತ್ಯಾದಿಯಾಗಿಯಾಗಲೀ ವ್ಯತ್ಯಾಸಗೊಳಿಸುವುದಿಲ್ಲ. ಮತ್ತು 'ಅಗ್ನಿಂ' ಎನ್ನುವ ಶಬ್ದಕ್ಕೆ ಈಗ 'ವಹ್ನಿ' ಎಂಬ ಅರ್ಥ ಏರುವಂತೆ ಮುಂಚೆಯೂ ಹಾಗೆಯೇ ಇತ್ತು ಮುಂದೂ ಹಾಗೆ ಇರುತ್ತದೆ ಎಂದು ಭಾವ.

3. ಪ್ರಸಕ್ತವಾದ ಮೂಲದ ವಾಕ್ಯದಲ್ಲಿ 'ತತ್ಕ್ರಮೇಣೈವ, ತೈಃ ವರ್ಣೈಃ, ತೈಃ ಸ್ವರೈಃ' ಎಂಬ ತೃತೀಯಾ ವಿಭಕ್ತ್ಯಂತವಾದ ಪದಗಳಿಂದ ಅನ್ವಯವು ತೋರುತ್ತಿಲ್ಲ. 'ಕರ್ತೃಕರಣಯೋಃ ತೃತೀಯಾ' (ಪಾ.ಅ.2.3.18.)ಸೂತ್ರದಲ್ಲಿ ತಿಳಿಸಿರುವಂತೆ ಕರ್ತ್ರರ್ಥಕವಾಗದ, ಕರಣಾರ್ಥಕವೂ ಆಗದ ಮತ್ತು ಉಪಕಾರಣಾದ್ಯರ್ಥಗಳನ್ನು ಹೊಂದಿರದ ಈ ಶಬ್ದಗಳಿಗೆ ತೃತೀಯಾವಿಭಕ್ತಿಯು ಹೇಗೇ? ಉತ್ತರಿಸುತ್ತಾರೆ– ಈ ಶಬ್ದಗಳಿಗೆ ತೃತೀಯಾ ವಿಭಕಿಯು 'ಇತ್ಥಂಭೂತಲಕ್ಷಣೇ' (ಪಾ.ಅ.ಸೂ.2.3.21.) ಎಂಬ ಸೂತ್ರದ ನಿಯಮದಂತೆ – ಪದಾರ್ಥವೊಂದು 'ಇಂತಹ ಧರ್ಮವನ್ನು ಹೊಂದಿದೆ' ಎಂದು ಸೂಚಿಸುವ ಶಬ್ದವು ತೃತೀಯಾ ವಿಭಕ್ತಿಯನ್ನು ಹೊಂದುವುದು, ಎಂಬ ನಿಯಮಾನುಸಾರ ಪ್ರಾಪ್ತವಾಗಿದೆ. ಉದಾ– 'ಜಟೆಯು ಈತನನ್ನು ತಪಸ್ವಿ' ಎಂದು ಸೂಚಿಸುತ್ತಿರುವಾಗ 'ಜಟಾಭಿಃ ತಾಪಸಃ' ಎಂದು ಪ್ರಯೋಗಿಸಲಾಗುವುದು. ಪ್ರಕೃತ 'ಅಮುನಾ ಉದ್ಗೀರ್ಯಂತೇ' ಎಂದಿದೆ. ಹರಿಯಿಂದ ಉಚ್ಚರಿಸಲಾಗಿದೆ. ಈ ಉಚ್ಚಾರಣವು ಹಿಂದಿದ್ದ ಕ್ರಮಾದಿಗಳಿಂದಲೋ ಅಥವಾ ಹೊಸ ಕ್ರಮದಿಂದಲೋ? ಎಂಬ ಸಂದೇಹವನ್ನು ಪರಿಹರಿಸುವುದು 'ತತ್ಕ್ರಮೇಣೈವ' ಇತ್ಯಾದಿ ಪದಗಳು ಎಂದು ಭಾವ.

**ವೇದವ್ಯಾಖ್ಯಾನದಲ್ಲಿ ವಿಶ್ವಾಸವು ಹೇಗೆ?**

**ಅನೇನ, ಏತದಪಿ ನಿರಸ್ತಮ್ । ನಾವ್ಯಾಖ್ಯಾತಾದ್ವೇದಾತ್ ಕಶ್ಚಿದರ್ಥಮಧಿಗಚ್ಛತಿ । ನ ಚಾರ್ಥಾಧಿಗತಿಮನ್ತರೇಣಾನುಷ್ಠಾನಂ ಸಮ್ಭವತಿ । ನ ಚಾರ್ವಾಕ್ತನಪುರುಷವ್ಯಾಖ್ಯಾನೇ ವಿಶ್ವಾಸೋ ಯುಜ್ಯತೇ, ಅನಾದೇಶಿಕತ್ವಾತ್[1] । ಅತಃ ಸ್ವತಂತ್ರವಕ್ತೃವ್ಯಾಖ್ಯಾನಮಙ್ಗೀಕರಣೀಯಮಿತಿ । ವೇದಾನಾಮಕರ್ತ್ರಾsಪಿ ಸರ್ವಜ್ಞೇನೇಶ್ವರೇಣ ವ್ಯಾಖ್ಯಾನೋಪಪತ್ತೇಃ ।**

ಇದರಿಂದ ('ಅರ್ಥತಃ ಶಬ್ದತಃ ಸರ್ವಪ್ರಕಾರೇಣ ವೇದವೂ ಒಂದೇ ತರಹವಿರುವುದು. ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ನಿರಂತರವಿರುವುದು' ಎಂದು ಹೇಳಿದ್ದರಿಂದ) ಇದೂ (ಈ ಮುಂದಿನ ಸಂದೇಹವೂ) ಸಹ ನಿರಾಕೃತವಾಯಿತು. ವ್ಯಾಖ್ಯಾನಿಸದ ವೇದದಿಂದ ಅರ್ಥಜ್ಞಾನವಿಲ್ಲ. ಅರ್ಥಜ್ಞಾನವಿಲ್ಲದೇ (ವೇದೋಕ್ತಕರ್ಮಗಳ) ಅನುಷ್ಠಾನವು ಸಂಭಾವಿತವಲ್ಲ. ಆಧುನಿಕ ಪುರುಷನ ವ್ಯಾಖ್ಯಾನದಲ್ಲಿ ವಿಶ್ವಾಸವಿಲ್ಲ, ( ಈ ವ್ಯಾಖ್ಯಾನವು, ವೇದವನ್ನು ರಚಿಸಿದವನ) ಉಪದೇಶದ ಪರಂಪರೆಯನ್ನು ಹೊಂದಿಲ್ಲದೇ ಇರುವುದರಿಂದ[1]. ಆದುದರಿಂದ ಸ್ವತಂತ್ರವಕ್ತೃವಿನ ವ್ಯಾಖ್ಯಾನವನ್ನೇ ಅಂಗೀಕರಿಸಬೇಕು ಎಂದು[2].(ಸೃಷ್ಟಿಯ ಆದಿಯಲ್ಲಿ ) ವೇದದ ಕರ್ತೃವಾಗದ ಸರ್ವಜ್ಞನಾದ ಈಶ್ವರನಿಂದ (ವೇದದ) ವ್ಯಾಖ್ಯಾನವು ಉಪಪನ್ನವಾಗು-ವುದರಿಂದ[3].

---

1. ಅನಾದೇಶಿಕತ್ವಾತ್: ಆದೇಶ- ಉಪದೇಶ, ನ+ ಆದೇಶ- ಅನಾದೇಶ, ಎಂದು ತಿಳಿಯುವುದು.

2. 'ವೇದವು ಉಪದೇಶಪರಂಪರೆಯಿಂದ ಪ್ರಾಪ್ತವಾದುದರಿಂದ ಅಪೌರುಷೇಯತ್ವವು ಸಂಪನ್ನವಾಗುವುದು' ಎಂದು ಪ್ರತಿಪಾದಿಸಿದರೂ ಪ್ರಯೋಜನವಿಲ್ಲ, ಏಕೆಂದರೆ ಅರ್ಥವಾಗದ ವೇದದಿಂದ ಧರ್ಮದ ನಿಶ್ಚಯವು ಆಗದು. ಆದರೆ ಅದರ ಅರ್ಥ, ತಾತ್ಪರ್ಯಾದಿಗಳು ಸ್ವತಂತ್ರ-ಪುರುಷನಿಂದ ನಿರ್ಮಿತವಾಗಿವೆ ಎಂದು ಒಪ್ಪಬೇಕು. ಆದುದರಿಂದ ವೇದವೂ ಅಪೌರುಷೇಯ ಎಂದು ಒಪ್ಪಿದರೂ ಧರ್ಮಾದಿಗಳ ನಿಶ್ಚಯವಾಗದೆ ಅರ್ಥಾಂತರತ್ವ ಎಂದು ಭಾವ.

3. ಸರ್ವಜ್ಞನಾದ ಈಶ್ವರನು, ವೇದದ ಆನುಪೂರ್ವ್ಯಾದಿಗಳನ್ನು ಹೇಗೆ ಸಂರಕ್ಷಿಸುವನೋ ಹಾಗೆಯೇ ಅದರ ಅರ್ಥ, ತಾತ್ಪರ್ಯಾದಿಗಳನ್ನೂ ಸಂರಕ್ಷಿಸುವನು ಮತ್ತು ಹಾಗೆಯೇ ಉಪದೇಶಿಸುವನು ಎಂದು ಭಾವ.

**ಅಪೌರುಷೇಯತ್ವವನ್ನು ಪ್ರತಿಪಾದಿಸುವ ಸ್ಮೃತ್ಯುಕ್ತ ಯುಕ್ತಿಗಳು**

**ಅತಃ ಶ್ರುತಿತ್ವಮೇತಾಸಾಂ ಶ್ರುತಾ ಏವ ಯತೋಽಖಿಲೈಃ ।**
**ಜನ್ಮಾನ್ತರೇ ಶ್ರುತಾಸ್ತಾಸ್ತು ವಾಸುದೇವಪ್ರಸಾದತಃ ।**
**ಮುನೀನಾಂ ಪ್ರತಿಭಾಸ್ಯನ್ತಿ ಭಾಗೇನೈವ ನ ಸರ್ವಶಃ ।**
**ಯತಸ್ತಾ ಹರಿಣಾ ದೃಷ್ಟಾಃ ಶ್ರುತಾ ಏವಾಪರೈರ್ಜನೈಃ ।**
**ಶ್ರುತಯೋ ದೃಷ್ಟಯಶ್ಚೇತಿ ತೇನೋಚ್ಯನ್ತೇ ಪುರಾತನೈಃ ॥**

ಯಾವ ಕಾರಣದಿಂದ ಎಲ್ಲರಿಂದಲೂ (ಕೇವಲ) ಶ್ರುತವಾಗಿದೆ (ರಚಿತವಾದದ್ದಲ್ಲ), ಆದುದರಿಂದ ಇವುಗಳಿಗೆ (ವೇದಗಳಿಗೆ) ಶ್ರುತಿತ್ವವು (ಶ್ರುತಿ ಎಂಬ ಹೆಸರು ಯುಕ್ತವಾಗುವುದು). ಮುನಿಗಳಿಗೆ ಜನ್ಮಾಂತರದಲ್ಲಿ ಶ್ರುತವಾದ ಸಮಗ್ರವಾಗಿ ಅಲ್ಲ, (ಶ್ರುತವಾದದ್ದರಲ್ಲಿ) ಕೆಲವು ಭಾಗವು, ಹರಿಯ ಪ್ರಸಾದದಿಂದ (ಈ ಜನ್ಮದಲ್ಲಿ) ಪ್ರತಿಭಾಸವಮಾನವಾಗುವುದು. ಯಾವಕಾರಣದಿಂದ ಅವು (ಆ ವೇದಗಳು) ಹರಿಯಿಂದ (ಪೂರ್ಣವಾಗಿ) ದೃಷ್ಟವಾಗಿವೆ, ಇತರರಿಂದ ಕೇವಲ ಶ್ರುತವಾಗಿವೆ. ಆದುದರಿಂದ ಪ್ರಾಚೀನರು (ವೇದಗಳನ್ನು) ಶ್ರುತಿ, ದೃಷ್ಟ ಎಂದು ಕರೆಯುವರು.

**ಅಪೌರುಷೇಯತ್ವೇ ಯುಕ್ತ್ಯನ್ತರಂ ಚಾಹ 'ಅತ' ಇತಿ । ಶ್ರುತಿತ್ವಮಿತಿ ಪ್ರಸಙ್ಗಾತ್ ಸ್ತ್ರೀಲಿಂಗನಿರ್ದೇಶಃ । ಏತಾಸಾಂ- ಶ್ರುತೀನಾಂ ಶ್ರುತಿತ್ವಂ- ಶ್ರುತಿಶಬ್ದವಾಚ್ಯತ್ವಂ, ಅತಃ- 'ಅಪೌರುಷೇಯತ್ವಾದೇವೋಪಪದ್ಯತೇ ನಾನ್ಯಥಾ' ಇತ್ಯರ್ಥಃ । ತತ್‌ಕಥಂ? ಇತ್ಯತ ಆಹ 'ಶ್ರುತಾ ಏವ' ಇತಿ । ಶ್ರುತತ್ವಾದ್ಧಿ ಶ್ರುತಯಃ । ಶ್ರುತತ್ವಂ ಚ ಶಬ್ದಮಾತ್ರಸಾಧಾರಣಂ । ತತಶ್ಚ 'ಅಸಾಧಾರಣ್ಯೇನ ವ್ಯಪದೇಶಾ ಭವನ್ತಿ' ಇತಿ ನ್ಯಾಯೇನ 'ಅಬ್ಭಕ್ಷಃ' 'ವಾಯುಭಕ್ಷಃ' ಇತಿವತ್ ಸಾವಧಾರಣಂ ವ್ಯಾಖ್ಯೇಯಮ್ । ತಥಾ ಚಾಖಿಲೈಃ ಶ್ರುತಾ ಏವ, ನತು ಕೇನಾಪಿ ಕೃತಾ ಇತಿ ಶ್ರುತಿಶಬ್ದವಾಚ್ಯತ್ವೇನ ಲಭ್ಯತೇ ಇತ್ಯರ್ಥಃ ।**

(ವೇದದ) ಅಪೌರುಷೇಯತ್ವದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ. 'ಅತಃ' ಎನ್ನುವುದರಿಂದ 'ಶ್ರುತಿತ್ವಂ' ಎಂದು

ಪ್ರಕೃತವಾದುದರಿಂದ ಸ್ತ್ರೀಲಿಂಗದ ನಿರ್ದೇಶವಾಗಿದೆ[1]. ಏತಾಸಾಂ- ಶ್ರುತಿಗಳಿಗೆ, **ಶ್ರುತಿತ್ವಂ** - ಶ್ರುತಿಶಬ್ದದಿಂದ ವಾಚ್ಯತ್ವವು, **ಅತಃ**- (ವೇದಗಳು) ಅಪೌರುಷೇಯವಾದುದರಿಂದಲೇ ಯೋಗ್ಯವಾಗುವುದು ಬೇರೇ ಕಾರಣಗಳಿಂದಲ್ಲ ಎಂದು ಭಾವ. ಅದು ಹೇಗೆ ? ಅದುದರಿಂದ ಉತ್ತರಿಸುತ್ತಾರೆ '**ಶ್ರುತಾ ಏವ**' ಎಂದು. (ವೇದಗಳು ಕೇವಲ) ಶ್ರುತವಾದುದರಿಂದಲೇ 'ಶ್ರುತಿಗಳು' (ಎಂದು ಪ್ರಸಿದ್ಧವಾಗಿದೆ). ಶ್ರವಣವಿಷಯತ್ವವು ಎಲ್ಲ ಶಬ್ದಗಳಲ್ಲೂ ಇರುವ ಸಾಧಾರಣಧರ್ಮವಾಗಿದೆ. ಆದುದರಿಂದಲೇ 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂಬುವ ನಿಯಮದಂತೆ 'ಅಬ್ಭಕ್ಷ' 'ವಾಯುಭಕ್ಷ' ಇವುಗಳಂತೆ ಅವಧಾರಣಸಹಿತವಾಗಿ ವ್ಯಾಖ್ಯಾನಿಸಬೇಕು. ಒಟ್ಟಿನಲ್ಲಿ (ವೇದಗಳು) ಶ್ರುತಿಶಬ್ದದಿಂದ ವಾಚ್ಯ ಎನ್ನುವುದರಿಂದ 'ಎಲ್ಲರಿಂದಲೂ ಕೇಳಿಸಿಕೊಳ್ಳಲಾಗಿದೆಯೇ ಹೊರತು ಯಾರಿಂದಲೂ ನಿರ್ಮಿಸಲಾಗಿಲ್ಲ' ಎಂದೇ ಪ್ರಾಪ್ತವಾಗುವುದು ಎಂದು ಭಾವ[2].

---

1. 'ನಿತ್ಯಾ ವೇದಾಃ .....' ಎಂದು ಪುಲ್ಲಿಂಗದಲ್ಲಿ ವೇದ ಶಬ್ದವು ಪ್ರಸಕ್ತವಾಗಿರುವಾಗ 'ಏತೇಷಾಂ' ಎಂದು ಪುಲ್ಲಿಂಗಶಬ್ದವನ್ನು ಬಳಸದೆ 'ಏತಾಸಾಂ' ಎಂದು ಸ್ತ್ರೀಲಿಂಗ ಶಬ್ದವನ್ನು ಬಳಸಿದ್ದು ಹೇಗೆ ಸರಿಯಾದೀತು ? ಉತ್ತರಿಸುತ್ತಾರೆ - 'ಶ್ರುತಿತ್ವಂ' ಎನ್ನುವ ಶಬ್ದದಲ್ಲಿ ಘಟಕವಾದ 'ಶ್ರುತಿ' ಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ 'ಏತಾಸಾಂ' ಎಂದು ಸ್ತ್ರೀಲಿಂಗ ಶಬ್ದದ ಬಳಕೆಯು ಸಾಧು ಎಂದು ಭಾವ.

2. 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂದು ಒಂದು ನಿಯಮವನ್ನು ಶಾಸ್ತ್ರಗಳಲ್ಲಿ ಒಪ್ಪಲಾಗಿದೆ. 'ಈ ಮುನಿಗಳು ಅಬ್ಭಕ್ಷರು, ವಾಯುಭಕ್ಷರು' ಎಂದು ಹೇಳುವರು. ಈ ಮುನಿಗಳು ಅಬ್ಭಕ್ಷರು ಎಂದರೆ ನಾವೂ ಅಬ್ಭಕ್ಷರೇ (ನೀರನ್ನು ಕುಡಿಯುವವರೇ) ಅಲ್ಲವೇ ? ಹಾಗಾದರೆ ಮುನಿಗಳನ್ನು ಹಾಗೆ ತಿಳಿಸಿದಾಗ 'ಅಮ್ಮಾತ್ರಭಕ್ಷರು, ಜೀವಿಕೆಗೆ ಜಲೇತರವಾದದ್ದನ್ನು ಏನನ್ನು ಸ್ವೀಕರಿಸುವದಿಲ್ಲ' ಎಂದು ಅವಧಾರಣಸಹಿತವಾಗಿ ಆ ಶಬ್ದವನ್ನು ಅರ್ಥೈಸಲಾಗುವುದು. ಹಾಗೆ ಪ್ರಕೃತದಲ್ಲಿ ವೇದಗಳನ್ನು 'ಶ್ರುತಿ' ಎಂದು ಕರೆಯಬೇಕಾದಲ್ಲಿ ಶಬ್ದಗಳೆಲ್ಲವೂ 'ಶ್ರುತಿ'ಯೇ (ಶ್ರವಣೇಂದ್ರಿಯಕ್ಕೆ ವಿಷಯವೇ) ಆಗಿರುವಾಗ, ಇವುಗಳಿಗೆ ಮಾತ್ರ 'ಶ್ರುತಿ' ಎಂದು ಹೆಸರಿಸಬೇಕಾದಲ್ಲಿ, ಅಸಾಧಾರಣವಾಗಿ ವ್ಯಪದೇಶಿಸವುದರಿಂದ, ಅಂದರೆ ಇವು ಕೇವಲ ಶ್ರುತ, ಅನ್ಯರಿಂದ ರಚಿತವಲ್ಲ. ಉಳಿದವು ಶ್ರುತವಾದರೂ ರಚಿತವಾದವುಗಳು ಎಂಬ ಭಾವವು ಅಭಿವ್ಯಕ್ತವಾಗುತ್ತದೆ ಎಂದು ಭಾವ.

**ನಾಮವಿಶೇಷಗಳಿಂದ ಮಂತ್ರಗಳು ಪ್ರಸಿದ್ಧವಾದರೂ ಅಪೌರುಷೇಯತ್ವಕ್ಕೆ ಧಕ್ಕೆಯಿಲ್ಲ**

ನನು, ಮುನಯೋಽನಧೀತಾ ಅಪಿ ಪಠನ್ತಿ, ತತ್‌ಕಥಂ 'ಅಖಿಲೈಃ ಶ್ರುತಾ ಏವ' ಇತ್ಯುಚ್ಯತ? ಇತ್ಯತ ಆಹ 'ಜನ್ಮಾಂತರೇ' ಇತಿ । 'ತು' ಶಬ್ದೋಽವಧಾರಣೇ । ನನು ಜನ್ಮಾಂತರಾನುಭೂತಂ ಕಥಂ ಪ್ರತಿಭಾಯಾತ್, ಅಸ್ಮಾಸ್ವದರ್ಶನಾತ್? ಇತ್ಯತ ಉಕ್ತಮ್ 'ವಾಸುದೇವ...' ಇತಿ । ತರ್ಹಿ 'ಅಮುನೇನೈವೋದ್ಗೀರ್ಯಂತೇ' ಇತಿ ಕಥಮುಕ್ತಮ್? ಇತ್ಯತ ಉಕ್ತಂ 'ಭಾಗೇನೈವ' ಇತಿ । ತಥಾಽಪಿ 'ಶ್ರುತಾ ಏವಾಖಿಲೈಃ' ಇತ್ಯಯುಕ್ತಮ್ । ಪರಮೇಶ್ವರೇಣೋಪಾಧ್ಯಾಯಾದನಧೀತತ್ವಾದ್? ಇತ್ಯತಃ ಸೋಪಪತ್ತಿಕ-ಮುಕ್ತಸ್ಯಾಪವಾದಮಾಹ 'ಯತ' ಇತಿ । ಕೃತತ್ವವ್ಯಾವೃತ್ತಿರೇವಾವಧಾರಣ-ಪ್ರಯೋಜನಮಿತಿ ಭಾವಃ । ದೃಷ್ಟಿಶಬ್ದವಾಚ್ಯತ್ವಮಪ್ಯಪೌರುಷೇಯತ್ವೇ ಯುಕ್ತಿರಿತ್ಯನೇನ ಸೂಚಿತಮ್ । ತಚ್ಚ ವಿವರಿಷ್ಯತೇ ।

ಏತೇನೈತದಪಿ ಪ್ರತ್ಯುಕ್ತಮ್- 'ಕಾಠಕಂ' 'ಕಾಲಾಪಕಂ' ಇತ್ಯಾದಯಃ ಸಮಾಖ್ಯಾವಿಶೇಷಾಃ ಶಾಖಾವಿಶೇಷಾಣಾಂ ಸ್ಮರ್ಯನ್ತೇ । ನ ಚ ತೇಽಧ್ಯಯನಪ್ರವಚನಮಾತ್ರನಿಬಂಧನಾಃ, ಅಧ್ಯೇತೄಣಾಂ ಪ್ರವಕ್ತೄಣಾಂ ಚಾನನ್ತತ್ವಾತ್, ಅತಸ್ತತ್‌ಕೃತತ್ವನಿಬನ್ಧನಾ ಏವೇತಿ । ತಜ್ಜನ್ಮನ್ಯಶ್ರುತಾನಾಂ ಸುಪ್ತೇಃ ಪ್ರಬುದ್ಧೈರಿವ ಕಠಾದಿಭಿರ್ದೃಷ್ಟತ್ವಸ್ಯ ತನ್ನಿಬಂಧನತ್ವೋಪಪತ್ತೇಃ ।

ಸರಿ, ಮುನಿಗಳು (ಈ ಪೂರ್ವದಲ್ಲಿ) ಅಭ್ಯಸಿಸದೆ ಇರುವದನ್ನೂ (ಕೆಲವು ವೇದಭಾಗವನ್ನೂ) ಹೇಳುತ್ತಾರೆ. ಆದುದರಿಂದ 'ಅಖಿಲೈಃ ಶ್ರುತಾ ಏವ' ಎನ್ನುವುದು ಹೇಗೆ ಯುಕ್ತವಾದೀತು ? ಆದುದರಿಂದ ಉತ್ತರಿಸುತ್ತಾರೆ 'ಜನ್ಮಾಂತರೇ' ಎಂದು[1]. 'ತು' ಶಬ್ದವು ನಿಶ್ಚಯ ಎಂಬುವ ಅರ್ಥದಲ್ಲಿ.

---

1. 'ಸಮಗ್ರ ವೇದಗಳೂ ಎಲ್ಲರಿಂದಲೂ ಶ್ರುತವೇ ಆಗಿದೆಯೇ ಹೊರತು, ಯಾರೂ ನಿರ್ಮಿಸಿದ್ದಲ್ಲ' ಎನ್ನುವುದು ಸರಿಯಾಗಲಾರದು. ಗುರುಮುಖೇನ ಅಧ್ಯಯನವನ್ನು ಮಾಡದೆ ಕೆಲವು ವೇದಮಂತ್ರಗಳನ್ನು ಋಷಿಗಳು ಸ್ವತಃಸಾಕ್ಷಾತ್ಕರಿಸಿಕೊಳ್ಳುವರು' ಎಂದು ಪುರಾಣಗಳು ತಿಳಿಸಿವೆಯಲ್ಲವೆ ? ಹಾಗಾದಲ್ಲಿ ಎಲ್ಲ ವೇದಭಾಗಗಳು 'ಶ್ರುತವೇ' ಎನ್ನುವುದು ಸರಿಯಾಗಲಾರದು ಎಂದು ಪ್ರಶ್ನೆಯ ಭಾವ.

ಸರಿ,ಜನ್ಮಾಂತರದಲ್ಲಿ ಅನುಭೂತವಾದದ್ದು (ಶ್ರುತವಾದದ್ದು ಈ ಜನ್ಮದಲ್ಲಿ) ಹೇಗೆ ಪ್ರತಿಭಾತವಾದೀತು ? ನಮ್ಮಲ್ಲಿ (ಈ ರೀತಿಯ ಅನುಭವವು) ಕಾಣದಿರುವುದರಿಂದ, ಆದುದರಿಂದ ಉತ್ತರಿಸುತ್ತಾರೆ. '**ವಾಸುದೇವ...**' ಎಂದು. ಹಾಗಾದಲ್ಲಿ '**ಅಮುನೈವೋದ್ಗೀರ್ಯಂತೇ**' ಎನ್ನುವುದು ಹೇಗೆ (ಸಮಂಜಸವಾದೀತು) ? ಆದುದರಿಂದ ಉತ್ತರಿಸುತ್ತಾರೆ. '**ಭಾಗೇನೈವ**' ಎಂದು[1]. ಹಾಗಾದರೂ ಸಹ '**ಶ್ರುತಾ ಏವಾಖಿಲೈಃ**' ಎಂದು ಹೇಳಿದ್ದು ಅಯುಕ್ತವಲ್ಲವೇ ? ಈಶ್ವರನು ಉಪಾಧ್ಯಾಯರ ಮುಖಾಂತರ ಅಧ್ಯಯನ ಮಾಡಿರುವುದಿಲ್ಲ ಆದುದರಿಂದ. ಸಕಾರಣಕವಾಗಿ ಹಿಂದೆ ತಿಳಿಸಿದ ಕ್ರಮಕ್ಕೆ ಅಪವಾದವನ್ನು ಹೇಳುತ್ತಾರೆ. '**ಯತಃ**' ಎಂಬುದಾಗಿ. ('ಶ್ರುತಾ ಏವ' ಎನ್ನುವಲ್ಲಿನ) ಅವಧಾರಣವು (ವೇದಗಳು) 'ರಚಿತವಾದುದಲ್ಲ' ಎಂಬ ವ್ಯಾವೃತ್ತಿಯನ್ನು ತಿಳಿಸುತ್ತದೆ ಎಂದು ಭಾವ[2]. 'ದೃಷ್ಟಿ' ಎಂಬ ಶಬ್ದದಿಂದ (ವೇದಗಳು) ವಾಚ್ಯವಾಗಿವೆ ಎನ್ನುವುದೂ ಸಹ ಅಪೌರುಷೇಯತ್ವ ವಿಷಯದಲ್ಲಿ ಯುಕ್ತಿಯು ಎಂದು ಇದರಿಂದ ಸೂಚಿಸಿದೆ[3]. ಇದನ್ನು ಮುಂದೆ ವಿವರಿಸಲಿದ್ದಾರೆ.

---

1. ಈ ಹಿಂದೇ 'ಸಮಗ್ರವೇದವನ್ನು ಭಗವಂತನೇ ಕಲ್ಪಾದಿಯಲ್ಲಿ ಉಚ್ಚರಿಸುವನು' ಎಂದು ತಿಳಿಸಲಾಗಿತ್ತು , ಆದರೆ ಈಗ 'ಮುನಿಗಳೇ ತಮ್ಮ ಯೋಗಶಕ್ತಿಯಿಂದ ಕೆಲವು ವೇದಭಾಗವನ್ನು ಸಾಕ್ಷಾತ್ಕರಿಸುಕೊಳ್ಳುವರು' ಎಂದು ತಿಳಿಸುತ್ತಿರುವುದು ಪೂರ್ವೋತ್ತರ ವಿರುದ್ಧವಾದ ಮಾತಾಗುವದಿಲ್ಲವೋ? ಎಂಬ ಸಂದೇಹವನ್ನು ಉತ್ತರಿಸಿದಂತಾಯಿತು- ಸಮಗ್ರವೇದವನ್ನು ಭಗವಂತನೇ ಉಚ್ಚರಿಸಿದರೂ ಈ ಮುನಿಗಳು ಭಗವಂತನ ಅನುಗ್ರಹದಿಂದ, ಭಗವಂತನು ಬ್ರಹ್ಮಾದಿಗಳಿಗೆ ಈ ಮೊದಲು ಉಪದೇಶಿಸಿದ ವೇದಗಳಲ್ಲಿ ಕೆಲವು ಭಾಗವನ್ನು ಮಾತ್ರ, ತಮ್ಮ ಗುರುಗಳಿಂದ ಉಪದೇಶವಿಲ್ಲದೇ ಕಾಣುವವರು ಎಂದು ಭಾವ.

2. 'ಶ್ರುತಾ ಏವ' ಎನ್ನುವಲ್ಲಿನ ಅವಧಾರಣೆಯು ಎಲ್ಲ ವೇದಗಳು ಕೇವಲ ಶ್ರುತವಾದದ್ದು ಎಂದರೆ ಯಾರಿಂದಲೂ ರಚಿತವಾದದ್ದಲ್ಲ ಎಂದು ಕೃತ್ಯರ್ತ್ವವನ್ನು ನಿಷೇಧಿಸುತ್ತದೆ ಹೊರತು, ಭಗವಂತನಿಂದಲೂ ಉಪದೇಶದಿಂದಲೇ ಶ್ರುತವಾದದ್ದು ಎಂಬ ಭಾವವಲ್ಲ ಎಂದು ಭಾವ.

3. 'ಹರಿಣಾ ದೃಷ್ಟಾಃ' - ಭಗವಂತನಿಂದ ವೇದಗಳು ಸಾಕ್ಷಾತ್ಕೃತವಾದದ್ದು ಎಂದಿದೆ. 'ಅಸಾಧಾರಣ್ಯೇ....' ಎಂಬ ನ್ಯಾಯದಂತೆ 'ಹರಿಯಿಂದ ವೇದಗಳು ಕೇವಲ ದೃಷ್ಟವಾಗಿವೆ ಹೊರತು ಪುರಾಣಾದಿಗಳಿಂತೆ ಕೃತವಾದವುಗಳಲ್ಲ 'ಎಂಬ ಯುಕ್ತಿಯನ್ನು ಇದರಿಂದ ಸೂಚಿಸಿದಂತಾಯಿತು ಎಂದು ಭಾವ.

ಈ ರೀತಿಯಾಗಿ ( 'ಜನ್ಮಾಂತರದಲ್ಲಿ ಶ್ರುತವಾದ ವೇದಭಾಗವನ್ನು ಮುನಿಗಳು ಹರಿಯ ಪ್ರಸಾದದಿಂದ ಮತ್ತೊಂದು ಜನ್ಮದಲ್ಲಿ ಕಾಣುವರು' ಎಂದು)ಹೇಳಿದ್ದರಿಂದ ಇದೂ (ಈ ಮುಂದಿನ ಸಂದೇಹವೂ) ನಿರಾಕೃತವಾಯಿತು. 'ಕಾಠಕ' 'ಕಾಲಾಪಕ' ಇತ್ಯಾದಿ ಅನೇಕ ಕಥಾ ವಿಶೇಷಗಳು, ಶಾಖಾ ವಿಶೇಷಗಳು ಉಪಲಬ್ಧವಿದೆ. ಅವುಗಳಾದರೋ ಕೇವಲ ಅಧ್ಯಯನ ಪ್ರವಚನಗಳಿಂದ ಮಾತ್ರ ನಿಬದ್ಧವಾದವುಗಳಲ್ಲ, (ಆ ಕಾಠಕಾದಿ ವೇದಭಾಗಗಳ) ಅಧ್ಯೇತೃಗಳು, ಪ್ರವಕ್ತೃಗಳು ಅನೇಕರು ಇರುವುದರಿಂದ, ಆದುದರಿಂದ ಅವರುಗಳೇ ಅದರ ಕರ್ತೃಗಳು ಎನ್ನುವುದೇ (ಯೋಗ್ಯ) ಎನ್ನುವುದು ತರವಲ್ಲ[1]. ಆ ಜನ್ಮದಲ್ಲಿ ಅಶ್ರುತವಾದ (ಮಂತ್ರವಿಶೇಷಗಳನ್ನು) ನಿದ್ದೆಯಿಂದ ಎಚ್ಚೆತ್ತವರಂತೆ (ಕಠಾದಿಮುನಿಗಳು ಈ ಜನ್ಮದಲ್ಲಿ) ಕಂಡಿದ್ದರಿಂದ (ಆ ಮಂತ್ರವಿಶೇಷಗಳಿಗೆ) 'ಕಾಠಕಾದಿ ಮುನಿದ್ರಷ್ಟೃತ್ವವು' ಈ ಕಾರಣದಿಂದ ಎನ್ನುವುದು ಯುಕ್ತವಾಗುವುದು[2].

---

1. ಉಪನಿಷತ್ ಒಂದು 'ಕಾಠಕೋಪನಿಷತ್' ಎಂದು ಪ್ರಸಿದ್ಧವಾಗಿದೆ. ಈ ಉಪನಿಷತ್ತು ಈ ಹೆಸರಿನಿಂದ ಖ್ಯಾತವಾಗಲು ಕೇವಲ 'ಅವರು ಅವರ ಶಿಷ್ಯರಿಗೆ ಉಪದೇಶಿಸಿದರು' ಎನ್ನುವುದು ಕಾರಣವಾಗಲಾರದು.ಅನೆಕರು ತಮ್ಮ ಶಿಷ್ಯರಿಗೆ ಈ ಉಪನಿಷತ್ತನ್ನು ಉಪದೇಶಿಸಿರುವರು. ಆ ಎಲ್ಲರ ಹೆಸರಿನಿಂದಲೂ ಖ್ಯಾತವಾಗಬೇಕಿತ್ತು , ಆದರೆ ಹಾಗಾಗಿಲ್ಲ. ಹಾಗಾಗಿ ಕಠರೇ ಅದನ್ನು ನಿರ್ಮಿಸಿರುವವರು ಎಂದು ಒಪ್ಪುವುದೇ ತರವಲ್ಲವೇ ಎಂದು ಪ್ರಶ್ನೆಯ ಭಾವ.

2. ಕಠಾದಿ ಮಹರ್ಷಿಗಳು ತಮ್ಮ ಗುರುಗಳಿಂದ ಉಪದೇಶವನ್ನು ಹೊಂದದೇ ಸ್ವತಃ ಅವರೇ ಆ ಮಂತ್ರವಿಶೇಷಗಳನ್ನು ಹರಿಯ ಅನುಗ್ರಹದಿಂದ ಸಾಕ್ಷಾತ್ಕರಿಸಿಕೊಂಡು, ಇದಂ ಪ್ರಥಮತಃ ತಮ್ಮ ಶಿಷ್ಯರಿಗೆ ಉಪದೇಶಿಸಿದರು. ಅವರಿಂದಲೆ ಆ ಮಂತ್ರಗಳು ದೇವತೇತರವಾದ ಈ ಪ್ರಪಂಚಕ್ಕೆ ಪ್ರಾಪ್ತವಾದವು. ತನ್ನಿಮಿತ್ತವಾಗಿಯೇ ಆ ಮಂತ್ರವಿಶೇಷಗಳಿಗೆ 'ಕಾಠಕಶ್ರುತಿ' ಇತ್ಯಾದಿಯಾಗಿ ನಾಮಗಳಿವೆ . ಇದು ಹೇಗೆ ಇತ್ಯಾದಿ ಪ್ರಶ್ನೆಗಳಿಗೆ ಇಲ್ಲಿ ಉತ್ತರಿಸಲಾಗಿದೆ. ಮಲಗಿದವ ಎಚ್ಚರಗೊಂಡವನು ಹೇಗೆ ತನ್ನ ಹಿಂದಿನ ಎಲ್ಲ ವ್ಯವಹಾರಗಳನ್ನು ನಿರ್ವಹಿಸುತ್ತಾನೋ ಹಾಗೆ ಈ ಕಠಾದಿ ಮುನಿಗಳು ಈ ಜನ್ಮದಲ್ಲಿ ಶ್ರವಣಮಾಡದ ಅನೇಕ ಮಂತ್ರಗಳನ್ನು , ಹಿಂದಿನ ಜನ್ಮದಲ್ಲಿ ಅಭ್ಯಸಿಸಿದ ಮಂತ್ರಗಳನ್ನು ತಮ್ಮ ಶಿಷ್ಯ ಪರಂಪರೆಗೆ ಉಪದೇಶಿಸಿದರು. ಆ ಮೊದಲು ಆ ಮಂತ್ರಗಳು ಮನುಷ್ಯಪ್ರಪಂಚದಲ್ಲಿ ಪ್ರಚಲಿತವಿರಲಿಲ್ಲ. ಈ ಎಲ್ಲ ನಿಮಿತ್ತವಾಗಿ ಈ ಮಂತ್ರಗಳಿಗೆ ಕಾಠಕ ಇತ್ಯಾದಿ ಹೆಸರು ಪ್ರಾಪ್ತವಾಗಿದೆ. ಆದುದರಿಂದ ಯಾವುದೇ ವಿಧವಾದ ವಿರೋಧವಿಲ್ಲ ಎಂದು ಭಾವ.

**ವೇದಗಳಲ್ಲಿನ ಉತ್ಪತ್ತಿವಚನಗಳು ಅನ್ಯಾರ್ಥಕ**

**ತದುತ್ಪತ್ತಿವಚಶ್ಚೈವ ಭವೇದ್ವ್ಯಕ್ತಿಮಪೇಕ್ಷ್ಯ ತು ।**
**ಚೇತನಸ್ಯ ಜನಿರ್ಯದ್ವತ್ ಉಚ್ಯತೇ ಸರ್ವಲೌಕಿಕೈಃ ॥**

**ಪುರಾಣಾನಿ ತದರ್ಥಾನಿ ಸರ್ಗೇಸರ್ಗೇಽನ್ಯಥೈವ ತು ।**
**ಕ್ರಿಯನ್ತೇಽತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್ ॥**

**ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುಃ ವ್ಯಕ್ತಪೇಕ್ಷಯಾ ।**
**ಅವಾನ್ತರಾಭಿಮಾನಾನಾಂ ದೇವಾನಾಂ ವಾ ವ್ಯಪೇಕ್ಷಯಾ ।**
**ನಾನಿತ್ಯತ್ವಾತ್ ಕುತಸ್ತೇಷಾಮನಿತ್ಯತ್ವಂ ಸ್ಥಿರಾತ್ಮನಾಮ್? ॥**

**ಇತಿ ಬ್ರಹ್ಮಾಂಡೇ ।**

('ಋಚಃ ಸಾಮಾನಿ ಜಜ್ಞಿರೇ' ಈ ಮುಂತಾದ, ವೇದದ) ಉತ್ಪತ್ತಿ (ಬೋಧಕ) ವಾಕ್ಯಗಳು ಅಭಿವ್ಯಕ್ತಿಯ ವಿವಕ್ಷೆಯಿಂದ (ತಿಳಿಸಲಾಗಿದೆ). ಹೇಗೆ ಲೌಕಿಕವ್ಯವಹಾರದಲ್ಲಿ 'ಚೇತನನಿಗೆ ಹುಟ್ಟು' ಎನ್ನುವರೋ ಹಾಗೆ. ಪುರಾಣಗಳು ಮತ್ತು ಅದರ ಪದಗಳು ಪ್ರತಿ ಸೃಷ್ಟಿಯಲ್ಲಿ ಬೇರೇ ವಿಧದಲ್ಲಿಯೇ ನಿರ್ಮಾಣಗೊಳ್ಳುವವು, ಆದುದರಿಂದ ಅನಿತ್ಯಗಳು. ಆದರೆ ಅದರ ವಿಷಯಗಳು ಹಿಂದಿನಂತೆ (ಇರುವವು). ವೇದಗಳ ಸೃಷ್ಟಿಕಥನವಾಕ್ಯಗಳು ಅಭಿವ್ಯಕ್ತಿಯನ್ನು ವಿವಕ್ಷಿಸಿ (ಇವೆ). ಅಥವಾ (ವೇದಗಳ) ಅವಾಂತರಾಭಿಮಾನಿ ದೇವತೆಗಳ ಅಭಿವ್ಯಕ್ತಿಯನ್ನು ವಿವಕ್ಷಿಸಿ (ತಿಳಿಸಲಾಗಿದೆ) ಹೊರತು ಅನಿತ್ಯತ್ವದ ಕಾರಣದಿಂದಲ್ಲ. ಸ್ಥಿರಗಳಾದ ಅವುಗಳಿಗೆ ಅನಿತ್ಯತ್ವವು ಹೇಗೆ ? ಎಂದು ಬ್ರಹ್ಮಾಂಡಪುರಾಣದಲ್ಲಿ (ತಿಳಿಸಲಾಗಿದೆ).

**'ಋಚಃ ಸಾಮಾನಿ ಜಜ್ಞಿರೇ'** (ಋಗ್ವೇ.10.90.9.) **ಇತ್ಯಾದ್ಯುತ್ಪತ್ತಿಶ್ರವಣಾತ್ ಕಥಂ ವೇದಾನಾಮಪೌರುಷೇಯತ್ವಮ್ ಉಚ್ಯತೇ? ಇತ್ಯತ ಆಹ 'ತದುತ್ಪತ್ತಿ ...' ಇತಿ । ವ್ಯಕ್ತಿಮಪೇಕ್ಷ್ಯೈವೇತಿ ಸಮ್ಬನ್ಧಃ । ತುಶಬ್ದೋ ವಿಶೇಷಣಾರ್ಥಃ 'ಆದಿಕಾಲೀನಾಂ ವ್ಯಕ್ತಿಮ್' ಇತಿ । ತೇನ 'ಪ್ರತ್ಯಹಮಪಿ ಉಪಾಧ್ಯಾಯೈರ್ವ್ಯಜ್ಯಮಾನತಾದುತ್ಪತ್ತಿವ್ಯವಹಾರಪ್ರಸಙ್ಗಃ' ಇತಿ ನಿರಸ್ತಮ್।**

ಉಪಚಾರಪ್ರಯೋಗೇ ಕಿಂ ಪ್ರಯೋಜನಮ್? ಇತ್ಯತೋ ರೂಢೋಪಚಾರಃ ಅಯಮಿತ್ಯಾಹ **'ಚೇತನಸ್ಯ'** ಇತಿ । 'ವ್ಯಕ್ತಿಮಪೇಕ್ಷ್ಯ' ಇತ್ಯನುವರ್ತತೇ ।

ವಿಷ್ಣುಬುದ್ಧಿಗತ್ವಯುಕ್ತ್ಯಾ ಯದಿ ವೇದಾನಾಂ ನಿತ್ಯತ್ವಮುಚ್ಯತೇ ತರ್ಹಿ ಪುರಾಣಾದೀನಾಮಪಿ ತತ್ ಸಾಮ್ಯಾತ್ ನಿತ್ಯತ್ವಂ ಸ್ಯಾತ್ । ತತಶ್ಚ 'ಶ್ರುತಿರ್ವಾವ ನಿತ್ಯಾ' ಇತ್ಯಾದಿವಿಭಾಗೋ ನೋಪಪದ್ಯತೇ? ಇತ್ಯತ ಆಹ **'ಪುರಾಣಾನಿ'** ಇತಿ । ಪೌರುಷೇಯತ್ವನಿಮಿತ್ತ ಏವಾನಿತ್ಯತ್ವವ್ಯಪದೇಶೋ ನತು ವಿನಾಶನಿಮಿತ್ತ ಇತ್ಯರ್ಥಃ । ಅತ ಏವ **'ತ್ವನಿತ್ಯಾನಿ'** ಇತಿ ಸಂಬಂಧಃ । 'ಅನ್ಯಥಾಽಪಿ ಕ್ರಿಯನ್ತೇ' ಇತ್ಯನೇನಾರ್ಥವ್ಯತ್ಯಾಸೇಽಪಿ ಪ್ರಾಪ್ತೇ ಸತಿ? ಆಹ **'ತದರ್ಥಾಃ'** ಇತಿ । ತತಶ್ಚ 'ಪದಾದಿಕ್ರಮವ್ಯತ್ಯಾಸಏವ' ಇತ್ಯುಕ್ತಂ ಭವತಿ । ಏತಚ್ಚ ವೇದಾನುಸಾರಿಣಾಮೇವ । ಅನ್ಯೇಷಾಂ ತ್ವರ್ಥವ್ಯತ್ಯಾಸಸ್ಯಾಪಿ ಸದ್ಭಾವಾತ್ । ಉತ್ಪ್ರೇಕ್ಷಾದಿಮೂಲೋ ಹಿ ತದರ್ಥ ಇತಿ ಭಾವೇನೋಕ್ತಮ್ **'ತದರ್ಥಾನಿ'** ಇತಿ । ಸ ವೇದಾರ್ಥ ಏವಾರ್ಥೋ ವಿಷಯಃ ಪ್ರಯೋಜನಂ ಚ ಯೇಷಾಂ ತಾನಿ ತಥೋಕ್ತಾನಿ ।

'ಋಚಃ ಸಾಮಾನಿ ಜಜ್ಞಿರೇ' (ಋಗ್ವೇದದಿಂದ ಸಾಮವೇದಗಳು ಉತ್ಪನ್ನವಾದವು) ಎಂದು (ವೇದಗಳಲ್ಲೇ ವೇದಗಳ) ಉತ್ಪತ್ತಿಯು ಶ್ರುತವಾದುದರಿಂದ ವೇದಗಳ ಅಪೌರುಷೇಯತ್ವವನ್ನು ಹೇಗೆ ಹೇಳಲಾಗುವುದು ? ಆದುದರಿಂದ ಉತ್ತರಿಸುತ್ತಾರೆ **'ತದುತ್ಪತ್ತಿವಚಃ'** ಎಂದು. **'ವ್ಯಕ್ತಿಮಪೇಕ್ಷ್ಯೈವ'** ಎನ್ನುವಲ್ಲಿ ಅನ್ವಯಿಸುವುದು[1]. **'ತು'** ಶಬ್ದವು 'ವಿಶೇಷವಾದ' ಎಂಬ ಅರ್ಥದಲ್ಲಿದೆ. ಅನಾದಿಕಾಲದಲ್ಲಿ ನ ಅಭಿವ್ಯಕ್ತಿಯನ್ನು ಎಂದು[2]. ಇದರಿಂದ 'ಪ್ರತಿದಿನವೂ ಸಹ ಉಪಾಧ್ಯಾಯರ ಉಚ್ಚಾರಣೆಯಿಂದ

1. ವೇದಗಳ ವ್ಯಕ್ತಿ ಎಂದರೆ 'ಬ್ರಹ್ಮಾದಿಗಳಿಗೆ ನಾರಾಯಣಾದಿಗಳಿಂದ ಉಪದೇಶಾದಿಗಳು' ಎಂದು ತಿಳಿಯುವುದು. ಈ ಅಭಿವ್ಯಕ್ತಿಯನ್ನೇ 'ಉತ್ಪತ್ತಿ' ಎಂದು ಉಪಚಾರದಿಂದ ಕರೆಯುತ್ತಾರೆ. 'ಸೂರ್ಯ ಹುಟ್ಟಿದ' ಎಂದು ಹೇಳಿದಂತೆ ಎಂದು ಭಾವ.

2. 'ವ್ಯಕ್ತಿಮಪೇಕ್ಷ್ಯ ತು' ಎಂಬಲ್ಲಿರುವ 'ತು' ಶಬ್ದವು ತಿಳಿಸಿದ 'ವಿಶೇಷವಾದದ್ದು'ಎಂಬ ಅರ್ಥವು, ನಮ್ಮ ನಿಮ್ಮ ಉಚ್ಚಾರಣೆಯಿಂದ ಅಭಿವ್ಯಕ್ತವಾದದ್ದನ್ನು ಬೋಧಿಸುತ್ತಿಲ್ಲ, ಕಲ್ಪದ ಆದಿಕಾಲದಲ್ಲಿ ವಿಷ್ಣುವಿನ ಮುಖದಿಂದ ಅಭಿವ್ಯಕ್ತಿಯಾದುದನ್ನು ವಿವಕ್ಷಿಸಿ ಈ ಉತ್ಪತ್ತಿಯನ್ನು ತಿಳಿಸಲಾಗಿದೆ ಎಂದು ಭಾವ.

(ವೇದವು) ಉತ್ಪನ್ನವಾಯಿತು ಎಂಬುವ ವ್ಯವಹಾರವು ಬರಲಿ' ಎನ್ನುವ ಅತಿಪ್ರಸಂಗಕ್ಕೆ ಉತ್ತರಿಸಿದಂತಾಯಿತು[1]. ಔಪಚಾರಿಕ ಪ್ರಯೋಗಕ್ಕೆ ಏನು ಪ್ರಯೋಜನ ? ಎಂದಲ್ಲಿ ರೂಢೋಪಚಾರವಿದು ಎಂದು ಉತ್ತರಿಸುತ್ತಾರೆ. 'ಚೇತನಸ್ಯ' ಎಂದು. 'ವ್ಯಕ್ತಿ ಮಪೇಕ್ಷ್ಯ' ಎನ್ನುವದನ್ನು ಇಲ್ಲಿಯೂ ಅನುವರ್ತಿಸಿಕೊಳ್ಳಲಾಗಿದೆ[2].

'ವಿಷ್ಣುವಿನ ಬುದ್ಧಿಯಲ್ಲಿ ಇದ್ದವು' ಎಂಬ ಯುಕ್ತಿಯಿಂದ ವೇದಗಳಿಗೆ ನಿತ್ಯತ್ವವನ್ನು ಹೇಳುವದಾದಲ್ಲಿ ಪುರಾಣಾದಿಗಳಿಗೂ ಅದು ಸಮಾನವಾದುದರಿಂದ ಅವೂ ಸಹ ನಿತ್ಯವಾಗಲಿ. ಆದುದರಿಂದ 'ಶ್ರುತಿರ್ವಾವ

---

1. ಈಶ್ವರನ ಉಚ್ಚಾರಣೆಯಿಂದ ಅಭಿವ್ಯಕ್ತವಾದುದ್ದನ್ನೇ 'ಉತ್ಪತ್ತಿ' ಎಂದು ಔಪಚಾರಿಕವಾಗಿ ವ್ಯವಹರಿಸುತ್ತಾರೆ ಎನ್ನುವ ವಿಚಾರದಲ್ಲಿ ಒಂದು ಪ್ರತಿಬಂದಿಯನ್ನು ಹೇಳಬಹುದು. ನಮ್ಮ ನಿಮ್ಮ ಉಚ್ಚಾರಣೆಯಿಂದಲೂ ನಿತ್ಯವೂ ವೇದಗಳು ಅಭಿವ್ಯಕ್ತವಾಗುವವು. ಆಗಲೂ ಸಹ ವೇದಗಳು ಉತ್ಪನ್ನವಾಯಿತು. ಎಂದು ವ್ಯವಹರಿಸುವರೇ? ಇಲ್ಲ, ಅಭಿವ್ಯಕ್ತಿಯನ್ನೇ ಉತ್ಪತ್ತಿ ಎಂದು ವ್ಯವಹರಿಸುವದಾದಲ್ಲಿ ಇಲ್ಲಿಯೂ ಅಂತಹ ವ್ಯವಹಾರವು ಕಾಣಲಿ ಎನ್ನುವ ಅತಿಪ್ರಸಂಗಕ್ಕೆ ಉತ್ತರಿಸಿದರು. ಆದಿ ಕಾಲೀನ ಸೃಷ್ಟಿಯಲ್ಲಿ ವಿಷ್ಣುವಿನ ವದನದಿಂದ ಅಭಿವ್ಯಕ್ತವಾದುದನ್ನು ಮಾತ್ರ 'ಉತ್ಪತ್ತಿ' ಎಂದು ಔಪಚಾರಿಕವಾಗಿ ವ್ಯವಹರಿಸಲಾಗುವುದೇ ಹೊರತು ಎಲ್ಲರ ವದನದಿಂದ ಒದಗುವ ಅಭಿವ್ಯಕ್ತಿಯನ್ನಲ್ಲ. ಇದನ್ನು ವಿಶೇಷಾರ್ಥಕವಾದ 'ತು' ಎನ್ನುವ ಶಬ್ದವು ತಿಳಿಸುತ್ತದೆ ಎಂದು ಭಾವ.

2. 'ಋಚಃ ಸಾಮಾನಿ ಜಜ್ಞಿರೇ' ಎಂದಿದೆ ಋಗ್‌ವೇದವು. ಇಲ್ಲಿನ 'ಜಜ್ಞಿರೇ' ಎನ್ನುವ ಶಬ್ದಕ್ಕೆ ಮುಖ್ಯಾರ್ಥವಾದ 'ಹುಟ್ಟಿದವು' ಎನ್ನುವುದನ್ನು ಬಿಟ್ಟು, ಅಮುಖ್ಯಾರ್ಥವಾದ 'ಅಭಿವ್ಯಕ್ತಿ' ಎಂಬ ಅರ್ಥವನ್ನು ಪರಿಗ್ರಹಿಸಲು ಏನು ಕಾರಣ? ಯಾವಾಗಲೂ ಔಪಚಾರಿಕ ಪ್ರಯೋಗದಲ್ಲಿ ಏನಾದರೂ ಪ್ರಯೋಜನ ವಿರಬೇಕು ಎನ್ನುವುದು ಶಾಸ್ತ್ರದ ನಿಯಮ. ಪ್ರಕೃತ ಅಂತಹ ಯಾವ ಪ್ರಯೋಜನವೂ ಇಲ್ಲತಾನೇ ? ಎಂದು ಪ್ರಶ್ನಿಸಿದಲ್ಲಿ ಉತ್ತರಿಸುತ್ತಾರೆ. ಇದು ರೂಢೋಪಚಾರ ಎಂದು. ರೂಢೋಪಚಾರದಲ್ಲಿ ಪ್ರಯೋಜನವಿರುವುದಿಲ್ಲ. ಸೂರ್ಯನು ಹುಟ್ಟಿದನು, ಈತನು ಕುಶಲ ಇತ್ಯಾದಿ ಪ್ರಯೋಗಗಳು ವ್ಯವಹಾರದಲ್ಲಿವೆ. ಇವುಗಳನ್ನು ರೂಢೋಪಚಾರಕ್ಕೆ ಉದಾಹರಣೆಯನ್ನಾಗಿ ಶಾಸ್ತ್ರದಲ್ಲಿ ತಿಳಿಸಿರುತ್ತಾರೆ. ಇಂತಹ ಸ್ಥಳದಲ್ಲಿ ಪ್ರಯೋಜನದ ಅವಶ್ಯಕತೆ ಇಲ್ಲ. ಪ್ರಕೃತದಲ್ಲೂ ಹಾಗೆ ಎಂದು ತಿಳಿಯುವುದು ಎಂದು ಭಾವ.

ನಿತ್ಯಾ' ಈ ಮುಂತಾದ ವಿಭಾಗವು ಸರಿ ಹೊಂದಲಾರದು[1]? ಎಂದಲ್ಲಿ ಉತ್ತರಿಸುತ್ತಾರೆ. '**ಪುರಾಣಾನಿ**' ಎಂದು . ಪುರುಷನಿರ್ಮಿತವಾದದು ಎಂಬ ಕಾರಣದಿಂದಲೇ (ಪುರಾಣಗಳನ್ನು) ಅನಿತ್ಯವೆಂದು ಹೇಳಲಾಗಿದೆಯೇ ಹೊರತು, ವಿನಾಶವಾದುದರಿಂದ ಎಂದಲ್ಲ. '**ಅತ ಏವ ತ್ವನಿತ್ಯಾನಿ**' ಎಂದು ಅನ್ವಯಿಸುವುದು[2]. '**ಅನ್ಯಥಾऽಪಿ ಕ್ರಿಯಂತೇ**' ಎನ್ನುವುದರಿಂದ 'ಅರ್ಥವ್ಯತ್ಯಾಸವೂ' ಗೃಹೀತವಾಗುತ್ತದೆ? (ಆದುದರಿಂದ) ಉತ್ತರಿಸುತ್ತಾರೆ '**ತದರ್ಥಾಃ**' ಎಂದು. ಆದುದರಿಂದ ('ತದರ್ಥಾಃ ಪೂರ್ವಸರ್ಗವತ್' ಎಂದು ಹೇಳಿದ್ದರಿಂದ.) ಪದಾದಿಗಳ ಕ್ರಮಗಳಲ್ಲಿ ಮಾತ್ರ ವ್ಯತ್ಯಾಸ ಎಂದು ತಿಳಿಸಿದಂತಾಯಿತು. ಇದಾದರೋ (ಅದರಲ್ಲಿನ ವಿಷಯಗಳಾದರೋ) ವೇದವನ್ನು ಅನುಸರಿಸಿಯೇ (ಇರುತ್ತವೆ). ಬೇರೇ ವಾಕ್ಯಗಳಾದರೋ (ತಾಮಸಪುರಾಣಾದಿ ವಾಕ್ಯಗಳಾದರೋ) ಅರ್ಥದಿಂದಲೂ ವ್ಯತ್ಯಾಸವನ್ನು ಹೊಂದಿರುತ್ತವೆ. 'ಅವುಗಳ ವಿಷಯವು ಉಪತ್ರೇಕ್ಷಾ ಮುಂತಾದವು (ವಿಪ್ರಲಂಭಕತಾದಿಗಳು) ಮೂಲವಾದುದರಿಂದ' ಎಂಬ ಭಾವದಿಂದ (ಹೀಗೆ)

1. ವೇದವು ಗುರು ಪರಂಪರೆಯಿಂದ ಪ್ರಾಪ್ತವಾಯಿತು. ಯಾರೂ ರಚಿಸಿದ್ದಲ್ಲ. ಆದಿ ಸೃಷ್ಟಿಯಲ್ಲೂ ಸಹ ಈಶ್ವರನ ಬುದ್ಧಿಯಲ್ಲಿದ್ದವು. ಈಶ್ವರನು ಬ್ರಹ್ಮಾದಿಗಳಿಗೆ ಹಿಂದಿನ ಕಲ್ಪದಲ್ಲಿದ್ದಂತೆ ಅರ್ಥವನ್ನೊಳಗೊಂಡಂತೆ, ಕ್ರಮವನ್ನೂ ಬದಲಿಸದೇ, ಅದೇ ಶಬ್ದಗಳನ್ನು ಉಪದೇಶಿಸಿದ ಎಂದು ವೇದಕ್ಕೆ ಅಪೌರುಷೇಯತ್ವವನ್ನು ಸಾಧಿಸುವದಾದ ಪಕ್ಷದಲ್ಲಿ ಪುರಾಣಗಳೂ ಸಹ ಈಶ್ವರನ ಬುದ್ಧಿಯಲ್ಲಿರುವವು. ಅವುಗಳ ಅರ್ಥ, ಕ್ರಮ ಶಬ್ದಗಳನ್ನು ಬದಲಿಸದಂತೆ ಈಶ್ವರನು ಉಪದೇಶಿಸಬಹುದಲ್ಲವೆ, ಆತನು ಸರ್ವಜ್ಞನಲ್ಲವೆ? ಆಗ ವೇದಗಳು ಮಾತ್ರನಿತ್ಯ ಎನ್ನುವ ವಾದಕ್ಕೆ ಪುಷ್ಟಿಯಿಲ್ಲ ಎಂದು ಪ್ರಶ್ನೆಯಭಾವ.

2. 'ಸರ್ಗೇ, ಸರ್ಗೇ ಅನ್ಯಥೈವ ಪುರಾಣಾನಿ ಕ್ರಿಯಂತೇ, ಅತ ಏವ ಪುರಾಣಾನಿ ಅನಿತ್ಯಾನಿ' ಎಂದು ಮೂಲವನ್ನು ಅನ್ವಯಿಸಿಕೊಳ್ಳಬೇಕು ಎಂದು ಭಾವ.

3. ಮೂಲದಲ್ಲಿ 'ಅನ್ಯಥೈವ ಕ್ರಿಯನ್ತೇ' ಎಂದು ತಿಳಿಸಲಾಗಿದೆ. 'ಈಶ್ವರನು ವೇದಗಳನ್ನು ಹಿಂದಿನಂತೆ ಉಪದೇಶಿಸುವನು , ಆದರೆ ಪುರಾಣಾದಿಗಳನ್ನು ಬೇರೇ ರೀತಿಯಲ್ಲಿ ನಿರ್ಮಿಸುವನು' ಎಂದು. ಇಲ್ಲಿ ಪುರಾಣಾದಿಗಳನ್ನು ಅನ್ಯಥಾ ರಚಿಸುವನು ಎನ್ನುವದು ಪುರಾಣಾದಿಗಳಲ್ಲಿನ ವಿಷಯಾದಿಗಳನ್ನೂ ಬೇರೇ ರೀತಿಯಾಗಿ, ಅಂದರೆ ಅರ್ಥತಃ ವಿಭಿನ್ನವಾಗಿ ಉಪದೇಶಿಸುವನು ಎಂಬ ಅಭಿಪ್ರಾಯಕ್ಕೂ ಅವಕಾಶವಿದೆ. ಆದುದರಿಂದ ಪುರಾಣಗಳನ್ನು ಶಬ್ದದಿಂದ ಮಾತ್ರ ವ್ಯತ್ಯಾಸಗೊಳಿಸುವನೋ ಅಥವಾ ಅರ್ಥದಿಂದಲೂ ವ್ಯತ್ಯಾಸಗೊಳಿಸುವನೋ ಎನ್ನುವುದನ್ನು ಸ್ಪುಟೀಕರಿಸಿ ಎನ್ನುವುದು ಪೃಚ್ಛಕನ ಭಾವ.

ಹೇಳಲಾಗಿದೆ 'ತದರ್ಥಾನಿ' ಎಂದು. ಸ ವೇದಾರ್ಥ ಏವಾರ್ಥಃ – ವಿಷಯಃ ಪ್ರಯೋಜನಂ ಚ ಯೇಷಾಂ ತಾನಿ, ಆ ರೀತಿಯಾದವುಗಳು[1].

ಏತೇನ **'ಹರಿಶ್ಚಂದ್ರಜನಮೇಜಯಾದ್ಯನಿತ್ಯಸಂಬಂಧಾತ್ ಕಥಂ ವೇದಾನಾಮನಾದಿನಿತ್ಯತ್ವಮ್' ಇತ್ಯಪಿ ನಿರಸ್ತಮ್ । ಹರಿಶ್ಚಂದ್ರಾದೀನಾಮಪಿ ಪ್ರವಾಹೇಣಾನಾದಿನಿತ್ಯತ್ವಾತ್ । 'ಋಚಃ ಸಾಮಾನಿ' ಇತ್ಯಾದಿವಾಕ್ಯ-ವ್ಯಾಖ್ಯಾನನ್ತರಂ ಬ್ರಹ್ಮಾಂಡಪುರಾಣಾಂತರ್ಗತಮೇವ ಪ್ರದೇಶಾನ್ತರಸ್ಥಂ ವಾಕ್ಯಾನ್ತರಮಪಿ ಪಠತಿ 'ವೇದಾನಾಂ' ಇತಿ । ದೇವಾನಾಂ ಶರೀರಜನ್ಮಾಪೇಕ್ಷಯಾ ಇತ್ಯರ್ಥಃ । ಶರೀರಜನ್ಮ ಮುಖ್ಯಾಭಿಮಾನಿ-ದೇವತಾಯಾಃ ಶ್ರಿಯೋ ನಾಸ್ತಿ? ಇತ್ಯತ ಉಕ್ತಮ್ 'ಅವಾನ್ತರ....' ಇತಿ । ಅವಾನ್ತರಃ- ಅಮುಖ್ಯಃ, ಅಭಿಮಾನಿನಃ- ಸ್ವಾಮಿತ್ವಂ ಪರಮೇಶ್ವರಾಧೀನಂ ಯೇಷಾಂ ತೇ ತಥೋಕ್ತಾಃ । ಸ್ಥಿರಾತ್ಮನಾಂ- ಅನಾದಿನಿತ್ಯತ್ವೇನ ಪ್ರಮಿತಾನಾಮ್ ಇತ್ಯರ್ಥಃ । 'ಪೂರ್ವೋಕ್ತಾನುವಾದೇನ ಗತ್ಯನ್ತರಪ್ರದರ್ಶನಾರ್ಥಂ ನಿರನ್ತರಮೇವೈತದ್ವಾಕ್ಯಂ' ಇತಿ ಕೇಚಿತ್ ।**

ಇದರಿಂದ (ಈ ರೀತಿಯಾದ ಪ್ರಮಾಣವು ಇರುವುದರಿಂದ) ಹರಿಶ್ಚಂದ್ರ, ಜನಮೇಜಯ ಮುಂತಾದ ಅನಿತ್ಯರಾದ (ವ್ಯಕ್ತಿಗಳ) ಸಂಬಂಧವಿರುವುದರಿಂದ

1. ಮೂಲದ ವಾಕ್ಯವನ್ನು ಪರಿಶೀಲಿಸಿದಾಗ ಝಟಿತಿ ಪ್ರತಿಭಾಸಮಾನವಾಗುವ ಅರ್ಥವು- 'ಪುರಾಣಗಳು ಮತ್ತು ಅದರ ಅರ್ಥಗಳು ಪ್ರತಿ ಸೃಷ್ಟಿಯಲ್ಲೂ ವ್ಯತ್ಯಯಗೊಳ್ಳುವವು' ಎಂದು. ಆದರೆ ಮುಂದಿನ ವಾಕ್ಯದಲ್ಲಿ 'ತದರ್ಥಾಃ ಪೂರ್ವಸರ್ಗವತ್' ('ಆ ಪುರಾಣದ ಅರ್ಥಗಳು ಹಿಂದಿನ ಸೃಷ್ಟಿಯ ಕಾಲದಲ್ಲಿರುವಂತೆ ') ಎಂದು ತಿಳಿಸಲಾಗಿದೆ. ಇದು ಹಿಂದಿನ ಮತ್ತು ಮುಂದಿನ ವಾಕ್ಯದಲ್ಲಿ ವಿರೋಧವು ತೋರುವುದು. ಆದುದರಿಂದ ಟೀಕೆಯಲ್ಲಿ ಮೂಲದ ಭಾವವನ್ನು ಸ್ಫುಟೀಕರಿಸುವರು 'ಸ ವೇದಾರ್ಥ ಏವ' ಎನ್ನುವದರಿಂದ. 'ತದರ್ಥಾನಿ' ಎನ್ನುವಲ್ಲಿನ ಅರ್ಥ ಶಬ್ದವನ್ನು ಆವೃತ್ತಿ ಮಾಡಿಕೊಳ್ಳುವುದು. 'ತದರ್ಥಾರ್ಥಾನಿ' ಎಂದು ಸಿದ್ಧವಾಗುವುದು. 'ಪುರಾಣಗಳು ವೇದಪ್ರತಿಪಾದಿತವಾದ ಅರ್ಥ- ವಿಷಯವನ್ನು ಹೊಂದಿರುವವು, ಮತ್ತು ವೇದದ ಅರ್ಥ- ಫಲವನ್ನೇ ಫಲವನ್ನಾಗಿ ಹೊಂದಿರುವವು' ಎಂದು ಒಟ್ಟು ಅಭಿಪ್ರಾಯವು ಪ್ರಾಪ್ತವಾಗುವುದು. ಆದುದರಿಂದ 'ಪುರಾಣಾನಿ ತದರ್ಥಾನಿ' ಎಂದರೆ ಪುರಾಣಗಳು ಮತ್ತು ಅದರ ಅರ್ಥಗಳು' ಎಂಬ ಅರ್ಥವು ಪ್ರಕೃತದಲ್ಲಿ ವಿವಕ್ಷಿತವಲ್ಲ. 'ವೇದಪ್ರತಿಪಾದಿತವಿಷಯಗಳನ್ನು ಮತ್ತು ವೇದದ ಅಧ್ಯಯನದ ಫಲಗಳನ್ನೇ ಫಲವನ್ನಾಗಿ ಹೊಂದಿರುವವು ಪುರಾಣಗಳು' ಎಂದು ಪರಿವಸಿತಾರ್ಥ ಎಂದು ಭಾವ.

ಹೇಗೆ ವೇದಗಳಿಗೆ ಅನಾದಿ-ನಿತ್ಯತ್ವವು (ಸಂಗತವಾದೀತು)? ಎನ್ನುವುದೂ ನಿರಸ್ತವಾಯಿತು. ಹರಿಶ್ಚಂದ್ರಾದಿಗಳೂ ಸಹ ಪ್ರವಾಹತಃ ಅನಾದಿ-ನಿತ್ಯರಾದುದರಿಂದ[1]. 'ಋಚಃ ಸಾಮಾನಿ....' ಈ ಮುಂತಾದ ವಾಕ್ಯಗಳನ್ನು ವ್ಯಾಖ್ಯಾನಿಸಿದ ನಂತರ ಬ್ರಹ್ಮಾಂಡಪುರಾಣದಲ್ಲಿ ಮತ್ತೊಂದು ಸ್ಥಳದಲ್ಲಿನ ಬೇರೆಯ ವಾಕ್ಯವನ್ನು ಹೇಳುತ್ತಾರೆ. **'ವೇದಾನಾಂ'** ಎಂದು. ದೇವತೆಗಳ ಶರೀರದ ಉತ್ಪತ್ತಿಯ ದೃಷ್ಟಿಯಿಂದ ಎಂದು ಅರ್ಥ[2]. ಶರೀರದ ಉತ್ಪತ್ತಿಯು ಮುಖ್ಯ ಅಭಿಮಾನಿದೇವತೆಯಾದ ಶ್ರೀದೇವಿಗೆ ಇಲ್ಲ ಆದುದರಿಂದ ಹೇಳುವರು **'ಅವಾಂತರ..'** ಎಂದು. **ಅವಾಂತರಃ**- ಅಪ್ರಧಾನರಾದ, ಯಾರ **ಅಭಿಮಾನಃ**- ಸ್ವಾಮಿತ್ವವು ಪರಮೇಶ್ವರನ ಅಧೀನವೋ ಅವರು ಎಂದು ಹೇಳಲಾಗಿದೆ. **ಸ್ಥಿರಾತ್ಮನಾಂ** - 'ಅನಾದಿ-ನಿತ್ಯವೆಂದು ಪ್ರಮಿತವಾದ' ಎಂದು ಅರ್ಥ[3]. ಹಿಂದೆ ತಿಳಿಸಿದ ವಿಷಯದ ಅನುವಾದವನ್ನು ಮಾಡಿ, (ವೇದೋತ್ಪತ್ತಿಯನ್ನು ತಿಳಿಸುವ

---

1. ವೇದದಲ್ಲಿ ಹರಿಶ್ಚಂದ್ರ ಪುರೂರವ ಮುಂತಾದವರ ಚರಿತವು ಉಕ್ತವಾಗಿದೆ. ಆ ಚಾರಿತ್ರಿಕ ಪುರುಷರ ವಿವರವಿರುವುದರಿಂದ ಆ ವ್ಯಕ್ತಿಗಳ ನಂತರವೇ ಆ ವೇದ ಭಾಗಗಳು ನಿಬದ್ಧವಾಗಿರಬೇಕು. ಹಾಗಾಗಿ ಹೇಗೆ ವೇದಗಳು ಅನಾದಿ-ನಿತ್ಯವಾಗುವುದು ? ಎಂಬ ಸಂದೇಹಕ್ಕೆ ಉತ್ತರಿಸಿರುವರು. ಹರಿಶ್ಚಂದ್ರಾದಿ ಐತಿಹಾಸಿಕ ಪುರುಷರು ಅನಿತ್ಯರಾದರೂ ಅವರ ಪ್ರವಾಹವು ಅನಾದಿ-ನಿತ್ಯ . ಭಗವಂತನ ಸೃಷ್ಟಿಯಲ್ಲಿ ಅನಂತ ಹರಿಶ್ಚಂದ್ರಾದಿ ಐತಿಹಾಸಿಕ ಪುರುಷರು ಬಂದು ಹೋಗುವರು. '........ಭವನ್ತಿ ಕಾಲೇ ನ ಭವನ್ತಿ ಹೀದೃಶಾಃ । . ......ಸಹಸ್ರಶೋ ಯತ್ರ ವಯಂ ಭ್ರಮಾಮಃ ॥' ಭಾಗ.9.6.44. ಎಂದು ಯಮಧರ್ಮನು ತನ್ನ ಭೃತ್ಯರಿಗೆ ಉಪದೇಶಿಸಿರುವನು. ಇಂತಹ (ಬ್ರಹ್ಮಾದಿಗಳಂತಹ ಅನೇಕ ಜೀವರು) ಕಾಲದಲ್ಲಿ ಇರುವರು, ಮತ್ತೆ ಕೆಲವು ಕಾಲದಲ್ಲಿ ಇರಲಾರರು. ನಮ್ಮಂತಹ ಸಾವಿರಾರು ಮಂದಿ ಭಗವಂತನ ಬಳಿ ಸುತ್ತುವೆವು. ನೀರು ಹರಿದು ಹೋದರೂ ನದಿ ನಿರಂತರವಾಗಿರುವಂತೆ ಆ ಚರಿತವು ನಿತ್ಯವಾಗಿರುವುದು ಎಂದು ಭಾವ.

2. 'ವೇದವು ಉತ್ಪನ್ನವಾಯಿತು' ಎಂದರೆ 'ಅದರ ಅಪ್ರಧಾನ ಅಭಿಮಾನಿ ದೇವತೆಗಳ ಶರೀರಗಳು ಸೃಷ್ಟವಾದವು' ಎಂಬ ಅಭಿಪ್ರಾಯದಿಂದ ತಿಳಿಸಲಾಗಿದೆ ಎಂದು ಭಾವ.

3. ಈ ಬ್ರಹ್ಮಾಂಡದ ವಾಕ್ಯದಿಂದ ಸೂಚಿತವಾಗುವ ಅನುಮಾನವು ಹೀಗಾಗುವುದು 'ವೇದಾಃ ನಿತ್ಯಾಃ ನಿತ್ಯತ್ವಾತ್' ಎಂದು ಈ ಅನುಮಾನದಲ್ಲಿ ಸಾಧ್ಯ ಮತ್ತು ಹೇತುಗಳು ಒಂದೇ ಆಗಿರುವುದರಿಂದ ಸಾಧ್ಯಾವಿಶಿಷ್ಟತಾ ದೋಷಕ್ಕೆ ಅವಕಾಶವಿದೆ, ಆದುದರಿಂದ ಸ್ಥಿರಾತ್ಮನಾಂ ಎನ್ನುವ ಶಬ್ದದ ಅರ್ಥವನ್ನು ಸ್ಫುಟಗೊಳಿಸುವರು 'ಅನಾದಿನಿತ್ಯತ್ವೇನ ಪ್ರಮಿತಾನಾಂ' ಎಂದು.

ವಾಕ್ಯಗಳಿಗೆ) ಮತ್ತೊಂದು ರೀತಿಯಲ್ಲಿ ಅಭಿಪ್ರಾಯದ ವ್ಯವಸ್ಥೆಯನ್ನು ತಿಳಿಸಲು ಈ ವಾಕ್ಯವು (ಪ್ರವೃತ್ತವಾಗಿದೆ) ಎಂದು ಕೆಲವರು ಅಭಿಪ್ರಾಯ[1].

**'ವೇದ' ' ಶ್ರುತಿ' ಈ ಶಬ್ದಗಳೇ ನಿತ್ಯತ್ವವನ್ನು ತಿಳಿಸುತ್ತವೆ**

**ನಚಾನಿತ್ಯತ್ವೇ 'ಶ್ರುತಿರ್ವೇದಃ' ಇತ್ಯಾದಿ ವಿಶೇಷಶಬ್ದ ಉಪಪದ್ಯತೇ ।**

(ವೇದಗಳು) ಅನಿತ್ಯವಾದಲ್ಲಿ (ಅವುಗಳಿಗೆ) 'ವೇದ' 'ಶ್ರುತಿ' ಈ ಮುಂತಾದ ವಿಶೇಷಶಬ್ದಗಳು ಉಪಪನ್ನವಾಗುತ್ತಿರಲಿಲ್ಲ.

**'ಅತಃ ಶ್ರುತಿತ್ವಮೇತಾಸಾಂ;' ಇತಿ ಯದುಕ್ತಂ ತದುಪಲಕ್ಷಣ-ಪರಮಿತ್ಯಭಿಪ್ರಾಯೇಣ ವ್ಯಾಚಷ್ಟೇ 'ನಚಾನಿತ್ಯತ್ವೇ' ಇತಿ । ಅನಿತ್ಯತ್ವೇ ವೇದಾನಾಮ್ । ಆದಿಗ್ರಹಣೇನಾಽಮ್ನಾಯಶಬ್ದೋ ಗೃಹ್ಯತೇ । ವಿಶಿಷ್ಯತ ಇತಿ ವಿಶೇಷಃ- ಅಸಾಧಾರಣಃ । ಶ್ರವಣಕರ್ಮತ್ವಾದೌ ಸಾಧಾರಣೇಽಪಿ ಯದೇಷಾಮೇವ ಶ್ರುತಿವೇದಾಽಮ್ನಾಯಶಬ್ದವಾಚ್ಯತ್ವಂ, ತತ್ ನಿತ್ಯತ್ವಂ ವಿನಾಽನುಪಪದ್ಯಮಾನಂ ತದ್ಗಮಯತಿ । ತಥಾ ಹಿ- ಶ್ರುತಿಶಬ್ದೇ ತಾವದುಕ್ತಮ್ । ವೇದಶಬ್ದಶ್ಚ ಸತ್ತಾರ್ಥಾದ್ ವಿದೇಃ ಪಚಾದ್ಯಚಿ ಕೃತೇ ಕರ್ತರಿ ನಿಷ್ಪನ್ನಃ । ಸತ್ತಾ ಚ ಸರ್ವಾರ್ಥಸಾಧಾರಣೀ । 'ಅಸಾಧಾರಣ್ಯೇನ ವ್ಯಪದೇಶಾ ಭವನ್ತಿ' ಅತೋ 'ನಿತ್ಯಂ ವಿದ್ಯತೇ' ಇತಿ ಲಭ್ಯತೇ । ತಥಾ ಆಮ್ನಾಯಶಬ್ದ ಆಙ್ ಪೂರ್ವಾತ್ 'ಮ್ನಾ- ಅಭ್ಯಾಸೇ' ಇತ್ಯಸ್ಮಾತ್ ಕರ್ಮಣಿ ಘಞ್ ಕೃತೇ ಸಿದ್ಧಃ । ಅಭ್ಯಾಸಶ್ಚ- ಏಕಪ್ರಕಾರಾಸಕೃದುಕ್ತಿಃ । ತತ್ಕರ್ಮತ್ವಂ ಚ ಶಬ್ದಾನ್ತರಸಾಧಾರಣಮ್ । ತತೋ 'ಭೂತ-ಭವದ್-ಭವಿಷ್ಯದ್ಭಿರಖಿಲೈರಪಿ ಏಕಪ್ರಕಾರೇಣೈವ ಪಠ್ಯನ್ತೇ' ಇತಿ ಲಭ್ಯತೇ । ಏತದೇವ 'ಅನಾದಿನಿತ್ಯತ್ವಮ್' ಇತಿ ।**

---

1. 'ಮೊದಲು ವೇದೋತ್ಪತ್ತಿಯನ್ನು ತಿಳಿಸುವ ವಾಕ್ಯಕ್ಕೆ 'ಜೀವ ಹುಟ್ಟಿದನು, ಸೂರ್ಯ ಹುಟ್ಟಿದನು' ಈ ಮುಂತಾದ ವಾಕ್ಯಗಳಿಗೆ ಹೇಗೆ ಅಮುಖ್ಯಾರ್ಥವೋ ಹಾಗೆ ಅಮುಖ್ಯಾರ್ಥಎಂದು ತಿಳಿಸಲಾಗಿತ್ತು. ಈಗ 'ವೇದೋತ್ಪತ್ತಿ ಎಂದರೆ ವೇದಕ್ಕೆ ಅಮುಖ್ಯ ಅಭಿಮಾನಿಗಳಾದ ದೇವತೆಗಳ ಉತ್ಪತ್ತಿಯ ದೃಷ್ಟಿಯಿಂದ ವೇದದ ಉತ್ಪತ್ತಿ ಎಂಬ ಅರ್ಥ' ಎಂದು ತಿಳಿಸಲಾಗುವುದು, ಈ ರೀತಿಯಾಗಿ ಅವತರಣಿಕೆಯನ್ನು 'ವೇದಾನಾಂ ಸೃಷ್ಟಿ ವಾಕ್ಯಾನಿ...' ಈ ಮುಂತಾದ ವಾಕ್ಯಗಳಿಗೆ ಎಂದು ಕೆಲವರು ತಿಳಿಸಿರುವರು ಎಂಬ ಭಾವ.

'ಅತಃ ಶ್ರುತಿತ್ವಮೇತಾಸಾಂ .....' ಎಂದು ಹಿಂದೆ ಹೇಳಿದ್ದು ಉಪಲಕ್ಷಣ (ಈ ಮುಂದಿನ ವಿಷಯವನ್ನು ಸೂಚಿಸುತ್ತದೆ) ಎಂಬ ಅಭಿಪ್ರಾಯದಿಂದ ವ್ಯಾಖ್ಯಾನಿಸುತ್ತಾರೆ '**ನ ಚಾನಿತ್ಯತ್ವೇ** ' ಎನ್ನುವುದರಿಂದ. ಅನಿತ್ಯತ್ವೇ , ವೇದಾನಾಂ[1]. 'ಆದಿ' ಎಂದು ಹೇಳಿದ್ದರಿಂದ 'ಆಮ್ನಾಯ' ಎನ್ನುವ ಶಬ್ದವನ್ನೂ ಪರಿಗ್ರಹಿಸಬೇಕು. (ಬೇರೇ ಶಬ್ದಗಳಿಂದ) ಮಿಗಿಲಾಗಿದೆ ಎಂದು **ವಿಶೇಷಃ**- ಅಸಾಧಾರಣ[2]. (ಎಲ್ಲ ಶಬ್ದಗಳಲ್ಲೂ) 'ಶ್ರವಣಕರ್ಮತ್ವವು' (ಶ್ರವಣಕ್ಕೆ ವಿಷಯ ವಾಗುವಿಕೆಯು) ಸಾಧಾರಣವಾಗಿರಲು ಇವುಗಳಿಗೇ (ಅಪೌರುಷೇಯಾಗಮ ಗಳಿಗೆ) 'ಶ್ರುತಿ, ವೇದ, ಆಮ್ನಾಯ' ಶಬ್ದಗಳಿಂದ ವಾಚ್ಯತ್ವವು ನಿತ್ಯತ್ವದ ಹೊರತಾಗಿ ಹೊಂದುವುದಿಲ್ಲ, ಆದುದರಿಂದ ಅದು ( ಶ್ರುತ್ಯಾದಿ ಶಬ್ದ ವಾಚ್ಯತ್ವವು) ನಿತ್ಯತ್ವವನ್ನು ತಿಳಿಸುತ್ತದೆ. ಹೇಗೆಂದರೆ- ಶ್ರುತಿಶಬ್ದದ ವಿಷಯದಲ್ಲಿ ಈ ಹಿಂದೆ ತಿಳಿಸಿಯಾಗಿದೆ[3]. 'ವೇದ' ಶಬ್ದವಾದರೋ (ವಿದ್- ಸತ್ತಾಯಾಂ ದಿವಾದಿ ಗಣದಲ್ಲಿ ಪಠಿತವಾದ ಧಾತು ಸಂ.1171.) ಸತ್ತಾರ್ಥಕವಾದ ('ವಿದ್-ಇದೆ') 'ವಿದ್ ಧಾತುವು ಪಚಾದಿಗಣದಲ್ಲಿ ಪಠಿತವಾಗಿರುವುದರಿಂದ 'ಅಚ್' ಪ್ರತ್ಯಯ ವನ್ನು ವಿಧಿಸಲಾಗಿ ಕರ್ತ್ರರ್ಥದಲ್ಲಿ (ಈ ವೇದ ಎಂಬ ಶಬ್ದವು) ಸಂಪನ್ನವಾಗಿದೆ[4].

---

1. ಮೂಲದಲ್ಲಿ 'ಅನಿತ್ಯತ್ವೇ' ಎಂದಿದೆ. ಅದಕ್ಕೆ ಅನ್ವಯವು ತೋರುತ್ತಿಲ್ಲ. ಹಾಗಾಗಿ ಟೀಕೆಯಲ್ಲಿ ಅನ್ವಯವನ್ನು ತಿಳಿಸಲಾಗಿದೆ. 'ವೇದಾನಾಂ' ಎನ್ನುವ ಶಬ್ದವನ್ನು ಅಧ್ಯಾಹರಿಸಿಕೊಳ್ಳಬೇಕು, ಆಗ 'ವೇದಗಳಿಗೆ ಅನಿತ್ಯತ್ವವು ಇದ್ದಲ್ಲಿ ' ಎಂದು ವಾಕ್ಯದ ಭಾವ.
2. 'ವಿಶಿಷ್ಯತೇ ಇತಿ' ಎನ್ನುವುದು ಮೂಲದಲ್ಲಿರುವ 'ವಿಶೇಷ' ಶಬ್ದದ ನಿರ್ವಚನ . ಈ ನಿರ್ವಚನದಿಂದ 'ವಿಶೇಷ' ಎನ್ನುವ ಶಬ್ದಕ್ಕೆ 'ಅಸಾಧಾರಣ' ಎಂಬ ಅರ್ಥವು ಪ್ರಾಪ್ತವಾಯಿತು ಎಂದು ಭಾವ.
3. 'ಅತಃ ಶ್ರುತಿತ್ವಮೇತಾಸಾಂ ಶ್ರುತಾ ಏವ ಯತೋಽಖಿಲೈಃ' ಎನ್ನುವುದರಿಂದ.
4. 'ವಿದ- ಸತ್ತಾಯಾಮ್' ಎಂಬ ಧಾತು. 'ನನ್ದಿಗ್ರಹಪಚಾದಿಭ್ಯೋ ಲ್ಯುಣಿನ್ಯಚಃ' ಪಾ.ಸೂ.3.1.134. ಈ ಸೂತ್ರದ ನಿಯಮದಂತೆ ಪಚಾದಿಗಣದಲ್ಲಿ ಪಠಿತವಾದ ಕರ್ತ್ರರ್ಥಕವಾದ ಈ 'ವಿದ್' ಧಾತುವಿಗೆ 'ಅಚ್' ಪ್ರತ್ಯಯವು ಪ್ರಾಪ್ತವಾಗುವುದು. 'ವಿದ್+ಅ' ಎಂದು ಸಿದ್ಧವಾಗಿರಲು, 'ಪುಗನ್ತಲಘೂಪಧಸ್ಯ ಚ' ಪಾ.ಸೂ.7.3.86. ಪುಗನ್ತವಾದ ಮತ್ತು ಉಪಧಾ ಎಂಬ ಸಂಜ್ಞೆಯನ್ನು ಹೊಂದಿರುವ ಹ್ರಸ್ವವರ್ಣಕ್ಕೆ ಗುಣವು ಆದೇಶವಾಗುವುದು. 'ಅಲೋಽನ್ತ್ಯಾತ್ಪೂರ್ವ ಉಪಧಾ' ಪಾ.ಸೂ.6.4.8. ಧಾತುವಿನ ಕೊನೆಯ ವ್ಯಂಜನಾಕ್ಷರದ ಹಿಂದಿನ ಸ್ವರಾಕ್ಷರವನ್ನು 'ಉಪಧಾ' ಎಂದು ಹೆಸರಿಸುವರು. ಪ್ರಕೃತ ವಿದ್ ಎನ್ನುವಲ್ಲಿನ ಇಕಾರವು ಉಪಧಾ ಸಂಜ್ಞೆಯನ್ನು ಹೊಂದಿದೆ. ಈ ಇಕಾರಕ್ಕೆ ಯೋಗ್ಯವಾದ ಗುಣಾಕ್ಷರವು ಏಕಾರ, ಹಾಗಾಗಿ 'ವೇದ' ಎಂಬ ರೂಪವು ಸಂಪನ್ನವಾಗುವುದೆಂದು ಭಾವ.

ಸತ್ತೆಯಾದರೋ ಎಲ್ಲ ಪದಾರ್ಥಗಳಲ್ಲೂ ಸಾಧಾರಣವಾಗಿದೆ[1]. '(ಸಾಧಾರಣ ಧರ್ಮವಾಚಕ ಶಬ್ದಗಳು ವಸ್ತುವಿಶೇಷವನ್ನು ತಿಳಿಸುವಾಗ) ಅಸಾಧಾರಣಾರ್ಥವನ್ನು ತಿಳಿಸುತ್ತವೆ' (ಎಂಬ ನಿಯಮವು ಇದೆ). ಆದುದರಿಂದ 'ನಿತ್ಯವಾಗಿ ಇದೆ' ಎಂದು ಅರ್ಥವು ಲಭ್ಯವಾಗುವುದು[2]. ಹಾಗೆಯೇ 'ಆಮ್ನಾಯ' ಶಬ್ದವು 'ಅಭ್ಯಾಸ' (ಆವೃತ್ತಿ) ಎಂಬ ಅರ್ಥದ 'ಮ್ನಾ' ಧಾತುವಿನಿಂದ ನಿಷ್ಪನ್ನವಾದ ಶಬ್ದ. ಈ ಧಾತುವಿಗೆ ಆದಿಯಲ್ಲಿ 'ಆಙ್' ಎಂಬ ಉಪಸರ್ಗವು ನಂತರದಲ್ಲಿ ಕರ್ಮಾರ್ಥಕವಾದ 'ಘಞ್' ಪ್ರತ್ಯಯವನ್ನು ಸಂಯೋಜಿಸಲಾಗಿ ಸಿದ್ಧವಾದ ರೂಪ[3]. ಅಭ್ಯಾಸ ಎಂದರೆ 'ಒಂದೇ ರೀತಿಯಲ್ಲಿ

---

1. ವೇದಶಬ್ದದ ಮೂಲರೂಪವಾದ 'ವಿದ್'. ಈ 'ವಿದ್' ಶಬ್ದದ ಅರ್ಥ 'ಸತ್' ಎಂದರೆ 'ಇದೆ' ಎಂದು. ಈ ಇರುವಿಕೆಯು ಎಲ್ಲ ಪದಾರ್ಥಕ್ಕೂ ಇದೆ. ಹಾಗಾಗಿ ಎಲ್ಲ ಪದಾರ್ಥಗಳನ್ನೂ 'ವೇದ' ಎಂದೇ ವ್ಯವಹರಿಸಬೇಕಾದೀತು ಎಂದು ಭಾವ.

2. ಸತ್ ಎಂಬ ಅರ್ಥವನ್ನು ತಿಳಿಸುವ 'ವೇದ' ಎನ್ನುವ ಶಬ್ದದಿಂದ ವಸ್ತುವಿಶೇಷವನ್ನು ವ್ಯವಹರಿಸಲಾಗುವುದು. ಎಲ್ಲ ಪದಾರ್ಥಗಳು ಸತ್ತೇ ಆಗಿವೆ. ಆದುದರಿಂದ ಈ ವಿದ್ ಶಬ್ದವು ಈ ಶ್ರುತಿಗಳಿಗೆ ಬೇರೇ ಪದಾರ್ಥಗಳಲ್ಲಿ ಇರಲಾರದ ವಿಶೇಷ ಸತ್ತೆಯನ್ನು ತಿಳಿಸುತ್ತದೆ. ಅದು 'ನಿತ್ಯವಾಗಿ ಇದೆ' ಎಂಬ ವಿಶೇಷ ಅರ್ಥವು ಪ್ರಾಪ್ತವಾಗುತ್ತದೆ. ವ್ಯವಹಾರದಲ್ಲಿ- 'ಮನುಷ್ಯ ಅಂದರೆ ಇವ' ಎಂದು ಹೇಳುವುದು ಉಂಟು. ಎಲ್ಲರೂ ಮನುಷ್ಯರೇ ಆಗಿರುವಾಗ ವಿಶೇಷವಾಗಿ ಈ ವ್ಯಕ್ತಿಯನ್ನು ಮನುಷ್ಯ ಎಂದು ವ್ಯವಹರಿಸಿದಲ್ಲಿ ಈ ವ್ಯಕ್ತಿಯಲ್ಲಿ ಮಾನವೀಯತೆಯು ವಿಶೇಷವಾಗಿದೆ ಎಂಬ ಅರ್ಥವನ್ನು ಒಪ್ಪಿರುವಂತೆ ಪ್ರಕೃತದಲ್ಲೂ ತಿಳಿಯುವುದು ಎಂದು ಭಾವ.

3. ಒಟ್ಟಿನಲ್ಲಿ ಆಮ್ನಾಯ ಎಂದರೆ 'ಅಭ್ಯಾಸಕ್ಕೆ ವಿಷಯವಾದದ್ದು' ಎಂಬ ಅರ್ಥವನ್ನು ತಿಳಿಸುತ್ತದೆ . 'ಮ್ನಾ- ಅಭ್ಯಾಸೇ' 929. ಎಂಬ ಧಾತುವು ಭ್ವಾದಿಗಣದಲ್ಲಿ ಪಠಿತವಾಗಿದೆ. ಈ ಧಾತುವಿಗೆ 'ಆಙ್' ಎಂಬ ಉಪಸರ್ಗವು ಪೂರ್ವದಲ್ಲಿದೆ. 'ಆಮ್ನಾ' ಎಂದು ಸಿದ್ಧವಾಗಲು, 'ಅಕರ್ತರಿ ಚ ಕಾರಕೇ ಸಞ್ಜಾಯಾಮ್' 3.3.19. ಎಂಬ ಸೂತ್ರದ ನಿಯಮದಂತೆ 'ಘಞ್' ಎಂಬ ಪ್ರತ್ಯಯವು ಪ್ರಾಪ್ತವಾಗುವುದು. ಈ ಘಞ್ ಪ್ರತ್ಯಯದಲ್ಲಿ ಅಕಾರವು ಮಾತ್ರ ಉಳಿಯಲಾಗಿ ಆಮ್ನಾ+ಅ ಎಂದು ಸಿದ್ಧವಾಗಿರಲು, 'ಆತೋ ಯುಕ್ ಚ್ಚಿಣ್‌ಕೃತೋಃ' ಪಾ.ಸೂ7.3.33. ಎಂಬ ಸೂತ್ರದ ನಿಯಮದಂತೆ ಅಕಾರಾಂತವಾದ ಧಾತುವಿಗೆ ಚಿಣ್, ಞಿತಿ, ಣಿತಿ, ಕೃತಿ ಪ್ರತ್ಯಯಗಳು ಪರದಲ್ಲಿರುವಾಗ 'ಯುಕ್' ಪ್ರತ್ಯಯದ ಆಗಮವಾಗುವುದು. ಪ್ರಕೃತದಲ್ಲಿ ಈ 'ಮ್ನಾ' ಧಾತುವಿಗೆ 'ಘಞ್' ಪ್ರತ್ಯಯವು ಪ್ರಾಪ್ತವಾದುದರಿಂದ ಯುಕ್ ಆಗಮವು ಪ್ರಾಪ್ತವಾಗಲು, ಯುಕ್ ನಲ್ಲಿ 'ಯ'ವರ್ಣವು ಮಾತ್ರ ಉಳಿಯಲು 'ಆಮ್ನಾಯ' ಎಂಬ ರೂಪವು ಸಿದ್ಧವಾಗುವುದು.

ಅನೇಕ ಬಾರಿ ಹೇಳುವಿಕೆ' ಎಂದು. ಅಭ್ಯಾಸಕರ್ಮತ್ವವು ಬೇರೇ ಶಬ್ದಗಳಲ್ಲೂ ಇದೆ.ಆದುದರಿಂದ 'ಈ ಹಿಂದೆ, ಪ್ರಕೃತದಲ್ಲಿ ಮುಂದೆಯೂ ಸಹ ಎಲ್ಲರಿಂದಲೂ ಒಂದೇ ವಿಧದಲ್ಲಿ ಉಚ್ಚರಿಸಲಾಗುವುದು' ಎಂದು (ಎಂಬ ವಿಶೇಷ ಅರ್ಥವನ್ನು) ತಿಳಿಸಿದಂತಾಯಿತು. ಇದನ್ನೇ (ವೇದಗಳ) 'ಅನಾದಿ-ನಿತ್ಯತಾ' ಎನ್ನುವುದು[1].

**ಆಮ್ನಾಯಾದಿ ಶಬ್ದಗಳ ನಿರ್ವಚನವು ಪ್ರಮಿತ**

**ವೇದಾಸ್ತೇ ನಿತ್ಯವಿನ್ನತ್ವಾಚ್ಛ್ರುತಯಶ್ಚಾಖಿಲೈಃ ಶ್ರುತೇಃ ।**
**ಆಮ್ನಾಯೋಽನನ್ಯಥಾಪಾಠಾದೀಶಬುದ್ಧಿಸ್ಥಿತಾಃ ಸದಾ ।**

**ಇತಿ ಮಹಾವಾರಾಹೇ ।**

**ನ ಚ ನಿತ್ಯತ್ವಂ ವಿನಾ ವೇದಾನಾಂ ದರ್ಶನವ್ಯವಹಾರೋ ಯುಜ್ಯತೇ ।**

ನಿತ್ಯವಾಗಿ ಇರುವುದರಿಂದ 'ವೇದ' ಎಂದು, ಎಲ್ಲರಿಂದಲೂ (ಕೇವಲ) ಶ್ರುತವಾದುದರಿಂದ 'ಶ್ರುತಿ' ಎಂದು, (ನಿರಂತರ) ಒಂದೇ ರೀತಿಯಲ್ಲಿ ಪಠಿಸುವುದರಿಂದ 'ಆಮ್ನಾಯ' ಎಂದು ಅವುಗಳನ್ನು (ಆಗಮವಿಶೇಷಗಳನ್ನು ವ್ಯವಹರಿಸುತ್ತಾರೆ). ನಿರಂತರ ಈಶ್ವರನ ಬುದ್ಧಿಯಲ್ಲಿ (ಅವು) ಇರುವವು ಎಂದು ಮಹಾವಾರಾಹದಲ್ಲಿ ತಿಳಿಸಲಾಗಿದೆ. ವೇದಗಳಿಗೆ ನಿತ್ಯತ್ವವನ್ನು ಒಪ್ಪದೇ (ವೇದಗಳು ಈಶ್ವರನಿಂದ ದೃಷ್ಟವಾದದ್ದು ಎಂಬ) ದರ್ಶನವ್ಯವಹಾರವು ಯುಕ್ತವಾಗದು.

**ಸ್ಯಾದೇತದೇವಂ ಯದಿ ಶ್ರುತ್ಯಾದಿಶಬ್ದಾನಾಮೇತದೇವ ನಿರ್ವಚನಂ ಸ್ಯಾತ್ । ಸತ್ಯಪಿ ಚ ತಸ್ಮಿನ್ ಇದಮೇವ ಚಾಸಾಧಾರಣ್ಯೇ ನಿಮಿತ್ತಂ ಸ್ಯಾತ್ ।**

---

1. ಎಲ್ಲ ಶಬ್ದಗಳೂ ಅನೇಕ ಬಾರಿ ಒಂದೇ ರೀತಿಯಲ್ಲಿ ಉಚ್ಚಾರಣೆಗೆ ವಿಷಯವಾಗುತ್ತಿರಲಾಗಿ, ವೇದಗಳನ್ನು ಮಾತ್ರ 'ಆಮ್ನಾಯ' ಎಂಬ ಶಬ್ದದಿಂದ ನಿರ್ದೇಶಿಸುತ್ತಿರುವುದರಿಂದ ಒಂದು ವಿಶೇಷಅರ್ಥವು ತಿಳಿಯುತ್ತದೆ. ಎಲ್ಲ ಕಲ್ಪದಲ್ಲೂ ಒಂದೇ ರೀತಿಯಾದ ಉಚ್ಚಾರಣೆಗೆ ಎಲ್ಲರಿಂದಲೂ ವಿಷಯವಾಗುವುದರಿಂದ ವೇದಗಳು ಮಾತ್ರ 'ಆಮ್ನಾಯ' ಎಂದು. ಇದೇ ವೇದದ ಅನಾದಿ ನಿತ್ಯತ್ವ- 'ಒಂದೇ ತರಹದ ಆನುಪೂರ್ವಿ' ಎಂದು ಈ ಹಿಂದೆಯೇ ತಿಳಿಸಿರುತ್ತಾರೆ ಎಂದು ಭಾವ.

ಸಂಭವತಿ ಚಾನ್ಯದಪಿ? ಇತಿ ಚೇತ್ । ಸತ್ಯಮ್, ತಥಾಪಿ ಪೌರಾಣಿಕಮಿದಮೇವಾದರಣೀಯಮಿತಿ ಭಾವೇನ ತತ್‌ಪುರಾಣವಾಕ್ಯಂ ಪಠತಿ **'ವೇದಾಸ್ತೇ'** ಇತಿ । ತೇ - ಪ್ರಸಿದ್ಧಾಃ, ನಿತ್ಯವಿನ್ನತ್ವಾತ್ - ನಿತ್ಯಂ ವಿದ್ಯಮಾನತ್ವಾತ್ । ಅಕರ್ಮಕತ್ವಾತ್ ಕರ್ತರಿಕ್ತಃ । 'ಗತ್ಯರ್ಥಾಕರ್ಮಕ....' (ಪಾ.ಸೂ. 3.4.72.) ಇತಿ ಸ್ಮರಣಾತ್ 'ವಿದ್ಯತೇರ್ವಿನ್ನ ಇಷ್ಯತೇ' ಇತಿ ಚ । ಅನನ್ಯಥಾಪಾಠಾದ್ ಇತ್ಯತ್ರಾಪಿ **'ಅಖಿಲೈಃ'** ಇತಿ ವರ್ತತೇ । ಆಮ್ನಾಯ ಇತ್ಯೇಕ ವಚನಂ ಬಹುವಚನಾರ್ಥೇ 'ಸುಪಾಂ ಸುಲುಕ್...' (ಪಾ.ಸೂ. 7.1.39.) ಇತಿ ವಚನಾತ್ । ಪ್ರಲಯೇ ವಿನಾಶಾತ್ ಕಥಂ ನಿತ್ಯವಿನ್ನತ್ವಾತ್? ಇತ್ಯತ ಉಕ್ತಮ್ **'ಈಶ..'** ಇತಿ । 'ಯತಸ್ತಾ ಹರಿಣಾ ದೃಷ್ಟಾಃ' ಇತ್ಯನೇನ ಸೂಚಿತಾಂ ಯುಕ್ತಿಂ ವಿವೃಣೋತಿ **'ನ ಚ ನಿತ್ಯತ್ವಂ ವಿನಾ'** ಇತಿ । ಅಸ್ತಿ ತಾವದ್ 'ಈಶ್ವರಾದಯೋ ವೇದಸ್ಯ ದ್ರಷ್ಟಾರ' ಇತ್ಯಾದಿವ್ಯವಹಾರಃ । 'ಸ ಇಮಂ ಮಂತ್ರಮಪಶ್ಯತ್' ಇತ್ಯಾದಿಶ್ರುತೇಃ। ದರ್ಶನಂ ಚ ಪೂರ್ವಸಿದ್ಧಸ್ಯ ಭವತಿ । 'ನ ಹಿ ಯೋ ಯತ್ಕರೋತಿ ಸ ತತ್ ಪಶ್ಯತಿ' ಇತ್ಯುಚ್ಯತೇ । ಅತಸ್ತದನ್ಯಥಾಽನುಪಪತ್ತ್ಯಾಽಪಿ ನಿತ್ಯತ್ವಂ ಸಿದ್ಧಮಿತಿ ।

ಇದು (ವೇದಗಳು ಅಪೌರುಷೇಯ ಎನ್ನುವುದು) ಸರಿಯಾಗುತ್ತಿತ್ತು , ಒಂದು ವೇಳೆ 'ಶ್ರುತಿ' ಮುಂತಾದ ಶಬ್ದಗಳಿಗೆ ಇದೇ (ಈ ಹಿಂದೆ ತಿಳಿಸಿದ) ನಿರ್ವಚನವೇ (ಸರಿ, ಬೇರಾವುದೇ ನಿರ್ವಚನವು ಸರಿಯಾಗದು)ಎಂದಾದಲ್ಲಿ. ಅದು ಇದ್ದಲ್ಲಿ (ಈ ಹಿಂದೆ ಉಕ್ತವಾದ ನಿರ್ವಚನವಿಶಿಷ್ಟವಾದ ಶ್ರುತ್ಯಾದಿ ಶಬ್ದವಾಚ್ಯತ್ವವು ಉಪನಿಷದಾದಿಗಳಲ್ಲಿ ಇದೆ ಎನ್ನುವುದು ನಿಶ್ಚಿತವಾದಲ್ಲಿ) ಇದು (ಆಮ್ನಾಯಾದಿ ಶಬ್ದ ವಾಚ್ಯತ್ವವು) ಅಸಾಧಾರಣ್ಯ ವಿಷಯದಲ್ಲಿ ನಿಮಿತ್ತವೂ ಆಗುತ್ತಿತ್ತು . (ಆದರೆ)ಬೇರೇ ರೀತಿಯಲ್ಲಿಯೂ (ಈ ಶಬ್ದಗಳಿಗೆ ನಿರ್ವಚನವು) ಸಂಭಾವಿತವಲ್ಲವೆ? ಎಂದರೆ. ಸತ್ಯ, ಆದರೂ ಸಹ ಪೌರಾಣಿಕರು ಇದನ್ನೇ (ಈ

---

1. ವೇದ, ಆಮ್ನಾಯ ಈ ಮುಂತಾದ ಶಬ್ದಗಳಿಗೆ ಈ ಹಿಂದೆ ತಿಳಿಸಿದ ನಿರ್ವಚನವು ಮಾತ್ರ ಎಂದಾದಲ್ಲಿ ನೀವು ತಿಳಿಸಿದಂತೆ ವೇದಾದಿ ಶಬ್ದಗಳು ವಿಶೇಷಾರ್ಥದ ಸೂಚಕವಾಗಿವೆ ಎಂದು ವೇದದ ನಿತ್ಯತ್ವವು ಸಿದ್ಧವಾಗುತ್ತಿತ್ತು . ಆದರೆ ಆ ಶಬ್ದಗಳಿಗೆ ಬೇರೇ ರೀತಿಯಲ್ಲೂ

ಪುಟ 271ರಲ್ಲಿ.......

ಹಿಂದೆ ತಿಳಿಸಿದ ನಿರ್ವಚನವನ್ನೇ) ಆದರಿಸಿರುವರು ಎಂಬ ಭಾವದಿಂದ ಆ ಪುರಾಣವಾಕ್ಯವನ್ನು ಹೇಳುತ್ತಾರೆ. '**ವೇದಾಸ್ತೇ**' ಎಂದು. ತೇ- ಪ್ರಸಿದ್ಧಗಳಾದ. **ನಿತ್ಯವಿನ್ನತ್ವಾತ್**- ನಿತ್ಯವೂ ಇರುವಿಕೆಯನ್ನು ಹೊಂದಿರುವುದರಿಂದ. ('ವಿದ್' ಧಾತುವು) ಅಕರ್ಮಕವಾದುದರಿಂದ 'ಕರ್ತಾ' ಎಂಬ ಅರ್ಥಕವಾದ 'ಕ್ತ' ಪ್ರತ್ಯಯವು (ವಿದೆ). 'ಗತ್ಯರ್ಥಾಕರ್ಮಕ......' ಎಂದು ಸ್ಮೃತಿಯು ಇರುವುದರಿಂದ (ಅಕರ್ಮಕಾರ್ಥದಲ್ಲಿ 'ಕ್ತ' ಪ್ರತ್ಯಯವನ್ನು ವಿಧಿಸಲಾಗಿದೆ)[1]. 'ವಿದ್ಯತೇರ್ವಿನ್ನ ಇಷ್ಯತೇ' ಎಂದೂ ಸಹ (ಶಬ್ದಶಾಸ್ತ್ರಜ್ಞರ ವಚನವು ಇರುವುದರಿಂದಲೂ)[2]. 'ಅನನ್ಯಥಾಪಾಠಾತ್' ಎನ್ನುವಲ್ಲೂ ಸಹ (ಹಿಂದಿನ

...... ಪುಟ 270 ರಿಂದ

ನಿರ್ವರ್ವಚನವನ್ನು ತಿಳಿಸಲು ಶಕ್ಯವಿದೆ. ಭಗವಂತನನ್ನು ತಿಳಿಸಿದ್ದರಿಂದ ಅವುಗಳು ವೇದ, ಬಹಳ ಹಿಂದಿನಿಂದಲೂ ಒಂದೇ ರೀತಿಯಲ್ಲಿ ಉಚ್ಚಾರಣೆಗೆ ವಿಷಯವಾದುದರಿಂದ ಆಮ್ನಾಯ ಇತ್ಯಾದಿಯಾಗಿಯೂ ನಿರ್ವಚನವನ್ನು ಹೇಳಲು ಶಕ್ಯವಿದೆ. ಈ ಬೇರೇ ರೀತಿಯಾದ ನಿರ್ವಚನವು ಒಪ್ಪಿತವಾದಲ್ಲಿ, ಕೇವಲ ವೇದಾದಿ ಶಬ್ದವಾಚ್ಯತ್ವದಿಂದಲೇ ವೇದಗಳ ನಿತ್ಯತ್ವವು ಸಿದ್ಧವಾಗಲಾರದು ಎಂದು ಭಾವ..

1. 'ವಿದ-ಸತ್ತಾಯಾಂ' ಎಂಬ ಈ ಧಾತುವು ದಿವಾದಿಗಣದಲ್ಲಿ ಪಠಿತವಾಗಿದೆ 1171. 'ಗತ್ಯರ್ಥಾಕರ್ಮಕಶ್ಲಿಷಶೀಙ್‌ಸ್ಥಾಸವಸಜನರುಹಜೀರ್ಯತಿಭ್ಯಶ್ಚ' ಪಾ.ಸೂ.3.4.72. ಎಂಬ ಸೂತ್ರದ ನಿಯಮದಂತೆ ಈ ಧಾತುವಿನ ಮುಂದೆ 'ಕ್ತ' ಪ್ರತ್ಯಯವನ್ನು ಸಂಯೋಜಿಸಲಾಗಿದೆ. 'ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ' ಪಾ.ಸೂ.8.2.42. ರೇಫ ಮತ್ತು ದಕಾರಗಳ ಮುಂದಿನ ನಿಷ್ಠಾಸಂಜ್ಞೆಯನ್ನು ಹೊಂದಿದ ತಕಾರಕ್ಕೆ ಮತ್ತೂ (ಧಾತುವಿನಲ್ಲಿ ಘಟಕವಾದ) ದಕಾರಕ್ಕೂ ನಕಾರವು ಆದೇಶಗೊಳ್ಳುವುದು. ಪ್ರಕೃತದಲ್ಲಿ 'ಕ್ತ' ಪ್ರತ್ಯಯಕ್ಕೆ 'ನಿಷ್ಠಾ' ಎಂಬ ಸಂಜ್ಞೆ ಇದೆ, 'ಕ್ತಕ್ತವತೂ ನಿಷ್ಠಾ' ಪಾ.ಸೂ.1.1.26.ರಪ್ರಕಾರ. ಹಾಗಾಗಿ 'ವಿದ್+ತ' ಎಂದಿರುವಾಗ ದಕಾರ-ತಕಾರಗಳಿಗೆ ನಕಾರವು ಆದೇಶವಾಗಿ 'ವಿನ್ನ' ಎಂಬ ರೂಪವು ಸಿದ್ಧವಾಗುವುದು ಎಂದು ಭಾವ.

2. 'ಪುಗನ್ತಲಘೂಪಧಸ್ಯ ಚ' ಪಾ.ಸೂ.7.3.86. ರ ನಿಯಮದಂತೆ ಪುಗಂತವಾದ ಮತ್ತು ಉಪಧಾ ಸಂಜ್ಞೆಯನ್ನು ಹೊಂದಿರುವ ಹ್ರಸ್ವವರ್ಣಕ್ಕೆ ಗುಣಾಕ್ಷರದ ಆದೇಶವು ಪ್ರಾಪ್ತವಾಗುವುದು. 'ವಿದ್' ಧಾತುವಿನಲ್ಲಿ ಘಟಕವಾದ 'ಇ' ಕಾರಕ್ಕೆ ಉಪಧಾ ಸಂಜ್ಞೆಯು ಇರುವುದರಿಂದ ಗುಣಾಕ್ಷರ ಏಕಾರವು ಆದೇಶವಾದಲ್ಲಿ 'ವೇನ್ನ' ಎಂದು ರೂಪವಾಗುವುದು? ಎಂಬ ಸಂದೇಹಕ್ಕೆ ಎಡೆಯಿಲ್ಲ. 'ಕ್ಙಿತಿ ಚ' ಪಾ.ಸೂ 1.1.5.ರ ಪ್ರಕಾರ ಇತ್ ಸಂಜ್ಞೆಯನ್ನು

ಪುಟ 272ರಲ್ಲಿ........

ಪಾದದಲ್ಲಿರುವ ) 'ಅಖಿಲೈಃ' ಎನ್ನುವುದನ್ನು ಅನುವರ್ತಿಸಿಕೊಳ್ಳಬೇಕು. 'ಸುಪಾಂ ಸುಲುಕ್....' ಎಂಬ ಸೂತ್ರದ ನಿಯಮಾನುಸಾರ 'ಆಮ್ನಾಯಃ' ಎಂಬ ಏಕವಚನವು ಬಹುವಚನದ ಅರ್ಥದಲ್ಲಿದೆ[1]. ಪ್ರಲಯಕಾಲದಲ್ಲಿ ನಾಶವಿರುವುದರಿಂದ 'ನಿತ್ಯವಿನ್ನತ್ವಾತ್' ಎನ್ನುವುದು ಹೇಗೆ (ಸಮಂಜಸ) ? ಆದುದರಿಂದ ಉತ್ತರಿಸುತ್ತಾರೆ 'ಈಶ....' ಎಂದು. 'ಯತಸ್ತಾ ಹರಿಣಾ ದೃಷ್ಟಾಃ ' ಎನ್ನುವುದರಿಂದ ಸೂಚಿಸಿದ ಯುಕ್ತಿಯನ್ನು ವಿವರಿಸುತ್ತಾರೆ. 'ನ ಚ ನಿತ್ಯತ್ವಂ ವಿನಾ' ಎನ್ನುವುದರಿಂದ. (ಲೋಕದಲ್ಲಿ) 'ಈಶ್ವರಾದಿಗಳು ವೇದದ ದ್ರಷ್ಟಾರರು' ಈ ಮುಂತಾದ ವ್ಯವಹಾರವು ಇದೆ. 'ಸ ಇಮಂ ಮಂತ್ರಮಪಶ್ಯತ್' ಇದೇ ಮುಂತಾದ ಶ್ರುತಿಗಳು ಇರುವುದರಿಂದ. ದರ್ಶನವಾದರೋ ಮೊದಲು

...... ಪುಟ 271 ರಿಂದ

ಹೊಂದಿದ ಕಕಾರಸಹಿತವಾದ ಪ್ರತ್ಯಯವು ಪರದಲ್ಲಿ ಇರಲು ಇಗ್‌ವರ್ಣಗಳಿಗೆ ಗುಣ ವೃದ್ಧಿಗಳು ಆದೇಶಗೊಳ್ಳುವದಿಲ್ಲ. ಅದರಂತೆ ಪ್ರಕೃತದಲ್ಲಿ ವಿದ್ ಧಾತುವಿಗೆ ಕರ್ತ್ರರ್ಥಕ 'ಕ್ತ'ಪ್ರತ್ಯಯವನ್ನು ಸಂಯೋಜಿಸಿರುವುದರಿಂದ ಗುಣಾದೇಶಕ್ಕೆ ಎಡೆಯಿಲ್ಲ. ಆದರೂ ಈ 'ವಿದ್' ಧಾತುವು ಸೇಟ್ ಆಗಿದೆ (ಇಕಾರದಿಂದ ಕೂಡಿರುವುದು). ಈ ಧಾತುವಿನೊಡನೆ ಸಂಯೋಜಿಸಲಾದ 'ಕ್ತ' ಪ್ರತ್ಯಯವು, ವಲ್ ವರ್ಣವನ್ನು ಆದಿಯಾಗಿರುವ ಆರ್ಧಧಾತುಕಸಂಜ್ಞೆಯನ್ನು ಹೊಂದಿರುವುದು . ಹಾಗಾಗಿ 'ಆರ್ಧಧಾತುಕಸ್ಯೇಡ್ವಲಾದೇಃ' ಪಾ.ಸೂ .7.2.35. ರ ನಿಯಮದಂತೆ, ಕ್ತಪ್ರತ್ಯಯದ ಆದಿಯಲ್ಲಿ ಇಡಾಗಮವು ಪ್ರಾಪ್ತವಾಗುವುದು. ಆಗ ವಿದ್+ಇ+ತಃ – ವಿದಿತಃ ಎಂಬುವದಾಗಿ ರೂಪವು ಸಂಪನ್ನವಾಗುವುದೇ ಹೊರತಾಗಿ 'ವಿನ್ನ' ಎಂದಲ್ಲ? ಎಂದೂ ಸಂದೇಹಿಸಲು ಅವಕಾಶವಿಲ್ಲ.'ವಿದ್ಯತೇರ್ವಿನ್ನ ಇಷ್ಯತೇ'– ವಿದ್ಯಮಾನಾರ್ಥಕ ವಿದ್ ಧಾತುವಿನ ರೂಪವು 'ವಿನ್ನ' ಎಂದಾಗುವುದು ಎಂದು ಶಬ್ದಶಾಸ್ತ್ರಜ್ಞರ ವಚನವಿದೆ.

1. ಮೂಲದಲ್ಲಿ ವೇದಾಃ, ಶ್ರುತಯಃ ಎಂದು ಬಹುವಚನಾಂತದ ಪ್ರಯೋಗವಿದ್ದು ಆಮ್ನಾಯಃ ಎನ್ನುವದನ್ನು ಮಾತ್ರ ಏಕವಚನಾಂತವಾಗಿ ಪ್ರಯೋಗಿಸಿರುವುದು ಯಾವ ಕಾರಣದಿಂದ ಎಂಬ ಸಂದೇಹವನ್ನು ಪರಿಹರಿಸುವರು ಈ ಏಕವಚನವು ಬಹುವಚನಾರ್ಥದಲ್ಲಿದೆ ಎಂದು. 'ಸುಪಾಂ ಸುಲುಕ್‌ಪೂರ್ವಸವರ್ಣಾಚ್ಛೇಯಾಡಾಡ್ಯಾಯಾಜಾಲಃ' ಪಾ.ಸೂ.7.1.39. ಎಂಬ ಸೂತ್ರದ ನಿಯಮಾನುಸಾರವಾಗಿ ವಿಭಕ್ತಿಪ್ರತ್ಯಯಗಳಿಗೆ ಸು,ಲುಕ್ ಮುಂತಾದವುಗಳು ಆದೇಶಗೊಳ್ಳುವವು. ಪನ್ಥಾನಃ ಎನ್ನುವ ಬದಲು 'ಋಜವಃ ಸಂತು ಪಂಥಾಃ' ಎಂದು ಸತ್‌ಪ್ರಯೋಗವು ಪ್ರಸಿದ್ಧವಾಗಿದೆ. ಇದರಂತೆ ಆಮ್ನಾಯಾಃ ಎನ್ನುವಲ್ಲಿನ ಜಸ್(ಪ್ರಥಮಾ ಬಹುವಚನ) ಪ್ರತ್ಯಯಕ್ಕೆ ಸುಪ್ (ಪ್ರಥಮಾ ಏಕವಚನ) ಪ್ರತ್ಯಯವು ಆದಿಷ್ಟವಾಗಿದೆ ಎಂದು ಭಾವ.

ಸಿದ್ಧವಾದುದಕ್ಕೆ ಪ್ರಾಪ್ತವಾಗುವುದು. ಯಾರು ಯಾವುದನ್ನು ನಿರ್ಮಿಸುವನೋ ಆತನು ಅದನ್ನು ಕಂಡವನು' ಎಂದು ಹೇಳುವುದಿಲ್ಲ. ಆದುದರಿಂದ ಅದು (ಸ ಇಮಂ ಅಪಶ್ಯತ್ ಎನ್ನುವುದು ಬೇರೆ ಯಾವುದೇ ವಿಧದಿಂದ ಸರಿಹೊಂದದೇ ಇರುವುದರಿಂದಲೂ) ನಿತ್ಯತ್ವವು ಸಿದ್ಧ ಎಂದು[1].

## -: ಅಪೌರುಷೇಯತ್ವದ ಇತರ ಸಂದೇಹಗಳ ಪರಿಹಾರ-

## ॥ ವರ್ಣ-ಪದ-ವಾಕ್ಯಗಳ ನಿತ್ಯತ್ವ ಸಮರ್ಥನೆ ॥

ವರ್ಣಗಳು ನಿತ್ಯವಾದರೂ ವೇದವು ನಿತ್ಯವಾಗಲಾರದು. ವೇದ ಅಂದರೆ ಪದಪುಂಜ. ಪದಗಳು ವಾಚಕಗಳಾಗಬೇಕಾದಲ್ಲಿ ಅದರದ್ದೇ ಆದ ಆನುಪೂರ್ವಿಯು ಬೇಕು. ಆನುಪೂರ್ವಿಯನ್ನು ಆದರಿಸದಿದ್ದಲ್ಲಿ ರಾಜಾ ಜಾರ ಈ ಪದಗಳು ವಿಭಿನ್ನಾರ್ಥಕಗಳಾಗದಿರಬೇಕಾದೀತು. ಆನುಪೂರ್ವಿಯಾದರೋ ಅನಿತ್ಯ , ನಮ್ಮ ನಿಮ್ಮ ಉಚ್ಚಾರಣೆಯಿಂದ ಪ್ರಕಟಗೋಳ್ಳುವುದು. ಹಾಗಾಗಿ ವೇದವು ನಿತ್ಯವಾಗಲಾರದು. ಪ್ರಳಯಕಾಲದಲ್ಲಿ ಸರ್ವವಸ್ತುಗಳ ನಾಶವಾದಾಗ ವೇದದ ಆನುಪೂರ್ವಿಯನ್ನು ಸಂರಕ್ಷಿಸುವವರು ಯಾರು? ವರ್ಣಗಳು ನಿತ್ಯವಾದಲ್ಲಿ ನಿರಂತರ ಅವುಗಳು ಗೋಚರಿಸಲಿ ಇತ್ಯಾದಿ ಸಂದೇಹಗಳ ವಿವೇಚನೆಯು ಇಲ್ಲಿದೆ. ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ರುವ ಆನುಪೂರ್ವಿಯನ್ನು ಆ ಹರಿಯೇ ಸಂರಕ್ಷಿಸುವನು . ವರ್ಣಗಳು ನಿತ್ಯವಾದರೂ ಅನಿತ್ಯವಾದ ಧ್ವನಿಯಿಂದ ವ್ಯಂಗವಾಗುವ ವರ್ಣಗಳು ನಿರಂತರ ಗೋಚರವಾಗಿರಬೇಕೆಂದಿಲ್ಲ ಇತ್ಯಾದಿ ವಾದದ ಪರಿಯನ್ನು ಕಾಣಬಹುದು.

**ವೇದಾದಿಗಳು ಈಶ್ವರ ಬುದ್ಧಿಸ್ಥವಾದುದರಿಂದ ನಿತ್ಯ**

**ನ ಚ ವರ್ಣಪದಾದೀನಾಮನಿತ್ಯತ್ವಂ ವಕ್ತುಂ ಯುಕ್ತಮ್, ಸರ್ವಜ್ಞತ್ವಾದೀಶ್ವರಸ್ಯ, ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್ ।**

---

1. ಶಾಕುಂತಲ ನಾಟಕವನ್ನು ರಚಿಸಿದ ಕಾಳಿದಾಸನನ್ನು 'ಶಾಕುಂತಲವನ್ನು ಕಂಡವ' ಎಂದು ಲೋಕದಲ್ಲಿ ವ್ಯವಹರಿಸುವದಿಲ್ಲ. ವಿಶ್ವಾಮಿತ್ರರನ್ನು ಗಾಯತ್ರಿದ್ರಷ್ಟಾ ಎನ್ನುವರು. ಅದನ್ನು ಕಾಣಬೇಕಾದಲ್ಲಿ ಅದರ ಅಸ್ತಿತ್ವ ಆ ಮೊದಲೇ ಇರಬೇಕು. ಈಶ್ವರನು ವೇದವನ್ನು ಕಂಡವನು ಎಂದು ಶ್ರುತಿ-ಸ್ಮೃತಿಗಳು ಹೇಳುತ್ತಿರುವಾಗ ಆ ಮೊದಲೇ ವೇದಗಳು ಇರಬೇಕಲ್ಲವೇ ? ಆದುದರಿಂದ ವೇದಗಳ ನಿತ್ಯತ್ವವು ಸಿದ್ಧವಾಯಿತು ಎಂದು ಭಾವ.

ವರ್ಣ ಪದಾದಿಗಳಿಗೆ ಅನಿತ್ಯತ್ವವನ್ನು ಹೇಳುವುದು ತರವಲ್ಲ, ಈಶ್ವರನಿಗೆ ಸರ್ವಜ್ಞತ್ವವನ್ನು ಒಪ್ಪಿರುವುದರಿಂದ, ಆತನ ಬುದ್ಧಿಯಲ್ಲಿ ನಿರಂತರ ಪ್ರತೀಯಮಾನವಾಗುವುದರಿಂದ.

**ಅಸ್ತು ನಿತ್ಯವಿನ್ನತ್ವಾದಿಕಂ, ತದಪ್ಯಾಪ್ರಲಯಮೇವ, ತಾವತಾಽಪಿ ಅಸಾಧಾರಣೋಕ್ತ್ಯಾದಿಸಮ್ಭವಾತ್ । ತತೋ 'ವೇದಾಃ ಪ್ರಲಯೇ ವಿನಶ್ಯನ್ತಿ, ಸರ್ಗೇ ಪುನರನ್ಯೇ ಜಾಯನ್ತೇ' ಇತ್ಯಙ್ಗೀಕಾರೇ ನ ಕೋಽಪಿ ವಿರೋಧ ಃ? ಇತ್ಯತ ಆಹ 'ನ ಚ' ಇತಿ । ವರ್ಣಾನಾಂ ಪದಾನಾಂ ಚ । ಆದಿಪದೇನ ವಾಕ್ಯಾನಾಂ ಗ್ರಹಣಮ್ । ವರ್ಣಾದೀನಾಮಿತ್ಯೇವ ಸಿದ್ಧೇ, ಯತ್ಪದಾದಿ-ಗ್ರಹಣಂ ತದ್ 'ವರ್ಣಾನಾಂ ಕೌಟಸ್ಥ್ಯಾಽಭಾವೋಽನಿತ್ಯತ್ವಂ, ಪದಾದೀನಾಂ ತು ಕ್ರಮಾದಿವ್ಯತ್ಯಯಃ' ಇತಿ ಸೂಚಯಿತುಮ್ । ಅನಿತ್ಯತ್ವಂ 'ಪ್ರಲಯೇ' ಇತಿ ಶೇಷಃ । ತಥಾ ಸರ್ಗೇ ಜನ್ಮಾಪಿ ಗ್ರಾಹ್ಯಮ್ । ಏತೇನ 'ನಿತ್ಯಾ ವೇದಾಃ' ಇತ್ಯುಕ್ತ್ವಾ ಯತ್ಪುನಃ 'ಸಮಸ್ತಾಶ್ಚ ಶಾಶ್ವತಾಃ' ಇತ್ಯುಕ್ತಂ ತತ್ ಪ್ರಕಾರಾನ್ತರೇಣ ವ್ಯಾಖ್ಯಾತಂ ಭವತಿ - ನ ಕೇವಲಂ ವರ್ಣಮಾತ್ರಂ, ನಾಪಿ ಪದಮಾತ್ರಂ, ಕಿಂತು ಸಮಸ್ತಾಶ್ಚ ಯಥಾ ಯೋಗಂ ಶಾಶ್ವತಾಃ । 'ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ' ಇತಿ । ಕುತೋ ನ ಯುಕ್ತಮ್? ಇತ್ಯತ ಆಹ 'ಸರ್ವಜ್ಞತ್ವಾತ್' ಇತಿ । ತದ್ಬುದ್ಧೌ- ತನ್ಮನಸಿ । ಏತಚ್ಚೋತ್ತರಗ್ರಂಥೇ ಸ್ಪಷ್ಟಂ ಭವಿಷ್ಯತಿ ।**

**ಅನು.-** 'ನಿತ್ಯವಿನ್ನತ್ವಾತ್'.... ಇದೇ ಮುಂತಾದವು ಇರಲಿ, ಅದಾದರೊ (ನಿತ್ಯವಿನ್ನತ್ವ ಮುಂತಾವಾದರೋ) ಪ್ರಲಯ ಪರ್ಯಂತ ಮಾತ್ರವೇ (ವೇದಗಳು ಇರುವವು), ಇಷ್ಟರಿಂದಲೂ ಸಹ ಅಸಾಧಾರಣೋಕ್ತಿಯು ಯೋಗ್ಯವೇ ಆಗುತ್ತದೆ[1]. ಆದುರಿಂದ ವೇದಗಳು ಪ್ರಲಯ ಕಾಲದಲ್ಲಿ ನಾಶವನ್ನು

---

1. ವೇದಗಳು ನಿತ್ಯವಾಗಿರುವುದರಿಂದ ಅವುಗಳನ್ನು ವೇದ, ಆಮ್ನಾಯ ಇತ್ಯಾದಿಯಾಗಿ ಕರೆಯಲಾಗುವುದು, ಎನ್ನುವ ವಾದವನ್ನು, ವೇದಗಳಿಗೆ ಪ್ರಲಯ ಪರ್ಯಂತ ಅಸ್ತಿತ್ವವನ್ನು ಒಪ್ಪುವುದರಿಂದಲೂ ಸಂಯೋಜಿಸಲು ಶಕ್ಯವಿದೆ. ಘಟಾದಿ ಇತರ ಪದಾರ್ಥಗಳಿಗೆ ಪ್ರಲಯ ಪರ್ಯಂತ ಅವಸ್ಥಾನವಿಲ್ಲ ವೇದಗಳಿಗೆ ಇದೆ. ತನ್ನಿಮಿತ್ತವಾಗಿ ಉಪನಿಷದಾದಿಗಳನ್ನು 'ವೇದ' ಮುಂತಾದ ಶಬ್ದಗಳಿಂದ ವಿಶೇಷವಾಗಿ ವ್ಯವಹರಿಸಲಾಗುವುದು ಎಂದು ಪ್ರಶ್ನದ ಭಾವ.

ಹೊಂದುತ್ತವೆ. ಪುನಃ ಸೃಷ್ಟಿ ಕಾಲದಲ್ಲಿ ಬೇರೆ (ವೇದಗಳು) ಸೃಷ್ಟವಾಗುವವು, ಎಂದು ಒಪ್ಪುವುದರಿಂದ ಯಾವ ವಿರೋಧವೂ ಇಲ್ಲ. ಆದುದರಿಂದ ಹೇಳುತ್ತಾರೆ 'ನ ಚ' ಎಂದು. ವರ್ಣಗಳಿಗೆ, ಪದಗಳಿಗೂ ಸಹ. 'ವರ್ಣಾದೀನಾಂ' ಎಂದಷ್ಟೇ (ಹೇಳಿದರೂ) ಆದಿಪದದಿಂದ ವಾಕ್ಯಗಳ ಪರಿಗ್ರಹಣವು (ಅಭಿಮತಾರ್ಥವು) ಸಿದ್ಧವಾಗುತ್ತಿರಲು, ಯಾವ 'ಪದಾದಿ' ಎಂದು (ಪದಶಬ್ದವನ್ನು) ಗ್ರಹಣ ಮಾಡಿದ್ದು, ಅದು ವರ್ಣಗಳಿಗೆ ಕೂಟಸ್ಥ ನಿತ್ಯತ್ವದ ಅಭಾವವೇ ಅನಿತ್ಯತ್ವ, ಪದಾದಿಗಳಿಗಾದರೋ ಕ್ರಮಾದಿ ವ್ಯತ್ಯಾಸವೇ (ಅನಿತ್ಯತ್ವ) ಎಂದು ಸೂಚಿಸಲು[1]. ಅನಿತ್ಯತ್ವಂ (ಎನ್ನುವ ಮೂಲದ ಪದದೊಡನೆ) 'ಪ್ರಲಯೇ' ಎಂದು ಶೇಷಪೂರಣವನ್ನು ಮಾಡಿಕೊಳ್ಳಬೇಕು. ಹಾಗೆಯೇ ಸೃಷ್ಟಿಕಾಲದಲ್ಲಿ ಸೃಷ್ಟಿಯನ್ನು ಪರಿಗ್ರಹಿಸಬೇಕು. ಹೀಗೆ ಹೇಳಿದ್ದರಿಂದ 'ನಿತ್ಯಾಃ ವೇದಾ' ಎಂದು ಹೇಳಿ ಪುನಃ 'ಸಮಸ್ತಾಶ್ಚ ಶಾಶ್ವತಾಃ' ಎಂದು ಹೇಳಿರುವುದನ್ನು ಇನ್ನೊಂದು ರೀತಿಯಲ್ಲಿ ವ್ಯಾಖ್ಯಾನಿಸಿದಂತಾಯಿತು – ಕೇವಲ ವರ್ಣಗಳು ಮಾತ್ರವಲ್ಲ, ಮತ್ತು ಕೇವಲ ಪದಗಳು ಮಾತ್ರವಲ್ಲ, ಮತ್ತೆ ಎಲ್ಲ ವೇದವೂ ಯಥಾಯೋಗ್ಯವಾಗಿ ನಿತ್ಯವಾಗಿದೆ[2]. 'ಸರ್ಗಕಾಲದಲ್ಲಿ ಉತ್ಪನ್ನವಾಗುವುದಿಲ್ಲ, ಪ್ರಲಯಕಾಲದಲ್ಲಿ

1. ಮೂಲದಲ್ಲಿ 'ವರ್ಣಪದಾದೀನಾಂ' ಎಂದು ಹೇಳಲಾಗಿದೆ. ಆದಿ ಪದದಿಂದ ವಾಕ್ಯವನ್ನು ಸಂಗ್ರಹಿಸಬೇಕು ಎಂದು ತಿಳಿಸಲಾಗಿದೆ. ಆದರೆ ಮೂಲಕಾರರು ಕೇವಲ 'ವರ್ಣಾದೀನಾಂ' ಎಂದಿಷ್ಟೇ ಹೇಳಿದ್ದಲ್ಲಿ ಈ 'ಆದಿ'ಪದದಿಂದ ಪದ ಮತ್ತು ವಾಕ್ಯಗಳನ್ನು ಸಂಗ್ರಹಿಸಲು ಶಕ್ಯವಿರುವಾಗ 'ಪದ' ಎಂಬ ಪದವನ್ನು ಪ್ರತ್ಯೇಕವಾಗಿ ಬಳಸಿದ ಉದ್ದೇಶವೇನು ? ಎನ್ನುವುದನ್ನು ಟೀಕೆಯಲ್ಲಿ ಸ್ಪಷ್ಟಪಡಿಸಲಾಗಿದೆ. ವರ್ಣಗಳ ನಿತ್ಯತ್ವವೇ ಬೇರೆಯ ಬಗೆಯದು, ಪದ-ವಾಕ್ಯಗಳ ನಿತ್ಯತ್ವವು ಬೇರೆಯ ಬಗೆಯದು, ಅಂದರೆ- ವರ್ಣಗಳಲ್ಲಿನ ನಿತ್ಯತ್ವವು ಕೂಟಸ್ಥ ನಿತ್ಯತ್ವ ಆಕಾಶದಲ್ಲಿನ ನಿತ್ಯತ್ವದಂತೆ. ಪದವಾಕ್ಯಗಳ ನಿತ್ಯತ್ವವು ಆತರಹದ ನಿತ್ಯತ್ವವಲ್ಲ ಕೇವಲ ಆನುಪೂರ್ವಿಯ ನಿತ್ಯತ್ವ. ಹೀಗೆ ಬೇರೆ ಬೇರೆ ತರಹದ ನಿತ್ಯತ್ವವನ್ನು ಸೂಚಿಸಲು ಮೂಲಕಾರರು ವರ್ಣ ಎಂಬ ಪದದೊಡನೆ 'ಪದ' ಎಂಬ ಪದವನ್ನು ಪರಿಗ್ರಹಿಸಿರುವರು ಎಂದು ಭಾವ.

2. 'ಹಿಂದೆ ನಿತ್ಯಾ ವೇದಾಃ ಸಮಸ್ತಾಶ್ಚ' ಎನ್ನುವ ಮೂಲವಾಕ್ಯವನ್ನು ವ್ಯಾಖ್ಯಾನಿಸುವಾಗ, ವಿಧಿವಾಕ್ಯಗಳು, ನಿಷೇಧವಾಕ್ಯಗಳೂ ಎಲ್ಲ ಬಗೆಯ ವೇದವಾಕ್ಯಗಳು ನಿತ್ಯ ಎಂದು ತಿಳಿಸಲಾಗಿತ್ತು. ಪ್ರಕೃತ ಕೇವಲ ಎಲ್ಲ ಬಗೆಯ ವೇದಗಳು ಮಾತ್ರ ನಿತ್ಯ ಎಂದಲ್ಲ ಮತ್ತೆ , ವೇದದ ವರ್ಣಗಳು ಕೂಟಸ್ಥನಿತ್ಯಗಳು, ಪದ-ವಾಕ್ಯಗಳು ಆನುಪೂರ್ವಿಯಿಂದಲೂ ನಿತ್ಯ ಎಂದು ವ್ಯಾಖ್ಯಾನಿಸಿದಂತಾಯಿತು ಎಂದು ಭಾವ.

ನಾಶವನ್ನು ಹೊಂದುವದಿಲ್ಲ'ಎಂದು[1]. (ವೇದಗಳು ಅನಿತ್ಯವಲ್ಲ ಎನ್ನುವುದು) ಏಕೆ ಯುಕ್ತವಲ್ಲ ? ಆದುದರಿಂದ ಉತ್ತರಿಸುತ್ತಾರೆ 'ಸರ್ವಜ್ಞತ್ವಾತ್' ಎಂದು. **ತದ್‌ಬುದ್ಧೌ** - ಅವನ (ಈಶ್ವರನ) ಮನದಲ್ಲಿ (ನಿರಂತರವಾಗಿ ಪ್ರತೀಯಮಾನವಾದ್ದರಿಂದ). ಇದನ್ನಾದರೋ ಮುಂದಿನ ಭಾಗದಲ್ಲಿ ಸ್ಪಷ್ಟಪಡಿಸಲಾಗುವುದು.

**ವೇದನಿತ್ಯತ್ವವನ್ನು ತಿಳಿಸುವ ಪುರಾಣವಾಕ್ಯಗಳು ಅನ್ಯಾರ್ಥಕಗಳೇ?**

**ನನು, ಈಶ್ವರಬುದ್ಧೌ ಸರ್ವದಾ ಪ್ರತೀಯಮಾನತ್ವಂ ನಾಮ ಈಶ್ವರೇಣ ಸರ್ವದಾ ವರ್ತಮಾನತಯಾಽನುಭೂಯಮಾನತ್ವಂ ವಿವಕ್ಷಿತಂ, ತಸ್ಯೈವ ಉಕ್ತಾರ್ಥಸಾಧಕತ್ವಾತ್, ತಚ್ಚಾಸಿದ್ಧಮ್ । ತಥಾ ಹಿ- 'ವಿಷ್ಣು ಬುದ್ಧಿಗಾಃ' 'ಈಶ್ವರಬುದ್ಧಿಸ್ಥಿತಾಃ ಸದಾ' ಇತಿ, ಪುರಾಣವಾಕ್ಯಾದ್ವಾ ತತ್‌ಸಿದ್ಧಿಃ, ಸರ್ವಜ್ಞತ್ವಯುಕ್ತ್ಯಾ ವಾ ? ನಾಽದ್ಯಃ, ತಸ್ಯಾನ್ಯಥಾಸಿದ್ಧೇಃ, ವೇದಾನುಭವ-ಜನಿತಸಂಸ್ಕಾರಸ್ಯ ಬುದ್ಧಿಗತತ್ವಮಾತ್ರೇಣ 'ಬುದ್ಧಿಗಾಃ' ಇತ್ಯುಕ್ತಿಸಮ್ಭವಾತ್ ।**

**ನಚೈವಂ ಲಕ್ಷಣಾಪ್ರಸಙ್ಗೋ ದೋಷಃ । ವೇದಪದಸ್ಯ ತದನುಭವಾರ್ಥತ್ವಾಙ್ಗೀಕಾರೇಽಪಿ ತತ್‌ಸಾಮ್ಯಾತ್ । ವೇದಾನಾಮೇವ ಸಾಕ್ಷಾನ್ಮನೋಗತತ್ವಾಸಮ್ಭವಾತ್ । ಏವಮಙ್ಗೀಕಾರೇ ಜನ್ಮವಾಕ್ಯಾನ್ಯಪ್ಯ-ನುಗ್ರಹೀತಾನಿ ಭವನ್ತಿ । ಅತ ಏವ 'ಬುದ್ಧಿಗಾ' ಇತ್ಯಸ್ಯ 'ಜ್ಞಾನವಿಷಯಾ' ಇತಿ ವ್ಯಾಖ್ಯಾನಮಪ್ಯಯುಕ್ತಮ್ । ನ ಚ ಲಾಕ್ಷಣಿಕಪ್ರಯೋಗೇ ಪ್ರಯೋಜನಂ ವಾಚ್ಯಮ್ । ನಷ್ಟೇಽಪಿ ಘಟಾದೌ 'ಘಟೋ ದೇವದತ್ತಸ್ಯ ಬುದ್ಧೌ ವರ್ತತೇ' ಇತ್ಯಾದಿ ಪ್ರಯೋಗದರ್ಶನೇನ ರೂಢಲಕ್ಷಣತ್ವಾತ್ । ನ ದ್ವಿತೀಯಃ । ಘಟಾದೀನಾಮಪಿ ತಥಾತ್ವ ಪ್ರಾಪ್ತೇಃ । ವಿದ್ಯಮಾನಾರ್ಥಾನನುಭವೇ ಹಿ ಸರ್ವಜ್ಞತ್ವಹಾನಿಃ ಸ್ಯಾತ್ ।**

ಸರಿ, 'ಈಶ್ವರನ ಬುದ್ಧಿಯಲ್ಲಿ ನಿರಂತರ (ವೇದಗಳು)

---

1. ವರ್ಣದಲ್ಲಿ ನಿತ್ಯತ್ವವು ಒಂದು ಬಗೆ, ಪದವಾಕ್ಯಗಳಲ್ಲಿನ ನಿತ್ಯತ್ವವು ಮತ್ತೊಂದು ಬಗೆ. ಆದರೆ ಎಲ್ಲದರಲ್ಲಿಯೂ ಅನುಗತವಾದ ನಿತ್ಯತ್ವವು ಯಾವುದು? ಉತ್ತರಿಸುತ್ತಾರೆ-ಪ್ರಳಯದಲ್ಲಿ ನಾಶವಿಲ್ಲದಿರುವಿಕೆ, ಸರ್ಗದಲ್ಲಿ ಉತ್ಪತ್ತಿಯು ಇಲ್ಲದಿರುವಿಕೆಗಳೇ ಅನುಗತ ನಿತ್ಯತ್ವ ಎಂದು ಭಾವ.

ಪ್ರತೀಯಮಾನವಾಗಿದೆ' ಎಂದರೆ 'ಈಶ್ವರನು ಸರ್ವದಾ (ವೇದಗಳ) ಇರುವಿಕೆಯನ್ನು ಅನುಭವಿಸುತ್ತಿರುವನು' ಎಂದು ವಿವಕ್ಷಿಸಲಾಗಿದೆ, ಹೀಗೆ ವಿವಕ್ಷಿಸುವುದೇ ಹಿಂದೆ ತಿಳಿಸಿದ ಪ್ರಮೇಯದ ಸಾಧಕವಾಗುವುದರಿಂದ[1]. ಅದಾದರೋ ಸಿದ್ಧವಾಗಿಲ್ಲ. ಏಕೆಂದರೆ 'ವಿಷ್ಣು ಬುದ್ಧಿಗಾಃ' 'ಈಶ್ವರ ಬುದ್ಧಿಸ್ಥಿತಾಃ ಸದಾ' ಎನ್ನುವ ಪುರಾಣವಾಕ್ಯಗಳಿಂದ ಅದು ಸಿದ್ಧವಾಗುವುದೋ ಅಥವಾ ಸರ್ವಜ್ಞತ್ವ ಯುಕ್ತಿಯಿಂದಲೋ [2]? ಮೊದಲ ಪಕ್ಷವಾಗದು. ಅವುಗಳು (ಆ ಪುರಾಣವಾಕ್ಯಗಳು) ಅನ್ಯಥಾಸಿದ್ಧವಾಗಿರುವುದರಿಂದ. ವೇದದ ಅನುಭವದಿಂದ ಪ್ರಾಪ್ತವಾದ ಸಂಸ್ಕಾರವು (ಈಶ್ವರನ) ಬುದ್ಧಿಯಲ್ಲಿದೆ ಎಂದು ಹೇಳುವುದರಿಂದಲೇ 'ಬುದ್ಧಿಗಾಃ' ಎನ್ನುವ ಉಕ್ತಿಯನ್ನು ಯೋಜಿಸಲು ಅವಕಾಶವಿರುವುದರಿಂದ[3].

(ಪುರಾಣವಾಕ್ಯಗಳನ್ನು ಹೀಗೆ ವ್ಯಾಖ್ಯಾನಿಸಿದಲ್ಲಿ ವಾಕ್ಯಕ್ಕೆ) ಲಕ್ಷಣಾರ್ಥವನ್ನು

---

1. 'ಪ್ರಲಯಕಾಲದಲ್ಲಿ ವೇದಗಳಿಗೆ ನಾಶವಿರುವುದರಿಂದ ವೇದಗಳು ನಿತ್ಯ ಎನ್ನಲು ಶಕ್ಯವಿಲ್ಲ' ಎಂಬ ಸಂದೇಹಕ್ಕೆ 'ಈಶ್ವರ ಬುದ್ಧಿಯಲ್ಲಿ ವೇದಗಳು ಇರುವುದರಿಂದ ಪ್ರಲಯಕಾಲದಲ್ಲೂ ನಾಶವಿಲ್ಲ' ಎಂದು ಸಮಾಧಾನವನ್ನು ತಿಳಿಸಲಾಗಿತ್ತು. ವೇದಗಳು ಈಶ್ವರನ ಬುದ್ಧಿಯಲ್ಲಿವೆ ಎಂದರೆ 'ಈಶ್ವರನು ವೇದಗಳು ನಿತ್ಯವಾಗಿವೆ' ಎಂದು ತನ್ನ ಬುದ್ಧಿಯಿಂದ ತಿಳಿದಿರುವನು ಎಂದು ಅಭಿಪ್ರಾಯವನ್ನು ಒಪ್ಪಬೇಕು. ಹೀಗೆ ಒಪ್ಪಿದಲ್ಲಿ ಮಾತ್ರ 'ವೇದಗಳು ನಿತ್ಯ' ಎಂಬುವ ಪ್ರಮೇಯವು ಸಿದ್ಧವಾಗುವುದು. ಕಾಳಿದಾಸಾದಿಗಳ ಕಾವ್ಯಾದಿಗಳನ್ನು ಬಾಯಿಪಾಠಮಾಡಿದ ವ್ಯಕ್ತಿಯ ಬುದ್ಧಿಯಲ್ಲಿ ಕಾವ್ಯಾದಿಗಳು ಇದ್ದ ಮಾತ್ರಕ್ಕೆ ಕಾವ್ಯಕ್ಕೆ ನಿತ್ಯತ್ವವು ಹೇಗೆ ಸಿದ್ಧಿಸದೋ ಹಾಗೆ ವೇದಗಳ ಮಂತ್ರಗಳು ಈಶ್ವರನ ಬುದ್ಧಿಯಲ್ಲಿರುವುದರಿಂದ ವೇದದ ನಿತ್ಯತ್ವವು ಸಿದ್ಧವಾಗದು ಎಂದು ಭಾವ.

2. 'ವೇದಗಳನ್ನು ನಿತ್ಯ' ಎಂದು ಈಶ್ವರನು ಸಾಕ್ಷಾತ್ಕರಿಸಿಕೊಂಡಿದ್ದಾನೆ ಎನ್ನುವ ಪ್ರಮೇಯವನ್ನು, 'ಶಾಶ್ವತಾ ವಿಷ್ಣುಬುದ್ಧಿಗಾಃ' ಇತ್ಯಾದಿ ಪುರಾಣವಾಕ್ಯಗಳಿಂದ ಸಾಧಿಸಲಾಗುವುದೋ ಅಥವಾ 'ಈಶ್ವರನು ಸರ್ವಜ್ಞನಾದುದರಿಂದ' ಎಂಬ ಯುಕ್ತಿಯಿಂದ ಸಾಧಿಸಲಾಗುವುದೋ ? ಎನ್ನುವುದು ಪೂರ್ವಪಕ್ಷಿಯ ಭಾವ.

3. 'ವೇದಾಃ ಶಾಶ್ವತಾಃ, ವಿಷ್ಣು ಬುದ್ಧಿಗಾಃ' ಇತ್ಯಾದಿ ಪುರಾಣವಾಕ್ಯಗಳು 'ವೇದಾಃ-ವೇದಾನುಭವಜನಿತ ಸಂಸ್ಕಾರಗಳು ವಿಷ್ಣು ಬುದ್ಧಿಗಾಃ- ವಿಷ್ಣುವಿನ ಬುದ್ಧಿಯಲ್ಲಿವೆ ಆದುದರಿಂದ ಶಾಶ್ವತಾಃ- ಶಾಶ್ವತವಾಗಿದೆ' ಎಂದು ತಿಳಿಸುತ್ತಿವೆ ಎಂದೂ ವ್ಯಾಖ್ಯಾನಿಸುವ ಅವಕಾಶವಿದೆ ಎಂದು ಪೂರ್ವಪಕ್ಷಿಯ ಅಭಿಪ್ರಾಯ.

ಹೇಳಿದ ದೋಷವಿಲ್ಲ[1]. 'ವೇದ' ಪದಕ್ಕೆ ಅದರ ಅನುಭವ ಎಂಬ ಅರ್ಥವನ್ನು ಅಂಗೀಕರಿಸಿದರೂ ಸಹ ಅಮುಖ್ಯಾರ್ಥವನ್ನು ಒಪ್ಪುವುದು ಸಮಾನವಾದುದರಿಂದ. 'ವೇದಗಳೇ ಸಾಕ್ಷಾತ್ತಾಗಿ ಮನಸ್ಸಿನಲ್ಲಿ ಇವೆ' ಎನ್ನುವುದು ಅಸಂಭವಾವಿತವಾದುದರಿಂದ[2]. ಹೀಗೆ ಒಪ್ಪುವುದರಿಂದ ಜನ್ಮವಾಕ್ಯಗಳೂ ಅನುಗ್ರಹೀತವಾದಂತಾಗುವುದು[3]. ಆದುದರಿಂದಲೇ 'ಬುದ್ಧಿಗಾಃ ' ಎನ್ನುವುದಕ್ಕೆ 'ಜ್ಞಾನಕ್ಕೆ ವಿಷಯವಾಗಿದೆ' ಎಂಬ ವ್ಯಾಖ್ಯಾನವೂ ಸಹ ಯುಕ್ತವಾಗದು[4]. ಲಾಕ್ಷಣಿಕ

---

1. 'ವಿಷ್ಣು ಬುದ್ಧಿಗಾಃ' ವೇದಗಳು ವಿಷ್ಣುವಿನ ಮನದಲ್ಲಿವೆ ಎನ್ನುವುದು ವಾಚ್ಯಾರ್ಥ ಅದನ್ನು ಒಪ್ಪದೇ 'ವೇದ ಜನಿತ ಸಂಸ್ಕಾರವು ವಿಷ್ಣುವಿನ ಬುದ್ಧಿಯಲ್ಲಿದೆ' ಎಂದು ಅರ್ಥೈಸಿದಲ್ಲಿ ಲಾಕ್ಷಣಿಕ ಪ್ರಯೋಗ ಎಂದು ಅಮುಖ್ಯಾರ್ಥವನ್ನು ಒಪ್ಪಿದ ದೋಷವು ಪೂರ್ವಪಕ್ಷಿಗೆ ಪ್ರಾಪ್ತವಾಯಿತು ಎಂದು ಶಂಕಿಸಲು ಅವಕಾಶವಿಲ್ಲ ಎಂದು ಭಾವ.

2. 'ವೇದಾಃ ವಿಷ್ಣುಬುದ್ಧಿಗಾಃ' ಎನ್ನುವುದಕ್ಕೆ 'ವೇದಾನುಭವಜನಿತಸಂಸ್ಕಾರವು ವಿಷ್ಣುವಿನ ಬುದ್ಧಿಗತವಾಗಿದೆ' ಎಂದು ಅರ್ಥೈಸುವುದು ಹೇಗೆ ಅಮುಖ್ಯಾರ್ಥವೋ ಹಾಗೆ 'ವೇದಗಳು ನಿತ್ಯ ಎಂಬ ಅನುಭವವು ವಿಷ್ಣುಬುದ್ಧಿಗ' ಎಂದು ಅರ್ಥೈಸುವುದು ಅಮುಖ್ಯಾರ್ಥವನ್ನೇ ಒಪ್ಪಿದಂತಾಗುವುದು, ಏಕೆಂದರೆ ಆ ವಾಕ್ಯಕ್ಕೆ ಮುಖ್ಯಾರ್ಥ 'ವೇದವೇ ಸಾಕ್ಷಾತ್ತಾಗಿ ವಿಷ್ಣು ಬುದ್ಧಿಗ' ಎನ್ನುವುದು. ಆದರೆ ಈ ಮುಖ್ಯಾರ್ಥವನ್ನು ಒಪ್ಪಲು ಶಕ್ಯವಿಲ್ಲ. ಅಮೂರ್ತವಾದ ವೇದವು ಬುದ್ಧಿಯಲ್ಲಿ ಆಶ್ರಯವನ್ನು ಹೊಂದಲಾರದು. ಆದುದರಿಂದ ಉಭಯರಿಗೂ ವೇದಶಬ್ದಕ್ಕೆ ಅಮುಖ್ಯಾರ್ಥಗ್ರಹಣದ ದೋಷವು ಸಮವಾಗಿದೆ ಎಂದು ಭಾವ.

3. 'ವಿಷ್ಣು ಬುದ್ಧಿಗಾಃ' ಎನ್ನುವ ವಾಕ್ಯಕ್ಕೆ ವೇದಾನುಭವಜನಿತಸಂಸ್ಕಾರವು ವಿಷ್ಣುವಿನ ಬುದ್ಧಿಯಲ್ಲಿದೆ ಎಂದು ಅರ್ಥೈಸುವುದರಿಂದ 'ವೇದಗಳು ಶಾಶ್ವತವಲ್ಲ' ಎಂದು ಒಪ್ಪಿದ್ದರಿಂದ 'ಋಚಃ ಸಾಮಾನಿ ಜಜ್ಞಿರೇ' ಎನ್ನುವ ವೇದ ವಾಕ್ಯಗಳಿಗೆ ಯಥಾಶ್ರುತಾರ್ಥವನ್ನು ಹೇಳಿದಂತಾಗುವುದು. ಹಿಂದೆ 'ಜಜ್ಞಿರೇ' ಎನ್ನುವುದಕ್ಕೆ 'ಪ್ರಕಟಗೊಂಡವು' ಎಂದು ಅರ್ಥೈಸಿ ಅಮುಖ್ಯಾರ್ಥವನ್ನು ಸಿದ್ಧಾಂತಿಗಳು ಹೇಳಿದ್ದರು. ಈಗ ಮುಖ್ಯಾರ್ಥವನ್ನೇ ಒಪ್ಪುವುದರಿಂದ ಅವು ಅನುಗ್ರಹೀತವಾದಂತೆ ಎಂದು ಪೂರ್ವಪಕ್ಷಿಯ ಭಾವ.

4. ಸಿದ್ಧಾಂತಿಗಳು 'ಬುದ್ಧಿಗಾಃ' ಎನ್ನುವುದಕ್ಕೆ ಮನಸಿಸ್ಥಿತಾಃ ಎಂದು ಅರ್ಥೈಸಿದ್ದರು. ಆದರೆ ಈಗ ಬುದ್ಧಿ ಎನ್ನುವದಕ್ಕೆ ಜ್ಞಾನ ಎಂದು ಅರ್ಥೈಸಿ, ವೇದಪದಕ್ಕೆ ವೇದ ಎಂದೇ ಮುಖ್ಯಾರ್ಥವನ್ನು ವಿವಕ್ಷಿಸಲಾಗುವುದು, ಅಮುಖ್ಯಾರ್ಥವಾದ 'ವೇದಗಳು ನಿತ್ಯ ಎಂಬ ಅನುಭವ' ಎಂಬ ಅರ್ಥವನ್ನು ವಿವಕ್ಷಿಸಲಾಗಿಲ್ಲ. ಆಗ ವೇದಾಃ ಬುದ್ಧಿಗಾಃ- ವೇದಗಳು ವರ್ತಮಾನತಾಯಾ ಈಶ್ವರಜ್ಞಾನಕ್ಕೆ ವಿಷಯವಾಗಿವೆ ಎಂಬ ಮುಖ್ಯಾರ್ಥವನ್ನೇ ಒಪ್ಪುವೆವು ಎಂದು ವಾದಿಸಿದರೂ ಪ್ರಯೋಜನವಿಲ್ಲ. ವೇದಗಳು ನಷ್ಟವಾದರೂ ಈಶ್ವರಜ್ಞಾನಕ್ಕೆ ವಿಷಯವಾಗಬಹುದು. ಆದುದರಿಂದ 'ವಿಷ್ಣುಬುದ್ಧಿಗಾಃ' ಎನ್ನುವ ಪುರಾಣವಾಕ್ಯವು ವೇದಗಳಿಗೆ ನಿತ್ಯತ್ವವನ್ನು ಸಾಧಿಸಲಾರವು ಎಂದು ಪೂರ್ವಪಕ್ಷಿಯ ಭಾವ.

ಪ್ರಯೋಗಕ್ಕೆ ಪ್ರಯೋಜನವನ್ನು ಹೇಳುವ ಅಗತ್ಯವಿಲ್ಲ. ಘಟ ಮುಂತಾದವುಗಳು ನಾಶ ಹೊಂದಿದರೂ, 'ಘಟವು ದೇವದತ್ತನ ಬುದ್ಧಿಯಲ್ಲಿದೆ' ಇದೇ ಮುಂತಾದ ಪ್ರಯೋಗಗಳಿರುವುದರಿಂದ, ಇಂತಹ ಪ್ರಯೋಗಗಳ ರೂಢಲಕ್ಷಣವಾದುದರಿಂದ[1]. ಎರಡನೆಯ ಪಕ್ಷವು ಸರಿಯಾಗದು[2]. ಪಟಾದಿ ಪದಾರ್ಥಗಳೂ ಹಾಗೇ ಆಗಬೇಕಾದೀತು[3]. ಇರುವ ಪದಾರ್ಥಗಳ ಅನುಭವವಿಲ್ಲದ ಪಕ್ಷದಲ್ಲಿ ಮಾತ್ರ (ಈಶ್ವರನ) ಸರ್ವಜ್ಞತ್ವಕ್ಕೆ ಹಾನಿ ಬಂದೀತು[4].

---

1. ಪದಗಳಿಗೆ ಮುಖ್ಯಾರ್ಥವನ್ನು ಪರಿತ್ಯಜಿಸಿ ಅಮುಖ್ಯಾರ್ಥದಲ್ಲಿ ಲಕ್ಷಣಾವನ್ನು ಮಾಡುವದಾದಲ್ಲಿ ಮುಖ್ಯಾರ್ಥಕ್ಕೆ ಬಾಧಕವಿರಬೇಕು, ಅಥವಾ ಅಮುಖ್ಯಾರ್ಥದ ಪರಿಗ್ರಹಕ್ಕೆ ಏನಾದರೂ ಪ್ರಯೋಜನವಿರಬೇಕು. ಉದಾಹರಣೆಗೆ 'ಗಂಗಾಯಾಂ ಘೋಷಃ' ಎನ್ನುವವಾಕ್ಯದಲ್ಲಿ 'ಗಂಗಾಯಾಂ' ಎನ್ನುವ ಶಬ್ದಕ್ಕೆ ಮುಖ್ಯಾರ್ಥ ಗಂಗಾಪ್ರವಾಹ ಎನ್ನುವುದು. ಪ್ರಕೃತದಲ್ಲಿ ಗಂಗಾತೀರ ಎಂದು ಅರ್ಥೈಸಲಾಗಿದೆ. ಪ್ರವಾಹದಲ್ಲಿ ಹಳ್ಳಿಯು ಇರಲು ಅಸಂಭಾವಿತ, ಬಾಧಕವಿದೆ. ಮತ್ತೂ ಸಹ ಘೋಷವು ಪವಿತ್ರವಾಗಿದೆ, ಘೋಷದಲ್ಲಿ ನೀರಿನ ತೊಂದರೆ ಇಲ್ಲ ಇತ್ಯಾದಿ ವಿಶೇಷ ಅರ್ಥವು ಪ್ರಾಪ್ತವಾಗುವ ಪ್ರಯೋಜನವಿದೆ. ಇನ್ನು ಕೆಲವು ಕಡೆಗಳಲ್ಲಿ ಲಕ್ಷಣಾರ್ಥವಿರುತ್ತದೆ, ಆದರೆ ಅಲ್ಲಿ ಪ್ರಯೋಜನವಿರುವುದಿಲ್ಲ. ಅವುಗಳನ್ನು ರೂಢಲಕ್ಷಣಾ ಎಂದು ಕರೆಯುತ್ತಾರೆ. ಉದಾಹರಣಗೆ- ಕುಶಲ- ಬುದ್ಧಿವಂತ ಎಂದು, ವಸ್ತುತಃ ದರ್ಭೆಯನ್ನು ತರುವವ ಎಂಬ ಅರ್ಥವಿದೆ. ತೈಲ- ತಿಲದಿಂದ ಜನ್ಯ ಎಂದು, ಆದರೆ ಎಲ್ಲವಿಧವಾದ ಎಣ್ಣೆಯನ್ನೂ ಈ ಶಬ್ದದಿಂದಲೇ ವ್ಯವಹರಿಸುವರು. ಇತ್ಯಾದಿ ಸ್ಥಳದಲ್ಲಿ ಬಾಧಕವಾಗಲೀ, ಪ್ರಯೋಜನವಿಶೇಷವಾಗಲೀ ಇರುವದಿಲ್ಲ. ಹಾಗೆಯೇ ಪ್ರಕೃತದಲ್ಲಿ 'ವೇದ' ಎನ್ನುವುದು ರೂಢಲಕ್ಷಣಾ ಎಂದು ತಿಳಿಯುವುದು. ತನ್ನಿಮಿತ್ತ ಪ್ರಯೋಗದಲ್ಲಿ ಪ್ರಯೋಜನದ ಪ್ರಶ್ನೆ ಸಲ್ಲದು ಎಂದು ಪೂರ್ವಪಕ್ಷಿಯ ಭಾವ.

2. ಈಶ್ವರನು ಸರ್ವಜ್ಞನಾದುದರಿಂದ ಅವನ ಬುದ್ಧಿಯಲ್ಲಿ ವೇದಗಳೂ ಯಾವಾಗಲೂ ಇರುತ್ತವೆ ಎಂಬ ಪಕ್ಷವೂ ಸರಿಯಾಗದು.

3. ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ವೇದಗಳಿವೆ ಆದುದರಿಂದ ಅವು ನಿತ್ಯವಾಗುವದಾದಲ್ಲಿ, ಘಟಾದಿ ಪದಾರ್ಥದ ಜ್ಞಾನವೂ ಈಶ್ವರನ ಬುದ್ಧಿಯಲ್ಲಿದೆ. ಆ ಘಟಾದಿಗಳೂ ಸಹ ವೇದಗಳಂತೆ ನಿತ್ಯವಾಗಬೇಕಾದೀತು ಎಂದು ಭಾವ.

4. ವೇದಗಳ ಅನುಭವವು ಈಶ್ವರನಿಗೆ ಇರುವುದರಿಂದ ವೇದಗಳು ನಿತ್ಯವಾಗುವುದಾದಲ್ಲಿ, ಘಟಾದಿಗಳ ಅನುಭವವೂ ಈಶ್ವರನಿಗೆ ಇರುವುದರಿಂದ ಅವೂ ನಿತ್ಯವಾಗಲಿ ಎಂದು ವಾದಿಸಿದಾಗ ಘಟಾದಿಗಳ ಅನುಭವವು ಈಶ್ವರನಿಗೆ ಇಲ್ಲ ಎಂದು ವಾದಿಗಳು ಉತ್ತರಿಸಿದಲ್ಲಿ ಪ್ರತಿವಾದಿಯು ಉತ್ತರಿಸುತ್ತಾನೆ. ಇರುವ ಪದಾರ್ಥಗಳ ಅನುಭವವಿಲ್ಲ ಎಂದಾದಲ್ಲಿ ಈಶ್ವರನು ಅಸರ್ವಜ್ಞನಾಗಬೇಕಾದೀತು ಎಂದು ಬಾಧಕಪ್ರಸಂಗವು ಇದೆ ಎಂದು ಭಾವ.

**ಪುರಾಣ ವಾಕ್ಯಗಳು ಅನ್ಯಥಾಸಿದ್ಧಗಳಲ್ಲ**

**ನ ಚ ಘಟಾದಿವತ್ ಸಂಸ್ಕಾರಮಾತ್ರತ್ವಂ ವಕ್ತುಂ ಯುಕ್ತಮ್ । ಪ್ರತ್ಯಭಿಜ್ಞಾವಿರೋಧಸ್ಯೋಕ್ತತ್ವಾತ್ ।**

ಘಟಾದಿಗಳಂತೆ ಕೇವಲ ಸಂಸ್ಕಾರವು (ಈಶ್ವರನ ಬುದ್ಧಿಯಲ್ಲಿ ಇದೆ ಎಂದು) ಹೇಳುವುದು ತರವಲ್ಲ. ('ತದೇವೇದಂ ವಾಕ್ಯಂ' ಎಂಬುವ) ಪ್ರತ್ಯಭಿಜ್ಞೆಯ ವಿರೋಧವನ್ನು ತಿಳಿಸಲಾಗಿರುವುದರಿಂದ.

ಆತ್ರಾऽದ್ಯಂ ತಾವದಙ್ಗೀಕುರ್ಮಃ । ನನು, ಉಕ್ತಂ ಪುರಾಣವಾಕ್ಯಂ ಅನ್ಯಥಾಸಿದ್ಧಮಿತಿ ತತ್ರಾಹ '**ನ ಚ ಘಟಾದಿವದ್**' ಇತಿ । ಘಟಾದೇರಿವ ವೇದಾನಾಮಪಿ ಸಂಸ್ಕಾರಸ್ಯ ಬುದ್ಧಿಗತ್ವಮಾತ್ರಂ ಪುರಾಣವಾಕ್ಯಾರ್ಥತ್ವೇನ ವಕ್ತುಂ ನ ಯುಕ್ತಮ್ । ಕಿನ್ತು ಈಶ್ವರೇಣ ಸರ್ವದಾ ವರ್ತಮಾನತಯಾ ಅನುಭೂಯಮಾನತ್ವೇನೇವ, ಕುತಃ ? ಇತ್ಯತ ಆಹ '**ಪ್ರತ್ಯಭಿಜ್ಞಾ..**' ಇತಿ । ಯದಿ 'ವೇದಾಃ ಪ್ರಲಯೇ ವಿನಷ್ಟಾಃ, ತತ್ಸಂಸ್ಕಾರಮಾತ್ರಂ ವಿಷ್ಣುಬುದ್ಧೌ ವರ್ತತೇ' ಇತಿ 'ವಿಷ್ಣುಬುದ್ದಿಗಾಃ' ಇತ್ಯರ್ಥಃ ಸ್ಯಾತ್, ತರ್ಹ್ಯುತ್ತರವಾಕ್ಯೇ 'ಯೇ ಪೂರ್ವಕಲ್ಪೇ ಸ್ಥಿತಾ, ಏತ ಏವ ಸರ್ಗೇಸರ್ಗೇऽಮುನೋ-ದ್ಗೀರ್ಯನ್ತೇ' ಇತ್ಯುಕ್ತಪ್ರತ್ಯಭಿಜ್ಞಾವಿರೋಧಃ ಸ್ಯಾದಿತ್ಯರ್ಥಃ । **ಉಕ್ತತ್ವಾತ್** - ಉಕ್ತಪ್ರಾಯತ್ವಾತ್ । ನ ಚ ಸಾದೃಶ್ಯಾತ್ 'ಏತ ಏವ' ಇತ್ಯುಕ್ತಮಿತಿ ವಾಚ್ಯಮ್ । ತಥಾ ಸತ್ಯಪೌರುಷೇಯತ್ವ ಸಿದ್ಧೇರ್ದುರ್ವಾರತ್ವಾತ್ । ಉಪ-ಲಕ್ಷಣಂ ಚೈತತ್ ಜನ್ಮವಾಕ್ಯಗತಿಕಥನವಿರೋಧಾಚ್ಚ ಇತ್ಯಪಿ ದ್ರಷ್ಟವ್ಯಮ್ ।

ಈ ವಿಕಲ್ಪಗಳಲ್ಲಿ ಮೊದಲ ವಿಕಲ್ಪವನ್ನೇ ಅಂಗೀಕರಿಸುತ್ತೇವೆ[1]. ಪುರಾಣ-ವಾಕ್ಯಗಳಿಗೆ ಬೇರೇ ರೀತಿಯಲ್ಲಿ ಅರ್ಥವನ್ನು ತಿಳಿಸಲಾಗಿದೆಯಲ್ಲವೇ? ಆದುದರಿಂದ ಉತ್ತರಿಸುತ್ತಾರೆ. 'ನ ಚ ಘಟಾದಿವತ್' ಎನ್ನುವುದರಿಂದ. ಘಟಾದಿ ಪದಾರ್ಥಗಳಂತೆ ವೇದಗಳ ಸಂಸ್ಕಾರಮಾತ್ರವೇ (ಈಶ್ವರ) ಬುದ್ಧಿಸ್ಥ' ಎಂದು ಪುರಾಣವಾಕ್ಯಗಳ ಅರ್ಥ ಎಂದು ಹೇಳುವುದು ಸರಿಯಾದುದಲ್ಲ. ಮತ್ತೆ ಈಶ್ವರನು '(ವೇದಗಳು) ಸರ್ವದಾ ಇವೇ' ಎಂದೇ ಅನುಭವಿಸುವನು

1. ಈಶ್ವರನ ಬುದ್ಧಿಯಲ್ಲಿ ವೇದವೂ ಸರ್ವದಾ ವರ್ತಮಾನತಯಾ ಪ್ರತೀಯಮಾನವಾಗಿದೆ ಎನ್ನುವದು ಪುರಾಣವಾಕ್ಯಗಳಿಂದ ಸಿದ್ಧವಾಗಿದೆ ಎನ್ನುವ ಪಕ್ಷವನ್ನು ಒಪ್ಪುತ್ತೇವೆ ಎಂದು ಭಾವ.

ಎಂದೇ (ಅರ್ಥೈಸಬೇಕು). ಏತಕ್ಕಾಗಿ (ಹೀಗೇ ಅರ್ಥೈಸಬೇಕು)? ಆದುದರಿಂದ ಉತ್ತರಿಸುತ್ತಾರೆ 'ಪ್ರತ್ಯಭಿಜ್ಞಾ..' ಎನ್ನುವುದರಿಂದ. ವೇದಗಳು ಪ್ರಲಯಕಾಲ-ದಲ್ಲಿ ನಷ್ಟವಾಗುವವು, ಅದರ ಸಂಸ್ಕಾರಗಳು ಮಾತ್ರವೇ ವಿಷ್ಣುವಿನ ಬುದ್ಧಿಯಲ್ಲಿ ಇರುವವು ಎಂದು 'ವಿಷ್ಣುಬುದ್ಧಿಗಾಃ' ಎನ್ನುವುದರ (ಎನ್ನುವ ವಾಕ್ಯದ) ಅರ್ಥ ಎಂದಾದಲ್ಲಿ, ಮುಂದಿನ ವಾಕ್ಯದಲ್ಲಿ 'ಪೂರ್ವಕಲ್ಪದಲ್ಲಿ ಇರುವ ವೇದಗಳನ್ನೇ ಪ್ರತಿ ಸೃಷ್ಟಿಯ ಕಾಲದಲ್ಲಿ ಅವನಿಂದ ಪುನರುಚ್ಚರಿಸಲಾಗುವುದು' ಎಂಬ ಪ್ರತ್ಯಭಿಜ್ಞಾ ವಾಕ್ಯದ ವಿರೋಧವು ಬಂದೀತು ಎಂದು ಭಾವ. **ಉಕ್ತತ್ವಾತ್**- ಉಕ್ತಪ್ರಾಯವಾದುದರಿಂದ. (ಹಿಂದಿನ ಕಲ್ಪದ ವೇದಕ್ಕೂ ಈಗಿನ ಕಲ್ಪದ ವೇದವಾಕ್ಯಗಳಿಗೂ ) ಸಾದೃಶ್ಯವಿರುವುದರಿಂದ 'ಏತೇ ಏವ... ' ಎಂದು ಹೇಳಲಾಗಿದೆ ಎಂದೆನ್ನಲಾಗದು. ಹಾಗಾದರೂ (ಹಿಂದಿನ ಕಲ್ಪದಲ್ಲಿನ ವೇದಗಳ ಆನುಪೂರ್ವಿಗೆ ಸದೃಶವಾದ ಆನುಪೂರ್ವಿಯನ್ನು ಈ ಕಲ್ಪದಲ್ಲಿನ ವೇದಗಳೂ ಹೊಂದಿವೆ ಎಂದು ಒಪ್ಪಿಕೊಂಡರೂ ಸಹ) ಅಪೌರುಷೇಯತ್ವದ ಸಿದ್ಧಿಯು ಅನಿವಾರ್ಯವಾಗುವುದರಿಂದ[1]. ಇದು (ಈ ಪರಿಹಾರವು ಮತ್ತೊಂದು ಪ್ರಶ್ನದ ಪರಿಹಾರಕ್ಕೆ) ಸೂಚಕವಾಗಿದೆ. (ವೇದಗಳಿಗೆ ಸೃಷ್ಟಿಕಾಲದಲ್ಲಿ ಪುನರುತ್ಪತ್ತಿ ಇದೆ ಎಂದು ಒಪ್ಪಿದ ಪಕ್ಷದಲ್ಲಿ) ಜನ್ಮವಾಕ್ಯಗಳಿಗೆ ಅರ್ಥಾಂತರವನ್ನು ಕಲ್ಪಿಸಿದಲ್ಲಿ (ಈ ಪುರಾಣವಾಕ್ಯಗಳ) ವಿರೋಧವೂ ಸಹ ಪ್ರಾಪ್ತವಾಗುವುದೆಂದು ತಿಳಿಯುವುದು[2].

1. 'ಏತೇ ಏವ .. ' ಎಂಬುವ ಪ್ರತ್ಯಭಿಜ್ಞಾವಾಕ್ಯವು 'ಹಿಂದಿನ ಕಲ್ಪದ ವೇದವನ್ನೇ ಇಂದಿನ ಕಲ್ಪದಲ್ಲಿ ಉಕ್ತವಾಗಿವೆ' ಎಂದು ತಿಳಿಸುತ್ತಿಲ್ಲ, ಮತ್ತೆ 'ಹಿಂದಿನ ಕಲ್ಪದ ವಾಕ್ಯದ ಸದೃಶವಾದ ಆನುಪೂರ್ವಿಯನ್ನು ಹೊಂದಿದ ವಾಕ್ಯಗಳನ್ನು ಭಗವಂತನು ಈ ಕಲ್ಪದಲ್ಲಿ ಉಪದೇಶಿಸಿರುವನು' ಎಂದು ಅರ್ಥೈಸಲಾಗುವುದು ಎಂದು ವಾದಿಸಿದರೂ ಸಹ ವೇದದ ಅಪೌರುಷೇಯತ್ವಕ್ಕೆ ಭಂಗವಿಲ್ಲ. ಏಕೆಂದರೆ ಅಪೌರುಷೇಯವೆಂದರೆ 'ಹಿಂದಿನ ಕಲ್ಪದ ವೇದಗಳ ಆನುಪೂರ್ವಿಯ ಸದೃಶವಾದ ಆನುಪೂರ್ವಿಯನ್ನು ಇಂದಿನ ವೇದಗಳು ಹೊಂದಿವೆ ಎಂದೇ ಒಪ್ಪಲಾಗಿದೆ. ಆದುದರಿಂದ ಪ್ರತ್ಯಭಿಜ್ಞಾವಾಕ್ಯಕ್ಕೆ ಬೇರೇ ಅರ್ಥವನ್ನು ಹೇಳಿದರೂ ಸಹ ವೇದಾಪೌರುಷೇಯತ್ವವನ್ನು ನಿವಾರಿಸಲು ಶಕ್ಯವಿಲ್ಲ ಎಂದು ಭಾವ.

2. 'ವೇದಾನಾಂ ಸೃಷ್ಟಿಕಥನಂ ಭವೇಯುರ್ವ್ಯಕ್ತ್ಯಪೇಕ್ಷಯಾ' ಎಂಬ ಪ್ರಮಾಣಾನುಸಾರವಾಗಿ 'ಋಚಃ ಸಾಮಾನಿ ಜಜ್ಞಿರೇ' ಎಂಬಿತ್ಯಾದಿ ವೇದೋತ್ಪತ್ತಿಯನ್ನು ತಿಳಿಸುವ ವಾಕ್ಯಗಳಿಗೆ ಅರ್ಥಾಂತರವನ್ನು ತಿಳಿಸಲಾಗಿದೆ. ನೀವು ಪುನಃ ವೇದೋತ್ಪತ್ತಿಯನ್ನು ತಿಳಿಸುವ ವಾಕ್ಯಗಳಿಗೆ ಯಥಾಸ್ಥಿತವಾದ ಅರ್ಥವನ್ನು ಒಪ್ಪಿದಲ್ಲಿ ಈ ಪುರಾಣವಾಕ್ಯದ ವಿರೋಧವು ಪ್ರಾಪ್ತವಾಗುವುದು ಎಂದು ಭಾವ.

ವೇದಪ್ರಾಮಾಣ್ಯಕ್ಕಾಗಿ ಈಶ್ವರನನ್ನು ಸರ್ವಜ್ಞನೆಂದು ಪ್ರತಿಪಾದಿಸಲಾಗಿಲ್ಲ

**ಪುರಾಣಾನಾಮಪ್ಯನ್ಯಥಾಶಬ್ದರಚನಮೇವಾನಿತ್ಯತ್ವಮ್ ।**

ಪ್ರತಿಕಲ್ಪದಲ್ಲೂ ಶಬ್ದರಚನೆಯು ಬದಲಾವಣೆಯನ್ನೇ (ಪುರಾಣವಾಕ್ಯಗಳ ಆನುಪೂರ್ವಿಯ ಬದಲಾವಣೆಯನ್ನೇ) ಪುರಾಣಗಳ ಅನಿತ್ಯತ್ವ ಎಂದು ತಿಳಿಯುವುದು.

ಏವಂ ತರ್ಹಿ ಸರ್ವಜ್ಞತ್ವಯುಕ್ತ್ಯುಪನ್ಯಾಸಃ ಕಿಮರ್ಥಃ? ಇತಿ ಚೇತ್- ಪುರಾಣಕೃತಾ '(ಶಾಶ್ವತಾಃ) ವಿಷ್ಣುಬುದ್ಧಿಗಾ' ಇತಿ ಈಶ್ವರೇಣ ಸರ್ವದಾ ವರ್ತಮಾನತಯಾ ಅನುಭೂಯಮಾನತ್ವಮುಕ್ತಮ್ । ತತ್ರ ಪ್ರಮಾಣಾ-ಕಾಂಕ್ಷಾಯಾಂ ತದಭಿಪ್ರೇತಾ ಯುಕ್ತಿರಿಯಮುಪವರ್ಣಿತಾ ಇತ್ಯದೋಷಃ । ತಥಾಹಿ- ಕ್ರಮವಿಶಿಷ್ಟಾ ವರ್ಣಾ ಏವ ವೇದೋ, ನ ತು ಘಟಾದಿವದ್ ಅರ್ಥಾನ್ತರಮ್ । ಕ್ರಮಸ್ತು ಬುದ್ಧಿನಿಮಿತ್ತ ಏವ ನ ತು ಸ್ವತೋಽಸ್ತಿ । ತತಶ್ಚ ಸರ್ವೇಷಾಂ ಸರ್ವಥಾ ವರ್ಣವಿಷಯವಿವಕ್ಷಿತಕ್ರಮೋಪಾಧಿಭೂತ-ಬುದ್ಧ್ಯುಪರಮ ಏವ ವೇದವಿನಾಶೋ ವಕ್ತವ್ಯಃ । ನ ತು ಘಟಾದೀನಾಮಿವಾಪರಃ । ನ ಚೇಶ್ವರಸ್ಯ ತಥಾವಿಧಬುದ್ಧ್ಯುಪರಮೋ ಯುಜ್ಯತೇ । ಸ ಹಿ ದೇವದತ್ತಸ್ಯೇವ ವಿಷಯಾನ್ತರಸಞ್ಚಾರನಿಮಿತ್ತೋ ವಾ ಸ್ಯಾತ್, ವಿಸ್ಮರಣನಿಮಿತ್ತೋ ವಾ । ನೋಭಯಥಾಽಪಿ ಸಮ್ಭವತಿ, ತಸ್ಯ ಸರ್ವದಾ ಸರ್ವಜ್ಞತ್ವಾತ್ । ಅತೋ 'ವೇದಾಃ ಸರ್ವದಾ ಈಶ್ವರೇಣ ವರ್ತಮಾನತಯಾಽನುಭೂಯನ್ತ' ಇತಿ ಸಿದ್ಧ್ಯತೀತಿ । ಇಯಂ ಯುಕ್ತಿಃ ಪುರಾಣಕೃತೋಽಭಿಪ್ರೇತೇತಿ ಕುತೋ ಅವಗಮ್ಯತ? ಇತಿ ಚೇತ್- 'ಪುರಾಣಾನಿ ತದರ್ಥಾನಿ.....' ಇತ್ಯುತ್ತರವಾಕ್ಯೇಷು ಪುರಾಣಾನಾಮಪಿ ನಿತ್ಯತ್ವಮಾಶಙ್ಕ್ಯ ಪರಿಹಾರಾತ್ । ಏತದ್ಯುಕ್ತ್ಯಭಿಪ್ರಾಯಾಭಾವೇ ತಚ್ಛಙ್ಕಾಬೀಜಾಭಾವಾದಿತ್ಯಾಶಯವಾನ್ ಉತ್ತರವಾಕ್ಯಾರ್ಥಮನುವದತಿ **'ಪುರಾಣಾನಾಮಪಿ'** ಇತಿ॥

ಹೀಗಾದಲ್ಲಿ (ಈಶ್ವರನ) ಸರ್ವಜ್ಞತ್ವದ ವಿಷಯದಲ್ಲಿ ಯುಕ್ತಿಯನ್ನು ಹೇಳಿದ್ದು ಏತಕ್ಕಾಗಿ ಎಂದಲ್ಲಿ, 'ಶಾಶ್ವತಾ ವಿಷ್ಣುಬುದ್ಧಿಗಾಃ....' ಎನ್ನುವುದರಿಂದ ಪುರಾಣರಚಯಿತೃಗಳು ' (ವೇದಗಳು) ನಿರಂತರವಾಗಿ ಇವೇ ಎಂದು

ಈಶ್ವರನು ಅನುಭವಿಸುವನು' ಎಂದು ಹೇಳಿರುವರು. ಈ ವಿಷಯದಲ್ಲಿ ಪ್ರಮಾಣವನ್ನು ಪ್ರಶ್ನಿಸಿದಲ್ಲಿ ಅದಕ್ಕೆ ಅನುಕೂಲವಾದ ಯುಕ್ತಿಯನ್ನು ಹೇಳಲಾಗಿದೆ, ಆದುದರಿಂದ ಯಾವ ದೋಷವಿಲ್ಲ. ಹೀಗಿದೆ ಈ ವಾದಸರಣಿ- ವಿಶಿಷ್ಟ ಕ್ರಮದ ವರ್ಣಗಳ ಸಮೂಹವೇ ವೇದ, ಹೊರತಾಗಿ ಘಟಾದಿಗಳಂತೆ (ವೇದವು) ಬೇರೇ ಪದಾರ್ಥವಲ್ಲ. ಕ್ರಮವಾದರೋ ಬುದ್ಧಿ ನಿಮಿತ್ತವಾಗಿಯೇ (ಬುದ್ಧಿಪೂರ್ವಕವಾಗಿ) ಇರುವುದು, ಹೊರತು ಅದು ಸ್ವತಂತ್ರವಾಗಿಲ್ಲ. ಆದುದರಿಂದ 'ಎಲ್ಲರಿಗೂ ಸಂಪೂರ್ಣವಾಗಿ (ವೇದದ) ವರ್ಣದ ವಿಷಯದಲ್ಲಿ ವಿವಕ್ಷಿತವಾದ ಕ್ರಮದ (ಆನುಪೂರ್ವಿಗೆ) ಕಾರಣೀಭೂತವಾದ ಬುದ್ಧಿಯ ಉಪರತಿಯನ್ನೇ' ವೇದದ ನಾಶ ಎಂದು ಹೇಳಲಾಗುವುದು. ಘಟಾದಿಗಳಿಗೆ (ಇರುವಂತಹ) ಬೇರೆಯ ರೀತಿಯದ್ದಲ್ಲ[1]. ಈಶ್ವರನಿಗಾದಾರೋ ಆ ತರಹದ ಬುದ್ಧ್ಯುಪರಮವು ಉಂಟು ಎಂದು ಹೇಳಲಾಗದು. ಅದಾದರೋ (ಬುದ್ಧ್ಯುಪರಮವಾದರೋ) ದೇವದತ್ತನಂತೆ ಬೇರೇ ವಿಷಯದಲ್ಲಿ (ಮನವು) ಹೋದ ನಿಮಿತ್ತದಿಂದಲೋ, ವಿಸ್ಮರಣ ನಿಮಿತ್ತದಿಂದಲೋ ಸಂಭವಿಸಬೇಕು. (ಪ್ರಕೃತ ಈಶ್ವರನ ವಿಷಯದಲ್ಲಿ) ಈ ಎರಡೂ ಸಂಭವಿಸುವದಿಲ್ಲ, ಆತನು ನಿರಂತರ ಸರ್ವಜ್ಞನಾದುದರಿಂದ[2]. ಆದುದರಿಂದ 'ಈಶ್ವರನು ವೇದಗಳು ನಿರಂತರವಾಗಿ ಇವೆ ಎಂದು ಸಾಕ್ಷಾತ್ಕರಿಸಿಕೊಂಡಿರುವನು' ಎಂದು ಸಿದ್ಧವಾಗುವುದು. ಈ ಯುಕ್ತಿಯು ಪುರಾಣರಚಯಿತನಿಗೆ ಅಭಿಪ್ರೇತವಾಗಿದೆ ಎಂದು ಹೇಗೆ ತಿಳಿಯುವುದು? ಎಂದಲ್ಲಿ 'ಪುರಾಣಾನಿ ತದರ್ಥಾನಿ.. ಎನ್ನುವ ಮುಂದಿನ ವಾಕ್ಯದಲ್ಲಿ ಪುರಾಣಗಳಿಗೂ ನಿತ್ಯತ್ವವಿರಲಿ ಎಂದು ಸಂದೇಹಿಸಿ,

---

1. ಘಟಾದಿ ಪದಾರ್ಥಗಳಿಗಾದರೋ ಅವಯವ ವಿಭಾಗಾದಿರೂಪದ ವಿನಾಶವಿದೆ, ಆ ತರಹದ ನಾಶವಿಲ್ಲ ವೇದಗಳಿಗೆ. 'ಅಗ್ನಿಮೀಳೇ' ಎನ್ನುವದನ್ನು ಈಳೇ ವಹ್ನಿಂ' ಎಂದು ಕಲ್ಪಾಂತರದಲ್ಲಿ ಉಚ್ಚಾರಗೊಂಡರೆ ವೇದದ ನಾಶ, 'ಅಗ್ನಿಮೀಳೇ' ಎಂದೇ ಉಚ್ಚರಿಸಿದರೆ ವೇದ ನಿತ್ಯ ಎಂದು ಭಾವ.

2. ದೇವದತ್ತಾದಿ ಜೀವರಲ್ಲಿ ಮನವು ವಿಷಯಾಂತರದಲ್ಲಿ ಲೀನವಾದಲ್ಲಿ ಮೊದಲಿನ ವಿಷಯದಿಂದ ಉಪರತವಾಗುವುದು ಕಂಡಿದೆ, ಮತ್ತು ಸಹಜ ವಿಸ್ಮರಣೆಯೂ ಕಂಡಿದೆ. ಪ್ರಕೃತ ಈಶ್ವರನು ನಿರಂತರದಲ್ಲಿ ಸರ್ವಜ್ಞನಾದುದರಿಂದ ಈ ಎರಡೂ ರೀತಿಯ ಉಪರತಿಯನ್ನು ಹೇಳಲು ಶಕ್ಯವಿಲ್ಲ ಎಂದು ಭಾವ.

ಪರಿಹಾರವನ್ನು ತಿಳಿಸಿದ್ದರಿಂದ[1]. (ಪುರಾಣಕರ್ತೃಗಳಿಗೆ ) ಈ ಯುಕ್ತಿಯಲ್ಲಿ ಅಭಿಪ್ರಾಯವಿಲ್ಲದ ಪಕ್ಷದಲ್ಲಿ, ಆ ಶಂಕೆಗೆ ಕಾರಣವೇ ಇಲ್ಲದೇ ಹೋದೀತು ಎಂಬ ಭಾವದಿಂದ ಉತ್ತರವಾಕ್ಯದ ಅರ್ಥವನ್ನು ಅನುವಾದಿಸುತ್ತಾರೆ 'ಪುರಾಣಾನಾಮಪಿ' ಎಂದು[2].

**ಪುರಾಣಗಳ ಪುನಾರಚನೆಯು ರಹಸ್ಯವಾದದ್ದು.**

**ನನು, ಏವಂ ವೇದಪುರಾಣಯೋಃ ನಿತ್ಯತ್ವೇ 'ಪುರಾಣಾನಾಂ ಪುನಾ ರಚನಂ, ನ ವೇದಸ್ಯ' ಇತ್ಯೇತತ್ ಕುತಃ? ಇತಿ ಚೇತ್, ಪ್ರಮಾಣಪ್ರಶ್ನಶ್ಚೇದ್? 'ಉಕ್ತಾದೇವ ಪುರಾಣವಾಕ್ಯಾದೇಃ' ಇತಿ ಬ್ರೂಮಃ । ಪ್ರಯೋಜನಪ್ರಶ್ನಸ್ತು ಅಯುಕ್ತಃ । ಈಶ್ವರಪ್ರವೃತ್ತೇಃ ಸರ್ವತ್ರ ಸ್ವಪ್ರಯೋಜನಹೀನತ್ವಾತ್ । ಪರ-ಪ್ರಯೋಜನಾನಿ ತು ಸೂಕ್ಷ್ಮಾಣ್ಯುತ್ಪ್ರೇಕ್ಷಯಿತುಂ ವಯಂ ನ ಪ್ರಭವಾಮಃ । ಭಗವಾನಾಚಾರ್ಯೋಽಪಿ ಇದಾನೀಂ ಪ್ರಯೋಜನಾಭಾವಾನ್ನಾವಾದೀದಿತಿ ।**

ಸರಿ, ಹೀಗಾದಲ್ಲಿ 'ವೇದ ಮತ್ತು ಪುರಾಣಗಳು ನಿತ್ಯವಾದಲ್ಲಿ, ಪುರಾಣಗಳ ರಚನೆ (ಮಾತ್ರ) ಪುನಃ ಆಯಿತು ವೇದಗಳ (ರಚನೆ ಮಾತ್ರ) ಇಲ್ಲ' ಎನ್ನುವುದು ಏಕೆ? (ಈ ವಿಷಯದಲ್ಲಿ ) ಪ್ರಮಾಣದ ಪ್ರಶ್ನೆ ಎಂದಾದಲ್ಲಿ 'ಹಿಂದೆ ಹೇಳಿದ ಪುರಾಣವಾಕ್ಯಗಳೇ (ಪ್ರಮಾಣ )' ಎಂದು ಹೇಳುತ್ತೇವೆ. ಪ್ರಯೋಜನದ

---

1. ಪುರಾಣವಾಕ್ಯಗಳನ್ನು ವೇದ ನಿತ್ಯತ್ವದ ವಿಷಯದಲ್ಲಿ ಪ್ರಮಾಣವನ್ನಾಗಿ ಉದಾಹರಿಸುವ ಸಂದರ್ಭದಲ್ಲಿ 'ಚೇತನಸ್ಯ ಜನಿರ್ಯದ್ವತ್..' ಎಂದು ತಿಳಿಸಲಾಗಿದೆ. ಆಗ ಸಂದೇಹವು ಬರುವುದು. ಈಶ್ವರನು ಸರ್ವಜ್ಞನಾದುದರಿಂದ ಆತನ ಬುದ್ಧಿಯಲ್ಲಿ ವೇದಗಳು ನಿರಂತರವಾಗಿ ಇರುವುದರಿಂದ ವೇದಗಳು ನಿತ್ಯವಾಗುವುದಾದಲ್ಲಿ, ಸರ್ವಜ್ಞನ ಬುದ್ಧಿಯಲ್ಲಿ ಪುರಾಣವಾಕ್ಯಗಳು ಇರುವುದರಿಂದ ಪುರಾಣಗಳು ನಿತ್ಯವಾಗಲಿ ಎಂಬ ಸಂದೇಹ ಬರಲು ಉತ್ತರಿಸಿರುವರು 'ಪುರಾಣಾನಿ ತದರ್ಥಾನಿ...' ಎಂಬ ಪುರಾಣವಾಕ್ಯದಿಂದ. ಇದರಿಂದ ಪುರಾಣಕರ್ತೃವಿಗೆ ವೇದಗಳು ಮಾತ್ರ ನಿತ್ಯ ಎಂಬ ಭಾವವು ಇದೆ ಎಂದು ತಿಳಿಯುವುದು ಎಂದು ಭಾವ.

2. 'ಪುರಾಣಾನಿ ತದರ್ಥಾನಿ.. ಇತ್ಯಾದಿ ಪ್ರಮಾಣವು, ಪುರಾಣಗಳೂ ವೇದಗಳಂತೆ ನಿತ್ಯವಾಗಲಿ ಎಂಬ ಶಂಕೆಗೆ ಉತ್ತರವಾಗಿದೆ. ಪುರಾಣಗಳು ನಿತ್ಯ ಎಂಬ ಶಂಕೆಯೇ ಇಲ್ಲದ ಪಕ್ಷದಲ್ಲಿ ಈ ಪುರಾಣವಾಕ್ಯದ ಉದ್ಧರಣವೇ ವ್ಯರ್ಥವಾನೇ? ಆದುದರಿಂದ ಪುರಾಣಕರ್ತೃಗಳಿಗೆ ನಾವು ಹೇಳಿದ ಅಭಿಪ್ರಾಯವಿದೆ ಎಂದು ತಿಳಿಯುವುದು ಎಂದು ಭಾವ.

ಪ್ರಶ್ನೆಯಾದರೋ ಅಯುಕ್ತ[1]. ಈಶ್ವರನ ಪ್ರವೃತ್ತಿಯು ಎಲ್ಲೆಡೆಯೂ ಸ್ವಪ್ರಯೋಜನಶೂನ್ಯವಾದದ್ದೇ ಆದುದರಿಂದ. ಪರರಿಗೆ (ಜೀವರಿಗೆ ಯಾವರೀತಿಯಿಂದ) ಪ್ರಯೋಜನ (ಎನ್ನುವುದು) ಅತಿಸೂಕ್ಷ್ಮವಾದ್ದರಿಂದ ಊಹಿಸಲು ನಾವು ಸಮರ್ಥರಲ್ಲ. ಭಗವತ್ಪಾದಾಚಾರ್ಯರಾದರೋ 'ಪ್ರಕೃತದಲ್ಲಿ ಅವಶ್ಯಕತೆ ಇಲ್ಲ' ಎಂದು ತಿಳಿಸಿರುವದಿಲ್ಲ[2].

**ವೇದನಿತ್ಯತ್ವವಾದದ ಪರಿಸಮಾಪನ.**

**ಅತ ಆಕಾಶಗುಣೇ ಶಬ್ದೇ ವ್ಯಜ್ಯಮಾನಾ ವರ್ಣಾದಯಃ ತತ್ಕ್ರಮಾತ್ಮಕೋ ವೇದಶ್ಚ ನಿತ್ಯ ಏವೇತಿ ಸಿದ್ಧಮ್ ।**

ಆಕಾಶದಲ್ಲಿ ಅದರ ಗುಣವಾದ ಶಬ್ದದಿಂದ (ಧ್ವನಿಯಿಂದ) ಅಭಿವ್ಯಕ್ತವಾಗುವ ವರ್ಣಾದಿಗಳು (ಹೊರತಾಗಿ ಉತ್ಪನ್ನವಾದದ್ದಲ್ಲ), ವರ್ಣಾತ್ಮಕವಾದ ವೇದಗಳೂ ನಿತ್ಯವೇ ಎಂದು, ಅದರಿಂದ (ಪ್ರತ್ಯಭಿಜ್ಞಾ ಬಲದಿಂದ) ಸಿದ್ಧವೇ ಆಯಿತು.

**ಏವಮುಪಪಾದಿತಮರ್ಥಂ ಶಙ್ಕಾನ್ತರಾಣಿ ಪರಿಹರನ್ನುಪಸಂಹರತಿ- 'ಅತ' ಇತಿ । ಅತಃ- ಪ್ರತ್ಯಭಿಜ್ಞಾಬಲಾತ್ 'ವರ್ಣಾದಯೋ ನಿತ್ಯಾ' ಇತಿ ಸಿದ್ಧಮ್ । ಆದಿಶಬ್ದೇನ ವರ್ಣಧರ್ಮಾ ಗೃಹ್ಯನ್ತೇ ಯೇಽನೌಪಾಧಿಕಾಃ । ಅಪ್ರಮಿತಕರ್ತೃಕತ್ವಾದಿಬಲಾದ್ 'ವೇದಶ್ಚ ನಿತ್ಯ ಏವ' ಇತಿ ಸಿದ್ಧಮ್ । ನಿತ್ಯತ್ವಸ್ಯ ಪೃಥಗ್ವಿಧತ್ವಾತ್ ಪೃಥಗುಪಸಂಹಾರಃ ।**

ಈ ರೀತಿಯಾಗಿ ಉಪಪಾದಿಸಿದ ವಿಷಯವನ್ನು (ಅದರ ವಿಷಯದಲ್ಲಿನ)

---

1. ವೇದಗಳನ್ನು ಈಶ್ವರನು ಪುನಃ ರಚಿಸದೇ, ಪುರಾಣಗಳನ್ನು ಮಾತ್ರ ಪುನಃ ರಚಿಸಲು ಉದ್ದೇಶವೇನು ಎಂಬುವ ಪ್ರಶ್ನೆಯು ಅಯುಕ್ತ ಎಂದು ಭಾವ.

2. ಜಗದ ಸೃಷ್ಟ್ಯಾದಿಗಳಿಂದ ಈಶ್ವರನಿಗೆ ಯಾವುದೇ ಲಾಭವಿಲ್ಲದಿದ್ದರೂ, ಸೃಷ್ಟರಾದ ಜೀವರ ಸಾಧನೆಗೆ ಅವಶ್ಯವಾಗಿದೆ, ಹಾಗೆ ಪುರಾಣಗಳ ಪುನಃ ರಚನೆಯು ಈಶ್ವರನಿಗೆ ಯಾವುದೇ ವಿಧದ ಪ್ರಯೋಜನಕಾರಿಯಾಗದಿದ್ದರೂ ಜೀವರಿಗೆ ಯಾವವಿಧದಲ್ಲಿ ಪ್ರಯೋಜಕವಾಗಿದೆ? ಎಂದು ಪ್ರಶ್ನಿಸಿದಲ್ಲಿ, ಈ ಸೂಕ್ಷ್ಮಪ್ರಮೇಯವು ನಮ್ಮಂತಹ ಸಾಮಾನ್ಯರ ಅವಗಾಹನೆಗೆ ಬಾರದು, ಸರ್ವಜ್ಞರಾದ ಆಚಾರ್ಯರು ತಿಳಿಸಬಹುದಿತ್ತಲ್ಲವೇ? ಎಂದಲ್ಲಿ 'ಈ ಪ್ರಮೇಯದ ಅರಿವು ಪ್ರಕೃತದಲ್ಲಿ ಅನಗತ್ಯ' ಎಂದು ಆಚಾರ್ಯರೂ ಸಹ ತಿಳಿಸಿರುವದಿಲ್ಲ ಎಂದು ಭಾವ.

ಬೇರೇ ಸಂದೇಹಗಳನ್ನು ಪರಿಹರಿಸಿ ಉಪಸಂಹರಿಸುತ್ತಾರೆ – '**ಅತಃ**' ಎಂದು. **ಅತಃ**- ಪ್ರತ್ಯಭಿಜ್ಞೆಯ ಬಲದಿಂದ 'ವರ್ಣಾದಿಗಳು ನಿತ್ಯ' ಎಂದು ಸಿದ್ಧವಾಯಿತು. (ಮೂಲದಲ್ಲಿರುವ) ಆದಿ ಶಬ್ದದಿಂದ ಔಪಾಧಿಕವಲ್ಲದ ಯಾವ ವರ್ಣಧರ್ಮಗಳೋ ಅವು ಪರಿಗೃಹೀತವಾಗಿವೆ[1]. ಅಪ್ರಮಿತಕರ್ತೃಕತ್ವ ಹೇತುವಿನ ಬಲದಿಂದ ವೇದಕ್ಕೂ ನಿತ್ಯತ್ವವು ಸಿದ್ಧವಾಗಿದೆ[2]. (ವರ್ಣ ಮತ್ತು ವೇದಗಳಲ್ಲಿ ಇರುವ) ನಿತ್ಯತ್ವವು ವಿಭಿನ್ನವಿಧವಾದುದರಿಂದ ಪ್ರತ್ಯೇಕವಾಗಿ ಉಪಸಂಹರಿಸಲಾಗಿದೆ [3].

**ವರ್ಣಗಳ ಪ್ರತಿನಿಯತ ಶ್ರವಣಾದಿ ವ್ಯವಸ್ಥೆಯು ಹೇಗೆ?**

**ನನು, ನಿತ್ಯತ್ವೇ ವರ್ಣಾನಾಂ ಕಥಂ ಕದಾಚಿದೇವೋಪಲಬ್ಧಿಃ ? ನಚೇಂದ್ರಿಯಸನ್ನಿಕರ್ಷಸ್ಯ ಕಾದಾಚಿತ್ಕತಾದಿತಿ ವಾಚ್ಯಮ್ । 'ತಾವತೀ ವಾಕ್' ಇತಿ ವ್ಯಾಪಕತ್ವಸ್ಯಾಭ್ಯುಪಗತತ್ವೇನ ಸರ್ವದಾ ಶ್ರೋತ್ರಸನ್ನಿಕೃಷ್ಟತ್ವಾತ್ । ಅತ್ರೈಕೇ ಬ್ರುವತೇ- 'ಸ್ತಿಮಿತೇನ ವಾಯುನಾಽವಷ್ಟಬ್ಧಂ ಶ್ರೋತ್ರ-ಸನ್ನಿಕೃಷ್ಟಮಪಿ ಶಬ್ದಂ ನೋಪಲಮ್ಭಯತಿ । ವಕ್ತುಃ ಕೋಷ್ಠ್ಯೋ ವಾಯುಃ ಪ್ರಯತ್ನವದಾತ್ಮಸಂಯೋಗೇನ ಪ್ರೇರಿತಃ ಪ್ರವಿಷ್ಟಮಾನಉರಃಪ್ರಭೃತೀನ್ಯಷ್ಟೌ ಸ್ಥಾನಾನ್ಯಭಿಹತ್ಯ ಶ್ರೋತುಃ ಕರ್ಣಶಷ್ಕುಲೀಂ ಪ್ರವಿಷ್ಟಃ ಸ್ತಿಮಿತಂ ವಾಯುಮಪನಯತಿ ತತೋ ವರ್ಣೋಪಲಬ್ಧಿಃ' ಇತಿ । ಅಪರೇ ತು- 'ಕೋಷ್ಠ್ಯವಾಯುಸಂಯೋಗ ಏವ ಶ್ರೋತ್ರಸಂಸ್ಕಾರೋ ನಾಪರ' ಇತಿ ।**

---

1. ನಗ, ನಾಗ ಇತ್ಯಾದಿಯಾಗಿ ವರ್ಣಗಳಲ್ಲಿ ಕಾಣುವ ಹ್ರಸ್ವತ್ವ ದೀರ್ಘತ್ವಾದಿ ಧರ್ಮಗಳು ಅನೌಪಾಧಿಕಗಳು, ಇವು ನಿತ್ಯವಾದ ಧರ್ಮಗಳು. ತಾರತ್ವಮಂದ್ರತ್ವಾದಿ ಧರ್ಮಗಳು ಔಪಾಧಿಕಗಳು, ಇವು ಅನಿತ್ಯ ಎಂದು ಭಾವ.

2. ವೇದಃ ಅಕರ್ತೃಕಃ ಅಪ್ರಮಿತಕರ್ತೃಕತ್ವಾತ್- ವೇದವು ಕರ್ತೃವನ್ನು ಹೊಂದಿಲ್ಲ ಕರ್ತೃವು ಪ್ರಮಾಣದಿಂದ ಪ್ರಮಿತನಾಗದಿರುವುದರಿಂದ ಎಂದು ಹಿಂದೆ ತಿಳಿಸಿದ ರೀತಿಯಿಂದ ಎಂದು ಭಾವ.

3. ವರ್ಣದಲ್ಲಿರುವ ನಿತ್ಯತ್ವವು ಕೂಟಸ್ಥನಿತ್ಯತ್ವ ಮತ್ತು ವೇದದಲ್ಲಿ ಇರುವ ನಿತ್ಯತ್ವವಾದರೋ ಆನುಪೂರ್ವೀಕ್ರಮದಲ್ಲಿ ವ್ಯತ್ಯಾಸವಿಲ್ಲದಿರುವಿಕೆ. ವರ್ಣದಲ್ಲಿನ ಮತ್ತು ವೇದದಲ್ಲಿನ ನಿತ್ಯತ್ವದಲ್ಲಿ ವಿಭಿನ್ನತೆಯು ಇರುವುದರಿಂದ 'ವರ್ಣಾದಯಃ..' 'ವೇದಶ್ಚ..' ಎಂದು ಉಪಸಂಹಾರವನ್ನು ಪ್ರತ್ಯೇಕವಾಗಿ ಮಾಡಲಾಗಿದೆ ಎಂದು ಭಾವ.

**ತದುಭಯಮಪ್ಯಸತ್ ವಾಯುಸಂಯೋಗಾನನ್ತರಂ ಸರ್ವದಾ ಸರ್ವವರ್ಣೋಪಲಬ್ಧಿಪ್ರಸಙ್ಗಾತ್ । ಉತ್ತರಕ್ಷಣ ಏವ ವಾಯುವಿಭಾಗೇನ ಸಂಯೋಗನಾಶಾನ್ನೇತಿ ಚೇನ್ನ । ಅಪ್ರಾಮಾಣಿಕಕಲ್ಪನಾಪ್ರಸಙ್ಗಾತ್ । ಸರ್ವೋಪಲಬ್ಧೇರನಿವಾರಣಾಚ್ಚ ।**

ವರ್ಣಗಳು ನಿತ್ಯವಾದಲ್ಲಿ ಕೆಲವೊಮ್ಮೆ ಮಾತ್ರ ಉಪಲಬ್ಧವಾಗುವುದು ಹೇಗೆ? 'ಇಂದ್ರಿಯ ಸನ್ನಿಕರ್ಷವಾದಾಗ ಮಾತ್ರ ಉಪಲಬ್ಧವಾಗುವುದು' ಎಂದು ಹೇಳಲಾಗದು- 'ತಾವತೀ ವಾಕ್' (ವರ್ಣವು ಎಲ್ಲೆಡೆ ವ್ಯಾಪ್ತವಾಗಿದೆ), ಎಂದು ವ್ಯಾಪಕತ್ವವನ್ನು ಒಪ್ಪಿರುವುದರಿಂದ ನಿರಂತರ (ವರ್ಣಗಳಿಗೆ) ಶ್ರೋತ್ರದಿಂದ ಸನ್ನಿಕರ್ಷವಿರುವುದರಿಂದ[1]. ಈ ಸಂದರ್ಭದಲ್ಲಿ ಕೆಲವರು ಹೀಗೆ ಹೇಳುತ್ತಾರೆ- (ಎಲ್ಲೆಡೆ ವ್ಯಾಪ್ತವಾದ ಶಬ್ದವು) ಶ್ರೋತ್ರೇಂದ್ರಿಯವನ್ನು ಸಂಬಧಿಸಿದ್ದರೂ, ಸ್ತಿಮಿತವಾಯುವಿನ[2] ತಡೆಯಿರುವುದರಿಂದ ಶಬ್ದವು ಉಪಲಂಭವಾಗುವದಿಲ್ಲ. ವಕ್ತೃವಿನ ಮುಖದಲ್ಲಿರುವ ವಾಯುವು, (ವಕ್ತೃವಿನ) ಪ್ರಯತ್ನದಿಂದ ಪ್ರೇರಿತವಾಗಿ, ಎದೆ ಮುಂತಾದ ಎಂಟು ಸ್ಥಾನಗಳಲ್ಲಿ ಸಂಪರ್ಕಿಸಿ[3], ಹೊರಹೊರಟು ಕೇಳುಗನ ಕಿವಿಯ ಆಲಿಯನ್ನು ಪ್ರವೇಶಿಸಿ (ಅಲ್ಲಿ) ಸ್ತಿಮಿತವಾಗಿದ್ದ ವಾಯುವನ್ನು ಸರಿಸುವುದು, ನಂತರದಲ್ಲಿ ವರ್ಣದ ಉಪಲಬ್ಧಿಯಾಗುವುದು ಎಂದು. ಮತ್ತೆ ಕೆಲವರು- (ವಕ್ತೃವಿನ) ಕೋಷ್ಠ್ಯವಾಯುವಿನ ಸಂಯೋಗವೇ ಶ್ರೋತ್ರಸಂಸ್ಕಾರ, (ಈ ವಾಯುಸಂಯೋಗದಿಂದ ವಿಭಿನ್ನವಾದ) ಬೇರೇ (ಯಾವುದೇ ಸಂಸ್ಕಾರಗಳು) ಇಲ್ಲ ಎಂದು[4]. ಈ ಎರಡೂ

1. ಉಚ್ಚಾರಣಾನಂತರದಲ್ಲಿ ಶಬ್ದವು ಕೇಳುವುದು ಎಲ್ಲರ ಅನುಭವದಲ್ಲದೆ. ಈ ಶಬ್ದಗಳು ಉಚ್ಚಾರಣೆಯಿಂದ ಉತ್ಪನ್ನ ಎಂದಾದಲ್ಲಿ ಶಬ್ದದ ಪ್ರತ್ಯಕ್ಷಾಪ್ರತ್ಯಕ್ಷಗಳನ್ನು ನಿರ್ವಹಿಸಬಹುದು. ಆದರೆ ವರ್ಣಗಳು ನಿತ್ಯ ಮತ್ತು ವ್ಯಾಪ್ತ ಎಂದು ಒಪ್ಪಿದಲ್ಲಿ ಈ ಶ್ರವಣಾಶ್ರವಣದ ವ್ಯವಸ್ಥೆಯ ನಿರ್ವಹಣೆ ಹೇಗೆ ಎಂದು ಪ್ರಶ್ನದ ಭಾವ.

2. ಪ್ರಾಕೃತಕವಾಗಿರುವ ಕಿವಿಯ ಆಲಿಯಲ್ಲಿನ ವಾಯುವು ಸ್ತಿಮಿತ ವಾಯು ಎಂದು ಭಾವ.

3. 'ಅಕುಹವಿಸರ್ಜನೀಯಾನಾಂ ಕಂಠಃ' ಎಂದು ಶಿಕ್ಷಾಶಾಸ್ತ್ರದಲ್ಲಿ ತಿಳಿಸಿರುವಂತೆ ದೇಹದ ಬೇರೇ ಬೇರೇ ಎಂಟು ಸ್ಥಾನಗಳ ಸಂಪರ್ಕವನ್ನು ಹೊಂದುವುದು ಎಂದು ಭಾವ.

4. ವಕ್ತೃವಿನ ಮುಖದಿಂದ ಹೊರಟ ವಾಯುವೇ ಶ್ರೋತೃವಿನ ಕಿವಿಯಲ್ಲಿ ಸಂಸ್ಕಾರವನ್ನು ಉಂಟುಮಾಡುವುದು, ಆ ಸಂಸ್ಕಾರಬಲದಿಂದ ಶಬ್ದದ ಪ್ರತ್ಯಕ್ಷವು ಪ್ರಾಪ್ತವಾಗುವುದು ಎಂದು ಭಾವ.

ಸರಿಯಾದುದಲ್ಲ. (ಕೋಷ್ಠ್ಯ) ವಾಯುವಿನ ಸಂಯೋಗವಾದ ನಂತರ (ಸ್ತಿಮಿತವಾಗಿದ್ದ ವಾಯುವನ್ನು ಸರಿಸಿದನಂತರದಲ್ಲಿ) ಎಲ್ಲ ವರ್ಣಗಳು ನಿರಂತರ ಉಪಲಬ್ಧವಾಗಿರಬೇಕಾದೀತು[1]. ಮುಂದಿನ ಕ್ಷಣದಲ್ಲಿಯೇ ವಾಯುವಿನ ವಿಭಾಗವಾಗುವುದರಿಂದ (ವರ್ಣ ಮತ್ತು ಇಂದ್ರಿಯಗಳ) ಸಂಯೋಗವು ನಾಶವಾಗುವುದರಿಂದ (ನಿರಂತರ ಶಬ್ದ ಪ್ರತ್ಯಕ್ಷವಾಗಲಿ ಎಂಬ ಆಪಾದನೆಯು ಸಲ್ಲ) ಎಂದೆನ್ನಲಾಗದು ಅಪ್ರಾಮಾಣಿಕವಾದದ್ದನ್ನು ಕಲ್ಪಿಸಿದಂತಾಗುವುದರಿಂದ. ಮತ್ತು ಸರ್ವ (ವರ್ಣಗಳ) ಉಪಲಬ್ಧಿಯನ್ನು ನಿವಾರಿಸಲಾಗಿಲ್ಲವಾದ್ದರಿಂದಲೂ ಸಹ[2].

**ಅನ್ಯೇ ತು- 'ವಾಯುಗುಣಃ ಶಬ್ದೋ ಧ್ವನಿಲಕ್ಷಣೋ ವಾಯುನಾ ಸಹ ಶ್ರೋತ್ರಂ ಪ್ರವಿಷ್ಟೋ ವರ್ಣಸ್ಯ ವ್ಯಞ್ಜಕಃ । ತೇನ ವ್ಯಕ್ತೋ ವರ್ಣ ಉಪಲಭ್ಯತ' ಇತಿ । ಏತದಪ್ಯಸತ್ । ವಾಯುಗುಣತ್ವೇ ಶಬ್ದಸ್ಯ ಸ್ಪಾರ್ಶನ-ಗ್ರಾಹ್ಯತ್ವೇನ ಬಧಿರಾಣಾಮಪಿ ತದುಪಲಬ್ಧಿಪ್ರಸಕ್ತೇಃ । ಶ್ರೋತ್ರಾಗ್ರಾಹ್ಯಸ್ಯ ತದಗ್ರಾಹ್ಯವರ್ಣವ್ಯಞ್ಜಕತ್ವಾನುಪಪತ್ತೇಶ್ಚ ವ್ಯಙ್ಗ್ಯವ್ಯಞ್ಜಕಯೋಃ**

---

1. ಸರ್ವತ್ರ ವ್ಯಾಪ್ತವಾದ ವರ್ಣದ ಸಂಬಂಧವು ಶ್ರೋತ್ರೇಂದ್ರಿಯಕ್ಕೆ ನಿರಂತರವಾಗಿ ಇದ್ದರೂ ಸ್ತಿಮಿತವಾಯುವಿನ ಪ್ರತಿಬಂಧದಿಂದ ಶಬ್ದದ ಪ್ರತ್ಯಕ್ಷವಿಲ್ಲ ಎಂದು ತಿಳಿಸಲಾಗಿತ್ತು, ಪ್ರಕೃತ ಕೋಷ್ಠ್ಯವಾಯುವಿನಿಂದ ಪ್ರತಿಬಂಧವು ನಿವೃತ್ತವಾದ ಮೇಲೆ ಸಕಲ ವರ್ಣಗಳ ಪ್ರತ್ಯಕ್ಷವು ನಿರಂತರವಾಗಿರಬೇಕಲ್ಲವೇ? ಎಂದು ಭಾವ.

2. ವರ್ಣಗಳು ಸರ್ವತ್ರ ವ್ಯಾಪ್ತವಾಗಿದ್ದರೂ ಶ್ರೋತೃವಿನ ಕಿವಿಯಲ್ಲಿ ಸ್ತಿಮಿತವಾಯುವಿನ ತಡೆಯಿಂದ ವರ್ಣಗಳಿಗೂ ಶ್ರೋತ್ರೇಂದ್ರಿಯಕ್ಕೂ ಸಂಪರ್ಕವಿಲ್ಲದಿರುವುದರಿಂದ ವರ್ಣದ ಪ್ರತ್ಯಕ್ಷವಿಲ್ಲ ಎಂದು ಈ ಹಿಂದೆ ತಿಳಿಸಲಾಗಿತ್ತು, ಪ್ರಕೃತ ವಕ್ತೃವಿನ ಮುಖವಾಯುವಿನಿಂದ ತಡೆಯಾದ ಸ್ತಿಮಿತವಾಯುವಿನ ಅಪಸರಣವಾದ ಮೇಲೆ ವರ್ಣದ ಪ್ರತ್ಯಕ್ಷವು ಪ್ರಾಪ್ತವಾಗುವುದು ಎಂದು ತಿಳಿಸಲಾಯಿತು. ಹಾಗಾದಲ್ಲಿ ಕೋಷ್ಠ್ಯವಾಯುವಿನಿಂದ ತಡೆಯು ಸರಿದನಂತರದಲ್ಲಿ 'ನಿರಂತರವೂ ವರ್ಣದ ಪ್ರತ್ಯಕ್ಷವಾಗಲಿ' ಎಂಬ ಸಂದೇಹಕ್ಕೆ ಉತ್ತರ- ಶ್ರೋತ್ರೇಂದ್ರಿಯವನ್ನು ಪುನಃ ಸ್ತಿಮಿತವಾಯುವು ಆವರಿಸುವುದು ಎಂದು. ಈ ಕಲ್ಪನೆ ಅಪ್ರಾಮಾಣಿಕವಾದದ್ದು. ಒಂದು ವೇಳೆ ಈ ಕಲ್ಪನೆಯನ್ನು ಒಪ್ಪಿದರೂ, ಒಂದು ವರ್ಣದ ಪ್ರತ್ಯಕ್ಷವಾದಾಗ, ಉಳಿದ ಎಲ್ಲ ವರ್ಣಗಳ ಸಾಕ್ಷಾತ್ಕಾರವಾಗಲಿ ಎಂಬ ಶಂಕೆಗೆ ಉತ್ತರಿಸಿದಂತಾಗಲಿಲ್ಲ ಎಂದು ಭಾವ.

**ಏಕೇಂದ್ರಿಯಗ್ರಾಹ್ಯತ್ವಸ್ಯ ಘಟಪ್ರದೀಪಾದೌ ದರ್ಶನಾತ್ । 'ಏಕಸ್ಮಿನ್ ವರ್ಣೇ ವ್ಯಕ್ತೇ ತತ್ರಸ್ಥಾಃ ಸರ್ವೇಽಪಿ ವರ್ಣಾ ವ್ಯಕ್ತಾ' ಇತಿ ಸರ್ವೋಪಲಬ್ಧೇರಪರಿಹಾರಾಚ್ಚ । ಕಿಞ್ಚ ಯೋ ವರ್ಣೋ ದೇವದತ್ತಶ್ರೋತ್ರೇ ವ್ಯಕ್ತಃ ಸ ಏವ ಯಜ್ಞದತ್ತಶ್ರೋತ್ರಸನ್ನಿಕೃಷ್ಟ' ಇತಿ ದೂರಸ್ಥೇನಾಪಿ ತೇನೋಪಲಭ್ಯೇತ? ಇತ್ಯತ ಉಕ್ತಮ್ 'ಆಕಾಶಗುಣೇ ಶಬ್ದೇ ವ್ಯಜ್ಯಮಾನಾಃ' ಇತಿ ।**

ಮತ್ತೆ ಕೆಲವರು- ಧ್ವನಿಯೇ ಶಬ್ದ, ಆ ಶಬ್ದವು ವಾಯುವಿನ ಗುಣವಾಗಿದೆ, ವಾಯುವಿನೊಡನೆ ಶ್ರೋತ್ರವನ್ನು ಸೇರಿದ ಧ್ವನಿಯು ವರ್ಣದ ವ್ಯಂಜಕವಾಗಿದೆ. ಧ್ವನಿಯಿಂದ ವ್ಯಕ್ತವಾದ ವರ್ಣವು (ಶ್ರೋತ್ರೇಂದ್ರಿಯಕ್ಕೆ) ಉಪಲಬ್ಧವಾಗುವುದು. ಇದು ಸರಿಯಾದುದಲ್ಲ. ಶಬ್ದವು ವಾಯುವಿನ ಗುಣವಾದಲ್ಲಿ ಸ್ಪರ್ಶೇಂದ್ರಿಯಗ್ರಾಹ್ಯವಾಗುವುದರಿಂದ ಕಿವುಡನಿಗೂ ಅದರ (ಶಬ್ದದ) ಪ್ರತ್ಯಕ್ಷವಾಗಬೇಕಾದೀತು[1]. ಮತ್ತು ಶ್ರೋತ್ರೇಂದ್ರಿಯದಿಂದ ಅಗ್ರಾಹ್ಯವಾದುದಕೆ (ಧ್ವನಿಗೆ) ಅದರಿಂದ (ಶ್ರೋತ್ರೇಂದ್ರಿಯದಿಂದ ) ಗ್ರಾಹ್ಯವಾದ ವರ್ಣಗಳ ವ್ಯಂಜಕತ್ವವು ಕೂಡಲಾರದು[2]. ಮತ್ತೂ ಸಹ ವ್ಯಂಗ್ಯ ಮತ್ತು ವ್ಯಂಜಕಗಳು ಒಂದೇ ಇಂದ್ರಿಯದಿಂದ ಗ್ರಾಹ್ಯವಾಗುವುದು, ಘಟ

---

1. ಒಂದು ವಸ್ತುವು ಯಾವ ಇಂದ್ರಿಯದಿಂದ ಗೃಹೀತವಾಗುವುದೋ, ಆ ವಸ್ತುವಿನಲ್ಲಿನ ವಿಶೇಷಗುಣವು ಆ ಇಂದ್ರಿಯದಿಂದಲೇ ಗೃಹೀತವಾಗುವುದು ಎಂದು ಶಾಸ್ತ್ರಕಾರರು ಒಪ್ಪಿರುತ್ತಾರೆ. ತನ್ನಿಮಿತ್ತ ವಾಯುವು ಸ್ಪರ್ಶೇಂದ್ರಿಯಗ್ರಾಹ್ಯವಾದ ದ್ರವ್ಯ. ನೀವು ಒಪ್ಪಿರುವಂತೆ ಅದರ ವಿಶೇಷಗುಣ ಶಬ್ದ. ಶಬ್ದವೂ ಸ್ಪರ್ಶೇಂದ್ರಿಯದಿಂದ ಗೃಹೀತವಾಗಲಿ, ಆಗ ಸ್ಪರ್ಶೇಂದ್ರಿಯವನ್ನು ಹೊಂದಿರುವ ಕಿವುಡನಿಗೂ ಶಬ್ದದ ಜ್ಞಾನವಾಗಬೇಕಾದೀತು ಎಂದು ಭಾವ.

2. ಪ್ರತಿವಾದಿಯು ಧ್ವನಿಯನ್ನು ವಾಯುವಿನ ಗುಣ ಎಂದು ಒಪ್ಪಿರುವನು. ಶಬ್ದಗಳಾದರೋ ಶ್ರೋತ್ರೇಂದ್ರಿಯಕ್ಕೆ ಗೋಚರವಾಗುವುದು ಎಲ್ಲರ ಅನುಭವಸಿದ್ಧ. ಅಂತಾದಮೇಲೆ, ಶ್ರೋತ್ರೇಂದ್ರಿಯಕ್ಕೆ ಗೋಚರವಾಗುವ ಶಬ್ದಕ್ಕೆ ಶ್ರೋತ್ರೇಂದ್ರಿಯದಿಂದ ಗೋಚರವಾಗದ ಧ್ವನಿಯು ಹೇಗೆತಾನೆ ವ್ಯಂಜಕವಾದೀತು? ಘಟ ಮತ್ತು ಘಟದ ವ್ಯಂಜಕವಾದ ಆಲೋಕ ಇವೆರಡೂ ಒಂದೇ ಇಂದ್ರಿಯಕ್ಕೆ ಗೋಚರವಾಗುವ ವಸ್ತುಗಳು ಅದರಂತೆ ಇಲ್ಲಿಯೂ ವ್ಯಂಗ ವ್ಯಂಜಕಗಳು ಒಂದೇ ಇಂದ್ರಿಯದಿಂದ ಗ್ರಾಹ್ಯವಾಗುವ ವಸ್ತುಗಳಾಗಬೇಕು ಎಂದು ಭಾವ.

ಮತ್ತು (ಅದರ ವ್ಯಂಜಕವಾದ) ಬೆಳಕು ಮುಂತಾದವುಗಳಲ್ಲಿ ಕಂಡಿದೆ[1]. ಮತ್ತೂ ಸಹ ಒಂದು ವರ್ಣವು ವ್ಯಕ್ತವಾದೊಡನೆ ಅಲ್ಲಿರುವ ಎಲ್ಲ ವರ್ಣಗಳ ಅಭಿವ್ಯಕ್ತಿಯೂ ಆಗಿ ಎಲ್ಲ ವರ್ಣಗಳೂ ಉಪಲಬ್ಧವಾಗಬೇಕಾದೀತು (ಎನ್ನುವ ಸಂದೇಹವು) ಪರಿಹೃತವಾಗಲಿಲ್ಲ ಆದುದರಿಂದಲೂ (ಈ ವಾದವು ಸರಿಯಾದುದಲ್ಲ)[2]. ಮತ್ತೂ ಸಹ ಯಾವ ವರ್ಣವು ದೇವದತ್ತನ ಶ್ರೋತ್ರೇಂದ್ರಿಯದಲ್ಲಿ ಅಭಿವ್ಯಕ್ತವಾಯಿತೋ ಅದೇ (ವರ್ಣವು) ಯಜ್ಞದತ್ತನ ಶ್ರೋತ್ರದಿಂದಲೂ ಸನ್ನಿಕೃಷ್ಟವಾಗಿದೆ (ವರ್ಣವು ವ್ಯಾಪ್ತ ಎಂದು ಒಪ್ಪಲಾಗಿದೆ) ಆದುದರಿಂದ ದೂರದಲ್ಲಿರುವ ಅವನಿಂದಲೂ (ಯಜ್ಞದತ್ತನಿಂದಲೂ) ಗೃಹೀತವಾಗಬೇಕಾದೀತು[3]?, ಆದುದರಿಂದ ಹೇಳುತ್ತಾರೆ '**ಆಕಾಶಗುಣೇ**' ಎಂದು.

**ಶಬ್ದದ ಪ್ರತಿನಿಯತಶ್ರವಣವ್ಯವಸ್ಥೆ**

**ಇದಮುಕ್ತಂ ಭವತಿ- ವಕ್ತೃಪ್ರೇರಿತೋ ವಾಯುಃ ಉರಃಪ್ರಭೃತಿಭಿಃ ಸ್ಥಾನೈಃ ಸಂಯುಕ್ತಃ ತತ್‌ಸ್ಥಾನಸಂಯುಕ್ತಾಕಾಶೇ ಧ್ವನಿಲಕ್ಷಣಂ ಶಬ್ದಮುತ್ಪಾದಯತಿ । ಸ ಚ ದೇಶಾನ್ತರೇ ಪ್ರತಿಶಬ್ದಮ್ । ಯಸ್ತು**

1. ಘಟದ ಜ್ಞಾನಕ್ಕೆ ಬೆಳಕಿನ ಅವಶ್ಯಕತೆ ಇದೆ, ಆದುದರಿಂದ ಬೆಳಕನ್ನು ಘಟದ ವ್ಯಂಜಕ ಎನ್ನುವರು. ವ್ಯಂಗ್ಯವಾದ ಘಟ ಮತ್ತು ವ್ಯಂಜಕವಾದ ಬೆಳಕು ಇವೆರಡೂ ಸಹ ಒಂದೇ ಇಂದ್ರಿಯದಿಂದ ಗೃಹೀತವಾಗಿರುವವು. ಅದರಂತೆ ಪ್ರಕೃತದಲ್ಲಿ ಸ್ಪರ್ಶೇಂದ್ರಿಯದಿಂದ ಗೃಹೀತವಾಗುವ ವಾಯುವಿನ ವಿಶೇಷಗುಣವಾದ ಧ್ವನಿಯು ಸ್ಪರ್ಶೇಂದ್ರಿಯದಿಂದಲೇ ಗೃಹೀತವಾಗಬೇಕು. ಧ್ವನಿಯನ್ನು ಶಬ್ದದ ವ್ಯಂಜಕ ಎಂದು ಪ್ರತಿವಾದಿಯು ಒಪ್ಪಿರುವನು. ಶಬ್ದವಾದರೋ ಶ್ರೋತ್ರೇಂದ್ರಿಯದಿಂದ ಗೃಹೀತವಾಗುವುದು ಎಲ್ಲರ ಅನುಭವ. ಹೀಗಿರುವಾಗ ವಾಯುವಿನ ಗುಣವಾದ ಧ್ವನಿಯನ್ನು ಶಬ್ದದ ವ್ಯಂಜಕ ಎಂದು ಹೇಗೆ ಒಪ್ಪಲು ಶಕ್ಯ? ಎಂದು ಭಾವ.

2. ವಾಯುವಿನ ಗುಣ ಧ್ವನಿ, ಅದು ವರ್ಣಗಳ ವ್ಯಂಜಕ, ಅಂತಾದಮೇಲೆ ವ್ಯಂಜಕವಾದ ಧ್ವನಿಯು ಎಲ್ಲ ವರ್ಣಗಳ ವ್ಯಂಜಕವಾಗಲಿ. ಘಟವ್ಯಂಜಕವಾದ ಆಲೋಕವು ತನ್ನ ಒಡಲಿನಲ್ಲಿನ ಎಲ್ಲ ಘಟಪಟಾದಿ ವಸ್ತುಗಳನ್ನೂ ಅಭಿವ್ಯಕ್ತಿಗೊಳಿಸುವಂತೆ ಎಂದು ಭಾವ.

3. ಶಬ್ದವು ಆಕಾಶದ ಗುಣ, ಶ್ರೋತ್ರೇಂದ್ರಿಯದಿಂದ ಗೃಹೀತವಾಗುವುದು, ಸರ್ವತ್ರ ವ್ಯಾಪ್ತ ಅಂತಾದಲ್ಲಿ ಒಂದು ವರ್ಣವು ಒಬ್ಬ ವ್ಯಕ್ತಿಗೆ ಗೃಹೀತವಾದೊಡನೆ ಸರ್ವತ್ರವ್ಯಾಪ್ತವಾದ ಆ ವರ್ಣದ ಅಭಿವ್ಯಕ್ತಿಯು ಎಲ್ಲರಿಗೂ ಆಗಲಿ ಎಂಬ ಭಾವ.

ಕರ್ಣಶಷ್ಕುಲ್ಯವಚ್ಛಿನ್ನಾಕಾಶಪ್ರದೇಶೇ ಸಮುತ್ಪನ್ನಃ ತದ್ಗುಣೋ ಧ್ವನಿಃ, ತಸ್ಮಿನ್ ವ್ಯಜ್ಯಮಾನೋ ವರ್ಣಃ ಶ್ರೋತ್ರೇಣ ಗೃಹ್ಯತೇ । ಧ್ವನಿಶ್ಚಾಶುತರವಿನಾಶಿತ್ವೇನ ವ್ಯಞ್ಜಕಾಭಾವಾನ್ನ ಸರ್ವದೋಪಲಬ್ಧಿಪ್ರಸಙ್ಗಃ । ಭೂತಾಕಾಶಮೇವ ಶ್ರೋತ್ರಮ್ । ತದ್ಗುಣ ಏವ ಧ್ವನಿಃ । ತಚ್ಚ ಸ್ವತಃ ಸಾವಯವಮ್ । ಅತಃ 'ಪ್ರದೇಶವರ್ತೀ ಧ್ವನಿಃ ತದವಚ್ಛಿನ್ನಮೇವ ವರ್ಣಂ ವ್ಯಞ್ಜಯತಿ' ಇತಿ ನ ಸರ್ವೇಷಾಮುಪಲಬ್ಧಿಃ ।

ಇಷ್ಟು ಹೇಳಿದಂತಾಗುವುದು- ವಕ್ತೃವಿನ ಪ್ರಯತ್ನದಿಂದ ಪ್ರೇರಿತವಾದ ವಾಯುವು ಎದೆ ಮುಂತಾದ (ದೇಹದ ನಾನಾ) ಸ್ಥಾನಗಳಿಂದ ಸಂಬದ್ಧವಾಗಿ ಆ (ಎದೆ ಮುಂತಾದ) ಸ್ಥಾನದಿಂದ ಸಂಬದ್ಧವಾದ ಆಕಾಶದಲ್ಲಿ ಧ್ವನಿ ರೂಪವಾದ ಶಬ್ದವನ್ನು ಉತ್ಪಾದಿಸುವುದು. ಅದಾದರೋ (ಆ ಶಬ್ದವಾದರೋ) ದೇಶಾಂತರದಲ್ಲಿ ಪ್ರತಿಶಬ್ದವನ್ನು (ಕೆರೆಯಲ್ಲಿನ ನೀರಿನ ಅಲೆಯಂತೆ ಶಬ್ದಾಂತರವನ್ನು ಉತ್ಪಾದಿಸುವುದು). ಯಾರ ಕಿವಿಯ ಆಲಿಯಲ್ಲಿನ ಆಕಾಶದಲ್ಲಿ ಸಮುತ್ಪನ್ನವಾದ ಅದರ (ಆಕಾಶದ) ಗುಣವಾದ ಧ್ವನಿಯು, ಅಲ್ಲಿ (ಆ ಆಕಾಶದಲ್ಲಿ) ವ್ಯಕ್ತವಾದ ವರ್ಣವು (ಆ) ಕಿವಿಯಿಂದ ಗ್ರಹಿಸಲಾಗುವುದು. ಧ್ವನಿಯಾದರೋ ಶೀಘ್ರದಲ್ಲಿ ವಿನಾಶವನ್ನು ಹೊಂದುವುದರಿಂದ ವ್ಯಂಜಕವಿಲ್ಲದಿರುವುದರಿಂದ (ವರ್ಣಗಳ) ನಿರಂತರ ಉಪಲಬ್ಧಿಯ ಪ್ರಸಂಗವಿಲ್ಲ. ಮತ್ತು ಆ ಧ್ವನಿಗಳಾದರೋ ಪ್ರತಿನಿಯತವರ್ಣಗಳಿಗೆ ವ್ಯಂಜಕಗಳು, ಆದುದರಿಂದ ಎಲ್ಲ ವರ್ಣಗಳ ಉಪಲಬ್ಧಿಯಾಗಲಿ ಎನ್ನುವ ಪ್ರಸಂಗವಿಲ್ಲ[2]. ಭೂತಾಕಾಶವೇ ಶ್ರೋತ್ರೇಂದ್ರಿಯ, ಅದರ ಗುಣವೇ ಧ್ವನಿ, ಅದಾದರೋ (ಆ ಭೂತಾಕಾಶವಾದರೋ) ಸ್ವತಃ ಅವಯವಗಳಿಂದ

2. ಧ್ವನಿಯು ಶಬ್ದದ ವ್ಯಂಜಕ, ಧ್ವನಿಯ ಸಹಾಯದಿಂದ ವರ್ಣಗಳು ಪ್ರಕಟವಾಗುವವು. ಪ್ರಕಟವಾದ ಶಬ್ದಗಳನ್ನು ಕಿವಿಗಳು ಗ್ರಹಿಸುವವು. ಕ್ಷಣಿಕವಾದ ಧ್ವನಿಯು ನಷ್ಟವಾಗುವುದರಿಂದ, ಶಬ್ದವ್ಯಂಜಕವಾದದು ಇಲ್ಲದಂತಾಗುವುದು, ಹಾಗಾಗಿ ನಿರಂತರವಾಗಿ ಶಬ್ದವು ಕೇಳುತ್ತಿರಲಿ ಎಂದು ಸಂದೇಹಿಸಲು ಅವಕಾಶವಿಲ್ಲ. ಮತ್ತು ಸಹ ಒಂದೊಂದು ವರ್ಣಕ್ಕೆ ಒಂದೊಂದು ವ್ಯಂಜಕ ಎಂದು ಒಪ್ಪಲಾಗಿದೆ ಹಾಗಾಗಿ ಯಾವ ವರ್ಣದ ವ್ಯಂಜಕವಾದ ಧ್ವನಿಯು ಇರುವದೋ ಆ ವರ್ಣವು ಮಾತ್ರ ವ್ಯಕ್ತವಾಗುವುದು. ತನ್ನಿಮಿತ್ತ ಎಲ್ಲ ಶಬ್ದಗಳೂ ಪ್ರಕಟವಾಗಲಿ ಎನ್ನುವ ಸಂದೇಹಕ್ಕೂ ಅವಕಾಶವಿಲ್ಲ ಎಂದು ಭಾವ.

ಯುಕ್ತವಾದದು. ಆದುದರಿಂದ ಪ್ರದೇಶ(ವಿಶೇಷ)ದಲ್ಲಿರುವ ಧ್ವನಿಯು ಆ ಆಕಾಶದಲ್ಲಿಯೇ ವರ್ಣವನ್ನು ಪ್ರಕಟಗೊಳಿಸಿವುದು ಆದುದರಿಂದ ಎಲ್ಲರಿಗೂ ಉಪಲಬ್ಧವಾಗಲಿ ಎಂಬ ಶಂಕೆಗೆ ಅವಕಾಶವಿಲ್ಲ[1].

**ಸಮಾನೇಂದ್ರಿಯಗ್ರಾಹ್ಯಾಣಾಂ ಸಮಾನದೇಶಕಾಲಧರ್ಮಾಪನ್ನಾನಾಂ ಪ್ರತಿನಿಯತವ್ಯಞ್ಜಕವ್ಯಙ್ಗ್ಯತ್ವಂ ಕ್ವಾಪಿ ನೋಪಲಬ್ಧಂ? ಇತಿ ಚೇನ್ನ । ಗೋತ್ವಾಶ್ವತ್ವಾದೀನಾಂ ಪ್ರತಿನಿಯತವ್ಯಞ್ಜಕ-ವ್ಯಙ್ಗ್ಯತ್ವಸ್ಯ ಪರೈರಙ್ಗೀ-ಕೃತತ್ವಾತ್ । ಗೋತ್ವಾದೀನಾಂ ವ್ಯಕ್ತಿಸರ್ವಗತತ್ವೇನ ಸಮಾನದೇಶತ್ವಂ ನಾಸ್ತಿ? ಇತಿ ಚೇನ್ನ । ಪ್ರತ್ಯಾಸತ್ತೇರವರ್ಜನೀಯತ್ವಾತ್ । ಸಮವಾಯಾಭಾವಸ್ಯ ವರ್ಣೇಷ್ವಪಿ ಸಮತ್ವಾತ್ । ಕಿಞ್ಚ ಬ್ರಾಹ್ಮಣತ್ವ-ದ್ರವ್ಯತ್ವಾದೀನಾಂ ಪ್ರತಿನಿಯತವ್ಯಞ್ಜಕ-ವ್ಯಙ್ಗ್ಯತ್ವಮಙ್ಗೀಕೃತಮೇವ । ರೂಪೇಣ ಸಮಾನ-ದೇಶಸ್ಯಾಪಿ ಪರಿಮಾಣಸ್ಯ ಚತುಷ್ಟಯಸನ್ನಿಕರ್ಷೋಽಧಿಕೋ ವ್ಯಞ್ಜಕಃ ಸ್ವೀಕ್ರಿಯತೇ । ತಥಾ ಕ್ಷೀರನೀರಪೃಥಕ್ತ್ವಾದೇಃ ಸಮಾನಾಭಿಹಾರಾಭಾವಾದಿಃ ।**

ಸಮಾನ ಇಂದ್ರಿಯದಿಂದ ಗೃಹೀತವಾಗುವ ಒಂದೇ ದೇಶಕಾಲದಲ್ಲಿರುವ ಪದಾರ್ಥಗಳಿಗೆ ಪ್ರತ್ಯೇಕ ವ್ಯಂಗ್ಯ-ವ್ಯಂಜಕತ್ವವು ಕಂಡಿಲ್ಲ ಎಂದೆನ್ನಲಾಗದು[2].

---

1. ಆಕಾಶವು ವ್ಯಾಪ್ತ, ಅದರ ಗುಣವಾದ ಶಬ್ದವೂ ವ್ಯಾಪ್ತವಾಗುವುದು. ಒಂದೆಡೆಯಲ್ಲಿ ಶಬ್ದವು ಪ್ರಕಟವಾದಲ್ಲಿ ಆ ಶಬ್ದವು ಎಲ್ಲೆಡೆಯೂ ಪ್ರಕಟಗೊಳ್ಳಲಿ, ಆಗ ಒಬ್ಬನು ಉಚ್ಚರಿಸಿದೊಡನೆ ಎಲ್ಲರಿಗೂ ಆ ಶಬ್ದ ಕೇಳಲಿ ಎಂಬ ಸಂದೇಹವನ್ನು ಪರಿಹರಿಸುತ್ತಿದ್ದಾರೆ. ಆಕಾಶವು ಎಲ್ಲೆಡೆಯಿದ್ದರೂ ಅದು ಒಂದೇ ಅಲ್ಲ, ಆಕಾಶದಲ್ಲಿಯೂ ಅವಾಂತರ ಭೇದವು ಇದೆ. ಯಾವ ಆಕಾಶದಲ್ಲಿ ಶಬ್ದವು ಪ್ರಕಟಗೊಳ್ಳುವುದೋ ಆ ವ್ಯಾಪ್ತಿಯಲ್ಲಿನ ಶ್ರವಣೇಂದ್ರಿಯಗಳಿಗೆ ಮಾತ್ರ ಶಬ್ದದ ಗ್ರಹಣವಾಗುವುದು ಎಂದು ವ್ಯವಸ್ಥೆಯನ್ನು ಒಪ್ಪಿರಲಾಗಿರುವುದರಿಂದ ಎಲ್ಲರಿಗೂ ಶಬ್ದವು ಕೇಳಲಿ ಎನ್ನುವ ಸಂದೇಹಕ್ಕೆ ಅವಕಾಶವಿಲ್ಲ ಎಂದು ಭಾವ.

2. ಪ್ರತಿಯೊಂದು ವರ್ಣಕ್ಕೂ ಬೇರೆ ಬೇರೆ ಧ್ವನಿಗಳು ವ್ಯಂಜಕ ಎಂದು ಹೇಳಿದ್ದರಿಂದ ಪ್ರಶ್ನಿಸುತ್ತಾರೆ. ಏಕೇಂದ್ರಿಯದಿಂದ ಗೃಹೀತವಾಗುವ ಘಟ-ಪಟಗಳು ಆಲೋಕದಿಂದ ವ್ಯಂಗ್ಯವಾಗಿವೆ. ಇಂತಹ ಘಟ-ಪಟಗಳು ಒಂದೆಡೆಯಲ್ಲಿ ಒಂದೇ ಕಾಲದಲ್ಲಿರುವಾಗ ಘಟ-ಪಟಗಳಿಗೆ ಬೇರೆ ಬೇರೆ ವ್ಯಂಜಕಗಳು ಇವೆ ಎಂದು ಎಲ್ಲೂ ಕಂಡಿಲ್ಲ. ರೂಪ-ರಸಗಳಿಗೆ ಪ್ರತ್ಯೇಕವಾದ ವ್ಯಂಜಕಗಳು ಕಂಡಿದೆ. ರೂಪದ ವ್ಯಂಜಕ ಆಲೋಕ, ರಸದ ವ್ಯಂಜಕ ಲಾಲಾರಸ.

ಪುಟ 293ರಲ್ಲಿ.......

ಪ್ರತಿವಾದಿಗಳು ಗೋತ್ವ ಮತ್ತು ಅಶ್ವತ್ವಗಳಿಗೆ ಪ್ರತಿನಿಯತ ವ್ಯಂಜಕತ್ವ ಮತ್ತು ವ್ಯಂಗ್ಯತ್ವವನ್ನು ಒಪ್ಪಿರುವದರಿಂದ[1]. ಗೋತ್ವಾದಿಗಳು ಎಲ್ಲ ಗೋವ್ಯಕ್ತಿಗಳಲ್ಲಿ ಇದೆಯಾದುದರಿಂದ ಸಮಾನದೇಶತ್ವವಿಲ್ಲ ಎಂದೆನ್ನಲಾಗದು[2]. (ಗೋವಿನಲ್ಲಿ ಅಶ್ವತ್ವದ, ಅಶ್ವದಲ್ಲಿ ಗೋತ್ವದ) ಸಂಬಂಧವೂ ಅನಿವಾರ್ಯವಾದುದರಿಂದ (ಅಶ್ವತ್ವ-ಗೋತ್ವಗಳಿಗೆ ಸಮಾನದೇಶಸ್ಥಿತತ್ವವಿಲ್ಲ ಎಂದೆನ್ನಬಾರದು)[3].

---

...... ಪುಟ 292 ರಿಂದ

ಆದರೆ ಆ ಎರಡೂ ಪದಾರ್ಥಗಳು ಬೇರೆ ಬೇರೆ ಇಂದ್ರಿಯಗಳಿಂದ ಗೃಹೀತವಾಗಿರುವವು. ಆದುದರಿಂದ ಅವುಗಳ ವ್ಯಂಜಕವನ್ನು ಬೇರೇ ಎಂದು ತಿಳಿಯಲು ಬಾಧಕವಿಲ್ಲ. ಪ್ರಕೃತ ವರ್ಣಗಳಿಗೆ ಧ್ವನಿ ವ್ಯಂಜಕ, ಶ್ರೋತ್ರೇಂದ್ರಿಯ ಗ್ರಾಹಕ. ಧ್ವನಿ ಇದ್ದೊಡನೆ ಆಕಾಶದಲ್ಲಿರುವ ಎಲ್ಲ ವರ್ಣಗಳ ಉಪಲಬ್ಧಿಯಾಗಲಿ. ಒಂದೊಂದು ವರ್ಣಕ್ಕೆ ಪ್ರತ್ಯೇಕವಾದ ಧ್ವನಿಗಳು ವ್ಯಂಜಕ. ಆದುದರಿಂದ ಯಾವ ವರ್ಣದ ವ್ಯಂಜಕವಾದ ಧ್ವನಿಯು ಇರುವುದೋ ಆ ವರ್ಣವು ವ್ಯಂಗ್ಯವಾಗುವುದು ಎಂದು ಹೇಳಲು ಅವಕಾಶವಿಲ್ಲ. ಸಮಾನೇಂದ್ರಿಯ ಗೃಹೀತವಾದ ವರ್ಣಗಳಿಗೆ ಬೇರೆ ಬೇರೆ ವ್ಯಂಜಕಗಳನ್ನು ಕಲ್ಪಿಸಲು ಶಕ್ಯವಿಲ್ಲ ಎಂದು ಸಂದೇಹಿಸುವುದು ಸರಿಯಲ್ಲ ಎಂದು ತಿಳಿಸುತ್ತಾರೆ.

1. ಗೋವಿನಲ್ಲಿರುವ ಗೋತ್ವರೂಪಧರ್ಮವು ಸಾಸ್ನಾದಿಗಳನ್ನು ಹೊಂದಿರುವ ವ್ಯಕ್ತಿಯಿಂದ ವ್ಯಂಗ್ಯವಾಗಿದೆ. ಮತ್ತು ಅಶ್ವದಲ್ಲಿರುವ ಅಶ್ವತ್ವರೂಪಧರ್ಮವು ಒಂದು ಗೊರಸಿನ ಪ್ರಾಣಿವಿಶೇಷದ ವ್ಯಂಗ್ಯವಾಗಿದೆ. ಎಂದು ಪ್ರತಿವಾದಿಗಳಾದ ನೈಯಾಯಿಕರೂ ಒಪ್ಪಿರುವರು. ಸಾಸ್ನಾದಿಗಳನ್ನು ಹೊಂದಿದ ಪ್ರಾಣಿ ಮತ್ತು ಒಂದುಗೊರಸಿನ ಪ್ರಾಣಿ ಇವೆರಡೂ ಒಂದೇ ಇಂದ್ರಿಯದಿಂದ ಗೃಹೀತವಾಗುವದಾದರೂ ಇವುಗಳ ವ್ಯಂಗ್ಯಗಳಲ್ಲಿ ಭೇದವಿದೆ. ಆದರಂತೆ ವರ್ಣಗಳು ಒಂದೇ ಇಂದ್ರಿಯದಿಂದ ಗೃಹೀತವಾದರೂ ಭಿನ್ನಭಿನ್ನ ವ್ಯಂಗ್ಯಗಳಿಂದ ಪ್ರಕಟಗೊಳ್ಳಲು ಬಾಧಕವಿಲ್ಲ ಎಂದು ಭಾವ.

2. ಗೋತ್ವ ಮತ್ತು ಅಶ್ವತ್ವಗಳಿಗೆ ಸಮಾನ ಇಂದ್ರಿಯ ಗ್ರಾಹ್ಯತ್ವವಿದ್ದರೂ, ಸಮಾನದೇಶತ್ವವಿಲ್ಲ, ಕಾರಣ- ಗೋತ್ವವು ಗೋವಿನಲ್ಲಿದೆ, ಅಶ್ವತ್ವವು ಅಶ್ವದಲ್ಲಿದೆ. ಗೋತ್ವವು ಎಲ್ಲೆಡೆ ಇದೆ ಅಂದರೆ ಎಲ್ಲ ಗೋವುಗಳಲ್ಲಿದೆ ಎಂದರ್ಥ ಹೊರತಾಗಿ ಎಲ್ಲ ಪ್ರದೇಶದಲ್ಲಿದೆ ಎಂದರ್ಥವಲ್ಲ. ಸಮಾನ ದೇಶತ್ವವಿಲ್ಲದ ಪ್ರಯುಕ್ತ ಭಿನ್ನ ವ್ಯಂಗ್ಯ ವ್ಯಂಜಕತ್ವವು ಅವಕ್ಕೆ ಯೋಗ್ಯವಾಗಿದೆ. ಪ್ರಕೃತ ವರ್ಣಕ್ಕೆ ಭಿನ್ನ ದೇಶಸ್ಥಿತತ್ವವಿಲ್ಲ ಹಾಗಾಗಿ ಭಿನ್ನ ವ್ಯಂಜಕತ್ವವನ್ನು ಒಪ್ಪಬಾರದು ಎಂದು ಪ್ರಶ್ನೆಯ ಭಾವ.

3. ಗೋತ್ವ ಮತ್ತು ಅಶ್ವತ್ವವು ಭಿನ್ನದೇಶಸ್ಥವಾದುದರಿಂದ ಅವುಗಳಿಗೆ ಭಿನ್ನ ಪದಾರ್ಥವ್ಯಂಜಕತ್ವವು ಯೋಗ್ಯವಾಗಿದೆ ಎಂದೆನ್ನುವದು ತರವಲ್ಲ. ಅವುಗಳಿಗೆ ಭಿನ್ನ ದೇಶಸ್ಥತ್ವವಿಲ್ಲ ಏಕೆಂದರೆ, ಗೋವು ಮತ್ತು ಅಶ್ವವು ಏಕದೇಶದಲ್ಲಿದ್ದಾಗ ಗೋವಿನಲ್ಲಿ ಅಶ್ವತ್ವವು, ಅಶ್ವದಲ್ಲಿ ಗೋತ್ವವು ಪರಂಪರಾಸಂಬಂಧದಿಂದ ಏಕತ್ರ ಬರಬಹುದು ಎಂದು ಭಾವ.

ವರ್ಣಗಳಲ್ಲೂ ಸಮವಾಯಾಭಾವವು ಸಮವಾಗಿರುವುದರಿಂದ[1]. ಮತ್ತೂ ಸಹ ಬ್ರಾಹ್ಮಣತ್ವ ದ್ರವ್ಯತ್ವ ಮುಂತಾದವುಗಳಿಗೆ ಪ್ರತ್ಯೇಕವಾದ ವ್ಯಂಗ್ಯ-ವ್ಯಂಜಕತ್ವ ವನ್ನು ಒಪ್ಪಲಾಗಿದೆ[2]. ರೂಪದಿಂದ ಸಮಾನದೇಶಸ್ಥಿತತ್ವವಿದ್ದರೂ ಪರಿಮಾಣಕ್ಕೆ ನಾಲ್ಕು (ಪದಾರ್ಥಗಳ) ಸನ್ನಿಕರ್ಷಗಳು ವ್ಯಂಜಕ ಎಂದು ಒಪ್ಪಿರುವರು[3].

1. ಸಮವಾಯಸಂಬಂಧದಿಂದ ಏಕದೇಶಸ್ಥಿತವಾದ ಪದಾರ್ಥಗಳಿಗೆ ಭಿನ್ನಪದಾರ್ಥ-ವ್ಯಂಜಕತ್ವವಿಲ್ಲ. ಗೋತ್ವಾಶ್ವತ್ವಗಳಿಗೆ ಪರಂಪರಾಸಂಬಂಧದಿಂದ ಏಕದೇಶಸ್ಥಿತತ್ವವು ಇದ್ದರೂ. ಏಕಸಂಬಂಧದಿಂದ ಸ್ಥಿತಿಯು ಇಲ್ಲ, ತನ್ನಿಮಿತ್ತ ಭಿನ್ನದೇಶಸ್ಥಿತತ್ವವು ಇದೆ. ವರ್ಣಗಳಾದರೋ ಸಮವಾಯ ಸಂಬಂಧದಿಂದಲೇ ಇರುವುದರಿಂದ ಭಿನ್ನದೇಶಸ್ಥಿತತ್ವವು ಇಲ್ಲ ಎಂದು ಪ್ರಶ್ನಿಸಿದಲ್ಲಿ ಉತ್ತರಿಸುತ್ತಾರೆ, ವರ್ಣಗಳಿಗೂ ಅಂತಹ ಏಕದೇಶಸ್ಥಿತಿಯು ಇಲ್ಲ. ಏಕೆಂದರೆ ನೈಯಾಯಿಕರು ಶಬ್ದವನ್ನು ಆಕಾಶದ ಗುಣ ಎಂದು ಒಪ್ಪಿರುವರು. ಗುಣ-ಗುಣಿಗಳಿಗೆ ಇರುವ ಸಂಬಂಧವು ಸಮವಾಯ ಎಂದು. ಆದರೆ ನಾವು ವರ್ಣಗಳು ದ್ರವ್ಯವಿಶೇಷ ಎಂದು ಒಪ್ಪಿರುವೆವು. ಆದುದರಿಂದ 'ವರ್ಣಗಳು ಸಮವಾಯಸಂಬಂಧದಿಂದಿವೆ' ಎಂಬುವುದನ್ನು ತತ್ತ್ವವಾದಿಗಳು ಒಪ್ಪಿರುವದಿಲ್ಲ. ಆದುದರಿಂದ ಸಮಾನದೇಶಸ್ಥಿತತ್ವವು ಇಲ್ಲ ಎಂದು ಭಾವ.

2. ಗೋತ್ವವಾದರೋ ಗೋವಿನಲ್ಲಿ ಸಮವಾಯಸಂಬಂಧದಿಂದ ಇದೆ, ಅಶ್ವದಲ್ಲಿ ಗೋತ್ವವು ಬೇರೇ ಸಂಬಂಧದಿಂದ ಇದೆ, ತನ್ನಿಮಿತ್ತ ಅವುಗಳಿಗೆ ಏಕದೇಶಸ್ಥಿತತ್ವವಿಲ್ಲ ತನಿಮಿತ್ತ ಅವುಗಳಿಗೆ ಭಿನ್ನ ವ್ಯಂಜಕತ್ವವು ಯೋಗ್ಯವಾಗಿದೆ. ಆದರೆ ಗಕಾರಾದಿ ಸಕಲ ವರ್ಣಗಳು ದ್ರವ್ಯವಾದುದ-ರಿಂದ ಸಮವಾಯ ಸಂಬಂಧದಿಂದ ಇಲ್ಲದಿದ್ದರೂ ಗಕಾರವು ಶ್ರೋತ್ರದೇಶದಲ್ಲಿ ಯಾವ ಸಂಬಂಧದಿಂದ ಇದೆಯೋ ಅದೇ ಸಂಬಂಧದಿಂದ ಇತರ ಎಲ್ಲ ವರ್ಣಗಳೂ ಇರುವುದು. ಹಾಗಾದಲ್ಲಿ ಅವುಗಳಿಗೆ ಸಮಾನದೇಶಸ್ಥಿತತ್ವವು ಪ್ರಾಪ್ತವಾಯಿತು. ತನ್ನಿಮಿತ್ತ ಅವುಗಳಿಗೆ ಭಿನ್ನವ್ಯಂಗ್ಯತ್ವವನ್ನು ಒಪ್ಪುವುದು ತರವಲ್ಲ ಎಂಬ ಪ್ರಶ್ನೆಗೆ ಸಮಾಧಾನವನ್ನು ಹೇಳುತ್ತಾರೆ- 'ಕಿಞ್ಚ ಬ್ರಾಹ್ಮಣತ್ವದ್ರವ್ಯತ್ವಾದೀನಾಂ' ಎನ್ನುವುದರಿಂದ. ಬ್ರಾಹ್ಮಣತ್ವವು ದ್ರವ್ಯತ್ವವೂ ಸಮವಾಯಸಂಬಂಧದಿಂದಲೇ, ಒಂದೇ ಸಂಬಂಧದಿಂದ ಒಂದೇ ವ್ಯಕ್ತಿಯಲ್ಲಿದ್ದರೂ, ಬ್ರಾಹ್ಮಣತ್ವವು ಶಿಖಾ-ಯಜ್ಞೋಪವೀತಾದಿಗಳಿಂದ ವ್ಯಂಗ್ಯವಾಗಿದೆ. ದ್ರವ್ಯತ್ವವಾದರೋ ಗುಣಾಶ್ರಯತ್ವಾದಿ ಬೇರೇ ಧರ್ಮದಿಂದ ವ್ಯಂಗ್ಯವಾಗುವುದನ್ನು ನೈಯಾಯಿಕರು ಒಪ್ಪಿರುವರು ಎಂದು ಭಾವ.

3. ಘಟದಲ್ಲಿ ರೂಪ ಮತ್ತು ಅದರ ಪರಿಮಾಣವು ಸಮವಾಯ ಸಂಬಂಧದಿಂದಲೇ ಇವೆ, ತನ್ನಿಮಿತ್ತ ಅವುಗಳಿಗೆ ಸಮಾನದೇಶಸ್ಥಿತತ್ವವು ಇದೆ. ಹಾಗಿದ್ದರೂ ರೂಪದ ವ್ಯಂಜಕಕ್ಕಿಂತಲೂ ಅಧಿಕವಾದ ಚತುಷ್ಟಯಸನ್ನಿಕರ್ಷಾಖ್ಯ ವ್ಯಂಜಕವನ್ನು ಪರಿಮಾಣದ ಅರಿವಿಗೆ ಕಾರಣ. ಇಂದ್ರಿಯ ಮತ್ತು ಅದರ ಅವಯವ ಹಾಗೂ ಪದಾರ್ಥ ಮತ್ತು ಅದರ ಅವಯವ ಈ ನಾಲ್ಕು ಪದಾರ್ಥಗಳ ಸನ್ನಿಕರ್ಷವು ದ್ರವ್ಯಗತ ಪರಿಮಾಣದ ಅರಿವಿಗೆ ಕಾರಣ ಎಂದು ನ್ಯಾಯಶಾಸ್ತ್ರದಲ್ಲಿ ತಿಳಿಸಿರುವರು. ಅಂತಯೇ ವರ್ಣಗಳು ಸಮಾನದೇಶಸ್ಥಿತಗಳಾದರೂ ಭಿನ್ನ ಪದಾರ್ಥಗಳಿಂದ ವ್ಯಂಗ್ಯ ಎಂದು ಒಪ್ಪಿದಲ್ಲಿ ಯಾವತರಹದ ಬಾಧಕವಿಲ್ಲ ಎಂದು ಭಾವ.

ಹಾಗೆಯೇ ಹಾಲು ಮತ್ತು ನೀರು (ಬೆರೆತಾಗ) ಅವುಗಳಲ್ಲಿನ ಭೇದ ಮುಂತಾದವು ಬೆರೆಯದಿರುವಿಕೆ ಮುಂತಾದವುಗಳನ್ನು (ವ್ಯಂಜಕ ಎಂದು ಒಪ್ಪಿರುವುದರಿಂದಲೂ)[1].

**ನ ಚ ವರ್ಣವ್ಯತಿರಿಕ್ತೋ ಧ್ವನಿರ್ನಾಸ್ತೀತಿ ವಾಚ್ಯಮ್ । ದೂರಾದ್ ವರ್ಣಾಗ್ರಹಣೇಽಪಿ ಧ್ವನಿಗ್ರಹಣಾತ್ । ನ ಚೈತತ್ ಸರ್ವಮಪ್ರಾಮಾಣಿಕಮ್ । ಪ್ರತ್ಯಭಿಜ್ಞಾಪ್ರಮಾಣಸ್ಯ ಉಪಪಾದಿತತ್ವೇನ ತದ್ಬಲಲಬ್ಧತ್ವಾತ್ । ಆಗಮಾಶ್ಚಾತ್ರ ಸಾಕ್ಷಿಣಃ ಸನ್ತೀತಿ ।**

**ನನು, ವರ್ಣವ್ಯತಿರಿಕ್ತೋ ವೇದ ಏವ ನಾಸ್ತಿ, ಸ್ಫೋಟಸ್ಯಾನಙ್ಗೀಕೃತತ್ವಾತ್, ತತ್ಕಥಂ 'ವೇದಶ್ಚ' ಇತಿ ಪೃಥಗುಚ್ಯತ? ಇತ್ಯತ ಉಕ್ತಮ್ 'ತತ್‌ಕ್ರಮಾತ್ಮಕಃ' ಇತಿ । ವಿಶಿಷ್ಟಕ್ರಮವದ್ವರ್ಣಾತ್ಮಕಃ । ಅವಸ್ಥಾಭೇದಾತ್ ಪೃಥುಗುಕ್ತಿರಿತ್ಯಾಶಯಃ ।**

ವರ್ಣದಿಂದ ಭಿನ್ನವಾದ ಧ್ವನಿಯೇ ಇಲ್ಲ ಎಂದು ಹೇಳುವಂತಿಲ್ಲ, ದೂರದಿಂದ ವರ್ಣವು ಗೃಹೀತವಾಗದಿದ್ದರೂ ಧ್ವನಿಯು ಗೃಹೀತವಾಗುವುದರಿಂದ. ಇದೆಲ್ಲವೂ ಅಪ್ರಾಮಾಣಿಕ ಎಂದೆನ್ನಲಾಗದು, ಪ್ರತ್ಯಭಿಜ್ಞೆಯ ಪ್ರಾಮಾಣ್ಯವನ್ನು ಉಪಪಾದಿಸಿದ್ದರಿಂದ, ಅದರ ಬಲದಿಂದ ಇವೆಲ್ಲವೂ ಸಿದ್ಧವಾಗುವುದರಿಂದ[2]. ಆಗಮವು ಈ ವಿಷಯದಲ್ಲಿ ಪ್ರಮಾಣವಾಗಿದೆ[3].

---

1. ಘಟ-ಪಟಗಳಲ್ಲಿನ ಭೇದಜ್ಞಾನವು ಪದಾರ್ಥಗಳ ಸನ್ನಿಕರ್ಷದಿಂದಲೇ ಆಗುವುದು. ಆದರೆ ಹಾಲು ನೀರು ಬೆರೆತಾಗ ಅದರಲ್ಲಿನ ಭೇದಜ್ಞಾನವು ಆಗುವದಿಲ್ಲ. ತನ್ನಿಮಿತ್ತವಾಗಿ ಹಾಲು ಮತ್ತು ನೀರಿನಲ್ಲಿನ ಭೇದಜ್ಞಾನಕ್ಕೆ 'ಬೆರೆಯದಿರುವಿಕೆ' ಎಂಬ ಹೆಚ್ಚಿನ ಸಾಮಗ್ರಿಯನ್ನು ವ್ಯಂಜಕ ಎಂದು ಒಪ್ಪಿರುವುದು ಸರ್ವವಿದಿತ ಎಂದು ಭಾವ.

2. ವರ್ಣಗಳು ಅನಾದಿನಿತ್ಯ, ಅವು ಧ್ವನಿಯಿಂದ ವ್ಯಂಗ್ಯ, ಆ ವ್ಯಂಗ್ಯವಾದ ಧ್ವನಿಗಳು ಪ್ರತಿ ವರ್ಣಕ್ಕೆ ಬೇರೆಬೇರೆಯಾಗಿವೆ ಇತ್ಯಾದಿ ಪ್ರಮೇಯಗಳು ಕೇವಲ ಕಪೋಲಕಲ್ಪಿತವಲ್ಲ. 'ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಯು ಪ್ರಾಮಾಣಿಕವಾದುದರಿಂದ ವರ್ಣಗಳ ನಿತ್ಯತ್ವವು ಸಿದ್ಧವಾಗಿದೆ. ಅದರ ಬಲದಿಂದ ಈ ಎಲ್ಲ ಪ್ರಮೇಯಗಳನ್ನು ಒಪ್ಪಲೇ ಬೇಕಾಗುವುದು ಎಂದು ಭಾವ.

3. 'ಯಾವದ್‌ಬ್ರಹ್ಮವಿಷ್ಠಿತಂ ತಾವತೀ ವಾಕ್' ಎನ್ನುವ ವೇದವಾಣಿಯು ವರ್ಣಗಳನ್ನು ವ್ಯಾಪ್ತ ಎಂದು ಸಾರುವವು. 'ಶಬ್ದೋ ವರ್ಣಾತ್ಮಕೋ ನಿತ್ಯೋ ಧ್ವನಿರಾಕಾಶಸಂಭವಃ । ಆಕಾಶ

ಪುಟ 296ರಲ್ಲಿ........

ವರ್ಣದಿಂದ ಭಿನ್ನವಾದ ವೇದಗಳೇ ಇಲ್ಲ, ಸ್ಫೋಟವನ್ನು ಅಂಗೀಕರಿಸಿಲ್ಲವಾದುದರಿಂದ, ಆದುದರಿಂದ ಹೇಗೆ ತಾನೆ '**ವೇದಶ್ಚ**' ಎಂದು ಪ್ರತ್ಯೇಕವಾಗಿ ಹೇಳಲಾಗುವುದು? ಅದುದರಿಂದ ಉತ್ತರಿಸುತ್ತಾರೆ '**ತತ್‌ಕ್ರಮಾತ್ಮಕಃ**' ಎಂದು[1]. ವಿಶಿಷ್ಟ ಕ್ರಮದ ವರ್ಣಗಳೇ ವೇದ. ಇವುಗಳ ಸತ್ತೆಯಲ್ಲಿ ಭೇದವಿರುವುದರಿಂದ ಪ್ರತ್ಯೇಕವಾಗಿ ಪರಿಗಣಿಸಲಾಗಿದೆ ಎಂದು ಭಾವ[2].

**-: ವರ್ಣ-ಪದ-ವಾಕ್ಯಗಳ ನಿತ್ಯತ್ವಸಮರ್ಥನವು ಸಮಾಪ್ತ:-**

**॥ ಕಾರ್ಯತಾವಾದಾರಂಭ ॥**

ವೇದವು ಪ್ರಮಾಣವಾದರೂ ಅವು ಭಗವಂತನನ್ನು ಮುಖ್ಯ ಪ್ರಮೇಯನನ್ನಾಗಿ ಪ್ರತಿಪಾದಿಸಲಾರವು. ಶಬ್ದವು ಸಿದ್ಧವಸ್ತುವನ್ನು ಬೋಧಿಸದು. ಈ ಶಬ್ದವು ಈ ಪದಾರ್ಥವನ್ನು ಬೋಧಿಸುವುದು ಎಂಬ ಅರಿವು ಇರುವವನು-ವ್ಯುತ್ಪನ್ನನು ಮಾತ್ರ ತಿಳಿದಾನು. ಬಾಲಕನಿಗೆ ಈ ತಿಳಿವಳಿಕೆಯು ಹಿರಿಯರ ಚಲನವಲನಗಳನ್ನು ಗಮನಿಸುವುದರಿಂದ ಪ್ರಾಪ್ತವಾಗುವುದು. ತಾ, ಬಾ,

---

...... ಪುಟ 295 ರಿಂದ

ಏವ ಸೂಕ್ಷ್ಮಸ್ತು ಧ್ವನಿರಿತ್ಯೇವ ಶಬ್ದ್ಯತೇ। ಸ ಏವ ವ್ಯಜ್ಯಮಾನಸ್ತು ಭವೇತ್ ಕರ್ಣೈಕಗೋಚರಃ॥ ಎಂಬುವ ಸ್ಮೃತಿಯನ್ನು ಭಾಗ.3.27.34ನೇ ಶ್ಲೋಕಕ್ಕೆ ಸಂಬಂಧಿಸಿದ ತಾತ್ಪರ್ಯದಲ್ಲಿ ಉದ್ಧರಿಸಿರುತ್ತಾರೆ. ಈ ಎಲ್ಲ ಪ್ರಮಾಣಾನುಸಾರವಾಗಿ ವರ್ಣಾತ್ಮಕವಾದ ಶಬ್ದವು ನಿತ್ಯ, ವರ್ಣಗಳು ಧ್ವನಿಯಿಂದ ವ್ಯಂಗ್ಯ, ಧ್ವನಿಯು ಆಕಾಶದಲ್ಲಿ ಉತ್ಪನ್ನವಾಗುವುದು, ಧ್ವನಿಯು ಶ್ರೋತ್ರೇಂದ್ರಿಯದಿಂದ ಗೃಹೀತವಾಗುವುದು, ಇತ್ಯಾದಿಗಳೆಲ್ಲವೂ ಆಗಮದಿಂದ ತಿಳಿಯುವುದು.

1. ಕೆಲವು ವಾದಿಗಳು ಪದ, ವಾಕ್ಯ, ಮೊದಲಾದವುಗಳಿಂದ ಅಭಿವ್ಯಕ್ತಿಯಾಗುವ 'ಸ್ಫೋಟ' ಎಂಬ ಒಂದು ಪದಾರ್ಥವಿರುವದು, ಆದರಿಂದ ಶಬ್ದವಾಕ್ಯಾದಿಗಳಿಂದ ವಾಚ್ಯವಾಗುವ ಪದಾರ್ಥಗಳ ಜ್ಞಾನವಾಗುವುದು ಎಂದು ಒಪ್ಪಿರುತ್ತಾರೆ. ಹಾಗಾಗಿ ಅಂತಹ ವಾದಿಗಳಲ್ಲಿ ಪದವಾಕ್ಯಗಳಿಂದ ಭಿನ್ನವಾದ ಪದಾರ್ಥಕ್ಕೆ ಅವಕಾಶವಿದೆ. ಆದರೆ ವರ್ಣಾತ್ಮಕವೇ ವೇದ ಎಂದು ಒಪ್ಪುವ ವಾದಿಗಳಿಗೆ ಈ ಅವಕಾಶವಿಲ್ಲದ ಪ್ರಯುಕ್ತ 'ವರ್ಣಗಳು ನಿತ್ಯ' 'ವೇದಗಳು ನಿತ್ಯ' ಎಂದು ಪ್ರತ್ಯೇಕವಾಗಿ ಹೇಳುವುದು ವ್ಯರ್ಥವಲ್ಲವೇ ಎಂದು ಪೃಚ್ಛಕನ ಭಾವ.

2. ವರ್ಣದ ನಿತ್ಯತ್ವವು- ಅವ್ಯಾಕೃತಾಕಾಶದಂತೆ ನಿತ್ಯಭೂತವಾದದ್ದು. ವೇದದಲ್ಲಿನ ನಿತ್ಯತ್ವವು ಪಾರಿಭಾಷಿಕವಾದದ್ದು ಎಂದು ತಿಳಿಯುವುದು.

ಹೋಗು, ನಿಲ್ಲು ಇಂತಹ ಶಬ್ದಗಳನ್ನು ಪ್ರಯೋಗಿಸುವುದರಿಂದಲೇ ಬಾಲಕನು ವ್ಯುತ್ಪನ್ನನಾಗುವದು ಹೊರಾತಾಗಿ ಸಿದ್ಧವಸ್ತುಗಳನ್ನು ಬೋಧಿಸುವುದರಿಂದ ಅಲ್ಲ. ಹೀಗಾಗಿ ಪ್ರಾಥಮಿಕವ್ಯುತ್ಪತ್ತಿಯು ಕಾರ್ಯದಲ್ಲಿ ಎಂದಾದಲ್ಲಿ ನಂತರದ ವ್ಯುತ್ಪತ್ತಿಯೂ ಕಾರ್ಯದಲ್ಲೇ. ಹಾಗಾಗಿ ಸಿದ್ಧನಾದ ಬ್ರಹ್ಮನು ವೇದದಿಂದ ಮುಖ್ಯವಾಚ್ಯನಲ್ಲ ಎಂದು ಮೀಮಾಂಶಕರು ಪ್ರಶ್ನಿಸುವರು. ಇಲ್ಲಿ ಅತಿ ವೈಜ್ಞಾನಿಕವಾದ, ಅನುಭವಕ್ಕೆ ಅತಿ ಹತ್ತಿರವಾದ ಉಪದೇಶಗಳಿಂದ ಆಚಾರ್ಯರು ಉತ್ತರಿಸಿರುವರು. 'ಈಕೆ ನಿನ್ನ ತಾಯಿ, ಈತನು ಅಣ್ಣ' ಈ ಮುಂತಾದವುಗಳಿಂದಲೇ ಬಾಲಕನು ವ್ಯುತ್ಪನ್ನನಾಗುವನು. ಇಂದಿನ ಹಿಂದಿನ ಎಂದೆಂದಿನ ಅಕ್ಷರಮಾಲೆಯ ಪಾಠವು ಆಚಾರ್ಯರ ಮಾತಿಗೆ ಹಿಡಿದ ಕನ್ನಡಿ. ಸಾಂಸಾರಿಕದುಃಖದಿಂದ ಪಾರಾಗಲು ಹಲುಬುವ ವ್ಯಕ್ತಿಗೆ ಸಂಸಾರದಿಂದ ಪಾರಾಗಲು ಹರಿಯ ಅರಿವೇ ಮುಖ್ಯ ಎಂದು ಗುಣಪೂರ್ಣಾದಿ ಗುಣವಿಶಿಷ್ಟನು ಹರಿ ಎಂದು ಉಪದೇಶಿಸುವುದೇ ವೇದದ ಮುಖ್ಯಗುರಿ.

**ವೇದತಾತ್ಪರ್ಯದ ವಿಷಯದಲ್ಲಿ ಮೀಮಾಂಸಕರ ಅಭಿಮತ**

ಅತ್ರ ಪ್ರಾಭಾಕರಾಸ್ತ್ವಾಹುಃ- ಸ್ಯಾದೇವೋಕ್ತಂ ವೇದಪ್ರಾಮಾಣ್ಯಾದಿಕಂ ಸಮಸ್ತಮ್ । ಕಿಂ ತರ್ಹಿ? ಯದುಕ್ತಂ 'ಸದಾಗಮೈಕವಿಜ್ಞೇಯಮ್' ಇತಿ ವೇದಾನಾಂ ವಿಷ್ಣುಪ್ರತಿಪಾದಕತ್ವಂ ತನ್ನೋಪಪದ್ಯತೇ । ತಥಾಹಿ- ವಾಚ್ಯವಾಚಕಭಾವಸಮ್ಬನ್ಧಜ್ಞಾನಲಕ್ಷಣವ್ಯುತ್ಪತ್ತ್ಯಪೇಕ್ಷೋ ಹಿ ಶಬ್ದೋಽರ್ಥಂ ಬೋಧಯತಿ ನಾನ್ಯಥಾ । ಅನ್ವಯವ್ಯತಿರೇಕಾಭ್ಯಾಂ ತಥಾವಗಮಾತ್ । ವ್ಯುತ್ಪತ್ತಿಶ್ಚ ವೃದ್ಧವ್ಯವಹಾರದರ್ಶನಾದೇವ ಭವತಿ । ವೃದ್ಧವ್ಯವಹಾರಶ್ಚ ಕಾರ್ಯಪ್ರತಿಪತ್ತಿನಿಬನ್ಧನ ಇತಿ ಕಾರ್ಯಪ್ರತಿಪಾದಕತ್ವೈವ ಶಬ್ದಸ್ಯ ಯುಕ್ತಾ । ತಥಾಹಿ- 'ಚೈತ್ರ ಜಲಮಾಹರ' ಇತಿ ಪ್ರಯೋಜಕವೃದ್ಧವಾಕ್ಯ-ಶ್ರವಣಾನನ್ತರಂ ಪ್ರಯೋಜ್ಯವೃದ್ಧಸ್ಯ ಜಲಾಹರಣವಿಷಯಾಂ ಪ್ರವೃತ್ತಿಂ ದೃಷ್ಟ್ವಾ ಪಾರ್ಶ್ವಸ್ಥೋ ಬಾಲ ಏವಮಾಕಲಯತಿ । 'ಅಸ್ಯೇಯಂ ಪ್ರವೃತ್ತಿಃ ಬುದ್ಧಿಪೂರ್ವಾ ಸ್ವತಂತ್ರಪ್ರವೃತ್ತಿತ್ವಾತ್ ಮದೀಯಸ್ತನಪಾನಪ್ರವೃತ್ತಿವದ್' ಇತಿ । ಪುನಶ್ಚ ಅಸ್ಯ ಪ್ರವೃತ್ತಿಹೇತುಭೂತಾ ಬುದ್ಧಿಃ ಕಿಂ ವಿಷಯಾ? ಇತಿ ಜಿಜ್ಞಾಸಾಯಾಂ, ಏವಂ ನಿಶ್ಚಿನೋತಿ । 'ವೃದ್ಧಸ್ಯ ಪ್ರವೃತ್ತಿಹೇತುಭೂತಾ ಬುದ್ಧಿಃ ಮಮ ಪ್ರವೃತ್ತಿಹೇತುಭೂತಾ ಬುದ್ಧಿರ್ಯದ್ವಿಷಯಿಣೀ ತದ್ವಿಷಯೈವ

ಭವಿತುಮರ್ಹತಿ ಪ್ರವೃತ್ತಿಹೇತುಭೂತಬುದ್ಧಿತ್ವಾತ್ ಮದೀಯಪ್ರವೃತ್ತಿ-ಹೇತುಭೂತಬುದ್ಧಿವದ್' ಇತಿ । ಪುನರೇವಮವಧಾರಯತಿ- 'ಯದ್ವಿಷಯಾ ಸಾ ಬುದ್ಧಿಃ ಪ್ರವೃತ್ತಿಹೇತುಭೂತಾ ತದ್ವಸ್ತು ಅಸ್ಯಾನೇನ ಶಬ್ದೇನ ಬೋಧಿತಂ ತದ್ಭಾವಭಾವಿತ್ವಾತ್ । ಮಮ ತು ಪ್ರಮಾಣಾನ್ತರೇಣ' ಇತ್ಯಾವಯೋರ್ವಿಶೇಷಃ । 'ತೇನ ಯದ್ಬೋಧಾನ್ ಮಮ ಪ್ರವೃತ್ತಿಃ ತದನೇನ ಶಬ್ದೇನ ಬೋಧ್ಯತ' ಇತಿ ಶಬ್ದಸ್ಯ 'ಪ್ರವೃತ್ತಿಹೇತುಭೂತಾರ್ಥಬೋಧಕತಾ' ಇತಿ । ಏವಂ ಲೋಕೇ ಕಾರ್ಯ ಏವ ಗೃಹೀತಶಬ್ದಸಙ್ಗತಿಃ, ವೇದೇऽಪಿ ತದೇವ ಶಬ್ದಾತ್ ಪ್ರತ್ಯೇತುಮರ್ಹತಿ ।

ಈ ವಿಷಯದಲ್ಲಿ ಪ್ರಾಭಾಕರರು ಹೇಳುವರು- (ವೇದಾಂತಿಗಳು )ಹೇಳಿದ ವೇದಪ್ರಾಮಾಣ್ಯಾದಿ ಸಮಸ್ತವೂ ಇರಲಿ. ಮತ್ತೇನು? 'ಸದಾಗಮೈಕವಿಜ್ಞೇಯಮ್' ಎನ್ನುವುದರಿಂದ ವೇದಗಳಿಗೆ ಮುಖ್ಯತಯಾ ವಿಷ್ಣುಪ್ರತಿಪಾದಕತ್ವವನ್ನು ಹೇಳಿರುವುದು ಯುಕ್ತವಾದದ್ದಲ್ಲ. ಏಕೆಂದರೆ-ವಾಚ್ಯ-ವಾಚಕಭಾವ (ಶಬ್ದ ಮತ್ತು ಪದಾರ್ಥಗಳ) ಸಂಬಂಧದ ಅರಿವೆಂಬ ವ್ಯುತ್ಪತ್ತಿಯನ್ನು ಅನುಸರಿಸಿ ಶಬ್ದವು ಪದಾರ್ಥವನ್ನು ತಿಳಿಸುತ್ತದೆ ಹೊರತಾಗಿ ಬೇರೇ ಉಪಾಯಗಳಿಲ್ಲ. ಅನ್ವಯ-ವ್ಯತಿರೇಕಗಳಿಂದ ಇದು ಹಾಗೆ ತಿಳಿದ ಸಂಗತಿಯಾದುದರಿಂದ[1]. ವ್ಯುತ್ಪತ್ತಿಯಾದರೋ ಹಿರಿಯರ ವ್ಯವಹಾರವನ್ನು ಗಮನಿಸುವುದರಿಂದಲೇ ಪ್ರಾಪ್ತವಾಗುವುದು. ಹಿರಿಯರ ವ್ಯವಹಾರ-ವಾದರೋ ಕಾರ್ಯವನ್ನು ಪ್ರಚೋದಿಸುವ ಮೂಲಕವೇ ಆಗಿದೆ ಆದುದರಿಂದ ಶಬ್ದವು (ಮುಖ್ಯವಾಗಿ)ಕಾರ್ಯವನ್ನು ತಿಳಿಸುತ್ತದೆ ಎನ್ನುವುದೇ ಯುಕ್ತ[2].

1. 'ಈ ಶಬ್ದದಿಂದ ಇದು ವಾಚ್ಯ ಅಂದರೆ ಬೋಧಿತ, ಹಾಗೆಯೇ ಈ ಪದಾರ್ಥದ ವಾಚಕವು ಈ ಶಬ್ದ' ಎನ್ನುವ ಅರಿವನ್ನು ವ್ಯುತ್ಪತ್ತಿ ಎಂದು ತಿಳಿಯುವುದು. 'ಈ ವ್ಯುತ್ಪತ್ತಿಯು ಇದ್ದವಗೆ ಶಬ್ದದ ಅರ್ಥವು ಆಗುವುದು, ಇಲ್ಲದವಗೆ ಅರ್ಥವಾಗುವದಿಲ್ಲ' ಎನ್ನುವುದು ಎಲ್ಲರ ಅನುಭವದಲ್ಲಿ ಕಂಡಿದೆ ಎಂದು ಭಾವ.

2. ಹಸು, ನಾಯಿ ಇತ್ಯಾದಿ ಸಿದ್ಧಪದಾರ್ಥ ಬೋಧಕವಾದ ಶಬ್ದಗಳಿಂದ ಪ್ರಾಥಮಿಕ ವ್ಯುತ್ಪತ್ತಿಯು ಪ್ರಾಪ್ತವಾಗುವದಿಲ್ಲ. ಹೋಗು, ಮಾಡು ಇತ್ಯಾದಿ ಕಾರ್ಯಬೋಧಕ ಶಬ್ದಗಳಿಂದ ಮಾತ್ರ ಪ್ರಾಥಮಿಕವ್ಯುತ್ಪತ್ತಿಯು ಪ್ರಾಪ್ತವಾಗುತ್ತದೆ ಎನ್ನುವುದು ಮೀಮಾಂಸಕರ ವಾದ. ಈ ವಾದಕ್ಕೆ ತಮ್ಮದೇ ಆದರೀತಿಯಲ್ಲಿ ಪುಷ್ಟಿಯನ್ನು ಮುಂದಿನ ಮಾತುಗಳಿಂದ ತಿಳಿಸುತ್ತಾರೆ.

ಏಕೆಂದರೆ- 'ಚೈತ್ರ ನೀರನ್ನು ತಾ' ಎಂದು ಪ್ರಯೋಜಕವೃದ್ಧನ (ಹಿರಿಯನ) ವಾಕ್ಯವನ್ನು ಕೇಳಿದ ಅನಂತರದಲ್ಲಿ ಪ್ರಯೋಜ್ಯವೃದ್ಧನು (ಕಾರ್ಯನಿರ್ವಾಹಕನು) ನೀರನ್ನು ತರಲು ಪ್ರವೃತ್ತನಾಗುವನು ಇದನ್ನು ಪಕ್ಕದಲ್ಲಿರುವ ಬಾಲಕನು ಕಂಡು ಈ ರೀತಿಯಲ್ಲಿ ಆಲೋಚಿಸುವನು[1]. 'ನನ್ನ ಸ್ತನಪಾನಾದಿ ಪ್ರವೃತ್ತಿಗಳಂತೆ, ಈತನ ಈ ಪ್ರವೃತ್ತಿಯು ಸ್ವತಂತ್ರ ಪ್ರವೃತ್ತಿಯಾದ ನಿಮಿತ್ತ ಬುದ್ಧಿಪೂರ್ವಕವಾದ ಪ್ರವೃತ್ತಿಯೇ ಆಗಿದೆ' ಎಂದು[2]. ಈತನ ಪ್ರವೃತ್ತಿಗೆ ಕಾರಣವಾದ ಬುದ್ಧಿಯು ಯಾವುದು? ಎಂದು ಪುನಃ ಜಿಜ್ಞಾಸೆಗೆ ಒಳಗಾದಾಗ ಈ ರೀತಿಯಾಗಿ ನಿಶ್ಚಯಿಸುವನು- 'ಈರ್ವರ (ನನ್ನ ಮತ್ತು ಈ ವೃದ್ಧನ) ಬುದ್ಧಿಯೂ ಪ್ರವೃತ್ತಿಗೆ ಕಾರಣವಾದುದರಿಂದ, ನನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಯಲ್ಲಿ ತೋರಿದ ವಿಷಯವೇ ಈ ವೃದ್ಧನ ಪ್ರವೃತ್ತಿಗೆ ಕಾರಣವಾಗಿರಬೇಕು' ಎಂದು. ಮತ್ತೆ ಹೀಗೆ ಯೋಚಿಸುವನು- (ನನ್ನ) ಬುದ್ಧಿಯ ಯಾವ ವಿಷಯವು (ನನ್ನ) ಪ್ರವೃತ್ತಿಗೆ ಕಾರಣವಾಗಿದೆಯೋ ಆ ವಸ್ತುವು ಈತನಿಗೆ ಈ ಶಬ್ದಗಳು ತಿಳಿಸಿರುವವು, (ಏಕೆಂದರೆ) ಆ ಶಬ್ದಗಳು ಇದ್ದಾಗ (ಮಾತ್ರ ಈ ಪ್ರವೃತ್ತಿಯು) ಇರುವುದರಿಂದ. ನನಗಾದರೋ ಬೇರೇ ಪ್ರಮಾಣಗಳಿಂದ ಎನ್ನುವದೇ ನಮ್ಮೀರ್ವರಲ್ಲಿನ ವಿಶೇಷ[3]. ಇದರಿಂದ ಯಾವ ಅರಿವಿನಿಂದ ನನ್ನ ಪ್ರವೃತ್ತಿಯೋ ಅದು (ಆ ಅರಿವು) ಈ ಶಬ್ದದಿಂದ

1. ಮೀಮಾಂಸಕರ ಪ್ರಕೃತವಾದ ವಿಮರ್ಶದ ಸಂದರ್ಭದಲ್ಲಿ ಅನೇಕಬಾರಿ ಪ್ರಯೋಜ್ಯವೃದ್ಧ ಮತ್ತು ಪ್ರಯೋಜಕವೃದ್ಧ ಎನ್ನುವ ಶಬ್ದಗಳು ಬರಲಿದೆ. ಈ ಶಬ್ದಗಳ ಭಾವಾರ್ಥ ಹೀಗಿದೆ- ಶಬ್ದ ಮತ್ತು ಶಬ್ದದಿಂದ ಬೋಧಿತವಾಗುವ ಪದಾರ್ಥದ ಅರಿವಿರುವರು ಅಂದರೆ ವ್ಯುತ್ಪನ್ನರು ಈ ಈರ್ವರು, ಅವರಲ್ಲಿ ಓರ್ವ ಕೆಲಸಗಳನ್ನು ಆದೇಶಿಸುವವನು, ಆತನನ್ನು ಪ್ರಯೋಜಕವೃದ್ಧ ಎಂದು, ಮತ್ತೊಬ್ಬನು ಹೇಳಿದ ಕೆಲಸಗಳನ್ನು ಕಾರ್ಯಗತಗೊಳಿಸುವವ, ಆತನನ್ನು ಪ್ರಯೋಜ್ಯವೃದ್ಧ ಎಂದು ತಿಳಿಯುವುದು.

2. ಬಾಲಕನು ಸ್ತನಪಾನದಲ್ಲಿ ಇನ್ನೊಬ್ಬರಿಂದ ನಿಯುಕ್ತನಾಗಿ ಪ್ರವೃತ್ತನಾಗಿರುವುದಿಲ್ಲ ತಾನೆ? ಎತ್ತು ಮುಂತಾದ ಪ್ರಾಣಿಗಳಲ್ಲಿ ಪ್ರವೃತ್ತಿಯು ಕಂಡಿದೆ, ಆದರೆ ಆ ಪ್ರವೃತ್ತಿಯು ಇನ್ನೊಬ್ಬರಿಂದ ನಿಯುಕ್ತವಾದದ್ದು. ಪ್ರಸಕ್ತನಾದ ವ್ಯಕ್ತಿಯಾಗಲಿ ತಾನಾಗಲಿ ಹಾಗಲ್ಲ ಎಂದು ಭಾವ.

3. ವೃದ್ಧನು ಪ್ರವೃತ್ತನಾಗುವ ಮುನ್ನ ಶಬ್ದವು ನಿಯಮೇನ ಇರುವುದು, ಮಗುವಿನ ಪ್ರವೃತ್ತಿಗೆ ಶಬ್ದವಿಲ್ಲ, ಅಂದರೆ ಮಗುವು ತಾನೇ ಸ್ವತಃ ಪ್ರವೃತ್ತವಾಗುವುದು. ಇದು ಈ ಎರಡು ವಿಧವಾದ ಪ್ರವೃತ್ತಿಗಳಲ್ಲಿನ ವ್ಯತ್ಯಾಸ ಎಂದು ಭಾವ.

ಬೋಧಿತವಾಗಿದೆ, ಆದುದರಿಂದ ಶಬ್ದವು ಪ್ರವೃತ್ತಿಗೆ ಕಾರಣವಾದ ವಿಷಯವನ್ನು ತಿಳಿಸುವುದು ಎಂದು.

**ಪುನಶ್ಚ ಕೋऽಸೌ ಪ್ರವೃತ್ತಿಹೇತುಭೂತಃ ಶಬ್ದಬೋಧ್ಯೋऽರ್ಥ ಇತ್ಯವ-ಧಾರಯಿತುಂ ಸ್ವಾತ್ಮನಿ ಪ್ರತಿಪನ್ನಂ ಪ್ರವೃತ್ತಿಹೇತುಭೂತಾರ್ಥಮನುಸನ್ಧತ್ತೇ । ತತ್ರ ನ ತಾವದ್ ಅಹಂ ಕ್ರಿಯಾಮಾತ್ರಂ ಫಲಮಾತ್ರಂ ಕ್ರಿಯಾಫಲ-ಸಮ್ಬನ್ಧಮಾತ್ರಂ ವಾ ಬುದ್ಧ್ವಾ ಪ್ರವೃತ್ತಃ, ಕಿನ್ತು ಕಾರ್ಯಮೇವ । 'ಮಮೇದಂ ಕಾರ್ಯಮ್' ಇತಿ ಪ್ರತೀತ್ಯ ಹಿ 'ಸ್ತನಪಾನಾದೌ ಅಹಂ ಪ್ರವೃತ್ತ' ಇತಿ ಸ್ವಪ್ರವೃತ್ತೇಃ ಕಾರ್ಯಬೋಧಪೂರ್ವಕತಾಂ ನಿಶ್ಚಿತ್ಯ, ಅಯಮಪಿ ಕಾರ್ಯಬೋಧಾದೇವ ಪ್ರವೃತ್ತ ಇತ್ಯನುಮಾಯ ವಾಕ್ಯಸ್ಯ ತಾವತ್ ಸಾಮಾನ್ಯತಃ ಕಾರ್ಯಪರತಾಮವಧಾರಯತಿ । ತತೋ ಲಿಙ್ಗಾದ್ಯಾವಾಪೇ ಕಾರ್ಯಾವಗಮದರ್ಶನಾತ್, ತದುದ್ಧಾರೇ ಚಾದರ್ಶನಾತ್ ತ ಏವ ಕಾರ್ಯಾऽವಗತಿಂ ಕುರ್ವನ್ತಿ । ಶಬ್ದಾನ್ತರಾಣಿ ಚ ತದನ್ವಿತಾನ್ ತಾನ್‌ತಾನ್ ಅರ್ಥಾನವಗಮಯನ್ತೀತಿ ಆವಾಪೋದ್ವಾಪಾಭ್ಯಾಮಧಿಗಚ್ಛತಿ ।**

ಮತ್ತೆ (ಪ್ರಯೋಜಕವೃದ್ಧನ) ಶಬ್ದದಿಂದ (ಪ್ರಯೋಜ್ಯವೃದ್ಧನ) ಅರಿವಿಗೆ ಬಂದ, ಪ್ರವೃತ್ತಿಗೆ ಕಾರಣವಾದ ವಿಷಯವು ಯಾವುದು? ಎಂದು ನಿಶ್ಚಯಿಸಲು, ತನ್ನಲ್ಲಿ ಪ್ರವೃತ್ತಿಗೆ ಕಾರಣವಾದ ಪದಾರ್ಥದ(ಯಾವ ಪದಾರ್ಥ ಎಂಬ) ಅನುಸಂಧಾನವನ್ನು ಮಾಡಿಕೊಳ್ಳುವನು. 'ನಾನಾದರೋ ಕ್ರಿಯಾ ಮಾತ್ರವನ್ನಾಗಲಿ, ಫಲವನ್ನಾಗಲಿ, ಫಲ ಮತ್ತು ಕ್ರಿಯೆಗಳ ಸಂಬಂಧವನ್ನಾಗಲಿ ತಿಳಿದು ಪ್ರವೃತ್ತನಾದದ್ದಲ್ಲ, 'ಕೇವಲ ಇದು ನನ್ನಿಂದ ಕಾರ್ಯ' (ಎಂಬ ಅರಿವಿನಿಂದ ಮಾತ್ರ ಪ್ರವೃತ್ತನಾಗಿರುವೆ)[1]. 'ನನ್ನಿಂದ ಇದು ಕಾರ್ಯ' ಎಂದು

1. ಕರ್ಮದಲ್ಲಿ ಪ್ರವೃತ್ತವಾಗಲು ಕೇವಲ ಕ್ರಿಯಾಜ್ಞಾನವು ಕಾರಣವಲ್ಲ, ಹಾಗೆಯೇ ಕ್ರಿಯೆಯ ಫಲದ ಜ್ಞಾನವೂ ಕಾರಣವಲ್ಲ, ಕ್ರಿಯೆ ಮತ್ತು ಫಲಗಳ ಸಂಬಂಧದ ಜ್ಞಾನವೂ ಕಾರಣವಲ್ಲ. ಉದಾಹರಣೆಗೆ ಹಸಿವು ಇಲ್ಲದ ವ್ಯಕ್ತಿಗೆ ಊಟವೆಂಬ ಕ್ರಿಯೆಯ ಜ್ಞಾನವಿದೆ, ಊಟದಿಂದ ಹಸಿವು ಪರಿಹಾರವಾಗುವುದು ಎಂಬ ಫಲದ ಜ್ಞಾನವೂ ಇದೆ. ಮತ್ತು ಭೋಜನಕ್ರಿಯೆ ಹಾಗೂ ಆದರ ಫಲ ಹಸಿವಿನ ನಿವಾರಣೆ ಇವುಗಳ ಸಂಬಂಧದ ಅರಿವೂ ಇದೆ. ಆದರೂ ಆ ವ್ಯಕ್ತಿಯು

ಪುಟ 301ರಲ್ಲಿ........

ತಿಳಿದಷ್ಟೇ ಸ್ತನಪಾನಾದಿಗಳಲ್ಲಿ ನಾನು ಪ್ರವೃತ್ತನಾಗಿರುವೆ ಎಂದು ತನ್ನ ಪ್ರವೃತ್ತಿಗೆ 'ಕಾರ್ಯಂ' ಎಂಬ ಜ್ಞಾನವೇ ಕಾರಣ ಎಂದು ನಿಶ್ಚಯಿಸಿ, ಈತನೂ ಸಹ 'ಕಾರ್ಯಂ' ಎಂಬ ಜ್ಞಾನದಿಂದಲೇ ಪ್ರವೃತ್ತನಾಗಿದ್ದಾನೆ ಎಂದು ಊಹಿಸಿ, ಶಬ್ದಗಳು ಸಾಮಾನ್ಯವಾಗಿ ಕಾರ್ಯವನ್ನು ಬೋಧಿಸುವದು ಎಂದು ನಿಶ್ಚಯಿಸುವನು. ನಂತರದಲ್ಲಿ (ವಾಕ್ಯಗಳಲ್ಲಿ) ಲಿಙಾದಿಗಳು (ಕಾರ್ಯವಾಚಕ ಪ್ರತ್ಯಯಗಳು) ಇದ್ದಲ್ಲಿ ಕಾರ್ಯದ ಜ್ಞಾನವಾಗುವುದರಿಂದ, ಅದು (ಲಿಙಾದಿಗಳು) ಇಲ್ಲದಿದ್ದಲ್ಲಿ (ಕಾರ್ಯದ) ಉಪಲಬ್ಧಿಯು ಇಲ್ಲದಿರುವುರಿಂದ ಅವುಗಳೇ (ಲಿಙಾದಿಗಳೇ) ಕಾರ್ಯದ ಅರಿವನ್ನು ಉಂಟುಮಾಡುವವು. (ವಾಕ್ಯದಲ್ಲಿನ) ಇತರ ಶಬ್ದಗಳಾದರೋ ಅದಕ್ಕೆ (ಕಾರ್ಯಕ್ಕೆ) ಸಂಬಂಧಿಸಿದ ಆ ಆ ಪದಾರ್ಥಗಳನ್ನು ತಿಳಿಸುತ್ತವೆ ಎಂದು (ಆ ಆ ಪದಗಳ) ಇರುವಿಕೆ ಮತ್ತು ಇಲ್ಲದಿರುವುಕೆಗಳಿಂದ ತಿಳಿಯುವುದು[1]. ಈ ರೀತಿಯಾಗಿ ಲೌಕಿಕವ್ಯವಹಾರದಲ್ಲಿ

---

...... ಪುಟ 300 ರಿಂದ

ಊಟದಲ್ಲಿ ಪ್ರವೃತ್ತನಾಗುವದಿಲ್ಲ. ಯಾರಿಗೆ 'ಈ ಕ್ರಿಯೆಯನ್ನು ನಾನು ಮಾಡಬೇಕು' ಎಂಬ ಆಲೋಚನೆಯು ಬರುವುದೋ ಆತನು ಮಾತ್ರ ಕ್ರಿಯೆಯಲ್ಲಿ ಪ್ರವೃತ್ತನಾಗುವನು ಆದುದರಿಂದ ಪ್ರವೃತ್ತಿಗೆ 'ಇದಂ ಮಯಾ ಕಾರ್ಯಂ' ಎಂಬ ಕಾರ್ಯತಾ ಜ್ಞಾನವೇ ಕಾರಣ. ಹಿರಿಯ ವ್ಯಕ್ತಿಗೆ ಸಂಧ್ಯೆ ಒಂದು ಕ್ರಿಯೆ, ಸಂಧ್ಯಾಕ್ರಿಯೆಗೆ ಪಾಪಹಾರಕತ್ವ ಫಲವಿದೆ, ಹಸಿವಿನ ನಿವೃತ್ತಿಗೆ ಭೋಜನ ಕಾರಣ ಎಂಬಿತ್ಯಾದಿಯಾಗಿ ಅರಿವು ಇರುವಂತೆ ಸ್ತನ್ಯಪಾನದಲ್ಲಿ ಪ್ರವೃತ್ತವಾಗುವ ಮಗುವಿಗೆ ಇಂತಹ ಯಾವ ಅರಿವು ಇರುವದಿಲ್ಲ. ಕೇವಲ 'ಸ್ತನ್ಯಪಾನವನ್ನು ಮಾಡಬೇಕು' 'ಮಮೇದಂ ಕಾರ್ಯಂ' ಎಂಬಿಷ್ಟೇ ಭಾವದಿಂದ ಮಾತ್ರ ಮಗುವು ಪ್ರವೃತ್ತವಾಗುವುದು. ಆದುದರಿಂದ ಕ್ರಿಯಾ ಮತ್ತು ಫಲ ಮುಂತಾದ ಜ್ಞಾನವಿರುವವನು ಪ್ರವೃತ್ತನಾಗದಿರುವುದು ಕಂಡಿದೆ, ಹಾಗೂ ಕ್ರಿಯಾದಿಗಳ ಜ್ಞಾನವಿಲ್ಲದ ಮಗುವಾದರೋ ಪ್ರವೃತ್ತವಾಗುವುದು ಕಂಡಿದೆ. ಇದರಿಂದ ಕಾರ್ಯತಾ ಜ್ಞಾನವೇ ಪ್ರವೃತ್ತಿಗೆ ಕಾರಣ ಎಂದು ಭಾವ.

1. 'ಜಲಮಾಹರ' 'ಜಲಂ ಪಿಬ' ಎಂಬಿತ್ಯಾದಿ ವಾಕ್ಯಗಳಲ್ಲಿ ಕಾರ್ಯವಾಚಕವು ವಿಭಿನ್ನವಾಗಿರುವುದು ಹಾಗೂ 'ಜಲಮಾನಯ' 'ಗಾಮಾನಯ' ಇತ್ಯಾದಿ ವಾಕ್ಯಗಳಲ್ಲಿ ಕಾರ್ಯವಾಚಕವು ಒಂದೇ ಆಗಿದ್ದರೂ ಆನಯನಕ್ರಿಯೆಗೆ ವಿಷಯವಾಗಿರುವುದು ವಿಭಿನ್ನವಾಗಿರುವುದರಿಂದ, ಆ ಆ ಸಂದರ್ಭಾನುಸಾರವಾಗಿ ಕ್ರಿಯಾಪದಗಳ ಮತ್ತು ನಾಮಪದಗಳ ಜ್ಞಾನವಾಗುವುದು ಎಂದು ಭಾವ.

ಶಬ್ದಗಳು ಕಾರ್ಯದಲ್ಲಿಯೇ ಸಂಗತವಾಗಿವೆ ಎಂದರಿತಾಗ ವೇದದಲ್ಲೂ ಅದೇ (ಕಾರ್ಯವೇ) ಶಬ್ದದಿಂದ ಬೋಧಿತವಾಗುತ್ತದೆ ಎನ್ನುವುದೇ ಯೋಗ್ಯವಾಗಿದೆ.

**ತತ್ರ ಲಿಙ್ಗಾದಿಪ್ರತ್ಯಯಃ ಕಾರ್ಯಶರೀರಮೇವಾಭಿದಧಾತಿ, ಪ್ರಕೃತಿಸ್ತದ್ವಿಷಯಮ್, ಪದಾನ್ತರಾಣಿ ಚ ಪ್ರಕೃತ್ಯರ್ಥವಿಶೇಷಣಂ ಕಾರಕಂ, ತದ್ವಿಶೇಷಣಂ ನಾಮಧೇಯಂ, ನಿಯೋಜ್ಯಂ ಚಾಭಿದಧತಿ ಕಾರ್ಯಪ್ರತಿಪತ್ತೌ ವ್ಯಾಪ್ರಿಯನ್ತೇ । ಸನ್ನಿಪತ್ಯೋಪಕಾರಕಾಙ್ಗವಾಕ್ಯಾನಿ ಯದ್ಯಪಿ ಕಾರ್ಯಾನ್ತರಶೂನ್ಯಾನಿ ತಥಾಽಪಿ ಪ್ರಧಾನಕಾರ್ಯಾನ್ವಿತಸ್ವಾರ್ಥಾಭಿಧಾಯಕತಯಾ ಕಾರ್ಯಪ್ರತಿಪತ್ತಾವೇವ ವ್ಯಾಪ್ರಿಯನ್ತೇ । ಮನ್ತ್ರಾ ಅಪಿ ಕಾರ್ಯಾಙ್ಗಭೂತಾರ್ಥಸ್ಮಾರಕತಯಾ ತತ್ರೈವ ನಿಯುಕ್ತಾಃ ಕಾರ್ಯ ಏವ ವ್ಯಾಪಾರವನ್ತಃ । ಅರ್ಥವಾದಾ ಅಪಿ ತತ್ರೈವ ರುಚಿಮುತ್ಪಾದಯನ್ತ ಉಪಯುಜ್ಯನ್ತ ಇತಿ ಕೃತ್ಸ್ನ ಏವ ವೇದಃ ಕಾರ್ಯೇ ಪ್ರಮಾಣಮ್ ।**

ಅಲ್ಲಿ (ವೇದದಲ್ಲಿ) ಲಿಙ್ಗಾದಿ ಪ್ರತ್ಯಯವು ಕಾರ್ಯವನ್ನು ತಿಳಿಸುತ್ತದೆ. (ಧಾತುವಿನ) ಪ್ರಕೃತಿಯು ಅದರ (ಕಾರ್ಯದ) ವಿಷಯವನ್ನು (ತಿಳಿಸುವುದು). ಉಳಿದ ಪದಗಳು ಪ್ರಕೃತಿ ಪ್ರತಿಪಾದಿತದ (ಧಾತುವಿನ ಮೂಲ ಶಬ್ದದಿಂದ ಪ್ರತಿಪಾದಿತವಾದ ಕಾರ್ಯದ) ವಿಶೇಷಣವನ್ನು , ಕಾರಕವು ಅದರ ವಿಶೇಷಣವಾದ ನಾಮಧೇಯ ಮತ್ತು ನಿಯೋಜ್ಯವನ್ನು ತಿಳಿಸುತ್ತವೇ (ಒಟ್ಟಿನಲ್ಲಿ ಎಲ್ಲ ಶಬ್ದಗಳು) ಕಾರ್ಯದ ಜ್ಞಾನದಲ್ಲಿಯೇ ತೊಡಗಿಕೊಂಡಿವೆ[1].

---

1. ಈ ಮೇಲಿನ ಉಪನ್ಯಾಸದ ಅಭಿಮತವನ್ನು ಹೀಗೆ ಸಂಗ್ರಹಿಸಬಹುದು- ರಾಮಂ, ರಾಮೇಣ ಇತ್ಯಾದಿಯಾಗಿ ರಾಮ ಶಬ್ದದ ಮುಂದಿನ ಅನುಸ್ವಾರಾದಿವಿಭಕ್ತಿಪ್ರತ್ಯಯಗಳನ್ನು ಕರ್ಮಾದಿ ಕಾರಕಬೋಧಕಗಳು ಎಂದು ವ್ಯವಹರಿಸುವರು. 'ರಾಮನನ್ನು ಕರೆ' ಎನ್ನುವ ವಾಕ್ಯದಲ್ಲಿ ಕರೆ ಎನ್ನುವ ಕ್ರಿಯೆಗೆ 'ನನ್ನು' ಎನ್ನುವದು ಕರ್ಮಕಾರಕ ಎಂದು ತಿಳಿಯುವುದು. 'ಕಟ್ಟಿಗೆಯನ್ನು ಕತ್ತಿಯಿಂದ ಕಡಿ' ಎನ್ನುವ ವಾಕ್ಯದಲ್ಲಿ 'ಕಡಿ' ಎನ್ನುವ ಕ್ರಿಯೆಗೆ 'ಯನ್ನು' ಎನ್ನುವುದು ಕರ್ಮಕಾರಕ ಮತ್ತು 'ಇಂದ' ಎನ್ನುವುದು ಕರಣ ಕಾರಕ. ಹೀಗೆ ಐದು ವಿಭಕ್ತಿಗಳನ್ನು ಕರ್ಮಾದಿ ಕಾರಕ ಬೋಧಕಗಳು ಎಂದು ವ್ಯವಹರಿಸಲಾಗುವುದು. ರಾಮಂ' ಇತ್ಯಾದಿ ಸ್ಥಳಗಳಲ್ಲಿ 'ರಾಮ' ಎನ್ನುವುದು ಪ್ರಕೃತಿ ಎಂದು, ಅನುಸ್ವಾರಾದಿಗಳನ್ನು ಕಾರಕಪ್ರತ್ಯಯ ಎಂದು ತಿಳಿಯುವುದು. ಹಾಗೆಯೇ ಕ್ರಿಯಾಸೂಚಕ ಪದಗಳಲ್ಲೂ ಧಾತುವಿನ

ಪುಟ 303ರಲ್ಲಿ........

...... ಪುಟ 302 ರಿಂದ

ಮೂಲರೂಪವನ್ನು 'ಪ್ರಕೃತಿ' ಎಂದು, ಅದರೊಡನೆ ಇರುವ ಪ್ರತ್ಯಯಗಳನ್ನು ಲಿಂಗ್ ಲೋಟ್ ತವ್ಯಾದಿ ಹೆಸರುಗಳಿಂದ ವ್ಯವಹರಿಸುವರು. ಲಿಂಗ್ ಲೋಟ್ ಮುಂತಾದ ಪ್ರತ್ಯಯಗಳು ಕಾರ್ಯವನ್ನು, ಧಾತುವಿನ ಪ್ರಕೃತಿಯು ಕಾರ್ಯದ ಸ್ವರೂಪವನ್ನು ತಿಳಿಸುವುದು. ಪ್ರಕೃತ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂದು ಒಂದು ವೇದವಾಕ್ಯವಿದೆ. ಇದು ಒಂದು ಪ್ರಧಾನ ವಾಕ್ಯ. ಸ್ವರ್ಗಕಾಮಿಯು ಜ್ಯೋತಿಷ್ಟೋಮಯಜ್ಞದಿಂದ ಹೋಮಿಸಬೇಕು, ಎನ್ನುವುದು ಇದರ ಸಾಮಾನ್ಯ ಭಾವ. 'ಸ್ವರ್ಗಕಾಮೀ ಜ್ಯೋತಿಷ್ಟೋಮೇನ ಅಪೂರ್ವಂ ಭಾವಯೇತ್' ಎಂದು ಶಾಸ್ತ್ರಭಾಷೆಯಲ್ಲಿ ಅನುವಾದಿಸಲಾಗುವುದು. 'ಸ್ವರ್ಗಕಾಮಿಯು ಜ್ಯೋತಿಷ್ಟೋಮದಿಂದ (ಸ್ವರ್ಗಪ್ರಾಪ್ತಿಯ ಪರ್ಯಂತಯಿರುವ) ಅಪೂರ್ವವನ್ನು ಭಾವಿಸಬೇಕು' ಎಂದು ಕನ್ನಡೀಕರಿಸಬಹುದು. ಯಜ್ಞವನ್ನು ಯಾರು ಆಚರಿಸಬೇಕು, ಅಂದರೆ ಈ ಕರ್ಮಕ್ಕೆ ಅಧಿಕಾರಿಯು ಯಾರು? ಎನ್ನುವ ಪ್ರಶ್ನೆಗೆ ಪ್ರಥಮಾ ವಿಭಕ್ತ್ಯಂತವಾದ ಪದವು ಉತ್ತರಿಸುತ್ತದೆ. ಪ್ರಕೃತ ವಾಕ್ಯದಲ್ಲಿ 'ಸ್ವರ್ಗಕಾಮಃ' ಎನ್ನುವ ಪದವು ಯಜಮಾನನ್ನು ಬೋಧಿಸುವ ಪದವಾಗಿದೆ. ವಿಸರ್ಗವು ಕರ್ತೃವನ್ನು ತಿಳಿಸಿದರೆ 'ಸ್ವರ್ಗಕಾಮ' ಎನ್ನುವ ಪ್ರಕೃತಿಯು ಕರ್ತೃವಿನ ಸ್ವರೂಪವನ್ನು ತಿಳಿಸುತ್ತದೆ. ಕರ್ತೃವನ್ನು ಬೋಧಿಸುವ ವಿಸರ್ಗದೊಡನೆ ಇರುವ ಪ್ರಕೃತಿಯಿಂದ ಬೋಧಿತವಾಗುವ ಸ್ವರ್ಗಕಾಮಿಯು ಈ ಕರ್ಮಕ್ಕೆ ಕರ್ತಾ ಅಂದರೆ 'ಯಜ್ಞವನ್ನು ಮಾಡು' ಎಂದು ನಿಯೋಜ್ಯನು ಎಂದು ತಿಳಿಯುವುದು. ಜ್ಯೋತಿಷ್ಟೋಮೇನ ಎನ್ನುವಲ್ಲಿನ ಕರಣಕಾರಕವನ್ನು ಬೋಧಿಸುವ ತೃತೀಯಾವಿಭಕ್ತಿಯು, ಅಂದರೆ 'ಟಾ (ಇನ)' ಎಂಬ ಪ್ರತ್ಯಯ. ಅದರೊಡನೆ ಇರುವ ಜ್ಯೋತಿಷ್ಟೋಮ ಎನ್ನುವ ಪದವು ಕರ್ಮದ ನಾಮಧೇಯವನ್ನು ತಿಳಿಸುವುದು. 'ಟಾ' ಪ್ರತ್ಯಯವು ತನ್ನೊಡನೆ ಇರುವ ಪ್ರಕೃತಿಯಿಂದ ಬೋಧಿತವಾದ ಯಜ್ಞಕ್ಕೆ ಕರಣತ್ವವನ್ನು ತಿಳಿಸುತ್ತದೆ. ಜ್ಯೋತಿಷ್ಟೋಮೇನ ಎನ್ನುವಲ್ಲಿ 'ಜ್ಯೋತಿಷ್ಟೋಮ' ಎನ್ನುವುದು ಪ್ರಕೃತಿ, 'ಟಾ (ಇನ)' ಎನ್ನುವದು ವಿಭಕ್ತಿಪ್ರತ್ಯಯ. ಹಾಗೆ ಯಜೇತ ಎನ್ನುವಲ್ಲಿ 'ಯಜ್' ಎನ್ನುವುದು ಪ್ರಕೃತಿ, ಪ್ರಕೃತಿಯೊಡನೆ ಇರುವ 'ಲಿಂಗ್ (ಇತ) ಪ್ರತ್ಯಯವು ಕಾರ್ಯ ಬೋಧಕವಾಗಿದೆ. ಅಂದರೆ ಲಿಂಗ್ ಪ್ರತ್ಯಯವು ಮಾಡು ಎಂದು ಮಾತ್ರ ಬೋಧಿಸುವುದು. ಏನನ್ನು ಮಾಡಬೇಕು ಎನ್ನುವದನ್ನು ಧಾತುವಿನ ಪ್ರಕೃತಿಯಾದ 'ಯಜ್' ಎನ್ನುವುದು ತಿಳಿಸುವುದು. ಯಜ್ಞವನ್ನು ಮಾಡಬೇಕು ಎಂದು ಬೋಧಿಸುವುದು. ಒಟ್ಟಿನಲ್ಲಿ 'ಯಜೇತ' ಎನ್ನುವ ಕಾರ್ಯವನ್ನು ಬೋಧಿಸುವ ಶಬ್ದಕ್ಕೆ ಪೂರಕವಾಗಿ, ಯಾರು ಯಜ್ಞಕ್ಕೆ ಅಧಿಕಾರಿ ಎನ್ನುವದನ್ನು 'ಸ್ವರ್ಗಕಾಮಃ' ಎನ್ನುವುದು ತಿಳಿಸುವುದು. ಯಜ್ಞಾಖ್ಯ ಕರ್ಮದ ವಿಶೇಷವನ್ನು 'ಜ್ಯೋತಿಷ್ಟೋಮೇನ' ಎನ್ನುವುದು ತಿಳಿಸುವುದು. ಹೀಗೆ ಸಮಗ್ರವೇದವು ಕಾರ್ಯಬೋಧಕವಾಗಿದೆ ಎಂದು ಭಾವ.

ಸನ್ನಿಪತ್ಯೋಪಕಾರಕ[1] ವಾಕ್ಯಗಳು ವಸ್ತುತಃ ಪ್ರತ್ಯೇಕವಾಗಿ ಕಾರ್ಯಾವನ್ನು ಹೊಂದಿಲ್ಲ. ಸ್ವಾರ್ಥವನ್ನೇ ತಿಳಿಸಿದರೂ ಪ್ರಧಾನಕಾರ್ಯದಲ್ಲಿ ಅನ್ವಿತವಾಗುವುದರಿಂದ ಕಾರ್ಯಬೋಧನದಲ್ಲೇ ಪರ್ಯವಸಿತವಾಗುವುದು. ಮಂತ್ರಗಳೂ[2] ಸಹ ಕಾರ್ಯಾಂಗಭೂತವಾದುದರ ಸ್ಮರಣೆಗೆ ಕಾರಣವಾಗುವುದರ ಮುಖಾಂತರ ಅಲ್ಲೇ (ಕಾರ್ಯದಲ್ಲೇ) ನಿಯುಕ್ತವಾಗಿರುವುದರಿಂದ ಕಾರ್ಯದಲ್ಲೇ ಪರ್ಯವಸಿತವಾಗಿವೆ. ಇನ್ನು ಅರ್ಥವಾದಗಳು[3] (ಅರ್ಥವಾದ

1. ಪ್ರಧಾನ ಯಜ್ಞವನ್ನು ಬೋಧಿಸುವ ವೇದವಾಕ್ಯಗಳನ್ನು ಪ್ರಧಾನವಾಕ್ಯ ಎಂದು, ಉಳಿದ ವಾಕ್ಯಗಳನ್ನು ಅಂಗವಾಕ್ಯ, ಮಂತ್ರವಾಕ್ಯ, ಅರ್ಥವಾದವಾಕ್ಯ ಇತ್ಯಾದಿಯಾಗಿ ವಿಭಜಿಸಿರುವರು. ಅಂಗವಾಕ್ಯಗಳು ಎರಡು ವಿಧ. ಆರಾದುಪಕಾರಕ ಮತ್ತು ಸನ್ನಿಪತ್ಯೋಪಕಾರಕ ಎಂದು. 'ಜ್ಯೋತಿಷ್ಟೋಮೇನ ಯಜೇತ' ಎನ್ನುವುದು ಪ್ರಧಾನ ಯಜ್ಞಕರ್ಮವನ್ನು ಬೋಧಿಸುವ ವಾಕ್ಯ. ಈ ಕರ್ಮಕ್ಕೆ ಅಂಗವಾದ ಕೆಲವು ಕರ್ಮಗಳನ್ನು ಬೋಧಿಸುವ ವಾಕ್ಯಗಳಿವೆ. 'ಇಡೋ ಯಜತಿ' 'ಸಮಿಧೋ ಯಜತಿ' ಇತ್ಯಾದಿಗಳು. ಯಾವ ವಾಕ್ಯೋಕ್ತವಾದ ಕರ್ಮವನ್ನು ಅನುಷ್ಠಾನಮಾಡಿದಲ್ಲಿ ಪ್ರತ್ಯಕ್ಷ ಫಲವು ಸಿಗುವುದೋ ಅದನ್ನು ಸನ್ನಿಪತ್ಯೋಪಕಾರಕ ಎಂದು, ಯಾವ ವಾಕ್ಯೋಕ್ತವಾದ ಕರ್ಮವನ್ನು ಅನುಷ್ಠಾನಮಾಡಿದಲ್ಲಿ ಅದೃಷ್ಟಫಲವು ಪ್ರಾಪ್ತವಾಗುವುದೋ ಅಂತಹ ವಾಕ್ಯಗಳನ್ನು 'ಆರಾದುಪಕಾರಕ ವಾಕ್ಯಗಳು' ಎಂದು ಕರೆಯುವರು. 'ಇಡೋ ಯಜತಿ' 'ಸಮಿಧೋ ಯಜತಿ' ಈ ಮುಂತಾದವು ಆರಾದುಪಕಾರಕವಾಕ್ಯಗಳು, ಈ ಕರ್ಮದ ಫಲವು ಅದೃಷ್ಟವಾಗಿದೆ. ಈ ಉಪಕರ್ಮದಿಂದ ಪ್ರಧಾನ ಅಪೂರ್ವಕ್ಕೆ ಕಾರಣವಾದ ಅಪ್ರಧಾನ ಅಪೂರ್ವವು ಪ್ರಾಪ್ತಾವಾಗುವುದು. 'ವ್ರೀಹೀನಾವಹನ್ತಿ' ಎಂಬಿತ್ಯಾದಿ ವಾಕ್ಯೋಕ್ತಕರ್ಮದಿಂದ ಅಂದರೆ ವ್ರೀಹ್ಯಾವಹನದಿಂದ (ಭತ್ತವನ್ನು ಕುಟ್ಟುವುದರಿಂದ) ಪ್ರತ್ಯಕ್ಷವಾಗಿ ಭತ್ತದ ಹೊಟ್ಟು ಹೋಗಿ ವಿತುಷೀಭಾವವನ್ನು ಹೊಂದಿರುವುದು ಕಾಣುವುದು. ಇದೂ ಸಹ ಅದೃಷ್ಟವಾದ ಅಪ್ರಧಾನವಾದ ಅಪೂರ್ವಕ್ಕೂ ಕಾರಣವಾಗಿದೆ ಆದರೂ ದೃಷ್ಟಫಲವೂ ಕಂಡಿದೆ. ಈ ಮುಂತಾದವು ಸನ್ನಿಪತ್ಯೋಪಕಾರಕಗಳು. ಆದರೆ ಇಂತಹ ಅಂಗವಾಕ್ಯಗಳಲ್ಲಿ ನಿಯಮೇನ ಕಾರ್ಯವನ್ನು ಬೋಧಿಸುವ (ಕ್ರಿಯೆಯನ್ನು ಬೋಧಿಸುವ) ಲಿಂಗ್, ಲೋಟ್, ತವ್ಯ ಪ್ರತ್ಯಯಗಳು ಇಲ್ಲದಿರುವುದರಿಂದ ಅವು ಅಬೋಧಕವೇ ? ಎಂದು ಸಂದೇಹಿಸುವಂತಿಲ್ಲ. ಕಾರಣ- ಅವು ಪ್ರಧಾನ ಯಾಗಕ್ಕೆ ಸಂಬಂಧಿಸಿದ ವ್ರೀಹ್ಯಾದಿ ಪದಾರ್ಥ ಬೋಧಕವಾಗಿರುವುದರಿಂದ ಸಾರ್ಥಕ.

2. 'ವ್ರೀಹೀಣಾಂ ಮೇಘಃ ಸುಮನಸ್ಯಾಮಾನಃ' ಇತ್ಯಾದಿ ಮಂತ್ರಗಳೂ ಸಹ ಕಾರ್ಯವನ್ನು ಬೋಧಿಸದಿದ್ದರೂ ಕಾರ್ಯಾಂಗವಾದ ಪುರೋಡಾಶಾದಿ ಹವಿಃಪದಾರ್ಥಗಳ, ದೇವತೆಗಳ ಸ್ಮರಣೆಯನ್ನು ತಂದು ಕೊಡುವುದರಿಂದ ಸಾರ್ಥಕ.

3. 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದ ವಾಕ್ಯಗಳಾದರೋ (ದೇವತಾಯಜ್ಞಾದಿಗಳನ್ನು ಸ್ತುತಿಸುವ ವಾಕ್ಯಗಳು) ಬೋಧಿಸಿದ ಕರ್ಮದಲ್ಲಿ ಪ್ರಾಶಸ್ತ್ಯಜ್ಞಾನವನ್ನು, ಶೀಘ್ರಪ್ರವೃತ್ತಿಯನ್ನು ಉಂಟು ಮಾಡುವವು , ಹಾಗಾಗಿ ಸಮಗ್ರ ವೇದಗಳು ಕಾರ್ಯಬೋಧಕವಾಗಿವೆ ಎಂದು ಭಾವ.

ವಾಕ್ಯಗಳು) ಕಾರ್ಯದಲ್ಲಿ ಋಚಿಯನ್ನು ಉತ್ಪಾದಿಸುವ ಮುಖಾಂತರ ಕಾರ್ಯದಲ್ಲೇ ಉಪಯುಕ್ತವಾಗಿವೆ ಎಂದು ಸಮಗ್ರ ವೇದಗಳು ಕಾರ್ಯವನ್ನೇ ಬೋಧಿಸುವವು.

**ಕಾರ್ಯಞ್ಚ- 'ಕೃತಿಸಾಧ್ಯತ್ವೇ ಸತಿ ಕೃತ್ಯುದ್ದೇಶ್ಯಮ್' । ಕೃತಿಶ್ಚ ಪ್ರಯತ್ನಃ। ತಚ್ಚ ಲೋಕೇ ಭಾವಾರ್ಥೋ ವೇದೇ ತ್ವಪೂರ್ವಮ್ । ಅತ ಏವ ವೇದಾನ್ತಾನಾಮಪಿ ಕರ್ತೃಸ್ವರೂಪಪ್ರತಿಪಾದಕತ್ವೇನ ದೇವತಾಪ್ರತಿ-ಪಾದಕತ್ವೇನ ವಾ ಕಾರ್ಯಪರತ್ವೈವ । ಪ್ರಕರಣಭೇದಾತ್ ತದನಙ್ಗೀಕಾರೇಽಪಿ 'ಆತ್ಮಾ ಜ್ಞಾತವ್ಯಃ' ಇತ್ಯಪುನರಾವೃತ್ತಯೇ ಸಮಾಮ್ನಾತೇನ ವಿಧಿನಾ ಏಕವಾಕ್ಯತಾಂ ಆಶ್ರಿತ್ಯ ಕಾರ್ಯಪರತ್ವಮೇವ ವರ್ಣನೀಯಮ್ । ತದೇವಂ ಕಾರ್ಯಾನ್ವಿತ ಏವಾರ್ಥೇ ಸರ್ವಶಬ್ದಾನಾಂ ವ್ಯುತ್ಪತ್ತಿದರ್ಶನಾತ್ 'ಕೇವಲಸಿದ್ಧಾರ್ಥೇ ತದಭಾವಾನ್ನ ಸಿದ್ಧಸ್ವರೂಪೇ ವಿಷ್ಣೌ ವೇದಸ್ಯ ಪ್ರತಿಪಾದಕತ್ವಂ ಸಮ್ಭವತಿ' ಇತಿ ।**

ಕೃತಿಯಿಂದ ಸಾಧ್ಯವಾದದನ್ನು ಮತ್ತು ಕೃತಿಯ ಉದ್ದೇಶಿತವಾದದ್ದನ್ನು 'ಕಾರ್ಯ' ಎಂದು (ತಿಳಿಯುವುದು)[1]. ಕೃತಿ ಅಂದರೆ ಪ್ರಯತ್ನ. ಅದಾದರೋ

1. ಪ್ರಕೃತ ಆರಬ್ಧವಾದ ವಾದಸರಣಿಯನ್ನು 'ಕಾರ್ಯತಾವಾದ' ಎಂದು ಕರೆಯುವರು. ವ್ಯವಹಾರದಲ್ಲಿ ಪ್ರಾಯಕವಾಗಿ ನಾವು ಆಚರಿಸುವ ಕರ್ಮದಿಂದ ಸಾಧ್ಯವಾದದ್ದನ್ನು 'ಕಾರ್ಯ' ಎಂದು ಕರೆಯುವರು. ಇಲ್ಲಿರುವ ಕಾರ್ಯ ಶಬ್ದವು ಪಾರಿಭಾಷಿಕ ಶಬ್ದವಾಗಿದೆ. ಆದುದರಿಂದ ಈ ಶಬ್ದವನ್ನು ಯಾವ ಅಭಿಪ್ರಾಯದಲ್ಲಿ ಬಳಸಲಾಗಿದೆ ಎನ್ನುವದನ್ನು ಇಲ್ಲಿ ವಿವರಿಸುತ್ತಿರುವರು. 'ಕೃತಿಸಾಧ್ಯತ್ವೇ ಸತಿ ಕೃತ್ಯುದ್ದೇಶ್ಯತ್ವಂ' ಎಂದು. ಕೃತಿಸಾಧ್ಯತ್ವಂ- ನಮ್ಮ ಕರ್ಮದಿಂದ ಸಾಧಿಸಲು ಯೋಗ್ಯವಾಗಿರುವುದು ಮತ್ತು ಕೃತ್ಯುದ್ದೇಶ್ಯತ್ವಂ- 'ನಾನು ಕರ್ಮ-ದಿಂದ ಇದನ್ನು ಸಾಧಿಸುವೆನು' ಎಂಬ ಇಚ್ಛೆಗೆ ವಿಷಯವಾದದ್ದನ್ನು 'ಕಾರ್ಯ' ಎಂದು ಪ್ರಕೃತದಲ್ಲಿ ವ್ಯವಹರಿಸಲಾಗುವುದು. ಪ್ರಕೃತ ಕಾರ್ಯತಾದ ಲಕ್ಷಣದಲ್ಲಿ ಕೃತಿಸಾಧ್ಯತ್ವ ಮತ್ತು ಕೃತ್ಯುದ್ದೇಶ್ಯತ್ವ ಎಂದು ಎರಡು ದಳಗಳು ಇವೆ. 'ಚಂದ್ರಮಂಡಲವನ್ನು ತರುವೆನು' ಎಂಬ ಇಚ್ಛೆಗೆ ಚಂದ್ರಮಂಡಲಾಹರಣವು ವಿಷಯವಾಗಿದೆ, ಅಂದರೆ ಅದರಲ್ಲಿ ಕೃತ್ಯುದ್ದೇಶ್ಯತ್ವವು ಇದೆ, ಆದರೆ ಅದರಲ್ಲಿ ಕಾರ್ಯತಾವು ಇಲ್ಲ , ಅಂದರೆ ನಮ್ಮ ಕ್ರಿಯೆಯಿಂದ ಸಾಧಿಸಲು ಅದು ಯೋಗ್ಯವಾದುದಲ್ಲ. ತನ್ನಿಮಿತ್ತವಾಗಿ ಕೃತಿಸಾಧ್ಯತ್ವ ಎನ್ನುವ ಭಾಗವನ್ನು ಕಾರ್ಯದ ಲಕ್ಷಣದಲ್ಲಿ ಸೇರಿಸಲಾಗಿದೆ. ಇನ್ನು ವಿಷಪಾನ ಮತ್ತು ಶಾಸ್ತ್ರ ನಿಷಿದ್ಧವಾದ ಕ್ರಿಯೆಗಳಲ್ಲಿ ಕೃತಿಸಾಧ್ಯತೆಯು ಇದೆ, ಆದರೆ ಅದರಲ್ಲಿಯೂ ಕಾರ್ಯತಾವು ಇಲ್ಲ, ಏಕೆಂದರೆ ವಿಷಪಾನಾದಿಗಳಲ್ಲಿ 'ಇದನ್ನು ನಾನು ಮಾಡಬೇಕು' ಎಂದು ಕರ್ತೃವಿನ ಉದ್ದೇಶವಿರುವದಿಲ್ಲ. ತನ್ನಿಮಿತ್ತವಾಗಿ ಕೃತ್ಯುದ್ದೇಶ್ಯತ್ವ ಎನ್ನುವ ಭಾಗವನ್ನು ಕಾರ್ಯದ ಲಕ್ಷಣದಲ್ಲಿ ನಿವೇಶಿಸಲಾಗಿದೆ.

(ಕಾರ್ಯವಾದರೋ) ಲೋಕದಲ್ಲಿ ಧಾತುವಿನ ಅರ್ಥ, ವೇದದಲ್ಲಿ ಅಪೂರ್ವ[1]. ಆದ್ದರಿಂದಲೇ ವೇದಾಂತವಾಕ್ಯಗಳಿಗೂ ಸಹ ಕರ್ತೃಸ್ವರೂಪವನ್ನು (ಜೀವನನ್ನು) ಪ್ರತಿಪಾದಿಸುವವು ಎಂದೋ ಅಥವಾ ದೇವತಾಪ್ರತಿಪಾದಕವೆಂದೂ (ಅರ್ಥೈಸುವುದರಿಂದ) ಕಾರ್ಯಪರವೇ (ಆಗಿವೆ)[2]. ಪ್ರಕರಣ ಭೇದದಿಂದ ಅದನ್ನು ಒಪ್ಪದಿದ್ದರೂ 'ಆತ್ಮಾ ಜ್ಞಾತವ್ಯಃ' ಎಂದು ಮೋಕ್ಷಕ್ಕಾಗಿ ಉಪದಿಷ್ಟವಾದ ವಿಧಿವಾಕ್ಯದಿಂದ ಏಕವಾಕ್ಯತ್ವವನ್ನು ಹೊಂದಿಸಿ, ಕಾರ್ಯಬೋಧಕ ಎಂದೇ ವರ್ಣಿಸಬೇಕು[3]. ಆದುದರಿಂದ ಹೀಗೆ ಕಾರ್ಯದಲ್ಲೇ ಸರ್ವ ಶಬ್ದಗಳಿಗೆ

---

1. 'ಗಾಮಾನಯ' ಇತ್ಯಾದಿ ಲೌಕಿಕವ್ಯವಹಾರದಲ್ಲಿ 'ಆನಯ' ಎಂಬ ಧಾತುವಿಗೆ 'ಆನಯನಂ ಮಯಾ ಕಾರ್ಯಂ' ಎಂಬ ಕಾರ್ಯವೇ ಅರ್ಥವೆಂದು ಹೇಳಲಾಗುವುದು. ಅಂದರೆ ಕೃತಿಸಾಧ್ಯ ಮತ್ತು ಕೃತಿಯ ಉದ್ದೇಶವಾಗಿದೆ ಎಂದು. ವೇದದಲ್ಲಿ 'ಯಜ' ಎಂಬ ಧಾತುವಿನ ಅರ್ಥವು 'ಯಜನಂ ಮಯಾ ಕಾರ್ಯಂ' ಎಂದಲ್ಲ. ಮತ್ತೇನು? 'ಅಪೂರ್ವಂ ಮಯಾ ಭಾವಯೇತ್' ಎಂದು ತಿಳಿಯುವುದು. ಏಕೆಂದರೆ- 'ಯಜೇತ' ಎನ್ನುವ ಕಾರ್ಯಬೋಧಕ ಶಬ್ದದಿಂದ ನಿಯೋಜ್ಯನಾದವನು ಸ್ವರ್ಗಕಾಮಿಯಾದ ವ್ಯಕ್ತಿ. ಆ ಸ್ವರ್ಗವಾದರೋ ಮರಣಾನಂತರದಲ್ಲಿ ಪ್ರಾಪ್ತವಾಗುವುದು. ನಿಯೋಜ್ಯನಾದರೋ ಕಾಲಾಂತರದಲ್ಲಿ ಫಲವನ್ನು ನೀಡುವ ಸಾಧನದಲ್ಲಿ ಕಾರ್ಯತಾ ಜ್ಞಾನವನ್ನು ಹೊಂದಲಾರ. ಯಜ್ಞವನ್ನು ಆಚರಿಸಿದ ನಂತರದಲ್ಲಿ ಯಜಮಾನನಲ್ಲಿ ಅಪೂರ್ವ ಎನ್ನುವದು ಉತ್ಪನ್ನವಾಗುವುದು, ಆ ಅಪೂರ್ವವು ಈತನ ಈ ಯಜ್ಞಾನಂತರದಿಂದ ಮರಣಾನಂತರದಲ್ಲಿ ಸ್ವರ್ಗಪ್ರಾಪ್ತಿಯಾಗುವ ಪರ್ಯಂತ ಇದ್ದು ಸ್ವರ್ಗಕ್ಕೆ ಕಾರಣವಾಗುವುದು. ಆದ್ದರಿಂದಲೇ ಕೂಡಲೇ ನಾಶವಾಗುವ ಯಜ್ಞದ ನಂತರದಲ್ಲಿ ಉತ್ಪನ್ನವಾಗಿ, ಸ್ವರ್ಗಪ್ರಾಪ್ತಿಯಾಗುವ ಪರ್ಯಂತ ಇರುವ ಒಂದು ಪದಾರ್ಥ ಅಂದರೆ ಅಪೂರ್ವ, ಅದನ್ನು 'ಯಜೇತ' ಎನ್ನುವ ಕಾರ್ಯವಿಧಾಯಕವು ತಿಳಿಸುತ್ತದೆ ಎಂದು ಅಭಿಮತಿಸಿರುತ್ತಾರೆ. ಅಂದರೆ 'ಯಾಗೇನ ಅಪೂರ್ವಂ ಭಾವಯೇತ್'- ಯಜ್ಞದಿಂದ ಅಪೂರ್ವವನ್ನು ಭಾವಿಸಬೇಕು ಎಂದು ಅರ್ಥೈಸಲಾಗುವುದು ಎನ್ನುವುದು ಅವರ ಮತ.
2. ಪ್ರತಿಯೊಬ್ಬರಿಗೂ ವ್ಯುತ್ಪತ್ತಿಯು- ಶಬ್ದವ್ಯವಹಾರ ಜ್ಞಾನವು ಕಾರ್ಯದಲ್ಲಿಯೇ ಉತ್ಪನ್ನ-ವಾಗುವುದರಿಂದ ಉಪನಿಷದ್ವಾಕ್ಯಗಳಿಗೆ ಅರ್ಥೈಸುವಾಗ ಅಲ್ಲಿರುವ ಶಬ್ದಗಳೂ ಸಹ ಕಾರ್ಯ-ಬೋಧಕವಾಗಿವೆ ಎಂದೇ ತಿಳಿಯಬೇಕು. ಹಾಗಾಗಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ-ವಾಕ್ಯಗಳು ದೇವತಾದಿಪ್ರತಿಪಾದಕವಾಗಿ ಕರ್ಮಾಂಗವೇ ಆಗಿದೆ ಎಂದು ಅವರ ಅಭಿಮತ.
3. 'ಜ್ಯೋತಿಷ್ಟೋಮೇನ ಯಜೇತ' ಎನ್ನುವ ವಿಧಿವಾಕ್ಯವು ಇರುವುದು ಕರ್ಮಕಾಂಡ ಎಂಬ ಬೇರೇ ಪ್ರಕರಣದಲ್ಲಿ. ಉಪನಿಷತ್‌ಗಳಾದರೋ ಜ್ಞಾನಕಾಂಡ ಎಂಬ ಮತ್ತೊಂದು ಪ್ರಕರಣ.

ಪುಟ 307ರಲ್ಲಿ........

ವ್ಯುತ್ಪತ್ತಿಯು ಕಂಡಿರುವುದರಿಂದ ಕೇವಲ ಸಿದ್ಧವಸ್ತುಗಳಲ್ಲಿ ಅದು (ವ್ಯುತ್ಪತ್ತಿಯು) ಇಲ್ಲದಿರುವುದರಿಂದ ಸಿದ್ಧರೂಪನಾದ ವಿಷ್ಣುವನ್ನು ವೇದವು (ಮುಖ್ಯತಯಾ) ಪ್ರತಿಪಾದಿಸುವುದು ಅಸಂಭವ ಎಂದು[1].

**ಮೀಮಾಂಸಕರು ಅಭಿಮತಿಸಿದ ಕಾರ್ಯವೇ ಇಲ್ಲ**

**ನ ಚ ಕೇವಲಸಿದ್ಧೇऽರ್ಥೇ ವ್ಯುತ್ಪತ್ತ್ಯಭಾವಾದಪ್ರಾಮಾಣ್ಯಮ್, ಸಿದ್ಧಾನ್ವಿತ ಏವ ವ್ಯುತ್ಪತ್ತಿಗೃಹೀತೇಃ ॥**

(ಕಾರ್ಯಕ್ಕೆ ಸಂಬಂಧಿಸದ, ಕಾರ್ಯಾತಿರಿಕ್ತವಾದ) ಕೇವಲ ಸಿದ್ಧಪದಾರ್ಥಗಳಲ್ಲಿ (ಶಬ್ದಗಳಿಗೆ) ಬೋಧಕತ್ವವು ಇಲ್ಲ ಎನ್ನುವುದು ತರವಲ್ಲ. ಯೋಗ್ಯವಾದ (ಕರ್ಯಾತಿರಿಕ್ತವಾದ) ಸಿದ್ಧಪದಾರ್ಥಗಳಲ್ಲೂ (ಶಬ್ದಗಳಿಗೆ) ಬೋಧಕತ್ವವು ಕಂಡಿರುವುದರಿಂದ.

**ತದೇತತ್ ಪ್ರತಿಷೇಧತಿ 'ನ ಚ ಕೇವಲ...' ಇತಿ ॥ ಕೇವಲೇ- ಕಾರ್ಯಾನ್ವಯರಹಿತೇ- ಸ್ವಪ್ರಧಾನೇ ಸಿದ್ಧೇ- ಕಾರ್ಯಾತಿರಿಕ್ತೇ ಅರ್ಥೇ ಶಬ್ದಾನಾಂ ವ್ಯುತ್ಪತ್ತಿಭಾವಾತ್ ತಥಾವಿಧೇ ವಿಷ್ಣೌ ವೇದಸ್ಯ ಅಪ್ರಾಮಾಣ್ಯಂ- ಅಪ್ರತಿಪಾದಕತ್ವಮಿತಿ ಚ ನ ಇತ್ಯರ್ಥಃ । ನಚ 'ಕಾರ್ಯಾನ್ವಿತತಯೈವ ತತ್ರ**

---

...... ಪುಟ 306 ರಿಂದ

ಹೀಗಾಗಿ ಈ ಎರಡೂ ಪ್ರಕರಣಗಳಿಗೆ ಏಕವಾಕ್ಯತ್ವವನ್ನು ಹೇಳುವ ಆಗತ್ಯವಿಲ್ಲ. ಉಪನಿಷತ್‌ಗಳಲ್ಲಾದರೋ ವಿಧಿ ಸೂಚಕ ಶಬ್ದಗಳು ಇಲ್ಲ. ಹಾಗಾಗಿ ವೇದಾಂತವಾಕ್ಯಗಳನ್ನು ಕಾರ್ಯಪರವಾಗಿ ವ್ಯಾಖ್ಯಾನಿಸಲು ಶಕ್ಯವಿಲ್ಲ ಎನ್ನುವ ಸಂದೇಹವನ್ನು ಪರಿಹರಿಸಿರುತ್ತಾರೆ. ಉಪನಿಷತ್ ಪ್ರಕರಣದಲ್ಲೂ 'ಆತ್ಮಾ ಜ್ಞಾತವ್ಯಃ' 'ಶ್ರೋತವ್ಯೋ ಮನ್ತವ್ಯೋ ನಿಧಿಧ್ಯಾಸಿತವ್ಯಃ' ಈ ಮುಂತಾದ ಕಾರ್ಯಬೋಧಕ ಶಬ್ದಗಳು ಇವೆ. ಆ ಶಬ್ದಗಳಿಂದ ಅನ್ವಯಿಸಿಕೊಂಡು ಏಕವಾಕ್ಯತ್ವವನ್ನು ಸಾಧಿಸಬೇಕು ಎಂದು ಭಾವ.

1. 'ಆತ್ಮಾ ಜ್ಞಾತವ್ಯಃ' ಎಂಬ ವಿಧಿವಾಕ್ಯವು ಉಪನಿಷತ್‌ಪ್ರಕರಣದಲ್ಲಿಯೇ ಇದೆ. ಈ ಜ್ಞಾತವ್ಯ ಎಂಬುವ ವಿಧಿಗೆ ಸಹಕಾರಿಗಳಾದ ಜ್ಞಾತೃವಾದ ಜೀವನನ್ನು, ಜ್ಞಾತವ್ಯನಾದ ದೇವತೆಯನ್ನು ಇತರ ಶಬ್ದಗಳು ತಿಳಿಸುತ್ತವೆ ಎಂದೇ ವ್ಯಾಖ್ಯಾನಿಸಬೇಕು. ಒಟ್ಟಿನಲ್ಲಿ ಸಿದ್ಧನಾದ ನಾರಾಯಣನನ್ನು ಉಪನಿಷದ್ವಾಕ್ಯವು ನೇರವಾಗಿ (ಮುಖ್ಯವಾಗಿ) ತಿಳಿಸದೇ ಜ್ಞಾತವ್ಯ ಮುಂತಾದ ವಿಧಿಯ ಅಂಗವಾಗಿ ಬೋಧಿಸುವುದು, ತನ್ನಿಮಿತ್ತ 'ಸದಾಗಮೈಕವಿಜ್ಞೇಯ' ಎನ್ನುವುದರಿಂದ ವಿಷ್ಣುವು ವೇದದಿಂದ ಮುಖ್ಯವೇದ್ಯ ಎಂಬುದು ಸರಿಯಾದುದಲ್ಲ ಎಂದು ಭಾವ.

**ಪ್ರಾಮಾಣ್ಯಂ ಭವಿಷ್ಯತಿ ತತ್ಕಿಮನೇನ?' ಇತಿ ವಾಚ್ಯಮ್ । ಸ್ವಪ್ರಧಾನೇ ವಿಷ್ಣೌ ಸರ್ವವೇದಪ್ರಾಮಾಣ್ಯಸ್ಯಾಭಿಲಷಿತತ್ವಾತ್ । ಅತ ಏವ 'ಸದಾಗಮೈರೇಕ ಏವ ಪ್ರಧಾನವಿಜ್ಞೇಯಃ' ಇತ್ಯಪಿ ವ್ಯಾಖ್ಯಾಯತೇ ।**

ಈ ವಾದವನ್ನು ನಿಷೇಧಿಸುತ್ತಾರೆ 'ನಚ ಕೇವಲ...' ಎನ್ನುವದರಿಂದ. 'ಕೇವಲೇ- ಕಾರ್ಯದಲ್ಲಿ ಅನ್ವಿತವಾಗಿರದ (ಶುದ್ಧವಾದ)- ಪ್ರಧಾನವಾದ- ಸಿದ್ಧೇ- ಕಾರ್ಯಾತಿರಿಕ್ತವಾದ ಪದಾರ್ಥದಲ್ಲಿ ಶಬ್ದಗಳಿಗೆ ವ್ಯುತ್ಪತ್ತಿಯು ಇಲ್ಲದ ಪ್ರಯುಕ್ತ ಅಂತಹ ವಿಷ್ಣುವಿನಲ್ಲಿ ವೇದಕ್ಕೆ **ಅಪ್ರಾಮಾಣ್ಯಂ**- ಅಪ್ರತಿಪಾದಕತ್ವವು[2] ಇಲ್ಲ' ಎಂದು ಅರ್ಥ. ಕಾರ್ಯಾನ್ವಿತವಾಗಿಯೇ ಅಲ್ಲಿ (ವಿಷ್ಣುವಿನಲ್ಲಿ ವೇದಗಳಿಗೆ) ಪ್ರತಿಪಾದಕತ್ವವು ಇರಲಿ, ಇದರಿಂದ ಏನು[3]? ಎಂದು ಹೇಳಲಾಗದು. ಸ್ವಪ್ರಧಾನನಾದ (ಅನನ್ಯಶೇಷನಾದ- ಕಾರ್ಯಾತಿರಿಕ್ತನಾದ) ವಿಷ್ಣುವಿನಲ್ಲಿ ಸರ್ವವೇದಪ್ರತಿಪಾದ್ಯತ್ವವು (ನಮಗೆ) ಇಷ್ಟವಾದಪ್ರಯುಕ್ತ. ಆದುದರಿಂದಲೇ 'ಸದಾಗಮಗಳಿಂದ ಒಬ್ಬನೇ ಪ್ರಧಾನವಾಗಿ ವಿಜ್ಞೇಯ[4]' ಎಂದು ವ್ಯಾಖ್ಯಾನಿಸಲಾಗಿದೆ.

**ಕುತೋ ನ? ಇತ್ಯತ ಆಹ 'ಸಿದ್ಧ...' ಇತಿ ॥ ಅನ್ವಿತಗ್ರಹಣೇನ 'ಯತ್ ಪ್ರಾಭಾಕರೈಃ ಕಾರ್ಯಾನ್ವಿತಾರ್ಥತಾವ್ಯುತ್ಪಾದನಾಯ ಶಬ್ದಾನಾಮನ್ವಿತಾ-**

---

2. ಅಪ್ರಾಮಾಣ್ಯಂ- ಯಥಾರ್ಥಾಭಿದಾಯಕತ್ವವು ಇಲ್ಲ ಎಂದು ಶಬ್ದತಾಡಿತ ಅರ್ಥ. ಆದರೆ ಮೀಮಾಂಸಕರು ವೇದಪ್ರಾಮಾಣ್ಯವಾದಿಗಳು ಅವರು ಹಾಗೆ ಹೇಳಲು ಶಕ್ಯವಿಲ್ಲ ಎಂಬ ಸಂದೇಹವನ್ನು ಪರಿಹರಿಸಲು ಆಚಾರ್ಯರ ಅಭಿಪ್ರಾಯವನ್ನು ಟೀಕೆಯಲ್ಲಿ ಸ್ಫುಟಪಡಿಸಿರುವರು 'ಅಪ್ರಾಮಾಣ್ಯಂ- ಅಪ್ರತಿಪಾದಕತ್ವಂ' ಎಂದು.

3. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಇತ್ಯಾದಿ ವಾಕ್ಯಗಳು ಕಾರ್ಯಶೇಷತಯಾ ವಿಷ್ಣುವನ್ನು ಪ್ರತಿಪಾದಿಸುವುದರಿಂದಲೂ, ಆ ವಾಕ್ಯಗಳಿಗೆ ಪ್ರಾಮಾಣ್ಯವು ಪ್ರಾಪ್ತವಾಗುತ್ತಿರಲು ಪ್ರಧಾನತಯಾ ವಿಷ್ಣುವು ಪ್ರತಿಪಾದಿತ ಎಂಬ ಆಗ್ರಹವೇಕೆ? ಎಂದು ಪ್ರಶ್ನದ ಭಾವ.

4. ಮಂಗಳಾಚರಣ ಶ್ಲೋಕದಲ್ಲಿ 'ಸದಾಗಮೈಕವಿಜ್ಞೇಯಂ' ಎಂದಿದೆ. ಅಲ್ಲಿ ವ್ಯಾಖ್ಯಾನಿಸು- ವಾಗ ಸದಾಗಮಗಳಿಂದ ವೇದ್ಯ, ದುರಾಗಮಗಳಿಂದ ವೇದ್ಯನಲ್ಲ ಎಂದಿಷ್ಟೇ ಅರ್ಥೈಸದೇ 'ಸದಾಗಮಗಳಿಂದ ಮುಖ್ಯವೇದ್ಯ' ಎಂದು, ಮುಖ್ಯಾರ್ಥದಲ್ಲಿ 'ಏಕ' ಶಬ್ದವನ್ನು ವ್ಯಾಖ್ಯಾನಿ- ಸಲಾಗಿದೆ. ಆದುದರಿಂದ ವಿಷ್ಣುವು ಅನನ್ಯಶೇಷನಾಗಿ- ಕಾರ್ಯದ ಅಂಗನಾಗದೆ ಬೋಧಿತ ನಾಗುವನೆಂಬುವದನ್ನು ನೀವು (ಪ್ರಾಭಾಕರರು) ಒಪ್ಪದೇ ಇರುವ ಪ್ರಯುಕ್ತ ಎಂದು ಭಾವ.

**ಭಿಧಾನಸಾಮರ್ಥ್ಯಂ ಸಮರ್ಥಿತಂ, ತದಭ್ಯುಪಗಮ್ಯತ ಏವಾಸ್ಮಾಭಿಃ' ಇತಿ ಸೂಚಯತಿ । 'ಏವ' ಇತಿ ಕಾರ್ಯಾನ್ವಯನಿಯಮನಿರಾಕರಣಮ್ । ಗೃಹೀತೇಃ- ದರ್ಶನಾತ್ । ಕಾರ್ಯಾನ್ವಯನಿಯಮಂ ವಿನಾ ಯೋಗ್ಯೇತರಾನ್ವಿತಸ್ವಾರ್ಥೇ ವ್ಯುತ್ಪತ್ತಿದರ್ಶನಾದಿತ್ಯರ್ಥಃ । ಅಥವಾ ಇಷ್ಟಸಾಧನಾತಿರಿಕ್ತಾಯಾಃ ಕೃತ್ಯುದ್ದೇಶ್ಯತಾಯಾ ನಿರೂಪಯಿತುಮಶಕ್ಯತ್ವೇನ 'ಇಷ್ಟಸಾಧನತ್ವೈವ ಲಿಙ್ಗಾದ್ಯರ್ಥಃ' ಇತ್ಯನ್ಯತ್ರೋಪಪಾದಿತತ್ವಾತ್ ಪರಾಭಿಮತಸ್ಯ ಕಾರ್ಯಸ್ಯೈವಾಭಾವಂ ಸೂಚಯಿತುಂ 'ಸಿದ್ಧಾನ್ವಿತ ಏವ' ಇತ್ಯುಕ್ತಮ್ ।**

ಏಕೆ ಅಲ್ಲ[1]? ಆದುದರಿಂದ ಉತ್ತರಿಸುತ್ತಾರೆ 'ಸಿದ್ಧ...' ಎಂದು. 'ಅನ್ವಿತ' ಎಂಬ ಶಬ್ದವನ್ನು ಪರಿಗ್ರಹಿಸಿರುವುದು ಪ್ರಾಭಾಕರರು ಕಾರ್ಯಾನ್ವಿತಾರ್ಥದಲ್ಲಿ ಶಬ್ದಗಳಿಗೆ ವ್ಯುತ್ಪತ್ತಿಯನ್ನು ತಿಳಿಸಲು ಯಾವ ಅನ್ವಿತಾಭಿಧಾನ ಸಾಮರ್ಥ್ಯವನ್ನು ಸಮರ್ಥಿಸಿರುವರೋ ಅದನ್ನು ನಾವು ಒಪ್ಪಿಯೇ ಇರುತ್ತೇವೆ ಎನ್ನುವದನ್ನು ಸೂಚಿಸುವುದು. 'ಏವ' ಎನ್ನುವುದು ಕಾರ್ಯಾನ್ವಿತವೇ (ಕಾರ್ಯದಲ್ಲಿಯೇ ಶಬ್ದಗಳಿಗೆ ಶಕ್ತಿ) ಎಂಬ ನಿಯಮವನ್ನು ನಿರಾಕರಿಸಲು[2]. **ಗೃಹೀತೇಃ**- ಕಂಡಿರುವದರಿಂದ. ಕಾರ್ಯದಲ್ಲಿ ಮಾತ್ರ (ಶಬ್ದಗಳಿಗೆ ಶಕ್ತಿ ಎಂಬ) ನಿಯಮವಿಲ್ಲದೇ ಯೋಗ್ಯವಾದ ಇತರ ಸಿದ್ಧಪದಾರ್ಥದಲ್ಲಿಯ ವ್ಯುತ್ಪತ್ತಿಯು ಸಂಬಂಧ ಮತ್ತು ಸ್ವಾರ್ಥದಲ್ಲಿ ಕಂಡಿರುವ ಪ್ರಯುಕ್ತ ಎಂದು ಅರ್ಥ[3].

---

1. ವಿಷ್ಣುವು ಕಾರ್ಯಶೇಷನು ಏಕೆ ಅಲ್ಲ?
2. ಪ್ರಕೃತ ಮೂಲದಲ್ಲಿ 'ಸಿದ್ಧಾನ್ವಿತೇ ಏವ' ಎಂದಿದೆ. 'ಸಿದ್ಧಪದಾರ್ಥದಲ್ಲೇ ಶಬ್ದಗಳಿಗೆ ವ್ಯುತ್ಪತ್ತಿ' ಎಂದು ಬೋಧವಾಗುವುದು. ಆದರೆ ನಾವು ಕಾರ್ಯದಲ್ಲೂ ಸಿದ್ಧದಲ್ಲೂ ಎರಡರಲ್ಲಿಯೂ ವ್ಯುತ್ಪತ್ತಿಯನ್ನು ಒಪ್ಪಿರುವೆವು, ಹಾಗಾಗಿ 'ಸಿದ್ಧಾನ್ವಿತೇ ಏವ' ಎಂದು ಹೇಳಿರುವುದು ಹೇಗೆ ಸಮಂಜಸ ? ಎಂಬ ಸಂದೇಹವನ್ನು ಪರಿಹರಿಸುವರು- 'ಕಾರ್ಯದಲ್ಲೇ ವ್ಯುತ್ಪತ್ತಿ, ಯೋಗ್ಯೇತರದಲ್ಲಿ ವ್ಯುತ್ಪತ್ತಿಯಿಲ್ಲ' ಎಂಬ ಪ್ರಾಭಾಕರರ ನಿಯಮವನ್ನು ನಿರಾಕರಿಸಲು 'ಏವ' ಶಬ್ದವನ್ನು ಮೂಲದಲ್ಲಿ ಬಳಸಲಾಗಿದೆ ಹೊರತು 'ಕಾರ್ಯದಲ್ಲಿ ವ್ಯುತ್ಪತ್ತಿಯು ಇಲ್ಲ' ಎಂದು ತಿಳಿಸಲು ಅಲ್ಲ, ಎಂದು ಮೂಲದ ಭಾವವನ್ನು ಟೀಕೆಯಲ್ಲಿ ಸ್ಫುಟಗೊಳಿಸಿರುವರು.
3. 'ಘಟಂ ಆನಯ' ಎಂಬ ವಾಕ್ಯ. ಇಲ್ಲಿ 'ಘಟಂ' ಎಂಬ ಶಬ್ದವು ಘಟತ್ವವಿಶಿಷ್ಟವಾದ ಪದಾರ್ಥವನ್ನು ಮತ್ತು ಈ ಪದಕ್ಕೆ ಪ್ರಸಕ್ತವಾದ ಯಾವ ಶಬ್ದದೊಡನೆ ಅನ್ವಯವು ಇದೆ ಎನ್ನುವುದನ್ನು ತಿಳಿಸುತ್ತದೆ. ಹೀಗೆ ಸಕಲ ಶಬ್ದಗಳು. ಇದನ್ನೇ ಇತರಾನ್ವಿತಸ್ವಾರ್ಥ ಎಂದ ತಿಳಿಯುವುದು.

ಅಥವಾ[1] ಇಷ್ಟಸಾಧನದಿಂದ ಬೇರೆಯಾದ ಕೃತ್ಯುದ್ದೇಶ್ಯತ್ವವನ್ನು ನಿರೂಪಿಸಲು ಅಶಕ್ಯವಾದುದರಿಂದ ಇಷ್ಟಸಾಧನತ್ವವೇ ಲಿಙ್ಗಾದಿಗಳ ಅರ್ಥ ಎಂದು ಬೇರೆಡೆಯಲ್ಲಿ ಪ್ರತಿಪಾದಿಸಿದ್ದರಿಂದ ಪರರಿಗೆ ಅಭಿಮತವಾದ ಕಾರ್ಯ ಎನ್ನುವುದೇ ಇಲ್ಲ[2] ಎಂದು ಸೂಚಿಸಲು 'ಸಿದ್ಧಾನ್ವಿತ ಏವ' ಎಂದು ಹೇಳಲಾಗಿದೆ.

**ಸಿದ್ಧಪದಾರ್ಥಗಳಲ್ಲಿ ವ್ಯುತ್ಪತ್ತಿಯೇ ಸುಲಭ**

**'ಇಯಂ ಮಾತಾ' 'ಅಯಂ ಪಿತಾ' ಇತ್ಯಾದೌ ಅಙ್ಗುಲಿಪ್ರಸಾರಣಾದಿ-ಪೂರ್ವಕನಿರ್ದೇಶೇನೈವ ಹಿ ತಜ್ಜಾನಾತಿ । ಕಾರ್ಯಾನ್ವಿತ ಏವ ವ್ಯುತ್ಪತ್ತಿರಿತಿ ವದತಃ ಕಾರ್ಯಸ್ಯ ಕಾರ್ಯಾನ್ವಯಾಭಾವಾತ್ ಕಲ್ಪನಾಗೌರವಮ್ ।**

(ಮಗುವನ್ನು ಉದ್ದೇಶಿಸಿ) ಚಿಟಿಕೆಯಿಂದ ಶಬ್ದಮಾಡುವುದೇ ಮುಂತಾದ ಕ್ರಿಯೆಯಿಂದ (ಪದಾರ್ಥಗಳನ್ನು) ನಿರ್ದೇಶಿಸಿ 'ಈಕೆ ತಾಯಿ' 'ಈತನು ತಂದೆ' (ಎಂದು ಉಪದೇಶಿಸುವುದರಿಂದಲೇ, ಕಾರ್ಯಬೋಧಕ ಶಬ್ದಗಳನ್ನು ಬಳಸದೆಯೇ) ಆ ಆ ವಸ್ತುಗಳನ್ನು (ಈ ಈ ಶಬ್ದಗಳಿಂದ ವಾಚ್ಯ ಎಂದು) ತಿಳಿಯುತ್ತಾನೆ. (ಮತ್ತೂ ಸಹ, ಇತರ ಶಬ್ದಗಳಿಗೆ ಕಾರ್ಯದಲ್ಲಿ ಅನ್ವಯವು ಇದ್ದರೂ ಸಹ) ಕಾರ್ಯಕ್ಕೆ ಕಾರ್ಯದಲ್ಲಿ ಅನ್ವಯವು ಇಲ್ಲದಿರುವುದರಿಂದ (ಕಾರ್ಯಕ್ಕೆ ಅನ್ಯತ್ರ ಅನ್ವಯವನ್ನು ಒಪ್ಪಿದಲ್ಲಿ) ಕಲ್ಪನಾಗೌರವ.

---

1. ಮೂಲದಲ್ಲಿನ 'ಸಿದ್ಧಾನ್ವಿತ ಏವ..' ಎನ್ನುವದಕ್ಕೆ ಝಟಿತಿ ಪ್ರತಿಭಾಸವಾಗುವ ಅರ್ಥದ ಬದಲಾಗಿ ಬೇರೇ ಅರ್ಥವನ್ನು ತಿಳಿಸಲಾಗಿತ್ತು, ಈಗ ಝಟಿತಿ ಪ್ರತಿಭಾಸವಾಗುವ ಸಿದ್ಧದಲ್ಲೇ ಶಕ್ತಿ ಎಂಬ ಅರ್ಥವೇ ವಿವಕ್ಷಿತ ಎಂದು ಪ್ರತಿಪಾದಿಸುವರು 'ಅಥವಾ' ಎನ್ನುವುದರಿಂದ.

2. 'ಕಾರ್ಯತಾ ಚ ನ ಕಾಚಿತ್ ಸ್ಯಾತ್ ಇಷ್ಟಸಾಧನತಾಂ ವಿನಾ' 1.1.42. ಎಂದು ಅನುವ್ಯಾಖ್ಯಾನದಲ್ಲಿ ಪ್ರವೃತ್ತಿಗೆ ಕಾರಣ 'ಮಮೇದಂ ಕಾರ್ಯಂ' ನಾನು ಈ ಕಾರ್ಯವನ್ನು ಮಾಡಬೇಕು ಎಂಬುವ ಕಾರ್ಯತಾಜ್ಞಾನವು ಕಾರಣವಲ್ಲ ಮತ್ತೆ 'ಮಮೇದಂ ಇಷ್ಟಸಾಧನಮ್' ನನಗೆ ಈ ಕಾರ್ಯವು ಇಷ್ಟಕ್ಕೆ ಸಾಧನ ಎಂಬುವ ಜ್ಞಾನವೇ ಕಾರಣ ಎಂದು ವಿವರಿಸಲಾಗಿದೆ. ಹಾಗಾಗಿ ಮೀಮಾಂಸಕರಿಗೆ ಅಭಿಪ್ರೇತವಾದ ಕೃತಿಸಾಧ್ಯತ್ವೇ ಸತಿ ಕೃತ್ಯುದ್ದೇಶ್ಯತ್ವ ರೂಪವಾದ ಕಾರ್ಯತಾವನ್ನು ನಿರೂಪಿಸುವುದು ಅಶಕ್ಯ. ತನ್ನಿಮಿತ್ತ 'ಸಿದ್ಧಾರ್ಥದಲ್ಲೇ ವ್ಯುತ್ಪತ್ತಿ' ಎಂಬುವದನ್ನೂ ಸೂಚಿಸಿರುವರು ಎಂದು ಭಾವ.

ತತ್ರಪಙ್ಕ್ತಯತಿ - 'ಇಯಮ್' ಇತಿ । ಇತ್ಯಾದೌ ವಾಕ್ಯೇ ವ್ಯುತ್ಪಾದಕೇನ ಪ್ರಯುಕ್ತೇ ಸತಿ । ಅಙ್ಗುಲಿಪ್ರಸಾರಣಮಾದಿರ್ಯಸ್ಯ ಭ್ರೂವಿಕ್ಷೇ(ಪಣಾ)-ಪಾದೇಃ ವ್ಯಾಪಾರಸ್ಯ ಸ ತಥೋಕ್ತಃ । ಅಙ್ಗುಲಿಪ್ರಸಾರಣಾದಿಃ ಪೂರ್ವೋ ಯಸ್ಯ ನಿರ್ದೇಶಸ್ಯ ಸ ತಥೋಕ್ತಃ । ಏವಶಬ್ದೇನ ವೃದ್ಧವ್ಯಹಾರದರ್ಶನಂ ವ್ಯಾವರ್ತಯತಿ । ತತ್- ಮಾತ್ರಾದಿಕಂ ಮಾತ್ರಾದಿಶಬ್ದವಾಚ್ಯತಯಾ ಜಾನಾತಿ ಹಿ ಬಾಲಃ ?

ಅದನ್ನು (ಸಿದ್ಧಾರ್ಥದಲ್ಲೇ ವ್ಯುತ್ಪತ್ತಿ ಎನ್ನುವುದನ್ನು) ವಿವರಿಸುವರು- 'ಇಯಂ..' ಎಂದು. ಇದೇ ಮುಂತಾದ ವಾಕ್ಯವು ವ್ಯುತ್ಪಾದಕನು (ಮಕ್ಕಳಿಗೆ ವ್ಯುತ್ಪತ್ತಿಯನ್ನು ಉಂಟುಮಾಡುವ ವ್ಯಕ್ತಿಯು) ಹೇಳುತ್ತಿರಲಾಗಿ. ಅಂಗುಲಿಪ್ರಸರಣ ಪೂರ್ವಕವಾದ ಭ್ರೂವಿಕ್ಷೇಪ ಮುಂತಾದ ವ್ಯಾಪಾರವೆಂದು ಹೇಳಲಾಗುವುದು[1]. ಏವ ಶಬ್ದದಿಂದ ವೃದ್ಧವ್ಯವಹಾರದ ದರ್ಶನವನ್ನು ನಿರಾಕರಿಸುತ್ತಿರುವರು. ತತ್- ತಾಯಿ ಮುಂತಾದವರನ್ನು 'ಮಾತಾ' ಮುಂತಾದ ಶಬ್ದಗಳಿಂದ ವಾಚ್ಯರು ಎಂದು ಬಾಲಕನು ತಿಳಿಯುವನಷ್ಟೆ?

**ಪ್ರಾಥಮಿಕ ವ್ಯುತ್ಪತ್ತಿಯ ಬಗೆ**

ಮಾತುಃ ಪಿತುರ್ವಾಽಙ್ಕೇ ಸ್ಥಿತಂ ಬಾಲಮನ್ಯಮನಸ್ಕಂ ಸನ್ತಮಙ್ಗುಗುಲಿಪ್ರಸಾರಣಾದಿನಾ ಸ್ವವಚನಶ್ರವಣಾಭಿಮುಖಂ ಮಾತ್ರಾದ್ಯಭಿಮುಖಂ ಚ ವಿಧಾಯ ಯದಾ ವ್ಯುತ್ಪಾದಯಿತಾ ವಾಕ್ಯಂ ಪ್ರಯುಂಕ್ತೇ 'ಬಾಲ, ತವೇಯಂ ಮಾತಾ' 'ತವಾಯಂ ಪಿತಾ' 'ಅಯಂ ತೇ ಭ್ರಾತಾ ಕದಲೀಫಲಂ ಅಭ್ಯವಹರತಿ' ಇತ್ಯಾದಿ, ತದಾ ವೃದ್ಧವ್ಯವಹಾರದರ್ಶನಂ ವಿನಾ ತೇನ ನಿರ್ದೇಶೇನೈವ ತಸ್ಯ ಶಬ್ದಸಮುದಾಯಸ್ಯ ಕಾರ್ಯಾನ್ವಯರಹಿತ ಏವ ತಸ್ಮಿನ್ನರ್ಥಸಮುದಾಯೇ

---

1. ಮೂಲದಲ್ಲಿ 'ಆದಿ' ಮತ್ತು 'ಪೂರ್ವಕ' ಎಂದು ಸಮಾನಾರ್ಥಕ ಎರಡು ಪದಗಳಿವೆ, ವ್ಯರ್ಥವಲ್ಲವೇ? ಎಂಬ ಸಂದೇಹವನ್ನು ಟೀಕೆಯಲ್ಲಿ ಪರಿಹರಿಸಿರುವರು. 'ಅಂಗುಲಿ ಪ್ರಸರಣವೇ ಮುಂತಾದ ಕ್ರಿಯೆಯೊಂದಿಗೆ ಹುಬ್ಬುಹಾರಿಸುವಿಕೆ ಈ ಮುಂತಾದ ಕ್ರಿಯೆ' ಎಂದು ಮೂಲದ ಅಭಿಪ್ರಾಯ ಎಂದು ತಿಳಿಸಿದಂತಾಯಿತು. ಶಾಸ್ತ್ರದಲ್ಲಿ ಈ ತರಹದ ಪ್ರಯೋಗವನ್ನು 'ಬಹುವ್ರೀಹಿಗರ್ಭಬಹುವ್ರೀಹಿಃ' ಎಂದು ಕರೆಯುವರು.

ವಿಷಯವಿಷಯಿಭಾವಂ ತಾವದವಗಚ್ಛತಿ ಬಾಲಃ 'ಇದಮನೇನಾಯಂ ಬೋಧಯತಿ' ಇತಿ । ಪುನಃ 'ಇಯಂ ತೇ ಸ್ವಸಾ, ಅಯಂ ತೇ ಸಖಾಽಪೂಪಂ ಖಾದ(ಯ)ತಿ' ಇತ್ಯಾದಿವಾಕ್ಯಾನ್ತರೇಷು ಶಬ್ದಾರ್ಥಯೋಃ ಆವಾಪೋದ್ಧಾರಾಭ್ಯಾಂ ಶಬ್ದವಿಭಾಗಾದಿಕಮವಗತ್ಯ ಮಾತ್ರಾದಿಪದಾನಾಂ ಯೋಗ್ಯೇತರಾನ್ವಿತೇ ಜನನ್ಯಾದೌ ವಾಚಕತ್ವಮಾಕಲಯತಿ ಇತಿ ಕಿಮನುಪಪನ್ನಮ್? ಲಘೀಯಾಂಶ್ಚಾಯಮುಪಾಯೋ ವ್ಯುತ್ಪತ್ತೌ ವ್ಯವಹಾರದರ್ಶನಾತ್ । ಶಶ್ವದ್ವಿಸ್ಮರಣಶೀಲೋ ಬಾಲಕಃ ಶಬ್ದಮನುಸನ್ಧಾಯ ವೃದ್ಧಸ್ಯಾಽಗಾಮಿಪ್ರತ್ಯಾಗಮನಂ ಸ್ವಾನಪೇಕ್ಷಿತಮೇವ ಪ್ರತೀಕ್ಷತ ಇತಿ ಗುರುತರೇಯಂ ಕಲ್ಪನಾ । 'ಪುರೋವಸ್ಥಿತೇಷು ಇಷ್ಟಸಾಧನತಯಾ ಅಪೇಕ್ಷಿತೇಷು ಮಾತ್ರಾದಿಷು ಶ್ರೂಯಮಾಣಸ್ಯೈವ ಶಬ್ದಸ್ಯ ವಾಚಕತ್ವಂ ಕಲ್ಪಯತಿ' ಇತಿ (ಆಕಲಯತೀತಿ) ಲಘುತರಮೇತತ್ ಕಲ್ಪನಮ್ । ವರ್ತಮಾನಾಪದಾರ್ಥೇಷು ವ್ಯುತ್ಪನ್ನೋ ಜಾತಜಿಜ್ಞಾಸಃ ಪಶ್ಚಾದ್ ವ್ಯವಹಾರದರ್ಶನೇನ ಅನ್ಯತ್ರಾಪಿ ವ್ಯುತ್ಪದ್ಯತ ಏವ । ಏತೇನೈತದಪಿ ನಿರಸ್ತಮ್- 'ಯಾವತೀ ಸಿದ್ಧಾರ್ಥಪರಾದಪಿ ವಾಕ್ಯಾದ್ ವ್ಯುತ್ಪತ್ತಿಃ ಸಾ ಸರ್ವಾ ಪ್ರಥಮ- ಭಾವಿಕಾರ್ಯವ್ಯುತ್ಪತ್ತ್ಯನನ್ತರಭಾವಿತ್ವಾತ್ ಕಾರ್ಯವ್ಯುತ್ಪತ್ತಿರೇವ' ಇತಿ । ಪ್ರಥಮವ್ಯುಪತ್ತೇರೇವ ಸಿದ್ಧಾರ್ಥೇ ಸಮರ್ಥಿತತ್ವಾತ್ ।

ತಾಯಿಯ ಅಥವಾ ತಂದೆಯ ತೊಡೆಯಲ್ಲಿ ಇರುವ, ಮತ್ತೊಂದೆಡೆ ಮನವಿರುವ ಬಾಲಕನನ್ನು ಬೆರಳನ್ನು ಚಾಚುವ (ಚಿಟಿಕೆಯಿಂದ ಶಬ್ದವನ್ನು ಮಾಡುವುದು) ಮುಂತಾದವುಗಳಿಂದ ತನ್ನ ಮಾತನ್ನು ಆಲಿಸುವಂತೆಯೂ, ತಾಯಿ ಮುಂತಾದವರ ಸಮ್ಮುಖನನ್ನಾಗಿಯೂ ಮಾಡಿ ' ಮಗು, ಈಕೆ ನಿನ್ನ ತಾಯಿ' 'ಈತನು ನಿನ್ನ ತಂದೆ' 'ಈ ನಿನ್ನ ಅಣ್ಣನು ಬಾಳೆ ಹಣ್ಣನ್ನು ತಿನ್ನುತ್ತಿರುವನು' ಇತ್ಯಾದಿ ವಾಕ್ಯಗಳನ್ನು ವ್ಯುತ್ಪಾದಕನು ಪ್ರಯೋಗಿಸಲು, ಆಗ ವೃದ್ಧವ್ಯವಹಾರದ ದರ್ಶನವಿಲ್ಲದೇ[1] ಆ (ಬೆರಳು ಮುಂತಾದ ಅವಯವಗಳ ) ನಿರ್ದೇಶನದಿಂದಲೇ ಆ ಶಬ್ದ ಸಮೂಹಕ್ಕೆ ಕಾರ್ಯಾನ್ವಯ ರಹಿತವಾದ (ಕೇವಲ ಸಿದ್ಧಪದಾರ್ಥದಲ್ಲಿ)

1. ಓರ್ವನ ಆದೇಶ, ಮತ್ತೋರ್ವನ ಆ ಆದೇಶದ ಅನುಸರಣ ಮುಂತಾದ ಕ್ರಿಯೆ ಇವುಗಳನ್ನು ಗಮನಿಸದೇ ಎಂದು ಭಾವ.

ಆ ಪದಾರ್ಥ ಸಮೂಹದಲ್ಲಿ (ಇದು) ವಿಷಯ, (ಇದು) ವಿಷಯೀ ಎನ್ನುವದನ್ನು 'ಈ ಪದಾರ್ಥವನ್ನು ಈ ಶಬ್ದದಿಂದ ಈತನು ತಿಳಿಸುತ್ತಿದ್ದಾನೆ' ಎಂದು ಬಾಲಕನು ತಿಳಿಯುವನು. ಮತ್ತೆ 'ಈಕೆ ನಿನ್ನ ಸೋದರಿ' 'ನಿನ್ನ ಈ ಸ್ನೇಹಿತನು ಅಪೂಪವನ್ನು ತಿನ್ನುತ್ತಿರುವನು' ಇತ್ಯಾದಿಯಾಗಿ ವಾಕ್ಯಾಂತರಗಳಲ್ಲಿ ಶಬ್ದ ಮತ್ತು ಪದಾರ್ಥಗಳ ಸೇರಿಸುವಿಕೆ, ಬಿಡುವಿಕೆಗಳಿಂದ ಶಬ್ದದ ಭೇದ ಮುಂತಾದವುಗಳನ್ನು ತಿಳಿದು, ತಾಯಿ ಮುಂತಾದ ಪದಗಳಿಗೆ ಯೋಗ್ಯೇತರರಲ್ಲಿ ಅನ್ವಿತವಾದ ತಾಯಿ ಮುಂತಾದವರೇ ವಾಚ್ಯರು ಎಂದು ತಿಳಿಯುವನು, ಹೀಗಿರುವಾಗ (ಈ ಮಾರ್ಗವು) ಏನು ಅನುಪಪನ್ನವಾಗಿದೆ? ಮತ್ತು ವ್ಯುತ್ಪತ್ತಿಗೆ ಈ ಉಪಾಯವು ಸುಲಭವಾದದ್ದು, ಅನುಭವದಲ್ಲಿ ಹಾಗೆ ಕಂಡಿರುವಪ್ರಯುಕ್ತ. ತತ್‌ಕ್ಷಣದಲ್ಲಿ ಮರೆಗುಳಿಯಾದ ಬಾಲಕನು (ವ್ಯುತ್ಪತ್ತಿಗಾಗಿ ಪ್ರಯೋಜ್ಯವೃದ್ಧನು ಪ್ರಯೋಗಿಸಿದ) ಶಬ್ದವನ್ನು ಅನುಸಂಧಾನಮಾಡಿಕೊಂಡು ತನಗೆ ಅಪೇಕ್ಷಿತವಲ್ಲದ ಆಗಮನ ಪ್ರತ್ಯಾಗಮನಗಳನ್ನು ನಿರೀಕ್ಷಿಸುವನು ಎನ್ನುವುದು ತುಂಬ ಬಳಸು ಉಪಾಯ. ಎದುರಿನಲ್ಲಿರುವ (ತನ್ನ) ಇಷ್ಟಕ್ಕೆ ಕಾರಣರೆಂದು ಅಪೇಕ್ಷಿತರಾದ ತಾಯಿ ಮುಂತಾದವರಲ್ಲಿ '(ತನ್ನಿಂದ) ಕೇಳಲಾದ ಶಬ್ದಕ್ಕೆ ವಾಚಕತ್ವವನ್ನು ಕಲ್ಪಿಸಿಕೊಳ್ಳುವನು' ಎಂದು ಕಲ್ಪಿಸುವುದೇ ಸುಲಭತರ. ವರ್ತಮಾನಕಾಲದಲ್ಲಿರುವ ಪದಾರ್ಥಗಳಲ್ಲಿ ವ್ಯುತ್ಪನ್ನನಾದವನು, ಚಿಕಿತ್ಸಕ ಬುದ್ಧಿಯು ಪ್ರಾಪ್ತವಾಗಲು ಅನಂತರದ ವ್ಯವಹಾರಗಳಿಂದ ಬೇರೆಡೆಯೂ ( ದೂರಸ್ಥಾದಿ ಪದಾರ್ಥಗಳಲ್ಲಿಯೂ) ವ್ಯುತ್ಪನ್ನನಾಗುವನು. ಇದರಿಂದ (ಸಿದ್ಧಪದಾರ್ಥದಲ್ಲಿ ವ್ಯುತ್ಪತ್ತಿಯು ಉಂಟು ಎಂದು ಸಾಧಿಸಿದ್ದರಿಂದ) ಇದೂ ಸಹ(ಕಾರ್ಯದಲ್ಲೇ ಶಕ್ತಿ ಎಂಬ ವಾದವು) ನಿರಾಕೃತವಾಯಿತು- 'ಸಿದ್ಧಾರ್ಥ ಪರಕವಾದ ವಾಕ್ಯಗಳಿಂದ ಪ್ರಾಪ್ತವಾಗುವ ಆ ಎಲ್ಲ ವ್ಯುತ್ಪತ್ತಿಗಳೂ ಸಹ ಮೊದಲು ಉಂಟಾದ ಕಾರ್ಯಾನ್ವಿತದಲ್ಲಿನ ವ್ಯುತ್ಪತ್ತಿಯ ಅನಂತರದ್ದಾದ ಪ್ರಯುಕ್ತ ಕಾರ್ಯದಲ್ಲಿಯೇ ವ್ಯುತ್ಪತ್ತಿ' ಎಂಬ ವಾದವನ್ನು ಈ ವಿವರಣೆಯಿಂದ ನಿರಾಕರಿಸಿದಂತಾಯಿತು. (ಪ್ರಕೃತ) ಪ್ರಥಮವ್ಯುತ್ಪತ್ತಿಯನ್ನೇ ಸಿದ್ಧಪದಾರ್ಥದಲ್ಲಿ ಎಂದು ಸಮರ್ಥಿಸಿದ ಪ್ರಯುಕ್ತ (ಕಾರ್ಯತಾದಲ್ಲೇ ಪ್ರಾಥಮಿಕವ್ಯುತ್ಪತ್ತಿ ಎಂದೆನ್ನಲಾಗದು, ಪ್ರಾಥಮಿಕವ್ಯುತ್ಪತ್ತಿಯೂ ಸಹ ಸಿದ್ಧದಲ್ಲೇ ಎಂದು ಭಾವ).

**ಪ್ರಾಭಾಕರರ ವ್ಯುತ್ಪತ್ತಿಯ ವಿಧಾನ ಗುರುತರ**

ಏವಂ ಕಾರ್ಯಾನ್ವಯಂ ವಿನಾಽಪಿ ವ್ಯುತ್ಪತ್ತಿದರ್ಶನಾದ್ 'ಯೋಗ್ಯೇತರಾನ್ವಿತೇ ವ್ಯುತ್ಪತ್ತಿಃ' ಇತಿ ಸಾಮಾನ್ಯಮೇವಾಙ್ಗೀಕಾರ್ಯಮ್ । 'ಕಾರ್ಯಾನ್ವಿತ ಏವ' ಇತಿ 'ವಿಶೇಷನಿರ್ಬನ್ಧಸ್ತ್ವಾಜ್ಯಃ' ಇತ್ಯುಕ್ತಮ್ । ಇತಶ್ಚೈವಮೇವೇತ್ಯಾಹ - **ಕಾರ್ಯಾನ್ವಿತ** ಇತಿ ॥ ಕಾರ್ಯಾನ್ವಿತೇ ಸ್ವಾರ್ಥೇ ಶಬ್ದಸ್ಯ ವ್ಯುತ್ಪತ್ತಿರಿತಿ ವದತಃ ಪ್ರಾಭಾಕರಸ್ಯ ಕಲ್ಪನಾಗೌರವಂ ಸ್ಯಾತ್, ಕಥಮ್ ಸರ್ವೇಷಾಮಪಿ ಶಬ್ದಾನಾಂ ಕಾರ್ಯಾನ್ವಿತೇ ಸ್ವಾರ್ಥೇ ವ್ಯುತ್ಪತ್ತಿರಿತ್ಯೇಕಮೇವ ಪ್ರಯೋಜಕಂ ತಾವದಙ್ಗೀಕರ್ತುಂ ನ ಶಕ್ಯತೇ, ಲಿಂಗಾದೀನಾಂ ಹಿ ಕಾರ್ಯಮೇವ ಸ್ವಾರ್ಥಃ । ನ ಚ ತಸ್ಯ ಕಾರ್ಯಸ್ಯ ಕಾರ್ಯಾನ್ತರೇಣಾನ್ವಯೋಽಸ್ತಿ । ಗುಣಪ್ರಧಾನಭಾವೇನ ಖಲು ಪದಾರ್ಥಾನಾಮನ್ವಯೋ ಭವತಿ । ಕಾರ್ಯಂ ಚ ಪ್ರಧಾನತಯಾ ಶಬ್ದೇನೈವ ಬೋಧ್ಯತೇ । ತಥಾ ಚ ಕಥಂ ಕಾರ್ಯದ್ವಯಸ್ಯ ಯುಗಪದ್ಗುಣಪ್ರಧಾನಭಾವಃ ಸಮ್ಭವತಿ ? ಅತಃ ಕಾರ್ಯಸ್ಯ ಕಾರ್ಯಾನ್ವಯಾಭಾವಾತ್ ಲಿಂಗಾದೀನಾಂ ಕಾರ್ಯಮಾತ್ರೇ ಸಿದ್ಧಾನ್ವಿತೇ ವಾ ಕಾರ್ಯೇ ವ್ಯುತ್ಪತ್ತಿರಿತ್ಯಙ್ಗೀಕಾರ್ಯಮ್ । ಗವಾದಿಪದಾನಾಂ ತು ಕಾರ್ಯಾನ್ವಿತೇ ಸ್ವಾರ್ಥ ಇತಿ । ತಥಾ ಚ ಪ್ರಯೋಜಕದ್ವೈವಿಧ್ಯಾಙ್ಗೀಕಾರೇ ಕಥಂ ನ ಕಲ್ಪನಾಗೌರವಮ್? ಯೋಗ್ಯೇತರಾನ್ವಿತೇ ಸ್ವಾರ್ಥೇ ವ್ಯುತ್ಪತ್ತಿಃ ಇತ್ಯಙ್ಗೀಕಾರೇ ತ್ವೇಕಪ್ರಯೋಜಕಲಾಭಾತ್ ಲಾಘವಮಿತ್ಯಯಮೇವ ಪಕ್ಷಃ ಸಮಾಶ್ರಯಣೀಯಃ ।

ಈ ರೀತಿಯಾಗಿ ಕಾರ್ಯಾನ್ವಯವಿಲ್ಲದೆಯೂ ಸಹ ವ್ಯುತ್ಪತ್ತಿಯು ಕಂಡಿರುವುದರಿಂದ ಯೋಗ್ಯೇತರ ಪದಾರ್ಥದಲ್ಲಿ ಅನ್ವಿತವಾಗಿ ಶಬ್ದಗಳಿಗೆ ವ್ಯುತ್ಪತ್ತಿಯಿದೆ ಎಂದು ಸಾಮಾನ್ಯವಾಗಿ ಒಪ್ಪಲಾಗಿದೆ. (ಆದುದರಿಂದ) ಕಾರ್ಯಾನ್ವಿತದಲ್ಲೇ ವ್ಯುತ್ಪತ್ತಿ ಎನ್ನುವ ವಿಶೇಷನಿರ್ಬಂಧವು ಸಲ್ಲದು ಎಂದು ಹೇಳಿಯಾಯಿತು. ಇನ್ನು ಸಹ, 'ಹೀಗೇ' ಎಂದು (ಯೋಗ್ಯೇತರಾನ್ವಿತ ಸ್ವಾರ್ಥದಲ್ಲೇ ವ್ಯುತ್ಪತ್ತಿ ಎಂದು) ತಿಳಿಸುತ್ತಾರೆ '**ಕಾರ್ಯಾನ್ವಿತೇ**' ಎನ್ನುವುದರಿಂದ. 'ಕಾರ್ಯಾನ್ವಿತವಾದ ಪದಾರ್ಥದಲ್ಲಿ ಶಬ್ದಕ್ಕೆ ವ್ಯುತ್ಪತ್ತಿ' ಎಂದು ವಾದಿಸುವ ಪ್ರಾಭಾಕರರಿಗೆ ಕಲ್ಪನಾಗೌರವ (ಎನ್ನುವ ದೋಷವು ) ಪ್ರಾಪ್ತವಾದೀತು. ಹೇಗೆ? 'ಎಲ್ಲ ಶಬ್ದಗಳೂ ಕಾರ್ಯಾನ್ವಿತವಾದ ಸ್ವಾರ್ಥವನ್ನು ಬೋಧಿಸುವವು'

ಎಂದು ಒಂದೇ ಪ್ರಯೋಜನವನ್ನು ಒಪ್ಪಲು ಆಗದಿರುವ ಪ್ರಯುಕ್ತ. ಲಿಙ್ಗಾದಿಬೋಧಕ ಶಬ್ದಗಳಿಗೆ ಕಾರ್ಯವೇ ಅರ್ಥ. ಆ ಕಾರ್ಯಕ್ಕಾದರೋ ಮತ್ತೊಂದು ಕಾರ್ಯದಲ್ಲಿ ಅನ್ವಯಿಸಲು ಶಕ್ಯವಿಲ್ಲ. ಗುಣ-ಪ್ರಧಾನಭಾವದಿಂದಲೇ (ವಿಶೇಷಣ-ವಿಶೇಷ್ಯ ಭಾವದಿಂದಲೇ) ಪದಾರ್ಥಗಳಿಗೆ ಅನ್ವಯವು ಸಂಭಾವಿತವಾಗಿದೆ. ಕಾರ್ಯವಾದರೋ ಪ್ರಧಾನವಾದ್ದರಿಂದ ಶಬ್ದದಿಂದಲೇ ಬೋಧಿತವಾಗುವುದು. ಹಾಗಾದಲ್ಲಿ (ಬೋಧಿತವಾದ ಕಾರ್ಯಕ್ಕೆ ಅನ್ವಯವನ್ನು ಹೇಳಲು ಕಾರ್ಯಾಂತರವನ್ನು ಒಪ್ಪಿದಲ್ಲಿ) ಕಾರ್ಯದ್ವಯಗಳಿಗೆ ಒಂದೇವಾಕ್ಯದಲ್ಲಿ ಗುಣ-ಪ್ರಧಾನಭಾವವು ಹೇಗೆ ಸಂಭಾವಿತವಾಗುವುದು? ಕಾರ್ಯಕ್ಕೆ ಕಾರ್ಯಾಂತರವಿಲ್ಲದಿರುವ ಪ್ರಯುಕ್ತ ಲಿಂಗಾದಿಗಳಿಗೆ (ಕಾರ್ಯತಾಬೋಧಕ ಶಬ್ದಗಳಿಗೆ) 'ಕಾರ್ಯಮಾತ್ರ ದಲ್ಲಿ ಅಥವಾ ಸಿದ್ಧಾನ್ವಿತವಾದ ಕಾರ್ಯದಲ್ಲಿ ವ್ಯುತ್ಪತ್ತಿ' ಎಂದು ಒಪ್ಪಬೇಕು. 'ಗೌಃ' ಮುಂತಾದ ಪದಗಳಿಗಾದರೋ ಕಾರ್ಯಾನ್ವಿತವಾದ ಸ್ವಾರ್ಥದಲ್ಲಿ (ಸಾಸ್ನಾದಿಮದ್‌ದ್ರವ್ಯದಲ್ಲಿ ಶಕ್ತಿ) ಎಂದು. ಹಾಗಾಗಿ ಪ್ರಯೋಜಕದಲ್ಲಿ ಎರಡು ವಿಧಗಳನ್ನು ಒಪ್ಪಿದಲ್ಲಿ ಕಲ್ಪನಾಗೌರವ ಹೇಗೆ ಇಲ್ಲದಂತಾದೀತು? ಯೋಗ್ಯೇ-ತರಾನ್ವಿತದಲ್ಲಿ ವ್ಯುತ್ಪತ್ತಿಯೆಂದು ಒಪ್ಪಿದಲ್ಲಿ ಒಂದೇ ಪ್ರಯೋಜಕವು ಪ್ರಾಪ್ತ ವಾಗುವುದರಿಂದ ಸುಲಭೋಪಾಯ ಎಂದು ಈ ಪಕ್ಷವನ್ನೇ ಆಶ್ರಯಿಸಬೇಕು[1].

---

1. ಈ ವಾದ ಸರಣಿಯ ಭಾವವನ್ನು ಹೀಗೆ ಸಂಗ್ರಹಿಸಬಹುದು- 'ಗಾಮಾನಯ' ಎಂಬ ವಾಕ್ಯದಲ್ಲಿ 'ಗಾಂ' ಎನ್ನುವ ಶಬ್ದವು, 'ಆನಯ' ಎಂಬ ಶಬ್ದದಿಂದ ಬೋಧಿತವಾದ ಪ್ರಧಾನವಾದ ಆನಯನಕ್ರಿಯೆಗೆ (ಕಾರ್ಯಕ್ಕೆ) ಸಂಬಂಧಿಸಿದ ಕರ್ಮಕ್ಕೆ ವಿಷಯವಾದ ಸಾಸ್ನಾದಿಗಳನ್ನು ಹೊಂದಿರುವ ದ್ರವ್ಯವನ್ನು ತಿಳಿಸುತ್ತದೆ. ಆದುದರಿಂದ ಗಾಂ ಶಬ್ದಕ್ಕೆ ಅನ್ವಯವನ್ನು ತಿಳಿಸಿದಂತಾಯಿತು. 'ಆನಯ' ಶಬ್ದಕ್ಕೆ ಎಲ್ಲಿ ಅನ್ವಯ? ಈ ಶಬ್ದದಿಂದ ಬೋಧಿತವಾದವಾದದ್ದು ಕ್ರಿಯೆ, ಈ ಕ್ರಿಯೆಗೆ ಮತ್ತೊಂದು ಕ್ರಿಯೆಯಲ್ಲಿ ಅನ್ವಯವಿರುವುದಿಲ್ಲ. ಮೀಮಾಂಸಕರಾದರೋ ಕ್ರಿಯೆಯಲ್ಲೇ ಎಲ್ಲ ಶಬ್ದಕ್ಕೂ ಅನ್ವಯವನ್ನು ಹೇಳಬೇಕೆಂಬ ನಿಯಮವನ್ನು ಒಪ್ಪಿರುವರು, ಹೀಗಾಗಿ ಲಿಂಗಾದಿಗಳು (ಕಾರ್ಯತಾಬೋಧಕ ಶಬ್ದಗಳು) ಅನನ್ವಿತವಾಗುವವು. ಆದುದರಿಂದ ಲಿಂಗಾದಿ ಶಬ್ದಗಳಿಗೆ ಸಿದ್ಧವಾದ ಕಾರ್ಯದಲ್ಲಿ ಅನ್ವಯ, ಇತರ ಶಬ್ದಗಳಿಗೆ ಕಾರ್ಯದಲ್ಲಿ ಅನ್ವಯ ಎಂದು ಒಪ್ಪಬೇಕಾದುದರಿಂದ ಎರಡು ಕಡೆಯಲ್ಲಿ ಶಬ್ದಗಳಿಗೆ ಅನ್ವಯವನ್ನು ಒಪ್ಪಿದಂತಾಗಿ ಗೌರವ ಎಂಬ ದೋಷವು ಪ್ರಾಪ್ತವಾಯಿತು. ಇನ್ನು,

**ಪುಟ 316ರಲ್ಲಿ........**

**ಸಿದ್ಧಪದಗಳಿಗೂ ಲಿಂಗಾದಿಗಳಿಗೂ ಏಕಪ್ರಯೋಜಕತ್ವವಿಲ್ಲ**

ನನು ಕಾರ್ಯಾನ್ವಯಿನಿ ಸ್ವಾರ್ಥೇ ವ್ಯುತ್ಪತ್ತಿರಿತ್ಯಙ್ಗೀಕಾರಾತ್, ನ ಕಲ್ಪನಾಗೌರವಮ್ । ಕಾರ್ಯೇಣ ಸಹ ಯೋಽನ್ವಯಸ್ತದ್ವತ್ತ್ವಂ ಕಾರ್ಯಸ್ಯ-ಸಿದ್ಧಸ್ಯ ಚಾಸ್ತಿ ಇತ್ಯೇಕಪ್ರಯೋಜಕಲಾಭಾದ್ ಇತಿ ಚೇನ್ ಮೈವಮ್-ಕಾರ್ಯೇಣ ಸಹ ಸಿದ್ಧಸ್ಯ ಯೋಽನ್ವಯಃ ಸ ಗುಣಭಾವ ಏವ । ನ ಚ ಕಾರ್ಯಂ ಪ್ರತಿ ಗುಣಭಾವಃ ಕಾರ್ಯಸ್ಯಾಸ್ತಿ । ನ ಚ ಗುಣೇ ಪ್ರಧಾನೇ ಚಾನುಗತಮ್ ಅನ್ವಯಮಾತ್ರಂ ಶಬ್ದೇನ ಬೋಧ್ಯತೇ । ಅತಃ 'ಶಬ್ದಮಾತ್ರಮ್, ಅತ್ರ ಏಕಂ ನಾರ್ಥಃ' ಇತಿ ಯತ್ಕಿಞ್ಚಿದೇತತ್ ।

ಏತೇನ 'ಕಾರ್ಯಾನ್ವಯಿನಿ ವ್ಯುತ್ಪತ್ತಿಃ' ಇತ್ಯೇಕಪ್ರಯೋಜಕವರ್ಣನಮಪಿ ಪರಾಸ್ತಮ್ । 'ಕಾರ್ಯಪರಪದಾರ್ಥಾನ್ವಿತೇ ಸ್ವಾರ್ಥೇ ವ್ಯುತ್ಪತ್ತಿಃ' ಇತಿ ಚೇನ್ನ । ಅತ್ರಾಪ್ಯೇಕಪ್ರಯೋಜಕಾಸಿದ್ಧೇಃ । 'ಕಾರ್ಯಪರಂ ಯತ್ಪದಂ, ತಸ್ಯ ಯೋಽರ್ಥಃ, ತೇನ ಅನ್ವಿತ' ಇತಿ ಹ್ಯಸ್ಯಾರ್ಥಃ । ತತ್ರ 'ಲಿಂಗಾದೀನಾಂ ಕಾರ್ಯಪರತ್ವಂ ನಾಮ- ಕಾರ್ಯವಾಚಿತ್ವಂ, ಗವಾದಿಪದಾನಾಂ ತು-ತದುದ್ದೇಶಿತ್ವಮಾತ್ರಮ್' ಇತಿ ದ್ವೈವಿಧ್ಯಮೇವೇತಿ ।

'ಕಾರ್ಯದಿಂದ ಯಾವ ಸಂಬಂಧವೋ ಅದೇ ಸಂಬಂಧವು ಸಿದ್ಧವಾದ ಕಾರ್ಯದಲ್ಲೂ ಇದೆ' ಎಂದು ಒಂದೇ ಪ್ರಯೋಜಕವು ಲಾಭವಾಗುವುದರಿಂದ, ಕಾರ್ಯಾನ್ವಯಿಯಾದ ಸ್ವಾರ್ಥದಲ್ಲಿ (ಕ್ರಿಯೆಯಲ್ಲಿ) ವ್ಯುತ್ಪತ್ತಿಯನ್ನು ಒಪ್ಪಿರುವುದರಿಂದ ಕಲ್ಪನಾಗೌರವ ದೋಷವಿಲ್ಲ ಎಂದಲ್ಲಿ, ಹಾಗೆ ಹೇಳಲಾಗದು. ಕಾರ್ಯದಿಂದ ಸಿದ್ಧಕ್ಕೆ ಯಾವ ಸಂಬಂಧವೋ ಅದು ಗುಣಭಾವದ ದ್ಯೋತಕವಾಗಿದೆ. ಕಾರ್ಯಕ್ಕೆ ಕಾರ್ಯವು ಗುಣಭಾವವಾಗಲಾರದು.

...... ಪುಟ 315 ರಿಂದ

ಹೇಗೆ ಅಂಗಯಾಗಗಳಲ್ಲಿ ಉಕ್ತವಾದ ಕಾರ್ಯಕ್ಕೆ ಪ್ರಧಾನಯಾಗೋಕ್ತ ಕಾರ್ಯದಲ್ಲಿ ಅನ್ವಯವಿದೆಯೋ, ಹಾಗೆ ಕಾರ್ಯ ಬೋಧಕ ಶಬ್ದಗಳಿಗೂ ಮತ್ತೊಂದು ಕಾರ್ಯದಲ್ಲೇ ಅನ್ವಯವನ್ನು ಹೇಳಲು ಶಕ್ಯವಿದೆ ಎಂದು ವಾದಿಸುವುದು ತರವಲ್ಲ. ಗೌಣವಾದ ಅಂಗಯಾಗೋಕ್ತವಾದ ಕಾರ್ಯಕ್ಕೆ ಪ್ರಧಾನಕಾರ್ಯದಲ್ಲಿ ಅನ್ವಯವನ್ನು ಒಪ್ಪಿದರೂ, ಪ್ರಧಾನಕಾರ್ಯ ಬೋಧಕ ಶಬ್ದಕ್ಕೆ ಅನ್ವಯವನ್ನು ಸಿದ್ಧದಲ್ಲಿಯೇ ಒಪ್ಪಬೇಕು ಹೊರತಾಗಿ ಬೇರೆಡೆ ಅನ್ವಯವನ್ನು ತಿಳಿಸಲು ಶಕ್ಯವಿಲ್ಲ ಎಂದು ಭಾವ.

ಗುಣದಲ್ಲಿ ಮತ್ತು ಪ್ರಧಾನದಲ್ಲಿ ಅನುಗತವಾದ ಒಂದೇ ಸಂಬಂಧವನ್ನು ಶಬ್ದವು ಬೋಧಿಸಲಾರದು. ಆದುದರಿಂದ ಇದು (ಸಿದ್ಧ ಮತ್ತು ಕಾರ್ಯತಾಗಳಲ್ಲಿ ಒಂದೇ ಪ್ರಯೋಜಕ ಎನ್ನುವುದು) ಶಬ್ದಮಾತ್ರ, ಅರ್ಥವು ಒಂದೇ ಅಲ್ಲ (ಭಾವವು ಬೇರೇ) ಎಂದು, ಇದು ಕೇವಲ ತೋರಿಕೆಯ ಮಾತು[1].

ಇದರಿಂದ (ಈ ಹಿಂದಿನ ವಾದದಿಂದ) 'ಕಾರ್ಯದಿಂದ ಯಾವ ಸಂಬಂಧವು ಉಕ್ತವಾಗಿದೆಯೋ ಆ ಸಂಬಂಧವನ್ನು ಹೊಂದಿರುವುದು' (ಇದು) ಕಾರ್ಯದಲ್ಲೂ ಸಿದ್ಧದಲ್ಲೂ ಇದೆ (ಸಂಬಂಧವು ಉಭಯನಿಷ್ಠ ವಾದುದರಿಂದ). ಎನ್ನುವುದೂ ನಿರಾಕೃತವಾಯಿತು. (ಹಿಂದೆ ತಿಳಿಸಿದಂತೆ ಶಬ್ದವೂ ಒಂದೇ ಆದರೂ ಅರ್ಥವು ಭಿನ್ನವಾಗುವದರಿಂದ.) ಕಾರ್ಯ-ಪ್ರತಿಪಾದಕವಾದ ಯಾವ ಪದವೋ, ಅದರಿಂದ ಅನ್ವಿತವಾದ ಪದಾರ್ಥದಲ್ಲಿ ವ್ಯುತ್ಪತ್ತಿ ಎಂದು ಹೇಳುವುದೂ ಸರಿಯಾಗದು[2]. ಇಲ್ಲೂ ಸಹ (ಈ ವಾದ

---

1. ಅನ್ವಯ ಎಂದರೆ ಸಂಬಂಧ, ಸಂಬಂಧವಾದರೋ ಉಭಯ ನಿಷ್ಠ. ಪ್ರಕೃತ 'ಗಾಮಾನಯ' ಎನ್ನುವ ವಾಕ್ಯದಲ್ಲಿ ಗಾಂ ಎಂಬ ಸಿದ್ಧಬೋಧಕ ಶಬ್ದಕ್ಕೆ ಕಾರ್ಯದೊಡನೆ ಸಂಬಂಧವಿದ್ದ ಮೇಲೆ, ಆನಯ ಎಂಬ ಕಾರ್ಯಬೋಧಕ ಶಬ್ದಕ್ಕೂ ಸಂಬಂಧವು ಇರುವುದುತಾನೆ? ಹಾಗಾಗಿ ಕಾರ್ಯವಾಚಕಕ್ಕೂ, ಸಿದ್ಧವಾಚಕಕ್ಕೂ ಒಂದೇ ಸಂಬಂಧವಿದೆ ಎಂದು ಹೇಳಲು ಅವಕಾಶವಿರುವಾಗ ಎರಡು ವಿಧ ಸಂಬಂಧವನ್ನು ಕಲ್ಪಿಸುವ ಅಗತ್ಯವಿಲ್ಲ, ತನ್ನಿಮಿತ್ತ ಗೌರವದೋಷವಿಲ್ಲ. ಎಂದು ವಾದಿಸುವುದು ತರವಲ್ಲ. 'ಗಾಮಾನಯ' ಎನ್ನುವ ವಾಕ್ಯದಲ್ಲಿ 'ಗಾಂ' ಎನ್ನುವ ಶಬ್ದಕ್ಕೆ ಕಾರ್ಯದೊಡನೆ ಸಿದ್ಧಪದಾರ್ಥಕ್ಕೆ ಇರುವ ಸಂಬಂಧವು ಗುಣಭಾವದ್ಯೋತಕವಾದದ್ದು. 'ಆನಯ' ಎಂಬಲ್ಲಿನ ಕಾರ್ಯವು ಕಾರ್ಯಾಂತರಕ್ಕೆ ಗುಣಭಾವವನ್ನು ಹೊಂದಲಾರದು. ಕ್ರಿಯಾವಾಚಕವು ಹೊಂದಿರುವ ಸಂಬಂಧವು ಪ್ರಧಾನಭಾವದ್ಯೋತಕವಾದದ್ದು. ಹೀಗಾಗಿ ಉಭಯ ಶಬ್ದಗಳು ಹೊಂದಿರುವ ಸಂಬಂಧವು ಭಿನ್ನಭಾವಗಳ ದ್ಯೋತಕವಾಗಿವೆ. ಹಾಗಾಗಿ 'ಏಕಪ್ರಯೋಜಕಗಳನ್ನೇ ಹೇಳಬಹುದು' ಎನ್ನುವ ಮಾತು ಕೇವಲ ಮಾತಾಗುವುದೇ ಹೊರತು ಅರ್ಥತಃ ಏಕಭಾವದ್ಯೋತಕವಾಗಿಲ್ಲ. ಆದುದರಿಂದ ಇದು ಕೇವಲ ತೋರಿಕೆಯ ಮಾತು ಎಂದು ಭಾವ.

2. 'ಗಾಮಾನಯ' ಇತ್ಯಾದಿಸ್ಥಳದಲ್ಲಿ 'ಆನಯ' ಮುಂತಾದವುಗಳು ಕಾರ್ಯವಾಚಕತ್ವೇನ ಕಾರ್ಯದಲ್ಲಿ ತಾತ್ಪರ್ಯವನ್ನು ಹೊಂದಿವೆ, ಇನ್ನು 'ಗಾಂ' ಇತ್ಯಾದಿ ಸಿದ್ಧವಾಚಕಪದಗಳು ಕಾರ್ಯದಲ್ಲಿ ಉಪಯುಕ್ತವಾದ ಕರ್ಮ, ಕರ್ತೃ, ಮುಂತಾದವುಗಳನ್ನು ಬೋಧಿಸುತ್ತಾ ಕಾರ್ಯದಲ್ಲೇ ತಾತ್ಪರ್ಯವನ್ನು ಹೊಂದಿವೆ. ಹೀಗಾಗಿ ಎಲ್ಲ ಶಬ್ದಗಳು ಕಾರ್ಯದಲ್ಲೇ ತಾತ್ಪರ್ಯವನ್ನು ಹೊಂದಿವೆ ಎಂದು 'ಕಾರ್ಯತಾತ್ಪರ್ಯೋಪೇತತ್ವ' ಎಂಬ ಏಕಪ್ರಯೋಜಕತ್ವನ್ನು ತಿಳಿಸಲು ಸಾಧ್ಯವಿದೆ ಎಂದು ಮೀಮಾಂಸಕರಲ್ಲಿ ಕೆಲವರ ಅಭಿಪ್ರಾಯ ಇದೂ ಸರಿಯಾಗದು ಎಂದು ಭಾವ.

ಸರಣಿಯಲ್ಲೂ) ಏಕಪ್ರಯೋಜಕತ್ವವು ಸಿದ್ಧವಾಗದು. 'ಕಾರ್ಯಪರವಾದ ಯಾವ ಪದವೋ ಅದಕ್ಕೆ ಯಾವ ಅರ್ಥವೋ ಅದರಿಂದ ಅನ್ವಿತ' ಎಂದು ಅದರ ('ಕಾರ್ಯಪರಪದಾನ್ವಿತೇ ಸ್ವಾರ್ಥೇ ವ್ಯುತ್ಪತ್ತಿಃ' ಎನ್ನುವದರ) ವಿವರ[1]. ಅಲ್ಲಿ ಲಿಂಗಾದಿಗಳಿಗೆ (ಕಾರ್ಯವಾಚಕಗಳಿಗೆ) ಕಾರ್ಯಪರತ್ವ ಎಂದರೆ ಕಾರ್ಯವಾಚಿತ್ವ ಎಂದು, ಗವಾದಿ ಪದಗಳಿಗಾದರೋ (ಸಿದ್ಧಪದಾರ್ಥ ಬೋಧಕ ಪದಗಳಿಗಾದರೋ ಕಾರ್ಯಪರತ್ವ ಎಂದರೆ) ಕಾರ್ಯೋದ್ದೇಶಿತ್ವ ಎಂದು ಎರಡು ವಿಧವೇ ಆಗುವುದು[2].

**ಕೇವಲ ಸಿದ್ಧಪದಾರ್ಥದ ಬೋಧನದಿಂದಲೂ ನಿರಾಕಾಂಕ್ಷತೆಯು ಕಂಡಿದೆ**

**'ಇಯಂ ಮಾತಾ' 'ಅಯಂ ಪಿತಾ' 'ಸುರೂಪೋಽಸಿ' ಇತ್ಯಾದೌ ಸಿದ್ಧಮಾತ್ರಜ್ಞಾಪನೇನ ಪರ್ಯವಸಿತತ್ವಾತ್ ವಾಕ್ಯಸ್ಯ ।**

'ಈಕೆ ತಾಯಿ' 'ಈತನು ತಂದೆ' 'ನೀನು ಸುಂದರನಾಗಿರುವಿ' ಈ ಮುಂತಾದ ವಾಕ್ಯಗಳಲ್ಲಿ, ಕೇವಲ ಸಿದ್ಧಬೋಧಕಗಳಿಂದಲೇ ವಾಕ್ಯಕ್ಕೆ ನಿರಾಕಾಂಕ್ಷತ್ವವು ಕಂಡಿರುವುದರಿಂದ.

**ನನು ತಥಾಽಪಿ ನ ಕೇವಲೇ ಸಿದ್ಧಾರ್ಥೇ ವಾಕ್ಯಪ್ರಾಮಾಣ್ಯಂ ಯುಜ್ಯತೇ । ಕಾರ್ಯಬೋಧಮನ್ತರೇಣ ನೈರಾಕಾಂಕ್ಷ್ಯಲಕ್ಷಣಸ್ಯ ಪರ್ಯವಸಾನಸ್ಯ ಅಭಾವಾತ್ । ನ ಹಿ 'ಗೌರಶ್ವಃ ಪುರುಷೋ ಹಸ್ತಿ' ಇತಿ ವಾ 'ದೇವದತ್ತಃ ಪಚತಿ' ಇತಿ ವಾ ಪದಜಾತಂ ಪರ್ಯವಸಿತಮನುಭೂಯತೇ, ಕಿನ್ತು 'ತೃಪ್ತಿಕಾಮೌದನಂ ಪಚ' ಇತಿ । ಪರ್ಯವಸಾನಹೀನಸ್ಯ ಚ ನ್ಯೂನತಯಾ ವಾಕ್ಯಾಭಾಸತ್ವಂ ಸ್ಯಾತ್ । ಅತಃ ಕಾರ್ಯಪರತ್ವಂ ಸರ್ವಥಾ ಅಙ್ಗೀಕಾರ್ಯಮ್? ಇತ್ಯತ ಆಹ - 'ಇಯಮ್' ಇತಿ ॥ ಇತ್ಯಾದೌ ಪ್ರಯೋಗೇ । 'ಕೇವಲೇ ಸಿದ್ಧೇಽರ್ಥೇ ನಾಪ್ರಾಮಾಣ್ಯಮ್' ಇತಿ ವರ್ತತೇ ।**

---

1. 'ಗಾಂ ಆನಯ' ಇತ್ಯಾದಿ ವಾಕ್ಯಗಳಲ್ಲಿರುವ ಸಿದ್ಧಬೋಧಕಗಳು ಆನಯಕ್ರಿಯೆಯಲ್ಲಿಯೇ ಕರ್ತೃವಾಗಿಯೋ ಕರ್ಮವಾಗಿಯೋ ಅನ್ವಿತವಾಗುವುದು ಎಂದು ಭಾವ.

2. 'ಕಾರ್ಯೇ ತಾತ್ಪರ್ಯೋಪೇತತ್ವ' ಎಂಬ ಏಕೋದ್ದೇಶ ಎನ್ನುವುದು ಕೇವಲ ಮಾತು ಮಾತ್ರ. ತಾತ್ಪರ್ಯವು ವಿಭಿನ್ನ ಕ್ರಮದ್ದಾಗಿದೆ ಎಂದು ಹಿಂದಿನಂತೆ ಇಲ್ಲಿಯೂ ಉತ್ತರಿಸಲಾಗುವುದು ಎಂದು ಭಾವ.

ಹಾಗಾದರೂ ಕೇವಲ ಸಿದ್ಧಪದಾರ್ಥಗಳಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವು (ಪ್ರತಿಪಾದಕತ್ವವು) ಸಿದ್ಧವಾಗುವದಿಲ್ಲ. ಕಾರ್ಯದ ಬೋಧವಿಲ್ಲದೇ 'ಆಕಾಂಕ್ಷಾರಾಹಿತ್ಯ' ಎಂಬ ಸಮಾಪ್ತಿಯು ಇಲ್ಲದಿರುವುದರಿಂದ. ಹಸು, ಕುದುರೆ, ಮನುಷ್ಯ ಆನೆ ಎಂದಾಗಲಿ, ಅಥವಾ 'ದೇವದತ್ತನು ಅಡುಗೆಯನ್ನು ಮಾಡುತ್ತಿರುವನು' ಎಂದಾಗಲಿ ಪದ ಸಮೂಹವನ್ನು (ಕೇಳಿದಾಗ) ವಾಕ್ಯವು ಪರ್ಯವಸಾನವಾಯಿತು ಎಂದು ಅನುಭವವಿರುವುದಿಲ್ಲ. ಆದರೆ 'ತೃಪ್ತಿಯನ್ನು ಬಯಸುವವನು ಅಡುಗೆಯನ್ನು ಮಾಡು' ಎಂದು (ವಾಕ್ಯವನ್ನು ಶ್ರವಣ ಮಾಡಿದಾಗ ವಾಕ್ಯಪರಿಸಮಾಪ್ತಿಯ ಅನುಭವವು ಬರುತ್ತದೆ.) ಪರ್ಯವಸಾನವಿಲ್ಲದಿರುವಿಕೆಯೆಂಬ ನ್ಯೂನತೆಯಿಂದ (ಕಾರ್ಯ ಬೋಧಕವಲ್ಲದ ವಾಕ್ಯಗಳಿಗೆ) ವಾಕ್ಯಾಭಾಸತ್ವವು ಉಂಟಾದೀತು, ಆದುದರಿಂದ ಕಾರ್ಯಪರತ್ವವನ್ನೇ ಅಂಗೀಕರಿಸಬೇಕು? ಆದುದರಿಂದ ಹೇಳುತ್ತಾರೆ 'ಇಯಂ' ಎಂದು. ಈ ಮುಂತಾದ ಪ್ರಯೋಗಗಳಲ್ಲಿ. 'ಕೇವಲೇ ಸಿದ್ಧೇऽರ್ಥೇ ನಾಪ್ರಾಮಾಣ್ಯಮ್'(ಕೇವಲಸಿದ್ಧಾರ್ಥಗಳಲ್ಲಿ ಅಪ್ರಾಮಾಣ್ಯವು-ಅಬೋಧಕತ್ವವು ಇಲ್ಲ) ಎಂದು ಶೇಷಪೂರಣಮಾಡಿಕೊಳ್ಳುವುದು.

**ಯೋ ಬಾಲ್ಯ ಏವ ಕುತಶ್ಚಿತ್ಕಾರಣಾನ್ಮಾತಾಪಿತೃಭ್ಯಾಂ ವಿಯುಕ್ತೋ ಮಾತಾಪಿತೃಮತೋऽನ್ಯಾನವಲೋಕ್ಯ ಸ್ವಾತ್ಮನ್ಯೋऽಪಿ ತಥಾಭಾವಮ್ ಅನುಮಾಯ 'ಕಾ ಮೇ ಮಾತಾ, ಕೋ ಮೇ ಪಿತಾ, ಕೀದೃಶೌ, ಕುತ್ರ ವರ್ತೇತೇ?' ಇತ್ಯುತ್ಕಣ್ಠತೇ । ಅಥ ತಂ ಪ್ರತಿ ಕಶ್ಚಿದ್ ಬ್ರವೀತಿ 'ಅಯಂ ತೇ ಪಿತಾ ಯಃ ಪಾಟಲೀಪುತ್ರೇ ರಾಜಾऽಸ್ತಿ ಭದ್ರಸೇನಃ, ಇಯಂ ತೇ ಮಾತಾ ಯಾ ಭದ್ರಸೇನಸ್ಯ ಮಹಿಷೀ ಲೀಲಾವತೀ' ಇತಿ । ತದಾ ಕಾರ್ಯೋಪದೇಶಮ್ ಅನ್ತರೇಣ ಸಿದ್ಧಸ್ಯೈವ ಜ್ಞಾಪನೇನ ತದ್ವಾಕ್ಯಂ ಪರ್ಯವಸಿತಂ ಭವತಿ ಶ್ರೋತುರ್ನಿರಾಕಾಂಕ್ಷತ್ವಾತ್ । ತದನನ್ತರಂ ಚ ಸ ಯದಿ ಕಥಂ ತೌ ಪಶ್ಯೇಯಮ್? ಇತಿ ಜಿಜ್ಞಾಸತೇ ತದಾ 'ತದ್ದರ್ಶನಕಾಮಸ್ತ್ವಂ ಏವಮ್ ಅನೇನ ಪಥಾ ಪಾಟಲೀಪತ್ರಂ ಯಾಹಿ' ಇತಿ ಕಾರ್ಯಂ ಬೋಧಯತಿ । ತಥಾ, ಯಃ ಸ್ವಮುಖಮಪಶ್ಯನ್ ಅನ್ಯಾನ್ ಸುರೂಪಾನ್ ವಿರೂಪಾಂಶ್ಚ ವಿಲೋಕ್ಯ ಸ್ವಾತ್ಮನಿ ಸಂದಿಗ್ಧೇ 'ಕಿಮಹಂ ಸುರೂಪೋ ವಿರೂಪೋ ವಾ ?'**

**ಇತಿ । ತದಾ ತಂ ಕಶ್ಚಿದಾಚಷ್ಟೇ 'ಸುರೂಪೋऽಸಿ' ಇತಿ । ತದಪಿ ವಾಕ್ಯಂ ಸಿದ್ಧಮಾತ್ರಜ್ಞಾಪನೇ ಪರ್ಯವಸ್ಯತಿ, ತತಃ ಪರಮಾಕಾಂಕ್ಷಾ ವಿಚ್ಛೇದಾತ್ । ತಸ್ಮಾದಿಷ್ಟಸಾಧನಮೇವ ವಾಕ್ಯಪರ್ಯವಸಾನೇ ಹೇತುರ್ನ ಕಾರ್ಯ-ಬೋಧನಮೇವೇತಿ ನಿಯಮಃ । ಕಾರ್ಯಬೋಧನೇ ಪರ್ಯವಸಾ-ನಸ್ಯಾಪೀದಮೇವ ನಿಮಿತ್ತಂ, ಯದಿಷ್ಟಸಾಧನಬೋಧನಮ್ ಇತಿ ।**

ಯಾವಾತನು ಬಾಲ್ಯಾವಸ್ಥೆಯಲ್ಲಿಯೇ ಯಾವುದೋ ಕಾರಣದಿಂದ ತಂದೆ-ತಾಯಿಗಳಿಂದ ವಿಯುಕ್ತನಾದವನು ತಂದೆ-ತಾಯಿಯರನ್ನು ಹೊಂದಿರುವ ಬೇರೇ ಮಕ್ಕಳನ್ನು ಕಂಡು, ತನಗೂ ಆ ತರಹ (ತಂದೆ-ತಾಯಿಯು) ಇರಬೇಕೆಂದು ಊಹಿಸಿ, ನನ್ನ ತಾಯಿ ಯಾರು, ನನ್ನ ತಂದೆ ಯಾರು, ಹೇಗಿದ್ದಾರೆ, ಎಲ್ಲಿದ್ದಾರೆ? ಎಂದು ಉತ್ಸುಕನಾಗಿರುವನು. ನಂತರದಲ್ಲಿ ಆತನನ್ನು ಉದ್ದೇಶಿಸಿ ಯಾರೋ ಒಬ್ಬನು ಹೇಳುತ್ತಾನೆ- 'ಯಾರು ಪಾಟಲೀಪುತ್ರದಲ್ಲಿ ರಾಜನಾದ ಭದ್ರಸೇನನೋ, ಆತನು ನಿನ್ನ ತಂದೆ, ಭದ್ರಸೇನನ ಪತ್ನಿ ಲೀಲಾವತಿಯು ನಿನ್ನ ತಾಯಿ' ಎಂದು. ಆಗ ಕಾರ್ಯದ ಉಪದೇಶವಿಲ್ಲದೇ ಸಿದ್ಧಪದಾರ್ಥದ ಜ್ಞಾಪನದಿಂದಲೇ ಆ ವಾಕ್ಯವು ಪರ್ಯವಸಿತವಾಗಿದೆ, ಕೇಳುಗನು ನಿರಾಕಾಂಕ್ಷಿತನಾಗಿರುವುದರಿಂದ. ಅದಾದ ನಂತರದಲ್ಲಿ , ಅವರನ್ನು (ನಾನು) ಹೇಗೆ ನೋಡಬಹುದು? ಎಂದು ಒಂದುವೇಳೆ ವಿಚಾರಪರನಾದಲ್ಲಿ, ಆಗ 'ಅವರನ್ನು ನೋಡಬಯಸುವ ನೀನು ಈ ಮಾರ್ಗದಿಂದ ಪಾಟಲೀಪುತ್ರಕ್ಕೆ ಸಾಗು' ಎಂದು ಕಾರ್ಯವನ್ನು ಬೋಧಿ-ಸುವರು. ಹಾಗೆಯೇ ತನ್ನ ಮುಖವನ್ನು ಕಾಣದವ ಓರ್ವನು , ಬೇರೇ ಸುರೂಪ-ಕುರೂಪರನ್ನು ಕಂಡು ತನ್ನ ರೂಪದಲ್ಲಿ ಸಂದೇಹಬರಲು ' ನಾನು ಸುರೂಪನೋ ಕುರೂಪನೋ' ಎಂಬ (ಸಂದೇಹಬರಲು) ಆಗ ಆತನನ್ನು ಉದ್ದೇಶಿಸಿ ಯಾರೋ ಒಬ್ಬನು ಹೇಳುವನು 'ನೀನು ಸುರೂಪನಾಗಿರುವಿ' ಎಂದು. ಆ ವಾಕ್ಯವು ಸಿದ್ಧಮಾತ್ರಜ್ಞಾಪನದಿಂದಲೇ ಪರ್ಯವಸಿತವಾಗಿದೆ, ಅದರ ಮುಂದೆ ಆಕಾಂಕ್ಷೆಯ ವಿಚ್ಛಿತ್ತಿಯಾದುದರಿಂದ. ಆದುದರಿಂದ ಇಷ್ಟಸಾಧನದ ಜ್ಞಾಪನವೂ ವಾಕ್ಯಪರ್ಯವಸಾನದಲ್ಲಿ ಕಾರಣವಾಗುತ್ತಿರಲು ಕಾರ್ಯಬೋಧನವೇ (ವಾಕ್ಯಪರ್ಯವಸಾನಕ್ಕೆ ಕಾರಣ) ಎಂಬ ನಿಯಮವು

ತರವಲ್ಲ. ಕಾರ್ಯಬೋಧನದಲ್ಲಿ (ವಾಕ್ಯದ) ಪರ್ಯವಸಾನಕ್ಕೂ ಸಹ ಇದೇ ಇಷ್ಟಸಾಧನತಾದ ಬೋಧನವೇ ಕಾರಣ ಎಂದು.

ಅನೇನೈತಾಂ ವೇದವಾಕ್ಯಾನಾಂ ಯೋಜನಾಂ ಸೂಚಯತಿ । [1]ಯೋ ಹಿ ಸಾತ್ತ್ವಿಕಪ್ರಕೃತಿಃ ಲೋಕಪ್ರವಾದಾತ್ ಕಾರ್ಯತ್ವಾದಿಲಿಙ್ಗಾನುಸಂಧಾನಾದ್ವಾ ಸ್ವತನುಭವನಾದೇಃ ಕರ್ತಾರಂ ಸಾಮಾನ್ಯತೋ ಜಾನನ್ ಸ್ನೇಹಮಾಹಾತ್ಮ್ಯ-ಜ್ಞಾನಾಭ್ಯಾಂ ತದ್ವಿಶೇಷಜ್ಞಾನಾರ್ಥಮುತ್ಕಂಠಿತಮಾನಸಃ ತತ್ಸಂಸ್ಕಾರವಶಾತ್ ಚಾನ್ಯದಗಣಯನ್ ವರ್ತತೇ ತಂ ಪ್ರತಿ ಆಪ್ತೋ ಬಂಧುರಿವ 'ಅಯಂ ವೇದಃ ತತ್ಸ್ವರೂಪಂ ಸ್ವಪ್ರಧಾನಮೇವ ಪ್ರತಿಪಾದಯತಿ- 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ । ತತೋ ವಾಕ್ಯಾರ್ಥಜ್ಞಾನಾದವಾಪ್ತಪರಮಾನಂದಃ ತತ್ಸಾಕ್ಷಾತ್ಕಾರಂ ಕಾಮಯತೇ । ತಂ ಪ್ರತಿ ತದುಪಾಸನಾ ವಿಧೀಯತೇ । ಸಾ ಚ ಪ್ರಕ್ಷೀಣಾನ್ತಃಕರಣಮಲಸ್ಯೈವ ಸಮ್ಭವತಿ । ತದರ್ಥಂ ಕರ್ಮವಿಧಯಃ ಪ್ರವರ್ತನ್ತ ಇತ್ಯೇವಂ ಸಮಸ್ತೋಽಪಿ ವೇದಃ ಪರಮೇಶ್ವರಸ್ವರೂಪಜ್ಞಾಪನ ಏವ ಪರ್ಯವಸಿತಃ । ಅಥವಾ 'ಶರೀರೇಂದ್ರಿಯಾನ್ತಃಕರಣಾದಿಸನ್ನಿಧಾನೇನ ಸ್ವಾತ್ಮನೋ ವಿವಿಧದುಃಖಂ ಪಶ್ಯನ್ ನಿಷ್ಕಂಟಕಂ ಚ ಸುಖಮಲಭಮಾನಃ ಅಯಂ ಸಂಶೇತೇ, ಕಿಂ ಮಮೇದಂ ದುಃಖಾದಿಕಂ ಶರೀರಾದಿಸಮ್ಬನ್ಧ-ನಿಮಿತ್ತಮೇವ ಉತ ಸ್ವಾಭಾವಿಕಮ್' ಇತಿ । ತಂ ಪ್ರತಿ ವೇದಃ ಪ್ರವರ್ತತೇ 'ತತ್ತ್ವಮಸಿ' ಇತ್ಯಾದಿಃ- 'ಪರಮಾತ್ಮೇವ ನಿರ್ದುಃಖಪರಮಾನನ್ದಸ್ವಭಾವ ಏವ ತ್ವಮಸಿ, ಕಿನ್ತು ಈಶ್ವರಾಧೀನಾವಿದ್ಯಾದ್ಯುಪಸ್ಥಾಪಿತಶರೀರಾದಿನಿಮಿತ್ತೇನ ಅನ್ಯಥಾರೂಪೇಣೋಪೇತಃ' ಇತಿ । ತತಃ ಪುನರಸೌ ಜಿಜ್ಞಾಸತೇ 'ಕೇನೋಪಾಯೇನಾಹಂ ಇದಮಸ್ವಾಭಾವಿಕಂ ರೂಪಂ ಹಿತ್ವಾ ಸ್ವರೂಪೇಣ ಅವಸ್ಥಿತಃ ಸ್ಯಾಮ್?' ಇತಿ । ತಂ ಪ್ರತಿ 'ಪರಮೇಶ್ವರ ಏವ ಪ್ರಸನ್ನಃ ತದುಪಾಯ' ಇತಿ ತತ್ಸ್ವರೂಪಂ ನಿರೂಪ್ಯತೇ । ತತಃ ಕಥಮಸೌ ಪ್ರಸೀದತಿ?

---

1. 'ಸ್ನೇಹಮಾಹಾತ್ಮ್ಯಜ್ಞಾನಾಭ್ಯಾಂ' ಎನುವುದರಿಂದ ಮೋಕ್ಷಾಧಿಕಾರಿಯಲ್ಲಿ ಇರಬೇಕಾದ ಭಕ್ತಿರೂಪ ಗುಣವನ್ನು, 'ತದ್ವಿಶೇಷಜ್ಞಾನಾರ್ಥಂ' ಎನ್ನುವುದರಿಂದ ಶಮರೂಪಗುಣವನ್ನು, 'ಸಾತ್ವಿಕಪ್ರಕೃತಿಃ' ಎನ್ನುವುದರಿಂದ ದಮರೂಪಗುಣವನ್ನು, 'ಅನ್ಯದಗಣಯನ್' ಎನ್ನುವುದರಿಂದ ವೈರಾಗ್ಯವನ್ನು ತಿಳಿಸಿರುವರು. ಎಂದು ಶ್ರೀಮನ್ನ್ಯಾಯಸುಧಾ-ಯಾದುಪತ್ಯದಲ್ಲಿ ತಿಳಿಸಲಾಗಿದೆ.

**ಇತ್ಯಪೇಕ್ಷಾಯಾಂ 'ತತ್ಸಾಕ್ಷಾತ್ಕಾರಃ ತದರ್ಥಂ ಶ್ರವಣಾದಿಕಂ ತದಙ್ಗತಯಾ ಕರ್ಮಾಣಿ ಚ ವಿಧೀಯನ್ತೇ' ಇತ್ಯೇವಂ 'ಸಮಸ್ತಸ್ಯಾಪಿ ವೇದಸ್ಯ ಪರಮೇಶ್ವರಸ್ವರೂಪ ಏವ ಪರ್ಯವಸಾನಮ್' ಇತಿ । ಏತಚ್ಚ 'ಅನ್ಯಾರ್ಥಸ್ತು ಜೈಮಿನಿಃ.....' ಇತ್ಯಾದಿನಾ ಸೂತ್ರಕೃತೈವೋಕ್ತಮ್ ।**

ಈ ವಾದಸರಣಿಯಿಂದ ಈ ವೇದವಾಕ್ಯಗಳಿಗೆ ಯೋಜನೆಯನ್ನು ಸೂಚಿಸಿದಂತಾಯಿತು- ಯಾವ ಸಾತ್ವಿಕಸ್ವಭಾವದವನು ಜನಗಳ ಮಾತಿನಿಂದಲೋ, ಕಾರ್ಯತ್ವಾದಿ ಅನುಮಾನದಿಂದಲೋ, ತನ್ನ ದೇಹ ಮನೆ ಮುಂತಾದವುಗಳ ಕರ್ತೃವನ್ನು ಸಾಮಾನ್ಯವಾಗಿ ತಿಳಿದವನಾಗಿ (ಆ ಕರ್ತೃವಿನಲ್ಲಿನ) ಸ್ನೇಹ ಮಾಹಾತ್ಮ್ಯಜ್ಞಾನದಿಂದ ವಿಶೇಷಜ್ಞಾನಕ್ಕಾಗಿ ಉತ್ಕಂಠಿತಮನಸ್ಕನಾಗಿರಲು, ಆ ಸಂಸ್ಕಾರದಿಂದ ಬೇರೇ (ವಿಷಯ) ಪದಾರ್ಥಗಳನ್ನು ಭಾವಿಸದೇ ಇರುತ್ತಾನೆ, ಅಂತಹ ವ್ಯಕ್ತಿಯನ್ನು ಉದ್ದೇಶಿಸಿ ಆಪ್ತ ಬಂಧುಗಳಂತೆ, ಈ ವೇದವು ಅವನ (ಬ್ರಹ್ಮನ) ಸ್ವರೂಪವನ್ನು ತನ್ನ (ವೇದದ) ಪ್ರಧಾನನ್ನಾಗಿಯೇ ಪ್ರತಿಪಾದಿಸುತ್ತದೆ. 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿಯಾಗಿ. ನಂತರದಲ್ಲಿ ವಾಕ್ಯಾರ್ಥಜ್ಞಾನದಿಂದ ಪರಮಾನಂದವನ್ನು ಹೊಂದಿದವನಾಗಿ ಅವನ (ಬ್ರಹ್ಮನ) ಸಾಕ್ಷಾತ್‌ಕಾರಕ್ಕಾಗಿ ಅಪೇಕ್ಷಿಸುವನು. ಅವನನ್ನು ಉದ್ದೇಶಿಸಿ ಆತನ ಉಪಾಸನಾವನ್ನು ವಿಧಿಸುತ್ತದೆ. ಅದಾದರೋ (ಆ ಉಪಾಸನೆಯಾದರೋ) ಅಂತಃಕರಣದ ಮಲಿನವನ್ನು ದೂರಗೊಳಿಸುವುದು. ಅದಕ್ಕಾಗಿ ಕರ್ಮವಿಧಾಯಕವಾಕ್ಯಗಳು ಪ್ರವೃತ್ತವಾಗಿವೆ, ಈ ರೀತಿಯಾಗಿ ಸಮಸ್ತ ವೇದವು ಪರಮೇಶ್ವರನ ಸ್ವರೂಪಜ್ಞಾನದಲ್ಲಿಯೇ ಪರ್ಯವಸಿತವಾಗಿದೆ. ಅಥವಾ ಶರೀರ ಇಂದ್ರಿಯ ಅಂತಃಕರಣಾದಿಗಳ ಸನ್ನಿಧಾನದಿಂದ ತನ್ನಲ್ಲಿ ವಿವಿಧ ದುಃಖವನ್ನು ಕಂಡವ, ತಡೆಯಿಲ್ಲದ ಸುಖವನ್ನು ಹೊಂದದ ಆತನು ಸಂದೇಹಿಸುವನು- ಈ ನನ್ನ ದುಃಖಾದಿಗಳು ಶರೀರಕ್ಕೆ ಸಂಬಂಧಿಸಿರುವುದೋ, ಅಥವಾ ಸ್ವಾಭಾವಿಕವಾದದ್ದೊ ಎಂದು. ಅಂತಹ ವ್ಯಕ್ತಿಯನ್ನು ಉದ್ದೇಶಿಸಿ ವೇದವು 'ತತ್ವಮಸಿ' ಇತ್ಯಾದಿಯಾಗಿ ಪ್ರವೃತ್ತವಾಗಿದೆ; 'ಪರಮಾತ್ಮನಂತೆ ನಿರ್ದುಃಖಾನಂದ ಸ್ವಭಾವದವನೇ ನೀನಾಗಿರುವಿ, ಆದರೆ ಈಶ್ವರಾಧೀನವಾದ ಅವಿದ್ಯಾ ಮುಂತಾದವುಗಳಿಂದ ಉಪಸ್ಥಾಪಿತವಾದ ಶರೀರಾದಿ ನಿಮಿತ್ತಗಳಿಂದ

ಅನ್ಯಥಾ ರೂಪದಿಂದ ಕೂಡಿದವನಾಗಿರುವಿ' ಎಂದು. ನಂತರದಲ್ಲಿ ಆತನು ಮತ್ತೆ ಜಿಜ್ಞಾಸಿಸುವನು- ಯಾವ ಉಪಾಯದಿಂದ ಅಸ್ವಾಭಾವಿಕವಾದ ಈ ರೂಪವನ್ನು ನಾನು ಬಿಟ್ಟು ನಿಜರೂಪದಿಂದ ಇರುವಂತೆ ಆಗುವೆನು? ಎಂದು. ಅಂತಹ ವ್ಯಕ್ತಿಯನ್ನು ಉದ್ದೇಶಿಸಿ 'ಪ್ರಸನ್ನನಾದ ಪರಮೇಶ್ವರನೇ ಉಪಾಯ' ಎಂದು ಆತನ ಸ್ವರೂಪವನ್ನು ನಿರೂಪಿಸಲಾಗುವುದು. ಅನಂತರದಲ್ಲಿ ಆತನು (ಪರಮಾತ್ಮನು) ಹೇಗೆ ಪ್ರಸನ್ನನಾಗುವನು? ಎಂಬ ಜಿಜ್ಞಾಸೆಯು ಬಂದಾಗ, ಆತನ ಸಾಕ್ಷಾತ್ಕಾರಕ್ಕಾಗಿ ಶ್ರವಣಾದಿಗಳನ್ನು ಅದರ ಅಂಗವಾಗಿ ಕರ್ಮಾದಿಗಳನ್ನು ವಿಧಿಸುತ್ತವೆ, ಹೀಗೆಂದು 'ಎಲ್ಲ ವೇದಭಾಗದ ಪರ್ಯವಸಾನವು ಪರಮೇಶ್ವರ ನಲ್ಲಿಯೇ' ಎಂದು. ಈ ವಿಷಯವನ್ನೇ 'ಅನ್ಯಾರ್ಥಂ ತು ಜೈಮಿನಿಃ...'[1] ಇತ್ಯಾದಿಗಳಿಂದ ಸೂತ್ರಕಾರರೇ (ವೇದವ್ಯಾಸರು) ಹೇಳಿರುವರು.

1. 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮ್' ಬ್ರ.ಸೂ.1.4.19. ಎಂದು. 'ಕರ್ಮ ದೇವತಾ ಮುಂತಾದವುಗಳ ಪ್ರತಿಪಾದನವು ಅನ್ಯಾರ್ಥಂ- ಅನ್ಯಜ್ಞಾನಾರ್ಥಂ- ಇವುಗಳಿಂದ ಭಿನ್ನನಾದ ಪರಮಾತ್ಮನ ಜ್ಞಾನಕ್ಕಾಗಿ' ಎಂದು ಜೈಮಿನಿಗಳು ತಿಳಿಸಿರುವರು. ಇದು ಹೇಗೆ ತಿಳಿಯಿತು? ಪ್ರಶ್ನವ್ಯಾಖ್ಯಾನಾಭ್ಯಾಂ- ಪ್ರಶ್ನೆ ಮಾತ್ತು ವ್ಯಾಖ್ಯಾನಗಳಿಂದ. 'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ?- ಏನನ್ನು ತಿಳಿದಲ್ಲಿ ಎಲ್ಲವನ್ನೂ ತಿಳಿದಂತಾಗುವುದು? ಎಂದು (ಶೌನಕರ) ಪ್ರಶ್ನೆ. 'ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ' ಮುಂ.ಉಪ. 1-13-4.ಅಪರವಿದ್ಯೆಯ ಜ್ಞಾನದಿಂದ ಎಲ್ಲವನ್ನು ತಿಳಿದಂತಾಗುವುದು. ಆದುದರಿಂದ ಎರಡು ವಿದ್ಯೆಗಳನ್ನು ತಿಳಿಯಬೇಕು, ಎಂದು (ಅಂಗಿರಸರ) ವ್ಯಾಖ್ಯಾನ. ಇದೇ ಅಧಿಕರಣದಲ್ಲಿನ ಮುಂದಿನ ಸೂತ್ರಗಳೂ ಸಹ ಈ ವಿಷಯವನ್ನೇ ಸ್ಫುಟಪಡಿಸುವವು. 'ಪ್ರತಿಜ್ಞಾಸಿದ್ಧೇರ್ಲಿಂಙ್ಗಮಾಶ್ಮರಥ್ಯಃ' 'ನಾನ್ಯಃ ಪನ್ಥಾ ಅಯನಾಯ ವಿದ್ಯತೇ'- 'ಭಗವಂತನನ್ನು ಹೊಂದಲು ಬೇರೇ ಮಾರ್ಗಗಳಿಲ್ಲ' ಎಂಬ ಪ್ರತಿಜ್ಞೆಯ ಸಿದ್ಧಿಗಾಗಿ ಕರ್ಮಾದಿಗಳು ಜ್ಞಾನಕ್ಕೆ ಸಹಕಾರಿಗಳು ಎಂದು ಆಶ್ಮರಥ್ಯರು ಅಭಿಮತಿಸಿರುವರು 'ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡಲೋಮಿಃ' 'ಮುಮುಕ್ಷುಗಳಿಗೆ ಮುಖ್ಯ ಸಾಧನವಾದ ಜ್ಞಾನಕ್ಕೆ ಕರ್ಮಗಳು ಸಾಧನವಾಗಿವೆ, ಆದುದರಿಂದ ಆ ಕರ್ಮಗಳನ್ನು ವೇದವು ತಿಳಿಸುತ್ತದೆ' ಎಂದು ಔಡುಲೋಮಿಗಳು ಅಭಿಮತಿಸಿರುವರು. 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಲ್ಲಕರ್ಮಾದಿಗಳು ಪರಮಾತ್ಮನಲ್ಲಿ ಆಶ್ರಯಿಸಿವೆ ಎನ್ನುವದನ್ನು ತಿಳಿಸಲು, ವೇದದಲ್ಲಿ ಆ ಕರ್ಮಾದಿಗಳನ್ನು ಬೋಧಿಸುವ ಮಾತುಗಳು ಎಂದು ಕಾಶಕೃತ್ಸ್ನರು ಅಭಿಮತಿಸಿರುವರು.

**ಸಿದ್ಧಾರ್ಥಬೋಧಕ ವಾಕ್ಯಗಳಿಗೂ ಪ್ರಾಮಾಣ್ಯವು ಕಂಡಿದೆ**

**ತಸ್ಯ ತತ್ರ ಪ್ರಾಮಾಣ್ಯಾನುಭವಾಚ್ಚ ।**

ಅನು- ಆ ವಾಕ್ಯಕ್ಕೆ ('ಈಕೆ ತಾಯಿ' ಈ ಮುಂತಾದ ವಾಕ್ಯಕ್ಕೆ) ಕೇವಲ ಸಿದ್ಧಪದಾರ್ಥದಲ್ಲಿ ಬೋಧಕತ್ವವು ಅನುಭವದಲ್ಲಿ ಇರುವುದರಿಂದ.

ನನು, ತಥಾಽಪಿ ಕೇವಲಸಿದ್ಧಪರತ್ವೇ ವಾಕ್ಯಸ್ಯಾನುವಾದಕತ್ವೇನ ಅಪ್ರಾಮಾಣ್ಯಂ ಸ್ಯಾತ್, ತತಃ ಸರ್ವಥಾ ಕಾರ್ಯಪರತಾ ಸ್ವೀಕಾರ್ಯಾ । ಕಾರ್ಯಸ್ಯ ಚ ಪ್ರಮಾಣಾನ್ತರಾಗೋಚರತ್ವೇನ ನಾನುವಾದಕತ್ವಪ್ರಸಙ್ಗಃ? ಇತ್ಯತ ಆಹ- **'ತಸ್ಯ'** ಇತಿ ॥ ಪೂ(ರ್ವ್ಯವಾ)ರ್ವತ್ರೇವಾತ್ರಾಪ್ಯನುವೃತ್ತಿಃ । **ತಸ್ಯ**- 'ಇಯಂ ಮಾತಾ' ಇತ್ಯಾದಿವಾಕ್ಯಸ್ಯ । **ತತ್ರ**- ಕೇವಲಸಿದ್ಧಾರ್ಥೇ । ಪ್ರಾಮಾಣ್ಯಂ ನಾಮ- ಯಥಾವಸ್ಥಿತಾರ್ಥಬೋಧಕತ್ವಂ ನಾನ್ಯತ್ । ತಚ್ಚ ಕೇವಲಸಿದ್ಧೇಽಪ್ಯರ್ಥೇ ಪ್ರತ್ಯಕ್ಷಾದೇರಿವ ವಾಕ್ಯಸ್ಯಾಪ್ಯನುಭೂಯತೇ । ಅಸ್ತಿ ಚಾಸಾವಾರ್ಥೋ ಯಃ ಸಿದ್ಧೋಽಪಿ ಪ್ರಮಾಣಾನ್ತರೇಣಾವಿದಿತಪೂರ್ವಃ । ತತಃ ಸಿದ್ಧಾರ್ಥ ಏವ 'ಇಯಂ ಮಾತಾ' ಇತ್ಯಾದಿವಾಕ್ಯಸ್ಯಾನನುವಾದಕತ್ವಮಪ್ಯನುಭೂಯತ ಏವ । ಅತಃ ಕೇವಲಸಿದ್ಧಾರ್ಥೇ ವಾಕ್ಯಸ್ಯ ನಾಪ್ರಾಮಾಣ್ಯಮಿತಿ , ಕಿಂ ಕಾರ್ಯಪರತ್ವಾಽಗ್ರಹೇಣ ?

ಹಾಗಾದರೂ ಸಹ (ವೇದಗಳು) ಕೇವಲ ಸಿದ್ಧ ಪರವಾದಲ್ಲಿ ವಾಕ್ಯವು ಅನುವಾದಕವಾಗುವುದರಿಂದ ಅಪ್ರಮಾಣವಾದೀತು. ಆದುದರಿಂದ ಅನಿವಾರ್ಯವಾಗಿ (ವೇದಗಳನ್ನು) ಕಾರ್ಯಪರ ಎಂದು ಸ್ವೀಕರಿಸಬೇಕು[1]. ಕಾರ್ಯವಾದರೋ ಪ್ರಮಾಣಾಂತರದಿಂದ ಅವೇದ್ಯವಾದ್ದರಿಂದ (ಕಾರ್ಯವನ್ನು ಬೋಧಿಸಿದಲ್ಲಿ) ಅನುವಾದಕತ್ವದ ಪ್ರಸಂಗವಿಲ್ಲ ಎಂದು, ಆದುದರಿಂದ ಹೇಳುತ್ತಾರೆ **'ತಸ್ಯ'** ಎಂದು. ಹಿಂದಿನಂತೆ ಇಲ್ಲಿಯೂ ಸಹ ಶೇಷಪೂರಣ

1. ಮೀಮಾಂಸಕರು ತಮ್ಮ ಶಾಸ್ತ್ರಗಳಲ್ಲಿ ಪ್ರಮಾಣಾಂತರದಿಂದ ಪ್ರಾಪ್ತವಾದ ವಿಷಯವನ್ನೇ ಪ್ರಮಾಣಾಂತರವು ತಿಳಿಸಿದಲ್ಲಿ ಅಂತಹ ಎರಡನೆಯ ಪ್ರಮಾಣವನ್ನು ಅಪ್ರಮಾಣ ಎಂದು ವ್ಯವಹರಿಸುವರು. 'ಅನಧಿಗತಾರ್ಥಗನ್ತೃಪ್ರಮಾಣಂ' ಎಂದು ಅವರ ಪ್ರಮಾಣದ ಲಕ್ಷಣ. ಪ್ರಕೃತ ವೇದಗಳು ಸಿದ್ಧಪರ ಎಂದಾದಲ್ಲಿ, ಪ್ರತ್ಯಕ್ಷಾದಿ ಅನ್ಯಪ್ರಮಾಣದಿಂದ ಸಿದ್ಧವಾದುದನ್ನು ತಿಳಿಸುತ್ತವೆ ಎಂದಾಯಿತು, ತನ್ನಿಮಿತ್ತ ಅಪ್ರಮಾಣವಾದೀತು ಎಂದು ಭಾವ.

ಮಾಡಿಕೊಳ್ಳಬೇಕು[1]. ತಸ್ಯ- 'ಇಯಂ ಮಾತಾ' ಈ ಮುಂತಾದ ವಾಕ್ಯಕ್ಕೆ. ತತ್ರ- ಕೇವಲ ಸಿದ್ಧಪದಾರ್ಥದಲ್ಲಿ, ಪ್ರಾಮಾಣ್ಯ ಎಂದರೆ ಯಥಾವಸ್ಥಿತಬೋಧಕತ್ವ (ಹೊರತು) ಬೇರಲ್ಲ[2]. ಇದಾದರೋ ಕೇವಲ ಸಿದ್ಧ ಪದಾರ್ಥದಲ್ಲೂ ಸಹ ಪ್ರತ್ಯಕ್ಷಾದಿಗಳಂತೆ ವಾಕ್ಯಕ್ಕೂ ಅನುಭೂಯಮಾನವಾಗಿರುವುದು[3]. ಯಾವುದು ಪ್ರಮಾಣಾಂತರದಿಂದ ಈ ಮೊದಲು ಅರಿವಿಗೆ ಬಂದಿಲ್ಲವೋ (ಅಂತಹ ಸಿದ್ಧವಸ್ತುವಿನಲ್ಲಿಯೂ ಸಹ) ಈ ಅರ್ಥವು ಇದೆ (ಅನನುವಾದಕತ್ವರೂಪ ಪ್ರಾಮಾಣ್ಯವು ಇದೆ)[4]. ಆದುದರಿಂದ (ಸಿದ್ಧಪದಾರ್ಥವೂ ಅನನುವಾದಿತ ಪ್ರಮಾಣಗಳಿಂದ ಮೇಯವಾದುದರಿಂದ) ಸಿದ್ಧಾರ್ಥದಲ್ಲೇ[5] 'ಇಯಂ

---

1. 'ಇಯಂ ಮಾತಾ....' ಇತ್ಯಾದಿ ವಾಕ್ಯಸಂದರ್ಭದಲ್ಲಿ 'ಕೇವಲಸಿದ್ಧೇಽರ್ಥೇ ನಾಪ್ರಾಮಾಣ್ಯಂ' ಎಂದು ಶೇಷಪೂರಣ ಮಾಡಲಾಗಿತ್ತು, ಪ್ರಕೃತದಲ್ಲೂ ಹಾಗೆಯೇ ಶೇಷಪೂರಣಮಾಡಿಕೊಳ್ಳಬೇಕು ಎಂದು ಭಾವ.

2. ಸಿದ್ಧಾಂತಿಗಳು 'ಯಥಾವಸ್ಥಿತಜ್ಞೇಯವಿಷಯೀಕಾರಿತ್ವಂ- ವಸ್ತುವು ಇರುವಂತೆ ತಿಳಿಸುವದೇ ಅನುಪ್ರಮಾಣಗಳ ಪ್ರಾಮಾಣ್ಯ' ಎಂದು ಒಪ್ಪಿರುವರು. ಪ್ರಾಭಾಕರರಂತೆ 'ಅನಧಿಗತಾರ್ಥಗಂತೃತ್ವಂ- ಪ್ರಮಾಣಂ'- ಪ್ರಮಾಣಾಂತರದಿಂದ ತಿಳಿಯದ ವಿಷಯವನ್ನು ತಿಳಿಸುವುದು' ಪ್ರಮಾಣದ ಲಕ್ಷಣ ಎಂದು ಒಪ್ಪಿರುವದಿಲ್ಲ ಎಂದು ಭಾವ.

3. ಪ್ರತ್ಯಕ್ಷ ಮತ್ತು ಅನುಮಾನಗಳು ಸಿದ್ಧಪಾದಾರ್ಥಗಳ ಅರಿವಿಗೆ ಕಾರಣವಾಗಿವೆ. 'ಅಯಂ ಘಟಃ' 'ಪರ್ವತಃ ವಹ್ನಿಮಾನ್' ಇತ್ಯಾದಿಗಳನ್ನು ಉದಾಹರಿಸಬಹುದಾಗಿದೆ. ಅವು ಸಿದ್ಧಪದಾರ್ಥಗಳನ್ನು ಬೋಧಿಸಿದರೂ, ಅವುಗಳಿಗೆ ಪ್ರಾಮಾಣ್ಯವನ್ನು ಎಲ್ಲರೂ ಹೇಗೆ ಒಪ್ಪಿರುವರೋ ಅದೇ ರೀತಿಯಲ್ಲಿ ವಾಕ್ಯಗಳು (ಶಬ್ದವು) ಸಿದ್ಧಪದಾರ್ಥಗಳನ್ನು ಬೋಧಿಸಿದಲ್ಲಿ ಪ್ರಾಮಾಣ್ಯವನ್ನು ಒಪ್ಪಬೇಕು ಎಂದು ಭಾವ.

4. ಈ ಮೊದಲು ಪ್ರಾಭಾಕರರು ಒಪ್ಪಿದ 'ಅನಧಿಗತಾರ್ಥಗಂತೃತ್ವಂ' ಎಂಬ ಪ್ರಮಾಣಲಕ್ಷಣವನ್ನು ಒಪ್ಪದೇ 'ಯಥಾವಸ್ಥಿತಜ್ಞೇಯವಿಷಯೀಕಾರಿತ್ವಂ' ಎಂಬ ಪ್ರಮಾಣಲಕ್ಷಣವನ್ನು ಒಪ್ಪಿ, 'ತಸ್ಯ ತತ್ರ....' ಎನ್ನುವ ಮೂಲವನ್ನು ಯೋಜಿಸಿದ್ದರು. ಈಗ 'ಪ್ರಮಾಣಾಂತರದಿಂದ ಅವಿದಿತವಾಗಿರುವದು' ಎನ್ನುವ ಮೀಮಾಂಸಕರ ಪ್ರಮಾಣಲಕ್ಷಣವು ಸಿದ್ಧಪದಾರ್ಥಬೋಧಕವಾದ ವಾಕ್ಯದಲ್ಲಿಯೂ ಇದೆ. ಆದುದರಿಂದ ವಾಕ್ಯವು ಸಿದ್ಧಪದಾರ್ಥ-ಬೋಧಕವಾದರೂ ಅಪ್ರಾಮಾಣ್ಯವಿಲ್ಲ ಎಂಬ ಭಾವದಿಂದಲೂ ಯೋಜಿಸುತ್ತಾರೆ 'ಅಸ್ತಿ ಚಾಸಾವರ್ಥಃ...'ಇತ್ಯಾದಿ ಟೀಕಾದಿಂದ.

5. 'ತತ್ರ' ಎನ್ನುವ ಮೂಲದ ಭಾವವನ್ನು ಟೀಕಾದಲ್ಲಿ 'ಸಿದ್ಧಾರ್ಥ ಏವ' ಎನ್ನುವುದರಿಂದ ತಿಳಿಸುವರು.

ಮಾತಾ..' ಇತ್ಯಾದಿವಾಕ್ಯಕ್ಕೆ[1] ಅನನುವಾದಕತ್ವವು ಅನುಭೂತವಾಗಿಯೇ ಇದೆ[2]. ಆದುದರಿಂದ (ಸಿದ್ಧಪದಾರ್ಥಬೋಧಕ ವಾಕ್ಯಕ್ಕೂ ಸಹ ಅನುವಾದಕತ್ವವು ಇಲ್ಲದಿರುವುದರಿಂದ) 'ಕೇವಲ ಸಿದ್ಧಪದಾರ್ಥದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವಿಲ್ಲ ಎಂದು, (ಕೇವಲ) ಕಾರ್ಯಪರ' ಎಂದು ಏಕೆ ಆಗ್ರಹ?

**ಬೋಧಕತ್ವವೇ ಶಬ್ದದ ಪ್ರಾಮಾಣ್ಯಕ್ಕೆ ಕಾರಣ**

**ನ ಚ ಕುತ್ರಚಿತ್ ಸಿದ್ಧಜ್ಞಾಪನಾದನ್ಯದ್ವಾಕ್ಯಸ್ಯ ಪ್ರಯೋಜನಂ ದೃಷ್ಟಮ್ ।**

ವಾಕ್ಯಕ್ಕೆ ಸಿದ್ಧಪದಾರ್ಥ ಬೋಧಕದಿಂದ ಭಿನ್ನವಾದ ಪ್ರಯೋಜನವು ಎಲ್ಲೂ ಕಂಡಿಲ್ಲ.

ಸ್ಯಾದೇತತ್, ಯದ್ಯಪಿ ಬೋಧಕತ್ವೇನೈವ ಪ್ರಮಾಣಾನಾಂ ಪ್ರಾಮಾಣ್ಯಮ್ । ತಥಾಽಪಿ ವಾಕ್ಯಪ್ರಯೋಗಸ್ಯ ಪರಾರ್ಥತ್ವಾತ್, ಪರಪ್ರಯೋಜನಾಙ್ಗಮೇವ ವಾಕ್ಯಂ ಪ್ರಾಮಾಣ್ಯಮಶ್ನುತೇ । ಯಥಾ 'ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ' ಇತ್ಯಾದಿ । ನಾನ್ಯತ್, ಯಥಾ 'ಅಷ್ಟೌ ಕಾಕಸ್ಯ ದನ್ತಾಃ' ಇತಿ । ಪರಪ್ರಯೋಜನಾಙ್ಗಂ ಚ ತದೇವ ಯತ್ಕಾರ್ಯಪರಮ್ । ತತಃ ಕಥಂ ಕೇವಲಸಿದ್ಧೇಽರ್ಥೇ ವಾಕ್ಯ-ಪ್ರಾಮಾಣ್ಯಮ್? ಇತ್ಯತ ಆಹ- 'ನ ಚ' ಇತಿ ॥ 'ಸಿದ್ಧ..' ಇತಿ ಪ್ರಕೃತತ್ವಾದೇವೋಕ್ತಮ್ । ತತಶ್ಚೈವಂ ವ್ಯಾಖ್ಯೇಯಮ್ । ವಾಕ್ಯಂ ಹಿ ಪ್ರಮಾಣಮ್, ತಚ್ಚ ಪ್ರಮಾಸಾಧನಮ್, ಪ್ರಮಾ ಚ ಯಥಾರ್ಥ-ಜ್ಞಾನಮ್ । ಅತಸ್ತಸ್ಯ ಪರಜ್ಞಾಪನಮೇವ ಪ್ರಯೋಜನಂ ಛಿದಾಸಾಧನಸ್ಯ ಪರಶೋಃ ಛಿದೇವ, ನಹಿ ತತ್ಸಾಧನಸ್ಯ ತತೋಽನ್ಯತ್ ಪ್ರಯೋಜನಂ

1. 'ತಸ್ಯ' ಎನ್ನುವ ಮೂಲದ ಅಭಿಪ್ರಾಯವನ್ನು ಟೀಕಾದಲ್ಲಿ 'ಇಯಂ ಮಾತೇತ್ಯಾದಿವಾಕ್ಯಸ್ಯ' ಎನ್ನುವುದರಿಂದ ತಿಳಿಸಿರುವರು.

2. 'ಪ್ರಾಮಾಣ್ಯಾನುಭವಾಚ್ಚ' ಎನ್ನುವ ಮೂಲದ ಅಭಿಪ್ರಾಯವನ್ನು ಟೀಕಾದಲ್ಲಿ 'ಅನನುವಾದಕತ್ವಮಪ್ಯನುಭೂಯತ ಏವ' ಎನ್ನುವುದರಿಂದ ತಿಳಿಸಿರುವರು. ಪ್ರಾಭಾಕರರು 'ಅನನುವಾದಕತ್ವಂ ಪ್ರಾಮಾಣ್ಯಂ' ಎಂದು ಒಪ್ಪಿರುವುದರಿಂದ ಪ್ರಕೃತ ಪ್ರಾಮಾಣ್ಯಶಬ್ದಕ್ಕೆ ಅನನುವಾದಕತ್ವಂ ಎಂದು ಅರ್ಥೈಸಿರುವರು.

**ದೃಷ್ಟಮ್ । ತಚ್ಚ ಪ್ರಯೋಜನಂ ಸಿದ್ಧವಿಷಯಸ್ಯಾಪ್ಯಸ್ತೀತಿ ಕಥಂ ಪ್ರಾಮಾಣ್ಯಾನುಪಪತ್ತಿಃ? ಇತಿ ।**

ಇದು ಆದೀತು, ವಸ್ತುತಃ ಬೋಧಕತ್ವದಿಂದಲೇ ಪ್ರಮಾಣಗಳಿಗೆ ಪ್ರಾಮಾಣ್ಯ[1]. ಆದರೂ ಸಹ ವಾಕ್ಯಪ್ರಯೋಗವು ಮತ್ತೊಬ್ಬರ ಪ್ರಯೋಜನಕ್ಕಾಗಿ ಪ್ರಯುಕ್ತವಾದುದರಿಂದ[2]. ವಾಕ್ಯದ ಪ್ರಾಮಾಣ್ಯವು-ಉಪಯುಕ್ತತೆಯು ಮತ್ತೊಬ್ಬರಿಗೆ ಪ್ರಯೋಜನವಾದಾಗಲೇ ಪ್ರಾಪ್ತವಾಗುವುದು[3]. ಉದಾಹರಣೆಗೆ 'ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ' ಈ ಮುಂತಾದವು. ಬೇರೇ ವಾಕ್ಯಗಳಿಗಿಲ್ಲ, ಉದಾಹರಣೆಗೆ 'ಅಷ್ಟೌ ಕಾಕಸ್ಯ ದಂತಾಃ' ಎನ್ನುವಂತಹದು. ಯಾವುದು ಕಾರ್ಯತಾ ಬೋಧಕವೋ ಅದೇ ಪರರ ಪ್ರಯೋಜನಕ್ಕೆ ಅಂಗವಾದುದು. ಆದುದರಿಂದ ಹೇಗೆ ಕೇವಲ ಸಿದ್ಧಾರ್ಥದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವು? ಎಂದು, ಆದುದರಿಂದ ಹೇಳುತ್ತಾರೆ 'ನ ಚ' ಎಂದು. 'ಸಿದ್ಧ' ಎಂದು ಪ್ರಕೃತವಾದ್ದರಿಂದ ಹೇಳಲಾಗಿದೆ[4]. ಆದುದರಿಂದ ಹೀಗೆ ವ್ಯಾಖ್ಯಾನಿಸಬೇಕು. ವಾಕ್ಯವು ಪ್ರಮಾಣ, ಅದಾದರೋ (ವಾಕ್ಯದ ಪ್ರಾಮಾಣ್ಯವಾದರೋ) ಪ್ರಮಾಕ್ಕೆ ಸಾಧನವಾಗುವುದರಿಂದ. ಪ್ರಮಾ ಅಂದರೆ ಯಥಾರ್ಥಜ್ಞಾನ. ಆದುದರಿಂದ ಅದರ (ಪ್ರಾಮಾಣ್ಯದ) ಜ್ಞಾಪನವೇ (ವಾಕ್ಯದ) ಪ್ರಯೋಜನ. ತುಂಡರಿಸುವ ಸಾಧನಕ್ಕೆ (ಕೊಡಲಿಗೆ) ತುಂಡರಿಸುವುದೇ (ಮುಖ್ಯಪ್ರಯೋಜನ). ಆ ಸಾಧನಕ್ಕೆ ಅದಕ್ಕಿಂತ ಭಿನ್ನವಾದ

---

1. ಅರಿವಿನ ಕಾರಣಗಳಾದ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಜ್ಞಾನೋತ್ಪಾದಕವಾಗುವುದರಿಂದಲೇ ಅವುಗಳ ಪ್ರಾಮಾಣ್ಯವು ಸಿದ್ಧವಾಗುವುದು ಎಂದು ಭಾವ.

2. ಕೇಳುಗರಿಗೆ ಅರಿವು ಉಂಟಾಗಲಿ ಎಂದು ವಾಕ್ಯವನ್ನು ಪ್ರಯೋಗಿಸುವುದು ತಾನೆ? ಎಂದು ಭಾವ.

3. ವ್ಯರ್ಥವಾಕ್ಯವನ್ನೋ ನಿರರ್ಥಕ ವಾಕ್ಯವನ್ನೋ ಪ್ರಯೋಗಿಸಿದಲ್ಲಿ ಪ್ರಾಮಾಣ್ಯವಿಲ್ಲ ಎಂದು ಭಾವ.

4. ಮೂಲವನ್ನು ಪರಿಶೀಲಿಸಿದಾಗ ವಾಕ್ಯಕ್ಕೆ ಪ್ರಯೋಜನವು 'ಸಿದ್ಧ ಪದಾರ್ಥದ ಜ್ಞಾಪನವು ಮಾತ್ರ' ಎಂದು ತೋರುವುದು. ಆದರೆ ಕಾರ್ಯದ ಜ್ಞಾಪನವೂ ಪ್ರಯೋಜನವಾಗಿ ಕಂಡಿದೆ, ತನ್ನಿಮಿತ್ತ ಮೂಲಕಾರರು 'ಕಾರ್ಯಜ್ಞಾಪನವು ವಾಕ್ಯಕ್ಕೆ ಪ್ರಯೋಜಕವಲ್ಲ' ಎಂಬ ಅಭಿಪ್ರಾಯವನ್ನು ಹೊಂದಿಲ್ಲ ಎಂದು ತಿಳಿಸಿರುವರು.

ಪ್ರಯೋಜನವು ಕಂಡಿಲ್ಲ. ಆ ಪ್ರಯೋಜನವು (ಯಥಾರ್ಥಜ್ಞಾಪನತ್ವವು) ಸಿದ್ಧವಿಷಯಕ್ಕೂ ಇದೆ ಎಂದು, (ಆದುದರಿಂದ) ಪ್ರಾಮಾಣ್ಯಾನುಪಪತ್ತಿಯು ಹೇಗೆ?

**ಕಾರ್ಯಜ್ಞಾನವೂ ಸಿದ್ಧವಿಶೇಷವೇ ಆಗಿದೆ**

**ಜ್ಞಾತ್ವೈವ ಹೀಷ್ಟಸಾಧನತಾಂ ಪ್ರವರ್ತತೇ, ನಿವರ್ತತೇ ಚ ವಿಪರ್ಯಯೇಣ । ಅತಃ ಸಿದ್ಧ ಏವ ಸರ್ವವಾಕ್ಯಾನಾಂ ಪ್ರಾಮಾಣ್ಯಂ ಸಿದ್ಧಮ್ ।**

ಇದು ಇಷ್ಟಸಾಧನ ಎಂದು ತಿಳಿದು ಪ್ರವೃತ್ತನಾಗುವನು, ವಿರುದ್ಧವಾಗಿ ತಿಳಿದಲ್ಲಿ ನಿವೃತ್ತನಾಗುವನು. ಆದುದರಿಂದ ಎಲ್ಲ ವಾಕ್ಯಗಳಿಗೂ ಇಷ್ಟಸಾಧನತ್ವದಲ್ಲೇ ಬೋಧಕತ್ವವು ಸಿದ್ಧವಾಗಿದೆ.

**ಅಥವಾ ಕಾರ್ಯಮಪಿ ಸಿದ್ಧವಿಶೇಷ ಏವ 'ಇಷ್ಟಸಾಧನಲಕ್ಷಣಃ' ಇತಿ ಭಾವೇನ 'ಸಿದ್ಧೇ' ಇತ್ಯುಕ್ತಮ್ । ಯಥಾವಸ್ಥಿತಪರ್ಯಾಯೋ ವಾ ಸಿದ್ಧ-ಶಬ್ದಃ । ಸತ್ಯಮ್, ಏತಜ್ಜ್ಞಾಪನಮೇವ ಸಾಕ್ಷಾದ್ವಾಕ್ಯಸ್ಯ ಪ್ರಯೋಜನಮ್ । ತಥಾಽಪಿ ಸ ಏವಾರ್ಥೋ ವಾಕ್ಯೇನ ಜ್ಞಾಪನೀಯೋ ಯದ್ಜ್ಞಾನಂ ಪರಸ್ಯ ಕ್ವಚಿತ್ಪ್ರವೃತ್ತಿಂ, ಕುತಶ್ಚಿನ್ನಿವೃತ್ತಿಂ ವಾ ಕುರ್ಯಾತ್, ಪರಪ್ರವೃತ್ತಿ-ನಿವೃತ್ತ್ಯಭಿಪ್ರಾಯೇಣ ವಾಕ್ಯಪ್ರಯೋಗಾತ್ । ಪ್ರವೃತ್ತ್ಯಾದಿಕಾರಣಂ ಚ ಕಾರ್ಯಜ್ಞಾನಮೇವ ನ ಕೇವಲಸಿದ್ಧಜ್ಞಾನಮ್ । ನ ಚ ವಾಚ್ಯಂ ಶಬ್ದಸ್ತದ್ವ್ಯಾಪಾರೋ ವಾ ಪ್ರವರ್ತಕ ಇತಿ । ತಥಾಸತಿ ತಚ್ಛ್ರಾವಿಣಾಂ ಸರ್ವೇಷಾಮಪಿ ಪ್ರವೃತ್ತಿನಿವೃತ್ತಿಪ್ರಸಙ್ಗಾತ್ । ಬಾಲಸ್ಯ ಸ್ತನಪಾನಾದಿ-ಪ್ರವೃತ್ತ್ಯಾದೌ ಶಬ್ದಾದ್ಯಭಾವಾಚ್ಚ । ಯಾಽಪೀಯಂ ಶಂಖಾದಿಶಬ್ದ-ಶ್ರವಣಾನನ್ತರಂ ಪ್ರವೃತ್ತಿರ್ನಿವೃತ್ತಿರ್ವಾ, ಸಾಽಪಿ ಪುರುಷಾಭಿ-ಪ್ರಾಯಾನುಮಾನಾದೇವ, ನ ಸಾಕ್ಷಾತ್ । ರಾಗದ್ವೇಷಯೋಃ ಯದ್ಯಪಿ ಪ್ರವರ್ತಕತ್ವಮಸ್ತಿ ತಥಾಽಪಿ ತತ್ಸತ್ತಯೈವ ನ ತು ಜ್ಞಾತತಯಾ । ಜ್ಞಾನಂ ತ್ವಬುಭುಕ್ಷಿತಗ್ರಾಹ್ಯತಯಾಽವರ್ಜನೀಯಸನ್ನಿಧಿಃ । ಅತೋ 'ವಾಕ್ಯಬೋಧ್ಯಂ**

**ಪ್ರವೃತ್ತ್ಯಾದಿಕಾರಣಂ ಕಾರ್ಯಮೇವ' ಇತಿ ತದೇವ ಸರ್ವತ್ರ ವಾಕ್ಯಾರ್ಥತಯಾಽಙ್ಗೀಕಾರ್ಯಮ್ । ಅತ ಏವ ಲಿಂಗಾದಿರಹಿತೇ ವಾಕ್ಯೇ ಕಾರ್ಯಾರ್ಥಾಧ್ಯಾಹಾರೋ ಲಕ್ಷಣಾ ವಾಽಽಶ್ರಯಣೀಯಾ । ತತ್ಕಥಂ ಸಿದ್ಧಮಾತ್ರಪರತ್ವಂ ವಾಕ್ಯಸ್ಯ? ಇತಿ । ಉಚ್ಯತೇ, 'ನಾಯಮಸ್ತಿ ನಿಯಮೋ ಯತ್ರವೃತ್ತ್ಯಾದ್ಯರ್ಥ ಏವ ವಾಕ್ಯಪ್ರಯೋಗಃ' ಇತಿ । ಯತ್ರ ವಾಕ್ಯಾರ್ಥ-ಜ್ಞಾನಮಾತ್ರೇಣ ಸುಖದುಃಖಾವಾಪ್ತಿಹಾನೀ ಭವತಸ್ತತ್ರ ಪ್ರವೃತ್ತ್ಯಾದ್ಯ-ಭಾವಾತ್, ಯತ್ರಾಪಿ ಪ್ರವೃತ್ತಿನಿವೃತ್ತ್ಯಭಿಪ್ರಾಯೇಣ ವಾಕ್ಯಪ್ರಯೋಗಃ ತತ್ರಾಪಿ 'ಸಿದ್ಧಪರತ್ವಂ ಯುಕ್ತಮ್' ಏವೇತಿ ವಕ್ತುಮಾಹ- 'ಜ್ಞಾತ್ವೈವ' ಇತಿ । ಏವ (ಕಾರೋ)ಶಬ್ದೋ ಭಿನ್ನಕ್ರಮಃ, 'ಇಷ್ಟಸಾಧನತಾಮೇವ' ಇತಿ । ತತಃ ಕಿಮ್? ಇತ್ಯತ ಆಹ- 'ಅತಃ' ಇತಿ ।**

ಕಾರ್ಯವೂ ಸಹ ಇಷ್ಟಸಾಧನ ಲಕ್ಷಣವಾದ ಸಿದ್ಧವಿಶೇಷವೇ ಎಂಬ ಭಾವದಿಂದ 'ಸಿದ್ಧ' ಎಂದು ಹೇಳಲಾಗಿದೆ. ಸಿದ್ಧಶಬ್ದವು ಯಥಾವಸ್ಥಿತ ಎಂಬುವದರ ಪರ್ಯಾಯ (ಶಬ್ದವಾಗಿದೆ). ನಿಜ, ಇದರ (ಯಥಾವಸ್ಥಿತದ) ಜ್ಞಾಪನವೇ ವಾಕ್ಯದ ನೇರ ಪ್ರಯೋಜನ. ಆದರೂ, ಯಾವ ಜ್ಞಾನವು ಪರನಿಗೆ ಒಂದು ವಿಷಯದಲ್ಲಿ ಪ್ರವೃತ್ತಿ, ಅಥವಾ ನಿವೃತ್ತಿಯನ್ನು ಉಂಟುಮಾಡುವುದೋ, ಅಂತಹ ಅರ್ಥವೇ ವಾಕ್ಯದಿಂದ ಸೂಚಿತವಾಗಬೇಕು. ಪರರ ಪ್ರವೃತ್ತಿ-ನಿವೃತ್ತಿಗಳಿಗಾಗಿಯೇ ವಾಕ್ಯವನ್ನು ಪ್ರಯೋಗಿಸುವುದರಿಂದ. ಪ್ರವೃತ್ತ್ಯಾದಿಗಳಿಗೆ ಕಾರಣವಾದುದು ಕಾರ್ಯಜ್ಞಾನವೇ (ಹೊರತು) ಕೇವಲ ಸಿದ್ಧಜ್ಞಾನವಲ್ಲ. ಶಬ್ದವೋ ಅದರ ವ್ಯಾಪಾರವೋ ಪ್ರವೃತ್ತಕವಾಗಿದೆ ಎಂದು ಹೇಳುವುದು ತರವಲ್ಲ[1]. ಹಾಗಾದ ಪಕ್ಷದಲ್ಲಿ (ಶಬ್ದಾದಿಗಳೇ ಪ್ರವೃತ್ತ್ಯಾದಿಗಳಿಗೆ ಕಾರಣ ಎಂದಾದ ಪಕ್ಷದಲ್ಲಿ) ಅದನ್ನು (ಶಬ್ದವನ್ನು) ಕೇಳಿದ ಎಲ್ಲರಲ್ಲೂ ಪ್ರವೃತ್ತಿ-ನಿವೃತ್ತಿಗಳಿರಬೇಕಾದೀತು. ಬಾಲಕನ ಸ್ತನಪಾನಪ್ರವೃತ್ತಿಯಲ್ಲಿ ಶಬ್ದವು ಇಲ್ಲದ

1. ಮೀಮಾಂಸಕರಲ್ಲಿ ಕೆಲವರು ಪ್ರವೃತ್ತಿಯನ್ನು ಕುರಿತು ಶಬ್ದವೇ ಕಾರಣಃಎಂದು ಇನ್ನು ಕೆಲವರು ಲಿಂಗಾದಿ ಶಬ್ದವಾಚ್ಯವಾದ ಭಾವನಾವು ಕಾರಣವೆಂದು ಒಪ್ಪಿರುವರು. ಇದು ತರವಲ್ಲ ಎಂದು ಭಾವ.

ಪ್ರಯುಕ್ತವೂ ಸಹ[1]. ಶಂಖಾದಿ ಶಬ್ದಗಳ ಶ್ರವಣಾನಂತರದಲ್ಲಿ ಯಾವ ಪ್ರವೃತ್ತಿ-ನಿವೃತ್ತಿಗಳು (ಕಂಡಿವೆಯೋ) ಅವೂ ಸಹ ಪುರುಷಾಭಿಪ್ರಾಯವನ್ನು ಊಹಿಸು-ವುದರಿಂದಲೇ ಹೊರತಾಗಿ ನೇರವಾಗಿ ಅಲ್ಲ[2]. ವಸ್ತುತಃ ರಾಗ-ದ್ವೇಷಾದಿಗಳಿಗೆ ಪ್ರವೃತ್ತ್ಯಾದಿಗಳಲ್ಲಿ ಕಾರಣತ್ವವಿದೆ, ಆದರೂ ಅವು ತಮ್ಮ ಅಸ್ತಿತ್ವದಿಂದ ಕಾರಣ ವಾಗಿವೆ ಹೊರತು ಜ್ಞಾತವಾಗಿ ಅಲ್ಲ[3]. (ರಾಗದ್ವೇಷಾದಿಗಳ) ಜ್ಞಾನವಾದರೋ ಅನಪೇಕ್ಷಿತವಾಗಿದ್ದರೂ ಗೃಹೀತವಾಗುವುದರಿಂದ ಅದರ ಅಸ್ತಿತ್ವವು ಅನಿವಾರ್ಯ[4]. ಆದುದರಿಂದ ವಾಕ್ಯದಿಂದ ಬೋಧಿತವಾಗಿ ಪ್ರವೃತ್ತ್ಯಾದಿಗಳಿಗೆ

1. 'ಯಜ್ಞದತ್ತ ಗಾಮಾನಯ' ಎಂದಾಗ, ದೇವದತ್ತಾದಿಗಳು ಪ್ರವೃತ್ತರಾಗುವದಿಲ್ಲ. ಹಾಗೆಯೇ ಮಗುವನ್ನು ಉದ್ದೇಶಿಸಿ ತಾಯಿ ಮುಂತಾದವರು 'ಕ್ಷೀರಂ ಪಿಬ' ಎಂದು ಹೇಳದಿದ್ದರೂ ಮಗುವು ಕ್ಷೀರಪಾನದಲ್ಲಿ ಪ್ರವೃತ್ತವಾಗಿದೆ, ಹೀಗಾಗಿ ಶಬ್ದ ಮತ್ತು ಲಿಂಗಾದಿ ಶಬ್ದವಾಚ್ಯವಾದ ಭಾವನಾದಿಗಳು ಪ್ರವೃತ್ತಿಗೆ ಕಾರಣವಲ್ಲ, ಪ್ರವೃತ್ತಿಗೆ ಕಾರಣವಾದದು ಬೇರೆಯೇ ಪದಾರ್ಥ ಎಂದು ಭಾವ.

2. ಶಂಖಧ್ವಾನವಾದ ಕೂಡಲೇ ಸೇನಾನಿಗಳು ಯುದ್ಧಕ್ಕೆ ಪ್ರವೃತ್ತರಾಗುವರು, ಹಾಗೆಯೇ ಇನ್ನೂ ಅನೇಕ ಈ ತರಹೆ ಶಬ್ದಗಳ ಶ್ರವಣವಾದೊಡನೆ ಇನ್ನೂ ಅನೇಕರು ಅನೇಕ ಕಾರ್ಯ-ಗಳಲ್ಲಿ ಪ್ರವೃತ್ತರಾಗುವರು ಅಥವಾ ನಿವೃತ್ತರಾಗುವರು. ಇಂತಹ ಸ್ಥಳಗಳಲ್ಲಿ ಶಬ್ದವೇ ಪ್ರವೃತ್ತಿ-ನಿವೃತ್ತಿಗಳಿಗೆ ಕಾರಣವಲ್ಲವೇ? ಉತ್ತರಿಸುತ್ತಾರೆ- ಯಾವುದೇ ಸ್ಥಳದಲ್ಲಾಗಲಿ ಕೇವಲ ಶಬ್ದವು ಪ್ರವೃತ್ತ್ಯಾದಿಗಳಿಗೆ ಕಾರಣವಾಗದೆ, ಆ ಶಬ್ದದಿಂದ ಪುರುಷರ ಅಭಿಪ್ರಾಯವನ್ನು ಊಹಿಸಿಯೇ ಪ್ರವೃತ್ತಿ-ನಿವೃತ್ತ್ಯಾದಿಗಳು ಎಂಬುವುದು ಅನುಭವ ವಿದಿತವಾಗಿದೆ ಎಂದು ಭಾವ.

3. ಪ್ರಕೃತ ವಾದವು ಯಾವ ಜ್ಞಾನವು ಪ್ರವೃತ್ತಿಗೆ ಕಾರಣ? ಎಂದು. ರಾಗಾದಿಗಳೂ ಪ್ರವೃತ್ತ್ಯಾದಿಗಳಿಗೆ ಕಾರಣ, ಆದರೆ ಅದರ ಅರಿವು ಪ್ರವೃತ್ತಿಗೆ ಕಾರಣವಲ್ಲ, ಕೇವಲ ಅದರ ಅಸ್ತಿತ್ವವೇ ಪ್ರವೃತ್ತಿಗೆ ಕಾರಣವಾಗಿದೆ. ಪ್ರವೃತ್ತಿಗೆ ಅನೇಕ ಕಾರಣಗಳಿದ್ದರೂ ವಾಕ್ಯಜ್ಞಾನದಿಂದ ಪ್ರವೃತ್ತಿಯುಂಟಾಗಬೇಕಾದಲ್ಲಿ ಕಾರ್ಯಜ್ಞಾನವೇ ಬೇಕು ಎಂದು ಭಾವ.

4. ಪ್ರವೃತ್ತಿ-ನಿವೃತ್ತಿಗಳಿಗೆ ಯಾವ ಜ್ಞಾನ ಕಾರಣ? ಎನ್ನುವುದು ಪ್ರಕೃತ ವಾದದ ಮುಖ್ಯ ವಿಷಯ. ರಾಗ-ದ್ವೇಷಾದಿಗಳಾದರೋ ಇದ್ದಲ್ಲಿ ಅದರ ಅರಿವೂ ಇದ್ದೇ ಇರುವುದು. ಶಾಸ್ತ್ರದಲ್ಲಿ ಜ್ಞಾನ ಸುಖ ಮುಂತಾದ ವಸ್ತುಗಳನ್ನು 'ಜ್ಞಾತೈಕ ಸತ್' ಎಂದು ಕರೆಯುವರು, ಹಾಗೆಯೇ ರಾಗ-ದ್ವೇಷಾದಿಗಳೂ ಜ್ಞಾತೈಕಸತ್. ತನ್ನಿಮಿತ್ತ ಅವು ಕಾರಣವಾದಲ್ಲಿ ಅವುಗಳ ಅರಿವೂ ಕಾರಣವಾಯಿತಲ್ಲವೇ? ಉತ್ತರಿಸುತ್ತಾರೆ- ಅವುಗಳ ಜ್ಞಾನವು ಅವರ್ಜನೀಯ ಎಂದು. ಘಟಕ್ಕೆ ಕುಲಾಲನು ಕಾರಣ, ಕುಲಾಲನು ಇದ್ದಲ್ಲಿ ಅವನು ತೊಟ್ಟ ವಸ್ತ್ರವೂ ಇರುವುದು ಅಲ್ಲವೇ? ಆದರೆ ವಸ್ತ್ರವು ಘಟಕ್ಕೆ ಕಾರಣ ಎಂದು ಲೋಕದಲ್ಲಿ ವ್ಯವಹಾರವಿದೆಯೋ? ಇಲ್ಲ, ಕಾರಣ-ವ್ಯಕ್ತಿಯ ಉಡುಗೆ ಮುಂತಾದವು ಅನಿವಾರ್ಯವಾಗಿದೆ ಹೊರತು, ವ್ಯಕ್ತಿಯಿಂದ ನಡೆಯುವ ಕಾರ್ಯಗಳಿಗೆ ಅವು ಕಾರಣವಲ್ಲ. ಪ್ರಕೃತದಲ್ಲೂ ರಾಗದ್ವೇಷಾದಿಗಳ ಅರಿವೂ ಸಹ ಪ್ರಕೃತಿಸಹಜವಾಗಿ ಇದೆ ಎಂದು ಭಾವ.

ಕಾರಣವಾದದ್ದು ಕಾರ್ಯ ಎಂದು ಎಲ್ಲೆಡೆಯೂ ಕಾರ್ಯವನ್ನೇ ವಾಕ್ಯದ ಅರ್ಥ ಎಂದು ಒಪ್ಪಬೇಕು. ಆದುದರಿಂದ ಲಿಂಗಾದಿಗಳು (ಕಾರ್ಯಬೋಧಕ ಶಬ್ದಗಳು) ಇಲ್ಲದ ವಾಕ್ಯಗಳಲ್ಲೂ ಕಾರ್ಯದ ಅಧ್ಯಾಹಾರವನ್ನೋ ಲಕ್ಷಣಾ ವನ್ನೋ ಆಶ್ರಯಿಸಬೇಕು[1]. ಆದುದರಿಂದ ಹೇಗೆ ತಾನೇ ವಾಕ್ಯಕ್ಕೆ ಸಿದ್ಧಮಾತ್ರ ಪರತ್ವವು (ಒಪ್ಪಲು ಸಾಧ್ಯ) ಎಂದು? ಉತ್ತರಿಸುತ್ತಾರೆ- ಪ್ರವೃತ್ತ್ಯಾದಿ ಗಳಿಗಾಗಿಯೇ ವಾಕ್ಯವನ್ನು ಪ್ರಯೋಗಿಸುವರು ಎಂದು ನಿಯಮವಿಲ್ಲ. ಎಲ್ಲಿ ಕೇವಲ ವಾಕ್ಯಾರ್ಥದ ಅರಿವಿನಿಂದಲೇ ಸುಖ-ದುಃಖಗಳ ಪ್ರಾಪ್ತಿ- ಹಾನಿಗಳು ಉಂಟಾಗುವವೋ ಅಲ್ಲಿ ಪ್ರವೃತ್ತ್ಯಾದಿಗಳು ಇಲ್ಲದಿರುವುದರಿಂದ[2], ಎಲ್ಲಿ ಪ್ರವೃತ್ತಿ-ನಿವೃತ್ತಿಯ ಅಭಿಪ್ರಾಯದಿಂದಲೇ ವಾಕ್ಯಪ್ರಯೋಗವೊ ಅಲ್ಲಿಯೂ ಸಹ ಸಿದ್ಧಪರ ಎಂದೇ ಉತ್ತರಿಸಲು ಹೇಳುತ್ತಾರೆ 'ಜ್ಞಾತ್ವೈವ' ಎಂದು. ಏವಕಾರವು ಭಿನ್ನಕ್ರಮದಲ್ಲಿದೆ, ಇಷ್ಟಸಾಧನತ್ವವೇ ಎಂದು[3]. ಅದರಿಂದ ಏನು? ಆದುದರಿಂದ ಉತ್ತರಿಸುತ್ತಾರೆ '**ಅತಃ**' ಎಂದು.

**'ಇದು ಇಷ್ಟಸಾಧನ' ಎಂಬ ಜ್ಞಾನವೇ ಪ್ರವೃತ್ತಿಗೆ ಕಾರಣ**

**ಯದ್ಯಪಿ ಸಿದ್ಧಮಾತ್ರಜ್ಞಾನಂ ನ ಪ್ರವೃತ್ತ್ಯಾದಿಹೇತುಃ ತಥಾಽಪಿ ಸಿದ್ಧವಿಶೇಷೇ ಇಷ್ಟಾನಿಷ್ಟಸಾಧನತ್ವಜ್ಞಾನಂ ತು ಭವತ್ಯೇವ । ಯತೋ**

1. 'ನಿನಗೆ ಪುತ್ರನಾದನು' 'ಬಾಗಿಲು ಬಾಗಿಲು' ಇತ್ಯಾದಿ ವಾಕ್ಯಗಳಲ್ಲಿ ವಸ್ತುತಃ ಲಿಂಗಾದಿ ಶಬ್ದಗಳು ಇಲ್ಲ, ಆದರೂ 'ಮಗುವನ್ನು ನೋಡಿ ಬಾ' 'ಬಾಗಿಲನ್ನು ತೆಗೆಯಿರಿ' ಇತ್ಯಾದಿಯಾಗಿ ಅಧ್ಯಾಹಾರವನ್ನು ಮಾಡುವಂತೆ ಎಲ್ಲೆಡೆಯೂ ಅಧ್ಯಾಹಾರಾದಿಗಳನ್ನು ಮಾಡಬೇಕು ಎಂದು ಭಾವ.

2. 'ನೀನು ಸುಂದರನಾಗಿರುವಿ' 'ಗಂಡು ಮನೆಯಲ್ಲಿದ್ದರೆ ಭಯವಾಗದು' ಇಂತಹ ವಾಕ್ಯಗಳ ಅರಿವಿನಿಂದಲೇ ಸುಖಪ್ರಾಪ್ತಿ, ದುಃಖನಿವೃತ್ತಿಗಳು ಕಂಡಿದೆ ಎಂದು ಭಾವ.

3. ಮೂಲದಲ್ಲಿ 'ಜ್ಞಾತ್ವೈವ....' ಎಂದಿದೆ. ತಿಳಿದೇ ಪ್ರವೃತ್ತಿ ಎಂದು ಅರ್ಥವು ಝಟಿತಿ ಪ್ರತಿಭಾಸಮಾನವಾಗುವುದು. ಆದರೆ ಪ್ರಾಭಾಕರರು ಜ್ಞಾನಕ್ಕೆ ಪ್ರವರ್ತಕತ್ವನ್ನು ನಿಷೇಧಿಸಿದ್ದರೆ ನಾವು 'ಜ್ಞಾನವೇ ಪ್ರವರ್ತಕ' ಎಂದು ಹೇಳಬಹುದಾಗಿತ್ತು, ಆದರೆ ಅವರು ಹಾಗೆ ಹೇಳದ ಪ್ರಯುಕ್ತ ಈ ರೀತಿಯ ಹೇಳಿಕೆಯು ಅಸಂಬದ್ಧವಲ್ಲವೆ? ಎಂಬ ಸಂದೇಹಕ್ಕೆ ಅವಕಾಶ ವಿರುವುದರಿಂದ ಟೀಕೆಯಲ್ಲಿ ಏವಕಾರದ ಸಂಯೋಜನೆಯನ್ನು ತಿಳಿಸಿ ಅರ್ಥವನ್ನು ತಿಳಿಸುತ್ತಿರುವರು 'ಏವಶಬ್ದಃ' ಎನ್ನುವದರಿಂದ. 'ಇಷ್ಟಸಾಧನತ್ವದ ಜ್ಞಾನವೇ ಪ್ರವೃತ್ತಿಗೆ ಕಾರಣ' ಎಂದು ಮೂಲದ ಭಾವ. ಕೇವಲ ಕಾರ್ಯದ ಜ್ಞಾನವಾಗಲೀ, ಕೇವಲ ಜ್ಞಾನವಾಗಲೀ ಪ್ರವೃತ್ತಿಗೆ ಕಾರಣವಲ್ಲ ಎಂದು ಭಾವ.

**ಬಾಲೋಽಪಿ ಸ್ತನಪಾನಾದೇರಿಷ್ಟಸಾಧನತಾಮೇವ ಜ್ಞಾತ್ವಾ ಪ್ರವರ್ತತೇ । ತಥಾ ದಂಶಮಶಕದಶನಾದೇರನಿಷ್ಟಸಾಧನತಾಮೇವ ಜ್ಞಾತ್ವಾ ನಿವರ್ತತೇ । ತಸ್ಯಾಪಿ ಕಾರ್ಯತಾಜ್ಞಾನಾದೇವ ಪ್ರವೃತ್ತಿಃ, ಇಷ್ಟಸಾಧನತಾಜ್ಞಾನಂ ತು ಕಾರ್ಯತಾಜ್ಞಾನಸ್ಯ ಕಾರಣಮಿತಿ ಚೇನ್ನ । ಇಷ್ಟಸಾಧನತಾತಿರಿಕ್ತಾಯಾಂ ಕಾರ್ಯತಾಯಾಂ ಪ್ರಮಾಣಾಭಾವಾತ್ । 'ಚಂದ್ರಮಂಡಲಾದಾವಸ್ತಿ ಇಷ್ಟಸಾಧನತಾಬುದ್ಧಿರ್ನ ಕಾರ್ಯತಾಬುದ್ಧಿಃ' ಇತಿ? ಚೇತ್ । ಸತ್ಯಮ್, ಕೃತಿಸಾಧ್ಯೇಷ್ಟಸಾಧನತಾಯಾಃ ಕಾರ್ಯತಾಪರ್ಯಾಯತಯಾಽಙ್ಗೀಕಾರಾತ್ । ಅತ ಏವ ನ ಭೂತಾದೌ ಪ್ರವೃತ್ತಿಪ್ರಸಙ್ಗಃ ।**

ವಸ್ತುತಃ ಸಿದ್ಧಪದಾರ್ಥದ ಜ್ಞಾನವು ಪ್ರವೃತ್ತ್ಯಾದಿಗಳನ್ನು ಉದ್ದೇಶಿಸಿ ಕಾರಣವಲ್ಲ, ಆದರೂ ಸಿದ್ಧವಿಶೇಷವಾದ ಇಷ್ಟಾನಿಷ್ಟಗಳ ಸಾಧನತ್ವದ (ಇಷ್ಟಪ್ರಾಪ್ತಿಯ ಸಾಧನದ, ಅನಿಷ್ಟನಿವೃತ್ತಿಯ ಸಾಧನದ) ಜ್ಞಾನವು ಕಾರಣವಾಗಿದೆ. ಬಾಲಕನಾದರೂ ಸ್ತನಪಾನಾದಿಗಳಲ್ಲಿ ಇಷ್ಟಸಾಧನವೆಂದು ತಿಳಿದೇ ಪ್ರವೃತ್ತನಾಗುವನು[1]. ಹಾಗೆಯೇ ಅನಿಷ್ಟಕ್ಕೆ ಕಾರಣವಾಗಿದೆ ಎಂದು ತಿಳಿದೇ, ಸೊಳ್ಳೆ-ತಿಗಣೆಗಳು ಕಚ್ಚುವುದೇ ಮುಂತಾದವುಗಳಿಂದ ನಿವೃತ್ತನಾಗುವುದು. ಬಾಲಕನು ಕಾರ್ಯತಾಜ್ಞಾನದಿಂದಲೇ ಪ್ರವೃತ್ತನಾಗುವುನು, ಇಷ್ಟಸಾಧನತಾಜ್ಞಾನವು ಕಾರ್ಯತಾಜ್ಞಾನಕ್ಕೆ ಕಾರಣ ಎಂದು ಹೇಳುವುದು ತರವಲ್ಲ. ಇಷ್ಟಸಾಧನತಾದಿಂದ ಬೇರೆಯಾದ ಕಾರ್ಯತಾದ ಅಸ್ತಿತ್ವದಲ್ಲಿ ಪ್ರಮಾಣವಿಲ್ಲದಿರುವುದರಿಂದ[2]. ಚಂದ್ರಮಂಡಲದಲ್ಲಿ ಇಷ್ಟಸಾಧನತ್ವ ಬುದ್ಧಿ ಇದೆ, ಆದರೆ

1. 'ಮಮೇದಂ ಕಾರ್ಯಂ' ಎನ್ನುವ ಕಾರ್ಯತಾಜ್ಞಾನವು ಪ್ರವೃತ್ತಿಗೆ ಕಾರಣ ಎಂದು ಮೀಮಾಂಸಕರು ಈ ಹಿಂದೆ ಪ್ರತಿಪಾದಿಸಿದ್ದರು. ಆದರೆ ಬಾಲಕನ ಪ್ರವೃತ್ತಿಗೆ ಕಾರಣ ಕಾರ್ಯತಾಜ್ಞಾನವಲ್ಲ, 'ಮಮೇದಂ ಇಷ್ಟಂ' ಎನ್ನುವ ಇಷ್ಟಸಾಧನತಾ ಜ್ಞಾನವೇ ಕಾರಣ ಎಂದು ಪ್ರತಿಪಾದಿಸುತ್ತಿದ್ದಾರೆ.

2. ಆಜ್ಞಾರ್ಥಕ ಶಬ್ದಗಳು ಕಾರ್ಯವನ್ನು ಬೋಧಿಸುತ್ತವೆ ಎಂದು ಮೀಮಾಂಸಕರು ಒಪ್ಪಿರುವರು. ಆದರೆ ಕಾರ್ಯವನ್ನು ಆಜ್ಞಾರ್ಥಕ ಶಬ್ದಗಳು ಬೋಧಿಸಲಾರವು ಎಂದು ಪ್ರಕೃತದಲ್ಲಿ ತಿಳಿಸುತ್ತಿದ್ದಾರೆ- ಶಬ್ದವು ಅನ್ಯಪ್ರಮಾಣದಿಂದ ಬೋಧಿತವಾದದ್ದನ್ನು ತಿಳಿಸುವಂತಿಲ್ಲ, ತಿಳಿಸಿದಲ್ಲಿ ಅಪ್ರಮಾಣವಾಗುವುದು. 'ಅನಧಿಗತಾರ್ಥಗನ್ತೃತ್ವಂ

ಪುಟ 333ರಲ್ಲಿ........

ಅದರಲ್ಲಿ ಕಾರ್ಯತಾಬುದ್ಧಿಯು ಇಲ್ಲ ಎಂದರೆ, ಸರಿ, (ಆದರೆ) ಕೃತಿಸಾಧ್ಯ ವಾದ ಇಷ್ಟಸಾಧನತ್ವವನ್ನೇ ಕಾರ್ಯತಾಕ್ಕೆ ಪರ್ಯಾಯ ಎಂದು ಒಪ್ಪಿರುವದು. ಆದ್ದರಿಂದಲೇ ಗತಿಸಿದ ವಸ್ತುವಿನಲ್ಲಿ ಪ್ರವೃತ್ತಿಯ ಪ್ರಸಂಗವಿಲ್ಲ[1].

**ಏತೇನ ವೃದ್ಧವ್ಯವಹಾರದರ್ಶನೇನ ಯಾ ವ್ಯುತ್ಪತ್ತಿಃ ಸಾಽಪಿ 'ಸಿದ್ಧವಿಷಯೈವ' ಇತಿ ಸಿದ್ಧಮ್ । ಬಾಲೇನ ಹಿ ಸ್ವಪ್ರವೃತ್ತೌ ಯತ್ಪ್ರವರ್ತಕತ್ವೇನ ಅವಗತಂ ತದೇವ ವೃದ್ಧಪ್ರವೃತ್ತಾವಪಿ ಕಲ್ಪಯಿತುಮುಚಿತಮ್ । ಸ್ವಪ್ರವೃತ್ತೌ ಚ 'ಇಷ್ಟಸಾಧನತಾಜ್ಞಾನಮೇವ ಪ್ರವರ್ತಕತಯಾವಧಾರಿತಮ್' ಇತ್ಯುಕ್ತಮ್ । ಯತ ಏವಂ ಸಿದ್ಧಜ್ಞಾನಸ್ಯೈವ ಸರ್ವತ್ರ ಪ್ರವರ್ತಕತ್ವಂ ವ್ಯುತ್ಪತ್ತಿಶ್ಚ ಸಿದ್ಧವಿಷಯೈವ, ಅತೋ ನ ಕೇವಲಮ್ 'ಇಯಂ ಮಾತಾ' ಇತ್ಯಾದೀನಾಂ ಕಿನ್ತು ಸರ್ವವಾಕ್ಯಾನಾಂ ಲಿಙ್ಗಾದಿಯುಕ್ತಾನಾಮಪಿ ಸಿದ್ಧ ಏವ ಪ್ರಾಮಾಣ್ಯಂ ಸಿದ್ಧಮ್ ।**

---

...... ಪುಟ 332 ರಿಂದ

ಪ್ರಮಾಣಮ್' ಎನ್ನುವುದು ಮೀಮಾಂಸಕರ ಅಭಿಮತವಾಗಿರುವುದರಿಂದ. ಪ್ರಕೃತ ಕಾರ್ಯತಾ ಎಂದರೆ ಕೃತಿಸಾಧ್ಯತ್ವ, ಅಂದರೆ ಪ್ರಯತ್ನಜನ್ಯತ್ವ ಎಂದು ಅದರ ಅಭಿಪ್ರಾಯ. ಈ 'ಪ್ರಯತ್ನಜನ್ಯತ್ವವು' ಪ್ರತ್ಯಕ್ಷದಿಂದ ತಿಳಿಯುವುದು, ಹಾಗಾಗಿ ಲಿಂಗಾದಿ ವೇದ್ಯ ಎಂದು ಹೇಳಲಾಗದು. ಆದುದರಿಂದ ಅನ್ಯಪ್ರಮಾಣದಿಂದ ಅವೇದ್ಯವಾದ ಇಷ್ಟಸಾಧನತ್ವವೇ ಲಿಂಗಾದಿಗಳಿಂದ ಬೋಧ್ಯ ಎನ್ನುವುದೇ ಉಚಿತ, 'ಯಾಗವು ಸ್ವರ್ಗಸಾಧನ' ಎನ್ನುವುದು ಪ್ರತ್ಯಾಕ್ಷಾದಿಗಳಿಂದ ಗಮ್ಯವಲ್ಲ. ಇದನ್ನು ಲಿಂಗಾದಿಗಳು ತಿಳಿಸುವುದು ಎಂದೇ ಒಪ್ಪಬೇಕು. ಲೌಕಿಕದಲ್ಲಿನ ಕೃತಿಸಾಧ್ಯತ್ವವು ಪ್ರತ್ಯಕ್ಷಾದಿಗಮ್ಯ, ಆದುದರಿಂದ ಲಿಂಗಾದಿ ಬೋಧ್ಯ ಎಂದು ಹೇಳಲಾಗದು. ಹಾಗಾಗಿ ಇಷ್ಟಸಾಧನದಿಂದ ಭಿನ್ನವಾದ ಕಾರ್ಯತಾದ ವಿಷಯದಲ್ಲಿ ಪ್ರಮಾಣವಿಲ್ಲ ಎನ್ನುವುದು ಟೀಕಾದ ಒಟ್ಟುಭಾವ.

1. ಇಷ್ಟಸಾಧನತ್ವವೇ ಪ್ರವೃತ್ತಿಗೆ ಕಾರಣ ಎಂದಲ್ಲಿ ಚಂದ್ರಮಂಡಲಾಹರಣದಲ್ಲಿ ಇಷ್ಟಸಾಧನತ್ವದ ಬುದ್ಧಿ ಇದೆ, ಆದರೆ ಅಲ್ಲಿ ಪ್ರವೃತ್ತಿಯು ಕಂಡಿಲ್ಲ ತನ್ನಿಮಿತ್ತವಾಗಿ ಕಾರ್ಯತಾಜ್ಞಾನವೇ ಪ್ರವೃತ್ತಿಗೆ ಕಾರಣ ಎನ್ನಬೇಕು ಎಂದು ವಾದಿಸುವುದು ತರವಲ್ಲ. ಏಕೆಂದರೆ ಕೃತಿಸಾಧ್ಯವಾದ ಇಷ್ಟಸಾಧನತಾಜ್ಞಾನವು ಪ್ರವೃತ್ತಿಯನ್ನು ಕುರಿತು ಕಾರಣ, ಕೇವಲ ಇಷ್ಟಸಾಧನತಾ ಬುದ್ಧಿಯು ಅಲ್ಲ ಎಂದು ಒಪ್ಪಲಾಗಿದೆ. ಆದ್ದರಿಂದಲೇ ಗತಿಸಿದ ಪದಾರ್ಥಗಳಲ್ಲಿ, ಮುಂದೆ ಉತ್ಪನ್ನವಾಗುವ ಪದಾರ್ಥಗಳಲ್ಲಿ ಇಷ್ಟಸಾಧನತ್ವವಿದ್ದರೂ ಪ್ರವೃತ್ತಿಯಿಲ್ಲದಿರುವುದೂ ಸಮಂಜಸವಾಗಿದೆ ಎಂದು ಭಾವ.

ಇದರಿಂದ (ಈವರೆಗಿನ ವಾದದಿಂದ) ವೃದ್ಧವ್ಯವಹಾರದ ದರ್ಶನದಿಂದ ಯಾವ ವ್ಯುತ್ಪತ್ತಿಯೋ ಅದೂ ಸಹ ಸಿದ್ಧವಿಷಯವೇ ಎಂದು ಸಿದ್ಧವಾಯಿತು. ಬಾಲಕನು ತನ್ನ (ಸ್ತನಪಾನಾದಿ) ಪ್ರವೃತ್ತಿಯಲ್ಲಿ ಯಾವುದನ್ನು ಪ್ರವೃತ್ತಿಗೆ ಕಾರಣ ಎಂದು ತಿಳಿದಿರುವನೋ ಅದನ್ನೇ ವೃದ್ಧನ ಪ್ರವೃತ್ತಿಯಲ್ಲೂ (ಕಾರಣ ಎಂದು) ಕಲ್ಪಿಸುವುದು ಉಚಿತ. ತನ್ನ ಪ್ರವೃತ್ತಿಯಲ್ಲಿ ಯಾದರೋ 'ಇಷ್ಟಸಾಧನತಾ ಜ್ಞಾನವೇ ಪ್ರವರ್ತಕ ಎಂದು ನಿರ್ಧಾರಿತವಾಗಿದೆ' ಎಂದು ಹೇಳಲಾಗಿದೆ. ಯಾವಕಾರಣದಿಂದ ಹೀಗೆ ಸಿದ್ಧಜ್ಞಾನವೇ ಎಲ್ಲೆಡೆ ಪ್ರವರ್ತಕವೋ, ವ್ಯುತ್ಪತ್ತಿಯೂ ಸಿದ್ಧವಿಷಯದಲ್ಲಿಯೇ, ಆದುದರಿಂದ 'ಇಯಂ ಮಾತಾ' ಈ ಮುಂತಾದಕಡೆ ಮಾತ್ರವಲ್ಲ, ಮತ್ತೆ ಲೀಂಗಾದಿ (ಆಜ್ಞಾರ್ಥಕವಾಚಕ ಶಬ್ದ) ಯುಕ್ತವಾದ ಮತ್ತು ಎಲ್ಲ (ಬಗೆಯ) ವಾಕ್ಯಗಳಿಗೂ, ಸಿದ್ಧದಲ್ಲಿಯೇ ಪ್ರಾಮಾಣ್ಯ ಎಂದು ಸಿದ್ಧವಾಯಿತು.

**-: ಕಾರ್ಯತಾವಾದ ಸಮಾಪ್ತಿ :-**

**॥ ಸಿದ್ಧಶಾಸ್ತ್ರಪ್ರಾಮಾಣ್ಯವಾದ ॥**

ಎಲ್ಲ ವಿಧವಾದ ಶಾಬ್ದವ್ಯವಹಾರವು ಕಾರ್ಯವನ್ನು ಬೋಧಿಸುವುದರಿಂದಲೇ ಪ್ರಾಮಾಣ್ಯವನ್ನು ಹೊಂದುವುದು ಎಂಬುವ ವಾದ ವ್ಯಾಕರಣಾದಿ ಅನೇಕ ಶಾಸ್ತ್ರಜ್ಞರ ಅಭಿಮತಿಗೆ ವಿರುದ್ಧವಾದುದು.

**ಸಿದ್ಧಬೋಧಕಗಳಿಗೆ ಪ್ರಾಮಾಣ್ಯವನ್ನು ಸರ್ವವಾದಿಗಳೂ ಒಪ್ಪಿರುವರು**

**ಪ್ರಸಿದ್ಧಂ ಚ ವ್ಯಾಕರಣನಿರುಕ್ತಾನಾದೀನಾಂ ಸಿದ್ಧಮಾತ್ರೇ ಪ್ರಾಮಾಣ್ಯಂ ಸರ್ವವಾದಿನಾಮ್ । ತದನಙ್ಗೀಕಾರೇ ಚ ಸರ್ವಶಾಬ್ದವ್ಯವಹಾರಾಸಿದ್ಧಿಃ ।**

ವ್ಯಾಕರಣ, ನಿರುಕ್ತ ಮುಂತಾದವುಗಳಿಗೆ (ಶಾಸ್ತ್ರಗಳಿಗೆ) ಸಿದ್ಧಪದಾರ್ಥದಲ್ಲೇ ಬೋಧಕತ್ವ ಎನ್ನುವುದು ಸಕಲ ವಾದಿಗಳಲ್ಲಿ ಪ್ರಸಿದ್ಧವಾದ ಸಂಗತಿ. ಅದನ್ನು (ವ್ಯಾಕರಣಾದಿ ಶಾಸ್ತ್ರಗಳಿಗೆ ಪ್ರಾಮಾಣ್ಯವನ್ನು) ಒಪ್ಪದ ಪಕ್ಷದಲ್ಲಿ (ಶುದ್ಧವಾದ) ಎಲ್ಲ ಶಾಬ್ದವ್ಯವಹಾರಗಳು ಅಸಿದ್ಧವಾದೀತು.

**ಅತ್ರ ಸರ್ವವಾದಿಸಿದ್ಧದೃಷ್ಟಾನ್ತಮಾಹ - 'ಪ್ರಸಿದ್ಧಂ ಚ' ಇತಿ ॥ ಆದಿಪದೇನ ನಿಘಂಟುಪ್ರಭೃತೀನಾಂ ಗ್ರಹಣಮ್ । ಸಿದ್ಧಮಾತ್ರೇ-**

**ಶಬ್ದಾದಿಸ್ವರೂಪೇ । ತತ್ರಾಪಿ 'ಏಕಃ ಶಬ್ದಃ ಸಮ್ಯಗ್ ಜ್ಞಾತಃ ಸುಪ್ರಯುಕ್ತಃ ಶಾಸ್ತ್ರಾನ್ವಿತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ' ಇತ್ಯರ್ಥವಾದಬಲಾದ್ ವಿಧಿಃ ಕಲ್ಪ್ಯತ ಇತಿ ಚೇನ್ನ । ಇಷ್ಟಸಾಧನತಾಜ್ಞಾನಾದೇವ ಪ್ರವೃತ್ತ್ಯುಪಪತ್ತೌ ತತ್ಕಲ್ಪಕಾಭಾವಾತ್ ।**

ಈ ವಿಷಯದಲ್ಲಿ (ಸಿದ್ಧದಲ್ಲೇ ಪ್ರಾಮಾಣ್ಯ ಎನ್ನುವ ವಿಷಯದಲ್ಲಿ) ಎಲ್ಲ ವಾದಿಗಳಲ್ಲಿ ಸಿದ್ಧವಾದ ಉದಾಹರಣಗಳನ್ನು ಹೇಳುತ್ತಾರೆ '**ಪ್ರಸಿದ್ಧಂ ಚ**' ಎಂದು. ಆದಿಪದದಿಂದ ನಿಘಂಟು ಮುಂತಾದವುಗಳನ್ನು ಪರಿಗ್ರಹಿಸುವುದು[1]. **ಸಿದ್ಧಮಾತ್ರೇ**- ಶಬ್ದಸ್ವರೂಪದಲ್ಲಿ. ಅಲ್ಲಿಯೂ ಸಹ 'ಏಕಃ ಶಬ್ದಃ ಸಮ್ಯಗ್ ಜ್ಞಾತಃ ಸುಪ್ರಯುಕ್ತಃ ಶಾಸ್ತ್ರಾನ್ವಿತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ' ಎನ್ನುವ ಅರ್ಥವಾದದ ನುಡಿಯಿಂದ ವಿಧಿಯನ್ನು ಕಲ್ಪಿಸಲಾಗುವುದು ಎನ್ನುವದು ತರವಲ್ಲ. ಇಷ್ಟಸಾಧನತಾ ಜ್ಞಾನದಿಂದಲೇ ಪ್ರವೃತ್ತಿಯು ಉಂಟಾಗಲು, ಆದರ (ಕಾರ್ಯತಾದ) ಕಲ್ಪಕವು ಇಲ್ಲದಿರುವುದರಿಂದ[2].

1. ಜ್ಯೋತಿಃಶಾಸ್ತ್ರ, ಛಂದಶಾಸ್ತ್ರ, ಇತಿಹಾಸ, ಪುರಾಣ, ಸಂಗೀತಶಾಸ್ತ್ರಗಳನ್ನು 'ಪ್ರಭೃತಿ' ಶಬ್ದದಿಂದ ಪರಿಗ್ರಹಿಸುವುದು.

2. ವಸ್ತುತಃ ವ್ಯಾಕರಣಾದಿ ಶಾಸ್ತ್ರಗಳಲ್ಲಿ ವಿಧಿಬೋಧಕವಾಕ್ಯವು ಇಲ್ಲದಿದ್ದರೂ ಅಲ್ಲಿಯೂ ಸಹ ವಿಧಿವಾಕ್ಯವನ್ನು ಕಲ್ಪಿಸಬೇಕು. ಅರ್ಥವಾದ ವಾಕ್ಯಕ್ಕೂ ವಿಧಿವಾಕ್ಯಕ್ಕೂ ಅವಿನಾಭಾವ-ಸಂಬಂಧವಿದೆ ಎಂದು ಮೀಮಾಂಸಕರು ಅರ್ಥವಾದಾಧಿಕರಣದಲ್ಲಿ ಸಾಧಿಸಿರುವುದದಿಂದ, ಹಾಗಾಗಿ ಇಲ್ಲಿಯೂ ಕಲ್ಪಿಸಬೇಕು. ಅರ್ಥವಾದ ವಾಕ್ಯಗಳಿಗೆ ಸಾರ್ಥಕ್ಯವಿರುವದೇ ವಿಧಿ-ಬೋಧಿತಾರ್ಥದಲ್ಲಿ ಅಭಿರುಚಿಯನ್ನು ಉಂಟುಮಾಡುವುದರಲ್ಲಿ. ಪ್ರಕೃತ 'ಏಕಃ ಶಬ್ದಃ....' ಎನ್ನುವ ವಾಕ್ಯವು 'ಸಾಧುಶಬ್ದಾನೇವ ಪ್ರಯುಞ್ಜೀತ' ಅಥವಾ 'ಶಬ್ದಃ ಸಮ್ಯಗ್‌ಜ್ಞಾತವ್ಯಃ' ಎನ್ನುವ ಕಲ್ಪಿತ ವಿಧಿವಾಕ್ಯದಲ್ಲಿ ರುಚಿಯನ್ನು ಉಂಟುಮಾಡುವುದು ಎಂದು ಹೇಳಬೇಕು. ಹಾಗಾಗಿ ವ್ಯಾಕರಣಾದಿ ಶಾಸ್ತ್ರಗಳಲ್ಲೂ ಕಲ್ಪಿತ ವಿಧಿವಾಕ್ಯಗಳಿರುವುದರಿಂದ ಅವೂ ಕಾರ್ಯವನ್ನೇ ತಿಳಿಸುತ್ತವೆ ಎಂದು ಹೇಳುವುದು ತರವಲ್ಲ. ಇಷ್ಟಸಾಧನತಾ ಜ್ಞಾನದಿಂದಲೇ ಪ್ರವೃತ್ತಿಯು ಸಮಂಜಸವಾಗುತ್ತಿರಲು, ವ್ಯಾಕರಣಾದಿ ಶಾಸ್ತ್ರದ ಪ್ರಾಶಸ್ತ್ಯವನ್ನು ಅರ್ಥವಾದ ವಾಕ್ಯವು ಬೋಧಿಸುತ್ತಿದೆ ಎಂದೇ ಯೋಜಿಸಲು ಶಕ್ಯವಿರುವಾಗ, ಅರ್ಥವಾದವಾಕ್ಯದಿಂದ ವಿಧಿವಾಕ್ಯವನ್ನೇ ಕಲ್ಪಿಸಬೇಕು ಎನ್ನುವುದು ಪ್ರಮಾಣಪ್ರಮಿತವಲ್ಲ. ಅಥವಾ 'ಎಲ್ಲಶಾಸ್ತ್ರಗಳು ಕಾರ್ಯಪರ ಎಂದು ಕಲ್ಪಿಸಲು' ಕಲ್ಪಕಪ್ರಮಾಣವಿಲ್ಲ. ಸಂಗೀತಾದಿ ಶ್ರವಣಾದಿಗಳಲ್ಲಿ ನರ್ತನಾದಿಗಳ ದರ್ಶನದಲ್ಲಿ ಯಾವವಿಧವಾದ ವಿಧಿಯನ್ನು ಕಲ್ಪಿಸುವ ಅಗತ್ಯವಿಲ್ಲ ಎಂದು ಭಾವ.

**ವ್ಯಾಕರಣಾದಿ ಶಾಸ್ತ್ರಗಳು ಪ್ರಮಾಣ**

ಅಪರ ಆಹ - ವ್ಯಾಕರಣಾದೇಃ ಪ್ರಾಮಾಣ್ಯಮೇವ ನಾಸ್ತಿ ನಿರ್ಮೂಲತ್ವಾತ್ ಪ್ರಯೋಜನಾಭಾವಾಚ್ಚ, ಶಬ್ದಜ್ಞಾನಸ್ಯ ಲೋಕಪ್ರಯೋಗಾದೇವ ಸಿದ್ಧೇಃ, ವೇದರಕ್ಷಾದೇಶ್ಚ ಶುದ್ಧಸಂಪ್ರದಾಯೇನೈವೋಪಪತ್ತೇಃ । ತತ್ಕಥಂ ತದುದಾಹ್ರಿಯತೇ? ಇತಿ, ತತ್ರಾऽಹ- **'ತದನಙ್ಗೀಕಾರೇ ಚ'** ಇತಿ । ವ್ಯಾಕರಣಾದಿಪ್ರಾಮಾಣ್ಯಾನಙ್ಗೀಕಾರೇ । ಅಪಶಬ್ದಾಸಂಕೀರ್ಣೈಃ ಶಬ್ದೈರ್ಯೋ ನಿರ್ವರ್ತ್ಯೋ ವ್ಯವಹಾರಃ ಸ ಶಾಬ್ದವ್ಯವಹಾರಃ । ಲೋಕೇ ಹಿ ಗೋಶಬ್ದವದ್ ಗ(ವ್ಯಾ)ವ್ಯಾದಯೋऽಪಿ ಸಾಸ್ನಾದಿಮತಿ ಪಿಂಡೇ ಪ್ರಯುಜ್ಯನ್ತೇ । ತತಃ ತೇಷಾಮಪಿ ತದ್ವತ್ ಪ್ರಯೋಗಪ್ರಸಙ್ಗೇ 'ದುಷ್ಯತಿ ಚಾಪಶಬ್ದೈಃ' ಇತಿ ವಚನಾತ್ ಪ್ರತ್ಯವಾಯಃ ಸ್ಯಾತ್ । ಅತ ಏವ 'ಶಬ್ದಾಪಶಬ್ದವಿಭಾಗೋ ನಾಸ್ತಿ' ಇತ್ಯಪಿ ನಿರಸ್ತಮ್ । ತದಭಾವೇ ಫಲಭೇದಕಥನಾನುಪಪತ್ತೇಃ । ನ ಚ ಶಬ್ದಾಪಶಬ್ದಯೋರ್ವಿಭಾಗೋ ವಿನಾ ವ್ಯಾಕರಣಾಚ್ಛಕ್ಯತೇ ಜ್ಞಾತುಮ್ । ಅತಃ ತತ್ಪ್ರಾಮಾಣ್ಯಾನಙ್ಗೀಕಾರೇ ಶಾಬ್ದವ್ಯಾವಹಾರ ಏವೋಚ್ಛಿದ್ಯೇತ । ಅತ ಏವಾಷ್ಟಕಾದಿಸ್ಮೃತಿವನ್ ಮೂಲಮಪಿ ತಸ್ಯ ಕಲ್ಪನೀಯಮ್ । ಪ್ರಮಾದಪರಿಹಾರಾರ್ಥತ್ವೇನ ವೇದರಕ್ಷಾದಿಕಮಪಿ ಸಿದ್ಧಮಿತಿ ।

ಮತ್ತೊಬ್ಬ ವಾದಿಯು ಹೇಳುವನು- ವ್ಯಾಕರಣಾದಿಗಳಿಗೆ ಪ್ರಾಮಾಣ್ಯವೇ ಇಲ್ಲ (ಅದು) ನಿರ್ಮೂಲವಾದುದರಿಂದ[1] ಪ್ರಯೋಜನವೂ ಇಲ್ಲದಿರುವುದರಿಂದಲೂ, ಶಬ್ದಜ್ಞಾನವಾದರೋ ಲೋಕಪ್ರಯೋಗದಿಂದಲೇ ಸಿದ್ಧವಾಗುವುದರಿಂದ[2], ವೇದರಕ್ಷಣಾದಿಗಳಾದರೋ ಶುದ್ಧಸಂಪ್ರಯದಾಯದಿಂದಲೇ ಪ್ರಾಪ್ತ-

1. ಪುರುಷಪ್ರಣೀತವಾದ ಶಾಸ್ತ್ರಗಳಿಗೆ ಪ್ರಾಮಾಣ್ಯವು ಮೂಲ ಆಕರ ಮತ್ತು ಸಂವಾದಾದಿಗಳಿಂದ ನಿರ್ಣೀತವಾಗುವುದು. ಪ್ರಕೃತ ವ್ಯಾಕರಣಾದಿಶಾಸ್ತ್ರಕ್ಕೆ ಅಂತಹ ಮೂಲ ಆಕರಗಳಾಗಲಿ, ಸಂವಾದಾದಿ ಪ್ರಮಾಣಗಳಾಗಲಿ ಇಲ್ಲ ಎಂದು ಭಾವ.

2. ವ್ಯಾಕರಣ ಶಾಸ್ತ್ರದಿಂದ ಶುದ್ಧ ಪ್ರಯೋಗಗಳು ಯಾವವು, ಅಶುದ್ಧಪ್ರಯೋಗವು ಯಾವುದು ಎನ್ನುವ ಜ್ಞಾನವು ಪ್ರಾಪ್ತವಾಗುವುದು. ಹಾಗಾಗಿ ಪ್ರಯೋಜನವಿರುವುದರಿಂದ ಅದಕ್ಕೆ ಪ್ರಾಮಾಣ್ಯವನ್ನು ಒಪ್ಪುವ ಅಗತ್ಯವಿದೆ ಎಂದೆನ್ನಲಾಗದು, ನಿತ್ಯದಲ್ಲಿನ ವಾಗ್ವ್ಯವಹಾರದಿಂದಲೇ ಶಬ್ದಗಳ ಶುದ್ಧಾಶುದ್ಧತೆಗಳು ಅರಿವಿಗೆ ಬರುವುದು ಎಂದು ಭಾವ.

ವಾಗುವುದರಿಂದಲೂ[1]. ಆದುದರಿಂದ ಅದನ್ನು ಹೇಗೆ ಉದಾಹರಿಸುವಿರಿ[2]? ಅಲ್ಲಿ (ಇಂತಹ ಸಂದೇಹದ ಸಂದರ್ಭದಲ್ಲಿ) ಉತ್ತರಿಸುವರು 'ತದನಙ್ಗೀಕಾರೇ ಚ..' ಎಂದು. ವ್ಯಾಕರಣಾದಿಗಳಿಗೆ ಪ್ರಾಮಾಣ್ಯವನ್ನು ಒಪ್ಪದಿದ್ದಲ್ಲಿ[3]. ಅಪಶಬ್ದ-

---

1. ವೇದ ಸಂರಕ್ಷಣ ಎಂದರೆ ಪಾಠಸಂರಕ್ಷಣೆ. 'ಚಕ್ಷೋಃ ಸೂರ್ಯೋ ಅಜಾಯತ' ಎಂಬಿತ್ಯಾದಿ ಸ್ಥಳಗಳಲ್ಲಿ 'ಚಕ್ಷೋಃ ಸೂರ್ಯೋಽಜಾಯತ' ಎಂದು ಉಚ್ಚರಿಸಿದಲ್ಲಿ, ಕೇವಲ ಲೋಕ ವ್ಯವಹಾರದಿಂದ ಇಂತಹ ಸರಿತಪ್ಪುಗಳನ್ನು ನಿರ್ಣಯಿಸಲು ಶಕ್ಯವಿಲ್ಲ. ವ್ಯಾಕರಣ ಶಾಸ್ತ್ರವಾದರೋ ವೈದಿಕವ್ಯಾಕರಣದ ವಿಶೇಷನಿಯಮಗಳನ್ನು ತಿಳಿಸುತ್ತದೆ, 'ಪ್ರಕೃತ್ಯಾಂತಃ ಪಾದಮವ್ಯಪರೇ' ಪಾ.ಅ.6.1.115. ಎಂದು. ಋಗ್‌ಪಾದದ ಮಧ್ಯದಲ್ಲಿನ 'ಏ ಓ' ಮುಂತಾದ ಸ್ವರಾಕ್ಷರಗಳು ಯಥಾವತ್ತಾಗಿ ಇರುವವು, ಸಂಧಿಯಾಗುವದಿಲ್ಲ ಎಂದು. ಈ ವೈದಿಕವ್ಯಾಕರಣಶಾಸ್ತ್ರವನ್ನು ಬಲ್ಲವನು ಲೋಪ, ಆಗಮ, ವರ್ಣವಿಕಾರಗಳನ್ನು ಅರಿಯುವನು, ಈ ಅರಿವಿನಿಂದ ವೇದರಕ್ಷಣೆಯು ಸಂಭಾವಿತ. 'ರಕ್ಷಣಾದಿ' ಎಂದು ಟೀಕೆಯಲ್ಲಿನ ಆದಿ ಶಬ್ದದಿಂದ 'ರಕ್ಷೋಹಾಽಽಗಮಲಘ್ವಸಂದೇಹಾಃ ಪ್ರಯೋಜನಂ' ಎನ್ನುವ ವ್ಯಾಕರಣಭಾಷ್ಯದ ವಚನವನ್ನು ಪರಿಗ್ರಹಿಸುವುದು ವ್ಯಾ.ಮ.ಶಾ.ಪ್ರ.ಅಧಿಕರಣ. ಊಹ- 'ಅಗ್ನಯೇ ಜುಷ್ಟಂ ನಿರ್ವಪಾಮಿ' ಎನ್ನುವ ಸಂದರ್ಭದಲ್ಲಿ 'ಅಗ್ನಿ' ಶಬ್ದದ ಬದಲು 'ಸೂರ್ಯ' ಶಬ್ದವನ್ನು ಊಹಿಸುವುದು. ವೇದಮಂತ್ರಗಳಲ್ಲಿ ಅಗತ್ಯವಾದ ಎಲ್ಲಲಿಂಗಗಳಿಂದ ಎಲ್ಲವಿಭಕ್ತಿ ಗಳಿಂದ ಯುಕ್ತವಾದ ಶಬ್ದಗಳು ಎಲ್ಲೆಡೆಯಲ್ಲೂ ಉಪಲಬ್ಧವಿರುವದಿಲ್ಲ. ಬಲ್ಲವನು ಮಂತ್ರೋಕ್ತಶಬ್ದಗಳಿಂದ ಸೂಕ್ತವಿಭಕ್ತಿಯ, ಸೂಕ್ತ ಲಿಂಗದ ಶಬ್ದಗಳನ್ನು ಊಹಿಸಬಹುದು. ಆಗಮ- 'ವಾಗ್ವೈಪರಾಚ್ಯವ್ಯಾಕೃತಾಽವದತ್ ।....ಇತ್ಯಾದಿಯಾಗಿ ತನ್ನ ರಕ್ಷಣೆಯು ವ್ಯಾಕರಣ ಶಾಸ್ತ್ರದಿಂದ ಎಂದು ತಿಳಿಸಿದೆ. ಯಜುರ್ವೇದ.6.4.7. 'ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಙ್ಗೋ ವೇದೋಽಧ್ಯೇಯೋ ಜ್ಞೇಯಶ್ಚ ।' ವ್ಯಾ.ಮ.ಶಾ.ಪ್ರ.ಅಧಿಕರಣದಲ್ಲಿ ಉದ್ಧೃತ. ಷಡಂಗಗಳಲ್ಲಿ ವ್ಯಾಕರಣವೂ ಒಂದು ಎಂದು ತಿಳಿಯುವುದು. ಲಘು- ಸುಲಭದಲ್ಲಿ ಶಬ್ದಜ್ಞಾನವಾಗುವುದು, ಲೋಕವ್ಯವಹಾರದಿಂದಲೇ ಶಬ್ದದ ಅರಿವು ಪ್ರಾಪ್ತವಾಗಬೇಕಾದಲ್ಲಿ ಎಲ್ಲಶಬ್ದಗಳ ಎಲ್ಲರೀತಿಯವ್ಯವಹಾರವನ್ನು ಗಮನಿಸಬೇಕು. ವ್ಯವಹಾರದಿಂದ ಭಾಷಾಜ್ಞಾನ ವಾಗುವುದು ಬಹುಕ್ಲೇಶ. ವ್ಯಾಕರಣಶಾಸ್ತ್ರದಿಂದ ಸುಲಭ. ಅಸಂದೇಹ- 'ಬ್ರಾಹ್ಮಣಾಸಃ' ಇತ್ಯಾದಿಪ್ರಯೋಗಗಳು ವೇದದಲ್ಲಿ ಕಾಣುವುದು. ಇಲ್ಲಿಸಂದೇಹಕ್ಕೆ ಅವಕಾಶವಿದೆ, ಬ್ರಾಹ್ಮಣಾಃ ಎಂದಾಗಬೇಕು ಇದು ಹೇಗೆ? ಇಂತಹ ಅನೇಕವಿಧವಾದ ಸಂದೇಹಗಳನ್ನು ವ್ಯಾಕರಣಶಾಸ್ತ್ರವು ಪರಿಹರಿಸುತ್ತದೆ. ಮುಂದೆ ಟೀಕೆಯಲ್ಲೇ ತಿಳಿಸುವಂತೆ ಪ್ರಮಾದದ ಪರಿಹಾರಕ್ಕೂ ವ್ಯಾಕರಣಶಾಸ್ತ್ರದ ಅಗತ್ಯತೆಯು ಇದೆ. ಈ ರೀತಿಯಾಗಿ ವ್ಯಾಕರಣಾದಿಶಾಸ್ತ್ರಗಳ ಅಗತ್ಯತೆ ಮತ್ತು ಪ್ರಾಮಾಣ್ಯವು ಉಕ್ತವಾಗಿದ್ದರೂ ಇದನ್ನು ಮರೆಮಾಡಿ ಪ್ರಶ್ನಿಸುತ್ತಿರುವರೆಂದು ಭಾವ.

2. ಅಪ್ರಮಾಣೀಭೂತವಾದ ವ್ಯಾಕರಣಾದಿಗಳನ್ನು 'ವಾಕ್ಯಗಳು ಸಿದ್ಧದಲ್ಲಿ ಪ್ರಮಾಣ' ಎಂದು ಸಾಧಿಸಲು ಹೇಗೆ ಉದಾಹರಿಸುವಿರಿ ಎಂದು ಭಾವ.

3. 'ತದನಙ್ಗೀಕಾರೇ' ಎನ್ನುವ ಮೂಲದ ಅರ್ಥಾನುವಾದ.

ಗಳಿಂದ ಸಂಕೀರ್ಣವಾಗದ (ಶುದ್ಧ) ಶಬ್ದಗಳಿಂದ ನಿರ್ವಾಹಗೊಳ್ಳುವ ಯಾವ ವ್ಯವಹಾರವೋ ಅದು ಶಾಬ್ದವ್ಯವಹಾರ[1]. ಲೋಕದಲ್ಲಿಯಾದರೋ 'ಗೋ' ಶಬ್ದದಂತೆ 'ಗಾವ್ಯ' ಮುಂತಾದ (ಅಪಶಬ್ದಗಳು) ಶಬ್ದಗಳು ಸಾಸ್ನಾದಿಗಳನ್ನು ಹೊಂದಿರುವ ವಸ್ತುವಿನಲ್ಲಿ ಪ್ರಯೋಗಿಸುತ್ತಾರೆ. ಆದುದರಿಂದ ಆ ಶಬ್ದಗಳಿಗೂ ಅದರಂತೆ (ಶುದ್ಧಶಬ್ದದಂತೆ) ಪ್ರಯೋಗಿಸುವುದು ಸಮಂಜಸ ಎಂದಾದಲ್ಲಿ 'ದುಷ್ಯತಿ ಚಾಪಶಬ್ದೈಃ' ಎನ್ನುವ ವಚನವಿರುವದರಿಂದ ಪಾಪವು ಪ್ರಾಪ್ತ ವಾದೀತು[2]. ಆದುದರಿಂದ ಶಬ್ದಾಪಶಬ್ದಗಳ ವಿಭಾಗವಿಲ್ಲ ಎನ್ನುವುದು ನಿರಾಕೃತ ವಾಯಿತು. ಅದು (ಸುಶಬ್ದ - ಅಪಶಬ್ದಗಳು) ಇಲ್ಲವೆಂದಾದಲ್ಲಿ ಫಲದಲ್ಲಿನ ಭೇದದ ಹೇಳಿಕೆಯು ಅಯುಕ್ತವಾದೀತು. ವ್ಯಾಕರಣ ಶಾಸ್ತ್ರದ ನೆರವಿಲ್ಲದೇ ಶಬ್ದಾಪಶಬ್ದಗಳ ವಿಭಾಗವನ್ನು ತಿಳಿಯಲು ಶಕ್ಯವಿಲ್ಲ. ಆದುದರಿಂದ ಅದಕ್ಕೆ (ವ್ಯಾಕರಣಶಾಸ್ತ್ರಕ್ಕೆ) ಪ್ರಾಮಾಣ್ಯವನ್ನು ಒಪ್ಪದಿದ್ದಲ್ಲಿ, ಶಬ್ದವ್ಯವಹಾರವೇ (ನಿಯಮವೇ) ಇಲ್ಲದಂತಾದೀತು. ಆದುದರಿಂದ (ವ್ಯಾಕರಣಶಾಸ್ತ್ರಕ್ಕೆ ಪ್ರಾಮಾಣ್ಯವು ಸಿದ್ಧವಾದುದರಿಂದ) ಅಷ್ಟಕಾದಿ ಸ್ಮೃತಿಗಳಂತೆ, ಅದಕ್ಕೆ (ವ್ಯಾಕರಣ ಶಾಸ್ತ್ರಕ್ಕೆ) ಮೂಲವನ್ನೂ ಕಲ್ಪಿಸಬೇಕು[3].

1. ಮೂಲದಲ್ಲಿನ 'ಶಾಬ್ದವ್ಯವಹಾರ' ಎನ್ನುವದರ ವಿವರಣೆ.

2. ವ್ಯಾಕರಣ ಮಹಾಭಾಷ್ಯಕಾರರು ಉದಾಹರಿಸಿರುವರು– ಯಸ್ತು ಪ್ರಯುಙ್ಕ್ತೇ ಕುಶಲೋ ವಿಶೇಷೇ ಶಬ್ದಾನ್ ಯಥಾವದ್‌ವ್ಯವಹಾರಕಾಲೇ । ಸೋಽನನ್ತಮಾಪ್ನೋತಿ ಜಯಂ ಪರತ್ರ ವಾಗ್ಯೋಗಯುಗ್ ದುಷ್ಯತಿ ಚಾಪಶಬ್ದೈಃ ॥ ವ್ಯಾ.ಮ.ಶಾ.ಪ್ರ.ಅಧಿಕರಣ. 'ಯಾರು ಶುದ್ಧಶಬ್ದಗಳನ್ನು ಪ್ರಯೋಗಿಸಿರುವರೋ ಅವರು ಲೋಕದಲ್ಲೂ ಪ್ರತಿವಾದಿಗಳೊಡನೆ ಜಯವನ್ನು ಹೊಂದುವರು. ಪರತ್ರದಲ್ಲಿ ಅನಂತವನ್ನು ಹೊಂದುವರು, ಅಪಶಬ್ದವನ್ನು ಪ್ರಯೋಗಿಸಿದಲ್ಲಿ ಪಾಪಕ್ಕೆ ಭಾಜನರಾಗುವರು' ಎಂದು. ಮತ್ತು ಅಲ್ಲೇ 'ತಸ್ಮಾದ್‌ಬ್ರಾಹ್ಮಣೇನ ನ ಮ್ಲೇಚ್ಛಿತ ವೈ ನಾಪಭಾಷಿತ ವೈ..' ಎಂದು ಶ್ರುತಿಯನ್ನು ಉದಾಹರಿಸಿರುವರು ಎಂದು ತಿಳಿಯುವುದು. ವಾಲ್ಮೀಕೀ ರಾಮಾಯಣದಲ್ಲಿ ಹನುಮಂತನ ಗುಣವನ್ನು ವರ್ಣಿಸುವ ಸಂದರ್ಭದಲ್ಲಿ 'ಸೋಽಯಂ ನವವ್ಯಾಕರಣಾರ್ಥವೇತ್ತಾ' ಎಂದು ಉಪವರ್ಣಿಸಿರುವದನ್ನು ಗಮನಿಸುವುದು. 'ದುಷ್ಟಃ ಶಬ್ದಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ । ಸ ವಾಗ್‌ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥' (ನಾರದ 1.50

3. 'ಚತಸ್ರಷ್ವಷ್ಟಕಾಸು ಹೇಮಂತೇ ಶಿಶಿರೇ ತಥಾ' (ಭಾಗ.7.14.21.) ಈ ಮುಂತಾದ ಸ್ಮೃತಿಗಳಲ್ಲಿ ಅಷ್ಟಕಶ್ರಾದ್ಧಗಳನ್ನು ವಿಧಿಸಿರುತ್ತಾರೆ. ಸ್ಮೃತಿಯಲ್ಲಿ ಉಕ್ತವಾಗಿರುವದರಿಂದ ಅದಕ್ಕೆ ಮೂಲವಾದ ಶ್ರುತಿಯು ಉಪಲಬ್ಧವಿಲ್ಲದಿದ್ದರೂ ಊಹಿಸಬೇಕು ಎಂದು ಶಾಸ್ತ್ರದ ನಿರ್ಣಯ ವಿದೆ. ಹಾಗೆಯೇ ಪ್ರಕೃತದಲ್ಲಿಯೂ ವ್ಯಾಕರಣಾದಿ ಶಾಸ್ತ್ರಪ್ರಾಮಾಣ್ಯಕ್ಕೆ ಸಂಬಂಧಿಸಿದಂತೆ ಪ್ರಾಮಾಣ್ಯ ಬೋಧಕ ವೇದವಾಕ್ಯವು ಇದೆ ಎಂದು ಊಹಿಸಿಕೊಳ್ಳುವುದು ಎಂದು ಭಾವ.

ಪ್ರಮಾದದ ಪರಿಹಾರದ ಮುಖಾಂತರವಾಗಿಯೂ ವೇದದ ರಕ್ಷಣಾದಿಗಳು ಸಿದ್ಧವಾಗಿದೆ[1].

**-: ಸಿದ್ಧಶಾಸ್ತ್ರಪ್ರಾಮಾಣ್ಯವಾದ ಪರಿಸಮಾಪ್ತವಾಯಿತು :-**

## ॥ ಪ್ರಮಾಣೋಲ್ಲೇಖಪ್ರಕರಣ ॥

ಮೋಕ್ಷವು ಫಲಗಳಲ್ಲಿ ಹಿರಿದು. ವಾಙ್ಮಯಗಳಲ್ಲಿ ಹಿರಿದಾದ ವೇದಕ್ಕೆ ಅದೇ ಫಲವಾಗಬೇಕು. ಬಂಧನಿವೃತ್ತಿಯೇ ಮೋಕ್ಷ. ಆ ನಿವೃತ್ತಿಯಾದರೋ ಬ್ರಹ್ಮನ ಅತ್ಯರ್ಥ ಪ್ರಾಸಾದದಿಂದ. ಹಾಗಾದಲ್ಲಿ ವೇದಗಳು ಹರಿಯನ್ನೇ ಮುಖ್ಯತಃ ಪ್ರತಿಪಾದಿಬೇಕು. ಈ ವಿಷಯದಲ್ಲಿ ಪ್ರಮಾಣಗಳ ಸಂಗ್ರಹ

**ಉಕ್ತಂ ಚ ನಾರದೀಯೇ-**

**ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್ ।**
**ಸರ್ವೋತ್ತಮಂ ಜ್ಞಾಪಯನ್ತಿ ಮಹಾತಾತ್ಪರ್ಯಮತ್ರ ಹಿ ।**
**ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ ।**
**ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥ ಇತಿ ।**

ನಾರದಪುರಾಣದಲ್ಲಿ ತಿಳಿಸಲಾಗಿದೆ- ಸರ್ವಜ್ಞನಾದ ಸರ್ವಕರ್ತೃವಾದ ದೋಷದೂರನಾದ ಸರ್ವೋತ್ತಮನಾದ ನಾರಾಯಣನನ್ನು ಎಲ್ಲಪ್ರಮಾಣಗಳು ತಿಳಿಸುತ್ತವೆ. ಎಲ್ಲ ವೇದಗಳಿಗೆ, ಇತಿಹಾಸಪುರಾಣಗಳಿಗೆ, ಎಲ್ಲ ಪ್ರಮಾಣಗಳಿಗೆ, ಅಲ್ಲೇ (ನಾರಾಯಣನಲ್ಲೇ) ಮುಖ್ಯತಾತ್ಪರ್ಯ, ಬೇರೆಯಾದ ಧರ್ಮಾದಿಗಳನ್ನು ಆತನ ಅರಿವಿಗಾಗಿ ತಿಳಿಸುತ್ತವೆ.

---

1. ವೇದಗಳಲ್ಲಿ ಬ್ರಾಹ್ಮಣಾಸಃ, ಸೋಮ್ಯಾಸಃ ಇತ್ಯಾದಿ ಪ್ರಯೋಗಗಳು ಇವೆ. ಲೌಕಿಕಭಾಷೆಯಲ್ಲಿ ಕಾಣಸಿಗದ ವರ್ಣಗಳ ಲೋಪ-ಆಗಮ- ವಿಕಾರ-ವಿಪರ್ಯಯ ಮುಂತಾದವುಗಳನ್ನು ವೇದದಲ್ಲಿ ಕಾಣಬಹುದಾಗಿದೆ. ಇಂತಹ ಸಂದರ್ಭಗಳಲ್ಲಿ ಅಧ್ಯಾಪಕರೂ ಕೆಲವೊಮ್ಮೆ ಪ್ರಮಾದವೆಸಗುವ ಸಂಭಾವನೆಗಳು ಇವೆ. ಇಂತಹ ಅನೇಕ ಸಂದರ್ಭಗಳಲ್ಲಿ ವೇದದ ಸಂರಕ್ಷಣೆಯನ್ನು ವ್ಯಾಕರಣಾದಿ ಶಾಸ್ತ್ರಗಳು ಮಾಡುವವು ಎಂದು ಭಾವ.

ಅಸ್ತು ವಾಕ್ಯಸ್ಯ ಸಿದ್ಧಾರ್ಥೇ ಪ್ರಾಮಾಣ್ಯಮ್ । ತಥಾಽಪಿ 'ಸಮತೀತ-ಕ್ಷರಾಕ್ಷರತ್ವಾದಿಲಕ್ಷಣೇ ನಾರಾಯಣೇ ಸಕಲಸದಾಗಮಾನಾಂ ಪ್ರಾಮಾಣ್ಯಮ್' ಇತ್ಯೇತ್ ಕುತಃ ಸಿದ್ಧ್ಯೇತ್? ನಹಿ ನಿಶ್ಚಾಯಕಪ್ರಮಾಣೇನ ವಿನಾ ಸಂಭಾವನಾಮಾತ್ರೇಣಾರ್ಥಸಿದ್ಧಿರ್ಭವತಿ । ಸಂಭಾವನಾಕಾರಣಮೇವ ಪ್ರಾಗುಕ್ತಂ ಸಮಸ್ತಮ್ । 'ಜ್ಞೇಯ ಏತೈಃ' ಇತಿ ವಾಕ್ಯಮಪಿ ನ ವಿಶಿಷ್ಟ-ಭಗವತ್ಸ್ವರೂಪಪ್ರತಿಪಾದಕತ್ವಂ ಸರ್ವೇಷಾಂ ಸದಾಗಮಾನಾಮಾಚಷ್ಟೇ । ವಕ್ಷ್ಯಮಾಣ(ಣಾಮಾ)ಶಂಕಾಂ ಚ ನ ಪರಿಹರತಿ? ಇತ್ಯತ ಆಹ- 'ಉಕ್ತಂ ಚ' ಇತಿ । ನ ಕೇವಲಂ ಸಂಭಾವಿತಮಿತಿ ಚಾರ್ಥಃ । ಅತ್ರಾಽದ್ಯೇನ ವಿಶೇಷಣ-ದ್ವಯೇನಾಶೇಷಸದ್ಗುಣತ್ವಂ ಲಕ್ಷ್ಯತೇ । ತೃತೀಯೇನ ನಿರ್ದೋಷತ್ವಂ, ಚತುರ್ಥೇನ ಸಮತೀತಕ್ಷರಾಕ್ಷರತ್ವಮ್ । 'ಸರ್ವಸ್ಮಾದುತ್ತಮಃ' ಇತಿ ವಿಗೃಹ್ಯ 'ಪಂಚಮೀ' ಇತಿ ಯೋಗವಿಭಾಗಾತ್ ಸಮಾಸಃ । ಜ್ಞಾಪಯನ್ತೀತ್ಯತ್ರ 'ಸರ್ವೇಷಾಮಪಿ ವೇದಾನಾಮ್' ಇತ್ಯಾದಿಕಂ ಸಿಂಹಾವಲೋಕನ(ಕಿತ)-ನ್ಯಾಯೇನಾನುವರ್ತತೇ । ಅರ್ಥವಶಾದ್ ವಿಭಕ್ತಿವಿಪರಿಣಾಮಃ । ನನು ಧರ್ಮಾದಿಕಮಪಿ ವೇದಾದಿಪ್ರತಿಪಾದ್ಯಮ್ । ಅನ್ಯಥಾ ತದಸಿದ್ಧಿಪ್ರಸಙ್ಗಾತ್। ಅತಃ ಕಥಮೇವಮುಚ್ಯತೇ? ಇತ್ಯತ ಉಕ್ತಮ್ - 'ಮಹಾತಾತ್ಪರ್ಯಮ್' ಇತಿ । ಅತ್ರ- ಉಕ್ತಲಕ್ಷಣೇ ನಾರಾಯಣೇ । ಪ್ರಮಾಣಾನಾಂ ಚ ಸರ್ವೇಷಾಂ ಪಂಚರಾತ್ರಾದೀನಾಮ್ । ಅನ್ಯತ್ತು- ಧರ್ಮಾದಿಕಂ, ತದರ್ಥಂ-ಭಗವತ್ಪ್ರತಿಪತ್ತ್ಯರ್ಥಮೇವ ಉಚ್ಯತೇ ವೇದಾದಿಭಿಃ । ತತ್ಪ್ರಕಾರಶ್ಚ ಪ್ರಾಗೇವ ಸಂಕ್ಷೇಪೇಣೋಕ್ತ ಇತಿ ।

ವಾಕ್ಯಗಳಿಗೆ ಸಿದ್ಧಾರ್ಥದಲ್ಲಿ ಪ್ರಾಮಾಣ್ಯವಿರಲಿ, ಆದರೂ ಸಮತೀತಕ್ಷರಾಕ್ಷರತ್ವಾದಿಲಕ್ಷಣಯುಕ್ತನಾದ ನಾರಾಯಣನಲ್ಲಿ ಸಕಲ ಸದಾಗಮಗಳಿಗೆ ಪ್ರಾಮಾಣ್ಯವು (ಪ್ರತಿಪಾದಕತ್ವವು) ಎನ್ನುವುದು ಯಾವುದರಿಂದ ಸಿದ್ಧವಾಗುವುದು? ನಿಶ್ಚಾಯಕಪ್ರಮಾಣದ ಹೊರತಾಗಿ ಕೇವಲ ಸಂಭಾವನಾದಿಂದಲೇ ವಿಷಯದ ಸಿದ್ಧಿಯು ಆಗದು. ಹಿಂದೆ ಹೇಳಿದ ಎಲ್ಲವೂ

(ಪ್ರಮಾಣಗಳು) ಸಂಭಾವನಾತ್ಮಕವಾಗಿವೆ[1]. ನಿಶ್ಚಾಯಕ ಪ್ರಮಾಣವಿಲ್ಲದೇ ಕೇವಲ ಸಂಭಾವಕಪ್ರಮಾಣಗಳಿಂದ ವಿಷಯಸಿದ್ಧಿಯು ಆಗಲಾರದು. ಹಿಂದೆ ಹೇಳಿದ ಎಲ್ಲ (ಪ್ರಮಾಣಗಳು) ಸಂಭಾವನಾತ್ಮಕವಾದುದ್ದೇ ಆಗಿವೆ. 'ಜ್ಞೇಯ ಏತೈಃ...' ಎನ್ನುವ ವಾಕ್ಯವೂ ಸಹ ಎಲ್ಲ ಆಗಮಗಳು ವಿಶಿಷ್ಟ ಭಗವತ್‌ಸ್ವರೂಪ-ಪ್ರತಿಪಾದಕ ಎಂದು ತಿಳಿಸಿಲ್ಲ[2]. ಮುಂದೆ ಪ್ರಶ್ನಿಸಲಾಗುವದನ್ನೂ ಪರಿಹರಿಸಲಾಗಿಲ್ಲ[3]. ಆದುದರಿಂದ ಉತ್ತರಿಸುತ್ತಾರೆ **'ಉಕ್ತಂ ಚ'** ಎಂದು. ಕೇವಲ ಇದು ಸಂಭಾವಿತವಲ್ಲ ಎಂದು ಭಾವ. ಇಲ್ಲಿ ಮೊದಲ ಎರಡು ವಿಶೇಷಣಗಳು (ಭಗವಂತನಲ್ಲಿ) ಅಶೇಷಸದ್ಗುಣಗಳ ಸೂಚಕವಾಗಿವೆ[4]. ಮೂರನೆಯದರಿಂದ (ಮೂರನೆಯ ವಿಶೇಷಣದಿಂದ) ನಿರ್ದೋಷತ್ವವು, ನಾಲ್ಕನೆಯದರಿಂದ (ನಾಲ್ಕನೆಯ ವಿಶೇಷಣದಿಂದ) ಸಮತೀತಕ್ಷರಾಕ್ಷರತ್ವವು (ಬೋಧಿತ ವಾಗುವುದು). 'ಸರ್ವಸ್ಮಾತ್ ಉತ್ತಮಃ' ಎಂದು ವಿಗ್ರಹವನ್ನು ಮಾಡಿ ಕೊಳ್ಳುವುದು, 'ಪಞ್ಚಮೀ' ಎಂದು ಯೋಗದ- ಸೂತ್ರದ ವಿಭಾಗವನ್ನು

---

1. 'ನಚೈತೇಷಾಂ ವಚನಾನಾಮೇವಾಪ್ರಾಮಾಣ್ಯಮ್' ಇತ್ಯಾದಿ ವಚನಗಳಿಂದ ವೇದವಚನಗಳಿಗೆ ಅಪ್ರಾಮಾಣ್ಯವಿಲ್ಲ ಎಂದು ಪ್ರತಿಪಾದಿಸಲಾಗಿದೆ, ವೇದಾಪೌರುಷೇಯತ್ವ-ವನ್ನು ತಿಳಿಸುವಾಗಲೂ ಸಹ ಅಸಂಭಾವನಾ ನಿವಾರಕವಾದ ವಚನಗಳನ್ನೇ ಹೇಳಲಾಗಿದೆ, ಪ್ರಕೃತದಲ್ಲಿಯೂ ಸಹ ಸಿದ್ಧದಲ್ಲೂ ವ್ಯುತ್ಪತ್ತಿ ಸಂಭಾವಿತ ಎಂದೇ ವಾದಿಸಲಾಗಿದೆ ಹೊರತು ನಿಶ್ಚಿತಪ್ರಮಾಣದ ಉಪನ್ಯಾಸವು ಆಗಿಲ್ಲ ಎಂದು ಭಾವ.

2. ಸದಾಗಮಗಳು ಯಾವವು ಎನ್ನುವ ಸಂದರ್ಭದಲ್ಲಿ ಬ್ರಹ್ಮಾಂಡದ ವಚನವನ್ನು ಉಲ್ಲೇಖಿಸಲಾಗಿದೆ. ಅಲ್ಲಿ ಸದಾಗಮಗಳ ಹೆಸರನ್ನು ಮಾತ್ರ ತಿಳಿಸಲಾಗಿದೆಯೇ ಹೊರತು, ಆಗಮಗಳಲ್ಲಿ ಯಾವ ವಿಷಯವನ್ನು ಪ್ರತಿಪಾದಿಸಲಾಗಿದೆ ಎಂದು ತಿಳಿಸಲಾಗಿಲ್ಲ. ಆ ಸಂದರ್ಭದಲ್ಲಿ 'ನಾವೇದವಿನ್ಮನುತೇ..' ಇತ್ಯಾದಿ ಕೆಲವು ಶ್ರುತಿವಾಕ್ಯಗಳನ್ನೂ ಉದಾಹರಿಸಲಾಗಿವೆ. ಅವುಗಳಲ್ಲಿಯೂ ಈ ವಿಷಯದ ಸ್ಪಷ್ಟತೆ ಇಲ್ಲ ಎಂದು ಭಾವ.

3. ಎಲ್ಲವೂ ಭಗತ್ ಪರವಾದಲ್ಲಿ ಕರ್ಮಾದಿಗಳು ಯಾವುದರಿಂದ ಸಿದ್ಧವಾಗಬೇಕು? ಎನ್ನುವ ಪ್ರಶ್ನೆಗೂ ಉತ್ತರಿಸಲಾಗಿಲ್ಲ ಎಂದು ಭಾವ.

4. 'ಸರ್ವಜ್ಞಂ ಸರ್ವಕರ್ತಾರಂ' ಎನ್ನುವ ಎರಡು ವಿಶೇಷಣಗಳು ಅಖಿಲ ಸದ್ಗುಣಗಳನ್ನು ಬೋಧಿಸುವವು ಎಂದು ಭಾವ.

ಮಾಡಿಕೊಂಡಿರುವುದರಿಂದ ಸಮಾಸವು ಯೋಗ್ಯವಾಗಿದೆ[1]. 'ಜ್ಞಾಪಯನ್ತಿ' ಎನ್ನುವಲ್ಲಿ 'ಸರ್ವೇಷಾಂ ವೇದಾನಾಂ' ಈ ಮುಂತಾದವು ಸಿಂಹಾವಲೋಕನ ನ್ಯಾಯದಿಂದ ಅನುಸರಿಸುವುದು. (ವಾಕ್ಯದ) ಅಭಿಪ್ರಾಯದಿಂದ ವಿಭಕ್ತಿ ಯನ್ನು ಬದಲಿಸಿಕೊಳ್ಳುವುದು[2]. ಸರಿ, ಧರ್ಮಾದಿಗಳೂ ವೇದಪ್ರತಿಪಾದಿತ ವಾದವುಗಳು, ಹಾಗಾಗದಿದ್ದಲ್ಲಿ (ಧರ್ಮಾದಿಗಳೂ ವೇದಪ್ರತಿಪಾದಿತ ವಾಗದಿದ್ದಲ್ಲಿ) ಅವುಗಳ ಸಿದ್ಧಿಯೇ ಆಗದಿರಬೇಕಾದೀತು. ಆದುದರಿಂದ ಹೀಗೆ

---

1. 'ಪಞ್ಚಮೀ ಭಯೇನ' ಎಂದು ಪಾಣಿನೀಸೂತ್ರ, 2.1.37. ಪಞ್ಚಮೀ ವಿಭಕ್ತಿಯೊಡನೆ ಸಮಾಸವು ಯಾವ ಸಂದರ್ಭದಲ್ಲಿ ಎನ್ನುವದನ್ನು ಈ ಸೂತ್ರವು ತಿಳಿಸುತ್ತದೆ. 'ಚೋರಾತ್ ಭಯಂ- ಚೋರಭಯಮ್' ಎನ್ನುವುದು ಉದಾಹರಣೆ. ಪ್ರಕೃತದಲ್ಲಿ 'ಸರ್ವೋತ್ತಮಂ' ಎನ್ನುವಲ್ಲಿ 'ಸರ್ವಸ್ಮಾತ್ ಉತ್ತಮಃ' ಎಂದು ವಿಗ್ರಹವಾಕ್ಯವನ್ನು ಹೇಳಲು ಶಕ್ಯವಿಲ್ಲ, ಭಯ ಎಂಬ ಶಬ್ದವಿದ್ದಾಗ ಮಾತ್ರ ಪಞ್ಚಮ್ಯಂತ ಶಬ್ದವು ಸಮಾಸಗೊಳ್ಳುವುದು, ಎನ್ನುವ ಸಂದೇಹವನ್ನು ಟೀಕಾದಲ್ಲಿ ಪರಿಹರಿಸುವರು. 'ಪಞ್ಚಮೀ ಭಯೇನ' ಎನ್ನುವ ಸೂತ್ರವನ್ನು ವಿಭಾಗಗೊಳಿಸುವುದು, 'ಪಞ್ಚಮೀ' ಎಂದು ಒಂದು ಸೂತ್ರ, ಮತ್ತೊಂದು 'ಭಯೇನ' ಎಂದು. ಪಂಚಮ್ಯಂತವಾದ ಶಬ್ದವು ಯೋಗ್ಯ ಶಬ್ದದೊಡನೆಯೂ ಸಮಾಸಗೊಳ್ಳುವುದು ಎಂದು ಮೊದಲ ಸೂತ್ರದ ಭಾವ. ಎರಡನೆಯ ಸೂತ್ರದಲ್ಲಿ 'ಪಞ್ಚಮೀ' ಎನ್ನುವುದು ಅನುವರ್ತನಗೊಳ್ಳುವುದು. ಪಂಚಮ್ಯಂತವಾದದು ಭಯಶಬ್ದದೊಡನೆ ಸಮಾಸಗೊಳ್ಳುವುದು ಎಂದು ಭಾವ. ಮೊದಲಸೂತ್ರವು ಯಾವುದೋ ಪ್ರೌಢವಿಷಯಕವಾಗಿದೆ, ಎರಡನೆಯ ಸೂತ್ರವು ಸಾಮಾನ್ಯವ್ಯವಹಾರದಲ್ಲಿರುವುದು ಎಂದು ತಿಳಿಯುವುದು. 'ವ್ರತಾತ್ ಉಪರತಃ- ವ್ರತೋಪರತಃ' ಇತ್ಯಾದಿ ಪ್ರಯೋಗಗಳು ಕಂಡಿರುವದರಿಂದ ಸೂತ್ರವನ್ನು ವಿಭಜಿಸಿಯೇ ಅರ್ಥೈಸಬೇಕು ಎಂದು ಭಾವ.

2. ಮೂಲದಲ್ಲಿ ಉದಾಹರಿಸಿದ ನಾರದವಾಕ್ಯದಲ್ಲಿ 'ಜ್ಞಾಪಯನ್ತಿ' ಎನ್ನುವ ಕ್ರಿಯಾಪದಕ್ಕೆ ಕರ್ತೃಪದವು ತೋರದು. 'ವೇದಾನಾಂ' ಎನ್ನುವುದು ಷಷ್ಠೀ ವಿಭಕ್ತ್ಯಂತವಾಗಿದೆ ಎನ್ನುವ ತೊಡಕಿಗೆ ಉತ್ತರಿಸುತ್ತಾರೆ- ಸಿಂಹಾವಲೋಕನನ್ಯಾಯದಂತೆ, ಅಂದರೆ ಅರಣ್ಯದಲ್ಲಿ ಮುಂದೆ ಸಾಗಿದ ಸಿಂಹವು ಹಿಂದೆ ತಿರುಗಿ ನೋಡುವುದು, ಅದರಂತೆ ಈ ಕ್ರಿಯಾವಾಚಕ ಪದವು ಹಿಂದಿರುವದನ್ನು ಮತ್ತೊಮ್ಮೆ ಗಮನಿಸುವುದು. 'ವೇದಗಳಿಗೆ ನಾರಾಯಣನಲ್ಲಿ ತಾತ್ಪರ್ಯವಿರುವದರಿಂದ........ ಆ ವೇದಗಳು ಜ್ಞಾಪಿಸುತ್ತವೆ' ಎಂದು ಅರ್ಥೈಸಬೇಕಾಗುವುದರಿಂದ 'ವೇದಾನಾಂ' ಎನ್ನುವದರ ವಿಭಕ್ತಿಯನ್ನು ಬದಲಿಸಿ 'ವೇದಾಃ' ಎಂದು ತಿದ್ದುಪಡಿಮಾಡಿಕೊಳ್ಳುವುದು ಎಂದು ತಾತ್ಪರ್ಯ.

ಹೇಗೆ ಹೇಳುತ್ತೀರಿ[1]? ಆದುದರಿಂದ ಉತ್ತರಿಸುವರು 'ಮಹಾತಾತ್ಪರ್ಯಂ' ಎಂದು. **ಅತ್ರ**- ಹಿಂದೆ ತಿಳಿಸಿದ ಲಕ್ಷಣಸಹಿತನಾದ ನಾರಾಯಣನಲ್ಲಿ, **ಪ್ರಮಾಣಾನಾಂ ಚ ಸರ್ವೇಷಾಂ**- ಪಂಚರಾತ್ರಾದಿಗಳಿಗೆ, **ಅನ್ಯತ್ ತು**- ಧರ್ಮಾದಿಗಳು, **ತದರ್ಥಂ**- ಭಗವಂತನ ಜ್ಞಾನಕ್ಕಾಗಿಯೇ ವೇದಾದಿಗಳು ಹೇಳುವವು. ಆ ಬಗೆಯನ್ನು ಈ ಹಿಂದೆ ಸಂಕ್ಷೇಪದಿಂದ ಹೇಳಲಾಗಿದೆ ಎಂದು[2].

**-: ಪ್ರಮಾಣೋಲ್ಲೇಖವು ಪರಿಸಮಾಪಿತವಾಯಿತು :-**

## ।। ವೇದತಾತ್ಪರ್ಯವು ಜೀವೇಶ್ವರಾಭೇದದಲ್ಲಿಲ್ಲ ।।

ವಿಧಿ-ನಿಷೇಧಾದಿಗಳನ್ನು ಬೋಧಿಸುವ, ಮಂತ್ರಬ್ರಾಹ್ಮಣಾದಿ ಸಕಲವೇದ ಭಾಗವು ಅತತ್ತ್ವಾವೇದಕ. ಬ್ರಹ್ಮನನ್ನು ಬೋಧಿಸುವ ವೇದಾಂತಭಾಗಗಳು ಮಾತ್ರ ತತ್ತ್ವಾವೇಕಗಳು. ಇವು ಜೀವೇಶ್ವರ ಅಭೇದವನ್ನೇ ಬೋಧಿಸುವವು, ಹೊರತಾಗಿ ಸರ್ವಗುಣೋಪೇತನನ್ನಾಗಿ ಬೋಧಿಸಲಾರದು. ಬ್ರಹ್ಮನು ನೀವು ತಿಳಿಸಿದಂತಾದಲ್ಲಿ ಜೀವೇಶ್ವರರ ಅಭೇದವು ಯುಕ್ತವಾಗಲಾರದು. ಸ್ವಪ್ನದಲ್ಲಿ ಕಂಡ ವಸ್ತುವಿನಂತೆ ಎಚ್ಚರದಲ್ಲಿ ಕಾಣುವ ಈ ಎಲ್ಲ ಪದಾರ್ಥಗಳೂ ಮಿಥ್ಯಾ . ವೇದದಲ್ಲಾದರೋ ನೀವು ತಿಳಿಸಿದಂತೆ ಕೆಲವು ವಚನಗಳು ಬ್ರಹ್ಮನನ್ನು ಗುಣಪೂರ್ಣ ಇತ್ಯಾದಿಯಾಗಿ ತಿಳಿಸಿವೆ. ಆದರೆ ಅವೆಲ್ಲವೂ ಅನುವಾದಕಗಳು. ಅಂದರೆ ನಿರಾಕರಿಸಲು ತಿಳಿಸಿವೆಯೇ ಹೊರತಾಗಿ ಮನನಮಾಡಲು ಅಲ್ಲ. ಇತ್ಯಾದಿಯಾದ ವಾದಗಳನ್ನು ತುಂಬ ವಿಶದವಾಗಿ ಚರ್ಚಿಸಿ ನಿರಾಕರಿಸಿರುವರು. ಯಾರ ಅನುಭವದಲ್ಲೂ ಇರದ ಜೀವಬ್ರಹ್ಮರ ಐಕ್ಯವನ್ನು ಒಪ್ಪುವುದು, ಸತ್ಯವೆಂದು ಅನುಭವಿಸುವ ಜಗವನ್ನೇ ಅಲ್ಲಗಳೆಯುವುದು ಯೋಗ್ಯವಾಗದು. ಮತ್ತು ವೇದವಿಲ್ಲದೇ ಈಶ್ವರನ ಅರಿವೇ ಪ್ರಾಪ್ತವಾಗಲಾರದು. ಅಂತಹ ಈಶ್ವರನಿಂದ ಜೀವರಿಗೆ ಅಭೇದದ ಅರಿವು ಇತರ ಪ್ರಮಾಣದಿಂದ ಆಗಲಾರದು.

1. ಸರ್ವವೇದಗಳೂ ಮುಖ್ಯತಃ ಈಶ್ವರನನ್ನೇ ಪ್ರತಿಪಾದಿಸಿದಲ್ಲಿ ವೇದದಿಂದಲೇ ಗಮ್ಯವಾಗುವ ಧರ್ಮಾದಿಗಳ ಅರಿವು ಯಾವ ಪ್ರಮಾಣದಿಂದಾಗಬೇಕು? ತನ್ನಿಮಿತ್ತ ಸಕಲ ಆಗಮದಿಂದ ಈಶ್ವರನೇ ಮುಖ್ಯಬೋಧಿತನಾಗಿರುವನು ಎನ್ನುವುದು ಸರಿಯಾಗಲಾರದು ಎಂದು ಪ್ರಶ್ನೆಯ ಭಾವ.

2. ಈ ಹಿಂದೆ ಅಂದರೆ 'ಇಯಂ ಮಾತಾ.....' ಎನ್ನುವ ಮೂಲವನ್ನು ವ್ಯಾಖ್ಯಾನಿಸುವ ಸಂದರ್ಭದಲ್ಲಿ 'ಅನೇನೈತಾಂ ವೇದವಾಕ್ಯಾನಾಂ....' ಎನ್ನುವ ಟೀಕಾವಾಕ್ಯಗಳಿಂದ ವರ್ಣಿಸಿಯಾಗಿದೆ ಎಂದು ಭಾವ.

ಹಾಗಾದಲ್ಲಿ ವೇದವು ಯಾವಪ್ರಮಾಣದಿಂದ ಪ್ರಾಪ್ತವಾದದ್ದನ್ನು ಅನುವಾದಿಸಿದೆ? ಹಾಗಾಗಿ ಭೇದಾಗಮಗಳು ಅನುವಾದಕಗಳಾಗಲಾರದು ಎಂದು ಉಪದೇಶಿಸಿರುವರು.

**ವೇದಗಳಿಗೆ ಜೀವೇಶ್ವರಾಭೇದದಲ್ಲಿ ತಾತ್ಪರ್ಯವಿಲ್ಲ**

**ನ ಚ ಜೀವೇಶ್ವರಾಭೇದ ಏವ ತಾತ್ಪರ್ಯಮಾಗಮಸ್ಯ, ತತ್ರ ಪ್ರಮಾಣಾಭಾವಾತ್ ।**

ಜೀವೇಶ್ವರರ ಅಭೇದದಲ್ಲಿಯೇ ಎಲ್ಲ ಆಗಮಕ್ಕೆ ತಾತ್ಪರ್ಯ ಎನ್ನುವುದು ಉಚಿವಲ್ಲ, ಅಲ್ಲಿ (ಜೀವೇಶ್ವರರ ಅಭೇದದಲ್ಲಿ) ಪ್ರಮಾಣವಿಲ್ಲದಪ್ರಯುಕ್ತ.

ಅತ್ರ ಅದ್ವೈತವಾದಿನೋ ವದನ್ತಿ- ಮನ್ತ್ರಬ್ರಾಹ್ಮಣಲಕ್ಷಣಸ್ತಾವದ್ವೇದೋ ವಿಧಿನಿಷೇಧರೂಪತ್ವಾತ್ ಕರ್ಮಪರೋಽವಿದ್ಯಾವದ್ವಿಷಯೋಽತತ್ತ್ವಾವೇದಕ ಏವ । ವೇದಾನ್ತಾನಾನ್ತು ತತ್ತ್ವಾವೇದಕತ್ವೇಽಪಿ ಜೀವೇಶ್ವರಾಭೇದ ಏವ ತಾತ್ಪರ್ಯಮ್ । ತತ್ರೋದ್ಗೀಥಾದ್ಯುಪಾಸನಾನಾಂ ಕರ್ಮಸಮೃದ್ಧ್ಯರ್ಥಾನಾಮಪಿ ಚಿತ್ತವೃತ್ತಿತ್ವಸಾಮ್ಯೇನ ಬುದ್ಧಿಶುದ್ಧ್ಯರ್ಥತ್ವಾಚ್ಚಾಮ್ನಾನಂ ಅವಿರುದ್ಧಮ್ । ಪ್ರಾಣಾದ್ಯುಪಾಸನಾನಾಮಪಿ ಪ್ರಾಣಾದೀನಾಂ ಬ್ರಹ್ಮಪ್ರತೀಕತ್ವೇನಾದ್ವೈತಜ್ಞಾನೋಪಯೋಗಿತ್ವಾತ್ ಕ್ರಮಮುಕ್ತಿಫಲತ್ವಾಚ್ಚ ಪಾಠೋ ನ ವಿರುದ್ಧಃ । ಏತೇನ ಸಗುಣಬ್ರಹ್ಮವಿದ್ಯಾ ಅಪಿ ವ್ಯಾಖ್ಯಾತಾಃ । ಯದ್ವಾ ಕ್ರಿಯಾಕಾರಕಫಲರೂಪಭೇದಪ್ರಪಞ್ಚಪ್ರತಿಪಾದಕಃ ಸರ್ವೋಽಪಿ ವೇದೋ ಜೀವಬ್ರಹ್ಮಣೋಃ ನಿಷ್ಪ್ರಪಞ್ಚತ್ವಾಪ್ರತಿಪಾದನಪೂರ್ವಕಮಭೇದಪ್ರತಿಪಾದನಾಯಾನುವಾದಪರ ಏವೇತಿ ಸರ್ವಸ್ಯಾಪ್ಯಾಗಮಸ್ಯ ಜೀವೇಶ್ವರಾಭೇದ ಏವ ತಾತ್ಪರ್ಯಾತ್ ಕಥಂ ಸರ್ವೋತ್ತಮತ್ವಾದಿ ಲಕ್ಷಣೇ ವಿಷ್ಣೋಃ ತಾತ್ಪರ್ಯಮುಚ್ಯತೇ? ಸರ್ವೋತ್ತಮತ್ವಾದೇರ್ಭೇದಸಾಪೇಕ್ಷತ್ವೇನಾಭೇದವಿರೋಧಾದಿತಿ । ತದೇತತ್ ಪ್ರತಿಷೇಧತಿ- 'ನ ಚ' ಇತಿ । ಅತ್ರೇಶ್ವರಶಬ್ದೇನ 'ಬ್ರಹ್ಮ' ಉಚ್ಯತೇ, ತಸ್ಯೈವ ಸ್ವಾಧೀನಮಾಯಾಶಬಲಸ್ಯ ಈಶ್ವರತ್ವೇನ ಪರೈರಙ್ಗೀಕೃತತ್ವಾತ್ । ಐಶ್ವರ್ಯವಿಶಿಷ್ಟೇನ ಜೀವಸ್ಯಾಭೇದಾನುಪಪತ್ತೇಃ । ಕುತೋ ನ? ಇತ್ಯತ ಆಹ - 'ತತ್ರ' ಇತಿ ॥ ಸತಿ ಹಿ ಜೀವೇಶ್ವರಾಭೇದಪ್ರತಿಪಾದಕೇ ಪ್ರಧಾನವಾಕ್ಯೇ ತದಿತರೇಷಾಂ ವಾಕ್ಯಾನಾಂ ಕಥಞ್ಚಿತ್

**ತದೇಕವಾಕ್ಯತಾಂ ವ್ಯುತ್ಪಾದ್ಯ ಸರ್ವಸ್ಯಾಪ್ಯಾಗಮಸ್ಯ ತತ್ರ ತಾತ್ಪರ್ಯಂ ವ್ಯಾಖ್ಯಾತುಂ ಶಕ್ಯತೇ । ನ ಚ ಜೀವೇಶ್ವರಾಭೇದೇ ಪ್ರಮಾಣಂ ಪ್ರಧಾನವಾಕ್ಯಮಸ್ತಿ । ತತ್ಕಥಂ ತತ್ರಾऽಗಮಸ್ಯ ತಾತ್ಪರ್ಯಕಲ್ಪನಮ್?**

ಈ ವಿಷಯದಲ್ಲಿ (ವೇದಗಳಿಗೆ ಈಶ್ವರನಲ್ಲಿಯೇ ಮುಖ್ಯತಾತ್ಪರ್ಯ ಎನ್ನುವ ವಿಷಯದಲ್ಲಿ) ಅದ್ವೈತವಾದಿಗಳು ಹೇಳುತ್ತಾರೆ- ಮಂತ್ರ-ಬ್ರಾಹ್ಮಣ ರೂಪವಾದ ವೇದವು, ವಿಧಿ-ನಿಷೇಧರೂಪದಲ್ಲಿ ಇರುವುದರಿಂದ ಕರ್ಮಬೋಧಕವಾಗಿ ಅವಿದ್ಯಾ ವಿಷಯವಾದ ಅವು ಅತತ್ತ್ವಾವೇದಕವೇ (ಆಗಿವೆ). ವೇದಾಂತಗಳಾದರೋ ತತ್ತ್ವಾವೇದಕಗಳಾದರೂ ಜೀವೇಶ್ವರರ ಅಭೇದದಲ್ಲೇ ಅಭಿಮತವನ್ನು ಹೊಂದಿವೆ[1]. ಚಿತ್ತವೃತ್ತಿತ್ವದ ಸಾಮ್ಯತೆಯು ಇರುವುದರಿಂದಲೂ, ಅಂತಃಕರಣದ ಶುದ್ಧಿಯ ಉದ್ದೇಶವಿರುವುದರಿಂದಲೂ, ಅಲ್ಲಿ (ಉಪನಿಷತ್‌ಗಳಲ್ಲಿ ) ಕರ್ಮಸಮೃದ್ಧಿಫಲಕಗಳಾದ ಉದ್ಗೀಥಾದಿ ಉಪಾಸನಗಳ ಉಪದೇಶವಿದ್ದರೂ ವಿರುದ್ಧವಲ್ಲ[2]. ಪ್ರಾಣಾದಿಗಳು

1. ಸಮಗ್ರ ವೇದ ಸಾಹಿತ್ಯವನ್ನು ಮಂತ್ರ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ ಎಂದು ನಾಲ್ಕು ವಿಭಾಗವೆಂದು ತಿಳಿಸಲಾಗಿದೆ. 'ಅಗ್ನಿಮೀಳೇ.....' ಇತ್ಯಾದಿಗಳು ಸ್ತುತಿಗಳು. 'ಆಗ್ನೇಯ್ಯಾ ಆಗ್ನೀಧ್ರಮುಪತಿಷ್ಠೇತ' ಇತ್ಯಾದಿಗಳು ವಿಧಿವಾಕ್ಯಗಳು. 'ನಾನೃತಂ ವದೇತ್' ಇತ್ಯಾದಿಗಳು ನಿಷೇಧಕವಾಕ್ಯಗಳು. ಹೀಗೆ ಅನೇಕ ಬಗೆಯ ಕರ್ಮಗಳ ವಿಧಾನ ಮತ್ತು ನಿಷೇಧಗಳು ಮಂತ್ರ ಮತ್ತು ಬ್ರಾಹ್ಮಣ ಭಾಗಗಳಲ್ಲಿ ಉಪದಿಷ್ಟವಾಗಿವೆ. ಅವುಗಳನ್ನು ಕರ್ಮಕಾಂಡ ಎಂದು ವಿಭಾಗಿಸಲಾಗಿದೆ. 'ಸ ಆತ್ಮಾ ತತ್ತ್ವಮಸಿ' ಇತ್ಯಾದಿ ಉಪದೇಶಾತ್ಮಕವಾದ ಭಾಗಗಳನ್ನು ಉಪನಿಷತ್- ವೇದಾಂತ ಎಂದು ಕರೆಯುವರು. ಕರ್ಮಪರಗಳಾದ ವೇದಭಾಗವು ಅತತ್ತ್ವಗಳನ್ನು ತಿಳಿಸುವವು, ಈಶ್ವರ ಮಾತ್ರ ತತ್ತ್ವ ಉಳಿದವು ಅತತ್ತ್ವ ಆದುದರಿಂದ. ಇನ್ನು ತತ್ತ್ವಾವೇದಕವಾದ ವೇದಾಂತದಲ್ಲಿ ಜೀವೇಶ್ವರರ ಅಭೇದದ ಉಪದೇಶವಿದೆ ಎಂದು ಅದ್ವೈತವಾದಿಗಳು ಅಭಿಮತಿಸುವರು.

2. ವೇದಾಂತಭಾಗವಾದ ಉಪನಿಷತ್‌ಗಳಲ್ಲೇ 'ಓಮಿತ್ಯಕ್ಷರಮುದ್ಗೀಥಮ್ ಉಪಾಸೀತ..' '....ಸಮರ್ಧಯಿತಾ ಹ ವೈ ಕಾಮಾನಾಂ ಭವತಿ' ಇತ್ಯಾದಿಯಾಗಿ ಉಪದೇಶಗಳಿವೆ. ಉದ್ಗೀಥೋಪಾಸನೆ ಮತ್ತು ಉಪಾಸಕನಿಗೆ ಸಮೃದ್ಧಿ ರೂಪಫಲವನ್ನು ತಿಳಿಸಲಾಗಿದೆ. ಹಾಗಾದಲ್ಲಿ ಉಪನಿಷತ್‌ಗಳು ಜೀವೇಶ್ವರರ ಅಭೇದವನ್ನು ತಿಳಿಸುತ್ತದೆ ಎಂದು ಹೇಗೆ ಹೇಳಿದಿರಿ? ಎನ್ನುವ ಸಂದೇಹವನ್ನು ಉದ್ಗೀಥಾದಿಗಳ ಉಪಾಸನೆಗಳೂ ಒಂದು ಉಪಾಸನವೇ ಆದುದರಿಂದಲೂ, ಈ ಉಪಾಸನೆಯಿಂದ ಅಂತಃಕರಣದ ಶುದ್ಧಿ ಪ್ರಾಪ್ತವಾಗುವುದರಿಂದಲೂ ಈ ಉಪದೇಶಗಳು ಪಾರಂಪರ್ಯಯಾ ಐಕ್ಯಬೋಧನೆಗೆ ಸಹಕಾರಿಯಾದುದರಿಂದ ಬಾಧಕವಿಲ್ಲ ಎಂದು ಭಾವ.

ಬ್ರಹ್ಮಪ್ರತೀಕಗಳು ಆದ್ದರಿಂದ (ಅವುಗಳ ಉಪಾಸನೆಯು) ಅದ್ವೈತಜ್ಞಾನಕ್ಕೆ ಸಹಕಾರಿಯಾದುದರಿಂದ ಕ್ರಮಮುಕ್ತಿಪ್ರಾಪ್ತಿರೂಪ ಫಲಪ್ರಾಪಕವಾದುದ-ರಿಂದ ಪ್ರಾಣಾದ್ಯುಪಾಸನೆಯ ಉಪದೇಶವು ವಿರುದ್ಧವಲ್ಲ[1]. ಇದರಿಂದ ಸಗುಣಬ್ರಹ್ಮ ವಿದ್ಯೆಯನ್ನೂ ವ್ಯಾಖ್ಯಾನಿಸಿದಂತಾಯಿತು[2]. ಅಥವಾ ಕ್ರಿಯಾ, ಕಾರಕ, ಫಲಗಳೆಂಬ ಭೇದಾತ್ಮಕವಾದ ಪ್ರಪಂಚದ ಪ್ರತಿಪಾದಕವಾದ ಸಮಗ್ರವೇದವು ನಿಷ್ಪ್ರಪಂಚತತೆಯನ್ನು ತಿಳಿಸುವ ಮೂಲಕ ಜೀವೇಶ್ವರರಿಗೆ ಅಭೇದವನ್ನು ಪ್ರತಿಪಾದಿಸಲು ಅನುವಾದಪರವೇ (ಆಗಿದೆ) ಎಂದು, ಎಲ್ಲ ವೇದವೂ ಜೀವೇಶ್ವರಾಭೇದದಲ್ಲಿ ತಾತ್ಪರ್ಯವನ್ನು ಹೊಂದಿರುವುದರಿಂದ[3], (ಆದುದರಿಂದ ವೇದಗಳಿಗೆ) ಸರ್ವೋತ್ತಮತ್ವಾದಿ ಲಕ್ಷಣವಿಶಿಷ್ಟನಾದ ವಿಷ್ಣುವಿನಲ್ಲಿ ತಾತ್ಪರ್ಯವನ್ನು ಹೇಗೆ ಹೇಳುವಿರಿ? ಸರ್ವೋತ್ತಮತ್ವಾದಿಗಳು ಭೇದಸಾಪೇಕ್ಷವಾದುದರಿಂದ (ಜೀವೇಶ್ವರರ) ಅಭೇದದ ವಿರೋಧವು ಇರುವುದರಿಂದ ಎಂದು. ಈ ವಾದವನ್ನು ನಿರಾಕರಿಸುತ್ತಾರೆ 'ನ ಚ..' ಎಂದು. ಇಲ್ಲಿ 'ಈಶ್ವರ' ಶಬ್ದದಿಂದ ಬ್ರಹ್ಮನನ್ನು ಪರಿಗ್ರಹಿಸುವುದು. ಆ ಬ್ರಹ್ಮನನ್ನೇ ತನ್ನ ಅಧೀನವಾದ ಮಾಯಾಯುಕ್ತನಾದಾಗ 'ಈಶ್ವರ' ಎಂದು

---

1. ಬ್ರಹ್ಮಭಾವ ರೂಪ ಮೋಕ್ಷವು ಅಂತ್ಯಮೋಕ್ಷವೆಂದು, ಆ ಮೊದಲು ಪ್ರಾಣಾದ್ಯುಪಾಸನದಿಂದ ಅರ್ಚಿರಾದಿ ಮಾರ್ಗದಿಂದ ಸಾಗಿ ಪ್ರಾಣಾದಿ ಪ್ರಾಪ್ತಿಯು ಆಗುವುದು, ಅಂತ್ಯದಲ್ಲಿ ಬ್ರಹ್ಮಭಾವವು ಪ್ರಾಪ್ತವಾಗುವುದು, ಇದನ್ನು ಕ್ರಮಮುಕ್ತಿ ಎಂದು ಅದ್ವೈತವಾದಿಗಳು ಒಪ್ಪಿರುವರು.

2. ಈ ಉಪನಿಷತ್‌ಭಾಗದಲ್ಲಿಯೂ ಸಹ 'ಸತ್ಯಕಾಮಃ ಸತ್ಯಸಙ್ಕಲ್ಪಃ ಸರ್ವಸ್ಯ ವಶೀ ಸರ್ವಸ್ಯೇಶಾನಃ' ಇತ್ಯಾದಿಯಾಗಿ ಬ್ರಹ್ಮನನ್ನು ಸಗುಣ ಎಂದು ತಿಳಿಸಲಾಗಿದೆ. ಅದು ಏಕೆ ಎನ್ನುವ ಸಂದೇಹಕ್ಕೂ ಉತ್ತರವನ್ನು ಹೇಳಿದಂತಾಯಿತು. ಮಂದರು ನಿರ್ಗುಣಬ್ರಹ್ಮನನ್ನು ಉಪಾಸಿಸುವುದು ಕ್ಲೇಶಕಾರಕವಾಗಿದೆ. ತನ್ನಿಮಿತ್ತ ಸಗುಣನನ್ನೇ ಉಪಾಸಿಸಿ ಸಗುಣಬ್ರಹ್ಮನನ್ನು ಮೊದಲು ಹೊಂದುವರು. ಸಗುಣ ಬ್ರಹ್ಮಪ್ರಾಪ್ತಿಯಾದ ನಂತರದಲ್ಲಿ ಶುದ್ಧಬ್ರಹ್ಮಪ್ರಾಪ್ತಿ ಆದುದರಿಂದ ಸಗುಣಬ್ರಹ್ಮೋಪದೇಶವೂ ಸಂಗತವೇ ಆಗಿದೆ. ಇದನ್ನೂ ಕ್ರಮಮುಕ್ತಿ ಎಂದು ತಿಳಿಯುವುದು.

3. ಬ್ರಹ್ಮಭಿನ್ನವಾದದು ಎಲ್ಲವೂ ಮಿಥ್ಯಾ ಎಂದು ತಿಳಿಸಬೇಕಾದಲ್ಲಿ ಬ್ರಹ್ಮಭಿನ್ನವಾದದು ಯಾವವು ಎಂಬ ಜಿಜ್ಞಾಸೆಗೆ ವೇದವು ಈ ಪ್ರಪಂಚವನ್ನು ತಿಳಿಸುತ್ತಿದೆ. ನಿರಾಕರಣಕ್ಕಾಗಿ ವೇದವು ಆ ವಿಷಯಗಳನ್ನು ಅನುವಾದಿಸಿದೆ ಎಂದು ಭಾವ.

(ವ್ಯವಹೃತನಾಗುವನು ಎಂದು) ಪರರು ಒಪ್ಪಿರುವುದರಿಂದ. ಐಶ್ವರ್ಯಯುಕ್ತನಾದ ಬ್ರಹ್ಮನಿಗೆ ಜೀವನಿಂದ ಅಭೇದವು ಅಸಂಭಾವಿತ ವಾದುದರಿಂದ. ಏಕೆ ಇಲ್ಲ? (ಜೀವೇಶ್ವರರ ಅಭೇದದಲ್ಲಿ ವೇದಗಳಿಗೆ ಏಕೆ ತಾತ್ಪರ್ಯವಿಲ್ಲ?) ಆದುದರಿಂದ ಉತ್ತರಿಸಿದರು 'ತತ್ರ' ಎಂದು. ಪ್ರಧಾನ ವಾಕ್ಯವು ಜೀವೇಶ್ವರಾಭೇದದ ಪ್ರತಿಪಾದಕವಾಗಿದ್ದಲ್ಲಿ ಇತರವಾಕ್ಯಗಳಿಗೆ (ಪ್ರಧಾನವಾಕ್ಯದಿಂದ) ಏಕವಾಕ್ಯತಾವನ್ನು ಹೇಗಾದರೂ ಹೊಂದಿಸಿ, ಎಲ್ಲ ವೇದಕ್ಕೂ ಅಲ್ಲಿ (ಜೀವೇಶ್ವರಾಭೇದದಲ್ಲಿ) ತಾತ್ಪರ್ಯ ಎಂದು ವ್ಯಾಖ್ಯಾನಿಸಲು ಶಕ್ಯವಿದೆ. (ಆದರೆ) ಪ್ರಧಾನವಾಕ್ಯವು ಜೀವೇಶ್ವರಾಭೇದದಲ್ಲಿ ಪ್ರಮಾಣವಲ್ಲ. ಆದುದರಿಂದ ಹೇಗೆ ಆಗಮಕ್ಕೆ ಅಲ್ಲಿ (ಜೀವೇಶ್ವರಾಭೇದದಲ್ಲಿ) ತಾತ್ಪರ್ಯವನ್ನು ಕಲ್ಪಿಸುವುದು?

#### ಭೇದಪ್ರತಿಪಾದಕವಾಕ್ಯಗಳು ಅನುವಾದಕಗಳಲ್ಲ

**ನಚ ಜೀವೇಶ್ವರಭೇದಃ ಸಿದ್ಧ ಇತಿ, ಅನುವಾದಕತ್ವಂ ಭೇದವಾಕ್ಯಾನಾಮ್, ಆಗಮಂ ವಿನಾ ಈಶ್ವರಸ್ಯೈವಾಸಿದ್ಧೇಃ ।**

ಜೀವೇಶ್ವರರ ಭೇದವು (ಪ್ರತ್ಯಕ್ಷಾದಿಗಳಿಂದ) ಸಿದ್ಧವಾಗಿದೆ, ಆದುದರಿಂದ ಭೇದಪ್ರತಿಪಾದಕವಾಕ್ಯಗಳಿಗೆ ಅನುವಾದಕತ್ವವು ಪ್ರಾಪ್ತವಾಯಿತು ಹಾಗಾಗಿ ದುರ್ಬಲ, ಎನ್ನುವುದು ಯುಕ್ತವಲ್ಲ, ಆಗಮದ ಹೊರತಾಗಿ ಈಶ್ವರನೇ ಅಸಿದ್ಧನಾದುದರಿಂದ.

ನನು, ಕಥಂ ನಾಸ್ತಿ? 'ತತ್ತ್ವಮಸಿ' ಇತ್ಯಾದೀನಾಂ ಜೀವೇಶ್ವರಾಭೇದ-ಪ್ರತಿಪಾದಕಾನಾಂ ವಾಕ್ಯಾನಾಂ ವಿದ್ಯಮಾನತಾದಿತಿ ಚೇನ್ನ । ತೇಷಾಮ್ 'ದ್ವೇ ಬ್ರಹ್ಮಣೀ ವೇದಿತವ್ಯೇ' 'ದ್ವಾ ಸುಪರ್ಣ' ಇತ್ಯಾದಿಜೀವೇಶ್ವರಭೇದವಾಕ್ಯ-ವಿರುದ್ಧತ್ವೇನಾಭೇದೇ ಪ್ರಾಮಾಣ್ಯಾಭಾವಾದಿತಿ ಭಾವಃ । ನನು ಪ್ರಬಲಂ ವಿರೋಧಿ ಬಾಧಕಂ ಭವತಿ, ಸಮಬಲಂ ಚ ಪ್ರತಿರೋಧಕಮ್, ಉಭಯಥಾಽಪಿ ಕಾಲಾತೀತಸತ್ಪ್ರತಿಪಕ್ಷಹೇತ್ವೋರಿವ ವಿರುದ್ಧಸ್ಯ ಅಪ್ರಾಮಾಣ್ಯಮುಚಿತಮ್ । ನಚಾಭೇದವಾಕ್ಯಾಪೇಕ್ಷಯಾ ಭೇದವಾಕ್ಯಾನಾಂ ಪ್ರಾಬಲ್ಯಂ ಸಮಬಲತ್ವಂ ವಾಽಸ್ತಿ । ಜೀವೇಶ್ವರಭೇದಸ್ಯ ಪ್ರತ್ಯಕ್ಷಾನುಮಾನ-ಸಿದ್ಧತ್ವೇನ, ತದನುವಾದಕಾನಾಂ ತೇಷಾಂ ದುರ್ಬಲತ್ವಾತ್ । ನಚಾಭೇದಃ

ಪ್ರಮಾಣಾನ್ತರಸಿದ್ಧೋ ಯೇನ ತದ್ವಾಕ್ಯಾನಾಮನುವಾದಕತ್ವಂ ಸ್ಯಾತ್ । ಅತೋ ಭೇದವಾಕ್ಯವಿರೋಧೇನಾಭೇದವಾಕ್ಯಾನಾಮಪ್ರಾಮಾಣ್ಯಕಥನ-ಮಯುಕ್ತಂ ಪ್ರತ್ಯುತ ವಿಪರ್ಯಯ ಏವೋಚಿತ ಃ? ಇತ್ಯತ ಆಹ - 'ನ ಚ' ಇತಿ ॥ ಸಿದ್ಧಃ ಪ್ರತ್ಯಕ್ಷಾನುಮಾನಾಭ್ಯಾಮ್ । ಇತಿಶಬ್ದೋ ಹೇತೌ । 'ತಥಾಚ ದೌರ್ಬಲ್ಯಮ್' ಇತಿ ಶೇಷಃ । ಕುತೋ ನ? ಇತ್ಯತ ಆಹ- 'ಆಗಮಂ ವಿನಾ' ಇತಿ । ಭೇದಃ ತಾವದ್ ಧರ್ಮಿಪ್ರತಿಯೋಗಿಪ್ರತೀತಿಸಾಪೇಕ್ಷಪ್ರತೀತಿಕಃ । ತತ್ರ ಈಶ್ವರಧರ್ಮಿಕೋ ಜೀವಪ್ರತಿಯೋಗಿಕೋ ಭೇದಃ ಪ್ರಮಾಣಾನ್ತರಸಿದ್ಧ ಇತಿ ವಾ ವಕ್ತವ್ಯಮ್, ಈಶ್ವರಪ್ರತಿಯೋಗಿಕೋ ಜೀವಧರ್ಮಿಕ ಇತಿ ವಾ । ಪಕ್ಷದ್ವಯೇಽಪಿ ಜೀವೇಶ್ವರಪ್ರತೀತ್ಯಾಽವಶ್ಯಂ ಭವಿತವ್ಯಮ್ । ತತ್ರ ಯದ್ಯಪಿ ಜೀವಃ ಸಾಕ್ಷಿಪ್ರತ್ಯಕ್ಷಸಿದ್ಧಃ ತಥಾಽಪೀಶ್ವರಸಿದ್ಧಿಃ ಕಿಮಾಗಮೇನೋತ ಪ್ರಮಾಣಾನ್ತರೇಣೇತಿ ವಾಚ್ಯಮ್ । ಆದ್ಯೇ ವಕ್ಷ್ಯಾಮಃ । ದ್ವಿತೀಯೇ ತ್ವಿದಮುಪತಿಷ್ಠತಿ । ತಥಾಚ ಧರ್ಮಿಪ್ರತಿಯೋಗಿಪ್ರತೀತ್ಯಭಾವಾತ್ ಕಥಂ ತದಧೀನಾ ಪ್ರತ್ಯಕ್ಷಾದಿನಾ ಜೀವೇಶ್ವರಭೇದಸಿದ್ಧಿಃ ಸ್ಯಾತ್, ಕಥಂ ಚ ತದ್ವಾಕ್ಯಾನಾಮನುವಾದಕತ್ವಂ ದುರ್ಬಲತ್ವಂ ವಾ ಭವೇದ್ ? ಇತಿ ಏವಾರ್ಥಃ ।

ಸರಿ, ಏಕೆ ಇಲ್ಲ? (ಜೀವೇಶ್ವರಾಭೇದದಲ್ಲಿ ವೇದಗಳಿಗೆ ಏಕೆ ತಾತ್ಪರ್ಯ ವಿಲ್ಲ? ) 'ತತ್ವಮಸಿ' ಈ ಮುಂತಾದ ಜೀವೇಶ್ವರಾಭೇದಪ್ರತಿಪಾದಕ ವಾಕ್ಯಗಳು ಇರುವುದರಿಂದ ಎಂದೆನ್ನಲಾಗದು. 'ದ್ವೇ ಬ್ರಹ್ಮಣಿ ವೇದಿತವ್ಯೇ' 'ದ್ವಾ ಸುಪರ್ಣಾ..' ಈ ಮುಂತಾದ ಜೀವೇಶ್ವರರ ಭೇದವನ್ನು ತಿಳಿಸುವ ವಾಕ್ಯಗಳ ವಿರುದ್ಧವಾದುದರಿಂದ (ಜೀವೇಶ್ವರರ) ಅಭೇದದಲ್ಲಿ (ತತ್ತ್ವಮಸ್ಯಾದಿ ವಾಕ್ಯಗಳು) ಪ್ರಾಮಾಣ್ಯವನ್ನು ಹೊಂದಲಾರದು ಎಂದು ಭಾವ. ಸರಿ, ಪ್ರಬಲವಾದದ್ದು ವಿರೋಧವಾದಲ್ಲಿ ಬಾಧಕವಾಗುವುದು, ಸಮಬಲವಾದದ್ದು ಪ್ರತಿರೋಧಕವಾಗುವುದು. ಈ ಎರಡೂ ವಿಧದಲ್ಲೂ (ಯಾವ ವಿಧದಿಂದಾದರೂ) ವಿರುದ್ಧವಾದುದಕೆ, ಕಾಲಾತೀತ, ಸತ್ಪ್ರತಿಪಕ್ಷ (ದೋಷದಿಂದ ದುಷ್ಟವಾದ) ಹೇತುಗಳಂತೆ ಅಪ್ರಾಮಾಣ್ಯವನ್ನು ಹೇಳುವುದು ಉಚಿತವಾದೀತು. (ಆದರೆ) ಜೀವೇಶ್ವರಭೇದವು ಪ್ರತ್ಯಕ್ಷ ಮತ್ತು

ಅನುಮಾನಗಳಿಂದ ಸಿದ್ಧವಾದುದರಿಂದ, ಅದರ (ಪ್ರತ್ಯಕ್ಷ ಮತ್ತು ಅನುಮಾನದಿಂದ ಸಿದ್ಧವಾದುದರ) ಅನುವಾದಕಗಳಾದ ಅವುಗಳಿಗೆ (ಜೀವೇಶ್ವರಭೇದಪ್ರತಿಪಾದಕ ವಾಕ್ಯಗಳಿಗೆ) ದೌರ್ಬಲ್ಯವನ್ನೇ ಹೇಳಲಾಗುವುದರಿಂದ, ಅಭೇದವನ್ನು ತಿಳಿಸುವ ವಾಕ್ಯಗಳಿಂದ ಭೇದಪ್ರತಿಪಾದಕವಾಕ್ಯಗಳಿಗೆ ಪ್ರಾಬಲ್ಯವನ್ನಾಗಲಿ ಅಥವಾ ಸಮಬಲವನ್ನಾಗಲಿ (ಹೇಳುವುದು) ಸಲ್ಲದು. (ಜೀವೇಶ್ವರರ) ಅಭೇದವು ಪ್ರಮಾಣಾಂತರದಿಂದ ಸಿದ್ಧವಾಗಿಲ್ಲ, ಆದ ಪಕ್ಷದಲ್ಲಿ ಆ ವಾಕ್ಯಕ್ಕೂ ಅನುವಾದಕತ್ವವು ಪ್ರಾಪ್ತವಾಗುತ್ತಿತ್ತು. ಆದುದರಿಂದ ಭೇದವಾಕ್ಯದ ವಿರೋಧದಿಂದ ಅಭೇದವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಸರಿಯಾದುದಲ್ಲ, ವಸ್ತುತಃ ವಿರುದ್ಧವಾಗಿ[1] ಹೇಳುವುದೇ ಸರಿಯಾದದ್ದು ಎಂದು ಆದುದರಿಂದ ಹೇಳುತ್ತಾರೆ '**ನ ಚ**' ಎಂದು. **ಸಿದ್ಧಃ** (ಸಿದ್ಧವಾಗಿದೆ) ಪ್ರತ್ಯಕ್ಷ ಅನುಮಾನಗಳಿಂದ. 'ಇತಿ' ಶಬ್ದವು ಕಾರಣ ಎಂಬ ಅರ್ಥದಲ್ಲಿದೆ. 'ತಥಾಚ ದೌರ್ಬಲ್ಯಂ' ಎಂದು ಅಧ್ಯಾಹಾರ ಮಾಡಬೇಕು[2]. ಏಕೆ (ಅನುವಾದಕತ್ವವು) ಇಲ್ಲ? ಆದುದರಿಂದ ಉತ್ತರಿಸುವರು '**ಆಗಮಂ ವಿನಾ...**' ಎಂದು. ಭೇದವಾದರೋ ಧರ್ಮಿ ಮತ್ತು ಪ್ರತಿಯೋಗಿಗಳ ಅರಿವಿನ ನೆರವಿನಿಂದ (ನಮ್ಮ) ಅರಿವಿಗೆ ಬರುವುದು[3]. ಇಲ್ಲಿ 'ಈಶ್ವರಧರ್ಮಿಕ ಜೀವಪ್ರತಿಯೋಗಿಕ ಭೇದವು[4]' ಅಥವಾ 'ಈಶ್ವರ ಪ್ರತಿಯೋಗಿಕ ಜೀವಧರ್ಮಿಕ ಭೇದವು[5]' ಪ್ರಮಾಣಾಂತರದಿಂದ ಸಿದ್ಧವಾಗಿದೆ ಎಂದು ಹೇಳಬೇಕು. ಎರಡೂ ಪಕ್ಷದಲ್ಲಿ ಜೀವ ಮತ್ತು ಈಶ್ವರರ ಪ್ರತೀತಿಯು ಅವಶ್ಯವಾಗಿದೆ. ಇಲ್ಲಿ ವಸ್ತುತಃ

1. ಅನನುವಾದಕವಾದ ಅಭೇದವಾಕ್ಯಗಳ ವಿರೋಧದಿಂದ ಅನುವಾದಕಗಳಾದ ಭೇದವಾಕ್ಯಕ್ಕೇ ಅಪ್ರಾಮಾಣ್ಯವನ್ನು ಹೇಳುವುದು ತರವಾಗಿದೆ ಎಂದು ಭಾವ.
2. ಮೂಲದಲ್ಲಿನ 'ನಚ ಜೀವೇಶ್ವರ....' ಎನ್ನುವ ವಾಕ್ಯದ ಒಟ್ಟು ಭಾವವು- 'ಜೀವೇಶ್ವರಭೇದವು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾಗಿಲ್ಲ, ಆದುದರಿಂದ ಭೇದಪ್ರತಿಪಾದಕವಾಕ್ಯಗಳಿಗೆ ಅನನುವಾದಕತ್ವವೇ ಇರುವುದರಿಂದ ದೌರ್ಬಲ್ಯವಿಲ್ಲ.' ಎಂದು.
3. ಘಟವು ಪಟದಿಂದ ಭಿನ್ನ, ಅಥವಾ ಪಟದಲ್ಲಿ ಘಟದ ಭೇದವಿದೆ, ಈ ಮುಂತಾದ ಭೇದಜ್ಞಾನದಲ್ಲಿ ಎರಡು ವಸ್ತುವಿನ- ಪ್ರತಿಯೋಗಿ ಮತ್ತು ಅನುಯೋಗಿಯ ಅರಿವು ಬೇಕು. ಈ ಅನುಯೋಗಿ-ಪ್ರತಿಯೋಗಿಗಳ ಅರಿವಿಲ್ಲದೇ ಭೇದಜ್ಞಾನವು ಬಾರದು ಎಂದು ಭಾವ.
4. 'ಈಶ್ವರನು ಜೀವನಿಂದ ಭಿನ್ನ' ಎನ್ನುವ ಜ್ಞಾನದಲ್ಲಿ ಈಶ್ವರನು ಅನುಯೋಗಿ.
5. 'ಜೀವನಲ್ಲಿ ಈಶ್ವರನ ಭೇದವಿದೆ' ಎನ್ನುವ ಜ್ಞಾನದಲ್ಲಿ ಈಶ್ವರನು ಪ್ರತಿಯೋಗಿ.

ಜೀವನು ಸಾಕ್ಷಿ ಪ್ರತ್ಯಕ್ಷಸಿದ್ಧ, ಆದರೂ ಈಶ್ವರನ ಸಿದ್ಧಿಯು ಆಗಮದಿಂದಲೋ ಅಥವಾ ಪ್ರಮಾಣಾಂತರದಿಂದಲೋ? ಮೊದಲ ಪಕ್ಷವನ್ನು ಒಪ್ಪಿದಲ್ಲಿ (ಉತ್ತರವನ್ನು) ಮುಂದೆ ತಿಳಿಸುತ್ತೇವೆ[1]. ಎರಡನೆಯ ಪಕ್ಷವಾದಲ್ಲಿ ( ಈಶ್ವರನ ಅರಿವು ಆಗಮೇತರ ಪ್ರಮಾಣದಿಂದ ಪ್ರಾಪ್ತವಾಗುವುದು ಎನ್ನುವ ಪಕ್ಷದಲ್ಲಿ) ಇದನ್ನು ಹೇಳುತ್ತೇವೆ[2]. ಹಾಗಾದಲ್ಲಿ ಧರ್ಮಿ ಮತ್ತು ಪ್ರತಿಯೋಗಿಗಳ ಪ್ರತೀತಿಯು ಇಲ್ಲವಾದುದರಿಂದ ಅದರ (ಧರ್ಮಿ ಮತ್ತು ಪ್ರತಿಯೋಗಿಗಳ ಪ್ರತೀತಿಯ) ಅಧೀನವಾದ ಜೀವೇಶ್ವರಭೇದದ ಸಿದ್ಧಿಯು ಪ್ರತ್ಯಕ್ಷಾದಿಗಳಿಂದ ಹೇಗೆ ಆದೀತು? ಆ ವಾಕ್ಯಗಳಿಗೆ (ಭೇದಪ್ರತಿಪಾದಕ ವಾಕ್ಯಗಳಿಗೆ) ಅನುವಾದಕತ್ವವಾಗಲೀ ಅಥವಾ ದೌರ್ಬಲ್ಯವಾಗಲೀ ಹೇಗೆ ಬಂದೀತು? ಎಂದು ಭಾವ.

**-:ವೇದತಾತ್ಪರ್ಯವು ಜೀವೇಶ್ವರಾಭೇದದಲ್ಲಿಲ್ಲ ಪ್ರಕರಣವು ಸಮಾಪ್ತ :-**

## ॥ ಕೇವಲಾನುಮಾನವು ಈಶ್ವರಸಾಧಕವಲ್ಲ ॥

ಪ್ರತ್ಯಕ್ಷಾಗಮಗಳ ಬೆಂಬಲವಿಲ್ಲದ ಯುಕ್ತಿಯನ್ನು ಶುಷ್ಕತರ್ಕ ಎಂದು ನಿಂದಿಸಲಾಗಿದೆ. ಇಂತಹ ತರ್ಕಗಳು ಏನನ್ನೂ ಸಾಧಿಸಲಾರವು. ತರ್ಕದ ಬೆನ್ನನ್ನು ಹಿಡಿದಲ್ಲಿ ತತ್ತ್ವದ ಬೋಧವಾಗದು.ಪ್ರಬಲಾವಾದಿಗಳಾದ ತಾರ್ಕಿಕರ ದೂಷಣೆಯ ಈ ಭಾಗವು ಅತಿ ಕಠಿಣವಾದದ್ದು. ಈ ಪ್ರಬಂಧದ ಕೆಲವು ಮಾತುಗಳು ಆಚಾರ್ಯದ್ದಲ್ಲ , ಗಂಗೆಯಲ್ಲಿ ಸೇರಿ ಯಮುನೆ ಎಂದು ಜಯತೀರ್ಥರು ತಿಳಿಸಿರುವರು.

**ಅನುಮಾನದಿಂದ ಈಶ್ವರನ ಸಿದ್ಧಿಯಾಗದು**

**ನಚಾನುಮಾನಾತ್ ತತ್ಸಿದ್ಧಿಃ, ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್ ।**

ಅನುಮಾನದಿಂದ ಈಶ್ವರನ ಸಿದ್ಧಿಯಾಗದು, ವಿರುದ್ಧವಾಗಿಯೂ ಅನುಮಾನಿಸಲು ಅವಕಾಶವಿರುವುದರಿಂದ.

---

1. 'ಅಸರ್ವಕರ್ತೃತ್ವೇನಾನುಭವಾತ್' ಎನ್ನುವ ಮೂಲವನ್ನು ವ್ಯಾಖ್ಯಾನಿಸುವಾಗ ತಿಳಿಸಲಾಗುವುದು.

2. 'ಆಗಮಂ ವಿನಾ...' ಎನ್ನುವ ಉತ್ತರವನ್ನು ಹೇಳುತ್ತೇವೆ ಎಂದು ಭಾವ.

ನನು, ಈಶ್ವರಸ್ಯ ಸ್ವಭಾವವಿಪ್ರಕೃಷ್ಟತ್ವಾತ್ ಪ್ರತ್ಯಕ್ಷತೋಽಸಿದ್ಧಾವಪಿ ಅನುಮಾನಾತ್ ತತ್ಸಿದ್ಧಿರ್ಭವಿಷ್ಯತಿ । ತಥಾಚ ಪ್ರಮಾಣಾನ್ತರೇಣ ಭೇದಸಿದ್ಧ್ಯುಪಪತ್ತೇಃ ತದ್ವಾಕ್ಯಾನಾಮನುವಾದಕತ್ವಮೇವೇತಿ ಚೇತ್, ಕಿಂ ಪ್ರತ್ಯಕ್ಷಾಗಮಸಹಾಯವತಾಽನುಮಾನೇನೇಶ್ವರಸಿದ್ಧಿರುಚ್ಯತೇ ಉತ ತದ್ರಹಿತೇನ ? ಆದ್ಯೇ ವಕ್ಷ್ಯಾಮಃ । ದ್ವಿತೀಯಂ ಪ್ರತಿಷೇಧತಿ- 'ನಚ' ಇತಿ । ತತ್ರ ಹೇತುಮಾಹ- 'ವಿಪರ್ಯಯೇಣಾಪಿ' ಇತಿ ॥ ಇತ್ಥಂಭೂತಲಕ್ಷಣೇ ತೃತೀಯಾ । ಪ್ರತ್ಯಕ್ಷಾಗಮಸಹಾಯರಹಿತಸ್ಯಾನುಮಾನಸ್ಯ ಸರ್ವಥಾ ವಿಪರೀತಾನುಮಾನೇನ ಪ್ರತಿರುದ್ಧತ್ವಾತ್ । ತಥಾ ಚೋಕ್ತಮ್ । 'ಉಪಾಧಿ-ಪ್ರತಿರೋಧೌ ತು ಕ್ವ ನಾಮಾತೀವ ದುರ್ವಚೌ' ಇತಿ । ಪ್ರತ್ಯಕ್ಷಾದಿಸಾಹಾಯ್ಯೇ ತು ಪ್ರತಿಪಕ್ಷಸ್ಯ ತದ್ಬಾಧೇನ ಉಪಾಧೇಶ್ಚ ಪಕ್ಷ ಏವ ಸಾಧ್ಯವ್ಯಾಪಕತಾಭಙ್ಗೇನ ನಿರಾಕರಣಂ ಶಕ್ಯತೇ । ತದಭಾವೇ ತು ಪ್ರತಿಪಕ್ಷಾದಿಕಂ ದುಷ್ಪರಿಹರಮೇವ ।

ಸರೀ, ಅವ್ಯಕ್ತಸ್ವಭಾವದ ಈಶ್ವರನ ಸಿದ್ಧಿಯು (ಅರಿವು) ಪ್ರತ್ಯಕ್ಷದಿಂದ ಆಗದಿದ್ದರೂ[1], ಅನುಮಾನದಿಂದ ಸಿದ್ಧಿಯಾಗುವುದು. ಹಾಗಾಗಿ ಪ್ರಮಾಣಾಂತರದಿಂದ (ಜೀವೇಶ್ವರರ) ಭೇದದ ಸಿದ್ಧಿಯು ಆಗುವುದರಿಂದ ಆ ವಾಕ್ಯಗಳಿಗೆ (ಭೇದಪ್ರತಿಪಾದಕ ವಾಕ್ಯಗಳಿಗೆ) ಅನುವಾದಕತ್ವವು (ಪ್ರಾಪ್ತವಾಗುವುದು) ಎಂದಾದಲ್ಲಿ[2], ಪ್ರತ್ಯಕ್ಷಾಗಮಗಳ ಸಹಾಯವನ್ನು ಹೊಂದಿರುವ ಅನುಮಾನದಿಂದಲೋ ಅಥವಾ (ಅವುಗಳ ಸಹಾಯವು) ಇಲ್ಲದ (ಅನುಮಾನದಿಂದಲೋ). ಮೊದಲ ಪಕ್ಷವಾದಲ್ಲಿ ಮುಂದೆ ಉತ್ತರಿಸುತ್ತೇವೆ[3]. ಎರಡನೆಯ

1. ಪ್ರತ್ಯಕ್ಷಕ್ಕೆ ಇಂದ್ರಿಯಾರ್ಥಗಳ ಸನ್ನಿಕರ್ಷದ ಅವಶ್ಯಕತೆಯು ಇದೆ, ಈಶ್ವರನಾದರೋ ಅವ್ಯಕ್ತಸ್ವಭಾವದವನು ಹಾಗಾಗಿ ಇಂದ್ರಿಯಾರ್ಥ ಸನ್ನಿಕರ್ಷವಿಲ್ಲ ಎಂದು ಭಾವ.

2. ಭೇದಪ್ರತಿಪಾದಕ ವೇದವಾಕ್ಯಗಳು ಅನುವಾದಕ ಎಂದಾಗಬೇಕಾದಲ್ಲಿ, ಆ ಮೊದಲು ಭೇದವು ಪ್ರಮಾಣಾಂತರದಿಂದ ಸಿದ್ಧವಾಗಿರಬೇಕು. ಜೀವೇಶ್ವರರ ಭೇದಜ್ಞಾನಕ್ಕೆ ಪ್ರತಿಯೋಗಿಯಾಗಿಯೋ ಅಥವಾ ಅನುಯೋಗಿಯಾಗಿಯೋ ಈಶ್ವರನ ಜ್ಞಾನವು ಅನಿವಾರ್ಯ ಎಂದು ಹಿಂದೆ ತಿಳಿಸಲಾಗಿದೆ. ತನ್ನಿಮಿತ್ತ ಈಶ್ವರನ ಜ್ಞಾನವು ಅನುಮಾನದಿಂದ ಆಗುವುದು, ಪ್ರಮಾಣಾಂತರದಿಂದ ಪ್ರಾಪ್ತವಾದ ಆ ಭೇದವನ್ನು ವೇದವು ಅನುವಾದಿಸುವುದೆಂದು ಭಾವ.

3. ಪ್ರತ್ಯಕ್ಷಾಗಮಗಳ ಸಹಾಯವಿರುವ ಅನುಮಾನದಿಂದ ಭೇದವು ಸಿದ್ಧವಾಗುವಾಗುವುದಾದಲ್ಲಿ ಈ ಅನುಮಾನದ ವಿರೋಧವೇ ಐಕ್ಯಾಗಮಕ್ಕೆ ಪ್ರಾಪ್ತವಾಗಿ, ಐಕ್ಯಾಗಮವೇ ಅಪ್ರಮಾಣವಾದೀತು ಎಂದು ಮುಂದೆ ಉತ್ತರಿಸಲಾಗುವುದು ಎಂದು ಭಾವ.

ಪಕ್ಷವನ್ನು ನಿರಾಕರಿಸುತ್ತಾರೆ 'ನ ಚ' ಎಂದು. ಆ ವಿಷಯದಲ್ಲಿ ('ಕೇವಲಾನುಮಾನದಿಂದ ಈಶ್ವರ ಸಿದ್ಧಿಯು ಆಗದು' ಎನ್ನುವ ವಿಷಯದಲ್ಲಿ) ಕಾರಣವನ್ನು ತಿಳಿಸುತ್ತಾರೆ 'ವಿಪರ್ಯಯೇಣ....' ಎಂದು. 'ಇಂತಹ ಧರ್ಮವನ್ನು ಹೊಂದಿದ ವಸ್ತುವಿನ ಸೂಚಕಕ್ಕೆ ತೃತೀಯಾ ವಿಭಕ್ತಿ' ಎನ್ನುವ ನಿಯಮದಂತೆ ತೃತೀಯಾ ವಿಭಕ್ತಿಯು ಪ್ರಾಪ್ತವಾಗಿದೆ[1]. ಪ್ರತ್ಯಕ್ಷಾಗಮಗಳ ಸಹಾಯವಿಲ್ಲದ ಅನುಮಾನಕ್ಕೆ ನಿಶ್ಚಿತವಾಗಿಯೂ ಸತ್ಪ್ರತಿಪಕ್ಷಾನುಮಾನದ ಪ್ರತಿರೋಧವು ಇರುವುದರಿಂದ. ಹೀಗೆ ಹೇಳಲಾಗಿದೆ- 'ಉಪಾಧಿ -ಪ್ರತಿರೋಧೌ ತು ಕ್ವ ನಾಮಾತೀವ ದುರ್ವಚೌ' ಎಂದು[2]. ಪ್ರತ್ಯಕ್ಷಾದಿಗಳ

1. 'ವಿಪರ್ಯಯೇಣ ಅಪಿ ಅನುಮಾತುಮ್' ಎಂದು ಮೂಲದಲ್ಲಿದೆ. 'ವಿಪರ್ಯಯೇಣ' ಎಂದು ತೃತೀಯಾವಿಶಿಷ್ಟವಾಗಿ ಪ್ರಯೋಗಿಸಲಾಗಿದೆ. ಅನುಮಾನ ರೂಪಕ್ರಿಯೆಗೆ ಈ 'ವಿಪರ್ಯಯ' ಎನ್ನುವುದು ಕರ್ತೃವೂ ಅಲ್ಲ ಕರಣವೂ ಅಲ್ಲ. ಉಭಯತರದಲ್ಲಿ ಒಂದಾಗಿದ್ದಲ್ಲಿ 'ಕರ್ತೃಕರಣಯೋಸ್ತೃತೀಯಾ' (ಅ.ಸೂ.2.3.18.) ಎನ್ನುವ ನಿಯಮದಂತೆ ತೃತೀಯಾವಿಭಕ್ತಿಯು ಪ್ರಾಪ್ತವಾಗಬಹುದಿತ್ತು. ಎನ್ನುವ ಸಂದೇಹಕ್ಕೆ ಉತ್ತರ 'ಇತ್ಥಂಭೂತಲಕ್ಷಣೇ' (ಅ,ಸೂ.2.3.21.) ತೃತೀಯಾ' ಎಂದು. ಇಂತಹ ಧರ್ಮವನ್ನು ಹೊಂದಿದ ವಸ್ತುವನ್ನು ಸೂಚಿಸುವ ಶಬ್ದಕ್ಕೆ ತೃತೀಯಾ ವಿಭಕ್ತಿಯು ಪ್ರಾಪ್ತವಾಗುವುದು. ಉದಾ- ಜಟಾಭಿಃ ತಾಪಸಃ ಎಂದು. ವ್ಯಕ್ತಿಯೋರ್ವನು ತಪೋಗುಣದಿಂದ ವಿಶಿಷ್ಟ ಎಂದು ಸೂಚಿಸುವ ಶಬ್ದವು ಜಟಾ, ಈ ಶಬ್ದಕ್ಕೆ ತೃತೀಯಾ ವಿಭಕ್ತಿಯು ಪ್ರಾಪ್ತಾವಾಗಿದೆ. ಪ್ರಕೃತ 'ವಿಪರ್ಯಯೇಣ' ಎನ್ನುವುದು ಸಹ ಒಂದು ವಿಶಿಷ್ಟಧರ್ಮದಿಂದ ಯುಕ್ತವಾದ ಸಾಧ್ಯವನ್ನು ಸೂಚಿಸುವುದು. ಯಾವ ಧರ್ಮದಿಂದ ವಿಶಿಷ್ಟವಾದ ಸಾಧ್ಯ ಎಂದಲ್ಲಿ- 'ಪ್ರಸಕ್ತವಾದ ಪ್ರಕಾರಕ್ಕೆ ವಿರುದ್ಧವಾದ ಧರ್ಮದಿಂದ ವಿಶಿಷ್ಟವಾದ ಸಾಧ್ಯ' ಎಂದು. ಒಟ್ಟಿನಲ್ಲಿ ಮೂಲವಾಕ್ಯದ ಭಾವವು- ಆಗಮದ ಸಹಾಯವಿಲ್ಲದ ಕೇವಲ ಅನುಮಾನದಿಂದ, ಅಂದರೆ ಸಕರ್ತೃಕತ್ವಾನುಮಾನದಿಂದ ಈಶ್ವರನನ್ನು ಸಾಧಿಸಲು ಶಕ್ಯವಿಲ್ಲ. ವಿಪರ್ಯಯೇಣ-ಪ್ರಸಕ್ತಸಾಧ್ಯದ ವಿರುದ್ಧಗುಣದಿಂದ ವಿಶಿಷ್ಟನಾಗಿಯೂ ಈಶ್ವರನನ್ನು ಊಹಿಸಲು ಶಕ್ಯವಿರುವುದರಿಂದ ಎಂದು. ಮುಂದಿನ ಭಾಗದಲ್ಲಿ ಈಶ್ವರಸಾಧಕಾನುಮಾನ ಮತ್ತು ಅದಕ್ಕೆ ವಿರುದ್ಧವಾದ ಅನುಮಾನಗಳನ್ನು ಚರ್ಚಿಸುವರು.

2. ಪ್ರಮಾಣಾಂತರದ ಸಹಾಯವಿಲ್ಲದ ಯಾವ ಅನುಮಾನಕ್ಕೆ ಉಪಾಧಿಯನ್ನು, ಪ್ರತಿಪಕ್ಷಾನುಮಾನವನ್ನು ಹೇಳಲು ಏನು ಕಷ್ಟವಾದೀತು ? 'ಪರ್ವತೋ ವಹ್ನಿಮಾನ್ ಧೂಮಾತ್' ಎನ್ನುವ ಅನುಮಾನಕ್ಕೂ ಸಹ, 'ಪರ್ವತೇತರತ್ವ' ಎಂಬ ಉಪಾಧಿಯನ್ನು, 'ಪರ್ವತಃ ವಹ್ನ್ಯಭಾವವಾನ್ ಮಹಾನಸೇತರಧೂಮಾತ್' ಎಂದು ಪ್ರತಿಪಕ್ಷಾನುಮಾನವನ್ನೂ ಹೇಳಬಹುದು ಎಂದು ಭಾವ.

(ಪ್ರಮಾಣಾಂತರಗಳ) ಸಹಾಯವಿದ್ದಲ್ಲಿ ಸತ್ಪ್ರತಿಪಕ್ಷಾನುಮಾನವನ್ನು ನಿರಾಕರಿಸುವುದರಿಂದ, ಉಪಾಧಿಗಾದರೋ ಸಾಧ್ಯವ್ಯಾಪಕತ್ವದ ಭಂಗವನ್ನು ಹೇಳುವುದರಿಂದ ನಿರಾಕರಣವು ಶಕ್ಯವಿದೆ[1]. ಅದಿಲ್ಲದ ಪಕ್ಷದಲ್ಲಿ ಸತ್ಪ್ರತಿಪಕ್ಷಾನುಮಾನಾದಿಗಳು ಅಪರಿಹಾರ್ಯ[2].

**ಸ್ವತಂತ್ರಾನುಮಾನವು ಪ್ರಮಾಣವಾಗಲಾರದು**

**'ವಿಮತಂ ಸಕರ್ತೃಕಂ, ಕಾರ್ಯತ್ವಾತ್ ಘಟವತ್' ಇತ್ಯುಕ್ತೇ 'ವಿಮತಂ ವಿಕರ್ತೃಕಂ, ಅಸ್ಮತ್ಸಮ್ಮತಕರ್ತೃರಹಿತತ್ವಾದಾತ್ಮವತ್' ಇತ್ಯನುಮಾನವಿರೋಧಾತ್ ।**

'ವಿವಾದಕ್ಕೆ ವಿಷಯವಾದದ್ದು ಕರ್ತೃವನ್ನು ಹೊಂದಿದೆ, ಕಾರ್ಯವಾದುದರಿಂದ ಘಟದಂತೆ' ಎಂದು ಹೇಳಿದಲ್ಲಿ 'ವಿವಾದಕ್ಕೆ ವಿಷಯವಾದದ್ದು ಕರ್ತೃವನ್ನು ಹೊಂದಿಲ್ಲ, ನಮಗೆ ಸಂಮತನಾದ ಕರ್ತೃವೇ ಇಲ್ಲದಿರುವುದರಿಂದ ಆತ್ಮನಂತೆ' ಎಂಬ ಅನುಮಾನದ ವಿರೋಧವು ಇರುವುದರಿಂದ.

**ಇತಃಪರಂ 'ಪ್ರತ್ಯಕ್ಷಾನುಮಾನಸಿದ್ಧತ್ವೇ ಚ' ಇತ್ಯತಃ ಪೂರ್ವಂ ವಾಕ್ಯದ್ವಯಂ ಮೂಲಕೋಶೇಷ್ವದರ್ಶನಾತ್ ಪ್ರಕ್ಷಿಪ್ತಮಿತ್ಯಾಹುಃ । ತಥಾಽಪಿ ಗಂಗಾಜಲಾನುಪ್ರವಿಷ್ಟಕ್ಷುದ್ರನದೀಜಲಸ್ಯೇವ ತಸ್ಯಾಪಿ ಉಪಾದೇಯತ್ವಾದ್ ವ್ಯಾಖ್ಯಾನಂ ಕ್ರಿಯತೇ ।**

ಇಲ್ಲಿಂದ ಮುಂದಿನ 'ಪ್ರತ್ಯಕ್ಷಾನುಮಾನಸಿದ್ಧತ್ವೇ ಚ' ಎನ್ನುವ (ಮೂಲ ವಾಕ್ಯದ) ಮೊದಲಿನ ಎರಡು ವಾಕ್ಯಗಳು ಮೂಲಕೋಶಗಳಲ್ಲಿ ಕಾಣಸಿಗದ

---

1. 'ಪರ್ವತೋ ವಹ್ನಿಮಾನ್ ಧೂಮಾತ್' ಎನ್ನುವ ಸದನುಮಾನಕ್ಕೆ 'ಪರ್ವತೇತರತ್ವ' ಎಂಬ ಉಪಾಧಿಯನ್ನು ಪ್ರಸ್ತಾಪಿಸಿದಲ್ಲಿ 'ಪರ್ವತದಲ್ಲಿ ಉಪಾಧಿಯು ಇಲ್ಲ, ಪ್ರಮಾಣಪ್ರಮಿತವಾದ ವಹ್ನಿಯು ಇದೆ, ಹಾಗಾಗಿ ಉಪಾಧಿಯು ಸಾಧ್ಯಾವ್ಯಾಪಕವಾಯಿತು' ಎಂದು ಪ್ರತಿಪಾದಿಸುವನು. ಎಂದು ಭಾವ.

2. ಇತರಪ್ರಮಾಣದ ಸಂವಾದವಿಲ್ಲದ ಯಾವುದೇ ಅನುಮಾನಗಳಿಗೆ ಸತ್ಪ್ರತಿಪಕ್ಷಾದಿ ದೋಷಗಳು ಅನಿವಾರ್ಯ. ಘಟಃ ಸಕರ್ತೃಕಃ ಕಾರ್ಯತ್ವಾತ್ ಇತ್ಯಾದಿ ಸದನುಮಾನಗಳಿಗೂ ಪ್ರತ್ಯನುಮಾನವನ್ನು ಹೇಳಲು ಶಕ್ಯವಿದೆ ಎಂದು ಭಾವ.

ಪ್ರಯುಕ್ತ ಪ್ರಕ್ಷಿಪ್ತ ಎಂದು ಹೇಳಿರುವರು. ಆದರೂ ಗಂಗಾನದಿಯನ್ನು ಸೇರಿದ ಉಪನದಿಯ ಜಲದಂತೆ, ಅದೂ ಸ್ವೀಕರಣೀಯವಾದುದರಿಂದ ವ್ಯಾಖ್ಯಾನವನ್ನು ಮಾಡಲಾಗುವುದು.

**'ಕೇವಲಾನುಮಾನಸ್ಯ ಪ್ರತಿಪಕ್ಷಾನುಮಾನವಿರೋಧಾದ್'** ಇತ್ಯುಕ್ತಂ ಪ್ರಪಞ್ಚಯತಿ- **'ವಿಮತಮ್'** ಇತಿ । **'ಸರ್ವಂ ಸಕರ್ತೃಕಮ್'** ಇತ್ಯುಕ್ತೇ ಗಗನಾದೌ ಬಾಧೋ ಘಟಾದೌ ಸಿದ್ಧಸಾಧನಂ ಚ ಸ್ಯಾತ್ । ತನ್ನಿವೃತ್ತ್ಯರ್ಥಂ **'ವಿಮತಮ್'** ಇತ್ಯುಕ್ತಮ್ । ತೇನ 'ವಿಕರ್ತೃಕತ್ವೇನ ಸಕರ್ತೃಕತ್ವೇನ ವಾ ಯತ್ರ ವಾದಿಪ್ರತಿವಾದಿನೋಃ ಸಮ್ಮತಿರ್ಗಗನಾದೌ ಘಟಾದೌ ಚ ತತೋಽನ್ಯದ್ ಅಙ್ಕುರಾದೀತ್ಯರ್ಥಃ । **ಸಕರ್ತೃಕಮ್-** ಉಪಾದಾನಾದಿವಿಷಯಕಬುದ್ಧಿ-ಮತ್ಪೂರ್ವಕಮ್ । ತಥಾ ಚ 'ಜೀವಾನಾಮೇವ ಅದೃಷ್ಟದ್ವಾರಾಙ್ಕುರಾದಿ-ಕರ್ತೃತ್ವೋಪಪತ್ತೇಃ ಸಿದ್ಧಸಾಧನತ್ವಮರ್ಥಾನ್ತರತಾ ವಾ' ಇತಿ ನಿರಸ್ತಮ್ । **ಕಾರ್ಯತ್ವಾತ್-** ಅಭೂತ್ವಾಭಾವಿತ್ವಾತ್ ।

'ತತ್ರ ತಸ್ಯೇವ' ಇತಿ ಲಕ್ಷಣಸ್ಯ ಪ್ರಾಯಿಕತ್ವೇನಾಭಿಯುಕ್ತೈರ್ವ್ಯಾಖ್ಯಾತ-ತ್ವಾದ್ **'ಘಟವದ್'** ಇತಿ ಯುಜ್ಯತೇ । **ಇತ್ಯುಕ್ತೇ-** ಅನುಮಿತೇ ಸತಿ । **'ಈಶ್ವರ'** ಇತಿ ಶೇಷಃ । ನಹೀಶ್ವರಾದೃತೇಽಙ್ಕುರಾದೀನಾಂ ಕರ್ತೋಪಪದ್ಯತೇ । ಏವಮೇವ **'ವಿಮತಂ ವಿಕರ್ತೃಕಮ್'** ಇತ್ಯೇತದಪಿ ವ್ಯಾಖ್ಯೇಯಮ್ ।

'ಕೇವಲಾನುಮಾನವು (ಪ್ರತ್ಯಕ್ಷಾಗಮಗಳಿಂದ ಸಹಕೃತವಾಗದ ಅನುಮಾನವು) ಪ್ರತಿಪಕ್ಷಾನುಮಾನದ ವಿರೋಧವನ್ನು ಹೊಂದಿರುವುದರಿಂದ' ಎಂದು ಹೇಳಿದ್ದನ್ನು ಸ್ಫುಟಗೊಳಿಸುವರು **'ವಿಮತಂ'** ಎಂದು. 'ಸರ್ವಂ ಸಕರ್ತೃಕಂ' ಎಂದು ಹೇಳಿದಲ್ಲಿ ಗಗನಾದಿಗಳಲ್ಲಿ ಬಾಧ, ಘಟಾದಿಗಳಲ್ಲಿ ಸಿದ್ಧಸಾಧನತ್ವವು ಪ್ರಾಪ್ತವಾದೀತು[1]. ಅದರ ಪರಿಹಾರಕ್ಕಾಗಿ **'ವಿಮತಂ'** ಎಂದು

---

1. 'ವಿಮತಂ ಸಕರ್ತೃಕಂ......' ಎನ್ನುವ ಅನುಮಾನದಲ್ಲಿ ಪಕ್ಷವನ್ನು 'ವಿಮತಂ' ಎಂದು ನಿರ್ದೇಶಿಸಲಾಗಿದೆ. ಅದರ ಬದಲಾಗಿ 'ಸರ್ವಂ' ಎಂದು ಪಕ್ಷವನ್ನು ನಿರ್ದೇಶಿಸಿದಲ್ಲಿ ಸರ್ವಂ ಎಂಬ ಪಕ್ಷದಲ್ಲಿ ಕಾರ್ಯವಲ್ಲದ ನಿತ್ಯವಾದ ಗಗನಾದಿಗಳು ಮತ್ತು ಕಾರ್ಯವಾದ ಅನಿತ್ಯವಾದ ಘಟಾದಿಗಳು ಸೇರಿರುವುದು. ನಿತ್ಯವಾದ ಗಗನಾದಿಗಳಲ್ಲಿ ಸಕರ್ತೃಕತ್ವವು ಇಲ್ಲದಿರುವುದರಿಂದ ಬಾಧ, ಇನ್ನು ಅನಿತ್ಯವಾದ ಘಟಾದಿಗಳಲ್ಲಿ ಸಕರ್ತೃಕತ್ವವು ಸಿದ್ಧವಾದುದರಿಂದ ಸಿದ್ಧಸಾಧನ ಎಂದು ಭಾವ.

ಹೇಳಲಾಗಿದೆ. ಆದುದರಿಂದ ವಿಕರ್ತೃಕ-ಸಕರ್ತೃಕ ಎಂದು ವಾದಿ-ಪ್ರತಿವಾದಿಗಳಿಗೆ (ವಾದಕ್ಕೆ) ವಿಷಯವಾಗದ ಗಗನ-ಘಟಾದಿಗಳಿಂದ ಭಿನ್ನವಾದ ಅಂಕುರಾದಿಗಳು ಎಂದು ಅರ್ಥವು (ಪ್ರಾಪ್ತವಾಗುವುದು). **ಸಕರ್ತೃಕಂ-** ಉಪಾದಾನಾದಿ ವಿಷಯಗಳ ಬುದ್ಧಿಯನ್ನು ಹೊಂದಿರುವವ ಎಂದು (ಕರ್ತೃವನ್ನು ಪ್ರಕೃತ ನಿರೀಕ್ಷಿಸಲಾಗಿದೆ ) ಹಾಗಾದುದರಿಂದ, ಜೀವಾದಿಗಳಿಗೆ ಅದೃಷ್ಟದ್ವಾರಾ ಅಂಕುರಾದಿಕರ್ತೃತ್ವವು ಇರುವುದರಿಂದ (ಅನುಮಾನಕ್ಕೆ) ಸಿದ್ಧಸಾಧನತ್ವವೋ ಅರ್ಥಾಂತರತ್ವವೋ ನಿರಾಕೃತವಾಯಿತು[1]. **ಕಾರ್ಯತ್ವಾತ್-** ಹಿಂದೆ ಇಲ್ಲದ ಅಸ್ತಿತ್ವವನ್ನು ಹೊಂದಿರುವುದರಿಂದ[2].

'ತತ್ರ ತಸ್ಯೇವ' (ಪಾ.ಸೂ.5.1.116.) ಎಂಬ ಸೂತ್ರದ (ನಿಯಮವು) ಪ್ರಾಯಿಕವಾದುದರಿಂದ, (ಶಬ್ದಶಾಸ್ತ್ರವನ್ನು) ಅರಿತವರಿಂದ (ಪ್ರಥಮಾ ವಿಭಕ್ತಿಯೊಡನೆ 'ವತ್' ಪ್ರತ್ಯಯವು) ಪ್ರಯುಕ್ತವಾದುದರಿಂದ 'ಘಟವತ್' ಎನ್ನುವ (ಪ್ರಯೋಗವು) ಯೋಗ್ಯವಾಗಿದೆ[3]. **ಇತ್ಯುಕ್ತೇ-** ಅನುಮಾನಿಸಿದಲ್ಲಿ.

1. 'ಅಂಕುರಾದಿಗಳು ಜೀವಿಗಳ ಅದೃಷ್ಟದಿಂದಲೂ ಜನ್ಯವಾಗಿದೆ' ಎನ್ನುವುದು ಶಾಸ್ತ್ರಗಳಲ್ಲಿ ಉಪಪಾದಿತವಾಗಿದೆ. ತನ್ನಿಮಿತ್ತ ಜೀವರೂ ಸಹ ಒಂದು ಹಂತದಲ್ಲಿ ಕರ್ತೃಗಳಾಗುವವರು ಎಂದು ಎಲ್ಲರಿಂದಲೂ ಒಪ್ಪಿತವಾದ ವಿಷಯ. ಇಂತಹ ಕರ್ತೃತ್ವವನ್ನು ಸಾಧಿಸಿದಲ್ಲಿ 'ಜೀವನು ಕರ್ತಾ ಎನ್ನುವುದು ಸಿದ್ಧವಾದುದರಿಂದ ಸಿದ್ಧಸಾಧನತ್ವರೂಪ ದೋಷವು ಪ್ರಾಪ್ತವಾಗುವುದು. ಸಕರ್ತೃಕತ್ವದಿಂದ ಈಶ್ವರನನ್ನು ಸಾಧಿಸಬೇಕು ಎಂದು ಪ್ರವೃತ್ತವಾದ ಈ ಅನುಮಾನದಿಂದ ಈಶ್ವರಕರ್ತೃತ್ವವು ಸಿದ್ಧವಾಗದೇ, ಅದೃಷ್ಟದ್ವಾರಾ ಜೀವಕರ್ತೃತ್ವವು ಸಿದ್ಧವಾದಲ್ಲಿ ಅರ್ಥಾಂತರತಾದೋಷ. ಬಯಸಿದ ಸಾಧ್ಯದ ಸಿದ್ಧಿಯಾಗದೆ ಮತ್ತೊಂದು ಪದಾರ್ಥದ ಸಿದ್ಧಿಯ ಮುಖಾಂತರ ಸಾಧ್ಯವು ಪರ್ಯವಸಾನಗೊಂಡಲ್ಲಿ ಅರ್ಥಾಂತರತ್ವ ಎಂಬ ದೋಷವೂ ನಿರಾಕೃತವಾಯಿತು ಎಂದು ಭಾವ.

2. ಪ್ರಕೃತಾನುಮಾನದ ಹೇತುವಾದ ಕಾರ್ಯತ್ವಂ ಅಂದರೆ 'ಕೃತಿಯಿಂದ ಜನ್ಯ' ಎಂಬ ಅರ್ಥವು ಪ್ರಸಿದ್ಧ. ಕ್ಷಿತ್ಯಂಕುರಾದಿಗಳು 'ಪ್ರಸಿದ್ಧ ವ್ಯಕ್ತಿಯ ಕೃತಿಯಿಂದ ಜನ್ಯವಾದುದು ಎನ್ನುವುದು' ಅಸಿದ್ಧ. ಇನ್ನು 'ಈಶ್ವರಕೃತಿಜನ್ಯ' ಎಂದು ಅಭಿಮತಿಸಬೇಕು. ಆದರೆ ಈ ಅನುಮಾನದ ಮೊದಲು ಇನ್ನೂ ಈಶ್ವರನು ಸಿದ್ಧನಾಗದಿರುವುದರಿಂದ ಹೇತುವು ಸಂದಿಗ್ಧಾಸಿದ್ಧ ವಾಗುವುದು ಎಂದು, ಹಾಗಾಗಿ ಹೇತುವನ್ನು 'ಅಭೂತ್ವಾಭಾವಿತ್ವಂ' ಎಂದು ನಿರ್ವಚಿಸಲಾಗಿದೆ.

3. 'ತತ್ರ ತಸ್ಯೇವ' ಎನ್ನುವ ವ್ಯಾಕರಣ ಸೂತ್ರವು 'ಇವಾರ್ಥಕವಾದ 'ವತ್' ಪ್ರತ್ಯಯವು ಸಪ್ತಮೀವಿಭಕ್ತ್ಯಂತವಾದ ಅಥವಾ ಷಷ್ಠೀವಿಭಕ್ತ್ಯಂತವಾದ ಶಬ್ದಗಳೊಡನೆ ಸಮಾಸವನ್ನು

ಪುಟ 356ರಲ್ಲಿ........

'ಈಶ್ವರ' ಎಂದು ಶೇಷಪೂರಣಮಾಡಿಕೊಳ್ಳುವುದು. ಈಶ್ವರನ ಹೊರತಾಗಿ ಅಂಕುರಾದಿಗಳಿಗೆ (ಬೇರೇ) ಕರ್ತೃವು ಇರಲಾರರು. ಇದೇರೀತಿಯಲ್ಲಿ **'ವಿಮತಂ ವಿಕರ್ತೃಕಂ'** ಎನ್ನುವುದನ್ನು (ಎನ್ನುವ ಅನುಮಾನವನ್ನು) ವ್ಯಾಖ್ಯಾನಿಸಬೇಕು.

**ಈಶ್ವರಸಾಧಕಾನುಮಾನವು ಉಪಾಧಿದೋಷಗ್ರಸ್ಥ**

**ನನು 'ಅಸ್ಮತ್ಸಮ್ಮತಕರ್ತೃರಹಿತತ್ವಾತ್' ಇತ್ಯತ್ರ ಅಸ್ಮತ್ಸಮ್ಮತತ್ವಂ, ಕರ್ತೃರಹಿತತ್ವಸ್ಯ ವಾ ವಿಶೇಷಣಂ ಕರ್ತುರ್ವಾ । ನಾಽದ್ಯಃ, ವ್ಯರ್ಥತ್ವಾತ್ । ತತ್ತ್ಯಾಗೇ ಸಾಧ್ಯಾವಿಶಿಷ್ಟತ್ವಾತ್ । ತತ್ಪರಿಹಾರಾರ್ಥಮೇವ ವಿಶೇಷಣಮಿತಿ ಚೇನ್ನ । ಸರ್ವತ್ರ ಸಾಧ್ಯಾವಿಶಿಷ್ಟತ್ವೇ ತತ್ಸಮ್ಭವಾತ್ । ದ್ವಿತೀಯೇ ಕಿಂ ಕುಲಾಲಾದಿಃ ಕರ್ತೃವಿಶೇಷೋಽನೇನೋಚ್ಯತೇ ಶರೀರಾದಿಮಾನ್ ವಾ । ಆದ್ಯೇ ಅನೈಕಾನ್ತ್ಯಮ್, ಕುಲಾಲಾದಿಕರ್ತೃರಹಿತಸ್ಯಾಪಿ ಪಟಾದೇಃ ಕುವಿನ್ದಾದಿಕರ್ತೃಮತ್ತ್ವಾತ್ ।**

**ದ್ವಿತೀಯೇಽಪಿ ಕಿಂ ಶರೀರಾದಿರಹಿತಃ ಕರ್ತಾಙ್ಗೀಕ್ರಿಯತೇ ನ ವಾ । ಆದ್ಯೇ ತತ್ಕೃತೇ ವ್ಯಭಿಚಾರಃ । ದ್ವಿತೀಯೇ ಪುನಃ ವೈಯರ್ಥ್ಯಂ ಸಾಧ್ಯಾವಿಶಿಷ್ಟತಾ ಚ । ನ ಚ ಸಾಮಾನ್ಯವಿಶೇಷಾಭಾವೇನ ಭೇದಃ । ಶರೀರಾದಿರಹಿತಸ್ಯ ಕರ್ತುಃ ಅನಙ್ಗೀಕಾರೇ ಸಾಮಾನ್ಯಾನುಪಪತ್ತೇಃ । ಸಾಮಾನ್ಯಾಭಾವಸ್ಯ ವಿಶೇಷಾ-**

---

...... ಪುಟ 355 ರಿಂದ

ಹೊಂದುವುದು' ಎಂದು ತಿಳಿಸುವುದು. ಆದರೆ ದೃಷ್ಟಾಂತ-ದಾರ್ಷ್ಟಾಂತಿಕ ವಾಚಕ ಶಬ್ದಗಳು ಒಂದೇ ವಿಭಕ್ತ್ಯಂತವಾಗಬೇಕು. ಪ್ರಕೃತದಲ್ಲಿ ದಾರ್ಷ್ಟಾಂತಿಕವಾದ 'ವಿಮತಂ' ಎನ್ನುವುದು ಪ್ರಥಮಾಂತವಾಗಿರುವುದರಿಂದ ದೃಷ್ಟಾಂತವಾದ 'ಘಟವತ್' ಎನ್ನುವಲ್ಲಿನ ಘಟಶಬ್ದವು ಪ್ರಥಮಾವಿಭಕ್ತ್ಯಂತವಾಗಬೇಕು. ಹಾಗಾಗಿ ಘಟಶಬ್ದವು ಷಷ್ಠೀ ಅಥವಾ ಸಪ್ತಮೀ ವಿಭಕ್ತ್ಯಂತವಾಗವುದು ಅಶಕ್ಯವಾದುದರಿಂದ ಘಟವತ್ ಎಂಬ ಈ ಪ್ರಯೋಗವು ಅಶಾಸ್ತ್ರೀಯವಾಗಲಿಲ್ಲವೆ? ಎನ್ನುವ ಸಂದೇಹವನ್ನು ಪರಿಹರಿಸುವರು. '......ಪುಂವದ್ ಗಾಲವಸ್ಯ' 'ಸ್ಥಾನಿವದ್ ಆದೇಶೋ...' ಇತ್ಯಾದಿಯಾಗಿ ವ್ಯಾಕರಣಶಾಸ್ತ್ರಜ್ಞರ ಪ್ರಯೋಗಗಳೇ ಕಂಡಿರುವುದರಿಂದ ಪ್ರಥಮಾವಿಭಕ್ತ್ಯಂತ ಶಬ್ದದೊಡನೆಯೂ 'ವತ್' ಶಬ್ದದ ಸಂಯೋಜನೆಯು ಯೋಗ್ಯವಾಗಿದೆ. 'ತತ್ರತಸ್ಯೇವ' ಎನ್ನುವುದು ಸಾಪವಾದ ನಿಯಮ ಎಂದು ತಿಳಿಯುವುದು, ಎಂದು ಭಾವ.

**ಭಾವೇನ ಸಾಧನಾಯೋಗಾಚ್ಚ । ಉಚ್ಯತೇ- 'ಕರ್ತ್ರ್ಯಮತ್ತ್ವೇನಾಸ್ಮಾಕಮ್ ಅಸಮ್ಮತತ್ವಾದ್' ಇತ್ಯಯಮರ್ಥೋಽತ್ರಾಭಿಮತಃ । ನಚೈವಂ ವೈಯರ್ಥ್ಯಾದಿದೋಷೋಽಸ್ತಿ । 'ಧೂಮಾನುಮಾನಾದಾವಪ್ಯೇವಂ ಸತ್ಪ್ರತಿಪಕ್ಷತಾಪ್ರಸಙ್ಗಃ' ಇತಿ ಚೇನ್ನ । ಅನುಕೂಲಪ್ರಮಾಣವಿರೋಧೇನ ಬಾಧಿತತ್ವಾತ್ ।**

ಹಾಗಾದಲ್ಲಿ, 'ಅಸ್ಮತ್‌ಸಮ್ಮತಕರ್ತೃರಹಿತತ್ವಾತ್' ಎನ್ನುವಲ್ಲಿ 'ಅಸ್ಮತ್‌ಸಮ್ಮತತ್ವ' ಎನ್ನುವ ವಿಶೇಷಣವು ಕರ್ತೃರಹಿತತ್ವಕ್ಕೋ (ಆಗ 'ನಮಗೆ ಕರ್ತೃವು ಸಮ್ಮತನಾಗದಿರುವುದರಿಂದ' ಎಂಬ ಭಾವವು ಪ್ರಾಪ್ತವಾಗುವುದು) ಅಥವಾ ಕರ್ತೃವಿಗೋ (ಆಗ 'ನಮಗೆ ಸಮ್ಮತನಾದ ಕರ್ತೃವು ಇಲ್ಲದಿರುವುದ-ರಿಂದ' ಎಂಬ ಭಾವವು ಪ್ರಾಪ್ತವಾಗುವುದು)? ಮೊದಲ ಪಕ್ಷವಾಗದು, (ವಿಶೇಷಣವು) ವ್ಯರ್ಥವಾದುದರಿಂದ, ಅದನ್ನು (ವಿಶೇಷಣವನ್ನು) ಪರಿತ್ಯಜಿಸಿದಲ್ಲಿ ಸಾಧ್ಯಾವಿಶಿಷ್ಟತ್ವ ದೋಷವು ಬರುವದರಿಂದ[1]. ಆ ದೋಷವನ್ನು

---

1. 'ವಿಮತಂ ಅಕರ್ತೃಕಂ ಅಸ್ಮತ್‌ಸಮ್ಮತಕರ್ತೃರಹಿತತ್ವಾತ್' ಎನ್ನುವದು ಈಶ್ವರ-ಸಾಧಕಾನುಮಾನಕ್ಕೆ ಪ್ರತಿಪಕ್ಷಾನುಮಾನ ಎಂದು ಹೇಳಲಾಗಿದೆ. ಈ ಅನುಮಾನವಲ್ಲಿನ ಹೇತುವಿನಲ್ಲಿ 'ಅಸ್ಮತ್‌ಸಮ್ಮತ' ಎನ್ನುವ ವಿಶೇಷಣವನ್ನು ವಿವಕ್ಷಿಸಲಾಗಿದೆ. ಹೇತುವಿನಲ್ಲಿ ಘಟಿತವಾದ ವಿಶೇಷಣವು ವ್ಯಭಿಚಾರನಿವಾರಕವಾಗಿರಬೇಕು ಎಂಬುವುದು ನ್ಯಾಯಶಾಸ್ತ್ರದ ನಿಯಮ. ಪ್ರಕೃತ ಆ ವಿಶೇಷಣವನ್ನು 'ರಹಿತತ್ವ' ಎನ್ನುವಲ್ಲಿ ಅನ್ವಯಿಸಲಾಗುವುದೋ ಅಥವಾ 'ಕರ್ತೃ' ಎನ್ನುವಲ್ಲಿ ಅನ್ವಯಿಸಲಾಗುವುದೋ? ರಾಹಿತ್ಯದಲ್ಲಿ ಈ ವಿಶೇಷಣವನ್ನು ಅನ್ವಯಿಸಲಾಗದು ವ್ಯರ್ಥವಾದುದರಿಂದ. ಏಕೆಂದರೆ- 'ಅಸ್ಮತ್‌ಸಮ್ಮತ ಕರ್ತೃರಹಿತತ್ವಾತ್' ಎಂದು ಹೇತುವನ್ನು ವಿವಕ್ಷಿಸಿದಂತಾಯಿತು. ಯಾರು ಈ ಪ್ರತಿಪಕ್ಷಾನುಮಾನವನ್ನು ಪ್ರಯೋಗಿಸುವರೋ ಅವರ ಅಭಿಮತದಂತೆ ಅಸ್ಮತ್‌ಸಂಮತಕರ್ತೃ ಎಂದರೆ ಶರೀರಸಹಿತನಾದ ಕರ್ತೃ ಎಂದು. ಆದರೆ ಕರ್ತೃವಿನಲ್ಲಿ ಶರೀರಸಹಿತ ಮತ್ತು ಶರೀರರಹಿತ ಎಂದು ಎರಡು ಬಗೆ ಇರುವುದಿಲ್ಲ. ಕರ್ತೃಗಳೆಲ್ಲ ಶರೀರಸಹಿತರೇ ಆಗಿರುತ್ತಾರೆ. ಶರೀರರಹಿತ ಕರ್ತೃವನ್ನು ಒಪ್ಪಿದರೆ ಅಂತಹ ಕರ್ತೃವನ್ನು ವ್ಯಾವೃತ್ತಿಗೊಳಿಸಲು ಹೇತುವಿನಲ್ಲಿ ವಿಶೇಷಣವು ಸಾರ್ಥಕವಾಗುತ್ತಿತ್ತು. ಆದುದರಿಂದ 'ಅಸ್ಮತ್‌ಸಮ್ಮತ' ಎನ್ನುವ ವಿಶೇಷಣವು ವ್ಯರ್ಥ ಎಂದು ಭಾವ. ಇನ್ನು ವಿಶೇಷಣವನ್ನು ಪರಿತ್ಯಜಿಸಿದಲ್ಲಿ 'ಅಕರ್ತೃಕಂ ಕರ್ತೃರಹಿತತ್ವಾತ್. ಎಂದು ಅನುಮಾನವನ್ನು ಹೇಳಿದಂತಾಗುವುದು. ಸಾಧ್ಯ ಮತ್ತು ಸಾಧನ ಒಂದೇ ಆಗುವುದು, ಇದನ್ನು ಶಾಸ್ತ್ರದಲ್ಲಿ 'ಸಾಧ್ಯಾವಿಶಿಷ್ಟತಾ' ಎಂಬ ಅನುಮಾನದ ದೋಷ ಎಂದು ಪರಿಗಣಿಸಲಾಗಿದೆ ಎಂದು ಭಾವ.

(ಸಾಧ್ಯಾವಿಶಿಷ್ಟತಾ ದೋಷವನ್ನು) ಪರಿಹರಿಸುವ ನಿಮಿತ್ತವಾಗಿಯೇ (ಈ) ವಿಶೇಷಣ ಎಂದೆನ್ನಲಾಗದು. ಎಲ್ಲಡೆಯೂ ಸಾಧ್ಯಾವಿಶಿಷ್ಟತ್ವದಲ್ಲಿ ಅದು (ಈ ರೀತಿಯಲ್ಲಿ ವಿಶೇಷಣವನ್ನು ನೀಡಿ ಪರಿಹರಿಸಿಕೊಳ್ಳುವ) ಸಂಭಾವನೆ ಇರುವದರಿಂದ[1].

ಎರಡನೆಯಪಕ್ಷದಲ್ಲಿ (ವಿಶೇಷಣವನ್ನು ಕರ್ತೃವಿನಲ್ಲಿ ಅನ್ವಯಿಸಲಾಗುವುದು ಎನ್ನುವ ಪಕ್ಷದಲ್ಲಿ) ಕುಲಾಲಾದಿ ಕರ್ತೃವಿಶೇಷವನ್ನು ವಿವಕ್ಷಿಸಲಾಗುವುದೋ ಅಥವಾ ಶರೀರಾದಿಗಳಿಂದ ಯುಕ್ತನಾದವನನ್ನೋ? ಮೊದಲ ಪಕ್ಷದಲ್ಲಿ (ಕುಲಾಲಾದಿ ವಿಶೇಷಕರ್ತೃವನ್ನು ಒಪ್ಪಿದಲ್ಲಿ) ವ್ಯಭಿಚಾರವು. ಕುಲಾಲಾದಿ ವಿಶೇಷ ಕರ್ತೃರಹಿತವಾದರೂ ಪಟಾದಿಗಳಿಗೆ ನೇಕಾರಾದಿಗಳು ಕರ್ತೃಗಳಾದುದರಿಂದ[2]. ಎರಡನೆಯಪಕ್ಷದಲ್ಲೂ ಸಹ (ಶರೀರಾದಿಗಳಿಂದ ಯುಕ್ತನಾದವನು ಕರ್ತಾ ಎನ್ನುವದಾದಲ್ಲಿ) ಶರೀರಾದಿ ರಹಿತನಾದ ಕರ್ತೃವನ್ನು ಒಪ್ಪಿರುವಿರೋ ಇಲ್ಲವೋ? ಮೊದಲ ಪಕ್ಷದಲ್ಲಿ (ಒಪ್ಪಿರುವೆವು ಎಂಬ ಪಕ್ಷದಲ್ಲಿ) ಆತನ ರಚನೆಯಲ್ಲಿ ವ್ಯಭಿಚಾರ[3]. ಎರಡನೆಯಪಕ್ಷದಲ್ಲಿ (ಶರೀರಾದಿ ರಹಿತನನ್ನು ಕರ್ತೃ ಎಂದು ಒಪ್ಪಿಲ್ಲ ಎನ್ನುವ ಪಕ್ಷದಲ್ಲಿ) ಪುನಃ ವಿಶೇಷಣವು ವ್ಯರ್ಥ, (ವಿಶೇಷಣವನ್ನು ಪರಿತ್ಯಜಿಸಿದಲ್ಲಿ) ಸಾಧ್ಯಾವಿಶಿಷ್ಟತಾ (ದೋಷವೂ) ಸಹ.

1. ಶಾಸ್ತ್ರದಲ್ಲಿ ಸಾಧ್ಯಾವಿಶಿಷ್ಟತಾ ದೋಷದ ಪರಿಹಾರಕ್ಕಾಗಿ ಹೇತುವಿನಲ್ಲಿ ವಿಶೇಷಣವನ್ನು ಅನ್ವಯಿಸುವ ಪದ್ಧತಿಯು ಇಲ್ಲ. ಸಾಧ್ಯಾವಿಶಿಷ್ಟತಾ ದೋಷಯುಕ್ತವಾದ ಅನುಮಾನ ಎಂದು ಎಲ್ಲರಿಂದಲೂ ಒಪ್ಪಿತವಾದ 'ಪರ್ವತಃ ನಿರಗ್ನಿಮಾನ್ ಅಗ್ನ್ಯಭಾವಾತ್' ಎನ್ನುವ ಈ ಅನುಮಾನವನ್ನೂ ಸಹ 'ಪರ್ವತಃ ನಿರಗ್ನಿಮಾನ್ ಅಸ್ಮತ್‌ಸಮ್ಮತಾಗ್ನ್ಯಭಾವಾತ್' ಎಂದೂ ಅನುಮಾನಿಸಲು ಅವಕಾಶವಿರುವುದರಿಂದ, ಆಗ ಹೇತು ಸಾಧ್ಯಗಳು ಭಿನ್ನವಾದವು ಎಂದು, ಎಲ್ಲೂ 'ಸಾಧ್ಯಾವಿಶಿಷ್ಟತಾ' ಎನ್ನುವ ದೋಷವೇ ಇಲ್ಲದ ಸಂದರ್ಭವು ಒದಗೀತೆಂದು ಭಾವ.

2. 'ಕ್ಷಿತ್ಯಂಕುರಾದಿಕಂ ವಿಕರ್ತೃಕಂ ಅಸ್ಮತ್‌ಸಮ್ಮತಕುಲಾಲಾದಿಕರ್ತೃರಹಿತತ್ವಾತ್' ಎಂದು ಅನುಮಾನಿಸಿದಂತಾಗುವುದು. ಕುಲಾಲಾದಿ ಕರ್ತೃರಹಿತತ್ವವು ಪಟದಲ್ಲಿದೆ, ಆದರೆ ಅಲ್ಲಿ ಅಕರ್ತೃತ್ವವು ಇಲ್ಲ ಎಂದು ಈ ಅನುಮಾನಕ್ಕೆ ವ್ಯಭಿಚಾರರೂಪ ದೋಷವು ಪ್ರಾಪ್ತವಾಗುವುದು ಎಂದು ಭಾವ.

3. 'ಕ್ಷಿತ್ಯಂಕುರಾದಿಕಂ ಅಕರ್ತೃಕಂ ಶರೀರಾದಿಸಹಿತವಿಶೇಷಕರ್ತೃರಹಿತತ್ವಾತ್' ಎಂದು ಅನುಮಾನಿಸಿದಂತಾಗುವುದು. ಶರೀರಾದಿರಹಿತನಾದ ಕರ್ತೃವನ್ನು ಒಪ್ಪಿರುವುದರಿಂದ ಆತನ ನಿರ್ಮಿತಿಯಲ್ಲಿ ಈ ಹೇತುವು ಇದೆ, ತನ್ನಿಮಿತ್ತ ವ್ಯಭಿಚರಿತವಾಯಿತು ಎಂದು ಭಾವ.

ಸಾಮಾನ್ಯ ವಿಶೇಷಭಾವದಿಂದ (ಸಾಧ್ಯಹೇತುಗಳಿಗೆ) ಭೇದವಿದೆ ಎಂದೆನ್ನಲಾಗದು[1]. ಶರೀರಾದಿ ರಹಿತನಾದ ಕರ್ತೃವನ್ನು ಒಪ್ಪದಿದ್ದಲ್ಲಿ ಸಾಮಾನ್ಯವೇ ಅನುಪಪನ್ನವಾಗುವುದರಿಂದ[2]. ಮತ್ತೂ ಸಹ ವಿಶೇಷಾಭಾವ-ದಿಂದ ಸಾಮಾನ್ಯಾಭಾವವನ್ನು ಸಾಧಿಸಲೂ ಶಕ್ಯವಿಲ್ಲ[3]. ಉತ್ತರಿಸಲಾಗುವುದು-(ಪ್ರಕೃತ ಸಾಧ್ಯವನ್ನು) 'ಕರ್ತೃವೆಂದು ನಮಗೆ ಸಮ್ಮತನಾಗದಿರುವುದರಿಂದ' ಎಂದು ಅರ್ಥವು ಅಭಿಪ್ರೇತವಾಗಿದೆ. ಹಾಗಾದಲ್ಲಿ ವೈಯರ್ಥ್ಯಾದಿ ದೋಷಗಳಿಲ್ಲ. ಧೂಮಾನುಮಾನದಲ್ಲೂ ಈ ರೀತಿಯಾಗಿ ಸತ್ಪ್ರತಿಪಕ್ಷವನ್ನು ಹೇಳುವ ಸಂಭವವಿದೆ ಎಂದೆನ್ನಲಾಗದು. ಅನುಕೂಲತರ್ಕರೂಪ ಪ್ರಮಾಣದ ವಿರೋಧದಿಂದ (ಸತ್ಪ್ರತಿಪಕ್ಷಾನುಮಾನವು) ಬಾಧಿತವಾಗುವುದರಿಂದ[4].

---

1. ಪ್ರಕೃತದಲ್ಲಿ ಅಕರ್ತೃಕತ್ವ ಎಂಬುವುದು ಸಾಧ್ಯ, ಕರ್ತ್ರರಾಹಿತ್ಯವು ಹೇತುವು . ಆದರೂ ಸಾಧ್ಯಾವಿಶಿಷ್ಟತ್ವವು ಇಲ್ಲ. ಪ್ರಕೃತ ಶರೀರಾದಿಸಹಿತಕರ್ತೃಕತ್ವಾಭಾವ ಮತ್ತು ಶರೀರಾದಿ-ರಹಿತಕರ್ತೃಕತ್ವಾಭಾವ, ಈ ಎರಡರಲ್ಲಿ ಇರಬಹುದಾದ ಸಾಮಾನ್ಯವಾದ ಕರ್ತೃತ್ವಾಭಾವ-ವನ್ನು-ಅಕರ್ತೃಕತ್ವವನ್ನು ಸಾಧ್ಯತ್ವೇನ ವಿವಕ್ಷಿಸಲಾಗಿದೆ. ಶರಿರಸಹಿತಕರ್ತೃರಾಹಿತ್ಯ ಎಂಬ ವಿಶೇಷಾಭಾವವನ್ನು ಹೇತುತ್ವೇನ ವಿವಕ್ಷಿಸಲಾಗಿದೆ. ಅಂದರೆ ವಿಶೇಷಾಭಾವದಿಂದ ಸಾಮಾನ್ಯಾಭಾವವನ್ನು ಊಹಿಸಲಾಗಿದೆ ಎಂದೆನ್ನಲಾಗದು ಎಂದು ಭಾವ.

2. ಎಲ್ಲೆಡೆ ಶರೀರಾದಿಸಹಿತಕರ್ತೃವನ್ನು ಮಾತ್ರ ಒಪ್ಪಿರುವುದರಿಂದ, ಉಭಯಸಾಮಾನ್ಯವಾದ ಕರ್ತಾ ಎಂದೆನ್ನಲಾಗದು. ಗೋಶೃಂಗ-ಶಶಶೃಂಗ ಉಭಯಸಾಮಾನ್ಯವಾದ ಶೃಂಗತ್ವವನ್ನು ಹೇಗೆ ಒಪ್ಪಲಾಗದೋ ಹಾಗೆ ಇದನ್ನು ಒಪ್ಪಲಾಗದು ಎಂದು ಭಾವ.

3. ಸಾಮಾನ್ಯಾಭಾವದಿಂದ ವಿಶೇಷಾಭಾವವನ್ನು ಸಾಧಿಸಬಹುದೇ ಹೊರತು ವಿಶೇಷಾಭಾವ-ದಿಂದ ಸಾಮಾನ್ಯಾಭಾವವನ್ನು ಸಾಧಿಸಲು ಶಕ್ಯವಿಲ್ಲ. ಗೋಸಾಮಾನ್ಯವೇ ಇಲ್ಲದಿರುವದರಿಂದ ವಿಶೇಷವಾದ ಕೃಷ್ಣಗೋವಿನ ಅಭಾವವನ್ನು ಹೇಳಬಹುದು, ಕೃಷ್ಣಗೋವಿನ ಅಭಾವದಿಂದ 'ಗೋವುಗಳೇ ಇಲ್ಲ' ಎಂದು ಗೋಸಾಮಾನ್ಯಾಭಾವವನ್ನು ಊಹಿಸಲು ಹೇಗೆ ಶಕ್ಯವಿಲ್ಲವೋ ಹಾಗೆ ಎಂದು ಭಾವ.

4. ವ್ಯರ್ಥವಾದ ವಿಶೇಷಣವನ್ನು ಹೇತುವಿನಲ್ಲಿ ಒಪ್ಪಿದಲ್ಲಿ, ಸದನುಮಾನವೆಂದು ಪ್ರಸಿದ್ಧವಾದ ಧೂಮಾನುಮಾನಕ್ಕೂ 'ಪರ್ವತಃ ನಿರಗ್ನಿಮಾನ್ ಅಸ್ಮದಭಿತಧೂಮಾಭಾವಾತ್' ಎಂದು ಸತ್ಪ್ರತಿಪಕ್ಷಾನುಮಾನವನ್ನು ಹೇಳಲು ಶಕ್ಯವಿದೆ ಎಂದು ಪ್ರಶ್ನಿಸಲಾಗದು. ಆ ಪ್ರತಿಪಕ್ಷಾನುಮಾನಕ್ಕೆ 'ಒಂದುವೇಳೆ ಪರ್ವತದಲ್ಲಿ ವಹ್ನಿ ಇಲ್ಲವೆಂದಾದಲ್ಲಿ, ಕಾಣುವ ಧೂಮವೂ ಇಲ್ಲದಾಗಲಿ' ಎಂದು ಅನಿಷ್ಟಾಪಾದಕ ಪ್ರತಿತರ್ಕವನ್ನು ಹೇಳಲು ಅವಕಾಶವಿರುವುದರಿಂದ ಪ್ರತಿಪಕ್ಷಾನುಮಾನವು ಖಂಡಿತವಾಗುವುದು ಎಂದು ಭಾವ. ಪ್ರಕೃತಾನುಮಾನವಾದರೋ ಪ್ರತ್ಯಕ್ಷಾದಿ ಸಂವಾದವನ್ನು ಹೊಂದಿರದ ಅನುಮಾನ, ಹಾಗಾಗಿ ಪ್ರತಿಕೂಲತರ್ಕವನ್ನು ಹೇಳಲು ಆಗದು ಎಂದು ಭಾವ.

**ಕೇವಲಾನುಮಾನವು ಸಾಧಕ ಎನ್ನುವದು ರೀತ್ಯಂತರದಿಂದ**

**ಅಥವಾ, 'ಕರ್ತೃರಹಿತತ್ವಾದ್' ಇತ್ಯನೇನ 'ಅಜನ್ಯತ್ವಾದ್' ಇತ್ಯುಚ್ಯತೇ । 'ಅಸ್ಮತ್ಸಮ್ಮತ...' ಇತ್ಯನೇನ ಚ ಶರೀರ್ಯಾದಿಕಮ್ । 'ಶರೀರ-ಸ್ವಪ್ರಯೋಜನ-ಅಜ್ಞಾನ-ಸಂಶಯ-ವಿಪರ್ಯಯ-ಅನಿತ್ಯಜ್ಞಾನ-ಅನಿತ್ಯೇಚ್ಛಾ-ಅನಿತ್ಯಪ್ರಯತ್ನ-ಸ್ಮೃತಿ-ಸಂಸ್ಕಾರ-ದ್ವೇಷ-ಸುಖ-ದುಃಖ-ಧರ್ಮ-ಅಧರ್ಮವದಜನ್ಯತ್ವಾದ್ ' ಇತ್ಯನೇಕಪ್ರತಿಪಕ್ಷ ಸಂಗ್ರಹಾಯ 'ಅಸ್ಮತ್ಸಮ್ಮತ...' ಇತ್ಯುಕ್ತಮ್ । ಏವಮಪಿ ವಿಶೇಷಣವೈಯ್ಯರ್ಥ್ಯಮಿತಿ ಚೇನ್ನ । ಪಕ್ಷಧರ್ಮತಾಸಿದ್ಧ್ಯರ್ಥತ್ವಾತ್ । ಪರೈರಪಿ 'ಚಕ್ಷುಃ ತೈಜಸಂ, ರೂಪಾದಿಷು ಪಂಚಸು ಮಧ್ಯೇ ರೂಪಸ್ಯೈವ ಗ್ರಾಹಕತ್ವಾತ್, ಪ್ರಾಮಾಣ್ಯಂ ಪರತೋ ಜ್ಞಾಯತೇ, ಅನಭ್ಯಾಸದಾಶಾಯಾಂ ಸಾಂಶಯಿಕತ್ವಾದ್' ಇತ್ಯಾದೌ ಪಕ್ಷಧರ್ಮತಾಸಿದ್ಧ್ಯರ್ಥತ್ವೇನ ವಿಶೇಷಣಸ್ಯ ಪ್ರಯುಕ್ತತ್ವಾತ್ ।**

ಅಥವಾ[1] **'ಕರ್ತೃರಹಿತತ್ವಾತ್'** ಎನ್ನುವುದರಿಂದ 'ಅಜನ್ಯತ್ವಾತ್' ಎಂದು ಹೇಳುತ್ತೇವೆ[2]. **'ಅಸ್ಮತ್ಸಮ್ಮತ'** ಎನ್ನುವುದಕ್ಕೆ 'ಶರೀರ ಮುಂತಾದವುಗಳನ್ನು ಹೊಂದಿದವನು' ಎಂದು. (ಮುಂತಾದವುಗಳು ಯಾವವು? ಎನ್ನುವದನ್ನು ವಿವರಿಸುವರು) ಶರೀರ, ಸ್ವ- ಪ್ರಯೋಜನ, ಅಜ್ಞಾನ, ಸಂಶಯ, ವಿರುದ್ಧಜ್ಞಾನ, ಅನಿತ್ಯಜ್ಞಾನ, ಅನಿತ್ಯವಾದ ಇಚ್ಛಾ, ಅನಿತ್ಯಪ್ರಯತ್ನ, ಸ್ಮರಣೆ, ಸಂಸ್ಕಾರ, ದ್ವೇಷ, ಸುಖ, ದುಃಖ, ಧರ್ಮ, ಅಧರ್ಮ ಇವುಗಳನ್ನು ಹೊಂದಿದವನಿಂದ ಅಜನ್ಯ ಎಂದು ಅನೇಕ ಪ್ರತಿಪಕ್ಷಾನುಮಾನಗಳನ್ನು ಸಂಗ್ರಹಿಸಲು **'ಅಸ್ಮತ್ಸಮ್ಮತ'** ಎಂದು

---

1. 'ಅಸ್ಮತ್ಸಮ್ಮತಕರ್ತೃರಹಿತತ್ವಾತ್' ಎನ್ನುವ ಅನುಮಾನವನ್ನು ಸತ್ಪ್ರತಿಪಕ್ಷಾನುಮಾನ ಎಂದು ಒಪ್ಪಿದಲ್ಲಿ ಸಕಲ ಸದನುಮಾನಕ್ಕೂ ಈ ರೀತಿಯಾದ ಪ್ರತಿಪಕ್ಷಾನುಮಾನ ಹೇಳಲು ಅವಕಾಶವಿದೆ ಎಂದು ಸಂದೇಹಿಸಲಾಗಿತ್ತು, ಆ ತರಹದ ಸಂದೇಹಕ್ಕೆ ಅವಕಾಶವಿಲ್ಲದಂತಹ 'ಪ್ರತಿಪಕ್ಷಾನುಮಾನವಿದು' ಎಂದು 'ಅಥವಾ' ಎನ್ನುವ ಟೀಕಾಭಾಗದಿಂದ ವ್ಯಾಖ್ಯಾನಿಸುವರು.
2. ಹೇತುವಿನಲ್ಲಿ ಘಟಿತವಾದ 'ಕರ್ತೃರಹಿತತ್ವಾತ್' ಎನ್ನುವದಕ್ಕೆ ಅಜನ್ಯತ್ವಾತ್ ಎಂದು ಅರ್ಥೈಸಲಾಗಿದೆ, ಅಂದರೆ ನಮಗೆ ಸಮ್ಮತನಾದ ಕರ್ತೃವಿನಿಂದ ಪ್ರಪಂಚವು ಜನ್ಯವಾಗಿಲ್ಲ ಎಂದು ತಿಳಿಸಿದಂತಾಯಿತು ಎಂದು ಭಾವ.

ಹೇಳಲಾಗಿದೆ[1]. ಹೀಗಾದರೂ ವಿಶೇಷಣವ್ಯರ್ಥ ಎಂದೆನ್ನಲಾಗದು. ಪಕ್ಷಧರ್ಮತಾಸಿದ್ಧಿ ರೂಪ ಪ್ರಯೋಜನವಿರುವುದರಿಂದ[2]. ಪರರೂ ಸಹ 'ಚಕ್ಷುಃ ತೈಜಸಂ ರೂಪಾದಿಷು ಪಂಚಸು ಮಧ್ಯೇ ರೂಪಸ್ಯೈವ ಗ್ರಾಹಕತ್ವಾತ್' 'ಪ್ರಾಮಾಣ್ಯಂ ಪರತೋ ಜ್ಞಾಯತೇ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಈ ಮುಂತಾದ ಸಂದರ್ಭದಲ್ಲಿ ಪಕ್ಷಧರ್ಮತಾದ ಸಿದ್ಧಿಗಾಗಿಯೇ ವಿಶೇಷಣವನ್ನು ಬಳಸಿರುವುದರಿಂದ[3].

---

1. 'ಪ್ರಪಂಚದ ಕರ್ತೃವು ಈಶ್ವರ' ಎಂದು ಅನುಮಾನದಿಂದಲೇ ಸಾಧಿಸುವ ನೈಯ್ಯಾಯಿಕರು ಮುಂತಾದ ವಾದಿಗಳು ಈಶ್ವರನಿಗೆ ಶರೀರವನ್ನು ಒಪ್ಪಿರುವದಿಲ್ಲ, ಹಾಗೆಯೇ ಇಲ್ಲಿ ತಿಳಿಸಿರುವ ಸ್ವಪ್ರಯೋಜನ- ಈ ಜಗದ ಸೃಷ್ಟಿಯಿಂದ ಆತನಿಗೆ ಲಾಭ, ಈಶ್ವನಿಗೆ ಅಜ್ಞಾನ ಮುಂತಾದವುಗಳನ್ನೂ ಒಪ್ಪಿರುವದಿಲ್ಲ. ಜಗದಲ್ಲಿ ಕಾಣುವ ಕುಲಾಲಾದಿ ಕರ್ತೃಗಳಲ್ಲಿ ಇಲ್ಲಿ ನಮೂದಿಸಿದ ಅಜ್ಞಾನ ಸಂಶಯಾದಿ ಗುಣಗಳನ್ನು ಕಾಣುವೆವು. ಹಾಗಾಗಿ ಕರ್ತೃ ಎಂದರೆ 'ಇಂತಹ ಗುಣಗಳಿಂದ ಯುಕ್ತನಾದವನು' ಎಂದು ಭಾವಿಸಿರುವುದರಿಂದ ಪ್ರಪಂಚದ ಕರ್ತೃವಿನಲ್ಲೂ ಇಂತಹ ಗುಣಗಳು ಇರಲಿ, ಅವು ಇಲ್ಲದಿದ್ದಲ್ಲಿ ಅವನು ಕರ್ತೃವೇ ಅಲ್ಲ ಎಂದು ವಾದಿಸುವ ಅವಕಾಶವಿದೆ. ಮತ್ತೂ ಸಹ ಇಲ್ಲಿ ತಿಳಿಸಿರುವ ವಿಶೇಷಣಗಳು ಪ್ರತ್ಯೇಕವಾಗಿ ಒಂದೊಂದೂ ಪ್ರತಿಪಕ್ಷಾನುಮಾನದ ಹೇತುಗಳು. 'ವಿಮತಂ ವಿಕರ್ತೃಕಂ ಶರೀರಯುಕ್ತ-ಕರ್ತೃರಹಿತತ್ವಾತ್, ಸ್ವಪ್ರಯೋಜನ- ಸಹಿತಕರ್ತೃರಹಿತತ್ವಾತ್, ಸಂಶಯಜ್ಞಾನಸಹಿತ-ಕರ್ತೃರಹಿತತ್ವಾತ್' ಇದೇ ತರಹದ ಅನೇಕ ಪ್ರತಿಪಕ್ಷಾನುಮಾನಗಳು ಎಂದು ಭಾವ.

2. ಹೇತುವು ಪಕ್ಷದಲ್ಲಿ ಇರುವಿಕೆಯನ್ನು 'ಪಕ್ಷಧರ್ಮತಾ' ಎಂದು ತಿಳಿಯುವುದು. ಪ್ರಕೃತವಾದ ಪ್ರತಿಪಕ್ಷಾನುಮಾನದಲ್ಲಿನ ಹೇತುವಿನಲ್ಲಿ ಶರೀರಸಹಿತತ್ವ ಮುಂತಾದ ವಿಶೇಷಣಗಳನ್ನು ವಿವಕ್ಷಿಸಲಾಗಿದೆ. ಕೇವಲ ಕರ್ತೃರಹಿತತ್ವಾತ್ ಎಂದಿಷ್ಟೇ ಹೇತು ಎಂದು ವಿವಕ್ಷಿಸಿದಲ್ಲಿ, ಪಕ್ಷವಾದ ಕಾರ್ಯವೆಂದು ಸಮ್ಮತವಾದ ಅಂಕುರಾದಿಪ್ರಪಂಚದಲ್ಲಿ ಹೇತುವು ಇಲ್ಲ, ಆದುದರಿಂದ ಅಸಿದ್ಧಿ ರೂಪ ದೋಷವನ್ನು ಹೇಳಬಹುದು. ಹಾಗಾಗಿ ಪಕ್ಷಧರ್ಮತಾದ ಪ್ರಾಪ್ತಿಗಾಗಿ ಈ ವಿಶೇಷಣ ಗಳನ್ನು ನಿವೇಶಿಸಲಾಗಿದೆ. ಅಂಕುರಾದಿಗಳಲ್ಲಿ ಕರ್ತೃವಿದ್ದರೂ ಶರೀರಸಹಿತಕರ್ತೃವು ಇಲ್ಲದಿರು-ವುದರಿಂದ ಪಕ್ಷಧರ್ಮತಾ ಪ್ರಾಪ್ತವಾಗುವುದು ಸ್ವರೂಪಾಸಿದ್ಧಿಯು ಇಲ್ಲವೆಂದು ಭಾವ.

3. ಜ್ಞಾನೇಂದ್ರಿಯಗಳು ಐದು, ಅವುಗಳಲ್ಲಿ ಯಾವ ಇಂದ್ರಿಯವು, ಪಂಚಭೂತಗಳಲ್ಲಿ ಯಾವ ಭೂತಕ್ಕೆ ಸಂಬಧಿಸಿದೆ ಎನ್ನುವ ಜಿಜ್ಞಾಸಾ ಸಂದರ್ಭದಲ್ಲಿ ಅನುಮಾನದಿಂದ ಇಂದ್ರಿಯಗಳು ಇಂತಹ ಭೂತಕ್ಕೆ ಸಂಬಂಧಿಸಿದೆ ಎಂದು ತಿಳಿಸಲಾಗಿದೆ. ಅಂತಹ ಅನುಮಾನಗಳಲ್ಲಿ ಈ ಅನುಮಾನವೂ ಒಂದು. ಚಕ್ಷುರಿಂದ್ರಿಯವನ್ನು ತೈಜಸೇಂದ್ರಿಯ ಎಂದು ಸಾಧಿಸಲು 'ಚಕ್ಷುಃ ತೈಜಸಂ ರೂಪಸ್ಯೈವ ಗ್ರಾಹಕತ್ವಾತ್' ಎಂದು ಅನುಮಾನವನ್ನು ಅಭಿಪ್ರೇತಿಸಿದಲ್ಲಿ ವ್ಯಾಪ್ತಿಗೆ

ಪುಟ 362ರಲ್ಲಿ........

**ವಿಶೇಷಣಗಳಿಗೆ ಸಾರ್ಥಕತೆಯು ಹೇಗೆ?**

**ನನ್ವೇವಂ ವ್ಯಾಪ್ತಾವನಪೇಕ್ಷಿತವಿಶೇಷಣಪ್ರಕ್ಷೇಪೇಣ ಪಕ್ಷಧರ್ಮತಾಂ ಪ್ರಸಾಧ್ಯ ಸಾಧ್ಯಸಾಧನೇ 'ಪ್ರಯೋಜನಾಧೀನಂ ಪ್ರಮಾಣಂ ನ ಪ್ರಮಾಣಾಧೀನಂ ಪ್ರಯೋಜನಮ್' ಇತ್ಯಾಪನ್ನಂ, ತಥಾಚಾತಿಪ್ರಸಙ್ಗಃ? ಇತಿ ಚೇತ್, ಸತ್ಯಮ್ । ವಕ್ಷ್ಯಾಮೋಽತ್ರ ಸಮಾಧಾನಮ್ । 'ಅನುಮಾನ-ವಿರೋಧಾದ್' ಇತ್ಯಸ್ಯ 'ನ ಚಾನುಮಾನಾತ್ ತತ್ಸಿದ್ಧಿಃ' ಇತ್ಯನೇನ ಸಂಬಂಧಃ।**

---

...... ಪುಟ 361 ರಿಂದ

ಯಾವ ಭಂಗವೂ ಇಲ್ಲ. ರೂಪವು ತೇಜಸ್ಸಿನ ಗುಣ, ಅದನ್ನು ಗ್ರಹಿಸುವ ಇಂದ್ರಿಯವು ತೈಜಸವೇ ಆಗಬೇಕು ಎಂದು ನಿಶ್ಚಯಿಸಲು ಶಕ್ಯವಿದೆ. ಆದರೆ ಚಕ್ಷುರಿಂದ್ರಿಯವು ರೂಪವನ್ನು ಮಾತ್ರ ಗ್ರಹಿಸದೇ ರೂಪದಲ್ಲಿನ ರೂಪತ್ವವನ್ನೂ ಗ್ರಹಿಸುವುದರಿಂದ 'ರೂಪಸ್ಯೈವಗ್ರಾಹಕತ್ವ' ಎನ್ನುವ ಹೇತುವು ಪಕ್ಷದಲ್ಲಿ ಅಸಿದ್ಧವಾಗುವುದು, ಆ ಕಾರಣದಿಂದ 'ರೂಪಾದಿಷು ಪಂಚಸು ಮಧ್ಯೇ' ಎನ್ನುವ ವಿಶೇಷಣವನ್ನು ಹೇತುವಿನೊಡನೆ ಸಂಯೋಜಿಸಲಾಗಿದೆ. ಪಂಚಭೂತಗಳ ಗುಣಗಳಾದ ರೂಪಾದಿಗುಣಗಳ ಮಧ್ಯೆ ರೂಪವನ್ನು ಮಾತ್ರ ಗ್ರಹಿಸುವುದರಿಂದ ಎನ್ನುವ ಅಭಿಪ್ರಾಯವನ್ನು ಹೇತುವು ಹೊಂದಿದೆ. ಮತ್ತು 'ಜ್ಞಾನದಲ್ಲಿನ ಪ್ರಾಮಾಣ್ಯವನ್ನು ಮತ್ತೊಂದು ಪ್ರಮಾಣವು ಗ್ರಹಿಸುವುದು' ಎನ್ನುವುದು ತಾರ್ಕಿಕರ ಅಭಿಮತ. ಇದನ್ನು ನಿಶ್ಚಯಿಸಲು ಅನುಮಾನವೊಂದನ್ನು ನ್ಯಾಯಶಾಸ್ತ್ರದಲ್ಲಿ ತಿಳಿಸಲಾಗಿದೆ. 'ಪ್ರಾಮಾಣ್ಯಂ ಪರತಃ ಜ್ಞಾಯತೇ, ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂದು. ಇಲ್ಲಿ ಕೇವಲ ಸಾಂಶಯಿಕತ್ವಾತ್ ಎಂದು ಅಭಿಪ್ರೇತಿಸಿದಲ್ಲಿ ಅಯಂ ಘಟಃ, ಇದಂ ಜಲಂ, ಇತ್ಯಾದಿ ಜ್ಞಾನದ ಸಂದರ್ಭದಲ್ಲಿ ಸಾಮಾನ್ಯವಾಗಿ ಯಾರಿಗೂ ಸಂಶಯವೇ ಇಲ್ಲ, ಈ ಎಲ್ಲ ಸಂದರ್ಭದಲ್ಲಿ ಅನ್ಯಪ್ರಮಾಣದ ಆಸರೆಯಿಲ್ಲದೆ ಪ್ರಾಮಾಣ್ಯವು ಗೃಹೀತವಾದುದರಿಂದ ಸಾಂಶಯಿಕತ್ವಾತ್ ಎನ್ನುವ ಹೇತುವು ಅಸಿದ್ಧ ಎಂದಾಗುವುದು. ಆ ಕಾರಣದಿಂದ ಹೇತುವಿನೊಡನೆ ಅನಭ್ಯಾಸದಶಾಯಾಂ ಎನ್ನುವ ವಿಶೇಷಣವನ್ನು ಸಂಯೋಜಿಸಲಾಗಿದೆ. ಸಾಮಾನ್ಯ ಸಂದರ್ಭದಲ್ಲಿ ಸಂದೇಹವಿಲ್ಲದಿದ್ದರೂ, ಪ್ರಾಥಮಿಕ ಅರಿವಿನ ಸಂದರ್ಭದಲ್ಲಿ ಸಂದೇಹವಿದೆ, ಆ ಸಂದೇಹವು ಮತ್ತೊಂದು ಪ್ರಮಾಣದ ಸಹಾಯವಿದ್ದಾಗ ನಿವಾರಿತವಾಗುವುದು, ತನ್ನಿಮಿತ್ತ ಪ್ರಾಮಾಣ್ಯವು ಪರತಃ ಎಂದು ಸಾಧಿಸಲು ಅವಕಾಶವಿದೆ ಎಂದು ಅಸಿದ್ಧಿಯ ನಿವಾರಣೆಗಾಗಿ ಹೇತುವಿನಲ್ಲಿ ವಿಶೇಷಣದ ಸಂಯೋಜನೆಯು ಕಂಡಿದೆ. ಹಾಗಾಗಿ ತಾರ್ಕಿಕರಲ್ಲೂ ಸಹ 'ಹೇತುವಿನೊಡನೆ ಸಂಯೋಜಿಸುವ ವಿಶೇಷಣವು ವ್ಯಭಿಚಾರನಿವಾರಕವೇ ಆಗಿರಬೇಕು' ಎನ್ನುವ ನಿಯಮವನ್ನು ಒಪ್ಪದೆ ಕೆಲವು ಸಂಧರ್ಭದಲ್ಲಿ ಅಸಿದ್ಧಿಯ ನಿವಾರಣೆಗೂ ಹೇತುವಿಗೆ ವಿಶೇಷಣವನ್ನು ಸಂಯೋಜಿಸುವ ಪರಿಪಾಟಿಯಿರುವುದರಿಂದ, ಪ್ರಕೃತದಲ್ಲೂ ಅಸಿದ್ಧಿಯ ನಿವಾರಣೆಗಾಗಿ ವಿಶೇಷಣದ ಸಂಯೋಜನೆಯು ತಪ್ಪಲ್ಲ ಎಂದು ಭಾವ.

ಹಾಗಾದಲ್ಲಿ ವ್ಯಾಪ್ತಿಯಲ್ಲಿ (ವ್ಯಾಪ್ತಿಜ್ಞಾನಕ್ಕೆ) ಅವಶ್ಯಕವಲ್ಲದ ವಿಶೇಷಣವನ್ನು ಸಂಯೋಜಿಸುವುದರಿಂದ ಪಕ್ಷಧರ್ಮತಾವನ್ನು ಸಾಧಿಸಿ ಸಾಧ್ಯವನ್ನು ಸಾಧಿಸಿದಲ್ಲಿ 'ಪ್ರಮಾಣವು (ನಮ್ಮ) ಪ್ರಯೋಜನದ ಅಧೀನವಾಗಿದೆ , ಪ್ರಯೋಜನವು ಪ್ರಮಾಣದ ಅಧೀನವಲ್ಲ' ಎಂದು ಆದೀತು. ಹಾಗಾದಲ್ಲಿ ಅತಿಪ್ರಸಂಗ ಎಂದಲ್ಲಿ, ನಿಜ[1]. ಈ ವಿಷಯದಲ್ಲಿ ಸಮಾಧಾನವನ್ನು ಮುಂದೆ ತಿಳಿಸಲಾಗುವುದು[2] '**ಅನುಮಾನವಿರೋಧಾತ್**' ಎನ್ನುವದಕ್ಕೆ '**ನ ಚಾನುಮಾನಾತ್ ತತ್ಸಿದ್ಧಿಃ**' ಎನ್ನುವದರಿಂದ ಅನ್ವಯಿಸುವುದು[3].

**ಪ್ರತಿಪಕ್ಷಾನುಮಾನದಂತೆ ಈಶ್ವರಸಾಧಕಾನುಮಾನವೂ ದುಷ್ಟ**

**ಆಕಾರ್ಯತ್ವಮುಪಾಧಿರಿತ್ಯುಕ್ತೇ ಶರೀರಿಜನ್ಯತ್ವಮಿತರತ್ರಾಪ್ಯುಪಾಧಿರಿತ್ಯುತ್ತರಮ್ ।**

(ವಿಶ್ವಕ್ಕೆ ಕರ್ತೃವು ಇಲ್ಲ ಎಂದು ಸಾಧಿಸುವ ಅನುಮಾನಕ್ಕೆ) 'ಅಕಾರ್ಯತ್ವ'

---

1. ಸಾಮಾನ್ಯವಾಗಿ ವ್ಯವಹಾರದಲ್ಲಿ ಸಾಧ್ಯ-ಸಾಧನಗಳ ಸಾಹಚರ್ಯದ ಜ್ಞಾನವೇ ವ್ಯಾಪ್ತಿಜ್ಞಾನಕ್ಕೆ ಅವಶ್ಯಕವಾದದ್ದು. ಅದಕ್ಕೆ ಅಗತ್ಯವಾದ ವಿಶೇಷಣವನ್ನು ಮಾತ್ರ ಬಳಕೆ ಮಾಡಲಾಗುವುದು. ಪ್ರಕೃತದಲ್ಲಿ ಹೇತುವಿನಲ್ಲಿ ಸಂಯೋಜಿಸಲಾದ ವಿಶೇಷಣವು ವ್ಯಾಪ್ತಿ-ಜ್ಞಾನಕ್ಕೆ ಅನಗತ್ಯವಾಗಿದೆ. ಕೇವಲ ಹೇತುವು ಪಕ್ಷದಲ್ಲಿದೆ- ಪಕ್ಷಧರ್ಮತಾದ ಸಿದ್ಧಿಗಾಗಿಯೇ ವಿಶೇಷಣವನ್ನು ಸಂಯೋಜಿಸಲಾಗಿದೆ. ಅಂದರೆ ನಮ್ಮ ಪ್ರಯೋಜನಕ್ಕಾಗಿ ಪ್ರಮಾಣವನ್ನು ಬಳಸಿಕೊಂಡಂತಾಯಿತೇ ಹೊರತು 'ಪ್ರಯೋಜನವು ಪ್ರಮಾಣದ ಅಧೀನ' ಎಂದು ಒಪ್ಪಿದಂತಾಗಲಿಲ್ಲ ಎಂದು ಭಾವ.

2. ಉಪಾಧಿಯಿಂದ ಊಹಿತವಾದ ಅನುಮಾನಾದಲ್ಲಿನ ಹೇತುಘಟಕ ವಿಶೇಷಣಗಳಿಗೆ ವ್ಯಭಿಚಾರವಾರಕತ್ವೇನೈವ ಸಾರ್ಥಕ ಎನ್ನುವ ನಿಯಮವಿಲ್ಲ, ಬೇರೇ ಅನುಮಾನಗಳಿಗೆ ಮಾತ್ರ ಈ ನಿಯಮವು ಲಾಗೂ ಆಗುವುದು ಇತ್ಯಾದಿಯಾಗಿ ತಿಳಿಸಲಾಗುವುದು.

3. ಮೂಲದಲ್ಲಿ 'ಇತ್ಯನುಮಾನಾತ್' ಎಂದಿದೆ, ಇದಕ್ಕೆ ಪ್ರಕೃತ ವಾಕ್ಯದಿಂದ ಅನ್ವಯವನ್ನು ಹೇಳಲು ಅಶಕ್ಯವಾದುದರಿಂದ ಅನ್ವಯವು ಹೇಗೆ? ಎನ್ನುವ ಸಂದೇಹಕ್ಕೆ ಉತ್ತರಿಸುತ್ತಿರುವರು, ಹಿಂದಿನ ವಾಕ್ಯದಲಿರುವ 'ನ ಚಾನುಮಾನಾತ್ ತತ್ಸಿದ್ಧಿಃ' ಎನ್ನುವದರೊಡನೆ ಸಂಯೋಜಿಸಬೇಕು ಎಂದು ಉತ್ತರಿಸಲಾಗಿದೆ. 'ಈಶ್ವರಾನುಮಾನವು ಪ್ರತಿಪಕ್ಷಾನುಮಾನದಿಂದ ನಿರಾಕೃತವಾಗುವದರಿಂದ, ಕೇವಲಾನುಮಾನದಿಂದ ಈಶ್ವರನ ಸಿದ್ಧಿಯು ಆಗುವುದು ಎಂದು ಭಾವಿಸುವುದು ತರವಲ್ಲ. ಈಶ್ವರನ ಸಿದ್ಧಿಯು ಅನುಮಾನದಿಂದಾಗದು' ಎಂದು ಒಟ್ಟು ವಾಕ್ಯದ ಭಾವ.

ಎನ್ನುವುದು ಉಪಾಧಿ ಎಂದು ಹೇಳಿದಲ್ಲಿ, ಇತರಾನುಮಾನದಲ್ಲಿ (ಈಶ್ವರ-ಸಾಧಕಾನುಮಾನದಲ್ಲಿಯೂ) 'ಶರೀರಜನ್ಯತ್ವ' ಎನ್ನುವುದು ಉಪಾಧಿ ಎಂದು ಉತ್ತರ.

**ಪ್ರತಿಪಕ್ಷಾನುಮಾನಸ್ಯ ಸೋಪಾದಿಕತ್ವಮಾಶಙ್ಕ್ಯ 'ಈಶ್ವರಾನುಮಾನಸ್ಯಾಪಿ ತತ್ಸಮಾನಮ್' ಇತ್ಯಾಹ - 'ಅಕಾರ್ಯತ್ವಮ್' ಇತಿ । 'ಯದ್ವಿಕರ್ತೃಕಂ ತದಕಾರ್ಯಮ್' ಇತಿ ಸಾಧ್ಯಾವ್ಯಾಪಕತ್ವಾತ್ ಸಾಧನವತಃ ಪಕ್ಷಾದ್ವ್ಯಾವೃತ್ತತ್ವೇನ ಸಾಧನಾವ್ಯಾಪಕತ್ವಾಚ್ಚೋಪಾಧಿಃ ।**

ಪ್ರತಿಪಕ್ಷಾನುಮಾನವು ಉಪಾಧಿ(ದೋಷದಿಂದ)ಯುಕ್ತ ಎಂದು ಸಂದೇಹಿಸಿ, ಈಶ್ವರಾನುಮಾನವೂ ಸಹ ಹಾಗೇ (ಉಪಾಧಿದೋಷದಿಂದ ಯುಕ್ತ) ಎಂದು ತಿಳಿಸುತ್ತಾರೆ 'ಅಕಾರ್ಯತ್ವಂ' ಎಂದು. ಯಾವುದು ವಿಕರ್ತೃಕವೋ ಅದು ಅಕಾರ್ಯ ಎಂದು ಸಾಧ್ಯವ್ಯಾಪಕತ್ವವು ಇರುವದರಿಂದ, ಸಾಧನವನ್ನು ಹೊಂದಿರುವ ಪಕ್ಷದಿಂದ (ಅಸ್ಮತ್ಸಮ್ಮತಕರ್ತೃರಹಿತತ್ವಾತ್ ಎನ್ನುವ ಸಾಧನ-ವನ್ನು ಹೊಂದಿರುವ ಕ್ಷಿತ್ಯಂಕುರಾದಿಪಕ್ಷದಿಂದ ಅಕಾರ್ಯತ್ವವೆನ್ನುವ ಉಪಾಧಿ) ವ್ಯಾವೃತ್ತವಾದುದರಿಂದ ಸಾಧನಾವ್ಯಾಪಕತ್ವವು ಪ್ರಾಪ್ತವಾದುದರಿಂದಲೂ (ಅಕಾರ್ಯತ್ವ ಎನ್ನುವುದು ವಿಕರ್ತೃಕತ್ವಾನುಮಾನಕ್ಕೆ) ಉಪಾಧಿ.

**'ಪ್ರತಿಪಕ್ಷಾನುಮಾನೇ' ಇತಿ ಶೇಷಃ । ಇತ್ಯುಕ್ತೇ, ಕೇವಲಾನುಮಾನೇನ ಈಶ್ವರಂ ಸಾಧಯತಾ । 'ಯತ್ರ ಸಕರ್ತೃಕತ್ವಂ ತತ್ರ ಶರೀರಿಜನ್ಯತ್ವಮ್' ಇತಿ ಸಾಧ್ಯವ್ಯಾಪಕತ್ವಾತ್, ಕಾರ್ಯತ್ವವತೋಽಪಿ ಅಙ್ಕುರಾದ್ವ್ಯಾವೃತ್ತತ್ವೇನ ಸಾಧನಾವ್ಯಾಪಕತ್ವಾಚ್ಚ ಭವತಿ ಶರೀರಿಜನ್ಯತ್ವಮುಪಾಧಿಃ । ಇತರತ್ರ-ಈಶ್ವರಾನುಮಾನೇ, ಇತ್ಯುತ್ತರಮ್ 'ಅನೀಶ್ವರವಾದಿನಾ ವಕ್ತುಂ ಶಕ್ಯತೇ' ಇತಿ ಶೇಷಃ ।**

'ಪ್ರತಿಪಕ್ಷಾನುಮಾನೇ' ಎಂದು ಶೇಷಪೂರಣಮಾಡಿಕೊಳ್ಳುವುದು[1].

1. ಈ ಪ್ರಕರಣದಲ್ಲಿ ಉಪಾಧಿ ಎಂಬ ಅನುಮಾನದ ದೋಷದ ಪ್ರಸ್ತಾಪವು ವಿಶೇಷವಾಗಿರು-ವುದರಿಂದ ಉಪಾಧಿಯ ಅರಿವು ಅಗತ್ಯ. ಉಪಾಧಿಯ ಪರಿಚಯಾತ್ಮಕವಾದ ಕೆಲವು ವಿಷಯಗಳ ಪ್ರಸ್ತಾವನೆಯನ್ನು ಇಲ್ಲಿ ಮಾಡಲಾಗಿದೆ. ಯಾವ ಅನುಮಾನವು ಉಪಾಧಿ-

ಪುಟ 365ರಲ್ಲಿ........

...... ಪುಟ 364 ರಿಂದ

ದೋಷದಿಂದ ದುಷ್ಟವಾಗಿರುವುದೋ ಆ ಅನುಮಾನದಲ್ಲಿನ ಹೇತುವು ವ್ಯಭಿಚಾರಿ ಎಂದು ಸೂಚಿತವಾಗುವುದು ಅಥವಾ ಆ ಅನುಮಾನವು ಸತ್‌ಪ್ರತಿಪಕ್ಷಾನುಮಾನವನ್ನು (ಪ್ರತ್ಯನುಮಾನಾವನ್ನು) ಹೊಂದಿದೆ ಎಂದು ಸೂಚಿತವಾಗುವುದು. ಒಟ್ಟಿನಲ್ಲಿ ವಾದಿಯು 'ಸಾಧ್ಯವನ್ನು ಸಾಧಿಸಲು ಹೇಳಿದ ಹೇತುವು (ಕಾರಣವು) ಸರಿಯಾದ ಕಾರಣವಲ್ಲ' ಎನ್ನುವದನ್ನು ಈ ಉಪಾಧಿಯಿಂದ ಸೂಚಿಸಲಾಗುವುದು. ಉದಾಹರಣೆಗೆ- 'ಪರ್ವತೋ ಧೂಮವಾನ್ ವಹ್ನೇಃ ಎನ್ನುವ ಅನುಮಾನವು ಉಪಾಧಿದೋಷದಿಂದ ದುಷ್ಟವಾಗಿದೆ. ಆರ್ದ್ರೇಂಧನಸಂಯೋಗವು ಈ ಅನುಮಾನಕ್ಕೆ ಉಪಾಧಿ. ಎಲ್ಲ ಅನುಮಾನಗಳಲ್ಲಿ ನಿಯತ ಸಂಬಂಧವನ್ನು ಹೊಂದಿರುವ ವಸ್ತುಗಳಲ್ಲಿ ಒಂದರ ಅಸ್ತಿತ್ವದಿಂದ ಮತ್ತೊಂದು ವಸ್ತುವಿನ ಅಸ್ತಿತ್ವವನ್ನು ಊಹಿಸಲಾಗುವುದು. ಪ್ರಕೃತ ಅನುಮಾನದಲ್ಲಿ ಧೂಮದ ಅಸ್ತಿತ್ವಕ್ಕೆ ಸೂಚಕವಾದದು ವಹ್ನಿ. ಈ ಅನುಮಾನಕ್ಕೆ ಉಪಾಧಿರೂಪ ದೋಷವಿರುವುದರಿಂದ ಹೇತುವಾದ ವಹ್ನಿಯು ಸಾಧ್ಯವಾದ ಧೂಮದ ಸೂಚಕವಲ್ಲ, ಮತ್ತೆ ಧೂಮದ ಅಸ್ತಿತ್ವಕ್ಕೆ ಸೂಚಕವು ಉಪಾಧಿಯಾದ ಆರ್ದ್ರೇಂಧನಸಂಯೋಗ. ವಹ್ನಿ ಮತ್ತು ಧೂಮಗಳಿಗೆ ನಿಯತ ಸಂಬಂಧವಿಲ್ಲ, ವಹ್ನಿಯು ಕಾದಕಬ್ಬಿಣದಲ್ಲಿದೆ ಆದರೆ ಅಲ್ಲಿ ಧೂಮವು ಇರುವುದಿಲ್ಲ, ಆದರೆ ಎಲ್ಲೆಲ್ಲಿ ಆರ್ದ್ರೇಂಧನದ ಸಂಯೋಗವಿದೆಯೋ ಅಲ್ಲಿ ಎಲ್ಲೆಡೆಯೂ ಧೂಮವಿದೆ ಎನ್ನುವುದು ಅನುಭವದಲ್ಲಿದೆ. ಹಾಗಾಗಿ 'ಆಆರ್ದ್ರೇಂಧನಸಂಯೋಗಕ್ಕೂ ಧೂಮಕ್ಕೂ ನಿಯತ ಸಂಬಂಧ-ವಿರುವದರಿಂದ ವಹ್ನಿಯ ಅಸ್ತಿತ್ವದಿಂದ ಧೂಮವನ್ನು ಊಹಿಸುವುದು ತರವಲ್ಲ' ಎನ್ನುವದು ಅನುಮಾನಕ್ಕೆ ಉಪಾಧಿದೋಷವನ್ನು ಹೇಳುವ ವ್ಯಕ್ತಿಯ ಭಾವ. ಇದನ್ನು ಶಾಸ್ತ್ರಭಾಷೆಯಲ್ಲಿ 'ಸಾಧ್ಯವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವಮ್' ಎಂದು ತಿಳಿಸಿರುವರು. ಪ್ರಸಕ್ತ ಅನುಮಾನದ ಸಾಧ್ಯದೊಡನೆ- ಧೂಮದೊಡನೆ ಉಪಾಧಿಯು- ಆರ್ದ್ರೇಂಧನಸಂಯೋಗವು ವ್ಯಾಪಕ-ವಾಗಿದೆ, ಸಾಧನದೊಡನೆ-ವಹ್ನಿಯೊಡನೆ ಉಪಾಧಿಯು- ಆರ್ದ್ರೇಂಧನಸಂಯೋಗವು ಅವ್ಯಾಪಕವಾಗಿದೆ ಎಂದು ಈ ಮಾತಿನ ಭಾವ. ಹೇತು-ಸಾಧ್ಯಗಳಿಗೆ ವ್ಯಾಪ್ಯ-ವ್ಯಾಪಕ-ಭಾವವು ಮುಖ್ಯ, ಈ ಭಾವವು ಉಕ್ತ ಸಾಧ್ಯ-ಸಾಧನಗಳಿಗೆ ಇಲ್ಲ ಎನ್ನುವದನ್ನು ಈ ಉಪಾಧಿಯು ನಿಶ್ಚಯಗೊಳಿಸುವುದು ಎಂದು ಶಾಸ್ತ್ರಕಾರರ ಅಭಿಪ್ರಾಯ.

ಪ್ರಕೃತದ 'ವಿಮತಂ ವಿಕರ್ತೃಕಂ ಅಸ್ಮತ್‌ಸಮ್ಮತಕರ್ತೃರಹಿತತ್ವಾತ್' ಎನ್ನುವ ಪ್ರತಿಪಕ್ಷಾನುಮಾನಕ್ಕೆ 'ಅಕಾರ್ಯತ್ವಂ' ಎನ್ನುವುದು ಉಪಾಧಿ. ಎಲ್ಲೆಲ್ಲಿ ವಿಕರ್ತೃಕತ್ವರೂಪ ಸಾಧ್ಯವಿದೆಯೋ ಅಲ್ಲೆಲ್ಲ ಅಕಾರ್ಯತ್ವರೂಪ ಉಪಾಧಿಯು ಇರುವುದು. ಗಗನದಲ್ಲಿ ವಿಕರ್ತೃಕತ್ವವು ಇದೆ ಅಲ್ಲಿ ಅಕಾರ್ಯತ್ವವೂ ಇದೆ, ಹಾಗಾಗಿ ಉಪಾಧಿಗೆ ಸಾಧ್ಯವ್ಯಾಪಕತ್ವವಿದೆ ಎಂದು ತಿಳಿಯುವುದು. ಪಕ್ಷವಾದ ಕ್ಷಿತ್ಯಂಕುರಾದಿಗಳಲ್ಲಿ ಅಸ್ಮತ್‌ಸಮ್ಮತಕರ್ತೃರಹಿತತ್ವರೂಪ ಹೇತುವಿದೆ ಆದರೆ ಅಕಾರ್ಯತ್ವರೂಪ ಉಪಾಧಿಯು ಇಲ್ಲ, ಸಾಧನದಿಂದ ಉಪಾಧಿಯು ಅವ್ಯಾಪಕವಾಗಿದೆ ಎಂದು ತಿಳಿಯುವುದು. ಅಂದರೆ ವಿಕರ್ತೃತ್ವಕ್ಕೆ ಅಸ್ಮತ್‌ಸಮ್ಮತಕರ್ತೃರಹಿತತ್ವವು ಕಾರಣವಲ್ಲ, ಅಕಾರ್ಯತ್ವವು ಕಾರಣ. ಪಕ್ಷವಾದ ಕ್ಷಿತ್ಯಂಕುರಾದಿಗಳಲ್ಲಿ ಅಕಾರ್ಯತ್ವವು ಇಲ್ಲದ ಪ್ರಯುಕ್ತ ವಿಕರ್ತೃಕತ್ವವನ್ನು ಸಾಧಿಸಲು ಶಕ್ಯವಿಲ್ಲ ಎಂದು ಭಾವ.

ಇತ್ಯುಕ್ತೇ - (ಹೀಗೆ ಹೇಳಿದಲ್ಲಿ- ನಿರೀಶ್ವರಾನುಮಾನವು ಉಪಾಧಿಗ್ರಸ್ತ ಎಂದು ಹೇಳಿದಲ್ಲಿ), ಕೇವಲಾನುಮಾನದಿಂದ ಈಶ್ವರನನ್ನು ಸಾಧಿಸುವುದರಿಂದ[1]. ಎಲ್ಲಿ ಸಕರ್ತೃಕತ್ವವೋ ಅಲ್ಲಿ ಎಲ್ಲೆಡೆ ಶರೀರಿಜನ್ಯತ್ವವೇ ಇದೆ, ಹಾಗಾಗಿ ಸಾಧ್ಯವ್ಯಾಪಕತ್ವವು ಇರುವುದರಿಂದ, ಕಾರ್ಯಗಳಾದ ಅಂಕುರಾದಿಗಳಿಂದ ಶರೀರಜನ್ಯತ್ವ ರೂಪ ಉಪಾಧಿಯು ವ್ಯಾವೃತ್ತವಾಗಿರುವುದರಿಂದ ಉಪಾಧಿಗೆ ಸಾಧನಾವ್ಯಾಪಕತ್ವವೂ ಪ್ರಾಪ್ತವಾಯಿತು (ಆದುದರಿಂದ) ಶರೀರಿಜನ್ಯತ್ವವು ಉಪಾಧಿ[2]. ಇತರತ್ರ- ಈಶ್ವರಾನುಮಾನದಲ್ಲಿ, 'ಇತ್ಯುತ್ತರಂ' (ಈ ರೀತಿಯಲ್ಲಿ ಉತ್ತರವನ್ನು) 'ಈಶ್ವರನನ್ನು ಒಪ್ಪದ ವಾದಿಯು ವಾದಿಸಲು ಅವಕಾಶವಿದೆ' ಎಂದು ಶೇಷವನ್ನು ಪೂರ್ಣಮಾಡಿಕೊಳ್ಳುವುದು.

#### ಉಪಾಧಿಘಟಿತ ವಿಶೇಷಣಗಳ ಸಾರ್ಥಕತೆ

**ಶರೀರಿವಿಶೇಷಣಂ ವ್ಯರ್ಥಮ್? ಇತಿ ಚೇತ್, ಅಕಾರ್ಯತ್ವಮಪಿ ಕಾರ್ಯಾದನ್ಯತ್ವಂ, ಕಾರ್ಯತ್ವರಹಿತತ್ವಂ ವಾ ವಕ್ತವ್ಯಮ್ । ತತ್ರಾಪಿ**

---

1. ತಾರ್ಕಿಕಾದಿಗಳಿಂದ ಪ್ರತಿಪಕ್ಷಾನುಮಾನಕ್ಕೆ 'ಅಕಾರ್ಯತ್ವ' ಎನ್ನುವುದನ್ನು ಉಪಾಧಿ ಎಂದು ಹೇಳಿದಲ್ಲಿ 'ಶರೀರಿಜನ್ಯತ್ವ' ಎನ್ನುವುದು ಕಾರ್ಯತ್ವವನ್ನು ಸಾಧಿಸುವ ಅನುಮಾನಕ್ಕೆ ಉಪಾಧಿ ಎಂದು ಉತ್ತರಿಸಲಾಗುವುದು ಎಂದು ವಾಕ್ಯದ ಒಟ್ಟು ಭಾವ.

2. ಕೇವಲಾನುಮಾನದಿಂದ ಈಶ್ವರನನ್ನು ಸಾಧಿಸುವ ತಾರ್ಕಿಕರು ಮುಂತಾದವರು 'ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಎಂಬ ಅನುಮಾನವನ್ನು ಈಶ್ವರನನ್ನು ಒಪ್ಪದ ವಾದಿಯನ್ನು ಉದ್ದೇಶಿಸಿ ತಿಳಿಸುವರು. ಈಶ್ವರನನ್ನು ಒಪ್ಪದ ವಾದಿಯಾದರೋ, ಕುಲಾಲಾದಿ ಎಲ್ಲ ಕರ್ತೃಗಳೂ ಶರಿರಸಹಿತರಾಗಿರುವುದುನ್ನು ಕಂಡಿರುವನು. ತನ್ನಿಮಿತ್ತ ಆತನು ಈಶ್ವರಸಾಧಕಾನುಮಾನಕ್ಕೆ 'ಶರೀರಿಜನ್ಯತ್ವಮ್' ಎಂಬುವುದು ಉಪಾಧಿ ಎಂದು ವಾದಿಸುವನು. ಸಕರ್ತೃಕವಾಗಿ ಕಂಡ ಘಟಾದಿಗಳಲ್ಲಿ ಶರೀರಿಜನ್ಯತ್ವವೇ ಇದೆ. ತನ್ನಿಮಿತ್ತ ಸಕರ್ತೃಕತ್ವರೂಪ ಸಾಧ್ಯಕ್ಕೂ, ಶರೀರಿಜನ್ಯತ್ವರೂಪ ಉಪಾಧಿಗೂ ವ್ಯಾಪ್ಯ-ವ್ಯಾಪಕಭಾವವಿದೆ ಎಂದು ತಿಳಿಯುವುದು. ಕ್ಷಿತ್ಯಂಕುರಾದಿಗಳಲ್ಲಿ ಕೇವಲ ಜನ್ಯತ್ವವು ಇದ್ದರೂ, ವ್ಯಾಪಕವಾದ ಶರೀರಿಜನ್ಯತ್ವವಿಲ್ಲ, ತನ್ನಿಮಿತ್ತ ಅದರ ವ್ಯಾಪ್ಯವಾದ ಸಕರ್ತೃಕತ್ವವೂ ಇರಲಾರದು, ಕಾರ್ಯತ್ವವಾದರೋ ಕ್ಷಿತ್ಯಂಕುರಾದಿಗಳಲ್ಲಿ ಇದೆ. ಆದರೆ ಕ್ಷಿತ್ಯಂಕುರಗಳಿಗೆ ಕರ್ತೃ ಎಂದು ಒಪ್ಪಿರುವ ಈಶ್ವರನಿಗೆ ತಾರ್ಕಿಕರು ಶರೀರವನ್ನು ಒಪ್ಪದಿರುವುದರಿಂದ ಶರೀರಿಜನ್ಯತ್ವವಿಲ್ಲ ಎಂದು ಪ್ರಕೃತದಲ್ಲಿ ಪ್ರತಿಪಾದಿಸಲಾಗಿದೆ. ಈ ಕಾರಣದಿಂದ ಉಪಾಧಿಗೆ ಸಾಧನಾವ್ಯಾಪಕತ್ವವು ಪ್ರಾಪ್ತವಾಯಿತು ಎಂದು ಭಾವ.

**'ಅನ್ಯತ್ವಾದೇಃ' ಏವ ಸಾಧ್ಯವ್ಯಾಪಕತ್ವಸಮ್ಭವಾತ್ ಸಮವ್ಯಾಪ್ತೇಶ್ಚ ಅನಪೇಕ್ಷಿತತ್ವಾದ್ ವಿಶೇಷಣವೈಯರ್ಥ್ಯಮೇವ । ತತ್ರ 'ಪಕ್ಷವ್ಯಾವೃತ್ತ್ಯರ್ಥಂ ವಿಶೇಷಣಮ್' ಇತಿ ಚೇತ್, ತುಲ್ಯಮಿತರತ್ರಾಪಿ ।**

(ಉಪಾಧಿಯಲ್ಲಿ ಘಟಿತವಾದ) 'ಶರೀರಿ' ಎನ್ನುವ ವಿಶೇಷಣವು ವ್ಯರ್ಥ ಎಂದಲ್ಲಿ[1], (ಉತ್ತರಿಸುತ್ತಾರೆ) ಅಕಾರ್ಯತ್ವವನ್ನೂ ಸಹ ಕಾರ್ಯಾದನ್ಯತ್ವ ಎಂದೋ ಕಾರ್ಯತ್ವರಹಿತತ್ವ ಎಂದೋ ವಿಶ್ಲೇಷಿಸಲಾಗುವುದು. ಅಲ್ಲೂ ಸಹ ಅನ್ಯತ್ವಾದಿಗಳಿಗೇ ಸಾಧ್ಯವ್ಯಾಪಕತ್ವವು ಸಂಭಾವಿತವಾದುದರಿಂದ, ಸಮ-ವ್ಯಾಪ್ತಿಯು ಅನಪೇಕ್ಷಿತವಾದುದರಿಂದಲೂ ವಿಶೇಷಣವು ವ್ಯರ್ಥವೇ (ಆಗಿದೆ)[2].

---

1. 'ಕ್ಷಿತ್ಯಂಕುರಾದಿಕಂ...... ' ಎನ್ನುವ ಅನುಮಾನವು ಉಪಾಧಿದೋಷಯುಕ್ತವಾಗಿದೆ, 'ಶರೀರಿಜನ್ಯತ್ವ' ಎನ್ನುವದು ಉಪಾಧಿ ಎಂದು ತಿಳಿಸಲಾಗಿದೆ. ಉಪಾಧಿಯು ಸಾಧ್ಯದಿಂದ ವ್ಯಾಪಕವಾಗಿರಬೇಕು. ಪ್ರಕೃತಾನುಮಾನದಲ್ಲಿನ ಸಾಧ್ಯವಾದ ಸಕರ್ತೃಕತ್ವದೊಡನೆ ಕೇವಲ ಜನ್ಯತ್ವಕ್ಕೆ ವ್ಯಾಪಕತ್ವವು ಇರುವುದರಿಂದ ಶರೀರಿ ಎನ್ನುವ ವಿಶೇಷಣವು ವ್ಯರ್ಥವಲ್ಲವೆ ? ಉಪಾಧಿಯು ಪಕ್ಷದಲ್ಲಿ ಇರಬಾರದು, ಕೇವಲ ಜನ್ಯತ್ವವನ್ನು ಉಪಾಧಿ ಎಂದು ಅಭಿಮತಿಸಿದಲ್ಲಿ ಪಕ್ಷವಾದ ಕ್ಷಿತ್ಯಂಕುರಾದಿಗಳಲ್ಲಿ ಜನ್ಯತ್ವವಿದೆ. ಹಾಗಾಗಿ ಕೇವಲಜನ್ಯತ್ವಕ್ಕೆ ಉಪಾಧಿತ್ವವೇ ಇಲ್ಲ, ಪಕ್ಷದಿಂದ ಉಪಾಧಿಯನ್ನು ವ್ಯಾವೃತ್ತಿಗೊಳಿಸಲು ಶರೀರಿ ಎನ್ನುವ ವಿಶೇಷಣವನ್ನು ಸಂಯೋಜಿಸಲಾಗಿದೆ, ಎಂದೆನ್ನುವದು ತರವಲ್ಲ, ಉಪಾಧಿಯಲ್ಲಿನ ವಿಶೇಷಣವು ವ್ಯಭಿಚಾರವಾರಕವಾಗಿರಬೇಕೇ ಹೊರತು ಅಸಿದ್ಧಿಯ ವಾರಕವಾಗಬಾರದು ಎಂದು ನಿಯಮವಿದೆ ಆದುದರಿಂದ ಈ 'ಶರೀರಿ' ಎನ್ನುವ ವಿಶೇಷಣವು ವ್ಯರ್ಥ ಎಂದು ಪ್ರಾಶ್ನಿಕನ ಅಭಿಪ್ರಾಯ.

2. 'ಕ್ಷಿತ್ಯಂಕುರಾದಿಕಂ ವಿಕರ್ತೃಕಂ ಅಸ್ಮತ್ಸಮ್ಮತಕರ್ತೃರಹಿತತ್ವಾತ್' ಎನ್ನುವ ಪ್ರತಿಪಕ್ಷಾನುಮಾನಕ್ಕೆ ಅಕಾರ್ಯತ್ವವನ್ನು ಉಪಾಧಿಯನ್ನಾಗಿ ತಿಳಿಸಲಾಗಿದೆ. ಅಕಾರ್ಯತ್ವವನ್ನು 'ಕಾರ್ಯಾನ್ಯತ್ವ' ಎಂದೋ 'ಕಾರ್ಯತ್ವರಹಿತತ್ವ' ಎಂದೋ ನಿರ್ವಚಿಸಬೇಕು. ಕಾರ್ಯಾನ್ಯತ್ವ ಎಂದೇಕೆ, ಕೇವಲ ಅನ್ಯತ್ವವನ್ನೇ ಉಪಾಧಿ ಎಂದು ಪರಿಗಣಿಸಬಹುದಲ್ಲವೆ, ಕಾರ್ಯ ಎನ್ನುವ ವಿಶೇಷಣವನ್ನು ಸಂಯೋಜಿಸಲು ಕಾರಣವೇನು? ಉಪಾಧಿಯು ಸಾಧ್ಯದಿಂದ ವ್ಯಾಪಕವಾಗಿರಬೇಕು ಎಂಬುವುದು ನಿಯಮ. ಅನ್ಯತ್ವವು ಕೇವಲಾನ್ವಯಿ- ಎಲ್ಲೆಡೆಯೂ ಇರುವುದು, ತನ್ನಿಮಿತ್ತವಾಗಿ ಉಪಾಧಿಗೆ ಸಾಧ್ಯವ್ಯಾಪಕತ್ವವು ಸುಲಭವಾಗಿ ಸಿದ್ಧಿಸುವುದು. ಉಪಾಧಿ-ಹೇತುಗಳಲ್ಲಿ ಘಟಿತವಾದ ವಿಶೇಷಣಗಳಿಗೆ ವ್ಯಭಿಚಾರನಿವೃತ್ತಕವಾಗಿಯೇ ಸಾರ್ಥಕತೆ ಎಂದು ಹೇಳಲು ತಾರ್ಕಿಕರಿಗೂ

ಪುಟ 368ರಲ್ಲಿ........

ಅಲ್ಲಿ (ಪ್ರತಿಪಕ್ಷಾನುಮಾನಕ್ಕೆ ತಿಳಿಸಿದ ಉಪಾಧಿಯಲ್ಲಿನ ಕಾರ್ಯತ್ವ ರೂಪ) ವಿಶೇಷಣವು (ಉಪಾಧಿಯನ್ನು) ಪಕ್ಷದಿಂದ ವ್ಯಾವೃತ್ತಿಗೊಳಿಸಲು (ಅವಶ್ಯಕ) ಎಂದಾದಲ್ಲಿ, ಇನ್ನೊಂದೆಡೆಯೂ (ಶರೀರಿಜನ್ಯತ್ವ ಎನ್ನುವ ಉಪಾಧಿಯಲ್ಲಿಯೂ ಸಹ) ಅದು (ಶರೀರಿ ಎಂಬ ವಿಶೇಷಣವು ಪಕ್ಷದಿಂದ ಉಪಾಧಿಯನ್ನು ವ್ಯಾವೃತ್ತಿಗೊಳಿಸುವುದರಿಂದ ವಿಶೇಷಣವು ಸಾರ್ಥಕವಾಗಿದೆ ಎನ್ನುವುದು) ಸಮಾನ.

**ಹೇತುವಿನೊಡನೆ ಸಂಯೋಜಿಸಿದ ವಿಶೇಷಣವು ವ್ಯಭಿಚಾರವಾರಕವಾಗಬೇಕೆಂಬ ನಿಯಮವಿಲ್ಲ-**

**ನನು, ಕಿಂ ವ್ಯಭಿಚಾರನಿವಾರಣಲಕ್ಷಣಪ್ರಯೋಜನಾಭಾವೋ ವೈಯ್ಯರ್ಥ್ಯಂ, ಪ್ರಯೋಜನಮಾತ್ರಾಭಾವೋ ವಾ । ನಾದ್ಯಃ, ವ್ಯಾಪ್ಯಗತ-ವಿಶೇಷಣಸ್ಯೈವ ತಥಾತ್ವೇನ ವ್ಯಾಪಕಗತವಿಶೇಷಣಸ್ಯ ತಥಾತ್ವನಿಯಮಾ-ಭಾವಾತ್ । ನ ದ್ವಿತೀಯಃ, ಅಸಿದ್ಧೇರಿತಿ ಚೇತ್, ಏತದಪಿ ಸಮಾನಮ್ । ಅತ ಏವ ಪ್ರತಿಜ್ಞಾನುಮಾನೇಽಪಿ ವಿಶೇಷಣವೈಯರ್ಥ್ಯಂ ಪರಿಹೃತಮ್ । ವಿಶಿಷ್ಟಸ್ಯೋಪಾಧೇಃ ಹಿ ಸಾಧ್ಯವ್ಯಾಪಕತ್ವಮಸ್ತ್ಯೇವ । ವ್ಯಾಪಕನಿವೃತ್ತಿಶ್ಚ ವ್ಯಾಪ್ಯಂ ನಿವರ್ತಯತ್ಯೇವ । ಉಪಾಧ್ಯಭಾವಶ್ಚಾತ್ರ ಪ್ರತಿಪಕ್ಷತ್ವೇನೋಕ್ತಃ ।**

---

...... ಪುಟ 367 ರಿಂದ
ಪ್ರಕೃತಾನುಮಾನದಲ್ಲಿ ಶಕ್ಯವಿಲ್ಲ. ಇನ್ನು ಸಾಧ್ಯ ಮತ್ತು ಉಪಾಧಿಗಳಿಗೆ ಸಮವ್ಯಾಪ್ತಿಯ ಅವಶ್ಯಕತೆ ಇದೆ, ಆ ಕಾರಣದಿಂದ ಈ ವಿಶೇಷಣದ ಸಾರ್ಥಕತೆಯನ್ನು ಹೇಳಬಹುದು, ಉಪಾಧಿಯಾದ ಅನ್ಯತ್ವವಾದರೋ ಕೇವಲಾನ್ವಯಿ ಹಾಗಾಗಿ ಸಾಧ್ಯವಾದ ಸಕರ್ತೃಕತ್ವದೊಡನೆ ಸಮವ್ಯಾಪ್ತವಾಗಲಾರದು. ಸಾಧ್ಯದಿಂದ ಸಮವ್ಯಾಪ್ತವಾಗದ ಧರ್ಮಗಳನ್ನು ಉಪಾಧಿ ಎಂದು ಒಪ್ಪಿದಲ್ಲಿ ಸದನುಮಾನಗಳಿಗೂ ಪಕ್ಷೇತರತ್ವ ಮುಂತಾದ ಧರ್ಮಗಳನ್ನು ಉಪಾಧಿ ಎಂದು ಹೇಳಲು ಅವಕಾಶವಿದೆ. ಉದಾಹರಣೆಗೆ- 'ಪರ್ವತೋ ವಹ್ನಿಮಾನ್ ಧೂಮಾತ್' ಎನ್ನುವ ಸದನುಮಾನಕ್ಕೆ, ಸಾಧ್ಯವಾದ ವಹ್ನಿಗೆ ವ್ಯಾಪಕವಾದ ಪಕ್ಷೇತರತ್ವವು ಉಪಾಧಿ. ಪಕ್ಷವಾದ ಪರ್ವತದಲ್ಲಿ ಸಾಧ್ಯವ್ಯಾಪಕವಾದ ಪಕ್ಷೇತರತ್ವವು ಇಲ್ಲದಿರುವುದರಿಂದ ವ್ಯಾಪ್ಯವಾದ ವಹ್ನಿಯೂ ಇಲ್ಲ ಎಂದು ಆಕ್ಷೇಪಿಸಬಹುದಲ್ಲವೇ? ಎಂದೆನ್ನಲಾಗದು, 'ಒಂದುವೇಳೆ ಪರ್ವತದಲ್ಲಿ ವಹ್ನಿಯು ಇಲ್ಲ' ಎಂದಾದಲ್ಲಿ 'ಕಣ್ಣಿಗೆ ಕಾಣುವ ಧೂಮವೂ ಇಲ್ಲದಾಗಲಿ, ಧೂಮವಿದ್ದೆಡೆಯಲ್ಲಿ ವಹ್ನಿಯು ಇರುವುದು ಅನುಭವದಿಂದ ತಿಳಿದುಬಂದಿದೆ' ಎಂದು ಪಕ್ಷೇತರತ್ವಾದಿಗಳಂತಹ ಉಪಾಧಿಗಳನ್ನು ನಿರಾಕರಿಸಲು ಅವಕಾಶವಿರುವುದರಿಂದ, 'ಸಾಧ್ಯ ಉಪಾಧಿಗಳು ಸಮವ್ಯಾಪ್ತಿಯನ್ನು ಹೊಂದಿರಲೇಬೇಕು' ಎನ್ನುವ ನಿಯಮವು ಶಾಸ್ತ್ರೀಯವಲ್ಲ ಎಂದು ಭಾವ.

**ಉಪಾಧ್ಯನುನ್ನೀತ ಏವಾನುಮಾನೇ ವ್ಯಭಿಚಾರಾವಾರಕವಿಶೇಷಣವತ್ತ್ವಂ ದೋಷೋ ನೋಪಾಧ್ಯುನ್ನೀತ ಇತಿ ವ್ಯವಸ್ಥಾಶ್ರಯಣೇ ದೋಷಾಭಾವಾತ್ ।**

ಸರಿ ಹಾಗಾದಲ್ಲಿ, (ಹೇತುವಿನಲ್ಲಿ ಘಟಿತವಾದ ವಿಶೇಷಣವು) ವ್ಯರ್ಥ ಅಂದರೆ ವ್ಯಭಿಚಾರವಾರಣರೂಪ ಪ್ರಯೋಜನವಿಲ್ಲ ಎಂದೋ, ಅಥವಾ ಯಾವ ಪ್ರಯೋಜನವೂ ಇಲ್ಲ ಎಂದೋ?[1] ವ್ಯಾಪ್ಯದೊಡನೆ (ಹೇತುವಿನೊಡನೆ) ಸಂಯೋಜಿಸುವ ವಿಶೇಷಣಕ್ಕೆ ಮಾತ್ರ ಆ ತರಹದ ನಿಯಮ, ವ್ಯಾಪಕದೊಡನೆ (ಉಪಾಧಿಯೊಡನೆ) ಸಂಯೋಜಿಸಿದ ವಿಶೇಷಣಕ್ಕೆ ಆ ನಿಯಮವಿಲ್ಲದಿರುವುದರಿಂದ ಮೊದಲಪಕ್ಷವು ಸರಿಯಾಗದು[2]. ಎರಡನೆಯ

1. ಉಪಾಧಿಯಲ್ಲಿ ಸಂಯೋಜಿಸಿದ ವಿಶೇಷಣವು ವ್ಯಭಿಚಾರ ನಿವಾರಕವಾಗಿಲ್ಲದ ಪ್ರಯುಕ್ತ 'ಶರೀರಿ' ಎನ್ನುವ ವಿಶೇಷಣವು ವ್ಯರ್ಥ ಎಂದು ಅಭಿಪ್ರೇತಿಸಲಾಗಿದೆಯೋ ಅಥವಾ ಯಾವುದೇ ಪ್ರಯೋಜನವಿಲ್ಲದಿರುವುದರಿಂದ ಈ ವಿಶೇಷಣವು ವ್ಯರ್ಥ ಎಂದು ಅಭಿಪ್ರೇತಿಸಲಾಗಿದೆಯೋ ಎಂದು ಪ್ರಶ್ನದ ಭಾವ.

2. 'ಹೇತುವಿನೊಡನೆ ಸಂಯೋಜಿಸುವ ವಿಶೇಷಣವು ವ್ಯಭಿಚಾರವಾರಕವಾಗಿಯೇ ಇರಬೇಕು' ಎಂದು ನಿಯಮವನ್ನು ಕೆಲವು ಶಾಸ್ತ್ರಕಾರರು ಒಪ್ಪಿರುವರು. ಪ್ರಕೃತದಲ್ಲಿ 'ಶರೀರಿಜನ್ಯತ್ವ' ಎನ್ನುವ ಉಪಾಧಿಯಲ್ಲಿ ಘಟಿತವಾದ 'ಶರೀರಿ' ಎನ್ನುವ ವಿಶೇಷಣವು ವ್ಯಭಿಚಾರವಾರಕ-ವಾಗಿಲ್ಲ, ಆ ಕಾರಣದಿಂದ ವ್ಯರ್ಥ ಎಂದು ಪ್ರಶ್ನಿಸಿದಲ್ಲಿ ಉತ್ತರಿಸಿರುವರು- ಸಾಧ್ಯದಿಂದ ವ್ಯಾಪ್ಯವಾದ ಹೇತುವಿನಲ್ಲಿ ಸಂಯೋಜಿಸುವ ವಿಶೇಷಣಕ್ಕೆ ಮಾತ್ರ ವ್ಯಭಿಚಾರವಾರಕತ್ವವೇ ಪ್ರಯೋಜನ ಎಂದಿರಬಹುದು, ಆದರೆ ಹೇತುವಿನಿಂದ ವ್ಯಾಪಕವಾದ ಉಪಾಧಿಯಲ್ಲಿನ ವಿಶೇಷಣಕ್ಕೆ ಆ ನಿಯಮವು ಸಲ್ಲದು. ಪ್ರಕೃತದಲ್ಲಿ 'ಅಶರೀರಿಜನ್ಯತ್ವ ಎನ್ನುವುದು ಉಪಾಧಿ, ಉಪಾಧಿಯು ಸಾಧ್ಯದಿಂದ ವ್ಯಾಪಕವಾಗಿರುವುದು ಎಂದು ಭಾವ. 'ಪರ್ವತೋ ವೇಣುಸಂಘರ್ಷಜನ್ಯವಹ್ನಿಮಾನ್ ಕೃಷ್ಣಧೂಮಾತ್' ಈ ಮುಂತಾದ ಸಂದರ್ಭದಲ್ಲಿ ವಹ್ನಿಯಿಂದ ವ್ಯಾಪ್ಯವಾದ ಧೂಮದಲ್ಲಿ ಕೃಷ್ಣ ಮುಂತಾದ ವಿಶೇಷಣವನ್ನು ಸಂಯೋಜಿಸಿದಲ್ಲಿ ಆ ವಿಶೇಷಣಕ್ಕೆ ಸಾರ್ಥಕ್ಯವನ್ನು ತಿಳಿಸುವಾಗ ವ್ಯಭಿಚಾರವಾರಕವಾಗಿದೆ ಎಂದು ಸ್ಫುಟಗೊಳಿಸಬೇಕು, ಹೊರತಾಗಿ ವ್ಯಾಪಕವಾದ ವಹ್ನಿಯೊಂದಿಗೆ ಸಂಯೋಜಿಸಿದ 'ವೇಣುಸಂಘರ್ಷಜನ್ಯ' ಎನ್ನುವ ವಿಶೇಷಣಕ್ಕೆ ಆ ನಿಯಮವಿಲ್ಲ. ಪರ್ವತದಲ್ಲಿ ವಹ್ನಿಯಿರಲು ಅದು ಮಹಾನಸವೆ? ಎಂದು ಸಾಧ್ಯದ ಅಸಿದ್ಧಿಯ ಪ್ರಶ್ನೆಯು ಪ್ರಾಪ್ತವಾದಲ್ಲಿ, ಪರ್ವತದಲ್ಲಿ ವೇಣುಸಂಘರ್ಷದಿಂದ ವಹ್ನಿಯು ಇರಲು ಶಕ್ಯವಿದೆ ಎಂದು ಸಾಧ್ಯಾಸಿದ್ಧಿಯ ನಿವಾರಣೆಗಾಗಿ ವಿಶೇಷಣವನ್ನು ವ್ಯಾಪಕವಾದ ಸಾಧ್ಯದೊಡನೆ ಸಂಯೋಜಿಸಲಾಗುವುದು. ಅದರಂತೆ ಪ್ರಕೃತದಲ್ಲೂ ಸಹ ಸಾಧ್ಯವ್ಯಾಪಕವಾದ ಉಪಾಧಿಯು ಪಕ್ಷದಲ್ಲಿ ಅಸಿದ್ಧ ಎನ್ನುವ ಸಂದೇಹವನ್ನು ನಿವಾರಿಸಲು ಶರೀರಿ ಎನ್ನುವ ವಿಶೇಷಣವನ್ನು ಸಂಯೋಜಿಸಲಾಗಿದೆ ಎಂದು ಭಾವ.

ಪಕ್ಷವು ಸರಿಯಾಗದು. ಅಸಿದ್ಧವಾದುದರಿಂದ ಎಂದಲ್ಲಿ[1]. ಇದು ಸಹ ಸಮಾನ[2]. ಆದುದರಿಂದಲೇ[3] ಪ್ರತಿಪಕ್ಷಾನುಮಾನದಲ್ಲೂ ಸಹ ವಿಶೇಷಣವು ವ್ಯರ್ಥ ಎನ್ನುವದನ್ನು ಪರಿಹರಿಸಿ ದಂತಾಯಿತು. (ಉತ್ತರವೇನು ಎನ್ನುವುದು ಮುಂದಿನ ವಾಕ್ಯಗಳಿಂದ ಸ್ಪುಟ ಗೊಳ್ಳುವುದು.) ವಿಶಿಷ್ಟವಾದ ಉಪಾಧಿಗೆ ಸಾಧ್ಯ-ವ್ಯಾಪಕತ್ವವು ಇದ್ದೇ ಇದೆ[4]. ವ್ಯಾಪಕದ (ಶರೀರಜನ್ಯತ್ವ ರೂಪ ಉಪಾಧಿಯ) ನಿವೃತ್ತಿಯು ವ್ಯಾಪ್ಯವನ್ನು (ಸಾಧ್ಯವಾದ ಸಕರ್ತೃಕತ್ವವನ್ನು) ನಿವೃತ್ತಿಗೊಳಿಸುವುದು ದಿಟ. ಉಪಾಧಿಯ ಆಭಾವವಾದರೋ ಪ್ರಕೃತದಲ್ಲಿ ಪ್ರತಿಪಕ್ಷದ ಉನ್ನಾಯಕ ಎಂದು ಹೇಳಲಾಗಿದೆ[5]. 'ಉಪಾಧಿಯಿಂದ

---

1. ಪ್ರಯೋಜನ ಸಾಮಾನ್ಯಾಭಾವವು - ಯಾವುದೇವಿಧವಾದ ಪ್ರಯೋಜನವೂ ಇಲ್ಲ ಎನ್ನವುದು ಎರಡನೆಯ ಪಕ್ಷ, ಪ್ರಕೃತದ ಕಾರ್ಯಾನ್ಯತ್ವ ಎನ್ನುವ ಉಪಾಧಿಯಲ್ಲಿನ ವಿಶೇಷಣಕ್ಕೆ ವ್ಯಭಿಚಾರವಾರಕತ್ವರೂಪ ಪ್ರಯೋಜನವಿಲ್ಲದಿದ್ದರೂ ಸಾಧನಾವ್ಯಾಪಕತ್ವರೂಪ ಪ್ರಯೋಜನವಿದೆ. ಕ್ಷಿತ್ಯಂಕುರಾದಿಕಂ.....ಎನ್ನುವ ಅನುಮಾನಕ್ಕೆ ಆಕಾರ್ಯತ್ವಂ-ಕಾರ್ಯಾನ್ಯತ್ವಂ ಎನ್ನುವುದು ಉಪಾಧಿ ಎಂದು ಹೇಳಲಾಗಿತ್ತು. ಕೇವಲ ಅನ್ಯತ್ವ ಎನ್ನುವದನ್ನೇ ಉಪಾಧಿ ಎಂದು ಹೇಳಿದಲ್ಲಿ ಉಪಾಧಿಯು ಕೇವಲಾನ್ವಯಿಯಾದುದರಿಂದ ಸಾಧ್ಯವ್ಯಾಪಕ ವಾಗಬಹುದು, ಆದರೆ ಕಾರ್ಯತ್ವರೂಪಹೇತುವಿಗೂ ವ್ಯಾಪಕವಾಗಿರುವುದರಿಂದ ಉಪಾಧಿಗೆ ಸಾಧನಾವ್ಯಾಪಕತ್ವವು ಪ್ರಾಪ್ತವಾಗುವದಿಲ್ಲ, ಆದರ ಪ್ರಾಪ್ತಿಗಾಗಿ ಕಾರ್ಯ ಎಂಬುವ ವಿಶೇಷಣಘಟಿತವಾಗಿ ಉಪಾಧಿಯನ್ನು ವಿವಕ್ಷಿಸಲಾಗಿದೆ. ಹೀಗಾಗಿ ಸಾಧನಾ-ವ್ಯಾಪಕತ್ವವು ಉಪಾಧಿಗೆ ಪ್ರಾಪ್ತವಾಗುವುದು. ಆದುದರಿಂದ ಯಾವ ಪ್ರಯೋಜನವೂ ಇಲ್ಲ ಎನ್ನುವುದು ಅಸಿದ್ಧ ಎಂದು ಭಾವ.

2. ಶರೀರಜನ್ಯತ್ವ ಎನ್ನುವ ಉಪಾಧಿಯಲ್ಲಿಯೂ ಸಾಧನಾವ್ಯಾಪಕತ್ವದ ಪ್ರಾಪ್ತಿಗಾಗಿ ಈ ವಿಶೇಷಣವನ್ನು ಸಂಯೋಜಿಸಲಾಗಿದೆ ಎಂದು ಭಾವ.

3. 'ವಿಶೇಷಣಕ್ಕೆ ವ್ಯಭಿಚಾರನಿವೃತ್ತಕತ್ವೇನೈವ ಸಾರ್ಥಕ್ಯ' ಎನ್ನುವ ನಿಯಮವನ್ನು ಒಪ್ಪದೆ, ಸಾಧನಾವ್ಯಾಪಕತ್ವರೂಪ ಬೇರೇಯದೇ ಆದ ಸಾರ್ಥಕತೆಯನ್ನೂ ಒಪ್ಪಬಹುದು ಎಂದು ಹೇಳಿದ್ದರಿಂದಲೇ

4. ಶರೀರಜನ್ಯತ್ವಂ ಎನ್ನುವ ಉಪಾಧಿಗೆ ಸಕರ್ತೃಕತ್ವರೂಪ ಸಾಧ್ಯದೊಡನೆ ವ್ಯಾಪಕತ್ವವು ಇದೆ ಎನ್ನುವುದು ಎಲ್ಲರಿಗೂ ಸಿದ್ಧವಾಗಿದೆ ಎಂದು ಭಾವ.

5. ಕ್ಷಿತ್ಯಂಕುರಾದಿಕಂ ಸಕರ್ತೃಕಮ್... ಎನ್ನುವ ಈಶ್ವರಸಾಧಕಾನುಮಾನಕ್ಕೆ 'ಶರೀರಜನ್ಯತ್ವಂ' ಎನ್ನುವ ಉಪಾಧಿ ಎಂದು ಹೇಳಲಾಗಿದೆ. ಅದು 'ಕ್ಷಿತ್ಯಂಕುರಾದಿಕಂ ವಿಕರ್ತೃಕಂ..' ಎನ್ನುವ ಪ್ರತಿಪಕ್ಷಾನುಮಾನವನ್ನು ಸೂಚಿಸಲು ಹೇಳಲಾಗಿದೆ ಎಂದು ಭಾವ.

ಸೂಚಿತವಾಗದ (ಶುದ್ಧ) ಅನುಮಾನದಲ್ಲಿ ಮಾತ್ರ ವ್ಯಭಿಚಾರವಾರಕವಾಗದ (ಹೇತುಘಟಿತ) ವಿಶೇಷಣವು ದೋಷಾವಹ, ಉಪಾಧಿಯಿಂದ ಸೂಚಿತವಾದ ಅನುಮಾನದಲ್ಲಿ ಅಲ್ಲ' ಎಂದು ವ್ಯವಸ್ಥೆಯನ್ನು ಒಪ್ಪಿದಲ್ಲಿ ದೋಷವಿಲ್ಲದಿರು-ವುದರಿಂದ[1].

**ವಿಶ್ವವು ಅಕಾರ್ಯವೇ?**

**ಅನುಕೂಲತರ್ಕೇಣೋಪಾಧಿಪ್ರತಿಪಕ್ಷನಿರಾಸ ಇತಿ ಚೇನ್ನ । ತದಭಾವಾತ್ । 'ಕರ್ತ್ರಭಾವೇ ಕಾರ್ಯಂ ನ ಸ್ಯಾದ್' ಇತಿ ಚೇನ್ನ । ಕಾರಣಾಭಾವ-ಪ್ರಯುಕ್ತತ್ವಾತ್ ಕಾರ್ಯಾಭಾವಸ್ಯ । ಕಾರ್ಯಸಾಮಾನ್ಯಂ ಹಿ ಕಾರಣಸಾಮಾನ್ಯಾಯತ್ತಮ್ । ಅನ್ಯಥಾ ಕರ್ಮಾದಿಕಾರಕವಿಶೇಷಾಭಾವೇನ ಅಸನಶಯನಾದಿಕಾರ್ಯಾಭಾವಪ್ರಸಙ್ಗಃ । 'ಕರ್ಮಾದಿಕಂ ನ ಸಾರ್ವತ್ರಿಕಂ,**

---

1. ಹೇತುಘಟಕ ವಿಶೇಷಣಗಳಿಗೆ ವ್ಯಭಿಚಾರವಾರಕತ್ವವೇ ಪ್ರಯೋಜನ ಎನ್ನುವ ನಿಯಮವನ್ನು ಈ ರೀತಿಯಾಗಿ ವ್ಯವಸ್ಥೆಗೊಳಿಸಲಾಗುವುದು. ಉಪಾಧಿಯಿಂದ ಸೂಚಿತವಾಗಿರದ ಶುದ್ಧ ಅನುಮಾನಗಳಲ್ಲಿ ಮಾತ್ರ ವ್ಯಭಿಚಾರವಾರಕತ್ವರೂಪ ಪ್ರಯೋಜನವು ಆವಶ್ಯಕ, ಯಾವ ಅನುಮಾನವು ಉಪಾಧಿಯಿಂದ ಸೂಚಿತವಾಗಿರುವುದೋ ಅಲ್ಲಿನ ಹೇತುವಿನಲ್ಲಿ ಘಟಿತವಾದ ವಿಶೇಷಣಗಳಿಗೆ ವ್ಯಭಿಚಾರನಿವಾರಕತ್ವರೂಪ ಪ್ರಯೋಜನದ ನಿಯಮವಿಲ್ಲ ಎಂದು. ಇನ್ನು ಕಾರ್ಯ-ಕಾರಣಭಾವವನ್ನು ಅನುಭವದಲ್ಲಿರುವಂತೆ ಒಪ್ಪಬೇಕು. ಉದಾಹರಣೆಗೆ ಘಟಕ್ಕೆ ದಂಡ ಕಾರಣ, ಹೊರತಾಗಿ ಕೃಷ್ಣದಂಡವಲ್ಲ, ಕೃಷ್ಣದಂಡ ಎಂದು ಹೇಳಿದಲ್ಲಿ ಗೌರವ. ಹಾಗೆಯೇ ಪ್ರಕೃತದಲ್ಲೂ ಕಾರ್ಯತ್ವಾಭಾವಕ್ಕೆ ಅಜನ್ಯತ್ವವು ಕಾರಣ ಹೊರತಾಗಿ ಶರೀರ್ಯಜನ್ಯತ್ವವು ಕಾರಣವಲ್ಲ ಎನ್ನುವುದು ಪ್ರಸಕ್ತ ಪ್ರಶ್ನಕನ ಹೃದಯ. ಆದರೆ ಪ್ರಕೃತದಲ್ಲಿ ಶರೀರಿಜನ್ಯತ್ವಾಭಾವ ಎನ್ನುವುದು ಅಖಂಡ ಧರ್ಮ ಎಂದು ಒಪ್ಪಲಾಗಿದೆ. ಅಂದರೆ 'ನಮಗೆ ಸಮ್ಮತನಾದ ಕರ್ತೃವಿನಿಂದ ಜನ್ಯವಾಗಿಲ್ಲ- ಶರೀರವಿಶಿಷ್ಟಪುರುಷನಿಂದ ಜನ್ಯವಾಗಿಲ್ಲ' ಎನ್ನುವುದು. ಆದುದರಿಂದ ಶರೀರಿ-ಅಜನ್ಯ ಎನ್ನುವ ಎರಡು ಪ್ರತ್ಯೇಕ ಪದಾರ್ಥಗಳು ಎಂದು ವಿಭಾಗಿಸುವುದು ತರವಲ್ಲ. ಆದುದರಿಂದ 'ಪ್ರಯೋಜನಾಧೀನ ಪ್ರಮಾಣ....ಎನ್ನುವ ಆಪಾದನೆಯು ತರವಲ್ಲ ಎಂದು ಉತ್ತರಿಸಿದಂತಾಯಿತು, ಎಂದು ಭಾವ. 'ಮುಂದೆ ಉತ್ತರಿಸುತೇವೆ' ಎಂದು ಈ ಹಿಂದೆ ತಿಳಿಸಲಾಗಿತ್ತು, ಪ್ರಕೃತ ಉತ್ತರಿಸಲಾಗಿದೆ ಎಂದು ತಿಳಿಯುವುದು.

**ಕರ್ತಾ ತು ಸಾರ್ವತ್ರಿಕಃ' ಇತಿ ಚೇನ್ನ । ತತ್ಸಿದ್ಧ್ಯರ್ಥತ್ವಾದೇವಾಸ್ಯ ಪರಕೀಯಪ್ರಯಾಸಸ್ಯ ।**

**ಯದ್ಯಪಿ ಪ್ರತಿಪಕ್ಷೇ ನೋಪಾಧ್ಯುದ್ಭಾವನಮ್ ಉಚಿತಮ್ । ಉಪಾಧೇಃ ಪ್ರತಿಪಕ್ಷೋನ್ನಾಯಕತ್ವೇನ ವೈಯರ್ಥ್ಯಾತ್ । ತಥಾಪ್ಯಭ್ಯುಪಗಮ-ವಾದೋಽಯಮಿತ್ಯದೋಷಃ ।**

ಅನುಕೂಲತರ್ಕದಿಂದ ಉಪಾಧಿ-ಪ್ರತಿಪಕ್ಷಾನುಮಾನಗಳನ್ನು ನಿರಾಕರಿಸ-ಲಾಗುವುದು ಎಂದೆನ್ನಲಾಗದು. ಅದು (ಅನುಕೂಲತರ್ಕವು) ಇಲ್ಲದಿರುವುದ-ರಿಂದ. '(ಈ ವಿಶ್ವಕ್ಕೆ) ಕರ್ತೃವಿಲ್ಲ ಎಂದಾದಲ್ಲಿ (ಈ ವಿಶ್ವವು) ಕಾರ್ಯವೇ ಅಲ್ಲ ಎಂದಾದೀತು' ಎನ್ನುವುದು (ಪ್ರಕೃತದಲ್ಲಿ ಅನುಕೂಲತರ್ಕ ಎನ್ನುವುದು) ತರವಲ್ಲ. ಕಾರ್ಯಾಭಾವವು ಕಾರಣಾಭಾವದ ಅಧೀನವಾದು ದರಿಂದ[1]. ಕಾರ್ಯಸಾಮಾನ್ಯವು ಕಾರಣಸಾಮಾನ್ಯದ ಅಧೀನವಾಗಿದೆ. ಹಾಗಾಗದ ಪಕ್ಷದಲ್ಲಿ (ಕಾರ್ಯಸಾಮಾನ್ಯವು ಕಾರಣಸಾಮಾನ್ಯದ ಅಧೀನ ಎಂದು ಒಪ್ಪದ ಪಕ್ಷದಲ್ಲಿ) ಕರ್ಮಾದಿಕಾರಕಗಳ ವಿಶೇಷಾಭಾವದಿಂದ ಆಸನ, ಶಯನ ಮುಂತಾದ ಕಾರ್ಯ(ವಿಶೇಷ)ಗಳು ಇಲ್ಲ ಎಂದಾದೀತು[2]. ಕರ್ಮಾದಿಗಳು ಎಲ್ಲೆಡೆ ಇಲ್ಲದಿರಬಹುದು, ಆದರೆ ಕರ್ತೃವು ಎಲ್ಲೆಡೆ (ಅವಶ್ಯಕ) ಎಂದು

---

1. ಕಾರಣವಿಶೇಷಾಭಾವದಿಂದ ಕಾರ್ಯಾಭಾವವನ್ನು ಊಹಿಸಬಾರದು, ಕಾರಣ-ಸಾಮಾನ್ಯಾಭಾವದಿಂದ ಕಾರ್ಯಾಭಾವವನ್ನು ಊಹಿಸಬೇಕು. ಪ್ರಕೃತದಲ್ಲಿ ಈ ವಿಶ್ವದ ಕರ್ತೃವಿಗೆ ಶರೀವು ಇಲ್ಲ ಎಂದಾದಲ್ಲಿ ಆತನು ಕರ್ತೃವಾಗಲಾರ ಎಂದುಷ್ಟೇ ವಾದಿಸಲಾಗಿದೆ ಎಂದು ಭಾವ.

2. ಈ ಕಾರಕವಿಶೇಷಗಳಿಲ್ಲ ಎಂದು ಕಾರ್ಯಸಾಮಾನ್ಯಾಭಾವವನ್ನು ಊಹಿಸಲು ಶಕ್ಯವಿಲ್ಲ. 'ಪುಷ್ಪಂ ವಿಕಸತಿ- ಕುಸುಮವು ಅರಳುವುದು' 'ಸೂರ್ಯಃ ಪ್ರಕಾಶತೇ- ಸೂರ್ಯನು ಪ್ರಕಾಶಿಸುವನು' ಈ ಮುಂತಾದ ಸ್ಥಳದಲ್ಲಿ ಕರ್ಮಕಾರಕಗಳು ಇಲ್ಲ ಎಂದು ಅರಳುವಿಕೆ, ಪ್ರಕಾಶಿಸುವಿಕೆ ಮುಂತಾದ ಕಾರ್ಯಾಭಾವವನ್ನು ಊಹಿಸುವುದು ತರವೇ? ಹಾಗೆಯೇ ವಿಶ್ವಸೃಷ್ಟಿರೂಪ ಕಾರ್ಯದಲ್ಲಿ ಕಾರಣವಾದ ಕರ್ತೃಕಾರಕವು ಇಲ್ಲವೆಂದು ಕಾರ್ಯಾಭಾವವನ್ನು ಊಹಿಸುವುದು ತರವಲ್ಲ ಎಂದು ಭಾವ.

ಹೇಳುವುದು ತರವಲ್ಲ.[1] ಆದರ (ಆ ಕರ್ತೃವಿನ) ಸಿದ್ಧಿಗಾಗಿಯೇ ಪರಕೀಯನ ಈ ಪ್ರಯಾಸ[2].

ವಸ್ತುತಃ ಪ್ರತಿಪಕ್ಷಾನುಮಾನಕ್ಕೆ ಉಪಾಧಿಯ ಉದ್ಭಾವನೆಯೇ ಯೋಗ್ಯವಾಗದು. ಉಪಾಧಿಯು ಪ್ರತಿಪಕ್ಷೋನ್ನಾಯಕವಾಗಿ ವ್ಯರ್ಥವಾದುದರಿಂದ[3]. ಆದರೂ (ಪ್ರತಿಪಕ್ಷಾನುಮಾನಕ್ಕೆ ಶರೀರಿಜನ್ಯತ್ವವನ್ನು ಉಪಾಧಿ ಎಂದು) ಒಪ್ಪಿ ಈ ವಾದವು, ಆದುದರಿಂದ ದೋಷವಿಲ್ಲ.

**ಶರೀರಿಜನ್ಯತ್ವಕ್ಕೆ ಸಾಧ್ಯಾವ್ಯಾಪಕತ್ವವು ಇಲ್ಲ -**

**ನನು, ಶರೀರಪ್ರೇರಣಾಯಾಃ ಸಕರ್ತೃಕತ್ವೇಽಪಿ ಶರೀರಿಜನ್ಯತ್ವಂ ನಾಸ್ತಿ । ಕರ್ಮಭೂತಸ್ಯ ಶರೀರಸ್ಯ ಕರ್ತರಿ ಪ್ರವೇಶಾನುಪಪತ್ತೇಃ । ತತಃ ಸಾಧ್ಯಾವ್ಯಾಪಕತ್ವಮಿತಿ । ಉಚ್ಯತೇ- ಶರೀರಪ್ರೇರಣಂ ಹಿ ಶರೀರಕ್ರಿಯಾನುಗುಣಪ್ರಯತ್ನವತ್ತ್ವಮ್ । ನ ಚಾಶರೀರಸ್ಯ ಪ್ರಯತ್ನೋತ್ಪತ್ತಿರಸ್ತೀತಿ ।**

ಆದರೆ, ಶರೀರ ಪ್ರೇರಣೆಯು ಸಕರ್ತೃಕವಾದರೂ ಶರೀರಿಜನ್ಯತ್ವವು ಇಲ್ಲ. ಕರ್ಮವಾದ ಶರೀರಕ್ಕೆ ಕರ್ತೃತ್ವದಲ್ಲಿ ಪ್ರವೇಶವು ಅನುಪಪನ್ನವಾಗಿರುವುದರಿಂದ. ಆದುದರಿಂದ (ಉಪಾಧಿಗೆ) ಸಾಧ್ಯಾವ್ಯಾಪಕತ್ವವು (ಪ್ರಾಪ್ತವಾಯಿತು)

---

1. ಕಾರಕವಿಶೇಷಾಭಾವದಿಂದ ಕಾರ್ಯಾಭಾವವನ್ನು ಊಹಿಸುವುದು ಸರಿಯಲ್ಲ ಎನ್ನುವುದು ಸರಿಯಾದರೂ, ಕರ್ತೃವಿನ ಅಭಾವದಿಂದ ಕಾರ್ಯಾಭಾವವನ್ನು ಊಹಿಸುವುದು ತರವೇ ಆಗಿದೆ. ಎಲ್ಲ ಕಾರ್ಯಗಳಲ್ಲಿ ಕರ್ಮಾದಿಕಾರಕಗಳು ಇಲ್ಲದಿದ್ದರೂ, ಎಲ್ಲ ಕ್ರಿಯೆಯಲ್ಲಿ ಕರ್ತೃಕಾರಕವು ಇರಲೇ ಬೇಕಲ್ಲವೇ? ಎಂದು ಪ್ರಶ್ನಕನ ಭಾವ.

2. ಈಶ್ವರನನ್ನು ಒಪ್ಪದ ವಾದಿಗಳು ಎಲ್ಲ ಕಾರ್ಯದಲ್ಲೂ ಕರ್ತೃವಿದ್ದಾನೆ ಎಂದು ಒಪ್ಪಿರುವದಿಲ್ಲ. ಅಂಕುರಾದಿಗಳೆಲ್ಲವೂ ಪ್ರಾಕೃತಿಕಕ್ರಿಯೆ ಎಂದು ನಿರೀಶ್ವರವಾದಿಗಳು ವಾದಿಸುವರು ಎಂದು ಭಾವ.

3. ವಾದಿಯು ಅನುಮಾನವನ್ನು ಪ್ರಯೋಗಿಸಿದಾಗ ಪ್ರತಿವಾದಿಯು ಉಪಾಧಿಯನ್ನು ಉದ್ಭಾವಿಸುವ ಮುಖಾಂತರ ಪ್ರತಿಪಕ್ಷಾನುಮಾನವನ್ನು ತಿಳಿಸಿರುತ್ತಾನೆ. ಪ್ರತಿವಾದಿಯ ಅನುಮಾನಕ್ಕೆ ಪುನಃ ವಾದಿಯು ಉಪಾಧಿಯನ್ನು ತಿಳಿಸುವ ಮುಖಾಂತರ ಪ್ರತಿ ಅನುಮಾನವನ್ನು ತೋರಿಸುವುದು ತರವಲ್ಲ. ವಾದಿಯ ಮೊದಲ ಅನುಮಾನವೇ ಪ್ರತಿವಾದಿಯ ಅನುಮಾನಕ್ಕೆ ಪ್ರತಿಪಕ್ಷಾನುಮಾನವಾಗಿರುತ್ತದೆ, ಹೀಗಿರುವಾಗ ಮತ್ತೊಂದು ಪ್ರತಿಪಕ್ಷಾನುಮಾನವನ್ನು ಹೇಳುವುದು ಅನುಚಿತ ಎಂದು ಭಾವ.

ಎಂದು[1]. ಉತ್ತರಿಸಲಾಗುವುದು. ಶರೀರ ಪ್ರೇರಣೆ ಎಂದರೆ 'ಶರೀರದ ಕ್ರಿಯೆಗೆ ಅನುಗುಣವಾದ ಪ್ರಯತ್ನವನ್ನು ಹೊಂದಿರುವುದು' ಎಂದು. ಅಶರೀರನಲ್ಲಿ ಪ್ರಯತ್ನದ ಉತ್ಪತ್ತಿಯಾಗಲಾರದು[2].

---

1. 'ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಎಂಬ ಅನುಮಾನಕ್ಕೆ ಶರೀರಿಜನ್ಯತ್ವವನ್ನು ಉಪಾಧಿ ಎಂದು ತಿಳಿಸಿಲಾಗಿತ್ತು, ಉಪಾಧಿಯು ಸಾಧ್ಯದಿಂದ ವ್ಯಾಪಕವಾಗಿರಬೇಕು, ಪ್ರಕೃತ ಈ ಉಪಾಧಿಗೆ ಸಾಧ್ಯವ್ಯಾಪಕತ್ವವು ಇಲ್ಲ ಎಂದು ಸಂದೇಹಿಸುವರು. 'ದೇವದತ್ತಃ ಘಟಮಾನಯತಿ' ದೇವದತ್ತನು ಕರ್ತಾ ಘಟವು ಕರ್ಮ, ಆನಯನವು ಕ್ರಿಯೆ. ಹಾಗೆಯೇ 'ದೇವದತ್ತಃ ಶರೀರಂ ಪ್ರೇರಯತಿ- ದೇವದತ್ತನು (ತನ್ನ) ಶರೀರವನ್ನು ಪ್ರೇರಿಸುತ್ತಾನೆ' ಎನ್ನುವ ವಾಕ್ಯದಲ್ಲಿ 'ಶರೀರಂ' ಎನ್ನುವುದು ಕರ್ಮಸೂಚಕ. ದೇವದತ್ತನು ಕರ್ತಾ. ಈ ಶರೀರಪ್ರೇರಣೆ ಎಂಬ ಕ್ರಿಯೆಯಲ್ಲಿ, ಶರೀರವೇ ಕರ್ಮ,ಅದಕ್ಕೇ ಕರ್ತೃತ್ವದಲ್ಲಿ ಪ್ರವೇಶವಿಲ್ಲ. ಒಂದೇ ಪದಾರ್ಥಕ್ಕೆ ಕರ್ತೃತ್ವ ಮತ್ತು ಕರ್ಮತ್ವವು ವಿರುದ್ಧವಾದುದರಿಂದ. ಆದುದರಿಂದ ಶರೀರಪ್ರೇರಣ ಎನ್ನುವ ಕ್ರಿಯೆಯಲ್ಲಿ ನಿಃಶರೀರನಾದ ಅಂದರೆ ಕೇವಲ ದೇವದತ್ತನು ಕರ್ತಾ. ಅಂದರೆ ಶರೀರಪ್ರೇರಣೆ ಎಂಬ ಈ ಕಾರ್ಯದಲ್ಲಿ ಕೇವಲ ದೇವದತ್ತನು ಕರ್ತಾ ಎಂದು ಒಪ್ಪಬೇಕು. ಆದುದರಿಂದ 'ಯತ್ರಯತ್ರ ಕಾರ್ಯತ್ವಂ ತತ್ರತತ್ರ ಶರೀಜನ್ಯತ್ವಂ' ಎಂಬ ನಿಯಮಕ್ಕೆ ಇಲ್ಲಿ ಚ್ಯುತಿಯು ಇದೆ . ಹಾಗಾಗಿ ಈ ಕ್ರಿಯೆಯಲ್ಲಿ ಉಪಾಧಿಯಾದ ಶರೀರಿ-ಜನ್ಯತ್ವವು ಇಲ್ಲದಿರುವುದರಿಂದ ಸಾಧ್ಯದಿಂದ ಉಪಾಧಿಗೆ ವ್ಯಾಪಕತ್ವವು ಇಲ್ಲ ಎಂದು ಭಾವ.

2. ಒಂದು ಕ್ರಿಯೆಯಲ್ಲಿ ಕರ್ತೃ ಮತ್ತು ಕರ್ಮಗಳು ಒಂದೇ ಆಗಲು ಶಕ್ಯವಿಲ್ಲ. ಆದುದರಿಂದ 'ದೇವದತ್ತಃ ಶರೀರಂ ಪ್ರೇರಯತಿ' ಎನ್ನುವಲ್ಲಿ ಶರೀರವು ಕರ್ಮ, ಅದು ಕರ್ತೃವಾಗಲು ಶಕ್ಯವಿಲ್ಲ, ಆದುದರಿಂದ ಶುದ್ಧನಾದ ದೇವದತ್ತನು ಕರ್ತೃ ಎಂದು ಒಪ್ಪಬೇಕು. ಅಂದರೆ ಶರೀರರಹಿತನಾದ ದೇವದತ್ತನು ಕರ್ತಾ ಎಂದು ತಿಳಿಯುವುದು. ಶರೀರರಹಿತನಾದ ಕರ್ತೃವು ಕಂಡಿರುವುದರಿಂದ, ಶರೀರಜನ್ಯತ್ವಕ್ಕೆ ಉಪಾಧಿತ್ವವು ಸರಿಯಾಗದು ಎಂದು ಸಂದೇಹಿಸಿದಲ್ಲಿ ಉತ್ತರಿಸುತ್ತಾರೆ- 'ದೇವದತ್ತಃ ಶರೀರಂ ಪ್ರೇರಯತಿ' ಎನ್ನುವ ವಾಕ್ಯದ ಭಾವವು 'ದೇವದತ್ತನು ಶರೀರದ ಪರಿಸ್ಪಂದನಕ್ಕೆ ಅನುಕೂಲವಾದ ಪ್ರಯತ್ನವನ್ನು ಮಾಡುತ್ತಾನೆ' ಎಂದು. ಆಗ ಪ್ರಯತ್ನವು ಕರ್ಮವಾಗುವುದು ಶರೀರವಲ್ಲ. ಇನ್ನು ಪ್ರಯತ್ನವು ಶರೀರರಹಿತನಲ್ಲಿ ಅಸಂಭವ, ತನ್ನಿಮಿತ್ತ ಕರ್ತೃವಿಗೆ ಶರೀರ ಇದೆ ಎಂದು ಒಪ್ಪಲೇಬೇಕು. ಹಾಗಾಗಿ ಸಾಧ್ಯವ್ಯಾಪಕತ್ವವು ಉಪಾಧಿಗೆ ಇಲ್ಲ. ಹಾಗಾಗಿ ಯಾವ ಬಾಧಕವೂ ಇಲ್ಲ. ಶಾಸ್ತ್ರದಲ್ಲಿ ಒಂದು ನಿಯಮವು ಇದೆ- 'ವಿಶಿಷ್ಟಸ್ಯ ಯದ್ಭವತಿ ತದ್ವಿಶೇಷಣಸ್ಯಾಪಿ' ಎಂದು. ಈ ನಿಯಮದಂತೆ ಶರೀರಸಹಿತನಾದ ದೇವದತ್ತ ಕರ್ತೃ ಎಂದಲ್ಲಿ ವಿಶೇಷಣವಾದ ಶರೀರಕ್ಕೂ ಕರ್ತೃತ್ವವು ಪ್ರಾಪ್ತವಾಯಿತು, ಕರ್ತೃವಿಗೆ

ಪುಟ 375ರಲ್ಲಿ.......

**ಕೇವಲಾನುಮಾನದಿಂದ ವಿಶ್ವವನ್ನು ಕಾರ್ಯ ಎಂದು ಸಾಧಿಸಲು ಶಕ್ಯವೆ?**

**ಕಿಞ್ಚ, ಆಗಮಾನಪೇಕ್ಷಾನುಮಾನಪಕ್ಷೇ ಅನುಪಲಬ್ಧಪ್ರಾಕ್ಕೋಟಿಷು ಪರ್ವತಾದಿಷು ಕಾರ್ಯತ್ವಂ ಕುತಃ ಸಿದ್ಧಮ್? ಸಾವಯವತ್ವಾದಿತಿ ಚೇತ್, ಕಿಮಿದಂ ಸಾವಯವತ್ವಮ್? 'ಅವಯವಸಮುದ್ಭಿತ್ವಮ್' ಇತಿ ಚೇನ್ನ । ಪಟಾವಯವತನ್ತುಸಂಯುಕ್ತಾऽऽಕಾಶೇ ವ್ಯಭಿಚಾರಾತ್ । ಅವಯವ-ಸಮವೇತತ್ವಂ ಚೇಜ್ಜಾತ್ಯಾ(ದೌ)ಮ್ (ಅನೈಕಾಂತ್ಯಮ್) । ಸ್ವಾವಯವ-ಸಮವೇತತ್ವಂ ಚೇತ್ 'ಸ್ವಸಮವಾಯಿಕಾರಣಸಮವೇತತ್ವಮ್' ಇತಿ ಹ್ಯುಕ್ತಂ ಸ್ಯಾತ್ । ತಥಾಚ ಕಾರ್ಯತ್ವಮನಭ್ಯುಪಗಚ್ಛತಃ ತದಪ್ಯಸಿದ್ಧಮ್ । 'ದ್ರವ್ಯಾಶ್ರಿತದ್ರವ್ಯತ್ವಮ್' ಇತಿ ಚೇನ್ನ । ವಾರಿನಿಹಿತೇ ಪಾರ್ಥಿವಪರಮಾಣೌ ವ್ಯಭಿಚಾರಾತ್ ।**

ಮತ್ತೂ ಸಹ ಆಗಮವನ್ನು ಆಶ್ರಯಿಸದ (ಸ್ವತಂತ್ರವಾದ) ಅನುಮಾನವಿದು ಎಂದಾದಲ್ಲಿ (ಈ ಜಗದ) ಪೂರ್ವಾವಸ್ಥೆಯು ಉಪಲಬ್ಧವಾಗಿಲ್ಲದಿರುವ ಪರ್ವತಾದಿಗಳಲ್ಲಿ ಕಾರ್ಯತ್ವವು ಯಾವ ಪ್ರಮಾಣದಿಂದ ಸಿದ್ಧವಾಗಿದೆ[1]?

---

...... ಪುಟ 374 ರಿಂದ

ವಿಶೇಷಣವಾದ ಶರೀರವೇ ಕರ್ಮ ಎಂದಲ್ಲಿ ಪುನಃ ಕರ್ಮತ್ವ ಮತ್ತು ಕರ್ತೃತ್ವವು ಒಂದೇ ವಸ್ತುವಿಗೆ ಎನ್ನುವುದು ವಿರುದ್ಧವಲ್ಲವೇ ಎಂದು ಸಂದೇಹಿಸುವುದು ತರವಲ್ಲ. 'ಚಿತ್ರಗುಮಾನಯ' 'ಚಿತ್ರವರ್ಣದ ಗೋವಿನ ಸ್ವಾಮಿಯನ್ನು ಕರೆದು ತನ್ನಿ' ಎನ್ನುವಲ್ಲಿ ವಿಶೇಷಣವಾದ ಚಿತ್ರಗೋವಿಗೆ ಆನಯನಕ್ರಿಯೆಯಲ್ಲಿ ಅನ್ವಯವು ಇರುವದಿಲ್ಲ, ಕೇವಲ ಗೋಸ್ವಾಮಿಗೆ ಮಾತ್ರ ಕರ್ಮತ್ವ ಎನ್ನುವುದು ಅನುಭವದಲ್ಲಿ ಸಿದ್ಧವಾಗಿದೆ. ಆದುದರಿಂದ ಪ್ರಕೃತ ವಿಶೇಷಣವಾದ ಶರೀರಕ್ಕೆ ಕರ್ತೃತ್ವವು ಪ್ರಾಪ್ತವಾಗಲೇ ಬೇಕೆಂದು ಆಗ್ರಹಿಸುವಂತಿಲ್ಲ. ಹಾಗೆಯೇ 'ಸ್ವಾಧ್ಯಾಯೋऽಧ್ಯೇತವ್ಯಃ' ತನ್ನ ವೇದಭಾಗವನ್ನು ಅಭ್ಯಸಿಸಬೇಕು ಇತ್ಯಾದಿ ಸ್ಥಳದಲ್ಲಿ ಅಧ್ಯಯನಕರ್ತೃತ್ವ ಹಾಗೂ 'ತನ್ನ' ಎಂದು ವೇದಕ್ಕೆ ವಿಶೇಷಣಭೂತನಾಗಿ ಕರ್ತೃವಿಗೆ ಕರ್ಮತ್ವವನ್ನೂ ಕಾಣಬಹುದಾಗಿದೆ, ಆದುದರಿಂದ ಒಂದೇ ವಸ್ತುವಿಗೆ ಕರ್ತೃತ್ವ ಮತ್ತು ಕರ್ಮತ್ವವನ್ನು ಒಪ್ಪಲು ಯಾವ ಅನುಪಪತ್ತಿಯೂ ಇರುವುದಿಲ್ಲ ಎಂದು ಭಾವ.

1. ಘಟಾದಿಗಳ ಪೂರ್ವಾವಸ್ಥೆ- ಮಣ್ಣಿನ ಅವಸ್ಥೆ , ಘಟಾದಿಗಳ ಉತ್ಪತ್ತಿ ಮತ್ತು ಅದರ ಪ್ರಾಗಭಾವ ಮುಂತಾದವುಗಳು ಪ್ರತ್ಯಕ್ಷಾದಿಗಳಿಂದ ತಿಳಿದು ಬರುವುದು, ಹಾಗೆ ಪರ್ವತಾದಿಗಳ ಪೂರ್ವಾವಸ್ಥೆ ಮತ್ತು ಅದರ ಉತ್ಪತ್ತಿ ಪ್ರಾಗಭಾವ ಮುಂತಾದವುಗಳು ಯಾವ ಪ್ರಮಾಣದಿಂದ ತಿಳಿಯಲಾಗಿದೆ ಎಂದು ಪ್ರಶ್ನೆಯ ಭಾವ.

ಅವಯವದಿಂದ ಕೂಡಿರುವುದರಿಂದ ಎಂದಲ್ಲಿ[1], ಸಾವಯವತ್ವ ಎಂದರೇನು? ಅವಯವದಿಂದ ಸಂಬಂಧವನ್ನು ಹೊಂದಿರುವದು ಎಂದೆನ್ನುವದು ಸರಿಯಾಗದು. ಪಟದ ಅವಯವಾದ ತಂತುವಿನೊಡನೆ ಸಂಯೋಗ ಸಂಬಂಧವನ್ನು ಹೊಂದಿರುವ ಆಕಾಶದಲ್ಲಿ ವ್ಯಭಿಚರಿತವಾಗುವುದರಿಂದ[2]. ಸಮವಾಯ ಸಂಬಂಧದಿಂದ ಅವಯವದ ಸಂಬಂಧವನ್ನು ಹೊಂದಿರುವುದು ಎಂದಲ್ಲಿ, ಜಾತಿಯಲ್ಲಿ (ವ್ಯಭಿಚರಿತವಾಗುವುದು)[3]. 'ತನ್ನ ಅವಯವದಲ್ಲಿ ಸಮವಾಯ ಸಂಬಂಧದಿದ ಇರುವುದು' ಎಂದು ವಿವಕ್ಷಿಸಲಾಗಿದೆ ಎಂದಲ್ಲಿ 'ತನ್ನ ಸಮಾವಾಯಿಕಾರಣದೊಡನೆ ಸಮವಾಯಸಂಬಂಧದಿಂದ ಕೂಡಿರುವುದು' ಎಂದು ಹೇಳಿದಂತಾಗುವುದು[4]. ಹಾಗಾದಲ್ಲಿ (ಪರ್ವತಾದಿ ಗಳಲ್ಲಿ) ಕಾರ್ಯತ್ವವನ್ನು ಒಪ್ಪದ ವಾದಿಗೆ ಅದೂ ( ಈ ಹೇತುವು) ಅಸಿದ್ಧ[5].

1. ಯಾವುದು ಅವಯವದಿಂದ ಯುಕ್ತವಾಗಿರುವುದೋ ಅದು ಕಾರ್ಯವೇ ಆಗಿರುವುದು ಎಂದು ಅನುಮಾನದಿಂದ ತಿಳಿಯಲು ಶಕ್ಯವಿದೆ ಎಂದು ಭಾವ.

2. 'ಪರ್ವತಾದಯಃ ಕಾರ್ಯಾಃ ಸಾವಯವತ್ವಾತ್' ಎನ್ನುವ ಅನುಮಾನದಿಂದ ಕಾರ್ಯತ್ವವನ್ನು ಸಾಧಿಸಲಾಗುವುದು ಎಂದು ಹೇಳಲು ಶಕ್ಯವಿಲ್ಲ. ಸಾವಯವ ಎಂದರೆ ಅವಯವದಿಂದ ಸಂಬಂಧವನ್ನು ಹೊಂದಿರುವುದು ಎಂದು ಅಭಿಪ್ರೇತಿಸಲಾಗಿದೆ, ಕಾರ್ಯವಲ್ಲದ ಗಗನಾದಿಗಳಲ್ಲೂ ಪಟಾದಿಗಳ ಅವಯವವಾದ ತಂತ್ವಾದಿಗಳಿಂದ ಸಂಯೋಗ ಸಂಬಂಧವು ಇದೆ, ಈ ಹೇತುವು ವ್ಯಭಿಚರಿತವಾಯಿತು. ಆದುದರಿಂದ ಸಾವಯವತ್ವ ಹೇತುವಿನಿಂದ ಕಾರ್ಯತ್ವವನ್ನು ಸಾಧಿಸಲು ಶಕ್ಯವಿಲ್ಲ ಎಂದು ಭಾವ.

3. ಗಗನ-ತಂತುವಿನ ಸಂಬಂಧವು ಸಂಯೋಗ, ಆದರೆ ಸಮವಾಯಸಂಬಂಧವನ್ನು ಪ್ರಕೃತದಲ್ಲಿ ವಿವಕ್ಷಿಸಲಾಗಿದೆ. ಆದುದರಿಂದ ಹೇತುವು ಗಗನದಲ್ಲಿ ವ್ಯಭಿಚರಿತವಾಗಲಾರದು, ಆದರೆ ಜಾತಿ ಮತ್ತು ತಂತುಗಳ ಸಂಬಂಧವು ಸಮವಾಯವೇ ಆಗಿದೆ, ಸಮವಾಯಸಂಬಂಧೇನ ಸಾವಯವತ್ವಾತ್ ಎನ್ನುವ ಹೇತುವು ಕಾರ್ಯವಾಗಿರದ ನಿತ್ಯವಾದ ಜಾತಿಯಲ್ಲಿ ಪುನಃ ವ್ಯಭಿಚರಿತ ಎಂದು ಭಾವ.

4. ತಂತು ಮತ್ತು ಜಾತಿಗೆ ಇರುವ ಸಂಬಂಧವು ಸಮವಾಯವಾದರೂ, ಜಾತಿಯು, ಪಟಕ್ಕೆ ಕಾರಣವಾದ ತಂತುವಿನಲ್ಲಿ ಸಮವಾಯಸಂಬಂಧದಿಂದ ಇದೆ, ಹೊರತು, ತನಗೆ ಕಾರಣವಾದ ಅವಯವದಲ್ಲಿ ಸಮವಾಯಸಂಬಂಧದಿಂದ ಇಲ್ಲದ ಪ್ರಯುಕ್ತ ವ್ಯಭಿಚಾರವಿಲ್ಲ ಎಂದು ಭಾವ.

5. ಪರ್ವತಾದಿಗಳನ್ನು ಕಾರ್ಯ ಎಂದು ಒಪ್ಪದ ವಾದಿಯು ಅವುಗಳಿಗೆ ಸಮವಾಯಿ ಕಾರಣವಾದ ಅವಯುವಗಳು ಇವೆ ಎಂದೂ ಸಹ ಒಪ್ಪುವುದಿಲ್ಲ, ಆದ್ದರಿಂದ 'ಸಾವಯವತ್ವಾತ್- ಸಮವಾಯಸಂಬಂಧೇನ ಸ್ವಾವಯವೇ ಸ್ಥಿತತ್ವಾತ್' ಎನ್ನುವ ಹೇತುವು ಅಸಿದ್ಧವಾಯಿತು ಎಂದು ಭಾವ.

ದ್ರವ್ಯಾಶ್ರಿತದ್ರವ್ಯತ್ವ ಎಂದೆನ್ನುವುದೂ ತರವಲ್ಲ. ನೀರಿನಲ್ಲಿರುವ ಪೃಥ್ವೀಪರಮಾಣುವಿನಲ್ಲಿ ವ್ಯಭಿಚರಿತವಾಗುವುದರಿಂದ[1].

**'ದ್ರವ್ಯಸಮವೇತದ್ರವ್ಯತ್ವಮ್' ಇತಿ ಚೇತ್, ತಥಾಪಿ ದ್ವ್ಯಣುಕಸಮವೇತೇ ಪರಮಾಣೌ ವ್ಯಭಿಚಾರ ಏವ । 'ದ್ವ್ಯಣುಕಂ ಪರಮಾಣುಸಮವೇತಂ ನ ಪರಮಾಣುಃ ದ್ವ್ಯಣುಕಸಮವೇತಃ' ಇತಿ ಚೇನ್ನ । ಸಮವಾಯತ್ವಾತಿರಿಕ್ತಸ್ಯ ಸಮವೇತತ್ವಸ್ಯಾಭಾವಾತ್ । ತಸ್ಯ ಚೋಭಯತ್ರ ಸಾಮ್ಯಾತ್ । 'ಸಮವಾಯವೃತ್ತ್ಯಾ ದ್ರವ್ಯಾಶ್ರಿತದ್ರವ್ಯತ್ವಮ್' ಇತಿ ಚೇನ್ನ । ಊರ್ಧ್ವಾಧರೀಭಾವಾದೇರಸಮ್ಭವೇನ ಸಮವಾಯಾತಿರಿಕ್ತಾಶ್ರಯಾಶ್ರಯಿಭಾವಾನಿರೂಪಣಾತ್ । ವ್ಯವಹಾರಮಾತ್ರಸ್ತು ನ ವ್ಯವಸ್ಥಿತಂ 'ಪಟೇ ತಂತವಃ' ಇತ್ಯಾದೇರಪಿ ದರ್ಶನಾತ್ । 'ಮಧ್ಯಮಪರಿಮಾಣವತ್ತ್ವಂ ಸಾವಯವತ್ವಮ್' ಇತಿ ಚೇನ್ನ । ತಸ್ಯಾಕಾರ್ಯತ್ವೇಽಪ್ಯನುಪಪತ್ತ್ಯಭಾವೇನಾಪ್ರಯೋಜಕತ್ವಾದಿತಿ।**

ದ್ರವ್ಯಸಮೇತದ್ರವ್ಯತ್ವ ಎಂದಲ್ಲಿ, ಹಾಗಾದರೂ ಸಹ ದ್ವ್ಯಣುಕಸಮವೇತವಾದ ಪರಮಾಣುವಿನಲ್ಲಿ ವ್ಯಭಿಚರಿತವೇ ಆಗುವುದು[2]. ದ್ವ್ಯಣುಕವು ಪರಮಾಣುವಿನಲ್ಲಿ ಸಮವೇತವಾಗಿದೆ, ಪರಮಾಣುವು ದ್ವ್ಯಣುಕದಲ್ಲಿ ಸಮವೇತವಾಗಿಲ್ಲ ಎಂದೆನ್ನಲಾಗದು[3]. ಸಮವಾಯತ್ವಕ್ಕಿಂತ ಬೇರೇಯಾದ

1. ಸಾವಯವತ್ವಂ ಎಂದರೆ 'ದ್ರವ್ಯವನ್ನು ಆಶ್ರಯಿಸಿದ ದ್ರವ್ಯಾಂತರ' ಎಂದು ವ್ಯಾಖ್ಯಾನಿಸಲಾಗಿದೆ. ಕಪಾಲರೂಪ ದ್ರವ್ಯದಲ್ಲಿ ಘಟರೂಪ ದ್ರವ್ಯದ ಇರುವಿಕೆ. ಹೀಗೆ ವಿವಕ್ಷಿಸಿದರೂ ವ್ಯಭಿಚಾರವು ನಿವಾರಣೆಯಾಗದು. ನೀರಿನಲ್ಲಿರುವ ಪಾರ್ಥಿವ ಪರಮಾಣುವಿನಲ್ಲಿ ಸಾಧ್ಯವಾದ ಕಾರ್ಯತ್ವವು ಇರುವದಿಲ್ಲ, ಹೇತುವಾದ ದ್ರವ್ಯಾಶ್ರಿತದ್ರವ್ಯತ್ವವಾದರೋ ಇದೆ ಎಂದು ಭಾವ.

2. ಜಲದಲ್ಲಿ ಇರುವ ಪಾರ್ಥಿವ ಪರಮಾಣು ಸಂಯೋಗಸಂಬಂಧದಿಂದ ಇದೆ, ಹೊರತಾಗಿ ಸಮವಾಯ ಸಂಬಂಧದಿಂದ ಇಲ್ಲ ಆದುದರಿಂದ ವ್ಯಭಿಚಾರವಿಲ್ಲ ಎಂದು ಹೇಳುವುದು ತರವಲ್ಲ. ನಿತ್ಯವಾದ ಪರಮಾಣುವಿನಲ್ಲಿ ದ್ವ್ಯಣುಕಸಮವೇತತ್ವವಿದೆ, ಆದರೆ ಕಾರ್ಯತ್ವವು ಇಲ್ಲದಿರುವುದರಿಂದ ಸಾವಯವತ್ವ ಹೇತುವು ಪುನಃ ವ್ಯಭಿಚರಿತವಾಯಿತು ಎಂದು ಭಾವ.

3. ಕಾರಣದಲ್ಲಿ ಕಾರ್ಯವು ಸಮವೇತವಾಗಿರುವದೇ ಹೊರತು ಕಾರ್ಯದಲ್ಲಿ ಕಾರಣವು ಸಮವೇತವಾಗಿರಲಾರದು. ಆದುದರಿಂದ ಕಾರ್ಯವಾದ ದ್ವ್ಯಣುಕವು ಪರಮಾಣುವಿನಲ್ಲಿ ಸಮವೇತವಾಗಿರುವುದೇ ಹೊರತು ಕಾರಣವಾದ ಪರಮಾಣುವು ಕಾರ್ಯವಾದ ದ್ವ್ಯಣುಕದಲ್ಲಿ ಸಮವೇತವಾಗಲಾರದು ಎಂದು ಅಭಿಮತಿಸಿ ಪ್ರಶ್ನಿಸುತ್ತಿರುವುದು ತರವಲ್ಲ ಎಂದು ಭಾವ.

ಸಮವೇತತ್ವ ಎನ್ನುವುದೇ ಇಲ್ಲದಿರುವುದರಿಂದ. ಆದಾದರೋ (ಸಮವಾಯತ್ವ ವಾದರೋ) ಉಭಯತ್ರದಲ್ಲಿ (ಕಾರಣ ಮತ್ತು ಕಾರ್ಯಗಳಲ್ಲಿ) ಸಮಾನ ವಾದುದರಿಂದ[1]. ಸಮವಾಯ ಸಂಬಂಧದಿಂದ ದ್ರವ್ಯವನ್ನು ಆಶ್ರಯಿಸಿರುವ ದ್ರವ್ಯತ್ವ ಎಂದು (ಸಾವಯವತ್ವವನ್ನು) ಅಭಿಮತಿಸಲಾಗಿದೆ ಎನ್ನುವುದೂ ತರವಾಗಲಾರದು. ಕೆಳಭಾಗ ಮೇಲ್‌ಭಾಗ ಎನ್ನುವುದು ಅಸಂಭವವಾದುದ-ರಿಂದ, ಸಮವಾಯಕ್ಕಿಂತ ಭಿನ್ನವಾದ ಆಶ್ರಯ-ಆಶ್ರಯಿಭಾವವನ್ನು ನಿರೂಪಿಸಲು ಆಗದು ಆದುದರಿಂದ[2]. (ಲೋಕದಲ್ಲಿನ) ವ್ಯವಹಾರವಾದರೋ ವ್ಯವಸ್ಥಿತವಾಗಿಲ್ಲ 'ಬಟ್ಟೆಯಲ್ಲಿ ನೂಲು' ಎಂದೂ ಇದೆ[3]. ಮಧ್ಯಮಪರಿಣಾಮ-ವನ್ನು ಹೊಂದಿರುವುದು ಸಾವಯವ ಎಂದು ಹೇಳುವುದು ತರವಾಗದು. ಆದಕ್ಕೆ (ಮಧ್ಯಮಪರಿಣಾಮವನ್ನು ಹೊಂದಿರುವ ಪದಾರ್ಥಕ್ಕೆ) ಅಕಾರ್ಯತ್ವವನ್ನು (ಒಪ್ಪಿದರೂ ಯಾವ ತರಹದ) ಅನುಪಪತ್ತಿಯು ಇಲ್ಲದಿರುವುದರಿಂದ ಅಪ್ರಯೋಜಕ ಎಂದು[4].

**-: ಕೇವಲಾನುಮಾನವು ಈಶ್ವರಸಾಧಕವಲ್ಲ ವಾದವು ಸಮಾಪ್ತ :-**

---

1. 'ಕಾರಣದಲ್ಲಿ ಕಾರ್ಯವು ಸಮವಾಯಸಂಬಂಧದಿಂದ ಇದೆ' ಎಂದರೂ 'ಕಾರ್ಯ- ಕಾರಣ ಗಳಿಗೆ ಇರುವ ಸಂಬಂಧವು ಸಮವಾಯ' ಎಂದರೆ ಎಲ್ಲವೂ ಒಂದೇ ಅರ್ಥದಲ್ಲಿವೆ ಎಂದು ಭಾವ.

2. ಅವಯವ-ಅವಯವಿಗಳಲ್ಲಿ ಯಾವುದನ್ನು ಕೆಳಭಾಗ ಯಾವುದನ್ನು ಮೇಲ್‌ಭಾಗ ಎಂದು ವಿಂಗಡಿಸಲು ಶಕ್ಯವಿದೆಯೇ? ದೇಹದಲ್ಲಿ ಕಾಲು ಕೆಳಗಿದೆ, ತಲೆ ಮೇಲಿದೆ ಇವೆರಡೂ ಅವಯವಗಳೆ, ಕಾಲು ಕೆಳಭಾಗದಲ್ಲಿರುವುದರಿಂದ ದೇಹಕ್ಕೆ ಆಶ್ರಯಿಯಾಗಿದೆ ಆದುದರಿಂದ ದೇಹಕ್ಕೆ ಕಾರಣ ಎನ್ನಲು ಶಕ್ಯವೆ? ಮತ್ತು ಆಶ್ರಯ-ಆಶ್ರಯಿಭಾವಕ್ಕೆ ಇರುವ ಸಂಬಂಧ ಸಮವಾಯ, ಇದು ಎರಡರಲ್ಲೂ ಇರುವುದರಿಂದ ಯಾವುದನ್ನು ಆಶ್ರಯ ಎಂದು ಯಾವುದನ್ನು ಆಶ್ರಯಿ ಎಂದು ವಿಂಗಡಿಸುವುದು? ಎಂದು ಭಾವ.

3. ನೂಲು ಕಾರಣ, ಕಾರಣದಲ್ಲಿ ಕಾರ್ಯವು ಆಶ್ರಯಿಸಿಕೊಂಡು ಇದೆ ಎನ್ನುವುದು ಸಾಮಾನ್ಯ ರೂಢಿ, ಆದರೆ ಇದಕ್ಕೆ ವಿರುದ್ಧವಾಗಿಯೂ ವ್ಯವಹರಿಸುವದನ್ನು ಲೋಕದಲ್ಲಿ ಕಾಣಬಹುದಾಗಿದೆ ಎಂದು ಭಾವ.

4. ಯಾವುದು ಮಧ್ಯಮಪರಿಣಾಮವನ್ನು ಹೊಂದಿದೆಯೋ ಅದು ಕಾರ್ಯ' ಎಂದು ವಾದಿಸಬೇಕು. ಆದರೆ ಮಧ್ಯಮಪರಿಣಾಮವನ್ನು ಹೊಂದಿದ್ದರೂ ಕಾರ್ಯತ್ವವನ್ನು ಹೊಂದಿರಲೇ ಬೇಕೆಂದಿಲ್ಲ, ನಿರೀಶ್ವರವಾದಿಯು ಪರ್ವತಾದಿಗಳಿಗೆ ಓರ್ವ ಕರ್ತೃವನ್ನು ಒಪ್ಪಿಲ್ಲತಾನೆ? ಅವುಗಳಿಗೆ ಕಾರ್ಯತ್ವವನ್ನು ಸಾಧಿಸಲು ತಾನೇ ಈ ಎಲ್ಲ ಪ್ರಯತ್ನ, ಆದುದರಿಂದ ಅಪ್ರಯೋಜಕ ಎಂದು ಭಾವ.

## ॥ ಭೇದವಾಕ್ಯಗಳು ಅನುವಾದಕಗಳಲ್ಲ ॥

ಜೀವೇಶ್ವರರ ಭೇದವು ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾದಲ್ಲಿ, ಆ ಪ್ರತ್ಯಕ್ಷಾನುಮಾನದ ವಿರೋಧವು ಐಕ್ಯಾಗಮಕ್ಕೆ, ಹಾಗಾಗಿ ಐಕ್ಯಾಗಮವು ಅಪ್ರಮಾಣ. ಇನ್ನು ಭೇದಾಗಮಕ್ಕೆ ಪ್ರತ್ಯಕ್ಷಾನುಮಾನಗಳ ಸಂವಾದವು ಇರುವುದರಿಂದ ಪ್ರಬಲ. ಪ್ರಬಲವಾದ ಭೇದಾಗಮವು ಪ್ರತ್ಯಕ್ಷಾದಿಗಳಿಂದ ಪ್ರಾಪ್ತವಾದದ್ದನ್ನು ಅನುವಾದಿಸಲಾರದು. ಪ್ರತ್ಯಕ್ಷಾದಿಗಳಿಗೆ ಪ್ರಬಲವಾದ ಭೇದಾಗವುವು ಅನುಗ್ರಾಹಕ. ಪ್ರತ್ಯಕ್ಷಾದಿಗಳು ಐಕ್ಯಾಗಮಕ್ಕೆ ಉಪಜೀವ್ಯವಾಗಿವೆ. ಉಪಜೀವ್ಯದ ವಿರೋಧವಿದ್ದಲ್ಲಿ ಉಪಜೀವಕವು ಪ್ರಮಾಣವಾಗಲಾರದು.

**ಭೇದಬೋಧಕವಾಕ್ಯಗಳು ಅನನುವಾದಕ ಎಂದು ಸಾಧಿಸುವುದು ವ್ಯರ್ಥ -**

**ಪ್ರತ್ಯಕ್ಷಾನುಮಾನಸಿದ್ಧತ್ವೇ ಚ ಭೇದಸ್ಯ ತದ್ವಿರೋಧಾದೇವಾ-ಪ್ರಾಮಾಣ್ಯಮಭೇದಾಗಮಸ್ಯ । ತೇನಾಭೇದಾಗಮಸ್ಯಾಪ್ರಾಮಾಣ್ಯಾ-ಭಾವೇ (ತೇನಾಭೇದವಾಕ್ಯಸ್ಯಾಪ್ರಾಮಾಣ್ಯಾಭಾವೇ) ನಾನುವಾದಕತ್ವಂ ಭೇದವಾಕ್ಯಾನಾಮ್ । ನ ಹಿ ಬಲವತೋಽನುವಾದಕತ್ವಮ್, ದಾರ್ಢ್ಯಹೇತುತ್ವಾತ್ ।**

ಭೇದವು ಪ್ರತ್ಯಕ್ಷ ಮತ್ತು ಅನುಮಾನದಿಂದ ಸಿದ್ಧವಾದಲ್ಲಿ, ಅದರ ವಿರೋಧದಿಂದ ಅಭೇದಾಗಮಕ್ಕೆ ಅಪ್ರಾಮಾಣ್ಯವು (ಪ್ರಾಪ್ತವಾಗುವುದು). ಆದುದರಿಂದ (ಪ್ರತ್ಯಕ್ಷಾದಿಗಳ ವಿರೋಧದಿಂದ) ಅಭೇದಾಗಮಕ್ಕೆ ಅಪ್ರಾಮಾಣ್ಯವು ಇಲ್ಲ ಎಂದಾದಲ್ಲಿ (ಆದುದರಿಂದ ಪ್ರತ್ಯಕ್ಷಾದಿಗಳ ವಿರೋಧದಿಂದ ಅಭೇದವಾಕ್ಯಕ್ಕೆ ಅಪ್ರಾಮಾಣ್ಯವು ಇಲ್ಲ ಎಂದಾದಲ್ಲಿ) ಭೇದವಾಕ್ಯಕ್ಕೆ ಅನುವಾದಕತ್ವವೂ ಇಲ್ಲ. ಬಲಿಷ್ಠವಾದುದಕ್ಕೆ ಅನುವಾದಕತ್ವವು ಇಲ್ಲ, (ಬಲಿಷ್ಠವಾದ ಪ್ರಮಾಣವು ಸಂವಾದಿಯಾದಲ್ಲಿ, ದುರ್ಬಲಪ್ರಮಾಣದ) ದಾರ್ಢ್ಯಕ್ಕೆ ಕಾರಣವಾದುದರಿಂದ.

**ತದೇವಮ್ 'ಈಶ್ವರಸ್ಯೈವಾಸಿದ್ಧೇಸ್ತದ್ಭೇದಸ್ಯ ಪ್ರತ್ಯಕ್ಷಾನುಮಾನಾಭ್ಯಾಂ ಸುತರಾಮಸಿದ್ಧಿಃ' ಇತಿ 'ನ ಭೇದವಾಕ್ಯಾನಾಮನುವಾದಕತ್ವಮ್' ಇತ್ಯುಕ್ತಮ್ । ಅಧುನಾ ವ್ಯರ್ಥಶ್ಚಾಯಂ ಭೇದವಾಕ್ಯಾನಾಮನುವಾದಕತ್ವ-**

ವ್ಯುತ್ಪಾದನಪ್ರಯಾಸಃ ಪರಸ್ಯ, ಇತ್ಯಾಶಯೇನಾಽಽಹ-'**ಪ್ರತ್ಯಕ್ಷ..**' ಇತಿ । ಯೇನ ಭೇದವಾಕ್ಯಾನಾಮನುವಾದಕತ್ವಮುಚ್ಯತೇ ತೇನಾವಶ್ಯಂ ಭೇದಸ್ಯ ಪ್ರತ್ಯಕ್ಷಾನುಮಾನಸಿದ್ಧತ್ವಂ ವಾಚ್ಯಮ್, ಅಸಿದ್ಧಸ್ಯಾನುವಾದಿತುಮಶಕ್ಯತ್ವಾತ್ । ತಥಾ ಚ ತಿಷ್ಠನ್ತು ತಾವದ್ಭೇದವಾಕ್ಯಾನಿ । ಭೇದಗ್ರಾಹಕಪ್ರತ್ಯಕ್ಷಾದಿ-ವಿರೋಧಾದೇವಾಪ್ರಾಮಾಣ್ಯಮಭೇದಾಗಮಸ್ಯಾಪರಿಹಾರ್ಯಮ್ । ತಥಾ ಚ 'ಅಭೇದಾಗಮಪ್ರಾಮಾಣ್ಯಪರಿರಕ್ಷಣಾರ್ಥಂ ಭೇದಾಗಮಾನಾಮ್ ಅನುವಾದಕತ್ವವ್ಯುತ್ಪಾದನಂ ಕ್ರಿಯಮಾಣಂ ತದಪ್ರಾಮಾಣ್ಯಮೇವ ದ್ರಢಯತಿ' ಇತಿ ವ್ಯರ್ಥಮೇವ । ನನು, ಅಪೌರುಷೇಯತ್ವೇನ ಅನಾಶಙ್ಕಿತದೋಷತ್ವಾದಾಗಮಃ ಪ್ರಬಲಃ । ಪ್ರತ್ಯಕ್ಷಾನುಮಾನೇ ತು ದೋಷಶಙ್ಕಾಕಲಂಕಿತತ್ವಾದ್ ದುರ್ಬಲೇ । ತತ್ಕಥಂ ದುರ್ಬಲಭೇದ-ಗ್ರಾಹಕಪ್ರತ್ಯಕ್ಷಾದಿವಿರೋಧೇನ ಪ್ರಬಲಸ್ಯ ಅಭೇದಾಗಮಸ್ಯಾಪ್ರಾಮಾಣ್ಯ-ಪ್ರಾಪ್ತಿಃ? ಇತ್ಯತ ಆಹ '**ತೇನ**' ಇತಿ । **ತೇನ**- ಪ್ರತ್ಯಕ್ಷಾದಿವಿರೋಧೇನ । '**ನಾನುವಾದಕತ್ವಮ್**' ಇತ್ಯತ್ರಾಪಿ '**ತೇನ**' ಇತಿ ವರ್ತತೇ । ಭೇದಸ್ಯ ಪ್ರತ್ಯಕ್ಷಾದಿನಾ ಸಿದ್ಧತ್ವೇನೇತಿ । ಕುತೋ ನ? ಇತಿ ಚೇತ್, ಪರೋಕ್ತಯುಕ್ತ್ಯೈವೇತ್ಯಾಹ- '**ನಹಿ**' ಇತಿ ॥ ಯದಿ 'ಆಗಮಸ್ಯ ಪ್ರಬಲತ್ವಾದ್ ದುರ್ಬಲಪ್ರತ್ಯಕ್ಷಾದಿವಿರೋಧೇನಾಪಿ ನಾಪ್ರಾಮಾಣ್ಯಮ್' ಇತ್ಯುಚ್ಯತೇ ತರ್ಹಿ , ಭೇದವಾಕ್ಯಾನಾಮಪಿ ವೇದತ್ವೇನ ಪ್ರಬಲತ್ವಾದ್ ದುರ್ಬಲ-ಪ್ರತ್ಯಕ್ಷಾದಿಪ್ರತಿಪನ್ನಭೇದಪ್ರತಿಪಾದಕತ್ವೇಽಪಿ ನಾನುವಾದಕತ್ವಮ್ । ಬಲವತೋಽಪಿ ಕುತೋ ನಾನುವಾದಕತ್ವಮ್? ಇತ್ಯತ ಆಹ- '**ದಾರ್ಢ್ಯ..**' ಇತಿ ।

ಹೀಗಾಗಿ (ಪ್ರತ್ಯಕ್ಷಾನುಮಾನಗಳು ಈಶ್ವರ ಬೋಧಕಗಳಾಗದಿದ್ದರಿಂದ) ಈಶ್ವರನೇ ಅಸಿದ್ಧನಾದುದರಿಂದ, ಆ ಭೇದದ (ಈಶ್ವರಪ್ರತಿಯೋಗಿಕ ಅಥವಾ ಈಶ್ವರಾನುಯೋಗಿಕವಾದ ಭೇದದ) ಸಿದ್ಧಿಯು ಪ್ರತ್ಯಕ್ಷಾನುಮಾನದಿಂದ ಸುತರಾಂ ಅಸಿದ್ಧ, ಆದುದರಿಂದ ಭೇದವಾಕ್ಯಗಳಿಗೆ ಅನುವಾದಕತ್ವವು ಇಲ್ಲ ಎಂದು ಹೇಳಿಯಾಯಿತು (ಪು. 347). ಇನ್ನು, ಭೇದವಾಕ್ಯಗಳಿಗೆ ಅನುವಾದಕತ್ವವನ್ನು ಸಾಧಿಸುವ ಪ್ರತಿವಾದಿಯ ಪ್ರಯತ್ನವು ವ್ಯರ್ಥವೆಂಬ ಭಾವದಿಂದ ಹೇಳುತ್ತಾರೆ 'ಪ್ರತ್ಯಕ್ಷಾನುಮಾನ...' ಎಂದು. ಭೇದವಾಕ್ಯಗಳಿಗೆ

ಅನುವಾದಕತ್ವವನ್ನು ಯಾವಕಾರಣದಿಂದ ಹೇಳಿವಿರೋ, ಆದುದರಿಂದ ಭೇದವು ಅವಶ್ಯವಾಗಿ ಪ್ರತ್ಯಕ್ಷಾನುಮಾನಗಳಿಂದ ಸಿದ್ಧ ಎಂದು ಹೇಳಬೇಕು. ಅಸಿದ್ಧವಾದುದನ್ನು ಅನುವಾದಿಸಲು ಅಶಕ್ಯವಾದುದರಿಂದ. ಹಾಗಾದಲ್ಲಿ ಭೇದವಾಕ್ಯಗಳು (ಅನುವಾದಕವಾಗಿಯೇ) ಇರಲಿ. ಭೇದಗ್ರಾಹಕ ಪ್ರತ್ಯಕ್ಷಾದಿಗಳ ವಿರೋಧದಿಂದಲೇ ಅಭೇದಾಗಮಗಳಿಗೆ ಅಪ್ರಾಮಾಣ್ಯವು ಅಪರಿಹಾರ್ಯ. ಹಾಗಾದರೆ ಅಭೇದಾಗಮಗಳ ಪ್ರಾಮಾಣ್ಯದ ರಕ್ಷಣೆಗಾಗಿ ಭೇದಾಗಮಗಳು ಅನುವಾದಕ ಎಂದು ಸಾಧಿಸುವುದು ಅದರ (ಅಭೇದಾಗಮಗಳ) ಅಪ್ರಾಮಾಣ್ಯವನ್ನೇ ಧೃಢಗೊಳಿಸುವುದು ಹಾಗಾಗಿ (ಭೇದಾಗಮಗಳನ್ನು ಅನುವಾದಕ ಎಂದು ಸಾಧಿಸುವುದು) ವ್ಯರ್ಥವೇ (ಆಯಿತು). ಅಪೌರುಷೇಯವಾದುದರಿಂದ ದೋಷಶಂಕೆಗೆ ಅವಕಾಶವಿಲ್ಲದ ಆಗಮವು ಪ್ರಬಲ. ಪ್ರತ್ಯಕ್ಷಾನುಮಾನಗಳಾದರೋ ದೋಷಶಂಕಾಕಲಂಕಿತ-ವಾದುದರಿಂದ ದುರ್ಬಲ. ಹಾಗಾಗಿ ಭೇದಗ್ರಾಹಕಗಳಾದ ದುರ್ಬಲಗಳಾದ ಪ್ರತ್ಯಕ್ಷಾದಿಗಳ ವಿರೋಧದಿಂದ ಪ್ರಬಲವಾದ ಅಭೇದಾಗಮಕ್ಕೆ ಅಪ್ರಾಮಾಣ್ಯದ ಪ್ರಾಪ್ತಿಯು ಹೇಗೆ? ಎಂದರೆ, ಆದುದರಿಂದ ಉತ್ತರಿಸುತ್ತಾರೆ **'ತೇನ'**ಎಂದು. **ತೇನ-** ಪ್ರತ್ಯಕ್ಷಾದಿಗಳ ವಿರೋಧದಿಂದ. **'ನಾನುವಾದಕತ್ವಂ'** ಎನ್ನುವಲ್ಲೂ **'ತೇನ'** ಎನ್ನುವುದು ಅನುವರ್ತಿತವಾಗುವುದು. '(ತೇನ-) ಭೇದವು ಪ್ರತ್ಯಕ್ಷಾದಿಗಳಿಂದ ಸಿದ್ಧವಾದುದರಿಂದ' ಎಂದು[1]. ಏತಕ್ಕಾಗಿ ಇಲ್ಲ ಎಂದಲ್ಲಿ ಪರರು ಹೇಳಿದ ಯುಕ್ತಿಯಿಂದಲೇ ಎಂದು ಹೇಳುವರು **'ನಹಿ'** ಎಂದು. ಒಂದು ವೇಳೆ ಆಗಮಕ್ಕೆ ಪ್ರಾಬಲ್ಯವಿರುವುದರಿಂದ ದುರ್ಬಲವಾದ ಪ್ರತ್ಯಕ್ಷಾದಿಗಳ ವಿರೋಧವಿದ್ದರೂ ಅಪ್ರಾಮಾಣ್ಯವಿಲ್ಲ ಎನ್ನುವದಾದಲ್ಲಿ, ಭೇದವಾಕ್ಯಗಳಿಗೂ ವೇದತ್ವವು ಇದೆ ಆದ್ದರಿಂದ ಪ್ರಾಬಲ್ಯವು ಪ್ರಾಪ್ತವಾದುದರಿಂದ, ದುರ್ಬಲವಾದ ಪ್ರತ್ಯಾಕ್ಷಾದಿ ಗಳಿಂದ ಪ್ರತಿಪನ್ನವಾದ ಭೇದದ ಪ್ರತಿಪಾದಕಗಳಾಗಿದ್ದರೂ ಸಹ ಅನುವಾದಕತ್ವವು ಇಲ್ಲ. ಪ್ರಬಲವಾದರೂ ಏಕೆ ಅನುವಾದಕವಾಗಬಾರದು? ಎಂದಲ್ಲಿ ಉತ್ತರಿಸುತ್ತಾರೆ **'ದಾರ್ಢ್ಯ...'** ಎಂದು.

---

1. ಮೂಲದಲ್ಲಿ ಉಕ್ತವಾದ ತೇನ ಎನ್ನುವದಕ್ಕೆ 'ಪ್ರತ್ಯಕ್ಷಾದಿವಿರೋಧೇನ' ಎಂದು ಅರ್ಥ, ಅನುವರ್ತಿಸಿಕೊಂಡ ತೇನ ಎಂಬ ಪದಕ್ಕೆ 'ಪ್ರತ್ಯಕ್ಷಾದಿನಾ ಸಿದ್ಧತ್ವೇನ' ಎಂದು ಅರ್ಥೈಸಿಕೊಳ್ಳಬೇಕು ಎಂದು ಭಾವ.

**ಭೇದವಾಕ್ಯಗಳು ಅನನುವಾದಕಗಳು ಎನ್ನುವದರ ಸ್ಫುಟೀಕರಣ**

ಅಯಮಾಶಯಃ- ನ ತಾವತ್ ಪೂರ್ವಪ್ರವೃತ್ತಪ್ರಮಾಣಾವಚ್ಛಿನ್ನ-ವಿಷಯತ್ವಮನುವಾದಕತ್ವಂ ಭೇದವಾಕ್ಯಾನಾಮಸ್ತಿ, ತಥಾಽನುಪಲಮ್ಭಾತ್ । ತಥಾತ್ವೇ ಹ್ಯರ್ಥಾಸಂಸ್ಪರ್ಶಿತಯಾ ದೌರ್ಬಲ್ಯಂ ಸ್ಯಾತ್ । ತತಃ 'ಪ್ರತಿಪನ್ನಾರ್ಥಪ್ರತಿಪಾದಕತ್ವಮಾತ್ರಮನುವಾದಕತ್ವಮ್' ಇತಿ ವಕ್ತವ್ಯಮ್ । ತಸ್ಯಾಪಿ ಪರಾನಪೇಕ್ಷಸ್ವಕಾರಣಾಯತ್ತಸ್ಯ ವೈಯರ್ಥ್ಯಮೇವಾನುವಾದಕತ್ವೇ ಬೀಜಮಙ್ಗೀಕರ್ತವ್ಯಮ್ । ನ ಚ ತತ್ತ್ವಕೃತೇಽಸ್ತಿ । ದುರ್ಬಲಾಭ್ಯಾಂ ಪ್ರತ್ಯಕ್ಷಾನುಮಾನಾಭ್ಯಾಂ ಪ್ರತಿಪನ್ನೇಽಪಿ ಭೇದೇ ಸಾಶಙ್ಕೇ ಸತಿ ತತ್ರೈವ ಪ್ರವೃತ್ತಾನಾಂ ಪ್ರಬಲಾನಾಂ ಭೇದವಾಕ್ಯಾನಾಂ ನಿಃಶಙ್ಕಭೇದಪ್ರತಿಪತ್ತಿ-ಹೇತುತ್ವೇನ ಸಾರ್ಥಕತ್ವಾತ್ । ತಥಾ ಚಾನುವಾದಕತದ್ವಿರೋಧೇನ ಅಭೇದಾಗಮಸ್ಯಾಪ್ರಾಮಾಣ್ಯಂ ತಾದವಸ್ಥ್ಯಮಿತಿ ।

ಇದು ಅಭಿಪ್ರಾಯ- ಭೇದವಾಕ್ಯಗಳಿಗೆ, ಪೂರ್ವಪ್ರಮಾಣದಿಂದ ಪ್ರಾಪ್ತ-ವಾದ ವಿಷಯದ ಅನುವಾದಕತ್ವವು ಇಲ್ಲ. ಆ ರೀತಿಯಾಗಿ ಕಾಣದಿರು-ವುದರಿಂದ[1]. ಹಾಗಾಗಿದ್ದ ಪಕ್ಷದಲ್ಲಿ (ಅನುವಾದಕವಾಕ್ಯ ಎಂದು ಸೂಚಕವಾದ ಶಬ್ದಗಳು ಇದ್ದ ಪಕ್ಷದಲ್ಲಿ, ತಾನು ಪ್ರತಿಪಾದಿಸಿದ) ವಿಷಯದ ಸಂಸ್ಪರ್ಶ ಎಲ್ಲದಿರುವುದರಿಂದ ( ಭೇದವಾಕ್ಯವು ಪ್ರತಿಪಾದಿಸಿದ ವಿಷಯದಲ್ಲಿ ವೇದಪುರುಷನು ಉದಾಸೀನನಾದ ಪ್ರಯುಕ್ತ, ಆ ವಿಷಯಕ್ಕೆ) ದೌರ್ಬಲ್ಯವು ಪ್ರಾಪ್ತವಾಗುತ್ತಿತ್ತು. ಆದುದರಿಂದ (ಅನುವಾದಕ ಎಂದು ಸೂಚಿಸುವ ಶಬ್ದಗಳು ಇಲ್ಲದಿರುವುದರಿಂದ) 'ಪ್ರತಿಪನ್ನವಾದ ವಿಷಯವನ್ನು ಪ್ರತಿಪಾದಿಸುತ್ತಿದೆ' ಎಂದಷ್ಟೇ (ಕಾರಣದಿಂದ) ಅನುವಾದಕತ್ವವು ಉಂಟು ಎಂದು ಹೇಳಬೇಕು[2].

---

1. ದ್ವಾಸುಪರ್ಣಾ.. ಇತ್ಯಾದಿ ಭೇದಪ್ರತಿಪಾದಕವಾಕ್ಯಗಳಲ್ಲಿ 'ಪ್ರತ್ಯಕ್ಷಾದಿಪ್ರಮಾಣಗಳು ಹೀಗೆ ತಿಳಿಸುತ್ತಿವೆ' ಎಂಬಿತ್ಯಾದಿಯಾಗಿ ಅನುವಾದಕವಾಕ್ಯಗಳೆಂದು ಸೂಚಕವಾದ ಶಬ್ದಗಳು ಕಾಣಿಸುತ್ತಿಲ್ಲ ಎಂದು ಭಾವ.

2. 'ಅಗ್ನಿರ್ಹಿಮಸ್ಯ ಭೇಷಜಂ' ಇತ್ಯಾದಿವಾಕ್ಯಗಳಲ್ಲಿಯೂ ಅನುವಾದಕ ಎಂದು ಸೂಚಿಸುವ ಶಬ್ದಗಳಿಲ್ಲ ಆದರೂ ಅದನ್ನು ಹೇಗೆ ಅನುವಾದಕ ಎನ್ನುವರೋ ಹಾಗೆ ಈ ಭೇದವಾಕ್ಯಗಳೂ ಅನುವಾದಕಗಳು ಎಂದು ಪ್ರತಿಪಾದಿಸಿದಲ್ಲಿ, ಆಗ ಸಿದ್ಧವಿಷಯಪ್ರತಿಪಾದಿಸಿದ್ದರಿಂದ ಈ ವಾಕ್ಯವು ವ್ಯರ್ಥ ಎಂಬುವದಾಗಿ ವಾದಿಸಬೇಕು ಭಾವ.

ಮತ್ತೊಂದು ಪ್ರಮಾಣವನ್ನು ಬಯಸದೇ ತನ್ನದೇ ಕಾರಣಗಳ ಅಧೀನವಾಗಿರುವ ಅದಕ್ಕೆ (ಆ ವೇದವಾಕ್ಯಕ್ಕೆ) ಅನುವಾದಕತ್ವವನ್ನು (ಒಪ್ಪಲು) ವೈಯರ್ಥ್ಯವೇ ಕಾರಣ ಎಂದು ಒಪ್ಪಬೇಕು[1]. ದುರ್ಬಲಗಳಾದ ಪ್ರತ್ಯಕ್ಷಾನುಮಾನಗಳಿಂದ ಬೋಧಿತವಾದ ಭೇದದಲ್ಲಿ ಸಂದೇಹವಿರಲು, ಆ ವಿಷಯದಲ್ಲೇ ಪ್ರವೃತ್ತವಾದ ಪ್ರಬಲವಾದ ಭೇದವಾಕ್ಯಗಳು ಸಂದೇಹವಿಲ್ಲದ ಭೇದದ ಅರಿವಿಗೆ ಕಾರಣವಾಗಿ, ಸಾರ್ಥಕವಾಗುವುದರಿಂದ. ಹಾಗಾಗಿ ಅನನುವಾದಕವಾದ ಅದರ (ಭೇದವಾಕ್ಯದ) ವಿರೋಧದಿಂದ ಅಭೇದಾಗಮಗಳಿಗೆ ಅಪ್ರಾಮಾಣ್ಯವು ಅನಿವಾರ್ಯ ಎಂದು.

#### ಐಕ್ಯ ಪ್ರತಿಪಾದಕ ವಾಕ್ಯಗಳು ಪ್ರಬಲಪ್ರಮಾಣದಿಂದ ಬಾಧಿತ

**ಪ್ರತ್ಯಕ್ಷಾದೇರಾಗಮಸ್ಯ ಪ್ರಾಬಲ್ಯೇಽಪಿ, ನೋಪಜೀವ್ಯಪ್ರಮಾಣ-ವಿರೋಧೇ ಪ್ರಾಮಾಣ್ಯಂ, ವಿಷಯಾಭಾವೇ ಸ್ವಸ್ಯೈವಾಪ್ರಾಮಾಣ್ಯ-ಪ್ರಾಪ್ತೇಃ ।**

ಪ್ರತ್ಯಕ್ಷಾದಿಗಳಿಂದ ಆಗಮಕ್ಕೆ ಪ್ರಾಬಲ್ಯವಿದ್ದರೂ, ಉಪಜೀವ್ಯಪ್ರಮಾಣದ ವಿರೋಧವು ಇದ್ದಲ್ಲಿ (ಆಗ ಆಗಮಕ್ಕೆ) ಪ್ರಾಮಾಣ್ಯವು ಇಲ್ಲ, (ಉಪಜೀವ್ಯಕ್ಕೆ

---

1. ಅನುವಾದಕಗಳು ಮತ್ತೊಂದು ಪ್ರಮಾಣವನ್ನು ಆಶ್ರಯಿಸಿ ಬೋಧಿಸುವುದು ಸಹಜ, ಪ್ರಕೃತ ಭೇದವನ್ನು ಪ್ರತಿಪಾದಿಸುವ 'ದ್ವಾಸುಪರ್ಣಾ...' ಇತ್ಯಾದಿಗಳಾದರೋ ಮತ್ತೊಂದು ಪ್ರಮಾಣವನ್ನು ಆಶ್ರಯಿಸದೆ, ತನ್ನ ಸ್ವಂತ ಬೋಧಕಸಾಮಗ್ರಿಗಳಿಂದಲೇ ಬೋಧಿಸುವುದು ಎಂದು ಸಾಧಿಸಲಾಗಿದೆ. ಇನ್ನು ಅನುವಾದಕ ವಾಕ್ಯಗಳಿಗೆ ಅಪ್ರಾಮಾಣ್ಯವು ಎರಡು ಕಾರಣಗಳಿಂದ ಸಂಭಾವಿತ. ಒಂದು– ದುಷ್ಟಪ್ರಮಾಣವು ಬೋಧಿಸಿದ ವಿಷಯವನ್ನು ತನ್ನ ಅಭಿನಿವೇಶವಿಲ್ಲದಂತೆ ಅನುವದಿಸಿದಲ್ಲಿ, ಉದಾ– 'ಪ್ರತ್ಯಕ್ಷವು ಗಗನದಲ್ಲಿ ನೀಲವರ್ಣವನ್ನು ತಿಳಿಸುತ್ತದೆ, ಅದು ಪ್ರಾಮಾಣಿಕವಾಗಿಲ್ಲ.' ಇತ್ಯಾದಿವಾಕ್ಯಗಳು. ಈ ವಾಕ್ಯವು 'ಗಗನವು ನೀಲವರ್ಣ ವಿಶಿಷ್ಟ' ಎನ್ನುವ ವಿಷಯವನ್ನು ನಿರಾಕರಿಸಲು ಅನುವಾದಿಸುತ್ತಿದೆ ಹೀಗಾಗಿ 'ಗಗನದಲ್ಲಿ ನೀಲವರ್ಣ' ಎನ್ನುವ ವಾಕ್ಯವು ಅಪ್ರಾಮಾಣಿಕವಾಗುವುದು. ಮತ್ತೆ– 'ಪರ್ವತದಲ್ಲಿ ವಹ್ನಿಯು ಇದೆ, ಎನ್ನುವದನ್ನು ಪ್ರತ್ಯಕ್ಷದಿಂದ ತಿಳಿದವಗೆ, ಮತ್ತೊರ್ವನು 'ಬೆಟ್ಟದಲ್ಲಿ ಬೆಂಕಿಯು ಇದೆ' ಎಂದು ಉಪದೇಶಿಸಿದಲ್ಲಿ ಆ ಉಪದೇಶಿಸುವುದು ವ್ಯರ್ಥ, ಆದುದರಿಂದ ಆ ವಾಕ್ಯವು ಅಪ್ರಮಾಣ. ಪ್ರಕೃತದಲ್ಲಿ 'ದ್ವಾಸುಪರ್ಣಾ..' ಇತ್ಯಾದಿವಾಕ್ಯಗಳಿಗೆ ಈ ಎರಡೂ ರೀತಿಯಲ್ಲಿ ಅಪ್ರಾಮಾಣ್ಯವನ್ನು ಹೇಳಲು ಶಕ್ಯವಿಲ್ಲ ಎಂದು ಭಾವ.

ವಿರುದ್ಧವಾದಾಗ) ವಿಷಯವು ಇಲ್ಲವಾದಲ್ಲಿ ತನಗೇ ಅಪ್ರಾಮಾಣ್ಯವು ಪ್ರಾಪ್ತವಾಗುವುದರಿಂದ.

ಏವಂ 'ಭೇದವಾಕ್ಯೈಃ, ತೇಷಾಮನುವಾದಕತ್ವಸಿದ್ಧಯೇ ಪರೇಣ ಅಙ್ಗೀಕೃತಾಭ್ಯಾಂ ಭೇದಪ್ರತಿಪಾದಕಾಭ್ಯಾಂ ಪ್ರತ್ಯಕ್ಷಾನುಮಾನಾಭ್ಯಾಂ ವಾ ಪ್ರತಿರುದ್ಧತ್ವಾನ್ನಾಭೇದವಾಕ್ಯಾನಾಂ ಪ್ರಾಮಾಣ್ಯಮ್' ಇತ್ಯುಕ್ತಮ್ । ಇದಾನೀಂ 'ನ ಕೇವಲಂ ಸಮಬಲಪ್ರಮಾಣಪ್ರತಿರುದ್ಧತ್ವಾದಪ್ರಾಮಾಣ್ಯಂ ಕಿನ್ತು ಪ್ರಬಲಪ್ರಮಾಣಬಾಧಿತತ್ವಾಚ್ಚ' ಇತಿ ವಕ್ತುಂ ಸಾಮಾನ್ಯನ್ಯಾಯಂ ತಾವದ್ ವ್ಯುತ್ಪಾದಯತಿ- 'ಪ್ರತ್ಯಕ್ಷಾದೇಃ' ಇತಿ ॥ ಯದ್ಯಪಿ ಪ್ರತ್ಯಕ್ಷಾನುಮಾನಾಭ್ಯಾಮಾಗಮಸ್ಯ ಪ್ರಾಬಲ್ಯಮಿತ್ಯುತ್ಸರ್ಗಃ, ತಥಾಪಿ ಯತ್ರ ಪ್ರತ್ಯಕ್ಷಾನುಮಾನಯೋರಾಗಮಂ ಪ್ರತಿ ಉಪಜೀವ್ಯತ್ವಂ ತತ್ರ ತಯೋರೇವ ತತೋ ಬಲವತ್ತ್ವಮ್ । ತತ ಏವ ತದ್ವಿರೋಧೇ 'ತಸ್ಯ ನ ಪ್ರಾಮಾಣ್ಯಮ್' ಇತಿ ತಾವದಙ್ಗೀಕಾರ್ಯಮ್ । ಕುತಃ ?ಇತಿ ಚೇತ್, ಉಚ್ಯತೇ- ಉಪಜೀವ್ಯೋಪಜೀವಕಯೋರ್ಹಿ ವಿರೋಧೇ ನ ತಾವದುಭಯಂ ಪ್ರಮಾಣಂ ವಸ್ತುನೋ ದ್ವೈರೂಪ್ಯಾಪಾತಾತ್ । ನಾಪ್ಯುಭಯಮಪ್ರಮಾಣಂ ವಸ್ತುನೋ ನಿಃಸ್ವಭಾವತ್ವಾಪತ್ತೇಃ । ತತೋಽನ್ಯತರಸ್ಯೈವಾಪ್ರಾಮಾಣ್ಯೇಽವಶ್ಯಮಙ್ಗೀಕಾರ್ಯೇ, ನ ತಾವದುಪಜೀಕವಿರೋಧೇನ ಉಪಜೀವ್ಯಸ್ಯಾಪ್ರಾಮಾಣ್ಯಮಙ್ಗೀಕರ್ತುಮ್ ಉಚಿತಮ್ ।

ಈ ರೀತಿಯಾಗಿ ಭೇದವಾಕ್ಯಗಳಿಂದ (ಅಥವಾ), ಅವುಗಳಿಗೆ (ಭೇದವಾಕ್ಯಗಳಿಗೆ) ಅನುವಾದಕತ್ವದ ಸಿದ್ಧಿಗಾಗಿ ಪರರಿಂದ ಒಪ್ಪಿತವಾದ ಭೇದಬೋಧಕವಾದ ಪ್ರತ್ಯಕ್ಷಾನುಮಾನಗಳಿಂದಲೋ ಪ್ರತಿರುದ್ಧವಾದುದರಿಂದ ಅಭೇದವಾಕ್ಯಗಳಿಗೆ ಅಪ್ರಾಮಾಣ್ಯ ಎಂದು ಹೇಳಲಾಗಿದೆ. ಈಗ ಕೇವಲ ಸಮಬಲ ಪ್ರಮಾಣದಿಂದ ಪ್ರತಿರುದ್ಧವಾದುದರಿಂದ (ಅಭೇದವಾಕ್ಯವು) ಅಪ್ರಮಾಣವಲ್ಲ, ಮತ್ತೆ ಪ್ರಬಲಪ್ರಮಾಣಬಾಧಿತವಾದುದರಿಂದಲೂ, ಎಂದು ತಿಳಿಸಲು ಸಾಮಾನ್ಯ ಯುಕ್ತಿಯನ್ನು ಬೋಧಿಸುತ್ತಾರೆ. 'ಪ್ರತ್ಯಕ್ಷಾದೇಃ' ಎಂದು. ವಸ್ತುತಃ ಪ್ರತ್ಯಕ್ಷಾನುಮಾನಗಳಿಂದ ಆಗಮವು ಪ್ರಬಲ ಎನ್ನುವುದು ಸಾಮಾನ್ಯ (ನಿಯಮ). ಹಾಗಾದರೂ ಎಲ್ಲಿ ಪ್ರತ್ಯಕ್ಷಾನುಮಾನಗಳು ಆಗಮಕ್ಕೆ

ಉಪಜೀವ್ಯವಾಗಿರುವವೋ ಅಲ್ಲಿ ಅವುಗಳಿಗೆ (ಪ್ರತ್ಯಕ್ಷಾನುಮಾನಗಳಿಗೆ) ಆದರಿಂದ (ಆಗವುದಿಂದ) ಪ್ರಾಬಲ್ಯ[1]. ಆದುದರಿಂದಲೇ ಅದರ (ಉಪಜೀವ್ಯದ) ವಿರೋಧವಿದ್ದಲ್ಲಿ ಅದಕ್ಕೆ (ಉಪಜೀವಕಕ್ಕೆ ) ಪ್ರಾಮಾಣ್ಯವಿಲ್ಲ ಎಂದು ಒಪ್ಪಲೇ ಬೇಕು. ಏಕೆ ಹೀಗೆ? ಎಂದರೆ ಹೇಳಲಾಗುವುದು. ಉಪಜೀವ್ಯ ಮತ್ತು ಉಪಜೀವಕಗಳಲ್ಲಿ ವಿರೋಧವು ಪ್ರಾಪ್ತವಾದಲ್ಲಿ ಎರಡೂ ಪ್ರಮಾಣವಾಗಲಾರದು, ವಸ್ತುವಿಗೆ ದ್ವೈವಿಧ್ಯ ಪ್ರಾಪ್ತವಾಗುವುದರಿಂದ[2]. ಎರಡೂ ಅಪ್ರಮಾಣವಾಗಲೂ ಶಕ್ಯವಿಲ್ಲ, ವಸ್ತುವಿನ ಅಸ್ತಿತ್ವವೇ ಇಲ್ಲದಾಗಬೇಕಾಗುವುದರಿಂದ. ಆದುದರಿಂದ ಯಾವುದಾದರೂ ಒಂದಕ್ಕೆ ಅಪ್ರಾಮಾಣ್ಯವನ್ನು ಅನಿವಾರ್ಯವಾಗಿ ಒಪ್ಪಿದಲ್ಲಿ, ಉಪಜೀವಕದ ವಿರೋಧದಿಂದ ಉಪಜೀವ್ಯಕ್ಕೆ ಅಪ್ರಾಮಾಣ್ಯವನ್ನು ಒಪ್ಪುವದು ಯೋಗ್ಯವಾಗಲಾರದು.

**ಕುತಃ? ಇತ್ಯತ ಆಹ- 'ವಿಷಯ..' ಇತಿ । ಯೇನ ಹಿ ತಸ್ಯ ವಿಷಯಃ ಸಿದ್ಧ್ಯತಿ ತತ್ ತಸ್ಯೋಪಜೀವ್ಯಮ್ । ಯಥಾ ಪರ್ವತಗ್ರಾಹಕಂ ಧೂಮಾನುಮಾನಸ್ಯ । ತಥಾಚೋಪಜೀವಕವಿರೋಧೇನೋಪಜೀವ್ಯಸ್ಯ ಅಪ್ರಾಮಾಣ್ಯೇ ಸತಿ ಉಪಜೀವಕಸ್ಯ ವಿಷಯೋ ನ ಸಿದ್ಧ್ಯೇತ್ । ವಿಷಯಾಭಾವೇ ಸ್ವೋದಯಾಭಾವೇನಾಬೋಧಕತ್ವಲಕ್ಷಣಮಪ್ರಾಮಾಣ್ಯಂ ಪ್ರಾಪ್ನೋತಿ । ಯತ್ತ್ವಯಂ ನೋದೇತುಮಲಂ ನಾಪಿ ಬೋಧಯಿತುಂ ಕಥಂ**

---

1. ಪ್ರಸಕ್ತವಾದದಲ್ಲಿ ಉಪಜೀವ್ಯ- ಉಪಜೀವಕ ಎನ್ನುವ ಶಬ್ದವು ಹೆಚ್ಚಾಗಿ ಬಳಕೆಯಲ್ಲಿ ಬರುವುದು, ಉಪಜೀವ್ಯ ಎಂದರೆ ಮತ್ತೊಂದು ಪ್ರಮಾಣಕ್ಕೆ ಅಗತ್ಯವಾದ ವಿಷಯಾದಿ ಗ್ರಹಣಾದಿಗಳಿಗೆ ನೆರವಾಗಿರುವಿಕೆ. ಉಪಜೀವಕ ಎಂದರೆ ತನ್ನ ಬೋಧನೆಗೆ ಅಗತ್ಯವಾದ ವಿಷಯಾದಿಗಳನ್ನು ಗ್ರಹಿಸಲು ಮತ್ತೊಂದು ಪ್ರಮಾಣದ ನೆರವನ್ನು ಬಯಸುವುದು. ಉದಾಹರಣೆಗೆ- 'ವಹ್ನಿಯು ಪರ್ವತದಲ್ಲಿ ಇದೆ' ಎಂದು ಊಹಿಸಲು ಅನುಮಾನಕ್ಕೆ ಪ್ರತ್ಯಕ್ಷದ ನೆರವು ಅಗತ್ಯ. ಪ್ರತ್ಯಕ್ಷವು, ಧೂಮ ವಹ್ನಿಗಳ ಸಾಹಚರ್ಯವನ್ನು ಮತ್ತು ಪರ್ವತದಲ್ಲಿ ಧೂಮದ ಇರುವಿಕೆಯನ್ನು ತಿಳಿಸಿದಲ್ಲಿ ಮಾತ್ರ ಅನುಮಾನವು ವಹ್ನಿಯ ಬೋಧನದಲ್ಲಿ ಸಮರ್ಥವಾಗುವುದು, ಹಾಗಾಗಿ ಪ್ರತ್ಯಕ್ಷವನ್ನು ಈ ಸಂದರ್ಭದಲ್ಲಿ ಉಪಜೀವ್ಯಪ್ರಮಾಣ ಎಂದು, ಅನುಮಾನವನ್ನು ಉಪಜೀವಕಪ್ರಮಾಣ ಎಂದು ತಿಳಿಯುವುದು.

2. ವಿರುದ್ಧವಾಗಿ ತಿಳಿಸುವ ಎರಡು ಪ್ರಮಾಣಗಳಲ್ಲಿ ಒಂದು ಮಾತ್ರ ಪ್ರಮಾಣವಾಗಿರುವುದು ಅನುಭವಸಿದ್ಧ. ಎರಡೂ ಪ್ರಮಾಕ್ಕೆ ಸಾಧನವಾದಲ್ಲಿ, ವಿರುದ್ಧಪ್ರಮಾಣಗಳಿಂದ ತೋರಿದ ವಸ್ತುವಿನ ದ್ವೈವಿಧ್ಯವು ಸತ್ಯವಾಗಬೇಕಾದೀತು ಎಂದು ಭಾವ.

**ತದುಪಜೀವ್ಯಮಪ್ರಮಾಣೀಕುರ್ಯಾತ್ ? ಅತಃ ಪರಿಶೇಷಾದ್ 'ಅನಪೇಕ್ಷತಯಾ ಪ್ರಬಲಸ್ಯೋಪಜೀವ್ಯಸ್ಯ ವಿರೋಧೇನ ಸಾಪೇಕ್ಷತಯಾ ದುರ್ಬಲಮುಪಜೀವಕಮೇವಾಪ್ರಮಾಣಂ ಭವತಿ' ಇತಿ ಸಿದ್ಧ್ಯತಿ । ಯದ್ಯಪಿ ಯೇನ ಯಸ್ಯೋತ್ಥಾನಂ ಭವತಿ ತತ್ತಸ್ಯೋಪಜೀವ್ಯಂ ನ ಧರ್ಮಿಗ್ರಾಹಕಮಾತ್ರಮ್, ತಥಾಽಪಿ ಪ್ರಕೃತಾಪೇಕ್ಷಯೈತದುಕ್ತಮಿತಿ ಮನ್ತವ್ಯಮ್ ।**

ಏಕೆ ಎಂದಲ್ಲಿ ಉತ್ತರಿಸುತ್ತಾರೆ **'ವಿಷಯಾಭಾವೇ'** ಎಂದು. ಯಾವುದರಿಂದ ಯಾವುದಕ್ಕೆ ವಿಷಯವು ಸಿದ್ಧವಾಗುವುದೋ ಅದು ಅದಕ್ಕೆ ಉಪಜೀವ್ಯ. ಹೇಗೆ ಧೂಮಾನುಮಾನಕ್ಕೆ ಪರ್ವತವನ್ನು ಗ್ರಹಿಸುವುದು (ಪ್ರತ್ಯಕ್ಷವು ಉಪಜೀವ್ಯ). ಹಾಗೆಯೇ ಉಪಜೀವಕದ ವಿರೋಧದಿಂದ ಉಪಜೀವ್ಯಕ್ಕೆ ಅಪ್ರಾಮಾಣ್ಯವನ್ನು ಒಪ್ಪಿದಲ್ಲಿ ಉಪಜೀವಕಕ್ಕೆ ವಿಷಯವು ಅಸಿದ್ಧವಾದೀತು. ವಿಷಯವು ಇಲ್ಲವಾದಲ್ಲಿ ತನ್ನ (ಉಪಜೀವಕದ) ಪ್ರವೃತ್ತಿಯೇ ಇಲ್ಲವಾಗುವುದರಿಂದ ಅಬೋಧಕತ್ವರೂಪ ಅಪ್ರಾಮಾಣ್ಯವನ್ನು ಹೊಂದುವದು. ಯಾವುದು ಪ್ರವೃತ್ತಿಯನ್ನು ಹೊಂದಲೇ ಅಸಮರ್ಥವೋ, ಬೋಧಿಸಲೂ ಅಸಮರ್ಥವೋ, (ಅದು) ಹೇಗೆ ತಾನೆ ಉಪಜೀವ್ಯವನ್ನು ಅಪ್ರಮಾಣ-ವನ್ನಾಗಿಸೀತು? ಆದುದರಿಂದ ಪರಾಮರ್ಶಿಸಲಾಗಿ, ತಡೆಯಿಲ್ಲದಂತೆ (ಪ್ರವೃತ್ತವಾದ) ಪ್ರಬಲವಾದ ಉಪಜೀವ್ಯದ ವಿರೋಧದಿಂದ, ಮತ್ತೊಂದನ್ನು ಆಸರೆಯಾಗಿ ಹೊಂದಿರುವ ದುರ್ಬಲವಾದ ಉಪಜೀವಕವೇ ಅಪ್ರಮಾಣ-ವಾಗುವುದು ಎಂದು ಸಿದ್ಧವಾಗುತ್ತದೆ. ವಸ್ತುತಃ ಯಾವುದರಿಂದ ಯಾವುದು ಪ್ರವೃತ್ತಿಯನ್ನು ಹೊಂದಿರುವುದೋ ಅದು ಅದಕ್ಕೆ ಉಪಜೀವ್ಯ, ಕೇವಲ ಧರ್ಮಿಗ್ರಾಹಕ ಮಾತ್ರವಲ್ಲ, ಆದರೂ ಪ್ರಕೃತದಲ್ಲಿ ಪ್ರಸ್ತುತವಾದದ್ದನ್ನು ಮಾತ್ರ ಹೇಳಲಾಗಿದೆ ಎಂದು ತಿಳಿಯುವುದು[1].

---

1. ಶಾಸ್ತ್ರದಲ್ಲಿ ಒಂದು ಪ್ರಮಾಣವು ತನ್ನ ಪ್ರವೃತ್ತಿಗೆ ಪ್ರಮಾಣಾಂತರವನ್ನು ಆಶ್ರಯಿಸಿದಲ್ಲಿ, ಪ್ರವೃತ್ತಿಗೆ ಕಾರಣವಾದ ಪ್ರಮಾಣವನ್ನು ಉಪಜೀವ್ಯ ಎಂದು ಮತ್ತೊಂದನ್ನು ಉಪಜೀವಕ ಎಂದು ವ್ಯವಹರಿಸುವರು, ಹೊರತಾಗಿ ಕೇವಲ ಧರ್ಮಿಗ್ರಾಹಕವನ್ನೇ ಉಪಜೀವ್ಯ ಎಂದು ವ್ಯವಹರಿಸಲಾಗದು, ಆದರೆ ಪ್ರಕೃತದಲ್ಲಿ ಅಭೇದಬೋಧಕ ಶ್ರುತಿಗಳಿಗೆ ಪ್ರತ್ಯಕ್ಷಾನುಮಾನಗಳು ಧರ್ಮಿಗ್ರಾಹಕವಾದುದರಿಂದ ಅದನ್ನೇ ಉಪಸ್ಥಾಪಿಸಲಾಗಿದೆ ಎಂದು ಭಾವ.

'ಉಪಜೀವ್ಯವು ಪ್ರಬಲ' ಎನ್ನುವುದು ಪ್ರಕೃತಕ್ಕೆ ಸಂಗತ

**ತೇನೈವ ಹ್ಯನುಮಾನಾದಿನಾಽಗಮಸ್ಯ ವಿಷಯಃ ಸಿದ್ಧ್ಯತಿ ತತ್ಪಕ್ಷೇಽಪಿ । ಅನುಮಾನೇನ ಹ್ಯನುವಾದಿತ್ವಪಕ್ಷ ಈಶ್ವರೋ ಬೋದ್ಧವ್ಯಃ, ಪ್ರತ್ಯಕ್ಷೇಣ ಚಾಽಗಮಃ । ಅತಸ್ತಯೋರ್ವಿರೋಧೇ ಪ್ರಾಮಾಣ್ಯಂ ನ ಸ್ಯಾತ್ । ಅನುಮಾನಸಿದ್ಧೇಶ್ವರಾಚ್ಚ ಭೇದೋಽನುಭವತ ಏವ ಸಿದ್ಧೋ ಜೀವಸ್ಯ, ಅಸರ್ವಕರ್ತೃತ್ವೇನಾನುಭವಾತ್ ।**

ಅದೇ (ಪರರು ಹೇಳಿದ) ಅನುಮಾನಾದಿಗಳಿಂದಲೇ ಅವರ ಪಕ್ಷದಲ್ಲೂ ಆಗಮಕ್ಕೆ ವಿಷಯವು ಸಿದ್ಧಿಸುವುದು. (ವೇದವು) ಅನುವಾದಿ ಎಂದಾದಲ್ಲಿ ಅನುಮಾನದಿಂದ ಈಶ್ವರನು, ಪ್ರತ್ಯಕ್ಷದಿಂದ ಜೀವನು ಮತ್ತು ವೇದವಾಕ್ಯಗಳು ಅರಿವಿಗೆ ವಿಷಯವಾಗುವುವು. ಆದುದರಿಂದ ಅವುಗಳ (ಅನುಮಾನ-ಪ್ರತ್ಯಕ್ಷಗಳ) ವಿರೋಧವು ಪ್ರಾಪ್ತವಾದಲ್ಲಿ (ಐಕ್ಯಪ್ರತಿಪಾದಕ ವೇದಕ್ಕೆ) ಪ್ರಾಮಾಣ್ಯವು ಸಿದ್ಧಿಸದೇ ಹೋದೀತು. ಅನುಮಾನದಿಂದ ಸಿದ್ಧನಾದ ಈಶ್ವರನಿಂದ ಜೀವಿಗೆ ಭೇದವು ಅನುಭವದಿಂದಲೇ ಸಿದ್ಧ, (ಜೀವನು) ಅಸರ್ವಕರ್ತಾ ಎಂದು ಅನುಭವವು ಇರುವುದರಿಂದ.

ಅಸ್ತ್ವೇವಮ್, ಉಪಜೀವ್ಯವಿರುದ್ಧಸ್ಯೋಪಜೀವಕಸ್ಯಾಪ್ರಾಮಾಣ್ಯಂ ಪ್ರಕೃತೇ ತು ಕಿಮಾಯಾತಮ್? ಇತ್ಯತ ಆಹ- **'ತೇನೈವ ಹಿ'** ಇತಿ । ಭೇದವಾಕ್ಯಾನಾಮನುವಾದಕತ್ವಸಿದ್ಧ್ಯರ್ಥಂ ಪರೋಪನ್ಯಸ್ತೇನೈವ । ಅನೇನ 'ನಾಸ್ಮಾಭಿರ್ಬಲಾದಿದಮುಚ್ಯತೇ ಕಿನ್ತು ಪರೇಣಾಪೀದಮಙ್ಗೀಕೃತಮ್' ಇತಿ ಸೂಚಯತಿ । ನ ಕೇವಲಂ ಭೇದಾಗಮಸ್ಯ ಕಿನ್ತು ತತ್ಪಕ್ಷೇಽಪ್ಯಾಗಮಾಸ್ಯ ಭೇದಾಗಮವದಭೇದಾಗಮಸ್ಯಾಪಿ ಇತಿ ಯಾವತ್ । ಜೀವಂ ವಿಷಯೀಕೃತ್ಯ ತಸ್ಯೇಶ್ವರೇಣಾಭೇದೋ ವಾ ಬೋಧನೀಯಃ 'ತತ್ತ್ವಮಸಿ' ಇತಿ । ಈಶ್ವರಂ ವಿಷಯೀಕೃತ್ಯ ವಾ ತಸ್ಯ ಜೀವಾಭೇದಃ 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಇತಿ । ಉಭಾವಪಿ ವಿಷಯೀಕೃತ್ಯಾಭೇದಮಾತ್ರಂ ವಾ 'ನೇಹ ನಾನಾಽಸ್ತಿ' ಇತಿ । ಸರ್ವಥಾ ಜೀವೇಶ್ವರಸಿದ್ಧ್ಯಾ ಭವಿತವ್ಯಮ್ । 'ತತ್ರೇಶ್ವರಃ ಕಾರ್ಯತ್ವಾದ್ಯನುಮಾನಸಿದ್ಧೋ ಜೀವಶ್ಚ ಪ್ರತ್ಯಕ್ಷಸಿದ್ಧಃ' ಇತಿ ಪ್ರತ್ಯಕ್ಷಾನುಮಾನೇ ತತ್ತ್ವಮಸ್ಯಾದ್ಯಾಗಮಸ್ಯೋಪಜೀವ್ಯೇ । ಏತದೇವ

**ವಿವೃಣೋತಿ- 'ಅನುಮಾನೇನ ಹಿ' ಇತಿ ॥ ಕುತಃ? ಇತ್ಯತ ಉಕ್ತಮ್ 'ಅನುವಾದಿತ್ವಪಕ್ಷೇ' ಇತಿ । ಭೇದವಾಕ್ಯಾನಾಮನುವಾದಿತ್ವಸಿದ್ಧ್ಯರ್ಥಂ ಪರೇಣಾನುಮಾನಸ್ಯೇಶ್ವರಸಾಧನಾಯೋಪನ್ಯಸ್ತತ್ವಾತ್ । 'ಆಗಚ್ಛತಿ-ಅವಗಚ್ಛತಿ ಇತಿ' ಆಗಮೋ- ಜೀವಃ । ಯದ್ವಾ 'ಜೀವಸ್ಯ ಪ್ರತ್ಯಕ್ಷಸಿದ್ಧತ್ವಂ ಪ್ರಸಿದ್ಧಮ್' ಇತಿ ತದನುಕ್ತ್ವಾ 'ಸ್ವರೂಪಗ್ರಾಹಕಸ್ಯಾಪ್ಯುಪಜೀವ್ಯತ್ವಂ ಭವತಿ' ಇತಿ ಜ್ಞಾಪಯಿತುಂ 'ಪ್ರತ್ಯಕ್ಷೇಣ ಚಾಽಽಗಮಃ' ಇತ್ಯುಕ್ತಮ್ । ಅಥವಾ ಚಶಬ್ದೇನ ಜೀವಂ ಸಮುಚ್ಚಿನೋತಿ ।**

ಉಪಜೀವ್ಯದ ವಿರುದ್ಧವಾದ ಉಪಜೀವಕಕ್ಕೆ ಅಪ್ರಾಮಾಣ್ಯವಿರಲಿ, ಪ್ರಕೃತವಾದಕ್ಕೆ ಏನು ತಿಳಿಸಿದಂತಾಯಿತು? ಆದುದರಿಂದ ಉತ್ತರಿಸುತ್ತಾರೆ **'ತೇನೈವ ಹಿ'** ಎನ್ನುವದರಿಂದ. ಭೇದವಾಕ್ಯಗಳಿಗೆ ಅನುವಾದಕತ್ವವನ್ನು ಸಮರ್ಥಿಸಲು ಪರರು ಉಪನ್ಯಾಸ ಮಾಡಿದ್ದರಿಂದಲೇ[1]. ಇದರಿಂದ ನಾವು ಬಲಾತ್ಕಾರದಿಂದ ಇದನ್ನು ಪ್ರತಿಪಾದಿಸುತ್ತಿಲ್ಲ, ಪರವಾದಿಗಳೂ ಇದನ್ನು ಒಪ್ಪಿರುವರು ಎಂದು ಸೂಚಿಸುತ್ತಾರೆ. ಕೇವಲ ಭೇದಾಗಮಕ್ಕಲ್ಲ ಆದರೆ **ತತ್ಪಕ್ಷೇಽಪ್ಯಾಗಮಸ್ಯ**- ಭೇದಾಗಮದಂತೆ ಅಭೇದಾಗಮಕ್ಕೂ ಸಹ (ಪ್ರತ್ಯಕ್ಷವು ಉಪಜೀವ್ಯವಾಗಿದೆ) ಎಂದು ಒಟ್ಟು ತಾತ್ಪರ್ಯ. 'ತತ್ತ್ವಮಸಿ' ಎನ್ನುವುದು ಜೀವನನ್ನು ವಿಷಯೀಕರಿಸಿ, ಅವನಿಗೆ ಈಶ್ವರನಿಂದ ಅಭೇದವನ್ನು ಬೋಧಿಸುವುದು. ಅಥವಾ 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎನ್ನುವುದು ಈಶ್ವರನ್ನು ವಿಷಯೀಕರಿಸಿ, ಅವನಿಗೆ ಜೀವನಿಂದ ಅಭೇದವನ್ನು (ಬೋಧಿಸುವುದು) ಎಂದು. ಅಥವಾ ಈರ್ವರನ್ನೂ ವಿಷಯೀಕರಿಸಿ ಅಭೇದಮಾತ್ರವನ್ನು ತಿಳಿಸುವುದು 'ನೇಹ ನಾನಾಽಸ್ತಿ' ಎಂದು. (ಈ ಮೂರು ಬಗೆಗಳಲ್ಲೂ ಸಹ) ಅವಶ್ಯವಾಗಿ ಜೀವೇಶ್ವರರ ಸಿದ್ಧಿಯು ಬೇಕು. ಅಲ್ಲಿ ಈಶ್ವರನು 'ಕಾರ್ಯತ್ವಾತ್' ಎಂಬ ಅನುಮಾನದಿಂದ ಸಿದ್ಧನು, ಜೀವನಾದರೋ ಪ್ರತ್ಯಕ್ಷದಿಂದ ಸಿದ್ಧನು' ಎಂದು ಪ್ರತ್ಯಕ್ಷಾನುಮಾನಗಳು 'ತತ್ತ್ವಮಸಿ' ಮುಂತಾದ ಆಗಮಗಳಿಗೆ ಉಪಜೀವ್ಯಗಳು. ಇದನ್ನೇ ವಿವರಿಸುವರು **'ಅನುಮಾನೇನ ಹಿ'** ಎಂದು. ಏಕೆ

1. ಮೂಲದಲ್ಲಿನ 'ತೇನೈವ ಹಿ' ಎನ್ನುವದರ ವಿವರವಿದು.

ಎಂದು[1], ಆದುದರಿಂದ ಉತ್ತರಿಸುತ್ತಾರೆ '**ಅನುವಾದಿತ್ವಪಕ್ಷೇ**' ಎಂದು. 'ಭೇದವಾಕ್ಯಗಳು ಅನುವಾದಿಗಳು' ಎಂದು ಸಾಧಿಸಲು ಪರರು ಈಶ್ವರನ ಸಾಧನೆಗಾಗಿ ಅನುಮಾನವನ್ನು ಹೇಳಿರುವುದರಿಂದ. 'ಆಗಚ್ಛತಿ– ಅವಗಚ್ಛತಿ' – **ಆಗಮಃ**– ಜೀವಃ[2]. ಅಥವಾ ಜೀವನು ಪ್ರತ್ಯಕ್ಷದಿಂದ ಸಿದ್ಧ ಎನ್ನುವುದು ಪ್ರಸಿದ್ಧ ಎಂದು ಅದನ್ನು ತಿಳಿಸದೇ, ಸ್ವರೂಪದ ಗ್ರಾಹಕಕ್ಕೂ ಉಪಜೀವ್ಯತ್ವವು ಉಂಟು ಎಂದು ಸೂಚಿಸಲು '**ಪ್ರತ್ಯಕ್ಷೇಣ ಚಾಽಗಮಃ**' ಎಂದು ಹೇಳಲಾಗಿದೆ[3]. ಅಥವಾ '**ಚ**' ಶಬ್ದದಿಂದ ಜೀವನನ್ನು ಸಂಗ್ರಹಿಸುವುದು[4].

**ತತೋಽಪಿ ಕಿಂ ಪ್ರಕೃತೇ? ಇತ್ಯತ ಆಹ– 'ಅತ' ಇತಿ ॥ ಯತ ಉಪಜೀವ್ಯಮುಪಜೀವಕಾತ್ ಪ್ರಬಲಮ್, ಉಪಜೀವ್ಯೇ ಚಾಭೇದಾಗಮಸ್ಯ ಪ್ರತ್ಯಕ್ಷಾನುಮಾನೇ, ಅತಃ ತಯೋಃ ಪ್ರತ್ಯಕ್ಷಾನುಮಾನಯೋರ್ವಿರೋಧೇ ಸತ್ಯಭೇದಾಗಮಸ್ಯ ಪ್ರಾಮಾಣ್ಯಂ ನ ಸ್ಯಾತ್ । ಭವತು ಪ್ರತ್ಯಕ್ಷಾದಿಕಮ್ ಅಭೇದಾಗಮಸ್ಯೋಪಜೀವ್ಯಂ ಕಿನ್ತು ತದ್ವಿರೋಧಸ್ತು ನಾಸ್ತಿ । ನಹಿ ಪ್ರತ್ಯಕ್ಷಂ ಜೀವಮೀಶ್ವರಾದ್ ಭಿನ್ನತ್ವೇನ ಗೃಹ್ಣಾತಿ, ನಾಪ್ಯನುಮಾನಮೀಶ್ವರಂ ಜೀವಾತ್, ಯೇನ ತದ್ವಿರೋಧಃ ಸ್ಯಾತ್, ಕಿಂ ನಾಮ? ತತ್ಸ್ವರೂಪಮಾತ್ರಮ್ । ತಥಾಭೂತೇ ಏವಾತ್ರೋಪಜೀವ್ಯೇ । ತತ್ಕಥಮಭೇದಾಗಮಸ್ಯ ಪ್ರಾಮಾಣ್ಯಂ ನ ಸ್ಯಾದ್? ಇತ್ಯತ ಆಹ–**

---

1. ಜೀವೇಶ್ವರ ಜ್ಞಾನವು ಪ್ರತ್ಯಕ್ಷಾನುಮಾನಗಳಿಂದಲೇ ಏಕೆ ?
2. ಮೂಲದಲ್ಲಿ 'ಪ್ರತ್ಯಕ್ಷೇಣ ಚಾಽಗಮಃ' ಎಂದಿದೆ. ಈ ವಾಕ್ಯದಲ್ಲಿನ ಆಗಮಃ ಎನ್ನುವ ಶಬ್ದಕ್ಕೆ ಪ್ರಸಿದ್ಧವಾದ 'ವೇದ' ಎನ್ನುವ ಅರ್ಥವನ್ನು ವಿವಕ್ಷಿಸದೆ ಆ ಶಬ್ದವನ್ನು ನಿರ್ವಚಿಸಿ, ಅಗತ್ಯ ಅರ್ಥವಾದ 'ತಿಳಿಯುವವನು ಯಾರೋ ಆತನು– ಜೀವ' ಎಂದು ತಿಳಿಸಿರುವರು. ಜೀವ ಮತ್ತು ಈಶ್ವರರು ಅನ್ಯಪ್ರಮಾಣದಿಂದ ಸಿದ್ಧರು ಎಂದು ತಿಳಿಸುವ ಪ್ರಸಂಗವಾದುದರಿಂದ ಆಗಮಶಬ್ದಕ್ಕೆ ಜೀವ ಎಂದು ಅರ್ಥೈಸಲಾಗಿದೆ.
3. 'ತತ್ತ್ವಮಸಿ' ಮುಂತಾದ ಆಗಮಗಳು ಶ್ರೋತ್ರ ಪ್ರತ್ಯಕ್ಷದಿಂದಲೇ ಅರಿವಿಗೆ ಬರುವವು, ಹೀಗಾಗಿ ವೇದದ ಸ್ವರೂಪದ ಗ್ರಾಹಕವು ಪ್ರತ್ಯಕ್ಷವೇ ಆಗಿದೆ. ಆ ಕಾರಣದಿಂದಲೂ ವೇದಕ್ಕೆ ಪ್ರತ್ಯಕ್ಷವು ಉಪಜೀವ್ಯ ಎಂದು ಭಾವ.
4. ಭೇದದ ಅರಿವಿಗೆ ಅನುಯೋಗಿಯೋ ಪ್ರತಿಯೋಗಿಯೋ ಆದ ಜೀವಿಯ ಜ್ಞಾನ ಮತ್ತು ವೇದಸ್ವರೂಪದ ಜ್ಞಾನ ಈ ಎರಡೂ ಪ್ರತ್ಯಕ್ಷದಿಂದಲೇ ಪ್ರಪ್ತವಾಗುವುದರಿಂದ ಪ್ರತ್ಯಕ್ಷವೇ ಐಕ್ಯಾಗಮಕ್ಕೆ ಉಪಜೀವ್ಯವಾಗಿದೆ ಎಂದು ತಿಳಿಸಿದಂತಾಯಿತು.

**'ಅನುಮಾನ..'** ಇತಿ ॥ ತತ್ಕಥಮ್? ಇತ್ಯತ ಆಹ - **'ಅಸರ್ವ..'** ಇತಿ ॥ ಯದ್ಯಪ್ಯನ್ಯೋನ್ಯಾನಪೇಕ್ಷೇ ಪ್ರತ್ಯಕ್ಷಾನುಮಾನೇ ನ ಜೀವೇಶ್ವರಭೇದಂ ಗೋಚರಯತಸ್ತಥಾಪಿ ಕಾರ್ಯತ್ವಾದ್ಯನುಮಾನಾನೇನ ಸರ್ವಕರ್ತೃತ್ವಾದಿ-ಲಕ್ಷಣಮೀಶ್ವರಂ ಜ್ಞಾತವತಃ ಸಾಕ್ಷಿಣಾ ಚ ತದ್ವಿರುದ್ಧಸ್ವಭಾವಮಾತ್ಮಾನ-ಮನುಭವತಃ ತತೋ ಭೇದಜ್ಞಾನಮವರ್ಜನೀಯಮೇವ ಇತಿ । 'ಆಗಮ ಏವೇಶ್ವರಂ ಗೃಹ್ಣನ್, ಉಪಜೀವ್ಯೋ ನಾನುಮಾನಮ್' ಇತಿ ಚೇನ್ನ । ತಸ್ಯಾಪಿ 'ಯಃ ಸರ್ವಜ್ಞಃ' ಇತ್ಯಾದೇರನುಮಾನತುಲ್ಯತ್ವಾತ್ ।

ಅದರಿಂದ ಪ್ರಕೃತಕ್ಕೆ ಏನು? ಆದುದರಿಂದ ಉತ್ತರಿಸುವರು 'ಅತಃ' ಎಂದು. ಯಾವಕಾರಣದಿಂದ ಉಪಜೀವ್ಯವು ಉಪಜೀವಕದಿಂದ ಪ್ರಬಲ, ಅಭೇದಾಗಮಕ್ಕೆ ಪ್ರತ್ಯಕ್ಷಾನುಮಾನಗಳು ಉಪಜೀವ್ಯ, ಆದುದರಿಂದ **ತಯೋಃ**-ಪ್ರತ್ಯಕ್ಷಾನುಮಾನಗಳಿಂದ ವಿರೋಧವೂ ಪ್ರಾಪ್ತವಾದಲ್ಲಿ ಅಭೇದಾಗಮಕ್ಕೆ ಪ್ರಾಮಾಣ್ಯವು ಇಲ್ಲವಾದೀತು. ಅಭೇದಾಗಮಕ್ಕೆ ಪ್ರತ್ಯಕ್ಷಾನುಮಾನಗಳು ಉಪಜೀವ್ಯವೇ ಆಗಲಿ, ಆದರೆ ಅವುಗಳ (ಪ್ರತ್ಯಕ್ಷಾನುಮಾನಗಳ) ವಿರೋಧವು (ಅಭೇದಾಗಮಕ್ಕೆ) ಇಲ್ಲ. ಪ್ರತ್ಯಕ್ಷವು ಜೀವನನ್ನು ಈಶ್ವರನಿಂದ ಭಿನ್ನ ಎಂದು ಗ್ರಹಿಸುವುದಿಲ್ಲ, ಅನುಮಾನವೂ ಜೀವನಿಂದ ಈಶ್ವರನನ್ನು (ಭಿನ್ನ ಎಂದು ಗ್ರಹಿಸುವುದಿಲ್ಲ). ಅದರಿಂದ (ಭಿನ್ನತ್ವೇನ ಗ್ರಹಿಸಿದ್ದಲ್ಲಿ) ವಿರೋಧವು ಪ್ರಾಪ್ತವಾದೀತು. ಏನು ಹಾಗಾದಲ್ಲಿ? (ಪ್ರತ್ಯಕ್ಷಾದಿಗಳು ಏನನ್ನು ಬೋಧಿಸುತ್ತವೆ?) ಅವರ (ಜೀವೇಶ್ವರರ) ಸ್ವರೂಪಗಳನ್ನು ಮಾತ್ರ (ಗ್ರಹಿಸುವುದು). ಇಷ್ಟುಮಾತ್ರ ಪ್ರಕೃತದಲ್ಲಿ (ಪ್ರತ್ಯಕ್ಷಾದಿಗಳಿಗೆ) ಉಪಜೀವ್ಯತ್ವವು. ಆದುದರಿಂದ ಅಭೇದಾಗಮಕ್ಕೆ ಹೇಗೆ ತಾನೆ ಪ್ರಾಮಾಣ್ಯವು ಇಲ್ಲದಾದೀತು? ಆದುದರಿಂದ ಉತ್ತರಿಸುತ್ತಾರೆ **'ಅನುಮಾನಸಿದ್ಧ...'** ಎಂದು. ಅದು ಹೇಗೆ? ಉತ್ತರಿಸುತ್ತಾರೆ **'ಅಸರ್ವ..'** ಎಂದು ವಸ್ತುತಃ ಪರಸ್ಪರವಾಗಿ ಅಪೇಕ್ಷೇ ಇರದ ಪ್ರತ್ಯಕ್ಷಾನುಮಾನಗಳು[1] ಜೀವೇಶ್ವರರ ಭೇದವನ್ನು ತಿಳಿಸಲಾರವು, ಆದರೂ ಕಾರ್ಯತ್ವಾತ್ ಮುಂತಾದ ಅನುಮಾನದಿಂದ ಸರ್ವಕರ್ತೃತ್ವಾದಿ

1. ಜೀವನನ್ನು ಅಸ್ವತಂತ್ರ ಎಂದು ಗ್ರಹಿಸುವ ಪ್ರತ್ಯಕ್ಷವು 'ಈಶ್ವರನು ಸರ್ವಜ್ಞನು' ಎಂದು ತಿಳಿಸುವ ಅನುಮಾನವನ್ನು ಅಪೇಕ್ಷಿಸದೇ ಸ್ವತಂತ್ರವಾಗಿ ಪ್ರವೃತ್ತವಾಗಿದೆ. ಹಾಗೇಯೇ ಅನುಮಾನವೂ ಪ್ರತ್ಯಕ್ಷವನ್ನು ನಿರೀಕ್ಷಿಸದೇ ಪ್ರವೃತ್ತವಾಗಿದೆ ಎಂದು ಭಾವ.

ಲಕ್ಷಣವಿಶಿಷ್ಟನಾದ ಈಶ್ವರನನ್ನು ತಿಳಿದ ಸಾಕ್ಷಿಯು ತನ್ನನ್ನು, ಅದಕ್ಕೆ ವಿರುದ್ಧವಾದ ಸ್ವಭಾವವನ್ನು ಹೊಂದಿರುವವನನ್ನಾಗಿ ಅನುಭವದಲ್ಲಿ ತಿಳಿದಿರುವುದರಿಂದ ಭೇದಜ್ಞಾನವು ಅನಿವಾರ್ಯವೇ ಆಗಿದೆ ಎಂದು. ಆಗಮವೇ ಈಶ್ವರನನ್ನು ಪರಿಗ್ರಹಿಸುವುದು ಅನುಮಾನವು ಉಪಜೀವ್ಯವಲ್ಲ ಎಂದೆನ್ನಲಾಗದು ಅದಕ್ಕೂ ಸಹ (ಈಶ್ವರನನ್ನು ತಿಳಿಸುವ ಆಗಮಭಾಗವೂ ಸಹ) 'ಯಃ ಸರ್ವಜ್ಞಃ' ಇತ್ಯಾದಿಗಳು (ಸರ್ವಕರ್ತೃತ್ವವನ್ನು ತಿಳಿಸುವ) ಅನುಮಾನಕ್ಕೆ ಸಮಾನವಾದುದರಿಂದ[1].

**ಆಗಮಗ್ರಾಹಕಪ್ರತ್ಯಕ್ಷಸ್ಯೋಪಜೀವ್ಯತ್ವೋಕ್ತೇರಯಮುಪಯೋಗಃ- 'ನೇಹ ನಾನಾಽಸ್ತಿ' ಇತ್ಯೈಕ್ಯಾಗಮೇನ ಹಿ ಸ್ವಪ್ರಭೃತೇರ್ಭೇದಪ್ರಪಞ್ಚಸ್ಯ ಮಿಥ್ಯಾತ್ವಮುಚ್ಯತೇ । ತತ್ರ ಚ ಅಗಮಾದಿಗ್ರಾಹಕಂ ಪ್ರತ್ಯಕ್ಷಾದಿಕಮ್ ಉಪಜೀವ್ಯಮಿತಿ, ತದ್ವಿರೋಧೇನ ತಸ್ಯಾಪ್ರಾಮಾಣ್ಯಮಿತಿ ।**

ಆಗಮಗ್ರಾಹಕ ಪ್ರತ್ಯಕ್ಷಕ್ಕೆ ಉಪಜೀವ್ಯತ್ವವನ್ನು ಹೇಳಿರುವುದಕ್ಕೆ ಇದು ಉಪಯೋಗ[2]. 'ನೇಹ ನಾನಾಽಸ್ತಿ' ಎನ್ನುವ ಐಕ್ಯಾಗಮದಿಂದ, ತಾನು (ಐಕ್ಯಬೋಧಕಾಗಮ) ಮುಂತಾದ (ಸಮಸ್ತ) ಭೇದಪ್ರಪಂಚಕ್ಕೆ ಮಿಥ್ಯಾತ್ವವು ಬೋಧಿತವಾಗುವುದು ತಾನೆ?. ಅಲ್ಲಿಯಾದರೋ ಆಗಮಗ್ರಾಹಕವಾದ

---

1. ಕಾರ್ಯತ್ವಾನುಮಾನದಿಂದ ಈಶ್ವರನು ಸರ್ವಕರ್ತೃತ್ವೇನ ಸಿದ್ಧನಾಗುವುದರಿಂದ ಇಂತಹ ಈಶ್ವರನಿಗೆ ಜೀವರಿಂದ ಅಭೇದವನ್ನು ವೇದವು ತಿಳಿಸಿದಲ್ಲಿ, ಉಪಜೀವ್ಯಮಾನದ ವಿರೋಧವು ಪ್ರಾಪ್ತವಾಗಿ ಅಭೇದಾಗಮಕ್ಕೆ ಅಪ್ರಾಮಾಣ್ಯ ಎಂದು ಸಂದೇಹಿಸಲು ಅವಕಾಶವಿಲ್ಲದಂತೆ, ಕೇವಲ ಆಗಮದಿಂದಲೇ ಈಶ್ವರನು ಸಿದ್ಧನಾಗುವನು ಎಂದೂ ಪ್ರತಿಪಾದಿಸಲು ಶಕ್ಯವಿಲ್ಲ. ಆ ಆಗಮಗಳಾದರೋ 'ಯಃ ಸರ್ವಜ್ಞಃ' ಇತ್ಯಾದಿಗಳು ಎಂದು ಪರವಾದಿಗಳು ಒಪ್ಪಿರುವರು. ಈಶ್ವರಸಾಧಕಾಗಮಗಳೂ ಸಹ ಈಶ್ವರಸಾಧಕ ಅನುಮಾನದಂತೆ ಈಶ್ವರನನ್ನು ಸರ್ವಜ್ಞತ್ವಾದಿ ಗುಣಗಳಿಂದ ಯುಕ್ತನನ್ನಾಗಿಯೇ ತಿಳಿಸುವವು, ಈಶ್ವರಬೋಧಕಾಗಮವು ಅಭೇದಾಗಮಕ್ಕೆ ಉಪಜೀವ್ಯವಾದುದರಿಂದ ಪುನಃ ಉಪಜೀವ್ಯ ವಿರೋಧದಿಂದ ಅಪ್ರಾಮಾಣ್ಯ ಎಂದು ಭಾವ.

2. 'ಪ್ರತ್ಯಕ್ಷೇಣ ಚಾಽಗಮಃ' ಎನ್ನುವ ಮೂಲವಾಕ್ಯವನ್ನು (388ನೇ ಪುಟದಲ್ಲಿ) ಅರ್ಥೈಸುವಾಗ ಆಗಮವು ಶ್ರೋತ್ರಪ್ರತ್ಯಕ್ಷದಿಂದ ಗೃಹೀತವಾಗುವುದರಿಂದ 'ಪ್ರತ್ಯಕ್ಷವು ಸ್ವರೂಪಗ್ರಾಹಕತ್ವೇನ ಆಗಮಗಳಿಗೆ ಉಪಜೀವ್ಯ' ಎಂದು ಈ ಹಿಂದೆ ತಿಳಿಸಲಾಗಿತ್ತು ಅದು ಪ್ರಕೃತದ ವಾದದ ಸಮರ್ಥನೆಗೆ ಸಹಕಾರಿಯಾಗಿದೆ ಎಂದು ಭಾವ.

ಪ್ರತ್ಯಕ್ಷಾದಿಗಳು ಉಪಜೀವ್ಯವಾಗಿವೆ ಎಂದು ಅವುಗಳ ವಿರೋಧದಿಂದ ಅದಕ್ಕೆ (ಐಕ್ಯಾಗಮಕ್ಕೆ) ಅಪ್ರಾಮಾಣ್ಯ ಎಂದು[1].

**ಐಕ್ಯಾಗಮಗಳು ಪ್ರಬಲಪ್ರಮಾಣದಿಂದ ವಿರುದ್ಧವಾಗಿವೆ**

**ನ ಚಾನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಮ್, ಆಗಮ-ಪ್ರಾಮಾಣ್ಯಾನುಭವಸ್ಯಾಪ್ಯಪ್ರಾಮಾಣ್ಯಪ್ರಾಪ್ತೇಃ । ಬಹುಪ್ರಮಾಣ-ಸಂವಾದಶ್ಚ ದಾರ್ಢ್ಯಹೇತುರೇವ, ಬಹೂನಾಂ ವಚನೇ ತಸ್ಯೈವ ದರ್ಶನೇ ಚ ದಾರ್ಢ್ಯಸ್ಯೈವ ದೃಷ್ಟೇಃ ।**

ಅನುಭವದ ವಿರೋಧವು ಪ್ರಾಪ್ತವಾಗಲು ಆಗಮಕ್ಕೆ ಪ್ರಾಮಾಣ್ಯವು ತರವಾಗದು, (ಅನುಭವವೇ ಅಪ್ರಮಾಣ ಎಂದು ಒಪ್ಪಿದಲ್ಲಿ) ಆಗಮದ ಪ್ರಾಮಾಣ್ಯವನ್ನು (ಗ್ರಹಿಸುವ) ಅನುಭವವೂ ಅಪ್ರಮಾಣವಾಗಬೇಕಾದೀತು. (ವಿಷಯ ಒಂದನ್ನು) ಬಹುಜನರು ಹೇಳಲು, ಅದನ್ನೇ ಕಂಡಾಗ ದೃಢವಾದದ್ದು ಕಂಡಿರುವುದರಿಂದ, ಅನೇಕ ಪ್ರಮಾಣದ ಸಂವಾದವಾದರೋ (ಪ್ರಮಾಣದ) ದಾರ್ಢ್ಯಕ್ಕೇ ಕಾರಣವಾಗುವುದು.

ಇತಶ್ಚಾಭೇದಾಗಮಸ್ಯಾಪ್ರಾಮಾಣ್ಯಮಿತ್ಯಾಹ- 'ನಚ' ಇತಿ । ಪೂರ್ವ-ಮುಪಜೀವ್ಯತ್ವೇನ ಪ್ರಾಬಲ್ಯಮಾಶ್ರಿತ್ಯೈಕ್ಯಾಗಮಸ್ಯ ಸಾಕ್ಷ್ಯನುಭವ-ವಿರೋಧೇನಾಪ್ರಾಮಾಣ್ಯಮುಕ್ತಮ್ । ಇದಾನೀಂತ್ತೂಪಜೀವ್ಯತ್ವಾನಪೇಕ್ಷ - ಪ್ರಾಬಲ್ಯಮಾಶ್ರಿತ್ಯೋಚ್ಯತೇ । ವಿರೋಧಪ್ರಕಾರಸ್ತು ಪ್ರಾಗ್ವ್ಯುತ್ಪಾದಿತ ಏವ । ಸಾಕ್ಷ್ಯನುಭವವಿರೋಧೇನೈಕ್ಯಾಗಮಸ್ಯಾಪ್ರಾಮಾಣ್ಯಂ ಕುತ ಃ? ಇತಿ ಚೇತ್, ನ ತಾವದ್ವಿರುದ್ಧಯೋರುಭಯೋಃ ಪ್ರಾಮಾಣ್ಯಮಪ್ರಾಮಾಣ್ಯಂ ವೋಪಪದ್ಯತ ಇತ್ಯುಕ್ತಮ್ । ತತೋಽನ್ಯತರಸ್ಯೈವಾಪ್ರಾಮಾಣ್ಯೇ ಅವಶ್ಯಮಙ್ಗೀಕರಣೀಯೇ ನ ತಾವದ್ ಐಕ್ಯಾಗಮವಿರೋಧೇನ

1. 'ನೇಹ ನಾನಾಽಸ್ತಿ' ಎನ್ನುವ ವೇದವಾಕ್ಯವು 'ತನಗೂ ಉಳಿದ ಪ್ರಪಂಚಕ್ಕೂ ಮಿಥ್ಯಾತ್ವವನ್ನು ಬೋಧಿಸುವುದು' ಎಂದು ಪರವಾದಿಗಳ ಅಭಿಮತ. ಆದರೆ ಈ ಶ್ರುತಿಯನ್ನು ಗ್ರಹಿಸುವ ಪ್ರತ್ಯಕ್ಷವು ಆ ಶ್ರುತಿಗೆ ಅಸ್ತಿತ್ವವನ್ನು ಗ್ರಹಿಸಿದೆ. ಉಪಜೀವ್ಯವಾದ ಈ ಪ್ರತ್ಯಕ್ಷಕ್ಕೆ ವಿರುದ್ಧವಾಗಿ ತನಗೆ (ಆ ಶ್ರುತಿವಾಕ್ಯಕ್ಕೂ) ಮಿಥ್ಯಾತ್ವವನ್ನು ತಿಳಿಸಿದಲ್ಲಿ ಆ ವೇದವಾಕ್ಯಕ್ಕೆ ಅಪ್ರಾಮಾಣ್ಯವು ಒದಗುವುದು ಎಂದು ಭಾವ.

**ಸಾಕ್ಷ್ಯನುಭವಸ್ಯಾಪ್ರಾಮಾಣ್ಯಮಙ್ಗೀಕರ್ತುಮುಚಿತಮ್ । ಕುತಃ? ಇತ್ಯತ ಆಹ- 'ಆಗಮ..' ಇತಿ । ಸಾಕ್ಷ್ಯನುಭವಃ ಖಲು ಸರ್ವಪ್ರಮಾಣ-ಪ್ರಾಮಾಣ್ಯನಿಶ್ಚಾಯಕಃ । ತಥಾಚ ತಸ್ಯ ಜೀವೇಶ್ವರಭೇದವಿಷಯೇ ಅಪ್ರಾಮಾಣ್ಯೇ ಸತ್ಯಭೇದಾಗಮಪ್ರಾಮಾಣ್ಯವಿಷಯೇಽಪಿ ಪ್ರಾಮಾಣ್ಯಮ್ ಅವಿಶ್ವಸನೀಯಂ ಸ್ಯಾತ್ । ತತಶ್ಚೈಕ್ಯಾಗಮಪ್ರಾಮಾಣ್ಯಂ ನ ಸಿದ್ಧ್ಯೇತ್ । ನ ಚಾಸಿದ್ಧಪ್ರಾಮಾಣ್ಯಮನ್ಯದಪ್ರಮಾಣೀಕರ್ತುಂ ಪ್ರಭವತೀತ್ಯತಃ ಪರಿಶೇಷಾತ್ 'ಸಾಕ್ಷ್ಯನುಭವವಿರೋಧಿನೋಽಭೇದಾಗಮಸ್ಯೈವ ಅಪ್ರಾಮಾಣ್ಯಂ ವಾಚ್ಯಮ್' ಇತಿ । ಆಗಮಪ್ರಾಮಾಣ್ಯಾನುಭವಸ್ಯಾಪೀತಿ ವಿಷಯಭೇದೇನೈವ ಭೇದೋಪಚಾರಃ । ಆಗಮಪ್ರಾಮಾಣ್ಯ-ವಿಷಯೇಽಪೀತಿ ಯಾವತ್ । ಅನೇನ 'ಅವ್ಯಭಿಚರಿತತ್ವನಿಯಮಃ ಸಾಕ್ಷ್ಯನುಭವಸ್ಯ ಪ್ರಾಬಲ್ಯಹೇತುಃ' ಇತ್ಯುಕ್ತಂ ಭವತಿ**

ಇನ್ನೂ ಸಹ ಅಭೇದಾಗಮಕ್ಕೆ ಅಪ್ರಾಮಾಣ್ಯ ಎಂದು ತಿಳಿಸುತ್ತಾರೆ 'ನ ಚ' ಎಂದು. ಈ ಮುನ್ನ ಉಪಜೀವ್ಯವಾದುದರಿಂದ ಪ್ರಾಬಲ್ಯವನ್ನು ಒಪ್ಪಿ, ಸಾಕ್ಷಿಯ ಅನುಭವದ ವಿರೋಧವಿರುವುದರಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವನ್ನು ಹೇಳಲಾಗಿತ್ತು. ಈಗಲಾದರೋ ಉಪಜೀವ್ಯತ್ವವನ್ನು ಆಶ್ರಯಿಸದೇ (ಕೇವಲ) ಪ್ರಾಬಲ್ಯವನ್ನು ಆಶ್ರಯಿಸಿ ಉತ್ತರಿಸಲಾಗುವುದು. ವಿರೋಧದ ಕ್ರಮವನ್ನು ಹಿಂದೆ ಪ್ರದರ್ಶಿಸಲಾಗಿದೆ[1]. ಸಾಕ್ಷಿಯ ಅನುಭವದ ವಿರೋಧದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವು ಹೇಗೆ? ಎಂದಲ್ಲಿ ವಿರುದ್ಧವಾದ ಎರಡಕ್ಕೂ ಪ್ರಾಮಾಣ್ಯವಾಗಲಿ ಅಪ್ರಾಮಾಣ್ಯವಾಗಲಿ ಯುಕ್ತವಾಗದು ಎಂದು (ಈ ಹಿಂದೆ) ಹೇಳಲಾಗಿದೆ. ಆದುದರಿಂದ ಯಾವುದಾದರೂ ಒಂದಕ್ಕೆ ಅಪ್ರಾಮಾಣ್ಯವನ್ನು ಒಪ್ಪಬೇಕಾದುದರಿಂದ, ಐಕ್ಯಾಗಮದ ವಿರೋಧದಿಂದ ಸಾಕ್ಷ್ಯನುಭವಕ್ಕೆ ಅಪ್ರಾಮಾಣ್ಯವನ್ನು ಒಪ್ಪುವುದು ಅನುಚಿತ. ಏಕೆ ಅಂದರೆ ಉತ್ತರಿಸುತ್ತಾರೆ 'ಆಗಮ...' ಎಂದು. ಸಾಕ್ಷಿಯ ಅನುಭವವಾದರೋ ಎಲ್ಲ

---

1. 'ಕರ್ತೃತ್ವಾನುಮಾನದಿಂದಲೋ, 'ಯಃ ಸರ್ವಜ್ಞಃ ....' ಇತ್ಯಾದಿ ಆಗಮದಿಂದಲೋ ಬೋಧಿತನಾಗುವ ಈಶ್ವರನಿಗೆ ವಿರುದ್ಧವಾದ ಗುಣಗಳನ್ನು ಹೊಂದಿದವನನ್ನಾಗಿ ತನ್ನನ್ನು (ಜೀವಿಯನ್ನು) ಸಾಕ್ಷಿಯು ಅನುಭವಿಸುವದರಿಂದ ಭೇದಜ್ಞಾನವು ಅನಿವಾರ್ಯ' ಎಂದು ಈ ಹಿಂದೆ ತಿಳಿಸಲಾಗಿದೆ ಎಂದು ಭಾವ.

ಪ್ರಮಾಣಗಳ ಪ್ರಾಮಾಣ್ಯದ ನಿಶ್ಚಾಯಕ. ಆದುದರಿಂದ ಅದು (ಸಾಕ್ಷಿಯು) ಜೀವೇಶ್ವರಭೇದವಿಷಯದಲ್ಲಿ ಅಪ್ರಮಾಣವಾದಲ್ಲಿ, ಅಭೇದಾಗಮದ ಪ್ರಾಮಾಣ್ಯದ ವಿಷಯದಲ್ಲಿ (ಅಭೇದಾಗಮದ ಪ್ರಾಮಾಣ್ಯಗ್ರಾಹಕವಾದ ಸಾಕ್ಷಿಯ) ಪ್ರಾಮಾಣ್ಯವು ಅವಿಶ್ವಸನೀಯವಾದೀತು. ಆದುದರಿಂದ ಐಕ್ಯಾಗಮದ ಪ್ರಾಮಾಣ್ಯವು ಸಿದ್ಧಿಸದೇ ಹೋದೀತು. (ತನ್ನ) ಪ್ರಾಮಾಣ್ಯವೇ ಸಿದ್ಧವಾಗದಿರಲು, ಮತ್ತೊಂದನ್ನು ಅಪ್ರಮಾಣಗೊಳಿಸಲು ಸಮರ್ಥ ವಾಗಲಾರದು, (ಹೀಗೆ) ಪರಿಶೀಲಿಸಲಾಗಿ ಸಾಕ್ಷಿಯ ಅನುಭವದ ವಿರೋಧ-ದಿಂದ ಅಭೇದಾಗಮಕ್ಕೇ ಅಪ್ರಾಮಾಣ್ಯವನ್ನು ಹೇಳಬೇಕು ಎಂದು. **'ಆಗಮಪ್ರಾಮಾಣ್ಯಾನುಭವಸ್ಯಾಪಿ'** ಎಂದು ವಿಷಯದ ಭೇದದಿಂದ ಭೇದದ ಉಪಚಾರ[1]. ಆಗಮಪ್ರಾಮಾಣ್ಯವಿಷಯದಲ್ಲೂ ಎಂದು ತಾತ್ಪರ್ಯ[2]. ಇದರಿಂದ (ಸಾಕ್ಷಿಯ ಅನುಭವಕ್ಕೆ ವಿರುದ್ಧವಾದುದರಿಂದ ಐಕ್ಯಾಗಮವು

---

1. ಮೂಲದಲ್ಲಿ 'ಅನುಭವಕ್ಕೆ ವಿರುದ್ಧವಾದಲ್ಲಿ ಆಗಮಕ್ಕೆ ಪ್ರಾಮಾಣ್ಯವಿಲ್ಲ. ಆಗಮಪ್ರಾಮಾಣ್ಯದ ಅನುಭವವೂ ಅಪ್ರಮಾಣವಾಗಬೇಕಾದೀತು' ಎಂದಿದೆ. ಪ್ರಕೃತ ವಾದದ ಪ್ರಸಂಗವು ಹೀಗಿದೆ– 'ಸಾಕ್ಷಿಯು ಎಲ್ಲ ಪ್ರಮಾಣಗಳ ಪ್ರಾಮಾಣ್ಯದ ನಿಶ್ಚಾಯಕ. ಸಾಕ್ಷಿಯು ಜೀವೇಶ್ವರ ಭೇದವನ್ನು ಪರಿಗ್ರಹಿಸಿದೆ. ಐಕ್ಯಾಗಮಗಳು ಅದಕ್ಕೆ ವಿರುದ್ಧವಾಗಿ ಅಭೇದವನ್ನು ಹೇಳುತಿವೆ. ಈ ಐಕ್ಯಾಗಮವನ್ನು ಅನುಸರಿಸಿ ಸಾಕ್ಷಿಗೇ ಅಪ್ರಾಮಾಣ್ಯವನ್ನು ಹೇಳಿದಲ್ಲಿ, ಐಕ್ಯಾಗಮದ ಪ್ರಾಮಾಣ್ಯವನ್ನು ಗ್ರಹಿಸುವ ಸಾಕ್ಷಿಯೂ ಅಪ್ರಮಾಣವಾದೀತು' ಎಂದು. ಈ ವಿಷಯವನ್ನು ಮೂಲದಲ್ಲಿ ಪ್ರಸ್ತಾಪಿಸುವಾಗ 'ಸಾಕ್ಷಿಯ ಅನುಭವವು ಅಪ್ರಮಾಣವಾದಲ್ಲಿ ಸಾಕ್ಷಿಯ ಅನುಭವವು ಅಪ್ರಮಾಣ' ಎಂದು ತಿಳಿಸಿದಂತೆ ತೋರುತ್ತದೆ. ಇದು ವ್ಯಾಹತವಾಣಿಯಂತೆ ತೋರುವುದು. ಆದುದರಿಂದ ಟೀಕೆಯಲ್ಲಿ ಮೂಲದ ಭಾವವನ್ನು ವಿಶದ ಪಡಿಸಿರುವರು. ಸಾಕ್ಷಿಯು ಒಂದೇ ಆದರೂ, ಸಾಕ್ಷಿಯು ಗ್ರಹಿಸುವ ವಿಷಯವು ಭಿನ್ನವಾಗಿದೆ, ತನ್ನಿಮಿತ್ತ ಸಾಕ್ಷಿಯಲ್ಲಿ ಭೇದದ ಉಪಚಾರ. ಒಂದು ಜೀವೇಶ್ವರರ ಭೇದವನ್ನು ಗ್ರಹಿಸುವ ಸಾಕ್ಷಿ, ಮತ್ತೊಂದು ಆಗಮದ ಪ್ರಾಮಾಣ್ಯವನ್ನು ಗ್ರಹಿಸುವ ಸಾಕ್ಷಿ. ಇವುಗಳಲ್ಲಿ ಒಂದಕ್ಕೆ ಅಪ್ರಾಮಾಣ್ಯವನ್ನು ಹೇಳಿದಲ್ಲಿ ಮತ್ತೊಂದಕ್ಕೂ ಅಪ್ರಾಮಾಣ್ಯವನ್ನು ಒಪ್ಪಬೇಕಾದೀತು, ಎಂದು ಮೂಲವು ಅಭಿಮತಿಸುತ್ತಿದೆ ಎಂದು ಭಾವ.

2. ಮೂಲದಲ್ಲಿನ 'ಆಗಮ– ಪ್ರಾಮಾಣ್ಯಾನುಭವಸ್ಯ...' ಎನ್ನುವ ವಾಕ್ಯದ ಒಟ್ಟು ತಾತ್ಪರ್ಯಾರ್ಥವನ್ನು ಸಂಗ್ರಹಿಸುವರು– 'ಆಗಮದ ಪ್ರಾಮಾಣ್ಯವನ್ನು ಗ್ರಹಿಸುವ ಸಾಕ್ಷಿಯೂ ಅಪ್ರಮಾಣವಾಗಬೇಕಾದೀತು' ಎಂದು.

ಅಪ್ರಮಾಣ ಎಂದು ಹೇಳಿದ್ದರಿಂದ) ಅವ್ಯಭಿಚರಿತತ್ವನಿಯಮವು ಸಾಕ್ಷಿಯ ಪ್ರಾಬಲ್ಯಕ್ಕೆ ಕಾರಣ ಎಂದು ತಿಳಿಸಿದಂತಾಯಿತು[1].

**ಏವಮ್ 'ಉಪಜೀವ್ಯತ್ವನಿರವಕಾಶತ್ವಲಕ್ಷಣಸ್ವಭಾವಬಲವತ್ಪ್ರಮಾಣ-ಬಾಧಿತತ್ವಾದ್ ಐಕ್ಯಾಗಮಸ್ಯಾಪ್ರಾಮಾಣ್ಯಮ್' ಇತ್ಯುಕ್ತಮ್, ನ ಕೇವಲಮ್ ಏತಾವತ್ ಕಿನ್ತು ಬಹುತ್ವಲಕ್ಷಣಬಲವದ್ಭಿರೇತೈರೇವ ಪ್ರಮಾಣೈಃ ಬಾಧಿತತ್ವಾಚ್ಚ । ನನು, ಬಹೂನಿ ಪ್ರಮಾಣಾನ್ಯೇಕವಿಷಯಾಣಿ ವಾ ಭಿನ್ನವಿಷಯಾಣಿ ವಾ । ಆದ್ಯೇ, ಅಧಿಗತಮೇವಾರ್ಥಮಭಿಗಮಯತಾಂ ದ್ವಿತೀಯಾದೀನಾಂ ವೈಯರ್ಥ್ಯಲಕ್ಷಣೇನಾನುವಾದಕತ್ವೇನಾಪ್ರಾಮಾಣ್ಯಮ್ । ದ್ವಿತೀಯೇ, ಸ್ವೇ ಸ್ವೇ ವಿಷಯೇ ತೇಷಾಮೇಕೈಕತ್ವಾನ್ನ ಬಹುತ್ವಮ್ । ತತ್ ಕಥಂ ಬಹು-ಪ್ರಮಾಣಬಾಧಿತತ್ವಮ್ ? ಬಹುತ್ವೇ ಪ್ರಾಮಾಣ್ಯಾಭಾವಾತ್ ಪ್ರಾಮಾಣ್ಯೇ ಬಹುತ್ವಾಭಾವಾದಿತ್ಯತ ಆಹ- 'ಬಹುಪ್ರಮಾಣ..' ಇತಿ । ಅತ್ರ ಸಂವಾದ-ಗ್ರಹಣೇನೈಕವಿಷಯತಾಪಕ್ಷಮಙ್ಗೀಕರೋತಿ । ದಾರ್ಢ್ಯಹೇತುರೇವ ಇತಿ ಪ್ರಯೋಜನವತ್ತಾಭಿಧಾನೇನಾನುವಾದಕತ್ವಂ ನಿರಾಕರೋತಿ ।**

ಈ ರೀತಿಯಾಗಿ ಉಪಜೀವ್ಯತ್ವ ನಿರವಕಾಶತ್ವ ರೂಪಗಳಾದ, ಸ್ವಾಭಾವಿಕ ಬಲಿಷ್ಠವಾದ ಪ್ರಮಾಣಗಳ ಬಾಧವಿರುವುದರಿಂದ ಐಕ್ಯಾಗಮವು ಅಪ್ರಮಾಣ ಎಂದು ಹೇಳಲಾಗಿದೆ. ಕೇವಲ ಇಷ್ಟೇ ಅಲ್ಲ ಮತ್ತೆ 'ಪ್ರಮಾಣಬಾಹುಲ್ಯ' ಎಂಬ ಪ್ರಾಬಲ್ಯವನ್ನು ಹೊಂದಿರುವ ಪ್ರಮಾಣಗಳ ಬಾಧವಿರುವುದರಿಂದಲೂ ಸಹ (ಅಪ್ರಮಾಣವಾಗಿದೆ). ಸರಿ, ಬಹುಪ್ರಮಾಣಗಳು ಒಂದೇ ವಿಷಯವನ್ನು (ಪ್ರತಿಪಾದಿಸುವವೋ), ವಿಭಿನ್ನವಿಷಯಗಳನ್ನು (ಪ್ರತಿಪಾದಿಸುವವೊ)? ಮೊದಲ ಪಕ್ಷದಲ್ಲಿ ಮೊದಲು ತಿಳಿದ ವಿಷಯಗಳನ್ನೇ ತಿಳಿಸುವ ಎರಡನೆಯ (ಪ್ರಮಾಣ) ಮುಂತಾದವುಗಳಿಗೆ ವೈಯ್ಯರ್ಥ್ಯರೂಪ ಅನುವಾದಕತ್ವದಿಂದ

1. ಸಾಕ್ಷಿಯ ಅನುಭವಕ್ಕೆ ವಿರುದ್ಧವಾದುದರಿಂದ ಐಕ್ಯಾಗಮವು ಅಪ್ರಮಾಣವು ಏಕಾಗಬೇಕು ಸಾಕ್ಷಿಗೇ ಅಪ್ರಾಮಾಣ್ಯವನ್ನು ಒಪ್ಪಬಹುದಲ್ಲವೆ? ಎನ್ನುವ ಪ್ರಶ್ನೆಗೆ ಉತ್ತರಿಸಿದಂತಾಯಿತು. ಸಾಕ್ಷಿಯು ಒಂದೆಡೆಯಲ್ಲಿ ಅಪ್ರಮಾಣವಾದಲ್ಲಿ ಐಕ್ಯಾಗಮದ ಪ್ರಾಮಾಣ್ಯವನ್ನು ಗ್ರಹಿಸುವ ಸಾಕ್ಷಿಯಲ್ಲೂ ಪ್ರಾಮಾಣ್ಯದ ಸಂದೇಹವು ಪ್ರಾಪ್ತವಾಗುವುದು, ತನ್ನಿಮಿತ್ತ ಐಕ್ಯಾಗಮವು ಅಪ್ರಮಾಣವಾಗುವುದು. ಹಾಗಾಗಿ ಸಾಕ್ಷಿಯ ಪ್ರಾಮಾಣ್ಯವು ಅವ್ಯಭಿಚರಿತ ಎಂದು ಒಪ್ಪಲೇ ಬೇಕು ಎಂದು ತಿಳಿಸಿದಂತಾಯಿತು ಎಂದು ಭಾವ.

ಅಪ್ರಾಮಾಣ್ಯ. ಎರಡನೆಯ ಪಕ್ಷದಲ್ಲಿ, ತಮ್ಮ ತಮ್ಮ ವಿಷಯಗಳಲ್ಲಿ ಆ ಪ್ರಮಾಣಗಳು ಒಂದೊಂದೇ ಆಗುವುದರಿಂದ ಬಹುತ್ವವು ಇಲ್ಲ. ಆದುದರಿಂದ ಬಹು ಪ್ರಮಾಣ ಬಾಧಿತತ್ವವು ಹೇಗೆ? (ಪ್ರಮಾಣಗಳು) ಬಹುವಾದಲ್ಲಿ (ಅವುಗಳಿಗೆ) ಪ್ರಾಮಾಣ್ಯವಿಲ್ಲದಿರುವುದರಿಂದ. ಪ್ರಮಾಣವಾದಲ್ಲಿ ಬಹುತ್ವ ಇಲ್ಲದಿರುವುದರಿಂದ ಎಂದರೆ ಉತ್ತರಿಸುತ್ತಾರೆ '**ಬಹುಪ್ರಮಾಣ...**' ಎಂದು. ಇಲ್ಲಿ ಸಂವಾದವನ್ನು (ಸಂವಾದರೂಪ ಪ್ರಮಾಣವನ್ನು) ಪರಿಗ್ರಹಿಸಿರುವುದರಿಂದ ಏಕವಿಷಯತಾ ಪಕ್ಷವನ್ನು ಅಂಗೀಕರಿಸಿರುವರು (ಎಂದು ತಿಳಿಯುವುದು). '**ದಾರ್ಢ್ಯಹೇತುರೇವ**' ಎಂದು ಹೇಳಿದ್ದರಿಂದ (ದ್ವಿತೀಯಾದಿ ಪ್ರಮಾಣಗಳು ನಿಃಶಂಕಾಪ್ರವೃತ್ತಿಗೆ ಕಾರಣವಾಗುವುದರಿಂದ) ಪ್ರಯೋಜನವಿದೆ ಎಂದು ತಿಳಿಸಿದ್ದರಿಂದ ಅನುವಾದಕತ್ವವನ್ನು ನಿರಾಕರಿಸಿರುವರು.

#### ಸಮಾನವಿಷಯಕ ಪ್ರಮಾಣಾಂತರವು ನಿಃಶಂಕಾಪ್ರವೃತ್ತಿಗೆ ಕಾರಣ

**ಯದ್ಯಪಿ ಭೇದವಿಷಯಾಣಿ ಪ್ರಮಾಣಾನಿ ಸರ್ವಾಣ್ಯಪ್ಯೇಕಾಕಾರ-ನಿಯತಾನಿ ತಥಾಽಪಿ ಪ್ರಥಮಪ್ರಮಾಣೇನ ಭೇದೇ ಪರಿಚ್ಛಿನ್ನೇ ವಿಪ್ರತಿಪತ್ತ್ಯಾದಿನಾ ಕಾರಣಾನ್ತರೇಣ ಪುನಃ ಶಙ್ಕಾಯಾಂ ತತ್ರೈವ ಪ್ರವೃತ್ತೇನ ಪ್ರಮಾಣಾನ್ತರೇಣ ನಿಃಶಙ್ಕಾ ಪ್ರತೀತಿರ್ಭವತೀತಿ । ನನು, ದ್ವಿತೀಯಾದಿ-ಪ್ರಮಾಣಾನ್ಯಪಿ ಪ್ರಥಮಪ್ರಮಾಣತುಲ್ಯಾನಿ, ತತ್ ಕಥಂ ಪ್ರಥಮ-ಪ್ರವೃತ್ತಾವಪಿ ಶಙ್ಕಾ ದ್ವಿತೀಯಾದಿಪ್ರವೃತ್ತೌ ತು ನಿಃಶಙ್ಕತಾ? ಇತಿ ಚೇನ್ನ, ಸಹಕಾರಿಕೃತಸಾಮರ್ಥ್ಯಾತಿಶಯಸ್ಯಾನುಭವಸಿದ್ಧತ್ವಾದಿತ್ಯಾಹ-'ಬಹೂನಾಮ್' ಇತಿ ॥ 'ಪರ್ವತೋಽಗ್ನಿಮಾನ್' ಇತ್ಯೇಕಸ್ಯ ವಚನೇ ಶ್ರುತೇ ತಸ್ಮಿನ್ನಜ್ಞಾನಾದಿಶಙ್ಕಯಾಽರ್ಥವಿಶ್ವಾಸಾಭಾವೇ ದ್ವಿತೀಯಸ್ಯಾಪಿ ವಚನಂ ಶೃಣೋತಿ, ತತ್ರಾಪಿ ಕಾರಣಾನ್ತರೋಪನಿಪಾತೇನ ಶಙ್ಕಾನುವೃತ್ತೌ ತೃತೀಯಸ್ಯಾಪಿ, ಏವಂ ಬಹೂನಾಂ ವಚನೇ ಶ್ರುತೇ ಪರ್ವತಂ ಪ್ರತ್ಯಾಸೀದತಃ ತಸ್ಯೈವಾಗ್ನೇಃ ಪ್ರತ್ಯಕ್ಷೇಣ ದರ್ಶನೇ ಸತಿ ವಿಶ್ವಾಸ ಏವ ದೃಶ್ಯತೇ, ನ ತು ದ್ವಿತೀಯಾದಿಷ್ವಪ್ರಾಮಾಣ್ಯಬುದ್ಧಿರಿತಿ । ಅನೇನಾಪ-ರೋಕ್ಷತ್ವರೂಪಂ ವಿಶೇಷಮಭಿದಧತಾಽಪೌರುಷೇಯತ್ವಾದಿರೂಪೋಽಪಿ**

**ವಿಶೇಷಃ ಸೂಚಿತಃ । ಅತ ಏವ ವಚನಮಾದಾವುಕ್ತ್ವಾ ದರ್ಶನಂ ಪಶ್ಚಾದುಕ್ತಮ್ ।**

ವಸ್ತುತಃ ಭೇದವಿಷಯಕ ಪ್ರಮಾಣಗಳೆಲ್ಲವೂ ಸಹ ಒಂದೇ ತರಹವಿರುವವು, ಹಾಗಾದರೂ ಸಹ ಪ್ರಥಮಪ್ರಮಾಣದಿಂದ ಅರಿವಿಗೆ ಬಂದ ಭೇದವು, ವಿವಾದವೇ ಮುಂತಾದ ಕಾರಣಾಂತರಗಳಿಂದ ಪುನಃ ಶಂಕೆ ಬರಲು ಆ ವಿಷಯದಲ್ಲೇ ಪ್ರವೃತ್ತವಾದ ಪ್ರಮಾಣಾಂತರದಿಂದ ನಿಃಶಂಕಾಪ್ರವೃತ್ತಿಯು ಪ್ರಾಪ್ತವಾಗುವುದು ಎಂದು (ಅಭಿಮತಿಸಿರುವಿರಿ). ಆದರೆ ಎರಡನೆಯ (ಮೂರನೆಯ) ಮುಂತಾದ ಪ್ರಮಾಣಗಳೂ ಸಹ ಪ್ರಥಮಪ್ರಮಾಣಕ್ಕೆ ಸಮವಾದವು (ಸಮಾನಬಲಶಾಲಿಗಳು). ಆದುದರಿಂದ ಪ್ರಥಮ ಪ್ರವೃತ್ತಿಯಲ್ಲಿನ ಶಂಕೆಯು, ದ್ವಿತೀಯಾದಿ ಪ್ರವೃತ್ತಿಯಲ್ಲಿ ನಿಃಶಂಕತೆಯನ್ನು ಹೇಗೆ ಹೊಂದಿಸುವುದು ಎಂದೆನ್ನಲಾಗದು. ಸಹಕಾರಿಸಹಿತವಾದುದಕ್ಕೆ ಹೆಚ್ಚಿನ ಸಾಮರ್ಥ್ಯವು ಅನುಭವಸಿದ್ಧವಾಗಿದೆ ಎಂದು ಉತ್ತರಿಸುವರು **'ಬಹೂನಾಮ್..'** ಎಂದು. 'ಪರ್ವತದಲ್ಲಿ ವಹ್ನಿಯು ಇದೆ' ಎಂದು ಓರ್ವನ ಮಾತನ್ನು ಕೇಳಿದಾಗ, ಆತನಲ್ಲಿ (ವಹ್ನಿಯು ಇದೆ ಎಂದು ಹೇಳಿದ ವ್ಯಕ್ತಿಯಲ್ಲಿ) ಸಂದೇಹದಿಂದ ಅರ್ಥವಿಶ್ವಾಸವು ಇಲ್ಲದಿರಲು, ಎರಡನೆಯವನ ವಚನವನ್ನು ಕೇಳುವನು, ಆತನ ವಚನದಲ್ಲೂ ಕಾರಣಾಂತರದಿಂದ ಶಂಕೆಯು ಮುಂದುವರೆದಲ್ಲಿ , ಮೂರನೆಯವನ ವಚನದಲ್ಲೂ ಸಹ (ಶಂಕೆಯು ಮುಂದುವರೆಯಲು) ಹೀಗೆ ಅನೇಕರ ಮಾತನ್ನು ಕೇಳಲಾಗಿ ಪರ್ವತಕ್ಕೆ ಸಾರಿದಾಗ ಸ್ವತಃ ಪ್ರತ್ಯಕ್ಷದಿಂದ ಕಂಡಾಗ (ಈ ಹಿಂದೆ ತಿಳಿಸಿದವರ ವಚನದಲ್ಲಿ) ವಿಶ್ವಾಸವು (ಪ್ರಾಪ್ತವಾಗುವುದು) ಕಂಡಿದೆ ಹೊರತು, ಆ ಎರಡನೆಯ ಮುಂತಾದವುಗಳಲ್ಲಿ ಅಪ್ರಾಮಾಣ್ಯ ಬುದ್ಧಿಯು ಇರದು ಎಂದು. ಇದರಿಂದ (ಈ ರೀತಿಯಾಗಿ ವಾದವನ್ನು ಮಂಡಿಸಿದ್ದರಿಂದ) ಅಪರೋಕ್ಷತ್ವ ರೂಪ ವೈಶಿಷ್ಟ್ಯವನ್ನು ಹೇಳಿದ್ದರಿಂದ, (ಪ್ರಕೃತದಲ್ಲಿ) ಅಪೌರುಷೇಯತ್ವರೂಪ ವೈಶಿಷ್ಟ್ಯವನ್ನು ಸೂಚಿಸಿದಂತಾಯಿತು. ಆದುದರಿಂದಲೇ (ಪ್ರತ್ಯಕ್ಷಕ್ಕೆ ಶಂಕಾನಿವೃತ್ತತ್ವರೂಪ ಅತಿಶಯತ್ವವನ್ನು ಸೂಚಿಸಿದ್ದರಿಂದ) ವಚನವನ್ನು

(ಆಗಮವನ್ನು) ಮೊದಲು ಹೇಳಿ, ನಂತರದಲ್ಲಿ ದರ್ಶನವನ್ನು (ಪ್ರತ್ಯಕ್ಷವನ್ನು) ಹೇಳಿರುವರು[1].

---

1. ದ್ವಿತೀಯಾದಿ ಪ್ರಮಾಣವು ಒಂದೇ ವಿಷಯದಲ್ಲಿ ಪ್ರಾಪ್ತವಾದಾಗ ಪ್ರಥಮಪ್ರಮಾಣದಿಂದ ಪ್ರಾಪ್ತವಾಗದ ನಿಃಶಂಕಾ ಪ್ರವೃತ್ತಿಯು ದ್ವಿತೀಯಾದಿ ಪ್ರಮಾಣಗಳಿಂದ ಹೇಗೆ ಪ್ರಾಪ್ತವಾಗುವುದು? ಎನ್ನುವ ಸಂದೇಹವನ್ನು ಪರಿಹರಿಸಲು ಆಚಾರ್ಯರು 'ಬಹೂನಾಂ ವಚನೇ ತಸ್ಯೈವ ದರ್ಶನೇ ಚ...' ಎಂದಿರುವರು. ಅನೇಕರ ಮಾತಿನಿಂದ ಶಂಕೆಯು ಪರಿಹಾರವಾಗದಿದ್ದರೂ ಪ್ರತ್ಯಕ್ಷದಿಂದ ಕಂಡಾಗ ಶಂಕೆಯು ನಿವೃತ್ತವಾಗುವುದು. ಮಾತಿನಿಂದ ಬಂದ ಅರಿವಿಗಿಂತಲೂ (ಪರೋಕ್ಷಜ್ಞಾನಕ್ಕಿಂತಲೂ) ಕಣ್ಣಿನಿಂದ ಬಂದ ಅರಿವು (ಅಪರೋಕ್ಷಜ್ಞಾನವು) ವಿಶಿಷ್ಟವಾದದು ಎಂದು ತಿಳಿಸಿದಂತಾಯಿತು, ಹಾಗೆಯೇ ಪ್ರಕೃತದಲ್ಲಿಯೂ ಪ್ರತ್ಯಕ್ಷಾನುಮಾನಗಳಿಂದ ಜೀವೇಶ್ವರ ಭೇದದ ಅರಿವು ಪ್ರಾಪ್ತವಾಗಿದ್ದರೂ, ಈ ಅರಿವಿನಲ್ಲಿ ಪೂರ್ಣ ವಿಶ್ವಾಸವು ಇಲ್ಲದಿರಲು ಅಪೌರುಷೇಯತ್ವರೂಪ ವೈಶಿಷ್ಟ್ಯವನ್ನು ಹೊಂದಿರುವ 'ದ್ವಾಸುಪರ್ಣಾ...' ಮುಂತಾದ ವೇದವಚನಗಳಿಂದ ಅದೇ ಅರಿವು ಪ್ರಾಪ್ತವಾಗಲು ಆ ಹಿಂದಿನ ಅರಿವು ದೃಢವಾಗುವುದು ಎಂದು ಭಾವ.

ಮತ್ತೊಂದು ಅಂಶವನ್ನೂ ಇಲ್ಲಿ ಗಮನಿಸುವುದು- ಜೀವೇಶ್ವರರ ಭೇದವು ಪ್ರತ್ಯಕ್ಷಾನುಮಾನಗಳಿಂದ ಜ್ಞಾತವಾಗಿದೆ, 'ದ್ವಾಸುಪರ್ಣಾ....' ಎಂಬ ಶ್ರುತಿಯೂ ಅದನ್ನೇ ತಿಳಿಸುತ್ತದೆ. ಮೂರು ಪ್ರಮಾಣಗಳು ಒಂದೇ ವಿಷಯವನ್ನು ಪ್ರತಿಪಾದಿಸುವುದರಿಂದ ಎರಡನೆಯ ಪ್ರಮಾಣವು ಅನುವಾದಕವಾಗಿ ವ್ಯರ್ಥವಾದುದರಿಂದ ಅಪ್ರಮಾಣ ಎನ್ನುವುದು ಅದ್ವೈತಿಗಳ ವಾದ. ಈ ವಾದವನ್ನು ಉತ್ತರಿಸುವ ಆಚಾರ್ಯರು ದೃಷ್ಟಾಂತರೂಪವಾಗಿ, 'ಅನೇಕ ವನಚರರು ಪರ್ವತದಲ್ಲಿ ಅಗ್ನಿಯು ಇದೆ ಎಂದು ತಿಳಿಸಿದರೂ- ಆಗಮದಿಂದ ಅಗ್ನಿಯ ಅರಿವಾದರೂ, ಸಂದೇಹವು ಪೂರ್ಣವಾಗಿ ಪರಿಹೃತವಾಗದಿರಲು ಪ್ರತ್ಯಕ್ಷದಿಂದ ಕಂಡಾಗ ಸಂದೇಹವು ಹೋಗಲಾಗಿ ಹಿಂದಿನ ವಚನಗಳಲ್ಲಿ ಪ್ರಾಮಾಣ್ಯಜ್ಞಾನವೂ ಪ್ರಾಪ್ತವಾಯಿತು' ಎಂದು ತಿಳಿಸಿರುವರು. ಆದರೆ ಪ್ರತಿವಾದಿಗಳು ಮೊದಲು ಪ್ರತ್ಯಕ್ಷಾನುಮಾನವನ್ನು ನಂತರದಲ್ಲಿ ಆಗಮವನ್ನು ಹೇಳಿರುವರು, ಆಚಾರ್ಯರಾದರೋ ಮೊದಲು ಆಗಮವನ್ನು ನಂತರದಲ್ಲಿ ಪ್ರತ್ಯಕ್ಷವನ್ನು ತಿಳಿಸಿರುವರು. ಇದು ಹೇಗೆ ಸಂಗತ ಎನ್ನುವ ಸಂದೇಹವನ್ನು ಟೀಕೆಯಲ್ಲಿ ಪರಿಹರಿಸಿರುವರು. ' ಪ್ರತ್ಯಕ್ಷವು ಅಪರೋಕ್ಷಜ್ಞಾನವನ್ನು ಉಂಟುಮಾಡುವುದರಿಂದ ಸರ್ವಶಂಕಾನಿವರ್ತಕತ್ವರೂಪ ವೈಶಿಷ್ಟ್ಯವನ್ನು ಹೇಗೆ ಹೊಂದಿದೆಯೋ ಹಾಗೆ, ಶ್ರುತಿಯೂ ಸಹ ಅಪೌರುಷೇಯವಾದುದರಿಂದ ಸರ್ವಶಂಕಾ ನಿವರ್ತಕತ್ವರೂಪ ಪ್ರಾಬಲ್ಯವನ್ನು ಹೊಂದಿದೆ, ಎಂದು ಕೇವಲ ಪ್ರಾಬಲ್ಯ-ದೌರ್ಬಲ್ಯಗಳ ವಿಷಯದಲ್ಲಿ ಪ್ರಕೃತ ದೃಷ್ಟಾಂತ-ದಾರ್ಷ್ಟಾಂತಿಕಭಾವ ಎಂದು ತಿಳಿಯುವುದು.

**ಅವಿವಾದಿತಸ್ಥಳದಲ್ಲಿ ಅನುವಾದಕಗಳು ಅಪ್ರಮಾಣ**

**ಸರ್ವಾವಿವಾದಸ್ಥಲ ಏವ ಕಥಞ್ಚಿದನುವಾದಕತ್ವಮ್ । ನಚಾತ್ರ ಸರ್ವಾವಿವಾದಃ, ಏಕತ್ವವಾದಿನಾಮೇವ ವಿವಾದದರ್ಶನಾತ್ । ಬಹು-ಪ್ರಮಾಣವಿರೋಧೇ ಚೈಕಸ್ಯಾಪ್ರಾಮಾಣ್ಯಂ ದೃಷ್ಟಂ ಶುಕ್ತಿರಜತಾದೌ ।**

ಸರ್ವಸಮ್ಮತವಾದ ವಿಷಯದಲ್ಲಿ ಅನುವಾದವು ಅಪ್ರಮಾಣವಾದೀತು. ಇಲ್ಲಿ (ಭೇದದ ವಿಷಯದಲ್ಲಿ) ಸರ್ವಸಂಮತಿಯು ಇಲ್ಲ, ಐಕ್ಯವಾದಿಗಳ ವಿವಾದವೇ ಪ್ರಸಕ್ತವಾಗಿರುವುದರಿಂದ. ಬಹುಪ್ರಮಾಣದ ವಿರೋಧವು ಇದ್ದಾಗ ಒಂಟಿಯಾದ ಪ್ರಮಾಣಕ್ಕೆ ಅಪ್ರಾಮಾಣ್ಯವು ಶುಕ್ತಿರಜತಾದಿ ಸ್ಥಳದಲ್ಲಿ ಕಂಡಿದೆ.

ಯದ್ಯೇವಂ ದ್ವಿತೀಯಾದಿಪ್ರಮಾಣಸ್ಯ ದಾರ್ಢ್ಯಹೇತುತ್ವಾತ್ ಪ್ರಯೋಜನವತ್ತ್ವೇನ ನಾನುವಾದಕತ್ವಂ ತರ್ಹಿ ಕುತ್ರಾಪಿ ತನ್ನ ಸ್ಯಾತ್ । ಸರ್ವತ್ರ ದಾರ್ಢ್ಯಸ್ಯ ವಕ್ತುಂ ಶಕ್ಯತ್ವಾತ್ । ತಥಾಚ ಸಿದ್ಧಸಾಧನಾದೇಃ ಅದೂಷಣತ್ವಂ ಸ್ಯಾತ್ । ತಸ್ಯಾನುವಾದಕತ್ವೇ ಪ್ರಕೃತೇಽಪಿ ಕಿಂ ನ ಭವೇದ್? ಇತ್ಯತ ಆಹ- **'ಸರ್ವಾ...'** ಇತಿ । ಅವಿವಾದಪದೇನ ಶಙ್ಕಾಕಾರಣಾಭಾವಂ ಲಕ್ಷಯತಿ । **'ಕಥಞ್ಚಿದ್'** ಇತ್ಯನೇನೇದಮಾಚಷ್ಟೇ- ನಿಃಶಙ್ಕಂ ಪ್ರಮಿತೇಽರ್ಥೇ ಪುನಃ ಪ್ರಯುಜ್ಯಮಾನಸ್ಯ ಪರಾರ್ಥಾನುಮಾನಸ್ಯ ವಾಕ್ಯಸ್ಯ ವಾ ವೈಯರ್ಥ್ಯದೋಷೋ ನ ಸ್ವಾರ್ಥಾನುಮಾನಸ್ಯ ಪ್ರತ್ಯಕ್ಷಸ್ಯ ವಾ ತಯೋಃ ಪುರುಷಾನಧೀನತ್ವಾದಿತಿ । ಅತ ಏವ ಪೂರ್ವಂ **'ಬಹೂನಾಮ್'** ಇತಿ **'ದರ್ಶನೇ'** ಇತಿ ಚೋಕ್ತಮ್ ।

ಒಂದು ವೇಳೆ ಎರಡನೆಯ ಮುಂತಾದ ಪ್ರಮಾಣಗಳು ದಾರ್ಢ್ಯಕ್ಕೆ ಕಾರಣವಾಗಿ ಸಾರ್ಥಕವಾಗುವುದರಿಂದ ಅನುವಾದಕತ್ವವು ಇಲ್ಲ ಎಂದಲ್ಲಿ, ಎಲ್ಲೂ ಸಹ ಅದು (ಅನುವಾದಕತ್ವವು) ಇಲ್ಲದಾದೀತು. ಎಲ್ಲೆಡೆಯೂ ದಾರ್ಢ್ಯಕ್ಕೆ ಕಾರಣ ಎಂದು ಹೇಳಲು ಅವಕಾಶವಿರುವುದರಿಂದ. ಹಾಗಾದಲ್ಲಿ ಸಿದ್ಧಸಾಧನವೇ ಮುಂತಾದವುಗಳಿಗೆ ದೂಷಣತ್ವವೇ ಇಲ್ಲದಾದೀತು. ಅದಕ್ಕೆ (ದ್ವಿತೀಯಾದಿ ಪ್ರಮಾಣಗಳಿಗೆ) ಅನುವಾದಕತ್ವವನ್ನು ಒಪ್ಪಿದಲ್ಲಿ ಪ್ರಕೃತದಲ್ಲೂ ಏಕಾಗಬಾರದು? ಎಂದಲ್ಲಿ ಉತ್ತರಿಸುವರು **'ಸರ್ವ...'** ಎಂದು. ಅವಿವಾದ ಪದದಿಂದ ಶಂಕೆಗೆ ಕಾರಣವಿಲ್ಲದ್ದನ್ನು ಎಂದು ಊಹಿಬೇಕು. **'ಕಥಞ್ಚಿತ್'**

ಎನ್ನುವುದರಿಂದ ಇದನ್ನು ತಿಳಿಸುತ್ತಾರೆ- ಸಂದೇಹವಿಲ್ಲದಂತೆ ವಿಷಯವೊಂದು ಪ್ರಮಿತವಾಗಿರುವ ಸಂದರ್ಭದಲ್ಲಿ (ಅದೇ ವಿಷಯವನ್ನು) ಪುನಃ ಪ್ರತಿಪಾದಿಸಲು ಹೇಳುವ ಪರಾರ್ಥಾನುಮಾನಕ್ಕೆ, ಅಥವಾ ವಾಕ್ಯಕ್ಕೆ ವೈಯರ್ಥ್ಯರೂಪ ದೋಷವು (ಪ್ರಾಪ್ತವಾಗಬಹುದೇ ಹೊರತು), ಸ್ವಾರ್ಥಾನುಮಾನಕ್ಕೆ, ಅಥವಾ ಪ್ರತ್ಯಕ್ಷಕ್ಕೆ (ವ್ಯರ್ಥತೆಯು) ಇಲ್ಲ, ಅವೆರಡೂ ಸಹ ಪುರುಷರ ಅಧೀನವಲ್ಲದ್ದರಿಂದ[1]. ಆದ್ದರಿಂದಲೇ (ಸಂದೇಹ ವಿರುವ ಸಂದರ್ಭಗಳಲ್ಲಿ ಪರಾರ್ಥಾನುಮಾನ ಮತ್ತು ಆಗಮಗಳು ಸಂದೇಹರಹಿತವಾದ ಅರಿವಿಗೆ ಕಾರಣವಾಗಿ ವ್ಯರ್ಥತೆಯನ್ನು ಹೊಂದಿಲ್ಲವಾದುದರಿಂದ) ಈ ಮೊದಲು 'ಬಹೂನಾಂ' ಎಂದು, 'ದರ್ಶನೇ' ಎಂದು ಹೇಳಲಾಗಿದೆ.

**ತತಃ ಕಿಂ ಪ್ರಕೃತೇ? ಇತ್ಯತ ಆಹ - 'ನಚಾತ್ರ' ಇತಿ । ಅತ್ರ-ಜೀವೇಶ್ವರಭೇದೇ । 'ಯೇನ ದ್ವಿತೀಯಾದಿಪ್ರಮಾಣಾನಾಂ ವೈಯರ್ಥ್ಯಂ ಸ್ಯಾದ್' ಇತಿ ಶೇಷಃ । ಕುತೋ ನ? ಇತ್ಯತ ಆಹ- 'ಏಕತ್ವ..' ಇತಿ । ಏವಶಬ್ದೇನ ವಿವಾದಸ್ಯ ಸುಪ್ರಸಿದ್ಧತಾಂ ದ್ಯೋತಯತಿ, ಏಕತ್ವಾದಿ-ವಾದಾನಾಮನಾದಿತ್ವಾತ್ । ತದನೇನ ಬಹುತ್ವಪ್ರಮಾಣತ್ವಯೋಃ ಸಮಾವೇಶಃ ಸಮರ್ಥಿತಃ । ತಥಾಪಿ ಬಹುಪ್ರಮಾಣ-ವಿರೋಧೇನೈಕ್ಯಾಗಮಸ್ಯಾಪ್ರಮಾಣ್ಯಂ ಕುತಃ ? ಪ್ರಾಬಲ್ಯಾನಿಶ್ಚಯೇನ ವೈಪರೀತ್ಯಸ್ಯಾಪಿ ಸಮ್ಭವಾದ್? ಇತ್ಯತ ಆಹ- 'ಬಹುಪ್ರಮಾಣ...' ಇತಿ । ಶುಕ್ತಿಕಾಂ ರಜತತ್ವೇನ ದೂರಾತ್ ಪ್ರತೀತ್ಯ 'ನೇದಂ ರಜತಂ ಕಿಂತು ಶುಕ್ತಿಕೈವ'**

1. ಸಂದೇಹವಿಲ್ಲದೇ ವಿಷಯವೊಂದು ನಿರ್ಣಯವಾದ ಸಂದರ್ಭದಲ್ಲಿ ಪುನಃ ಅದೇ ವಿಷಯವನ್ನು ಪ್ರತಿಪಾದಿಸಲು ಅನುಮಾನವನ್ನೋ ವಚನವನ್ನೋ ಪ್ರಯೋಗಿಸಿದಲ್ಲಿ ಅವುಗಳು ವ್ಯರ್ಥವಾಗುವುದರಿಂದ, ಅನುವಾದಕತ್ವೇನ ಅವುಗಳಿಗೆ ಸಿದ್ಧಸಾಧನತ್ವರೂಪ ದೋಷವಿರುವುದರಿಂದ ಅಪ್ರಾಮಾಣ್ಯವನ್ನು ಒಪ್ಪಲಾಗಿದೆ. ಸ್ವಾರ್ಥಾನುಮಾನಕ್ಕಾಗಲಿ ಪ್ರತ್ಯಕ್ಷಕ್ಕಾಗಲಿ ಈ ರೀತಿಯಾಗಿ ವೈಯರ್ಥ್ಯವನ್ನು ಹೇಳಲಾಗದು. ವಿಷಯದೊಡನೆ ಇಂದ್ರಿಯಕ್ಕೆ ಸನ್ನಿಕರ್ಷವಾದಲ್ಲಿ ಜ್ಞಾನವು ಪ್ರಾಪ್ತವಾಗುವುದು, ಹೇತುವಿನ ದರ್ಶನ ವ್ಯಾಪ್ತಿಯ ಸ್ಮರಣೆಯು ಬಂದೊಡನೆ ಅನುಮಿತಿಯು ಉತ್ಪನ್ನವಾಗುವುದು, ಇವು ನಮ್ಮ ಅಧೀನದಲ್ಲಿರುವ ಸಂಗತಿಗಳಲ್ಲವಾದುದರಿಂದ, ಅದನ್ನು ತಡೆಯಲು ಶಕ್ಯವಿಲ್ಲ. ತನ್ನಿಮಿತ್ತ ಬುದ್ಧಿಪೂರ್ವಕವಾಗಿ ಪ್ರವೃತ್ತವಾಗುವ ಪರಾರ್ಥಾನುಮಾನ ಮತ್ತು ವಾಕ್ಯಗಳಲ್ಲಿ ಮಾತ್ರ ಈ ವೈಯರ್ಥ್ಯವನ್ನು ದೋಷ ಎಂದು ಪರಿಗಣಿಸಲಾಗುವುದು ಎಂದು ಭಾವ.

**ಇತ್ಯಾಪ್ತವಾಕ್ಯಂ ಶೃಣೋತಿ । ತತಃ ಸಮೀಪಂ ಗತಃ ಪ್ರತ್ಯಕ್ಷೇಣಾಪಿ 'ಶುಕ್ತಿರೇವ' ಇತಿ ಪಶ್ಯತಿ । ಪಾಟನದಹನಾದಿಲಿಙ್ಗೇನ ತಥೈವಾನು-ಮಿನೋತಿ । ತತೋ ಬಹುಪ್ರಮಾಣವಿರೋಧೇನೈಕಸ್ಯ ರಜತಜ್ಞಾನಸ್ಯಾ-ಪ್ರಮಾಣ್ಯಮೇವ ನಿಶ್ಚಿನೋತೀತಿ ಪ್ರಸಿದ್ಧಮೇವ । ತೇನೈಕಸ್ಯಾನೇಕಸ್ಮಾದ್ ದುರ್ಬಲತ್ವಮಿತಿ ।**

ಆದುದರಿಂದ ಪ್ರಕೃತದಲ್ಲಿ ಏನನ್ನು ಹೇಳಿದಂತಾಯಿತು? ಆದುದರಿಂದ ಉತ್ತರಿಸುತ್ತಾರೆ '**ನ ಚಾತ್ರ...**' ಎಂದು. **ಅತ್ರ** – ಜೀವೇಶ್ವರಭೇದದ ವಿಷಯದಲ್ಲಿ. 'ಯೇನ ದ್ವಿತೀಯಾದಿಪ್ರಮಾಣಾನಾಂ ವೈಯರ್ಥ್ಯಂ ಸ್ಯಾತ್' ಎಂದು ಶೇಷಪೂರಣಮಾಡಿಕೊಳ್ಳಬೇಕು[1]. ಏಕೆ ಇಲ್ಲ? ಆದುದರಿಂದ ಉತ್ತರಿಸುತ್ತಾರೆ '**ಏಕತ್ವ....**' ಎಂದು. 'ಏವ' ಶಬ್ದದಿಂದ ವಿವಾದವು ಸುಪ್ರಸಿದ್ಧ ಎನ್ನುವದನ್ನು ಸೂಚಿಸುವುದು, ಏಕತ್ವಾದಿವಾದಗಳು ಅನಾದಿಯಾದುದರಿಂದ[2]. ಈ ವಾದದಿಂದ ಬಹುತ್ವಕ್ಕೂ ಪ್ರಾಮಾಣ್ಯಕ್ಕೂ (ಏಕತ್ರ) ಸಮಾವೇಶವನ್ನು ಸಮರ್ಥಿಸಿದಂತಾಯಿತು[3]. ಆದರೂ ಬಹುಪ್ರಮಾಣಗಳ ವಿರೋಧವಿದ್ದರೂ ಐಕ್ಯಾಗಮಕ್ಕೆ ಅಪ್ರಾಮಾಣ್ಯವು ಏಕೆ? (ಬಹುಪ್ರಮಾಣಗಳಿಗೆ) ಪ್ರಾಬಲ್ಯದ ನಿಶ್ಚಯವಾಗದಿರುವುದರಿಂದ ವಿರುದ್ಧವಾಗಿಯೂ (ಬಹುಪ್ರಮಾಣಗಳೇ ಅಪ್ರಮಾಣಗಳೆಂದು) ನಿರ್ಣಯಿಸುವ ಸಂಭಾವನೆಗಳು ಇರುವುದರಿಂದ, ಆದುದರಿಂದ ಉತ್ತರಿಸುವರು '**ಬಹುಪ್ರಮಾಣ...**' ಎಂದು. ಶುಕ್ತಿಯನ್ನು

1. 'ಜೀವೇಶ್ವರರ ಭೇದದ ವಿಷಯದಲ್ಲಿ ಎಲ್ಲವಾದಿಗಳಲ್ಲೂ ಐಕ್ಯಮತ್ಯವು ಇಲ್ಲ, ಐಕ್ಯಮತ್ಯವು ಇದ್ದಲ್ಲಿ ದ್ವಿತೀಯಾದಿ ಪ್ರಮಾಣಗಳು ವ್ಯರ್ಥವಾಗುತ್ತಿತ್ತು' ಎಂದು ಒಟ್ಟು ಭಾವ.
2. ಐಕ್ಯವಾದಗಳು ಇಂದಿನವು ಭೇದಾಗಮವಾದರೋ ಅನಾದಿಯಾದದ್ದು, ಹೊಸವಾದವನ್ನು ಹಳೆಯ ವೇದವು ಹೇಗೆತಾನೆ ಕಟಾಕ್ಷೀಕರಿಸುವುದು? ಎನ್ನುವ ಸಂದೇಹಕ್ಕೆ ಉತ್ತರಿಸಿರುವರು. 'ಅನಾದಿವಾಸನಾಯೋಗಾದ್ ಅಸುರಾಣಾಂ ಬಹುತ್ವತಃ । ದುರಾಗ್ರಹಗೃಹೀತತ್ವಾದ್ ವರ್ತನ್ತೇ ಸಮಯಾಃ ಸದಾ॥' (2.2.7.) ಎಂದು ಅನುವ್ಯಾಖ್ಯಾನದಲ್ಲಿ ಉಪದೇಶಿಸಲಾಗಿದೆ ಎಂದು ಭಾವ.
3. ಪ್ರತಿವಾದಿಗಳು ಬಹುತ್ವವಿದ್ದಲ್ಲಿ ಪ್ರಾಮಾಣ್ಯವು ಇಲ್ಲ, ಪ್ರಾಮಾಣ್ಯವಿದ್ದಲ್ಲಿ ಬಹುತ್ವವು ದುರ್ಲಭ ಎಂದು ಸಂದೇಹಿಸಿದ್ದರು, ಆದರೆ ಈಗ ಬಹುತ್ವಕ್ಕೂ ಪ್ರಾಮಾಣ್ಯಕ್ಕೂ ವಿರೋಧವಿಲ್ಲ ಎಂದು ಸಮರ್ಥಿಸಲಾಯಿತು ಎಂದು ಭಾವ.

ದೂರದಿಂದ ರಜತ ಎಂದು ಕಂಡವ, 'ಇದು ಬೆಳ್ಳಿಯಲ್ಲ ಶುಕ್ತಿ' ಎಂದು ಆಪ್ತನ ವಚನವನ್ನು ಕೇಳುವನು. ನಂತರದಲ್ಲಿ ಸಮೀಪಕ್ಕೆ ಹೋದವ 'ಇದು ಶುಕ್ತಿಯೇ' ಎಂದು ಸಾಕ್ಷಾತ್ಕರಿಸಿಕೊಳ್ಳುವನು. ಕುಟ್ಟುವದರಿಂದ, ದಹಿಸುವದರಿಂದ ಅದೇ (ಶುಕ್ತಿಯೇ ಇದು) ಎಂದು ಊಹಿಸುವನು. ಆದುದರಿಂದ ಬಹುಪ್ರಮಾಣಗಳ ವಿರೋಧದಿಂದ ಒಂಟಿಯಾದ ರಜತಜ್ಞಾನಕ್ಕೆ ಅಪ್ರಾಮಾಣ್ಯವನ್ನೇ ನಿಶ್ಚಯಿಸುವುದು ಪ್ರಸಿದ್ಧವಾಗಿದೆ. ಆದುದರಿಂದ ಒಂದಕ್ಕೆ (ಪ್ರಮಾಣಕ್ಕೆ) ಅನೇಕದಿಂದ (ಪ್ರಮಾಣಗಳಿಂದ ವಿರೋಧವು ಇರುವದರಿಂದ) ದುರ್ಬಲ ಎಂದು (ನಿಶ್ಚಯಿಸಲಾಗುವುದು).

**ಬಹುಪ್ರಮಾಣವಿರುದ್ಧವಾದ ಐಕ್ಯಜ್ಞಾನವೂ ಅಪ್ರಮಾಣ**

**ನಚ ದೋಷಜನ್ಯತ್ವಾದೇವ ದುರ್ಬಲತ್ವಂ, ಇತಿ ವಿರೋಧಃ । ಬಹುಪ್ರಮಾಣವಿರುದ್ಧಾನಾಂ ದೋಷಜನ್ಯತ್ವನಿಯಮಾತ್ । ದೋಷಜನ್ಯತ್ವಂ ಚ ಬಲವತ್ಪ್ರಮಾಣವಿರೋಧಾದೇವ ಜ್ಞಾಯತೇ ।**

(ಇದಂ ರಜತಂ ಎಂಬ ಅರಿವು) ದೋಷಜನ್ಯವಾದುದರಿಂದಲೇ ದುರ್ಬಲ, ಆದುದರಿಂದ (ಪ್ರಕೃತವಾದಕ್ಕೆ) ವಿರೋಧವಿಲ್ಲ. 'ಬಹುಪ್ರಮಾಣ-ವಿರುದ್ಧವಾದವುಗಳಲ್ಲೇ ದೋಷಜನ್ಯತ್ವದ ನಿಯಮವು ಇರುವುದರಿಂದ. ದೋಷಜನ್ಯತ್ವವಾದರೋ ಪ್ರಬಲಪ್ರಮಾಣವಿರೋಧದಿಂದಲೇ ನಿಶ್ಚಯವಾಗುವುದು.

ಏತದುಕ್ತಂ ಭವತಿ - 'ಐಕ್ಯವಾಕ್ಯಮಪ್ರಮಾಣಂ, ಬಹುಪ್ರಮಾಣ-ವಿರುದ್ಧತ್ವಾತ್ ಶುಕ್ತಿರಜತಜ್ಞಾನವದ್' ಇತಿ । ನನು, ಶುಕ್ತಿಕಾರಜತಜ್ಞಾನಸ್ಯ ದುರ್ಬಲತ್ವಮಪ್ರಾಮಾಣ್ಯಞ್ಚ ದೋಷಜನ್ಯತ್ವಪ್ರಯುಕ್ತಮೇವ ನ ಬಹುತರಪ್ರಮಾಣವಿರುದ್ಧತ್ವಪ್ರಯುಕ್ತಮ್ । 'ಯದಪ್ರಮಾಣಂ ತದ್ದೋಷಜನ್ಯಮ್' ಇತಿ ಸಾಧ್ಯವ್ಯಾಪಕತ್ವಾತ್, ಸಾಧನವತ್ಯಪಿ ಪಕ್ಷೇಽಪೌರುಷೇಯತಯಾ ದೋಷಶಙ್ಕಾಭಾವೇನ ಸಾಧನಾವ್ಯಾಪಕತ್ವಾಚ್ಚ? ಇತ್ಯತ ಆಹ- '**ನ ಚ ದೋಷ**..' ಇತಿ । ವಿರೋಧಃ ಸೋಪಾಧಿಕತ್ವರೂಪೋಽನುಮಾನಸ್ಯ ಕುತೋ ನ? ಇತ್ಯತಃ ಸಾಧನವ್ಯಾಪಕತ್ವಾದಿತ್ಯಾಹ- '**ಬಹುಪ್ರಮಾಣ...**' ಇತಿ । ಬಹುವಚನೇನ

ನಿಯಮಮೇವ ಪ್ರಕಟಯತಿ । ಅತ್ರೈಕ್ಯವಾಕ್ಯಜನಿತಂ ಜ್ಞಾನಂ ಹಿ ಪಕ್ಷಃ । ತಸ್ಯ ಪೂರ್ವೋತ್ತರಪರಾಮರ್ಶಶೂನ್ಯತಾದಿದೋಷಜನ್ಯತ್ವಂ ಸಮ್ಭವತ್ಯೇವ । ಅವಶ್ಯಂ ಚೈತತ್ಸಾಧನವ್ಯಾಪಕತ್ವಂ ಪರೇಣಾಪ್ಯಙ್ಗೀಕಾರ್ಯಂ ಇತ್ಯಾಶಯವಾನಾಹ- '**ದೋಷಜನ್ಯತ್ವಮ್**' ಇತಿ । ಶುಕ್ತಿರಜತಜ್ಞಾನಾನಾಂ ಹಿ ದೋಷಜನ್ಯತ್ವಮುಪಾಧೇಃ ಸಾಧ್ಯವ್ಯಾಪಕತ್ವಸಿದ್ಧ್ಯರ್ಥಮವಶ್ಯಂ ಪರೇಣಾಪಿ ಅಙ್ಗೀಕಾರ್ಯಮ್ । ತತ್ ಕುತೋ ಜ್ಞಾಯತೇ? ಇತಿ ವಕ್ತವ್ಯಮ್ । ನ ತಾವತ್ಪ್ರತ್ಯಕ್ಷೇಣ, ಜನ್ಯಜನಕಭಾವಸ್ಯ ಸರ್ವತ್ರಾತೀಂದ್ರಿಯತ್ವಾತ್ । ನಾಪಿ ಅನ್ವಯವ್ಯತಿರೇಕಾನುಮೇಯಮ್, ಇಂದ್ರಿಯಾಣಾಮತೀಂದ್ರಿಯತ್ವೇನ ತದ್ದೋಷಾಣಾಮಪ್ಯತೀಂದ್ರಿಯತ್ವಾತ್ । ನಾಪ್ಯಪ್ರಮಾಣತ್ವೇನ, ತದ್ಜ್ಞಾನೇ ಅಪ್ಯುಪಾಯಾಭಾವಾತ್ । ನಚಾತ್ರಾऽಗಮೋऽಸ್ತಿ । ಅತೋ ಬಲವತ್ಪ್ರಮಾಣವಿರುದ್ಧತ್ವಾದೇವ ದೋಷಜನ್ಯತ್ವಂ ತತ್ರಾನುಮೇಯಮ್ । ತತೋ 'ಯದ್ಬಲವತ್ಪ್ರಮಾಣವಿರುದ್ಧಂ ತದ್ದೋಷಜನ್ಯಮ್' ಇತಿ ವ್ಯಾಪ್ತಿಃ ಅಙ್ಗೀಕಾರ್ಯಾ । ಬಲವತ್ತ್ವಂ ಚ ಬಾಧಕಪ್ರಮಾಣಸ್ಯೋಪಜೀವ್ಯತ್ವನಿರವಕಾಶತ್ವಾಭ್ಯಾಮಿವ ಬಹುತ್ವೇನಾಪ್ಯಙ್ಗೀಕರಣೀಯಂ ಸರ್ವತ್ರ ಉಪಜೀವ್ಯತ್ವಾದೇರಭಾತ್ । ತಥಾ ಚ ಬಹುಪ್ರಮಾಣವಿರುದ್ಧತ್ವಸ್ಯ ದೋಷಜನ್ಯತ್ವೇನ ವ್ಯಾಪ್ತಿಃ ಸರ್ವಥಾ ಸ್ವೀಕಾರ್ಯೇತಿ ಸಾಧನವ್ಯಾಪಕತ್ವಾನ್ನಾ (ನ್ನತ)ಸ್ಯೋಪಾಧಿತ್ವಮಿತಿ ।

ಇಷ್ಟು ತಿಳಿಸಿದಂತಾಗುವುದು- ಐಕ್ಯವಾಕ್ಯಗಳು ಅಪ್ರಮಾಣ, ಬಹು ಪ್ರಮಾಣವಿರೋಧವನ್ನು ಹೊಂದಿರುವುದರಿಂದ, ಶುಕ್ತಿರಜತಜ್ಞಾನದಂತೆ. ಸರಿ, ಶುಕ್ತಿರಜತಜ್ಞಾನಕ್ಕೆ ದೌರ್ಬಲ್ಯವಾಗಲಿ, ಅಪ್ರಾಮಾಣ್ಯವಾಗಲಿ ದೋಷಯುಕ್ತ-ಇಂದ್ರಿಯ ಜನ್ಯವಾದುದರಿಂದ ಹೊರತು, ಬಹುಪ್ರಮಾಣಗಳ ವಿರುದ್ಧವಾದುದರಿಂದಲ್ಲ. 'ಯಾವುದು ಅಪ್ರಮಾಣವೋ ಅದು ದೋಷದಿಂದ ಜನ್ಯವಾಗಿರುವುದು' ಎಂದು ಸಾಧ್ಯದಿಂದ ವ್ಯಾಪಕತ್ವವು ಇರುವುದರಿಂದ, ಕಾರಣವನ್ನು (ಹೇತುವನ್ನು) ಹೊಂದಿರುವ ಪಕ್ಷವು ಅಪೌರುಷೇಯವಾಗಿ, ದೋಷದ ಶಂಕೆಗೆ ಅವಕಾಶವಿಲ್ಲದಿರುವುದರಿಂದ ಸಾಧನದಿಂದ ಅವ್ಯಾಪಕ

ವಾದುದರಿಂದಲೂ ಸಹ (ಅಪ್ರಮಾಣವಲ್ಲ) ಎಂದಲ್ಲಿ[1], ಉತ್ತರಿಸುವರು '**ನ ಚ ದೋಷ.....**' ಎಂದು. **ವಿರೋಧಃ**- ಉಪಾಧಿಸಹಿತತ್ವರೂಪವಾದ, ಅನುಮಾನಕ್ಕೆ (ಐಕ್ಯಾಗಮಕ್ಕೆ ಅಪ್ರಾಮಾಣ್ಯವನ್ನು ಸಾಧಿಸುವ ಅನುಮಾನಕ್ಕೆ) ಏಕೆ ಇಲ್ಲ? ಎಂದು, ಸಾಧನದಿಂದ (ಉಪಾಧಿಯು) ವ್ಯಾಪಕವಾದುದರಿಂದ ಎಂದು ಉತ್ತರಿಸುತ್ತಾರೆ '**ಬಹುಪ್ರಮಾಣ...**' ಎಂದು. ಬಹುವಚನದಿಂದ ನಿಯಮವನ್ನೇ ತಿಳಿಸುತ್ತಾರೆ[2]. ಇಲ್ಲಿ ಐಕ್ಯವಾಕ್ಯಜನಿತಜ್ಞಾನವೇ ಪಕ್ಷ. ಅದಕ್ಕೆ (ಐಕ್ಯವಾಕ್ಯಜನಿತ ಜ್ಞಾನಕ್ಕೆ) ಪೂರ್ವೋತ್ತರ (ವಾಕ್ಯಗಳ) ಪರಾಮರ್ಶಶೂನ್ಯತಾ ವುುಂತಾದ ದೋಷಜನ್ಯತ್ವವು ಸಂಭಾವಿತವೇ ಆಗಿದೆ[3]. ಈ

1. 'ಐಕ್ಯವಾಕ್ಯ ಗಳು ಅಪ್ರಮಾಣ, ಬಹುಪ್ರಮಾಣವಿರೋಧವನ್ನು ಹೊಂದಿರುವುದರಿಂದ, ಶುಕ್ತಿರಜತಜ್ಞಾನದಂತೆ' ಎನ್ನುವ ಅನುಮಾನದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವನ್ನು ಹೇಳುವುದು ತರವಲ್ಲ. ಈ ಅನುಮಾನವು ಉಪಾಧಿದೋಷಯುಕ್ತವಾಗಿದೆ. ಅಪ್ರಾಮಾಣ್ಯಕ್ಕೆ ಕಾರಣವು ಬಹುಪ್ರಮಾಣವಿರೋಧವಲ್ಲ, ಮತ್ತೆ ದೋಷಜನ್ಯತ್ವ. ಎಲ್ಲೆಲ್ಲಿ ಅಪ್ರಾಮಾಣ್ಯವು ಇದೆಯೋ ಅಲ್ಲೆಲ್ಲೆಡೆಯೂ ದೋಷಜನ್ಯತ್ವವು ಇದೆ. ಶುಕ್ತಿರಜತಜ್ಞಾನದಲ್ಲಿ ದೋಷಜನ್ಯತ್ವವು ಇರುವುದರಿಂದ, ಅಲ್ಲಿ ಅಪ್ರಾಮಾಣ್ಯವೂ ಇದೆ. ಹೀಗಾಗಿ ದೋಷಜನ್ಯತ್ವಕ್ಕೂ- ಉಪಾಧಿಗೂ, ಅಪ್ರಾಮಾಣ್ಯಕ್ಕೂ- ಸಾಧ್ಯಕ್ಕೂ ವ್ಯಾಪಕತ್ವವು ಪ್ರಾಪ್ತವಾಯಿತು. ಪಕ್ಷವಾದ ಐಕ್ಯಾಗಮಗಳಾದರೋ ಅಪೌರುಷೇಯವಾದವುಗಳು, ಹಾಗಾಗಿ ಆಗಮದಲ್ಲಿ ದೋಷಜನ್ಯತ್ವದ ಶಂಕೆಗೇ ಅವಕಾಶವಿಲ್ಲ. ತನ್ನಿಮಿತ್ತ ಸಾಧನಾವ್ಯಾಪಕತ್ವವು ಪ್ರಾಪ್ತವಾಯಿತು. ಆದುದರಿಂದ ಬಹುಪ್ರಮಾಣವಿರೋಧವು ಅಪ್ರಾಮಾಣ್ಯಕ್ಕೆ ಕಾರಣವಲ್ಲ. ಈ ಅನುಮಾನದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವನ್ನು ಹೇಳುವುದು ತರವಲ್ಲ. ಎಂದು ಭಾವ.

2. ಮೂಲದಲ್ಲಿ 'ಬಹುಪ್ರಮಾಣವಿರುದ್ಧಾನಾಂ' ಎಂದು ಇದೆ, 'ಬಹುಪ್ರಮಾಣವಿರುದ್ಧಸ್ಯ' ಎಂದು ಏಕವಚನಾಂತವಾಗಿ ಹೇಳಿದ್ದರೂ ಸಾಕಿತ್ತು, ಆದರೂ ಬಹುವಚನಾಂತವಾಗಿ ನಿರ್ದೇಶವನ್ನು ಮಾಡಿರುವುದರಿಂದ ಎಲ್ಲೆಲ್ಲಿ ಬಹುಪ್ರಮಾಣವಿರೋಧವು ಕಂಡಿರುವುದೋ ಅಲ್ಲಿ ಎಲ್ಲೆಡೆಯೂ ದೋಷಜನ್ಯತ್ವವು ಕಂಡಿದೆ ಎನ್ನುವ ನಿಯಮವನ್ನು ಸೂಚಿಸಲು ಎಂದು ಭಾವ.

3. ಪ್ರಕೃತಾನುಮಾನವು ದೋಷಜನ್ಯತ್ವವನ್ನು ಸಾಧಿಸಲು ಪ್ರವೃತ್ತವಾಗಿದೆ. ಆದರೆ ಅಪೌರುಷೇಯವಾದ ಆಗಮದಿಂದ ಜನ್ಯವಾದ ಜ್ಞಾನವು ವಸ್ತುತಃ ದೋಷಜನ್ಯ ಎಂದು ಹೇಳಲು ಶಕ್ಯವಿಲ್ಲ. ಉಪಕ್ರಮ-ಉಪಸಂಹಾರಕಾದಿ ವಾಕ್ಯಗಳನ್ನು ಪರಿಶೀಲಿಸದೇ ಈ ಅರಿವು ಬಂದಿರುವುದರಿಂದ ಅದಕ್ಕೆ ದೋಷಜನ್ಯತ್ವವು ಪ್ರಾಪ್ತವಾಗಿದೆ ಎನ್ನುವದನ್ನು 'ಪರಾಮರ್ಶಶೂನ್ಯತಾ' ಎನ್ನುವುದರಿಂದ ತಿಳಿಸಿರುವರು ಎಂದು ಭಾವ.

ಸಾಧನವ್ಯಾಪಕತ್ವವನ್ನು ಅವಶ್ಯವಾಗಿ ಪರರೂ ಒಪ್ಪಲೇ ಬೇಕು ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ '**ದೋಷಜನ್ಯತ್ವಮ್...**' ಎಂದು.

ಶುಕ್ತಿರಜತಾದಿ ಜ್ಞಾನಗಳಿಗೆ ದೋಷಜನ್ಯತ್ವವನ್ನು, ಉಪಾಧಿಗೆ ಸಾಧ್ಯವ್ಯಾಪಕತ್ವದ ಸಿದ್ಧಿಗಾಗಿ ಅವಶ್ಯವಾಗಿ ಪರವಾದಿಗಳೂ ಒಪ್ಪಲೇಬೇಕು[1]. ಅದು (ಉಪಾಧಿಯಾದ ದೋಷಜನ್ಯತ್ವಕ್ಕೆ ಸಾಧ್ಯವಾದ ಅಪ್ರಾಮಾಣ್ಯದಿಂದ ವ್ಯಾಪಕತ್ವವು) ಹೇಗೆ ತಿಳಿಯುವುದು? ಎನ್ನುವದನ್ನು ಪ್ರತಿಪಾದಿಸಬೇಕು. ಪ್ರತ್ಯಕ್ಷದಿಂದ (ಸಾಧಿಸಬಹುದು ಎಂದು ಹೇಳಲು) ಶಕ್ಯವಿಲ್ಲ, ಎಲ್ಲೆಡೆಯೂ ಜನ್ಯ-ಜನಕತ್ವಭಾವವು ಅತೀಂದ್ರಿಯವಾದುದರಿಂದ[2]. ಅನ್ವಯ-ವ್ಯತಿರೇಕದಿಂದಲೂ (ಜನ್ಯ-ಜನಕಭಾವವನ್ನು) ಊಹಿಸಲು ಶಕ್ಯವಿಲ್ಲ, ಇಂದ್ರಿಯಗಳು ಅತೀಂದ್ರಿಯಗಳಾದುದರಿಂದ ಆ ದೋಷಗಳು ಅತೀಂದ್ರಿಯಗಳೇ ಆಗಿರುವುದರಿಂದ[3]. ಅಪ್ರಾಮಾಣ್ಯದಿಂದಲೂ (ಊಹಿಸಲು) ಆಗದು, ಆ ಜ್ಞಾನದಲ್ಲೂ (ಬೇರೇ ಯಾವುದೇ) ಉಪಾಯವು

---

1. 'ಏಕ್ಯಾಗಮಜನ್ಯಜ್ಞಾನವು ಅಪ್ರಮಾಣ ಬಹುಪ್ರಮಾಣಗಳ ವಿರುದ್ಧವಾದುದರಿಂದ ಶುಕ್ತಿರಜತಜ್ಞಾನದಂತೆ' ಎಂದು ತತ್ವವಾದಿಗಳು ಹೇಳಿದ ಅನುಮಾನಕ್ಕೆ ದೋಷಜನ್ಯತ್ವವನ್ನು ಉಪಾಧಿ ಎಂದು ಪರವಾದಿಗಳು ಪ್ರಶ್ನಿಸಿದ್ದರು. ದೋಷಜನ್ಯತ್ವವು ಉಪಾಧಿಯಾಗುವದಾದಲ್ಲಿ ಉಪಾಧಿಯು ಸಾಧ್ಯದೊಡನೆ ವ್ಯಾಪಕವಾಗಿರಬೇಕು, ಆದುದರಿಂದ ದೃಷ್ಟಾಂತವಾದ ಶುಕ್ತಿರಜತಜ್ಞಾನವು ದೋಷಜನ್ಯ ಎಂದು ಒಪ್ಪಲೇಬೇಕು ಎಂದು ಭಾವ.

2. ಜ್ಞಾನಗತವಾದ ಜ್ಞಾನತ್ವವೂ ಬಾಹ್ಯಪ್ರತ್ಯಕ್ಷದಿಂದ ಗೋಚರವಲ್ಲ, ಹಾಗೆಯೇ ಜ್ಞಾನಗತ-ವಾದ ದೋಷಜನ್ಯತ್ವರೂಪ ಧರ್ಮವೂ ಬಾಹ್ಯಪ್ರತ್ಯಕ್ಷಗೋಚರವಲ್ಲ, ತನ್ನಿಮಿತ್ತ ಅವುಗಳ ಜನ್ಯಜನಕಭಾವವನ್ನೂ ಪ್ರತ್ಯಕ್ಷದಿಂದ ಸಾಧಿಸಲು ಶಕ್ಯವಿಲ್ಲ. ಅಥವಾ 'ಎಲ್ಲವಿಧವಾದ ಜನ್ಯ-ಜನಕಭಾವವು ಅತೀಂದ್ರಿಯವೇ ಆಗಿದೆ' ಎಂಬುವುದು ಸರ್ವವಾದಿ ಸಂಮತ ಎಂದೂ ಭಾವ.

3. ಎಲ್ಲಿ ದೋಷವೋ ಅಲ್ಲಿ ಅಪ್ರಾಮಾಣ್ಯ ಎಂದು ಅನ್ವಯ, ಎಲ್ಲಿ ದೋಷವಿಲ್ಲವೋ ಅಲ್ಲಿ ಅಪ್ರಾಮಾಣ್ಯವಿಲ್ಲ ಎಂದು ವ್ಯತಿರೇಕ, ಈ ಅನ್ವಯ ವ್ಯತಿರೇಕಗಳಿಂದ ಊಹಿಸಬಹುದು-ಅನುಮಾನದಿಂದ ತಿಳಿಯಬಹುದು ಎಂದು ಹೇಳಲು ಆಗದು- ಪ್ರಕೃತದಲ್ಲಿ ಇಂದ್ರಿಯಜನ್ಯವಾದ 'ಇದಂ ರಜತಂ' ಎನ್ನುವ ಜ್ಞಾನದಲ್ಲಿನ ಚರ್ಚೆ. ಜ್ಞಾನಕಾರಣವಾದ ಇಂದ್ರಿಯಗಳು ಅತೀಂದ್ರಿಯಗಳಾಗಿವೆ, ಆದುದರಿಂದ ಅವುಗಳಲ್ಲಿನ ದೋಷಗಳು ಅತೀಂದ್ರಿಯವೇ ಆಗಿವೆ. ಹಾಗಾಗಿ 'ಎಲ್ಲಿ ದೋಷ, ಎಲ್ಲಿ ದೋಷವಿಲ್ಲ' ಎಂದು ತಿಳಿಯಲು ಶಕ್ಯವಿಲ್ಲದಿರುವುದರಿಂದ ವ್ಯಾಪ್ತಿಜ್ಞಾನವು ಪ್ರಾಪ್ತವಾಗಲಾರದು ಎಂದು ಭಾವ.

ಇಲ್ಲದಿರುವುದರಿಂದ[1]. ಈ ವಿಷಯದಲ್ಲಿ ಆಗಮವು ಇಲ್ಲ. ಆದುದರಿಂದ ಪ್ರಬಲಪ್ರಮಾಣವಿರೋಧದಿಂದಲೇ ದೋಷಜನ್ಯತ್ವವನ್ನು ಊಹಿಸಬೇಕು. ಆದುದರಿಂದ ಯಾವುದು ಪ್ರಬಲಪ್ರಮಾಣದಿಂದ ವಿರುದ್ಧವಾಗಿದೆಯೋ ಅದು ದೋಷದಿಂದ ಜನ್ಯವಾಗಿದೆ ಎಂದು ವ್ಯಾಪ್ತಿಯನ್ನು ಅಂಗೀಕರಿಸುವುದು. ಬಾಧಕಪ್ರಮಾಣಕ್ಕೆ ಪ್ರಾಬಲ್ಯವನ್ನು ಉಪಜೀವ್ಯತ್ವ ಮತ್ತು ನಿರವಕಾಶತ್ವಗಳಂತೆ ಬಹುತ್ವದಿಂದಲೂ ಅಂಗೀಕರಿಸಬೇಕು, ಎಲ್ಲೆಡೆಯೂ ಉಪಜೀವ್ಯತ್ವಾದಿಗಳೇ ಇರುವದಿಲ್ಲವಾದುದರಿಂದ. ಹಾಗಾಗಿ ಬಹುಪ್ರಮಾಣವಿರುದ್ಧವಾದುದಕ್ಕೆ ದೋಷಜನ್ಯತ್ವದೊಡನೆ ವ್ಯಾಪ್ತಿಯನ್ನು ಅನಿವಾರ್ಯವಾಗಿ ಒಪ್ಪಬೇಕು ಎಂದು ಸಾಧನವ್ಯಾಪಕತ್ವವೇ ಇರುವದರಿಂದ ಅದು (ದೋಷಜನ್ಯತ್ವವು) ಉಪಾಧಿ ಯಾಗಲಾರದು[2].

**-: ಭೇದವಾಕ್ಯಗಳು ಅನನುವಾದಕವಾದವು ಸಮಾಪ್ತ :-**

---

1. 'ಇದಂ ರಜತಂ ಎನ್ನುವ ಜ್ಞಾನವು ಅಪ್ರಮಾಣ' ಎನ್ನುವ ಜ್ಞಾನವು ಪ್ರಾಪ್ತವಾಗಲು ಅದು ದೋಷಜನ್ಯ ಎನ್ನುವ ಅರಿವಲ್ಲದೇ ಬೇರೇ ಯಾವುದೇ ಉಪಾಯಗಳು ಇಲ್ಲದಿರುವದರಿಂದ ಎಂದು ಭಾವ.

2. ಐಕ್ಯವಾಕ್ಯಂ ಅಪ್ರಮಾಣಂ ಬಹುಪ್ರಮಾಣವಿರುದ್ಧತ್ವಾತ್ ಎಂದು ತತ್ವವಾದಿಗಳು ತಿಳಿಸಿದ ಅನುಮಾನಕ್ಕೆ ದೋಷಜನ್ಯತ್ವ ಎನ್ನುವುದು ಉಪಾಧಿ ಎಂದು ಪರವಾದಿಗಳು ಪ್ರಸ್ತಾಪಿಸಿದ್ದರು. ಅಪ್ರಾಮಾಣ್ಯಕ್ಕೂ ದೋಷಜನ್ಯತ್ವಕ್ಕೂ ವ್ಯಾಪ್ತಿಯು ಇದೆ ಹೊರತಾಗಿ , ಅಪ್ರಾಮಾಣ್ಯಕ್ಕೂ ಬಹುಪ್ರಮಾಣವಿರೊಧಕ್ಕೂ ವ್ಯಾಪ್ತಿಯು ಕಂಡಿಲ್ಲ ಎಂದು ಅವರ ಆಶಂಕೆ.ಆದರೆ ಯಾವುದು ದೋಷಜನ್ಯ ವಾಗಿದೆಯೋ ಅದು ಬಹುಪ್ರಮಾಣವಿರುದ್ಧವಾಗಿರುವುದು ಕಂಡಿದೆ.ಹಾಗಾಗಿ ನಿಮ್ಮ ಉಪಾಧಿಯು ಸಾಧನವಾದ ಬಹುಪ್ರಮಾಣದೊಂದಿಗೆ ವ್ಯಾಪಕವೇ ಆಗಿದೆ, ಹಾಗಾಗಿ ಉಪಾಧಿಯ ಲಕ್ಷಣದ ಘಟಕವಾದ ಸಾಧನಾವ್ಯಾಪಕತ್ವವು ಇಲ್ಲ ಎಂದು ಭಾವ.

ಇಲ್ಲಿ ಗಮನಿಸಬೇಕಾದ ಸಂಗತಿ– 'ಐಕ್ಯವಾಕ್ಯಗಳು ಬಹುಪ್ರಮಾಣಗಳಿಂದ ವಿರುದ್ಧವಾಗಿದೆ, ಆದುದರಿಂದ ಅಪ್ರಮಾಣ, ಶುಕ್ತಿರಜತಜ್ಞಾನದಂತೆ' ಎಂದು ಆಚಾರ್ಯರು ಪ್ರತಿಜ್ಞೆಯನ್ನು ಮಾಡಿರುವರು. ಮಾಯಾವಾದಿಗಳ ಶಂಕಿಸುವರು– ಶುಕ್ತಿರಜತದ ಅರಿವು ದೋಷಜನ್ಯ– ವಾಗಿದೆ, ಆದುದರಿಂದ ಶುಕ್ತಿರಜತಜ್ಞಾನಕ್ಕೆ ಅಪ್ರಾಮಾಣ್ಯ. ಹಾಗಾಗಿ ದೋಷಜನ್ಯತ್ವಕ್ಕೂ ಅಪ್ರಾಮಾಣ್ಯಕ್ಕೂ ವ್ಯಾಪ್ತಿಯು ಕಂಡಿದೆ. ಅಪ್ರಾಮಾಣ್ಯಕ್ಕೂ ಬಹು ಪ್ರಮಾಣವಿರೋಧಕ್ಕೂ ವ್ಯಾಪ್ತಿಯು ಕಂಡಿಲ್ಲ, ಆದುದರಿಂದ ಬಹುಪ್ರಮಾಣವಿರುದ್ಧವಾದುದರಿಂದ ಅಪ್ರಮಾಣ ಎಂಬ ಪ್ರತಿಜ್ಞೆಯು ಹೇಗೆ ಸಂಗತವಾಗುವುದು? ಎಂದು. ಇದಕ್ಕೆ ಉತ್ತರವಾಗಿ ಆಚಾರ್ಯರು–

ಪುಟ 407ರಲ್ಲಿ........

## ॥ ಬ್ರಹ್ಮತರ್ಕವಚನೋದ್ಧರಣ ॥

ಹಿಂದಿನಂತೆ , ಪ್ರಬಲ ಯುಕ್ತಿಗಳಿಂದ ಮಂಡಿಸಿದ ಪ್ರಮೇಯಗಳನ್ನು ಅತಿಪ್ರಾಚೀನವಾದ ನ್ಯಾಶಾಸ್ತ್ರದ ಸಂಮತಿಯು ಇದೆ ಎಂದು ತಿಳಿಸುತ್ತಾರೆ. ಅರ್ವಾಚೀನರಾದ ವೈಶೇಷಿಕರಾಗಲಿ, ನೈಯಾಯಿಕರಾಗಲಿ, ಮೀಮಾಂಸಕರಾಗಲಿ ತಿಳಿಸಿರುವ ಪ್ರಮಾಣಗಳ ಪ್ರಮೇಯಗಳ ನಿರೂಪಣೆಯು ಸರಿಯಾದುದಲ್ಲ. ಅರ್ಥಪತ್ಯಾದಿಗಳು ಅನುಮಾನದ ಭೇದ. ಆಗಮವು ಪ್ರಬಲವಾದ ಪ್ರತ್ಯೇಕವಾದ ಮಾನ. ಇತ್ಯಾದಿ ವ್ಯಾಸಸಂಮತವಾದ ಅನೇಕ ಪ್ರಮಾಣ-ಪ್ರಮೇಯಗಳ ವಿವೇಚನೆಯು ಇಲ್ಲಿದೆ. ವಾದದ ತಳಹದಿ ಇದಾಗಿದೆ. ಪ್ರಮಾಣ-ಪ್ರಮೇಯಗಳ ನಿರ್ಣಯವೇ ಸರಿಯಾಗಿ ತಿಳಿಯದೇಹೋದಲ್ಲಿ , ಮಂಡನೆಗೆ ಬಲವು ಯಾವುದು? ಅದರ ನಿರ್ಣಯವನ್ನು ಇಲ್ಲಿ ಕಾಣಬಹುದಾಗಿದೆ. ಆ ಪ್ರಾಚೀನ ವಾಕ್ಯಗಳ ಭಾವವನ್ನು ಹೊರಗೆಡುವ ಜಯತೀರ್ಥರ ಬಗೆಯು ಬಲು ರಮಣೀಯವಾಗಿದೆ. ಈ ಗ್ರಂಥದ ಮುಖ್ಯ ಪ್ರಘಟ್ಟಕಗಳಲ್ಲಿ ಇದು ಒಂದು.

**ಅನುಪ್ರಮಾಣಲಕ್ಷಣ**

**ಅದುಷ್ಟಮಿಂದ್ರಿಯಂ ತ್ವಕ್ಷಂ ತರ್ಕೋಽದುಷ್ಟಸ್ತಥಾಽನುಮಾ ।**
**ಆಗಮೋಽದುಷ್ಟವಾಕ್ಯಂ ಚ ಸ್ವದೃಕ್ ಚಾನುಭವಃ ಸ್ಮೃತಃ ॥**

---

...... ಪುಟ 406 ರಿಂದ

'ಬಹುಪ್ರಮಾಣವಿರುದ್ಧವಾದವುಗಳಲ್ಲೇ ದೋಷಜನ್ಯತ್ವದ ನಿಯಮವು ಇರುವುದರಿಂದ. ದೋಷಜನ್ಯತ್ವವಾದರೋ ಪ್ರಬಲಪ್ರಮಾಣದ ವಿರೋಧದಿಂದಲೇ ನಿಶ್ಚಯವಾಗುವುದು' ಎಂದು ತಿಳಿಸಿರುವರು. ಹಾಗಾದಲ್ಲಿ ದೋಷಜನ್ಯತ್ವಕ್ಕೂ ಅಪ್ರಾಮಾಣ್ಯಕ್ಕೂ ಕಾರ್ಯಕಾರಣ-ಭಾವವು ಒಪ್ಪಿತ. ಆ ದೋಷಜನ್ಯತ್ವದ ಅರಿವು ಪ್ರಬಲಪ್ರಮಾಣದ ವಿರೋಧದಿಂದ ತಿಳಿಯುವುದು ಎಂದು ಹೇಳಿದಂತಾಯಿತು. ಇದರಿಂದ ಇಷ್ಟು ತಿಳಿಸಿದಂತಾಯಿತು- ಎಲ್ಲಿ ಪ್ರಬಲಪ್ರಮಾಣದ ವಿರೋಧವೋ ಅಲ್ಲಿ ದೋಷಜನ್ಯತ್ವ, ಎಲ್ಲಿ ದೋಷಜನ್ಯತ್ವೋ ಅಲ್ಲಿ ಅಪ್ರಾಮಾಣ್ಯ ಎಂದು. ಹಾಗಾದಲ್ಲಿ ಬಹುಪ್ರಮಾಣಗಳ ವಿರೋಧಕ್ಕೂ ಅಪ್ರಾಮಾಣ್ಯಕ್ಕೂ ಅಥವಾ ದೋಷಜನ್ಯತ್ವಕ್ಕೂ ಏನು ಸಂಗತಿ? ಎನ್ನುವದನ್ನು ಸ್ಫುಟೀಕರಿಸಿದಂತಾಗಲಿಲ್ಲ. ಎನ್ನುವ ಆಶಂಕೆಗೆ ಟೀಕೆಯಲ್ಲಿ ಉತ್ತರಿಸಿರುವರು 'ಪ್ರಮಾಣಗಳಲ್ಲಿನ ಬಹುತ್ವವೂ ಪ್ರಮಾಣಪ್ರಾಬಲ್ಯದ ಸೂಚಕಗಳಲ್ಲಿ ಒಂದು' ಎಂದು. ಇದನ್ನು ಆಚಾರ್ಯರು ಮುಂದೆ ಬ್ರಹ್ಮತರ್ಕವನ್ನು ಉದ್ಧರಿಸಿದಾಗ ತಿಳಿಸಿರುವರು-'ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ' ಎಂದು.

(ಸನ್ನಿಕೃಷ್ಟವಾದ) ದೋಷರಹಿತವಾದ ಇಂದ್ರಿಯವೇ ಪ್ರತ್ಯಕ್ಷ. ಪ್ರತ್ಯಕ್ಷದಂತೆ ದೋಷರಹಿತವಾದ ಯುಕ್ತಿಯೇ ಅನುಮಾನ. (ಈ ಅನುಮಾನವು ಸಾಧನಾನುಮಾನ ದೂಷಣಾನುಮಾನ ಎಂದು ಎರಡುವಿಧ.) ದೋಷರಹಿತ-ವಾದ ವಾಕ್ಯವೇ ಆಗಮ. ಆತ್ಮಜ್ಞಾನವನ್ನೇ (ಸಾಕ್ಷಿಜ್ಞಾನವನ್ನು) ಅನುಭವ ಎಂದು ತಿಳಿಸಲಾಗಿದೆ.

**ಏವಮತೀತೇನ ಪ್ರಬಂಧೇನ ಉಕ್ತಪ್ರಮೇಯಜಾತಮುಪಪತ್ತಿಸಿದ್ಧಮಪಿ ನ್ಯಾಯಶಾಸ್ತ್ರಸಮ್ಮತ್ಯಾ ದೃಢೀಕರ್ತುಂ ತದ್ವಾಕ್ಯಾನಿ ಪಠತಿ- 'ಅದುಷ್ಟಮ್' ಇತ್ಯಾದಿ । ಏತೇಷಾಂ ವಾಕ್ಯಾನಾಮುಕ್ತೋಪಯೋಗಂ ತತ್ರತತ್ರೈವ ದರ್ಶಯಿಷ್ಯಾಮಃ । ಪ್ರಮಾಣನಿರೂಪಣಾರ್ಥಮೇತಾನಿ ವಾಕ್ಯಾನಿ ಪ್ರವೃತ್ತಾನಿ । ಸ್ವರೂಪೇ ಜ್ಞಾತ ಏವ ತದನ್ಯಧರ್ಮಜ್ಞಾನಮ್ । ಸ್ವರೂಪಜ್ಞಾನಂ ಚ ಲಕ್ಷಣಾಧೀನಮ್ । ತತ್ರ ಯದ್ಯಪಿ ಸಾಮಾನ್ಯಲಕ್ಷಣಪೂರ್ವಕಂ ವಿಶೇಷಲಕ್ಷಣಾಭಿಧಾನಂ ಪ್ರಾಪ್ತಂ ಪ್ರತಿಪತ್ತಿಸೌಕರ್ಯಾತ್, ತಥಾಽಪಿ ಸಾಮಾನ್ಯಸ್ಯ ವ್ಯವಹಾರೇಷ್ವನುಪಯೋಗಾದ್ ವಿಶೇಷಾಣಾಮೇವ ತದುಪಯೋಗಾದ್ವಿಶೇಷಲಕ್ಷಣಾನ್ಯೇವಾದೌವುದಿತಾನಿ ।**

ಹಿಂದೆ ಪ್ರಸ್ತುತವಾದ ಪ್ರಬಂಧದಿಂದ ತಿಳಿಸಿದ ಪ್ರಮೇಯಗಳನ್ನು (ಭಗವನ್ನಿರ್ಮಿತ) ನ್ಯಾಯಶಾಸ್ತ್ರದ ಸಮ್ಮತಿಯಿಂದ ಧೃಢೀಕರಿಸಲು ಅಲ್ಲಿನ ವಾಕ್ಯಗಳನ್ನು ಹೇಳುತ್ತಾರೆ **'ಅದುಷ್ಟಂ'** ಇತ್ಯಾದಿಯಾಗಿ. ಈ ವಾಕ್ಯಗಳ ಅವಶ್ಯಕತೆಯನ್ನು ಅಲ್ಲಲ್ಲಿಯೇ ತಿಳಿಸಲಾಗುವುದು. ಪ್ರಮಾಣಗಳನ್ನು ನಿರೂಪಿಸಲು ಈ ವಾಕ್ಯಗಳು ಪ್ರವೃತ್ತವಾಗಿವೆ. (ಪ್ರಮಾಣದ) ಸ್ವರೂಪದ ಅರಿವಾದಲ್ಲಿ ಅದರಲ್ಲಿನ ಬೇರೇ ಧರ್ಮದ (ಮುಂದೆ ತಿಳಿಸುವ ಪ್ರಾಬಲ್ಯ ದೌರ್ಬಲ್ಯ ಮುಂತಾದ ಧರ್ಮಗಳ) ಅರಿವು (ಪ್ರಾಪ್ತವಾಗುವುವು). ಸ್ವರೂಪದ ಅರಿವಾದರೋ ಲಕ್ಷಣದ ಅಧೀನ. (ಪ್ರಮಾಣದ) ಅರಿವಿನ ಸೌಕರ್ಯಕ್ಕಾಗಿ ಸಾಮಾನ್ಯಲಕ್ಷಣವನ್ನು ಮೊದಲು (ತಿಳಿಸಿ), ವಿಶೇಷಲಕ್ಷಣವನ್ನು (ನಂತರದಲ್ಲಿ) ತಿಳಿಸುವುದು (ರೂಢಿ), ಹಾಗಾದರೂ ಸಾಮಾನ್ಯ(ಲಕ್ಷಣ)ದ (ಅರಿವು)

ವ್ಯವಹಾರದಲ್ಲಿ ಉಪಯೋಗವಿಲ್ಲದಿರುವುದರಿಂದ[1], ವಿಶೇಷ(ಲಕ್ಷಣ)ಗಳೇ ಅದಕ್ಕೆ (ವ್ಯವಹಾರಕ್ಕೆ) ಉಪಯೋಗವಾಗಿರುವುದರಿಂದ ವಿಶೇಷಲಕ್ಷಣಗಳನ್ನೇ ಮೊದಲು ತಿಳಿಸಿರುವರು[2].

**ದೋಷರಹಿತ ಜ್ಞಾನೇಂದ್ರಿಯದಿಂದ ಶುದ್ಧ ಪ್ರತ್ಯಕ್ಷ**

**ಯೇನೋಪಹತಮಿಂದ್ರಿಯಾದಿಕಂ ಜ್ಞಾನಮೇವ ನ ಜನಯತಿ, ವಿಪರೀತಜ್ಞಾನಂ ಚೋತ್ಪಾದಯತಿ ತದ್ರಹಿತಮ್ 'ಅದುಷ್ಟಮ್' । ಇಂದ್ರಿಯಮ್ ಇತಿ ಜ್ಞಾನೇಂದ್ರಿಯಮೇವ ವಿವಕ್ಷಿತಂ, ಪ್ರಮಾಣ-ಪ್ರಕರಣಾತ್ । ತುಶಬ್ದೋ ವಿಶೇಷಾರ್ಥಃ । ಸೇತಿಕರ್ತವ್ಯತಾಕಂ ಕರಣಂ ಕರಣವಿಶೇಷಶ್ಚಾತ್ರ ಪ್ರತ್ಯಕ್ಷಾದಿಕಮಧಿಕೃತಮ್ । ತತ್ರ ಕರಣಧರ್ಮಿಣಃ ಪ್ರಾಧಾನ್ಯಾತ್ ಪ್ರತ್ಯಕ್ಷಧರ್ಮ್ಯಕ್ಷಮೇವಾತ್ರ ನಿರೂಪಿತಂ ನತ್ವನುಮಾನಮಿವ ಸೇತಿಕರ್ತವ್ಯತಾಕಂ ಪ್ರತ್ಯಕ್ಷಮ್ । ತತ್ತೂತ್ತರತ್ರ ವಕ್ಷ್ಯಾಮ ಇತಿ । ಇಂದ್ರಿಯಸ್ಯಾದುಷ್ಟತ್ವಂ- ಕಾಚಾದಿರಾಹಿತ್ಯಮ್ ।**

ಯಾವುದರಿಂದ (ಯಾವ ವಸ್ತುವಿನಿಂದ) ಯುಕ್ತವಾದಲ್ಲಿ ಇಂದ್ರಿಯವೇ ಮುಂತಾದವು (ಹೇತು ಮತ್ತು ಶಬ್ದಗಳು) ಅರಿವನ್ನೇ ಉಂಟು-ಮಾಡುವದಿಲ್ಲವೋ ಅಥವಾ ವಿರುದ್ಧವಾದ ಅರಿವನ್ನು ಉಂಟುಮಾಡುವುದೋ (ಅದು ದೋಷ) ಅದರಿಂದ ರಹಿತವಾಗಿರುವುದೇ '**ಅದುಷ್ಟಂ**' (ಎಂದು ತಿಳಿಯುವುದು)[3]. ಪ್ರಮಾಣದ (ವಿವೇಚನದ) ಪ್ರಕರಣವಾದುದರಿಂದ

1. ಪಶುತ್ವ ಎನ್ನುವದು ಗೋವಿನ ಸಾಮಾನ್ಯಲಕ್ಷಣ, ಇಂತಹ ಸಾಮಾನ್ಯಲಕ್ಷಣವು 'ಇದು ಗೋವು' ಎಂಬ ವಿಶೇಷವ್ಯವಹಾರಕ್ಕೆ, ಮಹಿಷಾದಿಗಳು ಗೋವಲ್ಲ ಎಂಬುವ ವ್ಯವಹಾರಕ್ಕೆ ಪ್ರಯೋಜಕವಾಗಲಾರದು ಎಂದು ಭಾವ.

2. ಸಾಸ್ನಾದಿಮತ್ ಎಂಬ ವಿಶೇಷಲಕ್ಷಣವನ್ನು ತಿಳಿಸಿದಲ್ಲಿ ಯಾವುದು ಹಸು, ಯಾವುದು ಹಸುವಲ್ಲ ಎಂದು ತಿಳಿಯಲು ಅನುಕೂಲವಾಗುವುದು. ಮತ್ತೆ ಮುಂದೆ 'ಯಾಥಾರ್ಥ್ಯಮೇವ ಪ್ರಾಮಾಣ್ಯಂ' ಎಂದು ಪ್ರಮಾಣ ಸಾಮಾನ್ಯಲಕ್ಷಣವನ್ನೂ ತಿಳಿಸುವರು, ಇದು ಪ್ರಮಾಣ-ಸಾಮಾನ್ಯದ ವ್ಯವಹಾರಕ್ಕೆ ಕಾರಣವಾಗುವುದು ಎಂದು ಭಾವ.

3. ಕಣ್ಣಿನಲ್ಲಿ ಕಾಮಾಲೆ ದೋಷವಿದ್ದಲ್ಲಿ, ಬಿಳಿಯಾದ ಶಂಖವು ಹಳದಿಯಾಗಿ ಕಾಣುವುದು, ಅಥವಾ ಕಣ್ಣಿಗೆ ಪರೆಯು ಬಂದಲ್ಲಿ ವಸ್ತುವೇ ಕಾಣದಿರುವುದು, ಹಾಗೂ ಎಣ್ಣೆ-ತುಪ್ಪಗಳಲ್ಲಿ

ಪುಟ 410ರಲ್ಲಿ........

ಇಂದ್ರಿಯ ಎಂದಲ್ಲಿ ಜ್ಞಾನೇಂದ್ರಿಯಗಳೇ ವಿವಕ್ಷಿತವಾಗುವವು (ಕರ್ಮೇಂದ್ರಿಯಗಳಲ್ಲ). 'ತು' ಶಬ್ದವು ವಿಶೇಷಾರ್ಥವನ್ನು (ತಿಳಿಸುತ್ತಿದೆ)- ಇತಿಕರ್ತವ್ಯತಾ ಸಹಿತವಾದದ್ದು (ಕಾರಕಗಳು) ಕರಣ (ಎಂದು ಕರಣದ ಸಾಮಾನ್ಯ ಲಕ್ಷಣ). ಇಲ್ಲಿ ಕರಣಗಳಲ್ಲಿ ವಿಶೇಷವಾದ ಪ್ರತ್ಯಕ್ಷಾದಿಗಳು ಲಕ್ಷಿತವಾಗಿದೆ. ಕರಣರೂಪ ಧರ್ಮಿಗಳೇ(ಆಶ್ರಯಗಳೇ) ಪ್ರಧಾನವಾದುದ-ರಿಂದ, ಪ್ರತ್ಯಕ್ಷಕ್ಕೆ (ಪ್ರತ್ಯಕ್ಷರೂಪ ಕರಣಕ್ಕೆ) ಧರ್ಮಿಯಾದ (ಆಶ್ರಯವಾದ) ಅಕ್ಷವನ್ನೇ ಇಲ್ಲಿ ನಿರೂಪಿಸಲಾಗಿದೆ. ಅನುಮಾನದಂತೆ ಇತಿಕರ್ತವ್ಯತಾಸಹಿತವಾದ ಪ್ರತ್ಯಕ್ಷವನ್ನು (ಇಲ್ಲಿ) ನಿರೂಪಿಸಿಲ್ಲ[1]. ಅದನ್ನಾದರೋ (ಇತಿಕರ್ತವ್ಯತಾಸಹಿತ-ವಾದ ಪ್ರತ್ಯಕ್ಷದ ಲಕ್ಷಣವನ್ನು) ಮುಂದೆ ತಿಳಿಸಲಾಗುವುದು[2]. ಇಂದ್ರಿಯದ ಅದುಷ್ಟತೆ ಎಂದರೆ ಕಾಮಾಲೆ ಮುಂತಾದವುಗಳ ಇಲ್ಲದಿರುವಿಕೆ.

**ಅನುಮಾನಪ್ರಮಾಣದ ನಿರೂಪಣೆ**

**ವ್ಯಾಪ್ಯಾಙ್ಗೀಕಾರೇಽನಿಷ್ಟವ್ಯಾಪಕಪ್ರಸಙ್ಗನಂ ತರ್ಕಃ । ತಥಾಶಬ್ದೇನ**

---

...... ಪುಟ 409 ರಿಂದ

ಹೋಲಿಕೆಯು ಇರುವುದರಿಂದ ಅವುಗಳಲ್ಲಿನ ಭೇದದ ಅರಿವು ಆಗದು ಈ ಮುಂತಾದವುಗಳನ್ನು ಪ್ರತ್ಯಕ್ಷದಲ್ಲಿನ ದೋಷಗಳು ಎಂದು ಪರಿಗಣಿಸಲಾಗಿದೆ. ಇದೇ ರೀತಿಯಲ್ಲಿ ವ್ಯಭಿಚಾರಾದಿಗಳು ಅನುಮಾನದ ದೋಷ, ಅನನ್ವಿತವಾದ, ಅರ್ಥವಿಲ್ಲದಿರುವಿಕೆ ಮುಂತಾದವು ಶಬ್ದಗಳ ದೋಷ. ಇಂತಹ ದೋಷಗಳಿಂದ ಮುಕ್ತವಾದ ಪ್ರಮಾಣಗಳು ಅರಿವಿಗೆ ಸಾಧನ ಎಂದು ತಿಳಿಯುವುದು.

2. ಯಾವುದು ಕಾರಕವೋ ಅದನ್ನು ಕರಣ ಎಂದು ವ್ಯವಹರಿಸುವರು. ಅಂದರೆ ಕೇವಲ ಕೊಡಲಿಯನ್ನು ಕರಣ ಎಂದು ವ್ಯವಹರಿಸಲಾಗದು, ಉದ್ಯಮನ-ನಿಪಾತನರೂಪ ಇತಿಕರ್ತವ್ಯತೆಯಿಂದ ಯುಕ್ತವಾದ ಕೊಡಲಿಯನ್ನೇ ಕರಣ ಎಂದು ವ್ಯವಹರಿಸುವರು. ಪ್ರಕೃತ ಜ್ಞಾನಕ್ಕೆ ಕರಣಗಳು ಪದಾರ್ಥದಿಂದ ಸನ್ನಿಕೃಷ್ಟವಾದ ಇಂದ್ರಿಯ್ನಗಳೇ ಹೊರತು ಕೇವಲ ಇಂದ್ರಿಯಗಳಲ್ಲ. ಆದರೆ ಪ್ರಕೃತ ಮೂಲದಲ್ಲಿ 'ಅದುಷ್ಟಮಿಂದ್ರಿಯಂ ತ್ವಕ್ಷಮ್' ಎಂದು ಇಂದ್ರಿಯವನ್ನೇ ಕರಣ ಎಂದು ತಿಳಿಸಿದಂತೆ ತೋರುವುದು. ತನ್ನಿಮಿತ್ತವಾಗಿ ಆಚಾರ್ಯರ ಅಭಿಮತವನ್ನು ಟೀಕೆಯಲ್ಲಿ ಸ್ಫುಟಗೊಳಿಸಿರುವರು. 'ಕರಣವಾದ (ಅರಿವಿಗೆ ಸಾಧನವಾದ) ಪ್ರತ್ಯಕ್ಷಕ್ಕೆ ಧರ್ಮಿಯಾದ ಇಂದ್ರಿಯಗಳೇ ಪ್ರಧಾನವಾದುದರಿಂದ, ಆ ಇಂದ್ರಿಯಗಳನ್ನೇ ಪ್ರಕೃತದಲ್ಲಿ ಪರಿಗ್ರಹಿಸಿರುವರು' ಎಂದು.

3. 'ವಿಷಯಾನ್ ಪ್ರತಿ ಸ್ಥಿತಂ ಹ್ಯಕ್ಷಂ ಪ್ರತ್ಯಕ್ಷಮ್' ಎಂದು

ಅಪ್ರಸಙ್ಗಾತ್ಮಕಂ ಸಮುಚ್ಚಿನೋತಿ । ತಥಾಚ 'ವಕ್ಷ್ಯಮಾಣವಿರೋಧಾದಿ-ದೋಷರಹಿಮುಪಪತ್ತಿಯುಕ್ತ್ಯಾದಿಶಬ್ದವಾಚ್ಯಂ ಲಿಂಗಮನುಮಾ, ಸಾ ಚ ತರ್ಕಸಾಧನಭೇದಾತ್ ದ್ವಿವಿಧಾ' ಇತ್ಯುಕ್ತಂ ಭವತಿ । ತರ್ಕಃ ಪ್ರಮಾಣಮೇವ ನ ಭವತೀತಿ ನೈಯಾಯಿಕಾದಯಃ, ಪೃಥಕ್‌ಪ್ರಮಾಣಮಿತಿ ಜೈನಾಃ, ತನ್ನಿರಾಸಾಯೈವಮುಕ್ತಮ್ । ಅಥವಾ 'ತರ್ಕ್ಯತೇಽನುಮೀಯತೇಽನೇನ' ಇತಿ ತರ್ಕಶಬ್ದೇನ ಸಮಸ್ತೋಪಪತ್ತಿರುಚ್ಯತೇ । ತಥಾಶಬ್ದ ಉಪಮಾಯಾಮ್ 'ಇಂದ್ರಿಯಮಿವಾಯಮಪ್ಯದುಷ್ಟಃ' ಇತಿ ।

ವ್ಯಾಪ್ಯವಾದನ್ನು ಒಪ್ಪಿದಲ್ಲಿ, ಅನಿಷ್ಟವಾದ (ಪ್ರಮಾಣವಿರುದ್ಧವಾದ) ವ್ಯಾಪಕವನ್ನು ಆಪಾದಿಸುವದನ್ನು ತರ್ಕ (ಎಂದು ತಿಳಿಯುವುದು)[1]. 'ತಥಾ' ಶಬ್ದದಿಂದ ಪ್ರಸಂಗಭಿನ್ನವಾದ (ತರ್ಕದಿಂದ ಭಿನ್ನವಾದ ಸಾಧನಾನುಮಾನವನ್ನು) ಸಂಗ್ರಹಿಸುವುದು. ಒಟ್ಟಿನಲ್ಲಿ ಮುಂದೆ ತಿಳಿಸಲಿರುವ 'ವಿರೋಧ ಮುಂತಾದ ದೋಷಗಳಿರದ, ಉಪಪತ್ತಿ-ಯುಕ್ತಿ ಮುಂತಾದ ಶಬ್ದಗಳಿಂದ ವ್ಯವಹರಿಸುವ ಲಿಂಗವನ್ನು ಅನುಮಾನ' (ಎಂದು ತಿಳಿಯುವುದು), ಅದು ತರ್ಕ, ಸಾಧನ ಎಂದು ಎರಡುವಿಧವಾಗಿದೆ ಎಂದು ತಿಳಿಸಿದಂತಾಯಿತು. ತರ್ಕವು ಪ್ರಮಾಣವೇ ಅಲ್ಲ ಎಂದು ನೈಯಾಯಿಕರು ಮುಂತಾದವರು, ಪ್ರತ್ಯೇಕ ಪ್ರಮಾಣ ಎಂದು ಜೈನರು, ಅದನ್ನು (ಆ ವಾದಗಳನ್ನು) ನಿರಾಕರಿಸಲೆಂದೇ (ಇಲ್ಲಿ ತರ್ಕ ಎನ್ನುವ ಶಬ್ದವನ್ನೂ) ಪ್ರಸ್ತಾಪಿಸಲಾಗಿದೆ. ಅಥವಾ 'ಯಾವುದರಿಂದ ಊಹಿಸಲಾಗುವುದೋ ಅದು ತರ್ಕ' ಎಂದು ತರ್ಕ ಶಬ್ದದಿಂದ ಎಲ್ಲ (ವಿಧದ) ಉಪಪತ್ತಿಯು ಉಪದಿಷ್ಟವಾಗಿದೆ. '**ತಥಾ**' ಶಬ್ದವು ಉಪಮಾರ್ಥದಲ್ಲಿ (ಇದೆ). ಇಂದ್ರಿಯದಂತೆ ಅದುಷ್ಟವಾದ (ಉಪಪತ್ತಿ) ಎಂದು (ತಿಳಿಸಿದಂತಾಯಿತು).

---

1. ಒಂದು ವೇಳೆ 'ಆತ್ಮನು ಸಾವಯವ' ಎಂದು ವಾದಿಸಿದಲ್ಲಿ 'ಆತ್ಮನು ಅನಿತ್ಯನಾಗಲಿ' ಎನ್ನುವುದು ತರ್ಕಕ್ಕೆ (ಪ್ರಸಂಗಕ್ಕೆ) ದೃಷ್ಟಾಂತ. ಇಲ್ಲಿ ವ್ಯಾಪ್ಯವಾದದು- ಅಲ್ಪದೇಶವೃತ್ತಿಯಾದುದು ಸಾವಯವತ್ವ ಇದು ಇರುವದಾದಲ್ಲಿ ವ್ಯಾಪಕವಾದದ್ದು- ಅಧಿಕದೇಶವೃತ್ತಿಯಾದದ್ದು ಅನಿತ್ಯತ್ವ, ಇದನ್ನು ಆಪಾದಿಸಲಾಗಿದೆ, ಆದರೆ ಆತ್ಮನು ನಿತ್ಯ ಎಂದು ಪ್ರಮಾಣಗಳು ಸಾರುತ್ತಿವೆ ಅದರ ಅಭಾವವನ್ನು ಒಪ್ಪುವುದು ಪ್ರತಿವಾದಿಗೆ ಅನಿಷ್ಟವಾಗಿದೆ ಎಂದು ಭಾವ.

**ಆಗಮಪ್ರಮಾಣದ ವಿವರಣೆ**

**ವಾಕ್ಯದೋಷನಿರೂಪಣಂ ಪ್ರಾಗೇವ ಕೃತಮ್ । ಚಶಬ್ದೋಽವಧಾರಣೇ, ವಾಕ್ಯಮೇವ ನ ತು ಚೇಷ್ಟಾಽಪೀತಿ । ತೇನ ಚೇಷ್ಟಾಸಂಗ್ರಹಾರ್ಥಂ 'ಸಮಯಬಲೇನ ಸಮ್ಯಕ್‌ಪರೋಕ್ಷಾನುಭವಸಾಧನಮ್- ಆಗಮಃ' ಇತಿ ಭಾಸರ್ವಜ್ಞೋಕ್ತಂ ನಿರಸ್ತಂ ಭವತಿ । ಆಗಮಶಬ್ದಸ್ಯ ವಾಕ್ಯ ಏವ ರೂಢತ್ವಾತ್ । ಲೋಕರೂಢಸ್ಯೈವ ಪರೀಕ್ಷಕೈರನ್ವಾಖ್ಯೇಯತ್ವಾತ್ । ಅನ್ಯಥಾಽತಿಪ್ರಸಙ್ಗಾತ್ । ಚೇಷ್ಟಾಯಾಶ್ಚಾನುಮಾನೇಽನ್ತರ್ಭಾವಾತ್ ।**

ವಾಕ್ಯದ ದೋಷವನ್ನು ಈ ಮೊದಲೇ ನಿರೂಪಿಸಿಯಾಗಿದೆ (ಅಬೋಧಕತ್ವ ಮತ್ತು ವಿಪರೀತಬೋಧಕತ್ವಗಳು ವಾಕ್ಯದ ದೋಷ ಎಂದು). 'ಚ' ಶಬ್ದವು ನಿಶ್ಚಯಾರ್ಥದಲ್ಲಿ (ಇದೆ), ವಾಕ್ಯವೇ ಹೊರತು ಚೇಷ್ಟೆಯೂ ಅಲ್ಲ ಎಂದು[1]. ಇದರಿಂದ (ವಾಕ್ಯವನ್ನು ಮಾತ್ರ ಆಗಮ ಎಂದು ತಿಳಿಸಿದ್ದರಿಂದ) ಚೇಷ್ಟೆಯನ್ನು ಸಂಗ್ರಹಿಸುವ ನಿಮಿತ್ತವಾಗಿ 'ಸಂಕೇತದ ಬಲದಿಂದ ಯಥಾರ್ಥವಾದ ಪರೋಕ್ಷ ಅನುಭವಕ್ಕೆ ಸಾಧನವಾದುದು ಆಗಮ' ಎಂದು ಭಾಸರ್ವಜ್ಞರು ತಿಳಿಸಿರುವದನ್ನು ನಿರಾಕರಿಸಿದಂತಾಯಿತು. ಆಗಮಶಬ್ದವು ವಾಕ್ಯದಲ್ಲಿಯೇ ವ್ಯವಹಾರದಲ್ಲಿರುವದರಿಂದ. ಲೋಕದಲ್ಲಿ ರೂಢವಾದುದನ್ನೇ ಪರೀಕ್ಷಕರು ಅಂಗೀಕರಿಸುವದರಿಂದ. ಹಾಗಾಗದ ಪಕ್ಷದಲ್ಲಿ (ಲೋಕರೂಢಿಯನ್ನು ಅತಿಕ್ರಮಿಸಿ ವ್ಯವಹರಿಸುವ ಪಕ್ಷದಲ್ಲಿ) ಅತಿಪ್ರಸಂಗವು ಒದಗೀತು[2]. ಚೇಷ್ಟೆಯಾದರೋ ಅನುಮಾನದಲ್ಲಿಯೇ ಅಂತರ್ಭಾವವನ್ನು ಹೊಂದುವದು[3].

1. ಮೂಲದಲ್ಲಿ 'ಅದುಷ್ಟವಾಕ್ಯಂ ಚ' ಎಂದಿದೆ. ಸಾಧಾರಣವಾಗಿ 'ಚ' ಶಬ್ದವು ಸಮುಚ್ಚಯಾರ್ಥದಲ್ಲಿ ಇರುತ್ತದೆ. ಪ್ರಕೃತದಲ್ಲಿ ಅವಧಾರಣಾರ್ಥದಲ್ಲಿದೆ. ಒಟ್ಟಿನಲ್ಲಿ 'ಅದುಷ್ಟವಾದ ವಾಕ್ಯವು ಮಾತ್ರ' ಎಂದು ತಿಳಿಸಿದಂತಾಯಿತು. ಹಾಗಾದಲ್ಲಿ ಮತ್ತಾವುದು ಆಗಮವಲ್ಲ ಎಂದಲ್ಲಿ ಉತ್ತರಿಸುತ್ತಾರೆ 'ಚೇಷ್ಟೆಯು ಆಗಮವಲ್ಲ' ಎಂದು ನಿರಾಕರಿಸಿದಂತಾಯಿತು ಎಂದು ಭಾವ.

2. ಅನುಮಾನವನ್ನೂ ಆಗಮ ಎಂದೂ ವ್ಯವಹರಿಸಬೇಕಾದೀತು ಎಂದು ಭಾವ.

3. ಚೇಷ್ಟೆಯಿಂದ ಅರಿವು ಬರುವುದು ಅನುಭೂತವಾಗಿದೆ, ಹಾಗಾಗಿ ಅದೂ ಪ್ರಮಾಕ್ಕೆ ಸಾಧನವಾಗಿದೆ. ಅದು ಆಗಮದಲ್ಲಿ ಅಂತರ್ಭಾವವಾಗದ ಪಕ್ಷದಲ್ಲಿ ಅದನ್ನು ಪ್ರತ್ಯೇಕ ಪ್ರಮಾಣ ಎಂದು ಪರಿಗಣಿಸಲಾಗುವುದೋ ಎನ್ನುವ ಸಂದೇಹಕ್ಕೆ ಉತ್ತರಿಸಿರುವರು. ಚೇಷ್ಟೆಯಿಂದ ಪ್ರಾಪ್ತವಾಗುವ ಅರಿವು ಅನುಮಿತಿ ಎಂದು ಭಾವ.

**ಸಾಕ್ಷಿಯು ನಿಯತವಾಗಿ ಯಥಾರ್ಥವಾದ ಮಾನ**

**ಆತ್ಮಸ್ವರೂಪಭೂತಂ ಜ್ಞಾನಂ ಸ್ವದೃಕ್ । ತದಿದಾನೀಮ್ 'ಅನುಭವಃ' ಇತಿ ವಿವಕ್ಷಿತಮ್ । ಚಶಬ್ದೋಽವಧಾರಣೇ ಸ್ವದೃಗೇವ ನ ತು 'ನಿರ್ದೋಷತ್ವಮ್' ಅನುವರ್ತನೀಯಂ, ಸಜ್ಜೀವಾನಾಂ ಸ್ವರೂಪಜ್ಞಾನಸ್ಯ ನಿರ್ದೋಷತ್ವನಿಯಮಾದಿತಿ । ಅತ್ರ ಸ್ವರೂಪನಿರೂಪಣಮೇವ ಕ್ರಿಯತೇ ಪ್ರಕ್ರಿಯಾ ತು ಪ್ರಮಾಣಲಕ್ಷಣಾದಿಗ್ರನ್ಥಾನ್ತರಾನುಸಾರೇಣ ದ್ರಷ್ಟವ್ಯಾ । ಜ್ಞಾನಮಾತ್ಮಸ್ವರೂಪಂ ನ ಭವತೀತ್ಯೇಕೇ । ತನ್ನಿರಾಸಾರ್ಥಂ 'ಸ್ಮೃತಃ' ಇತ್ಯುಕ್ತಮ್ । 'ವಿಜ್ಞಾನಘನ ಏವ' ಇತ್ಯಾದಿಶ್ರುತಿಸ್ಮೃತಿಸಿದ್ಧಃ । 'ಪ್ರತ್ಯಕ್ಷಾನುಮಾನಾಗಮಾನುಭವವಿರುದ್ಧಮೈಕ್ಯವಾಕ್ಯಮ್' ಇತ್ಯುಕ್ತಮ್ । ತತ್ ಪ್ರತ್ಯಕ್ಷಾದ್ಯಜ್ಞಾನೇ ದುರ್ಜ್ಞಾನಮ್, ಅತಸ್ತತ್ಸ್ವರೂಪನಿರೂಪಣೇನ ಸುಜ್ಞಾನಂ ಕೃತಮ್ ।**

ಆತ್ಮಸ್ವರೂಪಭೂತವಾದ ಜ್ಞಾನವನ್ನು '**ಸ್ವದೃಕ್**' (ಎಂದು ತಿಳಿಯುವುದು). ಅದನ್ನು ಪ್ರಕೃತದಲ್ಲಿ 'ಅನುಭವ' ಎಂದು ವಿವಕ್ಷಿಸಲಾಗಿದೆ[1]. '**ಚ**' ಶಬ್ದವು ಅವಧಾರಣಾರ್ಥದಲ್ಲಿ (ಇದೆ), ಸ್ವದೃಗ್ ಮಾತ್ರ, 'ನಿರ್ದೋಷತ್ವ' ಎನ್ನುವದು ಅನುವರ್ತಿಸುವುದಿಲ್ಲ 'ಸಜ್ಜೀವರ ಸ್ವರೂಪಜ್ಞಾನವು ನಿರ್ದುಷ್ಟವೇ ಆಗಿರುವುದು' ಎಂಬ ನಿಯಮವಿರುವುದರಿಂದ ಎಂದು[2]. ಇಲ್ಲಿ (ಪ್ರಮಾಣದ) ಸ್ವರೂಪವನ್ನು ಮಾತ್ರ ನಿರೂಪಿಸಲಾಗುವುದು, (ಉಳಿದ) ಪ್ರಕ್ರಿಯೆಗಳನ್ನು ಪ್ರಮಾಣಲಕ್ಷಣ ಮುಂತಾದ ಗ್ರಂಥಗಳಿಂದ ತಿಳಿಯುವುದು. ಜ್ಞಾನವು ಆತ್ಮದ ಸ್ವರೂಪವಲ್ಲ ಎಂದು ಕೆಲವರು (ವಾದಿಸುವರು). ಅದನ್ನು ನಿರಾಕರಿಸಲು '**ಸ್ಮೃತಃ**' ಎಂದು

1. ಪ್ರತ್ಯಕ್ಷಜನ್ಯವಾದ ಜ್ಞಾನವನ್ನು ಎರಡು ವಿಧದಲ್ಲಿ ಗುರುತಿಸಲಾಗಿದೆ. ಇಂದ್ರಿಯಗಳಿಂದ ಜನ್ಯವಾದ ಜ್ಞಾನ, ಇದನ್ನು ವೃತ್ತಿಜ್ಞಾನ ಎಂದು ವ್ಯವಹರಿಸುವರು. ಇನ್ನೊಂದು ಸಾಕ್ಷಿಜನ್ಯ ಜ್ಞಾನ, ಇದನ್ನು ಸ್ವರೂಪಜ್ಞಾನ ಎಂದು ವ್ಯವಹರಿಸುವರು.

2. ಪ್ರಮಾಣದ ಲಕ್ಷಣವನ್ನು ತಿಳಿಸುವಾಗ, ನಿರ್ದುಷ್ಟ ಇಂದ್ರಿಯ, ನಿರ್ದುಷ್ಟಲಿಂಗ, ನಿರ್ದುಷ್ಟ ವಾಕ್ಯ ಎಂದು ತಿಳಿಸಿರುತ್ತಾರೆ, ಸಾಕ್ಷಿಪ್ರಮಾಣದ ಲಕ್ಷಣವನ್ನು ತಿಳಿಸುವಾಗಲೂ 'ಸ್ವದೃಕ್ ಚ' ಎಂದು ಹೇಲಲಾಗಿದೆ. ಇಲ್ಲಿ ಪ್ರಸಕ್ತವಾದ 'ಚ' ಶಬ್ದವು ಸಮುಚ್ಚಯಾರ್ಥಕ ವಾಗಿದ್ದು 'ನಿರ್ದುಷ್ಟ ಸ್ವರೂಪಭೂತಜ್ಞಾನಂ' ಎಂದು ತಿಳಿಯುವ ಸಂಭಾವನೆಯಿದೆ. ಆದುದರಿಂದ ತಿಳಿಸುವರು 'ಚ' ಶಬ್ದವು ಅವಧಾರಣಾರ್ಥದಲ್ಲಿದೆ ಎಂದು. 'ಸ್ವರೂಭೂತಜ್ಞಾನ ಮಾತ್ರ'-ಎಂದು ಮೂಲದ ಭಾವ. ಸಜ್ಜನರ ಸ್ವರೂಪಾನುಭವವು ನಿಯತವಾಗಿ ಅದುಷ್ಟವೇ ಆಗಿರುವುದು ಆದುದರಿಂದ ಸ್ವರೂಪಭೂತಜ್ಞಾನಕ್ಕೆ 'ನಿರ್ದುಷ್ಟ' ಎಂಬ ವಿಶೇಷಣದ ಅಗತ್ಯವಿಲ್ಲ ಎಂದು ಭಾವ.

ಹೇಳಲಾಗಿದೆ. 'ವಿಜ್ಞಾನಘನ ಏವ' ಈ ಮುಂತಾದ ಶ್ರುತಿ-ಸ್ಮೃತಿಗಳಿಂದ ಸಿದ್ಧವು (ಆಗಿದೆ). 'ಪ್ರತ್ಯಕ್ಷ-ಅನುಮಾನ- ಆಗಮ-ಅನುಭವಗಳಿಂದ ವಿರುದ್ಧವಾಗಿದೆ ಐಕ್ಯಾಗಮವು' ಎಂದು ಹೇಳಲಾಗಿದೆ. ಅದು (ಪ್ರತ್ಯಕ್ಷಾದಿ ಪ್ರಮಾಣ ವಿರೋಧವು) ಪ್ರತ್ಯಕ್ಷಾದಿಗಳ ಜ್ಞಾನವಿಲ್ಲದೆ ತಿಳಿಯುವುದು ಅಶಕ್ಯ, ಆದುದರಿಂದ ಅವುಗಳ ಸ್ವರೂಪವನ್ನು ನಿರೂಪಿಸುವುದರಿಂದ (ಅವುಗಳ) ಸರಿಯಾದ ಅರಿವನ್ನು ಉಂಟುಮಾಡಲಾಯಿತು.

**ಪ್ರಮಾಣಗಳ ಪ್ರಾಬಲ್ಯ-ದೌರ್ಬಲ್ಯಗಳ ವಿವರ**

**ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾ ನ ಚಾನ್ಯಥಾ ।**
**ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ ।**
**ತಯೋಃ ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ॥**

ಬಲವತ್ಪ್ರಮಾಣದಿಂದಲೇ (ವಿರೋಧದಿಂದಲೇ ಅನುಪ್ರಮಾಣದಲ್ಲಿನ) ದೋಷದ ಅರಿವಾಗುವುದು ಮಾರ್ಗಾಂತರವಿಲ್ಲ. ಪ್ರಾಬಲ್ಯವು ಎರಡು ವಿಧ- (ಒಂದೇ ವಿಷಯದಲ್ಲಿ) ಬಹು ಪ್ರಮಾಣಗಳ ಇರುವಿಕೆಯಿಂದ ಮತ್ತು ಸ್ವಭಾವದಿಂದ. ಅವುಗಳಲ್ಲಿ (ಬಹುಪ್ರಮಾಣ ಸ್ವಾಭಾವಿಕ ಪ್ರಮಾಣಗಳಲ್ಲಿ) ಸ್ವಾಭಾವಿಕವಾದದ್ದು ಪ್ರಬಲ. (ಸ್ವಭಾವದಿಂದ ಬಲಿಷ್ಠ ಅಂದರೆ) ಉಪಜೀವ್ಯವೇ ಮುಂತಾದವು ಎಂದು[1].

**ನನು, ಇಂದ್ರಿಯಾದೀನಾಮದುಷ್ಟತ್ವಂ ದೋಷಜ್ಞಾನಾಧೀನಜ್ಞಾನಮ್ । ದೋಷಾಸ್ತು ಕೇನ ಜ್ಞಾತವ್ಯಾಃ? ಇತ್ಯತ ಆಹ- 'ಬಲವದ್' ಇತಿ ॥ ಚಶಬ್ದಸ್ತುಶಾಬ್ದಾರ್ಥಃ । ಯದ್ಯಪಿ ಕೇಚಿತ್ ಸ್ವರೂಪಾಸಿದ್ಧ್ಯಾದಯಃ ಅನುಮಾನಾದಿದೋಷಾಃ ಪ್ರತ್ಯಕ್ಷಾದಿಸಿದ್ಧಾಃ, ತಥಾಽಪೀಂದ್ರಿಯದೋಷಾಸ್ತು ಬಲವತ್ಪ್ರಮಾಣವಿರೋಧೇನೈವ ಜ್ಞೇಯಾ ನೈವಾನ್ಯಥಾ । ಯಥಾಽನ್ಯಥಾ**

---

1. ಪ್ರತ್ಯಕ್ಷಾದಿಗಳಿಂದ ಅಪೌರುಷೇಯವಾದ ಆಗಮಕ್ಕೆ ಸ್ವಾಭಾವಿಕ ಪ್ರಾಬಲ್ಯವು ಇದೆ. ಈ ಪ್ರಾಬಲ್ಯವನ್ನೂ ಆದಿಪದದಿಂದ ಸಂಗ್ರಹಿಸುವುದು. ಅಪೌರುಷೇಯತ್ವನಿಮಿತ್ತವಾದ ಪ್ರಾಬಲ್ಯ ಮತ್ತು ಉಪಜೀವ್ಯತ್ವ ನಿಮಿತ್ತವಾದ ಪ್ರಾಬಲ್ಯಗಳಲ್ಲಿ ಉಪಜೀವ್ಯವೇ ಪ್ರಬಲ ಎಂದು ಸೂಚಿಸಲು, ಮುಖತಃ ಉಪಜೀವ್ಯವನ್ನು ತಿಳಿಸಿ, ಆದಿಪದದಿಂದ ಉಳಿದವುಗಳನ್ನು ಸೂಚಿಸಿರುವರು. ಇದನ್ನು ಮುಂದೆ ಆಚಾರ್ಯರೇ ಸ್ಫುಟಪಡಿಸುವರು.

**ನೈವ ಜ್ಞೇಯಾಸ್ತಥೋಕ್ತಂ ಪುರಸ್ತಾತ್ । ಏತೇನ 'ದೋಷಜನ್ಯತ್ವಂ ಚ' ಇತ್ಯುಕ್ತಂ ದೃಢೀಕೃತಂ ಭವತಿ । 'ನ ವಾ ಏಕೇನಾಕ್ಷರೇಣ ಛನ್ದಾಂಸಿ ವಿಯನ್ತಿ ನ ದ್ವಾಭ್ಯಾಮ್' ಇತಿ ವಚನಾನ್ ನಾತ್ರ ಛನ್ದೋಭಙ್ಗಃ ಶಙ್ಕನೀಯಃ ।**

**ನನು, ಪ್ರಾಮಾಣ್ಯಾತಿರಿಕ್ತಂ ಕಿಂ ಬಲವತ್ತ್ವಮ್? ಇತ್ಯತಸ್ತದ್ದ್ವಿಧಭಜ್ಯ ದರ್ಶಯತಿ- 'ದ್ವಿವಿಧಮ್' ಇತಿ । ತರ್ಹಿ ಬಹೂನಾಂ ಸ್ವಭಾವಬಲವತಶ್ಚ ವಿರೋಧೇ ಕಥಂ ನಿರ್ಣಯಃ? ಇತ್ಯತ ಆಹ- 'ತಯೋಃ' ಇತಿ ॥ ತತ್ರೋಪಪತ್ತಿಂ ಸೂಚಯಿತುಂ ಸ್ವಭಾವಂ ನಿರೂಪಯತಿ- 'ಉಪಜೀವ್ಯ...' ಇತಿ । ಆದಿಪದೇನ ನಿರವಕಾಶತ್ವಾದಿಗ್ರಹಣಮ್ । ಅತ ಏವೋಪಜೀವ್ಯ-ನಿರವಕಾಶಪ್ರಮಾಣವಿರೋಧಂ ಪ್ರಥಮಮುಕ್ತ್ವಾ ಬಹುಪ್ರಮಾಣ-ವಿರೋಧಃ ಪಶ್ಚಾದುಕ್ತಃ ।**

ಸರಿ, ಇಂದ್ರಿಯಾದಿಗಳ ದೋಷರಾಹಿತ್ಯವು (ದೋಷರಾಹಿತ್ಯದ ಅರಿವು) ದೋಷಜ್ಞಾನಾಧೀನ. ದೋಷವನ್ನು ಯಾವುದರಿಂದ (ಯಾವ ಪ್ರಮಾಣದಿಂದ) ತಿಳಿಯಲಾಗುವುದು? ಎಂದು, ಆದುದರಿಂದ ಉತ್ತರಿಸುವರು 'ಬಲವತ್' ಎಂದು. 'ಚ' ಶಬ್ದವು 'ಆದರೆ' ಎನ್ನುವ ಅರ್ಥದಲ್ಲಿದೆ. ವಸ್ತುತಃ ಕೇಲವರು ಸ್ವರೂಪಾಸಿದ್ಧಿ ಮುಂತಾದ ಅನುಮಾನದ ದೋಷಗಳು ಪ್ರತ್ಯಕ್ಷದಿಂದ ಸಿದ್ಧವಾಗುವವು (ಎಂದು ಅಭಿಮತಿಸಿರುವರು), ಹಾಗಾದರೂ ಇಂದ್ರಿಯ ದೋಷಗಳನ್ನಾದರೋ ಪ್ರಬಲಪ್ರಮಾಣವಿರೋಧದಿಂದಲೇ ತಿಳಿಯಬೇಕು, ಬೇರೇ ಮಾರ್ಗದಿಂದ ಶಕ್ಯವೇ ಇಲ್ಲ[1]. (ಇಂದ್ರಿಯಗಳ) ದೋಷದ ಅರಿವು ಬೇರೇ ರೀತಿಯಲ್ಲಿ ಶಕ್ಯವೇ ಇಲ್ಲ ಎನ್ನುವುದನ್ನು ಈ ಮುಂಚೆಯೇ

1. ಮೂಲದಲ್ಲಿ 'ಪ್ರಬಲಪ್ರಮಾಣದ ವಿರೋಧದಿಂದಲೇ ಪ್ರಮಾಕರಣಗಳಲ್ಲಿನ ದೋಷಜ್ಞಾನವು ಪ್ರಾಪ್ತವಾಗುವುದು, ಬೇರೇ ಮಾರ್ಗವಿಲ್ಲ' ಎಂದು ತಿಳಿಸಲಾಗಿದೆ, ಆದರೆ ಕೆಲವರ ಅಭಿಪ್ರಾಯದಂತೆ ಅನುಮಾನಾದಿ ಕರಣಗಳಲ್ಲಿನ ಅಸಿದ್ಧಿ ಮುಂತಾದ ದೋಷಗಳು ಪ್ರತ್ಯಕ್ಷಾದಿಗಳಿಂದಲೇ ವೇದ್ಯವಲ್ಲವೆ? ಹಾಗಾಗಿ ಪ್ರಬಲಪ್ರಮಾಣ ವಿರೋಧದಿಂದಲೇ ಎನ್ನುವುದು ಹೇಗೆ ಸಮಂಜಸ? ಎನ್ನುವ ಸಂದೇಹವು ಇರಲು ಉತ್ತರಿಸುವರು. ಅನುಮಾನಾದಿಗಳ ದೋಷದ ಅರಿವು ಬೇರೇ ಮಾರ್ಗದಿಂದ ಅರಿವಿಗೆ ಸಿಕ್ಕರೂ ಚಕ್ಷುರಾದಿ ಇಂದ್ರಿಯಗಳಲ್ಲಿನ ದೋಷದ ಅರಿವು ಪ್ರಬಲಪ್ರಮಾಣದ ವಿರೋಧದಿಂದಲೇ ತಿಳಿಯುವುದು. ವಸ್ತುತಃ ಅನುಮಾನಾದಿಗಳಲ್ಲಿನ ಅಸಿದ್ಧಿ ಮುಂತಾದ ದೋಷಗಳೂ ಸಹ ಪ್ರಬಲವಾದ ಪ್ರತ್ಯಕ್ಷಾಗಮಗಳ ವಿರೋಧದಿಂದಲೇ ಎನ್ನುವುದು ಹೃದಯ.

ತಿಳಿಸಿಯಾಗಿದೆ[1]. ಇದರಿಂದ 'ದೋಷಜನ್ಯತ್ವಂ ಚ..' ಎಂದು ತಿಳಿಸಿದ್ದನ್ನು ದೃಢೀಕರಿಸಿದಂತಾಯಿತು. 'ಒಂದು ಅಥವಾ ಎರಡು ಅಕ್ಷರಗಳ ಆಧಿಕ್ಯ ಅಥವಾ ನ್ಯೂನತೆಯಿಂದ ಛಂದಸ್ಸಿನ ಭಂಗವಿಲ್ಲ' ಎನ್ನುವ (ಪ್ರಮಾಣ) ವಚನವಿರುವುದರಿಂದ ಇಲ್ಲಿ ('ಬಲವತ್‌ಪ್ರಮಾಣತಶ್ಚೈವ...' ಎನ್ನುವಲ್ಲಿ ಒಂಭತ್ತು ಅಕ್ಷರಗಳಿದ್ದರೂ) ಛಂದೋಭಂಗವನ್ನು ಸಂದೇಹಿಸಬಾರದು.

ಸರಿ, ಪ್ರಾಮಾಣ್ಯದಿಂದ ಮಿಗಿಲಾದ (ಪ್ರಮಾಣಗಳಲ್ಲಿನ) ಪ್ರಾಬಲ್ಯ ಎಂದರೇನು ? ಎಂದಲ್ಲಿ ಅದನ್ನು ಪೃಥಕ್ಕರಿಸಿ ತಿಳಿಸುವರು '**ದ್ವಿವಿಧಂ..**' ಎಂದು. ಹಾಗಾದಲ್ಲಿ ಬಹುಪ್ರಮಾಣಗಳಿಗೂ ಸ್ವಭಾವಬಲಿಷ್ಠವಾದದ್ದಕ್ಕೂ ವಿರೋಧವು ಪ್ರಾಪ್ತವಾದಲ್ಲಿ ನಿರ್ಣಯವು ಹೇಗೆ? ಎಂದಲ್ಲಿ ಉತ್ತರಿಸುವರು '**ತಯೋಃ**' ಎಂದು. ಅಲ್ಲಿ ಕಾರಣವನ್ನು ಸೂಚಿಸಲು ಸ್ವಭಾವವನ್ನು (ಸ್ವಭಾವದಿಂದ ಬಲಿಷ್ಠತೆಯನ್ನು) ನಿರೂಪಿಸುವರು '**ಉಪಜೀವ್ಯ...**' ಎಂದು. '**ಆದಿ**' ಪದದಿಂದ ನಿರವಕಾಶತ್ವಾದಿಗಳನ್ನು ಪರಿಗ್ರಹಿಸಬೇಕು. ಆದುದರಿಂದಲೇ ಮೊದಲು ನಿರವಕಾಶವಾದ ಉಪಜೀವ್ಯಪ್ರಮಾಣಗಳ ವಿರೋಧವನ್ನು ಹೇಳಿ, ನಂತರದಲ್ಲಿ ಬಹುಪ್ರಮಾಣಗಳ ವಿರೋಧವು ಉಕ್ತವಾಗಿದೆ[2].

**ಪ್ರಮಾಣ ಸಾಮಾನ್ಯ ಲಕ್ಷಣ ಮತ್ತು ಅದರಲ್ಲಿನ ವೈಶಿಷ್ಟ್ಯಗಳು**

**ಯಾಥಾರ್ಥ್ಯಮೇವ ಪ್ರಾಮಾಣ್ಯಂ ತನ್ಮುಖ್ಯಂ ಜ್ಞಾನಶಬ್ದಯೋಃ ।**
**ಜ್ಞಾನಂ ಚ ದ್ವಿವಿಧಂ ಬಾಹ್ಯಂ ತಥಾಽನುಭವರೂಪಕಮ್ ।**
**ಬಲ್ಯೇವಾನುಭವಸ್ತತ್ರ ನಿರ್ದೋಷಂ ತ್ವಕ್ಷಜಾದಿಕಮ್ ।**

ಯಥಾರ್ಥವನ್ನೇ (ವಸ್ತುವು ಹೇಗೆ ಇದೆಯೋ ಹಾಗೆ ಗ್ರಹಿಸುವಿಕೆಯನ್ನು) ಪ್ರಮಾಣ (ಎಂದು ತಿಳಿಯುವುದು), ಜ್ಞಾನ ಮತ್ತು ಆಗಮಗಳಿಗೆ

1. 'ದೋಷಜನ್ಯತ್ವಂ ಚ ಬಲವತ್‌ಪ್ರಮಾಣವಿರೋಧಾದೇವ ಜ್ಞಾಯತೇ' ಎನ್ನುವ ಮೂಲದ ವ್ಯಾಖ್ಯಾನದ ಸಂದರ್ಭದಲ್ಲಿ (ಪುಟ 402ರಲ್ಲಿ).

2. ಈ ಹಿಂದೆ (ಪುಟ 383,392ರಲ್ಲಿ) ಮೊದಲು ಉಪಜೀವ್ಯವಾಗಿ ಸ್ವಾಭಾವಿಕಪ್ರಬಲವಾದ ಪ್ರತ್ಯಕ್ಷ ಮತ್ತು ಅನುಮಾನದ ವಿರೋಧವನ್ನು ಐಕ್ಯಾಗಮಕ್ಕೆ ತಿಳಿಸಿ, ನಂತರದಲ್ಲಿ ಬಹುಪ್ರಮಾಣದ ವಿರೋಧವನ್ನು ತಿಳಿಸಲಾಗಿದೆ ಎನ್ನುವದನ್ನು ಗಮನಿಸುವುದು ಎಂದು ಭಾವ.

ಅದು(ಪ್ರಾಮಾಣ್ಯವು) ಮುಖ್ಯ. ಜ್ಞಾನವು ಎರಡು ವಿಧ- ಬಾಹ್ಯ ಮತ್ತು ಅನುಭವಾತ್ಮಕ ಎಂದು. ಅವುಗಳಲ್ಲಿ ಅನುಭವಾತ್ಮಕವಾದದ್ದು ಪ್ರಬಲ. ನಿರ್ದುಷ್ಟವಾದ ಇಂದ್ರಿಯಾದಿಗಳಿಂದ ಜನ್ಯವಾದದ್ದು ಪ್ರಮಾಣ.

**ನನು, ಏತೇಷ್ವೇವಂ ಪರಸ್ಪರವಿಲಕ್ಷಣೇಷು ಪ್ರತ್ಯಕ್ಷಾದಿಷ್ವೇಕಸ್ಯ ಪ್ರಮಾಣಶಬ್ದಸ್ಯ ಪ್ರವೃತ್ತಿಃ ಕಥಮ್? ಇತ್ಯತಃ ಸಾಮಾನ್ಯಲಕ್ಷಣಯೋಗಾದಿತಿ ಭಾವೇನ ತದಾಹ- 'ಯಾಥಾರ್ಥ್ಯಮೇವ' ಇತಿ । ಯಥಾಽವಸ್ಥಿತಜ್ಞೇಯ-ವಿಷಯ(ಯೀಕಾರಿ)ತ್ವಂ ಯಾಥಾರ್ಥ್ಯಮ್, ತತ್ಪ್ರಾಮಾಣ್ಯಂ ಪ್ರಮಾಣಶಬ್ದ-ಪ್ರವೃತ್ತಿನಿಮಿತ್ತಮ್ । ಏವಶಬ್ದೇನ ಅನಧಿಗತಾರ್ಥಗನ್ತೃತ್ವಾದಿಕಂ ಪರೇಷಾಂ ಪ್ರಮಾಣಲಕ್ಷಣಂ ಪರಾಚಷ್ಟೇ । ಏತೇನ 'ಬಹುಪ್ರಮಾಣಸಂವಾದಶ್ಚ' ಇತ್ಯುಕ್ತಃ ಪ್ರಮಾಣಸಂಪ್ಲವೋ ದೃಢೀಕೃತೋ ಭವತಿ ।**

ಹಾಗಾದಲ್ಲಿ, ಪರಸ್ಪರ ವಿಲಕ್ಷಣಗಳಾದ ಈ ಪ್ರತ್ಯಕ್ಷಾದಿಗಳಲ್ಲಿ 'ಪ್ರಮಾಣ' ಎನ್ನುವ ಒಂದೇ ಶಬ್ದದಿಂದ ಹೇಗೆ ವ್ಯವಹಾರ? ಎಂದಲ್ಲಿ, (ಪ್ರತ್ಯಕ್ಷಾದಿಗಳಲ್ಲಿ) ಸಾಮಾನ್ಯವಾದ (ಒಂದೇ) ಲಕ್ಷಣದ ಯೋಗವಿರುವುದರಿಂದ ಎಂದು ಉತ್ತರಿಸುವರು '**ಯಾಥಾರ್ಥ್ಯಂ**' ಎಂದು. 'ವಸ್ತುವು ಹೇಗೆ ಇರುವುದೋ ಹಾಗೆ ಗ್ರಹಿಸುವುದು' ಯಥಾರ್ಥ, ಇದು **ಪ್ರಾಮಾಣ್ಯಂ**- ಪ್ರಮಾಣ ಎನ್ನುವ ಶಬ್ದದಿಂದ ವ್ಯವಹರಿಸಲು ಕಾರಣವು (ಆಗಿದೆ). '**ಏವ**' ಶಬ್ದದಿಂದ 'ಅನಧಿ ಗತಾರ್ಥಗನ್ತೃತ್ವ...' ಮುಂತಾದ ಪರರ ಪ್ರಮಾಣಲಕ್ಷಣಗಳನ್ನು ನಿರಾಕರಿಸುವರು. ಇದರಿಂದ (ಅನಧಿಗತಾರ್ಥ...' ಇತ್ಯಾದಿ ಪ್ರಮಾಣಲಕ್ಷಣ ಗಳನ್ನು ಒಪ್ಪದಿರುವುದರಿಂದ) 'ಬಹುಪ್ರಮಾಣಸಂವಾದಶ್ಚ..' ಇತ್ಯಾದಿಗಳಿಂದ ತಿಳಿಸಿದ ಪ್ರಮಾಣಸಂಪ್ಲವವನ್ನು ದೃಢೀಕರಿಸಿದಂತಾಯಿತು[1].

---

1. 'ಬಹುತ್ವಕ್ಕೂ ಮತ್ತು ಪ್ರಾಮಾಣ್ಯಕ್ಕೂ ಏಕದೇಶವೃತ್ತಿತ್ವವು ಇಲ್ಲ' ಎಂದು (ಪು. 395ರಲ್ಲಿ) ಪರವಾದಿಗಳು ಪ್ರಶ್ನಿಸಿದ್ದರು. ಅವರು ಅಭಿಮತಿಸಿರುವಂತೆ 'ಒಂದೇ ವಿಷಯವನ್ನು ಒಂದಕ್ಕಿಂತ ಹೆಚ್ಚಿನ ಕರಣಗಳು ಬೋಧಿಸಿದಲ್ಲಿ, ಅನಂತರದ ಕರಣಗಳು ಪುನರುಕ್ತವಾಗುವವು, ಅನಧಿ-ಗತಾರ್ಥಗನ್ತೃತ್ವರೂಪ ಪ್ರಾಮಾಣ್ಯವಿಲ್ಲ, ತನ್ನಿಮಿತ್ತ ಅಪ್ರಮಾಣ' ಎಂದು. ಪ್ರಕೃತ ಪ್ರಾಚೀನ ಶಾಸ್ತ್ರಕಾರರು ತಿಳಿಸಿದ ಪ್ರಾಮಾಣ್ಯದ ಲಕ್ಷಣದ ರೀತಿಯಲ್ಲಿ 'ಪ್ರಾಮಾಣ್ಯಕ್ಕೂ ಬಹುತ್ವಕ್ಕೂ ವಿರೋಧವಿಲ್ಲ' ಎಂದು ತಿಳಿಸಿದಂತಾಗಿದೆ, ಪ್ರಮಾಣಸಂಪ್ಲವದಲ್ಲಿ ಘಟಕವಾದ ಅನೇಕ ಪ್ರಮಾಣಗಳ ಪ್ರಾಮಾಣ್ಯಕ್ಕೆ ಯಾವ ಬಾಧಕಗಳು ಇಲ್ಲ ಎಂದು ಭಾವ.

**ಅನುಭವವಿರುದ್ಧವಾದದು ಅಪ್ರಮಾಣ**

ನನು, ಜ್ಞೇಯವಿಷಯೀಕಾರಿತ್ವಂ ಜ್ಞಾನಧರ್ಮಃ, ತತ್ ಕಥಮ್ ಇಂದ್ರಿಯಾದೀನಾಂ ಪ್ರಾಮಾಣ್ಯಮುಕ್ತಮ್? ಇತಿ ಚೇತ್, ಸತ್ಯಮ್ । ದ್ವಿವಿಧಂ ಪ್ರಮಾಣಂ ಜ್ಞಾನಂ ತತ್ಕರಣಂ ಚ । ತತ್ರ 'ಜ್ಞಾನೇ ಮುಖ್ಯಮಿದಂ ಲಕ್ಷಣಂ, ತಸ್ಯ ಸಾಕ್ಷಾದ್‌ಜ್ಞೇಯವಿಷಯೀಕಾರಿತ್ವಾತ್ । ಇಂದ್ರಿಯಲಿಙ್ಗ-ಶಬ್ದೇಷು ತು ಜ್ಞಾನದ್ವಾರಾ ಜ್ಞೇಯವಿಷಯೀಕಾರಿತ್ವಾದಮುಖ್ಯಮ್' ಇತ್ಯತೋ ನ ಕಶ್ಚಿದ್ದೋಷ ಇತಿ ಭಾವೇನಾಽಹ- '**ತತ್**' ಇತಿ । ಕರಣೇಷ್ವಪೀಂದ್ರಿಯಲಿಙ್ಗಾಪೇಕ್ಷಯಾ ಶಬ್ದವಿಶೇಷಸ್ಯ- ವೇದಸ್ಯ ಯಾಥಾರ್ಥ್ಯಂ ಮುಖ್ಯಮ್ । 'ಇಂದ್ರಿಯಲಿಙ್ಗಯೋರಿವ ತಸ್ಯ ಸರ್ವಥಾಽಯಾಥಾರ್ಥ್ಯಾಭಾವಾದ್' ಇತಿ ಪ್ರಸಙ್ಗಾತ್ ಸೂಚಯಿತುಂ ಶಬ್ದಗ್ರಹಣಂ ಕೃತಂ 'ನ ತು ಜ್ಞಾನಸಮಕಕ್ಷತಯಾ' ಇತಿ ಜ್ಞಾತವ್ಯಮ್ । 'ಜ್ಞಾನೇ ಯಾಥಾರ್ಥ್ಯಂ ಮುಖ್ಯಮ್' ಇತ್ಯುಕ್ತಮ್ । ತದಪಿ ನ ಸರ್ವತ್ರೈಕಪ್ರಕಾರಮಿತಿ ವಕ್ತುಂ ತದ್‌ದ್ವೈವಿಧ್ಯಮಾಹ '**ಜ್ಞಾನಮ್**' ಇತಿ । ತತ್ಕಥಮ್? ಇತ್ಯತ ಆಹ '**ಬಾಹ್ಯಮ್**' ಇತಿ । ಆತ್ಮಸ್ವರೂಪಾತಿರಿಕ್ತಮ್ । ಯದರ್ಥಂ ದ್ವೈವಿಧ್ಯಮುಕ್ತಂ ತದಾಹ- '**ಬಲ್ಯೇವ**' ಇತಿ । ಅನುಭವ ಏವೇತ್ಯನ್ವಯಃ । ಕುತಃ? ಇತ್ಯತ ಆಹ- '**ನಿರ್ದೋಷಮ್**' ಇತಿ । '**ಬಾಹ್ಯಮ್**' ಇತಿ ಪ್ರಕೃತೇ '**ಅಕ್ಷಜಾದಿಕಮ್**' ಇತಿ ವಚನಂ ತತ್ಸ್ವರೂಪನಿರೂಪಣಾರ್ಥಮ್ । 'ಇಂದ್ರಿಯಲಿಙ್ಗಶಬ್ದಜನ್ಯಂ ಯನ್ಮನೋ-ವೃತ್ತಿರೂಪಂ ತದ್ಬಾಹ್ಯಮ್, ತನ್ನಿರ್ದೋಷಕರಣಜನ್ಯಮೇವ ಪ್ರಮಾಣಮ್, ಅನ್ಯದಪ್ರಮಾಣಮ್' ಇತಿ ದ್ವೈವಿಧ್ಯಸಂಭವೇನ ಕದಾಚಿತ್ ಸಂಶಯಾಸ್ಪದತ್ವಾದಮುಖ್ಯಮ್ । 'ಅನುಭವಸ್ತು ನಿರ್ದೋಷ ಏವ' ಇತಿ ಪ್ರಾಗೇವೋಕ್ತಮಿತಿ ಭಾವಃ । ಏತೇನ 'ನ ಚಾನುಭವವಿರೋಧೇ' ಇತ್ಯುಕ್ತಂ ದೃಢೀಕೃತಂ ಭವತಿ ।

ಹಾಗಾದಲ್ಲಿ, 'ಜ್ಞೇಯವಿಷಯೀಕಾರಿತ್ವ' ಎನ್ನುವುದು ಜ್ಞಾನದ ಧರ್ಮ,

ಆದುದರಿಂದ ಇಂದ್ರಿಯಾದಿಗಳು ಹೇಗೆ ಪ್ರಮಾಣವಾಗುವು[1]? ಎಂದಲ್ಲಿ, ನಿಜ, ಪ್ರಮಾಣವು ಎರಡುವಿಧ. ಜ್ಞಾನ ಮತ್ತು ಅದರ ಕರಣ (ಎಂದು). ಆ ಜ್ಞಾನದಲ್ಲಿ ಈ (ಪ್ರಾಮಾಣ್ಯದ) ಲಕ್ಷಣವು ಮುಖ್ಯ, ಅದಕ್ಕೆ ಜ್ಞೇಯವಿಷಯೀಕಾರಿತ್ವವು ನೇರವಾಗಿರುವುದರಿಂದ. ಇಂದ್ರಿಯ-ಲಿಂಗ-ಶಬ್ದಗಳಲ್ಲಾದರೋ ಜ್ಞಾನದ ಮುಖಾಂತರವಾಗಿ ಜ್ಞೇಯವಿಷಯೀಕಾರಿತ್ವವು ಇರುವುದರಿಂದ ಅಮುಖ್ಯ ಎಂದು, ಆದುದರಿಂದ ಯಾವ ದೋಷವೂ ಇಲ್ಲ ಎನ್ನುವ ಭಾವದಿಂದ ಹೇಳುವರು **'ತತ್..'** ಎಂದು. (ಜ್ಞಾನ)ಕರಣಗಳಲ್ಲೂ ಸಹ ಇಂದ್ರಿಯ ಮತ್ತು ಲಿಂಗಗಳಿಗಿಂತಲೂ ಶಬ್ದವಿಶೇಷವಾದ ವೇದಕ್ಕೆ ಯಾಥಾರ್ಥ್ಯವು ಮುಖ್ಯ. 'ಇಂದ್ರಿಯ ಲಿಂಗಗಳಂತೆ ಅದಕ್ಕೆ (ವೇದಕ್ಕೆ) ಪೂರ್ಣ ಅಪ್ರಾಮಾಣ್ಯವು ಇಲ್ಲ' ಎಂದು ಸಾಂದಾರ್ಭಿಕವಾಗಿ ಸೂಚಿಸಲು. 'ಆಗಮದ' ಪರಿಗ್ರಹಣವನ್ನು (ಪೃಥಕ್ಕಾಗಿ) ಮಾಡಲಾಗಿದೆ, ಹೊರತು ಜ್ಞಾನದ ಸಮಾನವಾಗಿ (ಪ್ರಾಮಾಣ್ಯವು ಅದಕ್ಕೆ ಇದೆ ಎಂದಲ್ಲ) ಎಂದು ತಿಳಿಯುವುದು[2]. ಜ್ಞಾನದಲ್ಲಿ ಯಾಥಾರ್ಥ್ಯವನ್ನು ಮುಖ್ಯ ಎಂದು ಹೇಳಲಾಗಿದೆ, ಅದೂ ಸಹ ಎಲ್ಲೆಡೆ ಒಂದೇ ತರಹವಲ್ಲ ಎಂದು ತಿಳಿಸಲು ಅದರಲ್ಲಿನ (ಜ್ಞಾನದಲ್ಲಿನ) ದ್ವೈವಿಧ್ಯವನ್ನು ಹೇಳುತ್ತಾರೆ **'ಜ್ಞಾನಂ ಚ'** ಎಂದು. ಅದು ಹೇಗೆ? ಎಂದಲ್ಲಿ ಉತ್ತರಿಸುವರು **'ಬಾಹ್ಯಂ'** ಎಂದು.

---

1. 'ಜ್ಞೇಯವಿಷಯೀಕಾರಿತ್ವಂ- ವಿಷಯವನ್ನು ವಿಷಯೀಕರಿಸುವಿಕೆ' ಎನ್ನುವುದು ಪ್ರಾಮಾಣ್ಯದ ಲಕ್ಷಣ. ಈ ಧರ್ಮವು ಜ್ಞಾನದಲ್ಲಿ ಮಾತ್ರ ಇರುವುದು, ಇಂದ್ರಿಯಾದಿಗಳಲ್ಲಿ ಇಲ್ಲ, ಇಂದ್ರಿಯಾದಿಗಳು ವಿಷಯಪದಾರ್ಥದಿಂದ ಸಂಪರ್ಕವನ್ನು ಮಾತ್ರ ಹೊಂದಿರುವವು. ಹಾಗಾಗಿ ಇಂದ್ರಿಯಾದಿಗಳು ಪ್ರಮಾಣವಾಗಲಾರವು, ಅಥವಾ ಪ್ರಾಮಾಣ್ಯದ ಲಕ್ಷಣಕ್ಕೆ ಅವ್ಯಾಪ್ತಿರೂಪ ದೋಷವು ಪ್ರಾಪ್ತವಾಗುವುದು ಎಂದು ಸಂದೇಹದ ಭಾವ.
2. ಇಂದ್ರಿಯಾನುಮಾನಗಳಂತೆ ಶಬ್ದವೂ ಜ್ಞಾನಕ್ಕೆ ಕರಣವಾದುದರಿಂದ ಮುಖ್ಯ ಯಾಥಾರ್ಥ್ಯವನ್ನು ಹೊಂದಿಲ್ಲ. ಆದರೂ ಶುಕ್ತಿಯನ್ನು 'ಇದಂ ರಜತಂ' ಎಂದು ಪ್ರತ್ಯಕ್ಷವು ಪರಿಗ್ರಹಿಸಿದಾಗ ಆ ಪ್ರತ್ಯಕ್ಷವನ್ನು ಪೂರ್ಣವಾಗಿ ಅಯಥಾರ್ಥವೆಂದೇ ನಿರ್ಣಯಿಸಿ, ಆ ಅರಿವಿಗೆ ಅಪ್ರಾಮಾಣ್ಯವನ್ನು ಒಪ್ಪಲಾಗುವುದು, ಆದರೆ 'ಮೃದಬ್ರವೀತ್' ಎಂದು ವೇದವು ತಿಳಿಸಿದಾಗ, 'ಮೃದಭಿಮಾನಿಯು ನುಡಿಯಿತು' ಎಂದು ಅಮುಖ್ಯಾರ್ಥವನ್ನು ಪರಿಕಲ್ಪಿಸಿ, ಆ ವಾಕ್ಯಕ್ಕೆ ಪ್ರಾಮಾಣ್ಯವನ್ನೇ ಒಪ್ಪಲಾಗುವುದು. 'ನದೀತೀರೇ ಪಂಚಫಲಾನಿ ಸನ್ತಿ' ಎನ್ನುವ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಒಪ್ಪಿದಂತೆ ವೇದವಾಕ್ಯಗಳಿಗೆ ಸರ್ವಥಾ ಅಪ್ರಾಮಾಣ್ಯವನ್ನು ಒಪ್ಪಲಾಗಿಲ್ಲ ಎಂದು ಭಾವ.

ಆತ್ಮಸ್ವರೂಪದಿಂದ ಭಿನ್ನವಾದದ್ದು[1]. ದ್ವೈವಿಧ್ಯವನ್ನು ತಿಳಿಸಿದ್ದರ ಉದ್ದೇಶವನ್ನು ತಿಳಿಸುವರು '**ಬಲ್ಯೇವ**' ಎಂದು. 'ಏವ' ಶಬ್ದಕ್ಕೆ '**ಅನುಭವಃ**' ಶಬ್ದದೊಡನೆ ಅನ್ವಯ[2]. ಏಕೆ ಎಂದಲ್ಲಿ ಉತ್ತರಿಸುವರು '**ನಿರ್ದೋಷಂ**' ಎಂದು. '**ಬಾಹ್ಯಂ**' ಎಂದು ಪ್ರಸಕ್ತವಾದದ್ದನ್ನು '**ಅಕ್ಷಜಾದಿಕಂ**' ಎಂದು (ಈಗ) ಹೇಳುವುದು, ಅದರ (ಬಾಹ್ಯಜ್ಞಾನದ) ಸ್ವರೂಪವನ್ನು ನಿರೂಪಿಸಲು. ಇಂದ್ರಿಯ-ಲಿಂಗ-ಶಬ್ದಗಳಿಂದ ಜನ್ಯವಾದ ಮನೋವೃತ್ತಿ- ರೂಪವನ್ನು (ಜ್ಞಾನವನ್ನು) ಬಾಹ್ಯ (ಜ್ಞಾನ) ಎನ್ನುವರು. ಅದು ನಿರ್ದುಷ್ಟಕರಣಗಳಿಂದ ಜನ್ಯವಾದಲ್ಲಿ ಮಾತ್ರ ಪ್ರಮಾಣ, ಹಾಗಾಗದೇ ಇದ್ದಲ್ಲಿ (ದುಷ್ಟೇಂದ್ರಿಯಾದಿಗಳಿಂದ ಜನ್ಯವಾದಲ್ಲಿ) ಅಪ್ರಮಾಣ ಎಂದು (ಬಾಹ್ಯಜ್ಞಾನವು) ಎರಡು ವಿಧವಾಗಿರುವುದರಿಂದ, ಕೆಲವೊಮ್ಮೆ ಸಂದೇಹಕ್ಕೆ ಎಡೆಯಿರುವುದರಿಂದ ಅಮುಖ್ಯ (ಎಂದು ತಿಳಿಯುವುದು). ಅನುಭವವಾದರೋ ನಿರ್ದುಷ್ಟವೇ ಎಂದು ಈ ಮುಂಚೆಯೇ ಹೇಳಲಾಗಿದೆ ಎಂದು ಭಾವ[3]. ಇದರಿಂದ (ಅನುಭವಕ್ಕೆ ಪ್ರಾಬಲ್ಯವನ್ನು ಹೇಳಿದ್ದರಿಂದ) '**ನ ಚಾನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಮ್**' ಎಂದು (ಪುಟ. 392ರಲ್ಲಿ) ತಿಳಿಸಿರುವುದನ್ನು ಧೃಢೀಕರಿಸಿದಂತಾಯಿತು.

**ಅನುಭವಕ್ಕೆ ವಿರುದ್ಧವಾದದು ಅಪ್ರಮಾಣ ಎನ್ನುವದರ ಧೃಢೀಕರಣ**

**ಅನುಪ್ರಮಾಣತಾಂ ಯಾತಿ ತಥಾಽಕ್ಷಾದಿತ್ರಯಂ ತತಃ ।**

1. ಜ್ಞಾನದಲ್ಲಿ ಬಾಹ್ಯ ಆಂತರ ಎಂಬ ಭೇದವು ಸಲ್ಲದು. ಎಲ್ಲ ಬಗೆಯ ಅರಿವೂ ಆಂತರವೆ, ಎಂಬ ಶಂಕೆಗೆ ಉತ್ತರ- ಆತ್ಮಸ್ವರೂಪಭೂತಜ್ಞಾನ ಮತ್ತು ಅದರಿಂದ ಭಿನ್ನವಾದದ್ದು ಮನೋವೃತ್ತಿಜ್ಞಾನ ಎಂದು ಎರಡು ಬಗೆ ಎಂದು ತಿಳಿಯುವುದು.

2. 'ಅನುಭವವು ದುರ್ಬಲವಲ್ಲ ಅದೂ ಪ್ರಬಲವೇ ಆಗಿದೆ' ಎಂದು ಅರ್ಥವು ಪ್ರತಿಭಾಸವಾಗುವ ಸಂಭವವಿದೆ. ಆದರೆ ಪ್ರಕೃತ ವಿವಕ್ಷಿತವಾದ ಅರ್ಥವು ಅದಲ್ಲ. 'ಉಳಿದ ಎಲ್ಲ ಪ್ರಮಾಣಗಳಿಗಿಂತಲೂ ಅನುಭವವೇ ಪ್ರಬಲ' ಎಂಬುವುದು ವಿವಕ್ಷಿತವಾಗಿದೆ. ತನ್ನಿಮಿತ್ತ ಅವಧಾರಣಾರ್ಥಕವಾದ 'ಏವ' ಶಬ್ದದ ಅನ್ವಯವು ಎಲ್ಲಿ? 'ಅನುಭವಃ ಏವ ಬಲೀ' ಎಂದು ಟೀಕೆಯಲ್ಲಿ ತಿಳಿಸಲಾಗಿದೆ.

3. 'ಅನುಭವದಿಂದ ವಿರುದ್ಧವಾದ ಆಗಮಕ್ಕೆ ಪ್ರಾಮಾಣ್ಯವನ್ನು ಒಪ್ಪಿದಲ್ಲಿ, ಐಕ್ಯಾಗಮಪ್ರಾಮಾಣ್ಯದ ಅನುಭವವೂ ಅಪ್ರಮಾಣವಾದೀತು, ತನ್ನಿಮಿತ್ತ ಅನುಭವವನ್ನು ಪ್ರಬಲಪ್ರಮಾಣ ಎಂದು ಅಂಗೀಕರಿಸಲೇ ಬೇಕು' ಎಂದು ಈ ಹಿಂದೆ (ಪುಟ. 391ರಲ್ಲಿ) ತಿಳಿಸಲಾಗಿದೆ ಎಂದು ಭಾವ.

**ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್ ।**
**ಉಪಜೀವ್ಯವಿರೋಧೇ ತು ನ ಪ್ರಾಮಾಣ್ಯಮಮುಷ್ಯ ಚ ॥**

ಪ್ರತ್ಯಕ್ಷಾದಿ ಮೂರು ಅಮುಖ್ಯಪ್ರಮಾಣವಾದುದರಿಂದ ಅನುಪ್ರಮಾಣತ್ವವನ್ನು ಹೊದಿವೆ. ಆ ಮೂರರಲ್ಲಿ ಆಗಮವೇ ಪ್ರಬಲ, ಆದರೆ ಇದು ಸಾಪವಾದ. ಆದರೆ ಉಪಜೀವ್ಯದ ವಿರೋಧವು ಇದ್ದಲ್ಲಿ ಆಗಮಕ್ಕೂ ಸಹ ಪ್ರಾಮಾಣ್ಯವು ಇಲ್ಲ.

**ಯದುಕ್ತಂ** 'ಜ್ಞಾನೇ ಯಾಥಾರ್ಥ್ಯಂ ಮುಖ್ಯಂ ಕರಣೇಷ್ವಮುಖ್ಯಮ್' ಇತಿ, ತದುಪಪಾದಯತಿ- **'ಅನುಪ್ರಮಾಣತಾಮ್'** ಇತಿ । **ತತಃ-** ಪ್ರಾಮಾಣ್ಯಸ್ಯಾಮುಖ್ಯತ್ವಾದೇವ ಹ್ಯಕ್ಷಾದಿತ್ರಯಮನುಪ್ರಮಾಣಶಬ್ದ-ವಾಚ್ಯತಾಂ ಯಾತಿ । ತಥಾ ಪ್ರಾಮಾಣ್ಯಸ್ಯ ಮುಖ್ಯತ್ವಾದೇವ ಹಿ ಜ್ಞಾನಂ ಕೇವಲಪ್ರಮಾಣಶಬ್ದವಾಚ್ಯತಾಂ ಯಾತಿ । ಪ್ರಾಮಾಣಿಕಪ್ರಯೋಗೇಷ್ವನ್ಯಥಾ ತನ್ನ ಸ್ಯಾದಿತ್ಯರ್ಥಃ । 'ತನ್ಮುಖ್ಯಂ ಜ್ಞಾನಶಬ್ದಯೋಃ' ಇತ್ಯುಕ್ತಮ್ । ತತ್ರ ಶಬ್ದಸ್ಯ ಜ್ಞಾನಸಮಕಕ್ಷತಾಪ್ರತೀತಿಂ ನಿವಾರಯನ್ ತಸ್ಯಾಪವಾದಮಾಹ- **'ಪ್ರಾಬಲ್ಯಮ್'** ಇತಿ । **ತೇಷು** ತ್ರಿಷ್ವಕ್ಷಾದಿಷು ಕರಣೇಷು ಮಧ್ಯೇ **ಯದಾಗಮಸ್ಯ-** ವೇದಸ್ಯ **ಪ್ರಾಬಲ್ಯ**ಮುಕ್ತಂ **ತಜ್ಜಾತ್ಯೈವ ಸ್ಮೃತಮ್** ಉತ್ಸರ್ಗೇಣೈವ ಸ್ಮರ್ತವ್ಯಂ ನ ತು ನಿಯತಮ್ । ಜಾತೇರುತ್ಸರ್ಗ-ವಿಷಯತ್ವಾಜ್ಜಾತಿಗ್ರಹಣೇನೋತ್ಸರ್ಗೋ ಲಕ್ಷ್ಯತೇ । ಕುತ ಃ? ಇತ್ಯತ ಆಹ- **'ಉಪಜೀವ್ಯ..'** ಇತಿ । ನಿರವಕಾಶಾದೇರುಪಲಕ್ಷಣಮೇತತ್ । **ಅಮುಷ್ಯ-** ವೇದಸ್ಯಾಪಿ । ಅನೇನ **'ಪ್ರತ್ಯಕ್ಷಾದೇಃ ಆಗಮಸ್ಯ'** ಇತ್ಯುಕ್ತಂ ದೃಢೀಕೃತಂ ಭವತಿ ।

'ಯಾಥಾರ್ಥ್ಯವು ಜ್ಞಾನಕ್ಕೆ ಮುಖ್ಯ, ಕರಣಗಳಲ್ಲಿ ಅಮುಖ್ಯ' ಎಂದು ಏನನ್ನು ತಿಳಿಸಲಾಗಿದೆಯೋ ಅದನ್ನು ಉಪಪಾದಿಸುವರು **'ಅನು-ಪ್ರಮಾಣತಾಮ್'** ಎಂದು. **ತತಃ-** ಪ್ರಾಮಾಣ್ಯವು ಅಮುಖ್ಯವಾದುದ-ರಿಂದಲೇ ಅಕ್ಷಾದಿಗಳೂ ಮೂರೂ 'ಅನುಪ್ರಮಾಣ' ಎಂಬ ಶಬ್ದದಿಂದ ವ್ಯವಹೃತವಾಗಿವೆ. ಹಾಗೆಯೇ ಪ್ರಾಮಾಣ್ಯವು ಮುಖ್ಯವಾದುದರಿಂದಲೇ ಜ್ಞಾನವು 'ಕೇವಲಪ್ರಮಾಣ' ಎಂಬ ಶಬ್ದದಿಂದ ವ್ಯವಹೃತವಾಗಿದೆ.

ಪ್ರಾಮಾಣಿಕಪ್ರಯೋಗಗಳಲ್ಲಿ (ಇದಕ್ಕೆ) ವಿರುದ್ಧವಾಗಿ ಇರಲಾರದು ಎಂದು ಅರ್ಥ. '**ತನ್ಮುಖ್ಯಂ ಜ್ಞಾನಶಬ್ದಯೋಃ**' ಎಂದು ಈ ಹಿಂದೆ (ಪುಟ. 416ರಲ್ಲಿ) ಹೇಳಲಾಗಿದೆ. ಅಲ್ಲಿ ಜ್ಞಾನದ ಸಮಾನವಾದ (ಪ್ರಾಮಾಣ್ಯವು ಶಬ್ದಕ್ಕೆ) ತೋರುತ್ತಿದೆ, (ಅದನ್ನು) ನಿವಾರಿಸಲು ಅಪವಾದವನ್ನು ತಿಳಿಸುತ್ತಿದ್ದಾರೆ '**ಪ್ರಾಬಲ್ಯಂ**' ಎಂದು. **ತೇಷು ತ್ರಿಷು**- ಅಕ್ಷಾದಿ ಮೂರು ಕರಣಗಳ ಮಧ್ಯದಲ್ಲಿ, **ಯದಾಗಮಸ್ಯ**- ಯಾವ ವೇದಕ್ಕೆ ಪ್ರಾಬಲ್ಯವನ್ನು ಹೇಳಲಾಗಿದೆಯೋ ಅದು **ತಜ್ಜಾತ್ಯೈವ ಸ್ಮೃತಮ್**- ಸಾಪವಾದ ಎಂದು ತಿಳಿಯುವುದು, ಹೊರತಾಗಿ ನಿಯತವಾದುದಲ್ಲ. ಜಾತಿಯು ಸಾಪವಾದವಿಷಯವಾದುದರಿಂದ, ಜಾತಿ ಎಂದು ಪರಿಗ್ರಹಣ ಮಾಡಿರುವದರಿಂದ ಉತ್ಸರ್ಗವು (ಸಾಪವಾದತ್ವವು) ಊಹಿತವಾಗುವುದು[1]. ಏಕೆ (ಸಾಪವಾದ) ಎಂದಲ್ಲಿ ಉತ್ತರಿಸುವರು '**ಉಪಜೀವ್ಯ...**' ಎಂದು. ಇದು (ಉಪಜೀವ್ಯ ಎನ್ನುವುದು) ನಿರವಕಾಶಾದಿ- ಗಳಿಗೂ ಸೂಚಕ. **ಅಮುಷ್ಯ**- ವೇದಕ್ಕೆ. ಇದರಿಂದ (ಉಪಜೀವ್ಯವಿರೋಧವು ಬಂದಲ್ಲಿ ವೇದಕ್ಕೆ ಆ ವಿಷಯದಲ್ಲಿ ಅಪ್ರಾಮಾಣ್ಯವನ್ನು ಹೇಳಿದ್ದರಿಂದ.) '**ಪ್ರತ್ಯಕ್ಷಾದೇರಾಗಮಸ್ಯ**' ಎಂದು ಹಿಂದೆ ತಿಳಿಸಿದ್ದನ್ನು ಧೃಢೀಕರಿಸಿದಂತಾಯಿತು[2].

---

1. ಆಗಮವು ಪ್ರಬಲ ಎನ್ನುವುದು ಸಾಪವಾದ ನಿಯಮ, ಕೆಲವು ಸಂದರ್ಭದಲ್ಲಿ ಪ್ರತ್ಯಕ್ಷಾದಿಗಳೇ ಆಗಮದಿಂದ ಪ್ರಬಲವಾಗಿರುವುದೂ ಕಂಡಿದೆ. ಆದ್ದರಿಂದ ಮೂಲದಲ್ಲಿನ 'ತ್ರಿಷು ಆಗಮಸ್ಯೈವ ಜಾತ್ಯಾ ಪ್ರಾಬಲ್ಯಮ್' ಎನ್ನುವ ವಾಕ್ಯಕ್ಕೆ ಆಗಮವು ಸ್ವಾಭಾವಿಕವಾಗಿ ಪ್ರಬಲ ಎಂದು ಅರ್ಥೈಸಬಾರದು, ಮುಂದಿನ ವಾಕ್ಯಗಳಿಂದ ವಿರೋಧವು ಪ್ರಾಪ್ತವಾಗು- ವುದರಿಂದ. ಆದುದರಿಂದ ಜಾತ್ಯಾ ಎನ್ನುವುದಕ್ಕೆ ಉತ್ಸರ್ಗೇಣ ಎಂದು ಲಕ್ಷಣಾರ್ಥವನ್ನು ಪರಿಗ್ರಹಿಸಲಾಗಿದೆ. ಜಾತಿ ಶಬ್ದಕ್ಕೆ ಉತ್ಸರ್ಗದಲ್ಲಿ ಹೇಗೆ ಲಕ್ಷಣಾ ಎಂಬ ಸಂದೇಹಕ್ಕೆ ಉತ್ತರವಾಗಿ 'ಜಾತೇರುತ್ಸರ್ಗವಿಷಯತ್ವಾತ್' ಎಂದು ಟೀಕಾದಲ್ಲಿ ತಿಳಿಸಿ, ಲಕ್ಷಣಾಸಂಬಂಧವು- ವಿಷಯ- ವಿಷಯೀಭಾವ ಸಂಬಂಧ ಎಂದು ತಿಳಿಸಿದಂತಾಯಿತು. 'ಮಾ ಹಿಂಸ್ಯಾತ್ ಸರ್ವಾ ಭೂತಾನಿ' ಈ ಮುಂತಾದ ಸಂದರ್ಭಗಳಲ್ಲಿ ನಿಷೇಧಕ್ಕೆ ವಿಷಯವಾದದ್ದು ಹಿಂಸ್ಯತ್ವಜಾತಿ. ಆದರೆ ಹಿಂಸ್ಯತ್ವ ಸಾಮಾನ್ಯವು ನಿಷೇಧಕ್ಕೆ ವಿಷಯವಾಗದೆ, ಯಾಜ್ಞೀಯಹಿಂಸ್ಯತ್ವದ ಹೊರತು ಪಡಿಸಿದ ಹಿಂಸ್ಯತ್ವವು ನಿಷೇಧಕ್ಕೆ ವಿಷಯವಾಗಿದೆ ಎಂದು. ಜಾತಿ ಶಬ್ದವು ಉತ್ಸರ್ಗ (ಅನಿಯತ) ಎಂಬುದನ್ನು ಸ್ಮರಿಸುವುದು ಎಂದು ಭಾವ.

2. 'ಪ್ರತ್ಯಕ್ಷಾದಿಗಳಿಗಿಂತಲೂ ಆಗಮವು ಪ್ರಬಲವಾದರೂ ಉಪಜೀವ್ಯದ ವಿರೋಧವು ಪ್ರಾಪ್ತವಾದಲ್ಲಿ ಅಂತಹ ಆಗಮಕ್ಕೆ ಪ್ರಾಮಾಣ್ಯವಿಲ್ಲ' ಎಂದು ಹಿಂದೆ (ಪುಟ. 383ರಲ್ಲಿ) ತಿಳಿಸಿದ್ದನ್ನು ಈ ಬ್ರಹ್ಮತರ್ಕದ ವಾಕ್ಯಗಳಿಂದ ಧೃಢೀಕರಿಸಿದಂತಾಯಿತು ಎಂದು ಭಾವ.

**ಅನುಮಾನದಲ್ಲಿನ ಅಂಗವಾಕ್ಯಗಳ ಸಂಖ್ಯೆಯ ನಿಯಮ ಸಲ್ಲದು**

**ಯಾಮಾಹುರನುಮಾಂ ಕೇಚಿತ್ ತ್ರಿಯಾದ್ಯವಯವಾತ್ಮಿಕಾಮ್ ।**

**ಸಾ ವ್ಯರ್ಥಾ -- --- --- --- --- --- --- --- ।**

ಯಾವ ಅನುಮಾನವನ್ನು 'ಮೂರು ಅಂಗವಾಕ್ಯಗಳನ್ನು ಹೊಂದಿದೆ' ಎಂದು ಮತ್ತೆ ಕೆಲವರು ಎರಡು ಅಂಗವಾಕ್ಯಗಳನ್ನು ಹೊಂದಿದೆ' ಎಂದು ಈ ಮುಂತಾಗಿ ವಾದಿಸುವರೋ, ಅದು ವ್ಯರ್ಥ.

ಏವಂ ಪ್ರತ್ಯಕ್ಷಾದೀನಾಂ ಲಕ್ಷಣಂ ನಿರೂಪಿತಮ್ । ವಿಭಾಗಸ್ತು ನಿರೂಪಣೀಯಃ । ತತ್ರಾನುಮಾನವಿಭಾಗನಿರೂಪಣಸ್ಯ ಬಹುತ್ವಾತ್ ತದೇವ ಆದೌ ಕರೋತಿ । ದ್ವಿವಿಧಮನುಮಾನಂ ಸ್ವಾರ್ಥಂ ಪರಾರ್ಥಂ ಚೇತಿ । ತತ್ರ ಯತ್ಪರೋಪದೇಶಮನಪೇಕ್ಷ್ಯ ಸ್ವಯಮೇವ ವ್ಯಾಪ್ತಿಂ ಜ್ಞಾತ್ವಾ (ಗೃಹೀತ್ವಾ) ವ್ಯಾಪ್ತ್ಯನುಸಾರೇಣ ವಿವಕ್ಷಿತಸ್ಥಲೇ ವ್ಯಾಪ್ಯಂ ಚ ಪ್ರತೀತ್ಯ ವ್ಯಾಪ್ತಿಂ ಚ ಸ್ಮೃತ್ವಾ ವ್ಯಾಪ್ಯಮನುಸನ್ಧತ್ತೇ ತತ್ ಸ್ವಾರ್ಥಾನುಮಾನಮ್ । ತೇನಾಸ್ಯ ವಿವಕ್ಷಿತಸ್ಥಲೇ ವ್ಯಾಪಕಪ್ರಮಿತಿರುತ್ಪದ್ಯತೇ । ಇದಮೇವ ವ್ಯಾಪ್ತ್ಯಾದಿಜ್ಞಾನಂ ಪರೋಪದೇಶಮಪೇಕ್ಷ್ಯೋತ್ಪದ್ಯತೇ ಚೇತ್, ತದಾ 'ಪರಾರ್ಥಾನುಮಾನಮ್' ಇತ್ಯುಚ್ಯತೇ । ತತ್ಸಮ್ಬನ್ಧಾತ್ ಪರೋಪದೇಶೋಽಪಿ ತಥೋಪಚರ್ಯತೇ । ಪರೋಪದೇಶೇ ಚ ವಾದಿನೋ ವಿಪ್ರತಿಪದ್ಯನ್ತೇ । ಪ್ರತಿಜ್ಞಾಹೇತೂದಾಹರಣೈಃ, ಉದಾಹರಣೋಪನಯನಿಗಮನೈರ್ವಾ ತ್ರಿಭಿರೇವಾವಯವಾಖ್ಯೈಃ ಅವಾನ್ತರವಾಕ್ಯೈರುಪೇತಂ ಮಹಾವಾಕ್ಯಂ ಪರೋಪದೇಶಃ' ಇತ್ಯೇಕೇ । 'ಪ್ರತಿಜ್ಞಾದಯಃ ಪಂಚಾಪ್ಯವಯವಾಃ ಸರ್ವಥಾಪೇಕ್ಷಿತಾಃ' ಇತ್ಯಪರೇ । 'ಉದಾಹರಣೋಪನಯೌ ದ್ವಾವೇವಾವಯವೌ' ಇತ್ಯನ್ಯೇ । ತಾನೇತಾನ್ ನಿಯಮಪಕ್ಷಾನ್ ಅನೂದ್ಯ ದೂಷಯತಿ- **'ಯಾಮ್'** ಇತಿ ॥ **ಅನುಮಾಮ್**- ಅನುಮಾನೋಪಯುಕ್ತಂ ಪರೋಪದೇಶವಾಕ್ಯಮ್ । ತ್ರಿಯಾದ್ಯವಯವಾತ್ಮಿಕಾಂ 'ನಿಯಮೇನ' ಇತಿ ಶೇಷಃ । **ಸಾ ವ್ಯರ್ಥಾ**- ಸೋಽವಯವನಿಯಮೋ ನಿಷ್ಪ್ರಯೋಜನ ಇತಿ ಯಾವತ್ । 'ತ್ರಿಯಂಬಕಂ ಯಜಾಮಹೇ' 'ಭೂವಾದಯೋ ಧಾತವಃ' ಇತ್ಯಾದಿಪ್ರಯೋಗಸಿದ್ಧ್ಯರ್ಥಂ

**ಯಣಾಗಮೋಽಪಿ ಕೈಶ್ಚಿದ್ವ್ಯಾಖ್ಯಾತಃ । ತತಃ 'ತ್ರಿಯಾದಿ..' ಇತ್ಯುಪಪನ್ನಮ್ ।**

ಈ ರೀತಿಯಾಗಿ ಪ್ರತ್ಯಕ್ಷಾದಿಗಳ ಲಕ್ಷಣವನ್ನು ನಿರೂಪಿಸಿಯಾಯಿತು. ವಿಭಾಗವಾದರೋ ನಿರೂಪಿತವಾಗಬೇಕು. ಅವುಗಳಲ್ಲಿ ಅನುಮಾನವಿಭಾಗದ ನಿರೂಪಣವು ಬಹುವಾಗಿರುವುದರಿಂದ ಅದನ್ನೇ ಮೊದಲು ನಿರೂಪಿಸುವರು. ಅನುಮಾನವು ಎರಡು ವಿಧ, ಸ್ವಾರ್ಥ ಮತ್ತು ಪರಾರ್ಥ ಎಂದು. ಯಾರು ಪರರಿಗೆ ತಿಳಿಸುವ ಅಪೇಕ್ಷೆಯಿಲ್ಲದೆ ಸ್ವತಃ ವ್ಯಾಪ್ತಿಯನ್ನು ತಿಳಿದು, ವ್ಯಾಪ್ತಿಯ ಅನುಸಾರವಾಗಿ ನಿರ್ದಿಷ್ಟವಾದ ಸ್ಥಳದಲ್ಲಿ ವ್ಯಾಪ್ಯವನ್ನು (ಹೇತುವನ್ನು) ಕಂಡು, ವ್ಯಾಪ್ತಿಯ ಸ್ಮರಣೆಯು ಬರಲು, ವ್ಯಾಪಕದ (ಸಾಧ್ಯದ) ಅನುಸಂಧಾನವನ್ನು ಮಾಡಿಕೊಳ್ಳುವನೋ ಅದನ್ನು ಸ್ವಾರ್ಥಾನುಮಾನ (ಎಂದು ತಿಳಿಯುವುದು). ಆದರಿಂದ (ವ್ಯಾಪ್ಯವಾದ ಧುಮದ ಅನುಸಂಧಾನದಿಂದ ) ಅವನಿಗೆ ವಿವಕ್ಷಿತಸ್ಥಳದಲ್ಲಿ ವ್ಯಾಪಕದ (ವಹ್ನಿಯ) ಅರಿವು ಪ್ರಾಪ್ತವಾಗುವುದು. ಇದೇ ವ್ಯಾಪ್ತಿಜ್ಞಾನವು ಪರರ ಉಪದೇಶದ ನೆರವಿನಿಂದ ಉಂಟಾದಲ್ಲಿ ಅದನ್ನೇ ಪರಾರ್ಥಾನುಮಾನ ಎಂದು ಹೇಳುವರು. ಇದರ ಸಂಬಂಧವಿರುವುದರಿಂದ ಪರೋಪದೇಶವನ್ನೂ (ಪ್ರತಿಜ್ಞಾದಿ ವಾಕ್ಯದ ಕಥನವನ್ನು) ಸಹ ಆ ರೀತಿಯಾಗಿಯೇ (ಅನುಮಾನ ಎಂದು) ವ್ಯವಹರಿಸುವರು[1]. ಪರಾರ್ಥಾನುಮಾನದ ವಿಷಯದಲ್ಲಿಯಾದರೋ ವಾದಿಗಳಲ್ಲಿ ವಿವಾದವಿದೆ. ಪ್ರತಿಜ್ಞಾ, ಹೇತು, ಉದಾಹರಣಗಳಿಂದ ಅಥವಾ ಉದಾಹರಣ, ಉಪನಯ, ನಿಗಮನವಾಕ್ಯಗಳೆಂಬ ಅವಾಂತರ ವಾಕ್ಯಗಳಿಂದ ಕೂಡಿದ, ಈ ಮೂರೇ ಅವಯವಗಳಿಂದ ಯುಕ್ತವಾದ ಮಹಾವಾಕ್ಯವೇ ಪರೋಪದೇಶ ಎಂದು ಕೆಲವರು. ಪ್ರತಿಜ್ಞಾದಿ ಐದೂ ಅವಯವಗಳು ಅವಶ್ಯವಾಗಿ ಬೇಕು ಎಂದು ಮತ್ತೆ

1. ಇಲ್ಲಿ ವ್ಯಾಪ್ತಿಜ್ಞಾನವನ್ನೇ ಪರಾರ್ಥಾನುಮಾನ ಎಂದು ಹೇಳಲಾಗಿದೆ, ಆದರೆ ವ್ಯವಹಾರದಲ್ಲಿ ಪರೋಪದೇಶಾತ್ಮಕವಾದ ಪ್ರತಿಜ್ಞಾದಿ ಪಂಚಾವಯವ ಸಹಿತವಾದ ವಾಕ್ಯಗಳನ್ನು ಪರಾರ್ಥಾನುಮಾನ ಎಂದು ವ್ಯವಹರಿಸುವರು. ಈ ರೀತಿಯಾಗಿ ವ್ಯವಹರಿಸುವುದು ತಪ್ಪಲ್ಲವೆ? ಎನ್ನುವ ಸಂದೇಹವನ್ನು ಪರಿಹರಿಸುತ್ತಾರೆ- ವ್ಯಾಪ್ತಿಜ್ಞಾನದ ಜನಕವಾದುದರಿಂದ ಪಂಚಾವಯವ ವಾಕ್ಯಗಳಲ್ಲೂ ಔಪಚಾರಿಕವಾಗಿ ಪರಾರ್ಥಾನುಮಾನ ಎಂಬ ವ್ಯವಹಾರವು ಇದೆ ಎಂದು ಭಾವ.

ಕೆಲವರು. ಉದಾಹರಣ ಉಪನಯಗಳು ಎರಡೇ ಅವಶ್ಯ ಎಂದು ಮತ್ತೆ ಕೆಲವರು[1]. ಆ ಎಲ್ಲ ಅಭಿಪ್ರಾಯಗಳನ್ನು ಅನುವಾದಿಸಿ ನಿರಾಕರಿಸುವರು **'ಯಾಮ್..'** ಎಂದು. **ಅನುಮಾನಮ್-** ಅನುಮಾನಕ್ಕೆ ಅವಶ್ಯವಾದ ಪರೋಪದೇಶವಾಕ್ಯವನ್ನು. 'ಮೂರೇ ಅವಯವಗಳು ಈ ಮುಂತಾದ ನಿಯಮದಿಂದ' ಎಂದು ಶೇಷಪೂರಣವನ್ನು ಮಾಡಿಕೊಳ್ಳಬೇಕು. **ಸಾವ್ಯರ್ಥಾ-** ಆ ಅವಯವದ ನಿಯಮವು ನಿಷ್ಪ್ರಯೋಜನ ಎಂದು ಒಟ್ಟು ಭಾವ. 'ತ್ರಿಯಮ್ಬಕಂ ಯಜಾಮಹೇ' 'ಭೂವಾದಯೋ ಧಾತವಃ' ಈ ಮುಂತಾದ ಪ್ರಯೋಗಗಳ ಸಿದ್ಧಿಗಾಗಿ ಯಣಾಗಮವೂ (ಉಂಟು ಎಂದು) ಕೆಲವರು ವ್ಯಾಖ್ಯಾನಿಸಿರುವರು[2]. ಅದ್ದರಿಂದಲೇ ತ್ರಿಯಾದಿ ರೂಪವು ಸಿದ್ಧವಾಯಿತು.

---

1. ವಾದಿ-ಪ್ರತಿವಾದಿಗಳು ತಮ್ಮ ತಮ್ಮ ಉದ್ದಿಷ್ಟವಾದ ವಿಷಯವನ್ನು ಮಂಡಿಸಲು ಯುಕ್ತಿ ಎಂಬ ಅನುಪ್ರಮಾಣವನ್ನು ಬಳಸುವರು. ಈ ಯುಕ್ತಿಯ ಉಪದೇಶಾತ್ಮಕವಾದ ಮಹಾವಾಕ್ಯವನ್ನು ಅನುಮಾನ ಎಂದು ತಿಳಿಯುವುದು. ಈ ಮಹಾವಾಕ್ಯದಲ್ಲಿ ಗರಿಷ್ಠ ಐದು ಅಂಗವಾಕ್ಯಗಳು ಇರುವವು. 'ಪರ್ವತೋ ವಹ್ನಿಮಾನ್- ಪರ್ವತದಲ್ಲಿ ವಹ್ನಿಯು ಇದೆ' ಇದು ಪ್ರತಿಜ್ಞಾವಾಕ್ಯ. 'ಧೂಮಾತ್- ಪರ್ವತದಲ್ಲಿ ಧೂಮವು ಇರುವುದರಿಂದ' ಇದು ಹೇತುಕಥನ. 'ಯತ್ರಯತ್ರ ಧೂಮಃ ತತ್ರತತ್ರ ವಹ್ನಿಃ ಯಥಾ ಮಹಾನಸಂ- ಎಲ್ಲೆಲ್ಲಿ ಧೂಮವಿದೆಯೋ ಅಲ್ಲೆಲ್ಲ ವಹ್ನಿಯಿರುವುದು, ಮಹಾನಸದಂತೆ' ಇದು ಉದಾಹರಣ ವಾಕ್ಯ. 'ಪರ್ವತಃ ಮಹಾನಸವತ್ ವಹ್ನಿವ್ಯಾಪ್ಯಧೂಮವಾನ್- ಈ ಪರ್ವತವೂ ಮಹಾನಸದಂತೆ ವಹ್ನಿಯಿಂದ ವ್ಯಾಪ್ಯವಾದ ಧೂಮವನ್ನು ಹೊಂದಿದೆ' ಎನ್ನುವದು ಉಪನಯವಾಕ್ಯ. 'ವಹ್ನಿವ್ಯಾಪ್ಯಧೂಮಾತ್ ಪರ್ವತೋಽಪಿ ವಹ್ನಿಮಾನ್ ಮಹಾನಸವತ್- ವಹ್ನಿಯಿಂದ ವ್ಯಾಪ್ಯವಾದ ಧೂಮವು ಇರುವುದರಿಂದ ಪರ್ವತವೂ ಮಹಾನಸದಂತೆ ವಹ್ನಿಯನ್ನು ಹೊಂದಿದೆ' ಇದು ನಿಗಮನ ವಾಕ್ಯ ಎಂದು ಶಾಸ್ತ್ರದಲ್ಲಿ ತಿಳಿಸಿರುತ್ತಾರೆ.

2. 'ತ್ರಿಯಾದ್ಯವಯವಾತ್ಮಿಕಾ' ಎಂದಿದೆ. ವ್ಯಾಕರಣ ಶಾಸ್ತ್ರದ ನಿಯಮದಂತೆ ಯಣ್ ಆದೇಶವು ಪ್ರಾಪ್ತವಾದಲ್ಲಿ 'ತ್ರ್ಯಾದ್ಯವಯವಾತ್ಮಿಕಾ' ಎಂದಾಗಬೇಕಲ್ಲವೆ ಎನ್ನುವ ಸಂದೇಹವನ್ನು ಪರಿಹರಿಸಿರುವರು. ತ್ರಿಯಂಬಕ, ಭೂವಾದಯೋ ಇತ್ಯಾದಿಸ್ಥಳಗಳಲ್ಲಿ ತ್ರ್ಯಂಬಕ, ಭ್ವಾದಯೊ ಎಂದು ಪ್ರಯೋಗವು ಇಲ್ಲದೇ ಇರುವುದರಿಂದ ಕೆಲವು ಸಂದರ್ಭದಲ್ಲಿ ಯಣಾಗಮವೂ ವಿಹಿತ ಎಂದು ಕೆಲವರು ವ್ಯಾಖ್ಯಾನಿಸಿರುವರು. ಅದರಂತೆ ಪ್ರಕೃತದಲ್ಲಿಯೂ ಸಹ ಯಣಾದೇಶವನ್ನು ವಿವಕ್ಷಿಸದೇ ಯಣಾಗಮವನ್ನು ಅನುಸರಿಸಲಾಗಿದೆ ಎಂದು ಭಾವ.

**ವ್ಯಾಪ್ತಿಸ್ಮರಣೆಯೇ ಅಂಗವಾಕ್ಯಗಳ ಉದ್ದೇಶ**

**- -----ನೋಪಪತ್ತ್ಯಾ ಹಿ ವಿನಾ ಸಾऽಪಿ ಪ್ರಮಾಣತಾಮ್ ।**

**ಯಾತಿ - - - - - - - - - - - - - - - - - - ।**

ಅದಾದರೋ (ಅನುಮಾನವಾದರೋ) ವ್ಯಾಪ್ತಿಯ ಅರಿವನ್ನು ಉಂಟುಮಾಡದೇ ಸಾರ್ಥಕತೆಯನ್ನು ಹೊಂದುವದಿಲ್ಲ.

**ನನು, ಪ್ರಮಾಣಾಕಾಂಕ್ಷಾಜನನಾರ್ಥಮಾದೌ ತಾವತ್ ಸಾಧ್ಯನಿರ್ದೇಶ-ರೂಪಾ ಪ್ರತಿಜ್ಞಾ ಸರ್ವಥಾऽಪೇಕ್ಷಿತಾ । ತತಸ್ತತ್ರ ಪ್ರಮಾಣಾಕಾಂಕ್ಷಾಯಾಂ ಸಾಧನತ್ವವ್ಯಾಪಕಂ ಲಿಙ್ಗವಚನಂ ಹೇತುಸಂಜ್ಞಮವಶ್ಯಂ ವಕ್ತವ್ಯಮ್ । ತದನನ್ತರಂ ತಸ್ಯ ಸಾಮರ್ಥ್ಯಜಿಜ್ಞಾಸಾಯಾಂ ವ್ಯಾಪ್ತೇಃ ಪ್ರಾಥಮಿಕತ್ವಾತ್ ತಾಂ ದರ್ಶಯಿತುಂ ವ್ಯಾಪ್ತಿಗ್ರಹಣಸ್ಥಲಸ್ಯ ದೃಷ್ಟಾನ್ತಸ್ಯ ಸಮ್ಯಗ್ವ್ಯಾಪ್ತಿ-ನಿರ್ದೇಶಪೂರ್ವಕಂ ವಚನಮುದಾಹರಣಾಖ್ಯಮಾವಶ್ಯಕಮ್ । ತತಃ ಪಕ್ಷಧರ್ಮತಾಜ್ಞಾಪನಾಯ ದೃಷ್ಟಾನ್ತೇ ಪ್ರಸಿದ್ಧಾವಿನಾಭಾವಸ್ಯ ಸಾಧನಸ್ಯ ಪಕ್ಷೇ ವ್ಯಾಪ್ತಿಖ್ಯಾಪಕಂ ವಾಕ್ಯಮುಪನಯಾಖ್ಯಂ ವಾಚ್ಯಮೇವ । ತತ ಏತೇಷಾಮೈಕಾರ್ಥ್ಯಪ್ರತಿಪತ್ತಯೇ ನಿಗಮನಾಖ್ಯಮುಪಸಂಹಾರವಾಕ್ಯಮಪಿ ಸರ್ವಥಾ ಭಾವ್ಯಮ್ ।**

ಸರಿ ಹಾಗಾದಲ್ಲಿ, ಪ್ರಮಾಣವಿಷಯಕ ಜಿಜ್ಞಾಸೆಯನ್ನು ಹುಟ್ಟುಹಾಕಲು ಮೊದಲು ಸಾಧ್ಯ ನಿರ್ದೇಶರೂಪವಾದ ಪ್ರತಿಜ್ಞೆಯು (ಸಾಧ್ಯವಿಶಿಷ್ಟವಾದ ಪಕ್ಷದ ಕಥನ ರೂಪಕವಾದ ವಾಕ್ಯವು) ಮುಖ್ಯವಾಗಿ ಅಪೇಕ್ಷಿತವಾಗಿದೆ[1]. ಅನಂತರದಲ್ಲಿ ಆ ವಿಷಯದಲ್ಲಿ ಪ್ರಮಾಣದ ಅಪೇಕ್ಷೆಯಿರಲು ಸಾಧನತ್ವವನ್ನು ಪ್ರಸಿದ್ಧಿಪಡಿಸುವ ಹೇತು ಎಂದು ಹೆಸರಿಸಿರುವ ಲಿಂಗವಾಕ್ಯವನ್ನು ಅವಶ್ಯವಾಗಿ ಹೇಳಲೇ ಬೇಕು. ಆ ಅನಂತರದಲ್ಲಿ ಅದರ (ಹೇತುವಿನ ಸಾಧ್ಯಸಾಧಕತ್ವರೂಪವಾದ) ಸಾಮರ್ಥ್ಯದ ಜಿಜ್ಞಾಸೆಯು ಪ್ರಾಪ್ತವಾಗಲು ವ್ಯಾಪ್ತಿಯೇ (ವ್ಯಾಪ್ತಿಯ ಅರಿವೇ) ಮುಖ್ಯವಾದುದರಿಂದ ಅದನ್ನು ಪ್ರದರ್ಶಿಸಲು ಸಾಹಚರ್ಯದ

---

1. 'ಪರ್ವತೋ ವಹ್ನಿಮಾನ್ - ಪರ್ವತದಲ್ಲಿ ವಹ್ನಿಯು ಇದೆ' ಎಂದು ಹೇಳಿದಲ್ಲಿ ವಹ್ನಿಯ ಅಸ್ತಿತ್ವಕ್ಕೆ ಏನು ಪ್ರಮಾಣ ಎಂದು ಜಿಜ್ಞಾಸೆಯು ಪ್ರಾಪ್ತವಾಗುವುದು ಎಂದು ಭಾವ.

ಗ್ರಾಹಕಸ್ಥಲವಾದ, ಸ್ಫುಟವಾಗಿ ವ್ಯಾಪ್ತಿಯ ನಿರ್ದೇಶನದ ಪೂರ್ವಕವಾಗಿ ನಿರೂಪಿಸುವ ದೃಷ್ಟಾಂತದ ವಚನವೇ- ಉದಾಹರಣ ಎನ್ನುವುದು, ಅವಶ್ಯಕ[1]. ನಂತರದಲ್ಲಿ ಪಕ್ಷಧರ್ಮತಾವನ್ನು (ಹೇತುವು ಪಕ್ಷದಲ್ಲಿ ಇದೆ ಎನ್ನುವುದನ್ನು) ತಿಳಿಸಲು ದೃಷ್ಟಾಂತ ಸ್ಥಳದಲ್ಲಿ ಅವಿನಾಭಾವದ (ಸಾಧ್ಯ-ಹೇತುಗಳ ಬಿಟ್ಟಿರಲಾರದ ವಿಶಿಷ್ಟ ಸಂಬಂಧದ) ಪ್ರಸಿದ್ಧಿಯನ್ನು ಹೊಂದಿರುವ ಸಾಧನವನ್ನು ಪಕ್ಷದಲ್ಲಿ (ತಿಳಿಸುವ) ವ್ಯಾಪ್ತಿಯ ಪ್ರಕಟಕವಾದ ವಾಕ್ಯ 'ಉಪನಯ' ಎನ್ನುವದನ್ನು ತಿಳಿಸಲೇ ಬೇಕು[2]. ಅನಂತರದಲ್ಲಿ ಈ ಎಲ್ಲ ವಾಕ್ಯಗಳ ಏಕವಾಕ್ಯತಾ ಜ್ಞಾಪನಕ್ಕಾಗಿ ನಿಗಮನ ಎನ್ನುವ ಉಪಸಂಹಾರವಾಕ್ಯವೂ ಸರ್ವಥಾ ಅವಶ್ಯಕವಾಗಿದೆ[3].

**ಅಥವಾ ಹೇತುನೈವಾರ್ಥಾತ್ ಪಕ್ಷದರ್ಮತಾಯಾ ಲಬ್ಧತ್ವಾದ್ ಅವಿಪ್ರಕೃಷ್ಟತ್ವೇನೋಪಸಂಹಾರಸ್ಯಾನಪೇಕ್ಷಿತತ್ವಾದ್ ಆದ್ಯಾಸ್ತ್ರಯ ಏವ ಅವಯವಾಃ ಸರ್ವಥಾ ಭಾವ್ಯಾಃ ।**

**ಯದ್ವಾ ಉಪೋದ್ಘಾತಲಕ್ಷಣಯಾ ಸಂಗತ್ಯಾ ವ್ಯಾಪ್ತಿಪಕ್ಷಧರ್ಮತಯೋಃ ಅಭಿಹಿತಯೋಸ್ತದಾಧಾರತಯಾ ಲಿಙ್ಗಲಾಭಾತ್ ನಿಗಮನೇನ ಸಾಧ್ಯ-ಪ್ರತೀತೇಃ ಉತ್ತರೇ ತ್ರಯೋಽವಶ್ಯಂ ವಾಚ್ಯಾಃ ।**

**ಯದಿ ವಾ ವಿವಾದೇನೈವ ಸಾಧ್ಯಪ್ರತೀತೌ ವ್ಯಾಪ್ತಿಪಕ್ಷಧರ್ಮತಾ-ವಚನೇನೈವ ಸಾಧನಧರ್ಮಿಲಾಭಾತ್ ಪೂರ್ವವನ್ನಿಗಮನಸ್ಯ ವ್ಯರ್ಥತ್ವಾದ್ ಉದಾಹರಣೋಪನಯೌ ದ್ವಾವೇವಾವಶ್ಯಂ ವಕ್ತವ್ಯೌ ತತ್ ಕಥಮ್ ಅವಯವನಿಯಮಸ್ಯ ವೈಯರ್ಥ್ಯಮ್? ಇತ್ಯತ ಆಹ- 'ನೋಪಪತ್ಯಾ'**

1. ಎಲ್ಲಿ ಧೂಮವೋ ಅಲ್ಲಿ ವಹ್ನಿ, ಮಹಾನಸದಂತೆ ಎನ್ನುವ ಉದಾಹರಣವಾಕ್ಯವು ಸಾಧ್ಯ-ಸಾಧನಗಳ ವ್ಯಾಪ್ತಿಯನ್ನು ಸ್ಫುಟಗೊಳಿಸುತ್ತದೆ ಆದುದರಿಂದ ಅದರ ಅವಶ್ಯಕತೆಯೂ ಇದೆ ಎಂದು ಭಾವ.

2. 'ವಹ್ನಿಯಿಂದ ವ್ಯಾಪ್ಯವಾದ ಧೂಮವು ಪರ್ವತದಲ್ಲಿದೆ' ಎನ್ನುವ ಉಪನಯ ವಾಕ್ಯವೂ ಅತ್ಯವಶ್ಯಕ ಎಂದು ಭಾವ.

3. 'ವಹ್ನಿವ್ಯಾಪ್ಯವಾದ ಧೂಮವನ್ನು ಪರ್ವತವು ಹೊಂದಿರುವದರಿಂದ, ಪರ್ವತದಲ್ಲಿ ವಹ್ನಿಯು ಇದೆ' ಎನ್ನುವ ನಿಗಮನವಾಕ್ಯದ ಅವಶ್ಯಕತೆ ಇದೆ ಎಂದು ನೈಯಾಯಿಕರು ಅಭಿಮತಿಸುವರು ಎಂದು ಭಾವ.

**ಇತಿ । ವ್ಯಾಪ್ತ್ಯಾದಿಮಲ್ಲಿಂಗಮ್- ಉಪಪತ್ತಿಃ । ತತ್ಸ್ಮೃತಿಜಿಜ್ಞಾಸೋ-ಪಲಕ್ಷಣಮೇತತ್ । ಹಿಶಬ್ದೋ ಹೇತೌ । ಸಾಽಪಿ ನಿಯತಾವಯವತ್ವೇನ ಅಙ್ಗೀಕೃತಂ ವಾಕ್ಯಮ್ । ಪ್ರಮಾಣತಾಮ್- ಉಪಯುಕ್ತತಾಮ್ ।**

ಅಥವಾ ಹೇತುವಿನಿಂದಲೇ (ಕೇವಲ ಹೇತುವಿನ ಕಥನದಿಂದಲೇ) ಅರ್ಥತಃ ಪಕ್ಷಧರ್ಮತಾವೂ ಪ್ರಾಪ್ತವಾಗುವುದರಿಂದ ವಿಪ್ರಕೃಷ್ಟವಾಗದ ಪ್ರಯುಕ್ತ ಉಪಸಂಹಾರವಾಕ್ಯದ ಅವಶ್ಯಕತೆ ಇಲ್ಲದಿರುವುದರಿಂದ ಮೂರು ವಾಕ್ಯಗಳು ಅವಶ್ಯವಾಗಿ ಬೇಕೇ ಬೇಕು[1].

ಅಥವಾ (ವಾದ-ಪ್ರತಿವಾದಗಳು ಆರಂಭವಾದಾಗ) ಪೀಠಿಕೆಯಿಂದಲೇ ಊಹಿತವಾಗುವ ಸಂಗತಿಯಿಂದ ವ್ಯಾಪ್ತಿ ಪಕ್ಷಧರ್ಮತಾವು ಉಕ್ತವಾಗಿರುವುದ-ರಿಂದ, ಅದರ ಆಧಾರದಿಂದ ಲಿಂಗವೂ ಪ್ರಾಪ್ತವಾಗುವುದರಿಂದ ನಿಗಮನ ವಾಕ್ಯದಿಂದಲೇ ('ವಹ್ನಿವ್ಯಾಪ್ಯಧೂಮಾತ್ ಪರ್ವತೋಽಪಿ ವಹ್ನಿಮಾನ್ ಮಹಾನಸವತ್') ಸಾಧ್ಯದ ಪ್ರತೀತಿಯು ಆಗುವುದರಿಂದ ಮೂರೇ ಅವಶ್ಯ[2].

---

1. 'ಹೇತುವು ಪಕ್ಷದಲ್ಲಿದೆ' ಎನ್ನುವ ಪಕ್ಷಧರ್ಮತಾವನ್ನು ಸ್ಫುಟಗೊಳಿಸುವುದು ಉಪನಯವಾಕ್ಯ. ಆದರೆ 'ಧೂಮಾತ್ (ಧೂಮವತ್ವಾತ್)' ಎಂದು ಹೇತುವಿನ ಕಥನದಿಂದಲೇ 'ಹೇತುವು ಪಕ್ಷದಲ್ಲಿ ಇದೆ' ಎಂದು ತಿಳಿಯುವುದು. ಆದುದರಿಂದ 'ಪರ್ವತಃ ಮಹಾನಸವತ್ ವಹ್ನಿವ್ಯಾಪ್ಯಧೂಮವಾನ್' ಎಂಬ ಉಪನಯವಾಕ್ಯದ ಆಗತ್ಯವಿಲ್ಲ . ಬೇರೇ ಬೇರೇ ಸಂದರ್ಭಗಳಲ್ಲಿ ಹೇತು ಸಾಧ್ಯ ದೃಷ್ಟಾಂತಗಳನ್ನು ತಿಳಿಸಿದಲ್ಲಿ, ಅವುಗಳು ಬುದ್ಧ್ಯಾರೂಢವಾಗ ಲಾರವು, ಅಂತಹ ಸಂದರ್ಭಗಳಲ್ಲಿ ಮಾತ್ರ ಅವುಗಳಲ್ಲಿನ ಏಕತಾನತಾವನ್ನು ಸಿದ್ಧಿಪಡಿಸುವ ಅವಶ್ಯಕತೆ ಇರುತ್ತಿತ್ತು, ಪ್ರಕೃತದಲ್ಲಿ ಅಂತಹ ವಿಪ್ರಕೃಷ್ಟತ್ವವು ಇಲ್ಲದಿರುವುದರಿಂದ ಉಪಸಂಹಾರವಾಕ್ಯಾತ್ಮಕವಾದ 'ವಹ್ನಿವ್ಯಾಪ್ಯಧೂಮಾತ್ ಪರ್ವತೋಽಪಿ ವಹ್ನಿಮಾನ್ ಮಹಾನಸವತ್' ಎಂಬ ನಿಗಮನ ವಾಕ್ಯದ ಅವಶ್ಯಕತೆ ಇಲ್ಲ ಎಂದು, 'ಪರ್ವತಃ ವಹ್ನಿಮಾನ್ ಧೂಮಾತ್ ಮಹಾನಸವತ್' ಎನ್ನುವ ಪ್ರತಿಜ್ಞಾ-ಹೇತು-ದೃಷ್ಟಾಂತವಾಕ್ಯಗಳು ಮಾತ್ರ ಸಾಕು ಎಂದು ಮೀಮಾಂಸಕರು ಅಭಿಮತಿಸುವರು ಎಂದು ಭಾವ.

2. 'ವಹ್ನಿವ್ಯಾಪ್ಯಧೂಮಾತ್ ಪರ್ವತೋಽಪಿ ವಹ್ನಿಮಾನ್ ಮಹಾನಸವತ್' ಎಂಬ ನಿಗಮನ ವಾಕ್ಯ, 'ಯತ್ರಯತ್ರ ಧೂಮಃ ತತ್ರತತ್ರ ವಹ್ನಿಃ ಮಹಾನಸವತ್' ಎಂಬ ಉದಾಹರಣವಾಕ್ಯ, 'ಪರ್ವತಃ ಮಹಾನಸವತ್ ವಹ್ನಿವ್ಯಾಪ್ಯಧೂಮವಾನ್' ಎಂಬ ಉಪನಯವಾಕ್ಯ ಈ ಮೂರೇ ಸಾಕಾಗುವುದು. ಆದುದರಿಂದ 'ಪರ್ವತೋ ವಹ್ನಿಮಾನ್ ಎನ್ನುವ ಪ್ರತಿಜ್ಞಾ ವಾಕ್ಯದ ಮತ್ತು 'ಧೂಮಾತ್' ಎನ್ನುವ ಹೇತುವಿನ ಕಥನದ ಅಗತ್ಯವಿಲ್ಲವೆಂದು ಕೆಲವು ವಾದಿಗಳು ಅಭಿಮತಿಸುವರು ಎಂದು ಭಾವ.

ಅಥವಾ (ವಾದಿ-ಪ್ರತಿವಾದಿಗಳ) ವಿವಾದದಿಂದಲೇ ಸಾಧ್ಯದ ಪ್ರತೀತಿಯು ಪ್ರಾಪ್ತವಾಗುವುದು, ವ್ಯಾಪ್ತಿ-ಪಕ್ಷಧರ್ಮತಾದ ಕಥನದಿಂದಲೇ ಸಾಧನವು ವ್ಯಕ್ತವಾಗುವುದರಿಂದ, ಪೂರ್ವದಂತೆ (ವಿಕ್ಷಿಪ್ತತೆಯು ಇಲ್ಲದಿರುವುದರಿಂದ) ನಿಗಮನವಾಕ್ಯದ ಅಗತ್ಯವಿಲ್ಲ, ಆದುದರಿಂದ ಉದಾಹಣ-ಉಪನಯ-ಗಳೆರಡನ್ನು ಅವಶ್ಯವಾಗಿ ಹೇಳಬೇಕು. ಆದುದರಿಂದ ಅವಯನಿಯಮದ ವ್ಯರ್ಥತೆಯು ಹೇಗೆ? ಎಂದು, ಆದುದರಿಂದ ಉತ್ತರಿಸುವರು '**ನೋಪಪತ್ಯಾ**' ಎಂದು. ವ್ಯಾಪ್ತ್ಯಾದಿಗಳನ್ನು ಹೊಂದಿರುವ ಲಿಂಗವು 'ಉಪಪತ್ತಿ' (ಎಂದು ಪರಿಗಣಿತವಾಗುವುದು). ಆದರ (ವ್ಯಾಪ್ತ್ಯಾದಿಗಳ) ಸ್ಮೃತಿ-ಜಿಜ್ಞಾಸೆಗಳು ಎಂದು ಅರ್ಥ[1]. '**ಹಿ**' ಶಬ್ದವು ಕಾರಣಾರ್ಥದಲ್ಲಿದೆ. ಸಾऽಪಿ- ಇಷ್ಟೇ ಅವಯವಗಳು ಇರಬೇಕು ಎಂದು ಒಪ್ಪಿದ (ವುಹಾ)· ವಾಕ್ಯವು. ಪ್ರವಮಾಣತಾಂ-ಉಪಯುಕ್ತತೆಯನ್ನು[2] (ಹೊಂದುವುದು).

**ಇದಮುಕ್ತಂ ಭವತಿ- ಪರೋಪದೇಶೋ ಹಿ ಗೃಹೀತವ್ಯಾಪ್ತ್ಯಾದಿಕಂ ಪ್ರತಿ ತತ್ಸ್ಮಾರಕತ್ವೇನೇತರಂ ಪ್ರತಿ ತದ್ವಿಷಯಜಿಜ್ಞಾಸಾಜನಕತ್ವೇನೈವ ಉಪಯುಜ್ಯತೇ । ನತ್ವಾಗಮತಯಾ ಪ್ರಮಿತಿಜನನಾಯ ಪ್ರಯುಜ್ಯತೇ, ಪ್ರತಿವಾದಿನ್ಯನಾಶ್ವಾಸಾತ್ । ಆಶ್ವಾಸೇ ವಾ ಪ್ರತಿಜ್ಞಾಮಾತ್ರೇಣೈವ ಪೂರ್ತೇಃ ಇತರವೈಯರ್ಥ್ಯಾದಿತಿ ।**

ಇಷ್ಟು ಹೇಳಿದಂತಾಗುವುದು- ಈ ವೊದಲು ವ್ಯಾಪ್ತ್ಯಾದಿಗಳ ಅನುಭವವನ್ನು ಹೊಂದಿರುವ ವ್ಯಕ್ತಿಯನ್ನು ಉದ್ದೇಶಿಸಿ, ಅವುಗಳ (ವ್ಯಾಪ್ತಿ

1. ಮೂಲದಲ್ಲಿ ಉಪಪತ್ಯಾ ಎಂದಿದೆ. ಯುಕ್ತಿಯಿಂದ ಎಂದು ಪದತಾಡಿತ ಅರ್ಥ, ಪ್ರಕೃತಕ್ಕೆ ಅಷ್ಟೇ ಅರ್ಥವು ಸಂಗತವಾಗಲಾರದು, ತನ್ನಿಮಿತ್ತ ವ್ಯಾಪ್ತ್ಯಾದಿ ವಿಶಿಷ್ಟ ಲಿಂಗ ಎಂದು ಅರ್ಥೈಸಿದರು. ಆದರೂ ಪೂರ್ಣ ಭಾವವು ವ್ಯಕ್ತವಾಗಲಾರದು ತನ್ನಿಮಿತ್ತ ಉಪಪತ್ತಿ ಶಬ್ದಕ್ಕೆ ಲಕ್ಷಣಾವನ್ನು ವಿವಕ್ಷಿಸಿ 'ವ್ಯಾಪ್ತಿಯ ಸ್ಮರಣೆ ಮತ್ತು ಜಿಜ್ಞಾಸೆ' ಎಂದು ಅರ್ಥೈಸಬೇಕು ಎಂದು ಟೀಕೆಯಲ್ಲಿ ತಿಳಿಸಲಾಗಿದೆ. ಮೂಲದ ಒಟ್ಟು ಅಭಿಪ್ರಾಯ- ಹೇತುಸಾಧ್ಯಗಳ ನಿತ್ಯಸಂಬಂಧದ ಅರಿವು ಉಂಟಾಗದಿದ್ದಲ್ಲಿ, ಅನುಮಾನವು ಇಂತಿಷ್ಟೇ ಅಂಗವಾಕ್ಯಗಳನ್ನು ಹೊಂದಿರಬೇಕು ಎನ್ನುವ ನಿಯಮವು ಪ್ರಯೋಜಕವಾಗಲಾರದು. ಎಂದು ಭಾವ.

2. ಪ್ರಮಾಣತಾಂ ಎನ್ನುವ ಶಬ್ದತಾಡಿತ ಅರ್ಥವು ಪ್ರಕೃತದಲ್ಲಿ ಅನನ್ವಿತ, ಆದುದರಿಂದ 'ಉಪಯುಕ್ತತೆ' ಎಂದು ಅರ್ಥೈಸಲಾಗಿದೆ.

ಮುಂತಾದವುಗಳ) ಸ್ಮರಣೆಗಾಗಿ ಇತರರನ್ನು ಉದ್ದೇಶಿಸಿ ಅದರ ವಿಷಯದಲ್ಲಿ ಜಿಜ್ಞಾಸಾಪ್ರಾಪ್ತಿಗಾಗಿ ಪರೋಪದೇಶವು (ಅನುಮಾನದಲ್ಲಿನ ಅವಯವಗಳು) ಉಪಯುಕ್ತವಾಗುವವು, ಹೊರತಾಗಿ ಆಗಮದಂತೆ (ಕೇವಲ) ಅರಿವಿಗಾಗಿ ಉಪಯೋಗವಾಗದು. ಪ್ರತಿವಾದಿಗೆ (ವಾದಿಯ ಮಾತಿನಲ್ಲಿ) ವಿಶ್ವಾಸವು ಇಲ್ಲದಿರುವುದರಿಂದ. ವಿಶ್ವಾಸವಿದ್ದಲ್ಲಿ ಕೇವಲ ಪ್ರತಿಜ್ಞೆಯಿಂದಲೇ (ಜಿಜ್ಞಾಸೆಯು) ಪೂರ್ಣವಾಗಲಿರುವುದರಿಂದ ಇತರ ವಾಕ್ಯಗಳು ವ್ಯರ್ಥ-ವಾಗುವವು, ಆದುದರಿಂದ (ಅಂಗವಾಕ್ಯಗಳು ಜಿಜ್ಞಾಸಾ ಜನಕವಾಗಬೇಕು ಮತ್ತು ವ್ಯಾಪ್ತ್ಯಾದಿಗಳ ಸ್ಮಾರಕವಾಗಬೇಕು) ಎಂದು.

**ಅನುಮಾನದ ಒಂದೇ ಅವಯವವೂ ವ್ಯಾಪ್ತಿಸ್ಮಾರಕವಾಗಬಹುದು**

**---ಅತೋ ಯುಕ್ತಿರೇವೈಕಾ ಪ್ರಮಾಣಮನುಮಾತ್ಮಕಮ್ ।**
**ಯುಕ್ತಿಃ ಪ್ರತಿಜ್ಞಾರೂಪಾ ಚ ಹೇತುದೃಷ್ಟಾನ್ತರೂಪಿಕಾ ।**
**ತಥೋಪನಯರೂಪಾ ಚ ಪರಾ ನಿಗಮನಾತ್ಮಿಕಾ ।**
**ಪೃಥಕ್ಪೃಥಕ್ ಪ್ರಮಾಣತ್ವಂ ಯಾತಿ ಯುಕ್ತಿತಯೈವ ತು ॥**

ಕೇವಲ ಪ್ರತಿಜ್ಞಾವಾಕ್ಯ, ಕೇವಲ ಹೇತುವಾಕ್ಯ, ಕೇವಲ ದೃಷ್ಟಾಂತವಾಕ್ಯ, ಕೇವಲ ಉಪನಯವಾಕ್ಯ, ಕೇವಲ ನಿಗಮನವಾಕ್ಯ, ಇವು ಪ್ರತ್ಯೇಕವಾಗಿಯೇ ಪೂರ್ಣಪ್ರಮಾಣದ ಅನುಮಾನವಾಗುವವು.

**ತತಃ ಕಿಮಿತ್ಯತ ಆಹ- 'ಅತಃ' ಇತಿ । ಯತ ಏವಂ ವ್ಯಾಪ್ತ್ಯಾದಿಮಲ್ಲಿಙ್ಗ-ಸ್ಮಾರಕತ್ವಾದಿನಾ ವಿನಾ ಉಪಯುಕ್ತತಾಂ ನ ಯಾತಿ, ಅತೋ ಯುಕ್ತಿರೇವೈಕಾ ವ್ಯಾಪ್ತ್ಯಾದಿಮಲ್ಲಿಙ್ಗಸ್ಮೃತ್ಯಾದಿಕಂ ಯಾವತಾ ಭವತಿ ತಾವದೇವಾನು-ಮಾತ್ಮಕಂ ಪ್ರಮಾಣಂ ಪರೋಪದೇಶರೂಪಂ ವಾಕ್ಯಮ್ । ಸತ್ಯಮೇವ-ಮೇತತ್, ವ್ಯಾಪ್ತ್ಯಾದಿಮಲ್ಲಿಙ್ಗಸ್ಮರಣಾದಿಕಮೇತೈರೇವಾವಯವೈಃ ವಿನಾ ನ ಭವತಿ ಇತ್ಯತಃ ತದರ್ಥಮೇವಾವಯವನಿಯಮ ಉಪಾಸ್ಯತ ಇತಿ ಚೇನ್ನ, ಅನ್ಯಥಾಽಪಿ ಸಂಭವಾದಿತ್ಯಾಹ- 'ಯುಕ್ತಿಃ' ಇತಿ । ವ್ಯಾಪ್ತ್ಯಾದಿಮಲ್ಲಿಙ್ಗಮ್ ।**

ಇದರಿಂದ ಏನು? ಎಂದಲ್ಲಿ ಆದುದರಿಂದ ಉತ್ತರಿಸುತ್ತಾರೆ 'ಅತಃ..' ಎಂದು. ಹೀಗೆ ಯಾವಕಾರಣದಿಂದ ವ್ಯಾಪ್ತ್ಯಾದಿಗಳಿಂದ ಸಹಿತವಾದ ಲಿಂಗದ

ಸ್ಮಾರಕವಾಗದೆ (ಅನುಮಾನಾವಯವಗಳಾದ ಪ್ರತಿಜ್ಞಾದಿವಾಕ್ಯಗಳಿಗೆ) ಉಪಯುಕ್ತತೆಯು ಇಲ್ಲ, ಆದುದರಿಂದ, ಮುಖ್ಯವಾಗಿ ಯುಕ್ತಿಯೇ ಅನುಮಾನಾತ್ಮಕವಾದ ಪರೋಪದೇಶಸ್ವರೂಪವಾದ ವಾಕ್ಯವು ಪ್ರಮಾಣ (ಎಂದು ವ್ಯವಹೃತವಾಗುವುದು), ವ್ಯಾಪ್ತ್ಯಾದಿಗಳಿಂದ ಸಹಿತವಾದ ಲಿಂಗದ ಸ್ಮರಣೆಯೇ ಮುಂತಾದವು ಎಷ್ಟರಿಂದ (ಎಷ್ಟು ಅವಯವಗಳಿಂದ) ಪ್ರಾಪ್ತವಾಗುವುದೋ ಅಷ್ಟೂ (ಅವಯವಗಳು ಅವಶ್ಯಕವಾಗಿವೆ). ಇದು (ಈ ರೀತಿಯಾಗಿ ಪ್ರತಿಪಾದಿಸಿದ್ದು) ಸರಿಯಾಗಿದೆ. ಆದರೆ 'ವ್ಯಾಪ್ತ್ಯಾದಿಗಳನ್ನು ಹೊಂದಿರುವ ಲಿಂಗದ ಸ್ಮರಣೆ ಮುಂತಾದವು ಈ (ಪಂಚ) ಅವಯವಗಳು ಇಲ್ಲದೆ ಆಗುವದಿಲ್ಲ, ಆದುದರಿಂದ ಅದಕ್ಕಾಗಿ ಅವಯವಗಳ ನಿಯಮವನ್ನು ಹೇಳಲಾಗಿದೆ' ಎಂದು ಹೇಳುವುದು ತರವಲ್ಲ. ಬೇರೇ ರೀತಿಯಲ್ಲೂ (ಅವಯವಗಳ ನಿಯಮವು ಇಲ್ಲದೆಯೂ) ಸಂಭಾವಿತವಾದುದರಿಂದ ಎಂದು ಹೇಳುತ್ತಾರೆ **'ಯುಕ್ತಿಃ'**ಎಂದು. ವ್ಯಾಪ್ತ್ಯಾದಿಗಳನ್ನು ಹೊಂದಿರುವ ಲಿಂಗವು.

**ಪ್ರತಿಜ್ಞಾರೂಪಂ -** ನಿರೂಪಕಂ, ಸ್ಮೃತ್ಯಾದಿಜನನೀ ಯಸ್ಯಾ ಸಾ ತಥೋಕ್ತಾ । ಏವಂ **'ಹೇತುರೂಪಿಕಾ,ದೃಷ್ಟಾಂತರೂಪಿಕಾ, ಉಪನಯರೂಪಾ'** ಇತ್ಯೇತದ್ವ್ಯಾಖ್ಯೇಯಮ್ । **ದೃಷ್ಟಾನ್ತಶಬ್ದೇನ** ತದ್ವಚನಮುಪಲಕ್ಷ್ಯತೇ । ಉದಾಹರಣೈಕದೇಶಗ್ರಹಣಾರ್ಥಂ **'ದೃಷ್ಟಾಂತಾ'** ಇತ್ಯುಕ್ತಮ್ । **'ನಿಗಮನಾತ್ಮಿಕಾ'** ಇತ್ಯುಪಚರಿತೋಽಭೇದವ್ಯಪದೇಶಃ । ಏವಂ **'ಪರಾ'** ಇತ್ಯಪಿ । 'ಕದಾಚಿನ್ನಿಗಮನಮೇವಾನುಮಾನಸ್ಮೃತ್ಯಾದಿಕಾರಣಂ ಭವತಿ' ಇತ್ಯರ್ಥಃ । **ಚತಥಾಶಬ್ದಾಃ ಸಮುಚ್ಚಯೇ** ।

**ಪ್ರತಿಜ್ಞಾ ರೂಪಂ**- ನಿರೂಪಕವಾದ, ಯಾವುದರಿಂದ ಸ್ಮೃತ್ಯಾದಿಗಳು ಪ್ರಾಪ್ತವಾಗುವುದೋ ಅದು, **ಹೇತು ರೂಪಿಕಾ, ದೃಷ್ಟಾಂತರೂಪಿಕಾ ಉಪನಯರೂಪಾ** ಎನ್ನುವುದನ್ನೂ ಈ ರೀತಿಯಾಗಿ ವ್ಯಾಖ್ಯಾನಿಸಬೇಕು[1].

---

1. ಮೂಲದಲ್ಲಿ 'ಯುಕ್ತಿಃ ಪ್ರತಿಜ್ಞಾರೂಪಾ, ಹೇತುರೂಪಾ' ಇತ್ಯಾದಿಯಾಗಿ ಹೇಳಲಾಗಿದೆ. ಈ ವಾಕ್ಯಗಳಿಗೆ ಝುಟಿತಿ ತೋರುವ ಅರ್ಥ 'ಯುಕ್ತಿಯು ಪ್ರತಿಜ್ಞಾದಿರೂಪ' ಎಂದು. ಆದರೆ ಯುಕ್ತಿಯು ಪ್ರತಿಜ್ಞಾದಿಗಳಿಂದ ನಿರೂಪಿತವಾಗುವುದೇ (ಸ್ಮರಣೆಗೆ ಕಾರಣವಾಗುವುದೇ), ಹೊರತು ಪ್ರತಿಜ್ಞಾದಿಗಳ ಸ್ವರೂಪವಲ್ಲ. ಇದನ್ನು ಸ್ಫುಟಗೊಳಿಸಲು ಮೂಲದಲ್ಲಿನ 'ರೂಪ' ಶಬ್ದಗಳಿಗೆ ನಿರೂಪಕ ಎನ್ನುವ ಅರ್ಥವೆಂದು ಟೀಕೆಯಲ್ಲಿ ತಿಳಿಸಿರುವದನ್ನು ಗಮನಿಸುವುದು.

ದೃಷ್ಟಾಂತ ಎನ್ನುವ ಶಬ್ದದಿಂದ ದೃಷ್ಟಾಂತವಚನ ಎಂದು ಊಹಿಸಬೇಕು. ಉದಾಹರಣದ ಒಂದು ಭಾಗವನ್ನು ಪರಿಗ್ರಹಿಸುವ ನಿಮಿತ್ತವಾಗಿ ದೃಷ್ಟಾಂತ ಎಂದು ಹೇಳಲಾಗಿದೆ[1]. 'ನಿಗಮನಾತ್ಮಿಕಾ' ಎಂದು ಅಭೇದದ ವ್ಯಪದೇಶವು ಔಪಚಾರಿಕ[2]. ಇದೇ ರೀತಿಯಲ್ಲಿ 'ಪರಾ' ಎನ್ನುವುದನ್ನೂ ಸಹ[3]. ಕೆಲವು ಸಂದರ್ಭದಲ್ಲಿ ಕೇವಲ ನಿಗಮನವಾಕ್ಯವೇ ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವಾಗಿರುವುದು ಉಂಟು ಎಂದು ಭಾವ. **ಚ ತಥಾ** ಶಬ್ದಗಳು ಸಮುಚ್ಚಯಾರ್ಥದಲ್ಲಿವೆ.

**ಅಥವಾ, ರೂಪಾತ್ಮಶಬ್ದೌ ಸ್ವರೂಪಸ್ಯೈವ ವಾಚಕೌ । 'ಯುಕ್ತಿಃ' ಇತಿ**

---

1. ದೃಷ್ಟಾಂತ ಅಂದರೆ ಮಹಾನಸ. ಈ ಮಹಾನಸವು ಯುಕ್ತಿಯ ನಿರೂಪಕವಲ್ಲ ಆದುದರಿಂದ ದೃಷ್ಟಾಂತ ಶಬ್ದದಿಂದ ದೃಷ್ಟಾಂತವಚನ- 'ಮಹಾನಸವತ್' ಎನ್ನುವುದನ್ನು ಪರಿಗ್ರಹಿಸಬೇಕು. ನ್ಯಾಯಶಾಸ್ತ್ರದಲ್ಲಿ ಪಂಚಾವಯವಗಳು ಎಂದು ನಿರೂಪಿತವಾದುದರಲ್ಲಿ ಉದಾಹರಣವಾಕ್ಯವೂ ಒಂದು. ಆದುದರಿಂದ 'ಉದಾಹರಣನಿರೂಪಿತ' ಎಂದು ಮೂಲದಲ್ಲಿ ನಿರೂಪಿಸಬೇಕಿತ್ತು ಹಾಗೆ ನಿರೂಪಿಸದೆ 'ದೃಷ್ಟಾಂತರೂಪಿಕಾ' ಎಂದು ತಿಳಿಸಲು ಕಾರಣ- ಸಮಗ್ರ ಉದಾಹರಣವಾಕ್ಯವು- 'ಯತ್ರಯತ್ರ ಧೂಮಃ ತತ್ರತತ್ರ ವಹ್ನಿಃ ಮಹಾನಸವತ್' ಎಂಬ ಸಮಗ್ರವಾದ ವಾಕ್ಯವೇ ವ್ಯಾಪ್ತಿಯುಕ್ತ ಲಿಂಗಾದಿಗಳ ಸ್ಮಾರಕ ಎಂದೇನಲ್ಲ, ಉದಾಹರಣವಾಕ್ಯದ ಏಕದೇಶವಾದ 'ಮಹಾನಸವತ್' ಎನ್ನುವ ದೃಷ್ಟಾಂತವಚನವೂ ಸ್ಮಾರಕವಾಗಿದೆ. ಅಷ್ಟು ಮಾತ್ರವನ್ನೂ ಪರಿಗ್ರಹಿಸಬಹುದು ಎಂದು ಸೂಚಿಸಲು 'ದೃಷ್ಟಾಂತರೂಪಿಕಾ' ಎಂದು ಮೂಲದಲ್ಲಿ ತಿಳಿಸಲಾಗಿದೆ ಎಂದು ಭಾವ.
2. ಯುಕ್ತಿಯು ನಿಗಮನದ ಸ್ವರೂಪವಲ್ಲ, ಆದುದರಿಂದ ಹಿಂದೆ 'ಪ್ರತಿಜ್ಞಾರೂಪಾ' ಎನ್ನುವದನ್ನು ಹೇಗೆ ವ್ಯಾಖ್ಯಾನಿಸಲಾಗಿದೆಯೋ ಅದೇ ರೀತಿಯಲ್ಲಿ ಇಲ್ಲಿಯೂ ವ್ಯಾಖ್ಯಾನಿಸಿಕೊಳ್ಳುವುದು ಎಂದು ಭಾವ.
3. ಮೂಲದಲ್ಲಿ 'ಪರಾ ನಿಗಮನಾತ್ಮಿಕಾ' ಎಂದಿದೆ. ಪರಾ ಎಂದರೆ ಬೇರೆಯಾದದ್ದು ಎಂದು ಅರ್ಥವು ಪ್ರತಿಭಾಸವಾಗುವುದು. ಆದರೆ ಪ್ರತಿಜ್ಞಾ ಮತ್ತು ನಿಗಮನಗಳು ಅಭಿನ್ನವಾಗಿವೆ. 'ಪರ್ವತವು ಅಗ್ನಿಯನ್ನು ಹೊಂದಿದೆ' ಎನ್ನುವದು ಪ್ರತಿಜ್ಞಾವಾಕ್ಯ, ಹಾಗೆ ನಿಗಮನ ವಾಕ್ಯವೂ ಸಹ 'ತಸ್ಮಾತ್ ತಥಾ' ಎನ್ನುವುದು 'ಆದುದರಿಂದ ಪರ್ವತವು ಅಗ್ನಿಯನ್ನು ಹೊಂದಿದೆ' ಎನ್ನುವುದು ಅದರ ಅನುವಾದ. ಒಟ್ಟಿನಲ್ಲಿ ನಿಗಮನ ಪ್ರತಿಜ್ಞಾವಾಕ್ಯಗಳಲ್ಲಿ ಭೇದವಿಲ್ಲ. ಆದುದರಿಂದ ಇಲ್ಲಿ ವ್ಯವಹೃತವಾದ ಭೇದವು ಕೇವಲ ಉಪಚರಿತ ಎಂದು ಭಾವಿಸುವುದು ಎಂದು ಭಾವ.

**ತತ್ಸ್ಮರಣಾದಿಕಾರಣೋಪಲಕ್ಷಣಮ್ । ಉಕ್ತಂ ಪಿಂಡೀಕೃತ್ಯಾಽಹ- 'ಪೃಥಗ್' ಇತಿ । ಪ್ರತಿಜ್ಞಾದಿಕಂ ಪೃಥಕ್ಪೃಥಗೇವ ಯುಕ್ತಿತಯಾ- ಯುಕ್ತಿಸ್ಮರಣಾದಿ- ಹೇತುತಯಾ ಪ್ರಮಾಣತ್ವಮ್- ಉಪಯುಕ್ತತ್ವಂ ಯಾತಿ । ತುಶಬ್ದೋ ಹೇತುಗರ್ಭತ್ವಾದಿವಕ್ಷ್ಯಮಾಣವಿಶೇಷದ್ಯೋತನಾರ್ಥಃ । ಯದೀದಮ್ ಆಗಮತಯಾನುಮಾನಸ್ಯ ಬೋಧಕಂ ಸ್ಯಾತ್, ಸ್ಯಾತ್ ತದಾ ಅವಯವನಿಯಮಸ್ತತ್ಕ್ರಮಶ್ಚ । ಇದಂ ತು ಸ್ಮರಣಾದಿಕಾರಣತ್ವೇನ ಉಪಯುಜ್ಯತೇ । ಸ್ಮರಣಸ್ತು ಯದ್ಯೇಕದೇಶಾದಿನಾಽಪಿ ದೃಷ್ಟಂ ಕಿಮುತ ಪ್ರತಿಜ್ಞಾದಿಭಿಃ? ಅತೋ 'ವ್ಯರ್ಥೋಽಯಂ ನಿಯಮಃ' ಇತಿ ಸಮುದಾಯಾರ್ಥಃ ।**

ಅಥವಾ (ಮೂಲದಲ್ಲಿನ) ರೂಪಾ ಮತ್ತು ಆತ್ಮ ಶಬ್ದಗಳು ಸ್ವರೂಪವನ್ನೇ ತಿಳಿಸುವವು. '**ಯುಕ್ತಿಃ**' ಎನ್ನುವದರಿಂದ, 'ಯುಕ್ತಿಯ ಸ್ಮರಣಾದಿಗಳಿಗೆ ಕಾರಣವಾದುದನ್ನು' ಎಂಬುವುದು ಸೂಚಿತವಾಗಿದೆ[1]. ಈವರೆಗೆ ಹೇಳಿರುವದನ್ನು ಸಂಗ್ರಹಿಸಿ ತಿಳಿಸುವರು '**ಪೃಥಗ್...**' ಎಂದು. ಪ್ರತಿಜ್ಞಾ ಮುಂತಾದವು ಪ್ರತ್ಯೇಕವಾಗಿಯೇ **ಯುಕ್ತಿತಾ**- ಯುಕ್ತಿಸ್ಮರಣಾದಿಗಳಿಗೆ ಕಾರಣವಾಗುವ ಮುಖಾಂತರ **ಪ್ರಮಾಣತ್ವಂ**- ಉಪಯುಕ್ತತೆಯನ್ನು ಹೊಂದಿವೆ. **ತು** ಶಬ್ದವು ಮುಂದೆ ತಿಳಿಸಲಿರುವ 'ಪ್ರತಿಜ್ಞಾ ಹೇತುಗರ್ಭೈವ...' ಈ ಮುಂತಾದ ವಿಶೇಷಗಳನ್ನು ಸೂಚಿಸುವದು. ಒಂದು ವೇಳೆ ಈ ಅನುಮಾನವು ಆಗಮದಂತೆ ಬೋಧಕವಾಗುವುದಾದಲ್ಲಿ ಆಗ ಅವಯವದ ನಿಯಮವೂ ಅದರ ಕ್ರಮವೂ ಒಪ್ಪಿತವಾಗುತ್ತಿತ್ತು. ಇದಾದರೋ (ಪ್ರತಿಜ್ಞಾದಿ ವಾಕ್ಯಗಳಾದರೋ) ಸ್ಮರಣಾದಿಗಳಿಗೆ ಕಾರಣವಾಗಿ ಉಪಯೋಗವಾಗುವುದು. ಸ್ಮರಣವಾದರೋ ಒಂದರಿಂದಲೇ (ಪ್ರಾಪ್ತವಾಗುವುದು) ಕಂಡಿರುವಾಗ, ಪ್ರತಿಜ್ಞಾದಿ ಸಮಸ್ತವಾಕ್ಯಗಳಿಂದ (ಪ್ರಾಪ್ತವಾಗುವುದು) ಎಂದು

---

1. ಮೂಲದಲ್ಲಿನ ಯುಕ್ತಿ ಎನ್ನುವ ಶಬ್ದಕ್ಕೆ 'ಯುಕ್ತಿಯ ಸ್ಮರಣಾದಿಗಳಿಗೆ ಕಾರಣವಾದದ್ದು' ಎಂದು ಅರ್ಥೈಸಿದಲ್ಲಿ, ರೂಪಾ ಮತ್ತು ಆತ್ಮ ಶಬ್ದಗಳಿಗೆ 'ನಿರೂಪಕಾ' ಎನ್ನುವ ಅರ್ಥವನ್ನು ಕಲ್ಪಿಸದೇ, 'ತತ್ಸ್ವರೂಪ' ಎನ್ನುವ ಮುಖ್ಯಾರ್ಥವನ್ನೇ ವಿವಕ್ಷಿಸಿ ಮೂಲವನ್ನು ಅರ್ಥೈಸ ಬಹುದು ಎಂದು ಭಾವ.

ಹೇಳುವದೇನು? (ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ) ಆದುದರಿಂದ ಈ ನಿಯಮವು ವ್ಯರ್ಥ ಎಂದು ಒಟ್ಟು ಭಾವ[1].

**ಕೇವಲ ಪ್ರತಿಜ್ಞಾವಾಕ್ಯವೇ ಪೂರ್ಣಾನುಮಾನ**

**ಪ್ರತಿಜ್ಞಾಹೇತುಗರ್ಭೈವ ಪೃಥಕ್ ಪ್ರಾಮಾಣ್ಯಮೇಷ್ಯತಿ ।**

ಹೇತುವಾಕ್ಯ ಘಟಿತ ಕೇವಲ ಪ್ರತಿಜ್ಞಾವಾಕ್ಯವೇ ಪ್ರತ್ಯೇಕವಾಗಿ ಪ್ರಾಮಾಣ್ಯವನ್ನು (ಪೂರ್ಣಾನುಮಾನತ್ವವನ್ನು) ಹೊಂದುವುದು.

ನನು ಪ್ರತಿಜ್ಞಾಯಾಂ, ಲಿಙ್ಗಂ ವಾ ತದ್ಧರ್ಮಯೋರ್ವ್ಯಾಪ್ತಿ-ಪಕ್ಷಧರ್ಮತಯೋರನ್ಯತರದ್ವಾ ನ ಸ್ಫುರತಿ । ತತ್ಕಥಮನುಮಾನಸ್ಮೃತ್ಯಾದಿ-ಹೇತುತ್ವಂ ತಸ್ಯಾಃ? ಇತ್ಯತ ಆಹ -'**ಪ್ರತಿಜ್ಞಾ**' ಇತಿ । '**ಹೇತುಗರ್ಭಾ**-ಹೇತ್ವರ್ಥಗರ್ಭಾ- ಹೇತ್ವರ್ಥವಿಶೇಷಣಧರ್ಮಿಕಾ' ಇತ್ಯರ್ಥಃ । ನ ತು ಶುದ್ಧಾ ಪ್ರತಿಜ್ಞಾ ಇತ್ಯೇವಾರ್ಥಃ । **ಪೃಥಗ್**-ಅವಯವಾನ್ತರಾನಪೇಕ್ಷಯಾ । **ಪ್ರಾಮಾಣ್ಯಮ್**- ಅನುಮಾನಸ್ಮೃತ್ಯಾದಿಹೇತುತ್ವಮ್ ।

ಸರಿ ಆದರೆ, (ಕೇವಲ) ಪ್ರತಿಜ್ಞಾವಾಕ್ಯದಿಂದ ಲಿಂಗವಾಗಲಿ, ಆ ಸಾಧ್ಯಹೇತುಗಳ ವ್ಯಾಪ್ತಿಯಾಗಲಿ, ಹೇತುವು ಪಕ್ಷದಲ್ಲಿದೆ ಎನ್ನುವದಾಗಲಿ ಪ್ರತಿಭಾಸವಾಗದು, ಆದುದರಿಂದ ಹೇಗೆ (ಕೇವಲ ಪ್ರತಿಜ್ಞಾದಿ ಒಂದೊಂದೇ ವಾಕ್ಯಗಳು) ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣ? ಎಂದು, ಆದುದರಿಂದ ಉತ್ತರಿಸುವರು '**ಪ್ರತಿಜ್ಞಾ**' ಎಂದು. **ಹೇತುಗರ್ಭಾ**- ಹೇತ್ವರ್ಥಗರ್ಭಿತವಾದ-ಹೇತ್ವರ್ಥಕವಾದ ವಿಶೇಷಣವನ್ನು ಹೊಂದಿರುವ (ಪ್ರತಿಜ್ಞಾರೂಪ) ಧರ್ಮಿಯು ಎಂದು ಭಾವ. ಆದರೆ ಶುದ್ಧವಾದ ಪ್ರತಿಜ್ಞಾವಾಕ್ಯವಲ್ಲ ಎಂದು ಭಾವ. **ಪೃಥಕ್**-

---

1. ಕ್ರಿಯಾಪದ ಕರ್ತೃಪದ ಕರ್ಮಪದ ವಿಶೇಷಣ ಈ ಮುಂತಾದವು ಇಲ್ಲದ ಸಂದರ್ಭದಲ್ಲಿ ವಾಕ್ಯಗಳು ಪೂರ್ಣಬೋಧಕವಾಗಲಾರದು, ಹಾಗಾಗಿ ವಾಕ್ಯಗಳಲ್ಲಿ ಕೆಲವು ನಿಯಮಗಳು ಆವಶ್ಯಕವಾಗಿವೆ. ಅನುಮಾನದಲ್ಲಾದರೋ ವ್ಯಾಪ್ತ್ಯಾದಿ ಸ್ಮರಣೆಗೆ ಕಾರಣವಾದ ಶಬ್ದಗಳ ಆವಶ್ಯಕತೆ ಇರುವುದು. ಈ ಸ್ಮರಣೆಯು ಪ್ರತಿಜ್ಞಾದಿ ಏಕವಾಕ್ಯದಿಂದಲೂ ಸಂಭಾವಿತವಾಗಿದೆ, ತನ್ನಿಮಿತ್ತವಾಗಿ ಇಂತಿಷ್ಟೇ ವಾಕ್ಯಗಳು ಅನುಮಾನದ ಅವಯವಗಳು ಎಂಬ ನಿರ್ಬಂಧ ಸಲ್ಲದು ಎಂದು ಭಾವ.

ಬೇರೇ ಅವಯವವಾಕ್ಯವನ್ನು ಅಪೇಕ್ಷಿಸದೇ. ಪ್ರಾಮಾಣ್ಯಂ- ಅನುಮಾನ ಸ್ಮೃತ್ಯಾದಿಗಳಿಗೆ ಕಾರಣತ್ವವನ್ನು (ಹೊಂದಿದೆ).

**ಪ್ರತಿಜ್ಞಾವಾಕ್ಯವು ಪೂರ್ಣಾನುಮಾನ ಎನ್ನುವದರ ಸ್ಫುಟೀಕರಣ**

**'ಧೂಮವಾನ್ ಪರ್ವತೋಽಗ್ನಿಮಾನ್' ಇತ್ಯುಕ್ತೇ ಶ್ರೋತುಃ ವಿಮರ್ಶೋ ಜಾಯತೇ । ಮಯಾ ಪ್ರಮಾಣೇ ಪೃಷ್ಟೇಽನೇನೇದಮ್ ಉದಿತಮ್ । ತತ್ರ ಪರ್ವತೋಽಗ್ನಿಮಾನಿತ್ಯೇತಾವದ್ ವಿಷಯವಚನಮ್ । ತತೋ ನೂನಂ 'ಧೂಮವಾನ್' ಇತಿ ಪ್ರಮಾಣೋಕ್ತಿಃ ಭವಿತುಮರ್ಹತಿ । ನ ಚೇದಂ ಪ್ರತ್ಯಕ್ಷಮ್, ಆಗಮೋ ವಾ, ಅತೋ 'ಲಿಙ್ಗಮೇವೇದಮ್' ಇತಿ ನಿಶ್ಚಿತ್ಯ ತದೀಯೇ ವ್ಯಾಪ್ತಿಪಕ್ಷಧರ್ಮತೇ ಸುಸ್ಮೂರ್ಷತೇಽನುಸನ್ಧತ್ತೇ ಜಿಜ್ಞಾಸತೇ ವೇತಿ ಕಿಮನುಪಪನ್ನಮ್? 'ಅಧಿಕಂ ನ್ಯೂನಂ ವಾ(ಚ) ಏತದ್' ಇತಿ ಕಿಮಿತಿ ನಾಶಙ್ಕತೇ? 'ಯುಕ್ತಮೇವಾಯಂ ಬ್ರವೀತಿ' ಇತಿ ವಾದಿನಿ ಪ್ರತಿವಾದಿನಃ ಪ್ರತ್ಯಯಾಭಾವಾದಿತಿ ಚೇನ್ನ, ಏವಂ ವಿಧಾನಾಂ ವಾಚೋಯುಕ್ತೀನಾಂ ಲೋಕೇ ಶಾಸ್ತ್ರೇ ಚ ಸಾಂವ್ಯಾಹಾರಿಕತ್ವೇನ ತದತಿಕ್ರಮಣೇನ ಶಙ್ಕಾನುದಯಾತ್ । ಅನ್ಯಥಾಽಗ್ನಿಶಬ್ದಸ್ಯ ಔಷಧ-ವಿಶೇಷಾರ್ಥತ್ವಂ ಗೃಹೀತ್ವಾಽಸಙ್ಗತಿಮಪ್ಯಾಶಙ್ಕೇತ । 'ತಥಾತ್ವೇ ಛಲೇನ ನಿಗೃಹ್ಯತಃ' ಇತಿ ಚೇತ್, ತದೇವ ಕುತಃ? 'ಪ್ರಕರಣಾದ್ಯನನುಸಂಧಾನಾದ್' ಇತಿ ಚೇತ್ಸಮಂ ಪ್ರಕೃತೇಽಪೀತಿ ।**

'ಧೂಮವಿರುವ ಈ ಪರ್ವತದಲ್ಲಿ ಅಗ್ನಿಯು ಇದೆ' ಎಂದು ಹೇಳಲು, ಶ್ರೋತೃವಿನಲ್ಲಿ ವಿಚಾರವು ಉಂಟಾಗುವುದು. (ಪರ್ವತದಲ್ಲಿ ವಹ್ನಿಯು ಇದೆ ಎಂಬುವ ವಿಷಯದಲ್ಲಿ) ಪ್ರಮಾಣವೇನು ಎಂದು ಪ್ರಶ್ನಿಸಲು ಈ ವ್ಯಕ್ತಿಯು ಇದನ್ನು (ಪ್ರತಿಜ್ಞಾ ವಾಕ್ಯವನ್ನು) ಹೇಳಿರುವನು. ಇಲ್ಲಿ (ಚರ್ಚೆಯಲ್ಲಿ) 'ಪರ್ವತವು ಅಗ್ನಿಯನ್ನು ಹೊಂದಿದೆ' ಎನ್ನುವುದಷ್ಟೆ ವಿಷಯ ವಚನ. ಆದುದರಿಂದ 'ಧೂಮಯುಕ್ತವಾದ' ಎನ್ನುವುದು ಪ್ರಮಾಣೋಕ್ತಿಯಾಗಿ ಇರಬಹುದು. ಇದು ಪ್ರತ್ಯಕ್ಷ ಅಥವಾ ಆಗಮವೂ ಅಲ್ಲ. ಆದುದರಿಂದ ಲಿಂಗವೇ ಎಂದು ನಿಶ್ಚಯಿಸಿ, ಅದಕ್ಕೆ ಸಂಬಂಧಿಸಿದ ವ್ಯಾಪ್ತಿ, ಪಕ್ಷಧರ್ಮತಾಗಳು ಸ್ಮರಣೆಗೆ ಬರುವುದು, (ಅವುಗಳನ್ನು ಪ್ರಕೃತಕ್ಕೆ) ಅನುಸಂಧಾನ

ಮಾಡಿಕೊಳ್ಳುವನು. ಅಥವಾ ವಿಚಾರಪರನಾಗುವನು (ಹೀಗಿರುವಾಗ) ಅನುಪಪನ್ನವಾದುದು ಏನು? ಈ ರೀತಿಯಾಗಿ ವಾದಿಯು ಹೇಳಲು, ಪ್ರತಿವಾದಿಗೆ (ವಾದಿಯಲ್ಲಿ) ವಿಶ್ವಾಸ ಇಲ್ಲದಿರುವುದರಿಂದ ಅದನ್ನು (ವಾದಿಯ ಹೇಳಿಕೆಯನ್ನು) 'ಅಧಿಕ' 'ನ್ಯೂನ' ಎಂದೋ ಏಕೆ ಶಂಕಿಸಲಾರ? ಅದು (ಹೀಗೆ ಶಂಕಿಸುವುದು) ಯುಕ್ತವೇ ಆಗಿದೆ ಎನ್ನುವುದು ತರವಲ್ಲ. ಈ ರೀತಿಯಾದ ಮಾತಿನ ವ್ಯವಹಾರಗಳು ಲೋಕದಲ್ಲಿ ಶಾಸ್ತ್ರದಲ್ಲಿ ಸಂಪನ್ನವಾದ ವ್ಯವಹಾರವೆಂದು (ಒಪ್ಪಲಾಗಿರುವುದರಿಂದ), ಅದನ್ನು ಅತಿಕ್ರಮಿಸಿ ಶಂಕೆಗೆ ಅವಕಾಶವಿಲ್ಲ. ಹೀಗಾಗದ ಪಕ್ಷದಲ್ಲಿ ಅಗ್ನಿ ಶಬ್ದವನ್ನು ಕೇಳಿದೊಡನೆ ಔಷಧವಿಶೇಷವೆಂದು ತಿಳಿದು ಅಸಂಗತಿಯನ್ನು ಶಂಕಿಸಬಹುದು. ಹಾಗಾದಲ್ಲಿ (ಅಸಂಗತಿ ಎಂದು ಶಂಕಿಸಿದಲ್ಲಿ) ಛಲ (ಎಂಬ ನಿಗ್ರಹಸ್ಥಾನ)ದಿಂದ ನಿಗ್ರಹಿಸಬಹುದು ಎಂದಲ್ಲಿ ಅದು ಹೇಗೆ? 'ಪ್ರಕರಣಾನುಸಂಧಾನದಿಂದ' ಎಂದಲ್ಲಿ ಪ್ರಕೃತದಲ್ಲೂ ಅದು ಸಮ[1].

---

1. ಪ್ರಕೃತವಾದವನ್ನು ಈ ರೀತಿಯಾಗಿ ಸಂಗ್ರಹಿಸಬಹುದು- ವಾದಿ-ಪ್ರತಿವಾದಿಗಳಲ್ಲಿ ಪರ್ವತದಲ್ಲಿ ಅಗ್ನಿಯು ಇದೆಯೋ ಇಲ್ಲವೋ ಎನ್ನುವ ಚರ್ಚೆಯು ಸಂಪನ್ನವಾಗಿದೆ. ಆಗ ಅಗ್ನಿಯ ಅಸ್ತಿತ್ವದ ವಿಷಯದಲ್ಲಿ ಪ್ರಮಾಣವೇನು? ಎಂದು ಪ್ರತಿವಾದಿಯು ಪ್ರಶ್ನಿಸಲು, ವಾದಿಯು 'ಧೂಮಯುಕ್ತವಾದ ಪರ್ವತದಲ್ಲಿ ವಹ್ನಿಯು ಇದೆ' ಎಂದು ನುಡಿಯುವನು. ವಸ್ತುತಃ ವಾದಿಯು 'ಪರ್ವತದಲ್ಲಿ ಅಗ್ನಿಯು ಇದೆ ಧೂಮವಿರುವದರಿಂದ ಮಹಾನಸದಂತೆ' ಎಂದು ತನ್ನ ವಾದವನ್ನು ಮಂಡಿಸಬೇಕಿತ್ತು, ಆದರೆ ವಾದಿಯು ಪಕ್ಷವನ್ನು ಹೇತು ಗರ್ಭಿತವಾಗಿ ಅಂದರೆ 'ಧೂಮಯುಕ್ತವಾದ ಪರ್ವತ' ಎಂದು ದಾಖಲಿಸಿರುವನು. ಇದರಿಂದ ಧೂಮದ ಇರುವಿಕೆಯನ್ನು ಅಗ್ನಿಯ ಅಸ್ತಿತ್ವಕ್ಕೆ ಕಾರಣವನ್ನಾಗಿ ವಾದಿಯು ಪ್ರಸ್ತಾಪಿಸಿರುವನು ಎಂದು ಪ್ರತಿವಾದಿಗೆ ಭಾಸವಾಗುವುದು. ತನಿಮಿತ್ತವಾಗಿ ಅಗ್ನಿ-ಧೂಮಗಳ ಸಾಹಚರ್ಯ ಮುಂತಾದ ಅನುಮಾನದ ಇತರ ಎಲ್ಲ ಅವಯವಗಳೂ ಪ್ರತಿವಾದಿಗೆ ವಾದಿಯು ಸೂಚಿಸಿದಂತಾಗುವುದು. ಆದುದರಿಂದ ಕೇವಲ ಪ್ರತಿಜ್ಞಾ ವಾಕ್ಯವೇ ಪೂರ್ಣಪ್ರಮಾಣದಲ್ಲಿ ಯುಕ್ತಿಯಾಗುವುದು ಎಂದು ಆಚಾರ್ಯರು ತಿಳಿಸಿರುವರು. ಆದರೆ ಆವಶ್ಯವಾಗಿರುವದನ್ನು ಹೇಳದ ಪಕ್ಷದಲ್ಲಿ 'ನ್ಯೂನತಾ' ಎನ್ನುವ ದೋಷವನ್ನು, ಅಗತ್ಯಕ್ಕಿಂತಲೂ ಹೆಚ್ಚಿನ ಮಾತುಗಳಿದ್ದಲ್ಲಿ 'ಆಧಿಕ್ಯ' ಎನ್ನುವ ದೋಷವನ್ನು ವಾದಕಥಾದಲ್ಲಿ ಮಂಡಿಸುವ ಪರಿಪಾಠವು ಇದೆ. ಪ್ರಕೃತ ಕೇವಲ ಪ್ರತಿಜ್ಞಾವಾಕ್ಯವನ್ನು ಮಾತ್ರ ವಾದಿಯು ಹೇಳಿರುವದರಿಂದ ನ್ಯೂನತಾ ದೋಷವನ್ನು ಹೇಳಲು ಅವಕಾಶವಿದೆ. ಮತ್ತು ಪ್ರತಿಜ್ಞಾದಿ ವಾಕ್ಯಗಳೇ ಅಗತ್ಯವಾದ ವಿಷಯಗಳನ್ನು

ಪುಟ 437ರಲ್ಲಿ........

**ಕೇವಲ ಹೇತುವಾಕ್ಯವೂ ಪೂರ್ಣಾನುಮಾನವಾಗಬಹುದು**

**ಸಿದ್ಧತ್ವೇನ ಪ್ರತಿಜ್ಞಾಯಾ ಹೇತುರ್ಮಾನಂ ಪೃಥಗ್ ಭವೇತ್ ।**

ಪ್ರತಿಜ್ಞಾ ಭಾಗವು (ಈ ಮೊದಲೇ ವಿವಾದದಿಂದ) ಸಿದ್ಧವಾದುದರಿಂದ ಕೇವಲ ಹೇತುವಚನವು ಪೂರ್ಣಾನುಮಾನವಾಗುವುದು.

**ನನು, ಹೇತುಮಾತ್ರಂ ಕಥಮನುಮಾನಸ್ಮೃತ್ಯಾದಿಹೇತುರ್ಭವೇತ್? ಸಾಧ್ಯಧರ್ಮಾಪ್ರತೀತ್ಯಾ ವ್ಯಾಪ್ತೇಃ, ಧರ್ಮ್ಯಪ್ರತೀತ್ಯಾ ಪಕ್ಷಧರ್ಮತಾಯಾಶ್ಚ ಸ್ಮರಣಾದ್ಯನುದಯಾದ್' ಇತ್ಯತ ಆಹ - 'ಸಿದ್ಧತ್ವೇನ' ಇತಿ ॥ ಪ್ರತಿಜ್ಞಾಯಾಃ- ಪ್ರತಿಜ್ಞಾರ್ಥಸ್ಯ । ಸಾಧ್ಯಧರ್ಮವಿಶಿಷ್ಟಸ್ಯ ಧರ್ಮಿಣೋ ವಿವಾದತಃ, 'ಪರ್ವತಸ್ಯಾಗ್ನಿಮತ್ತ್ವಂ ಕುತಃ?' ಇತ್ಯಾದಿಪ್ರಶ್ನವಾಕ್ಯೇನ ವಾ ಸಿದ್ಧತ್ವೇನ - ಬುದ್ಧಿಸ್ಥತ್ವೇನ ಕಾರಣೇನ । ಮಾನಮ್- ಅನುಮಾನಸ್ಮೃತ್ಯಾದಿಹೇತುಃ ।**

ಸರಿ ಹಾಗಾದಲ್ಲಿ, ಕೇವಲ ಹೇತುವು (ಹೇತುಕಥನ ವಾಕ್ಯವು) ಅನುಮಾನದ

---

...... ಪುಟ 436 ರಿಂದ

ಮಂಡಿಸಲು ಸಮರ್ಥವಾದಲ್ಲಿ, ಪಂಚ ಅವಯವಗಳನ್ನೂ ತಿಳಿಸಿದ ಸಂದರ್ಭದಲ್ಲಿ ಆಧಿಕ್ಯ ರೂಪ ದೋಷವನ್ನು ಹೇಳಲು ಅವಕಾಶವಿದೆ. ಆದರೆ ವ್ಯವಹಾರದಲ್ಲಿ ಹೀಗೆ ಕಂಡಿಲ್ಲ, ಎನ್ನುವ ಸಂದೇಹವನ್ನು ನಿರಾಕರಿಸುವರು. 'ಪರ್ವತವು ಅಗ್ನಿಯನ್ನು ಹೊಂದಿದೆ ಧೂಮವಿರುವುದರಿಂದ' ಎಂದು ವ್ಯಕ್ತಿಯೋರ್ವನು ನುಡಿಯಲು, ಅಗ್ನಿ ಶಬ್ದಕ್ಕೆ ಬೆಂಕಿ ಮತ್ತು ವಾಕ್ ಎನ್ನುವ ಅರ್ಥವೂ ಇದೆ. ವಾಕ್ ಎನ್ನುವ ಅರ್ಥವನ್ನು ವಿವಕ್ಷಿಸಿ, 'ಅಸಂಗತವಾಗಿ ಮಾತನಾಡುವಿ' ಎಂದು ಹೇಳಲು ಅವಕಾಶವಿಲ್ಲವೆ? ಆದರೆ ಹಾಗೆ ಹೇಳಲು ಆಗದು, ಕಾರಣ- ಈ ರೀತಿಯಾಗಿ ವಾದವನ್ನು ಮಂಡಿಸುವವರನ್ನು ಶಾಸ್ತ್ರದಲ್ಲಿ ಛಲವಾದಿ ಎಂದು ನಿಗ್ರಹಿಸಲಾಗುವುದು. ಶಬ್ದಗಳಿಗೆ ಬೇರೇರೀತಿಯಲ್ಲಿ ಅರ್ಥವನ್ನು ಕಲ್ಪಿಸಿ ವಾದಿಸಿದಲ್ಲಿ ಛಲವಾದಿ ಎನ್ನುವರು. ಆದರೆ ಈ ವಾದವು ಛಲವೇಕೆ? 'ಪ್ರಸಕ್ತ ಪ್ರಕರಣವನ್ನು ಪರಾಮರ್ಶಿಸಿ ಮಾತನಾಡಿಲ್ಲವಾದುದರಿಂದ' ಎಂದು ಉತ್ತರಿಸಬೇಕು. ಹಾಗಾದಲ್ಲಿ ಪ್ರಕೃತವೂ ಪ್ರಸಕ್ತವಾದ ವಾದವನ್ನು ಪರಾಮರ್ಶಿಸಿದಾಗ ಪ್ರತಿಜ್ಞಾದಿ ಕೇವಲ ಏಕ ವಾಕ್ಯಗಳಿಂದಲೂ ಅನುಮಿತಿಗೆ ಅಗತ್ಯವಾದ ಎಲ್ಲ ಮಾಹಿತಿಗಳು ಸೂಚಿತವಾಗುವುದರಿಂದ, ನ್ಯೂನತೆಯು ಇಲ್ಲವೆಂದು, ವ್ಯಾಪ್ತ್ಯಾದಿಗಳ ಸ್ಮರಣೆಯು ಪ್ರಾಪ್ತವಾಗದ ಸಂದರ್ಭದಲ್ಲಿ ಪಂಚಾವಯವಗಳನ್ನೂ ಹೇಳುವ ಅವಶ್ಯಕತೆಯು ಇರುವುದರಿಂದ ಆಧಿಕ್ಯವೂ ಇಲ್ಲ ಎಂದು ತಿಳಿಯುವುದು.

ಸ್ಮರಣೆಗೆ ಹೇಗೆ ಕಾರಣವಾದೀತು ? ಸಾಧ್ಯಧರ್ಮದ ಪ್ರತೀತಿಯು ಆಗದಿರುವುದರಿಂದ, ವ್ಯಾಪ್ತಿಯ, ಧರ್ಮಿಯ (ಪಕ್ಷದ) ಪ್ರತೀತಿ ಯಾಗದಿರು-ವುದರಿಂದ, ಪಕ್ಷಧರ್ಮತಾದ (ಹೇತುವು ಪಕ್ಷದಲ್ಲಿದೆ ಎನ್ನುವುದರ) ಸ್ಮರಣೆ ಮುಂತಾದವು ಬೋಧವಾಗದಿರುವುದರಿಂದ ಎಂದು. ಆದುದರಿಂದ ಉತ್ತರಿಸುವರು 'ಸಿದ್ಧತ್ವೇನ' ಎಂದು. ಪ್ರತಿಜ್ಞಾಯಾಃ- ಪ್ರತಿಜ್ಞಾವಿಷಯದ. ಸಾಧ್ಯಧರ್ಮದಿಂದ ಯುಕ್ತವಾದ ಧರ್ಮಿಯ(ಪಕ್ಷದ) ವಿವಾದದಿಂದ, ಅಥವಾ 'ಪರ್ವತವು ಅಗ್ನಿಯಿಂದ ಯುಕ್ತವಾಗಿದೆ ಎನ್ನುವದು ಯಾವುದರಿಂದ (ಯಾವ ಪ್ರಮಾಣದಿಂದ)?' ಈ ಮುಂತಾದ ಪ್ರಶ್ನವಾಕ್ಯಗಳಿಂದ ಸಿದ್ಧತ್ವೇನ-ಬುದ್ಧಿಸ್ಥವಾದುದರಿಂದ. ಮಾನಂ- ಅನುಮಾನದ ಸ್ಮರಣಾದಿಗಳಿಗೆ ಕಾರಣವು (ಆಗುವುದು).

**ಕೇವಲ ದೃಷ್ಟಾಂತವಾಕ್ಯವೂ ಪೂರ್ಣಾನುಮಾನವಾಗಬಹುದು**

**ಪ್ರತಿಜ್ಞಾವಯವತ್ತಾತ್ತು ಸ್ವಾತನ್ತ್ರ್ಯೇಣೈವ ಮಾನತಾಮ್ ।**
**ದೃಷ್ಟಾನ್ತೋ ಯಾತಿ - - - - - - - - - ।**

ಹೇತುಗರ್ಭಿತವಾದ ಪ್ರತಿಜ್ಞಾದಿಂದ ಸಹಕೃತವಾದ ಕೇವಲ ಉದಾಹರಣವಾಕ್ಯವು (ಅಥವಾ ಈ ಮೊದಲೇ ವಿವಾದದಿಂದ ಪ್ರತಿಜ್ಞಾದಿಗಳು ಸಿದ್ಧವಾದುದರಿಂದ) ಪೂರ್ಣಾನುಮಾನವಾಗುವುದು.

**ನನು ದೃಷ್ಟಾನ್ತವಚನಮಾತ್ರಸ್ಯ ಕಥಮನುಮಾನಸ್ಮರಣಾದಿ-ಕಾರಣತ್ವಮ್? ಲಿಙ್ಗಧರ್ಮ್ಯಾದ್ಯನ್ಯತಮಸ್ಯಾಪಿ ತತೋಽಸ್ಫುರಣಾದ್ ಇತ್ಯತ ಆಹ- 'ಪ್ರತಿಜ್ಞಾ' ಇತಿ । ಪ್ರತಿಜ್ಞಾವಯವಃ- ಸಹಕಾರಿಣೀ ಯಸ್ಯಾಸೌ ತಥೋಕ್ತಸ್ತಸ್ಯ ಭಾವಸ್ತತ್ತ್ವಂ ತಸ್ಮಾತ್ । ತಚ್ಚ ವಿವಾದಾದಿನೋಕ್ತ್ಯಾ ವಾ ನ ಕಶ್ಚಿದ್ವಿರೋಧಃ । ತುಶಬ್ದಃ ಚಶಬ್ದಾರ್ಥೇ । ತೇನ ಹೇತುಗರ್ಭತ್ವಂ ಸಮುಚ್ಚಿನೋತಿ । ಅನ್ಯಥಾ ಲಿಙ್ಗಧರ್ಮಿಣೋಽಪ್ರತೀತೌ ಪ್ರತಿಜ್ಞಾಽಪಿ ವ್ಯರ್ಥಾ ಸ್ಯಾತ್ ।**

ಸರಿ ಹಾಗಾದಲ್ಲಿ, ಕೇವಲ ದೃಷ್ಟಾಂತ ವಾಕ್ಯವು ಅನುಮಾನಸ್ಮರಣಾದಿಗಳಿಗೆ ಹೇಗೆ ಕಾರಣವಾಗುವುದು? ಲಿಂಗ, ಧರ್ಮಿ (ಪಕ್ಷ) ಈ ಮುಂತಾದವುಗಳಲ್ಲಿ

ಯಾವುದರ ಸ್ಫುರಣೆಯೂ ಇದರಿಂದ (ಉದಾಹರಣವಾಕ್ಯದಿಂದ) ಆಗದಿರುವುದರಿಂದ, ಆದುದರಿಂದ ಹೇಳುತ್ತಾರೆ 'ಪ್ರತಿಜ್ಞಾ..' ಎಂದು. ಪ್ರತಿಜ್ಞೆಯು ಯಾವುದಕ್ಕೆ ಅವಯವಃ- ಸಹಕಾರಿಯೋ ಅದರ ಧರ್ಮದಿಂದ[1]. ಅದಾದರೋ (ದೃಷ್ಟಾಂತವಾಕ್ಯಕ್ಕೆ ಪ್ರತಿಜ್ಞಾವಾಕ್ಯವು ಸಹಕಾರಿ ಎನ್ನುವುದು) ವಿವಾದಾದಿಗಳಿಂದಲೋ, ಉಕ್ತಿಯಿಂದಲೋ (ಪ್ರಾಪ್ತವಾಗುವುದು, ಆದುದರಿಂದ) ಯಾವ ವಿರೋಧಗಳೂ ಇಲ್ಲ. '**ತು**' ಶಬ್ದವು 'ಮತ್ತು' ಎನ್ನುವ ಅರ್ಥದಲ್ಲಿದೆ. ಅದ್ದರಿಂದ (ತು ಶಬ್ದಕ್ಕೆ ಮತ್ತು ಎಂದು ಅರ್ಥೈಸಿರುವುದರಿಂದ) ಹೇತುಗರ್ಭೈವ ಎನ್ನುವುದನ್ನು (ಎಂಬ ವಿಶೇಷಣವನ್ನು) ಸಂಗ್ರಹಿಸುವುದು[2]. ಹಾಗಾಗದ ಪಕ್ಷದಲ್ಲಿ (ಹೇತುಗರ್ಭವಿಶೇಷಣವನ್ನು ಸಮುಚ್ಚಯಗೊಳಿಸದ ಪಕ್ಷದಲ್ಲಿ) ಲಿಂಗರೂಪ ಧರ್ಮಿಯು ಪ್ರತೀತವಾಗದೆ ಪ್ರತಿಜ್ಞಾವಾಕ್ಯವೂ ಸಹ ವ್ಯರ್ಥವಾದೀತು[3].

**ಕೇವಲ ಉಪನಯವಾಕ್ಯವೂ ಪೂರ್ಣಾನುಮಾನವಾಗಬಹುದು**

**- - - - ಉಪನಯೋ ವ್ಯಾಪ್ತಿಮಾಶ್ರಿತ್ಯ ಕೇವಲಮ್ ।**

---

1. ಮೂಲದಲ್ಲಿನ ಪ್ರತಿಜ್ಞಾವಯವತ್ವಾತ್ ಎನ್ನುವುದರ ಪರ್ಯವಸಿತ ಅರ್ಥವನ್ನು ತಿಳಿಸುತ್ತಿರುವರು. ಅವಯವ ಎಂದರೆ 'ಅಂಗ' ಎಂದು ಅರ್ಥೈಸದೆ 'ಸಹಕಾರಿ' ಎಂದು ಅರ್ಥೈಸಲಾಗಿದೆ ಎನ್ನುವುದನ್ನು ಗಮನಿಸುವುದು.

2. 'ಪ್ರತಿಜ್ಞಾವಯವತ್ವಾತ್ ತು' ಎನ್ನುವಲ್ಲಿ ಉಕ್ತವಾದ 'ತು' ಶಬ್ದವು 'ಮತ್ತು' ಎನ್ನುವ ಸಮುಚ್ಚಯಾರ್ಥವನ್ನು ತಿಳಿಸುತ್ತದೆ ಎಂದು ಹೇಳಿದ್ದರಿಂದ ಹಿಂದೆ 'ಪ್ರತಿಜ್ಞಾ ಹೇತುಗರ್ಭೈವ' ಎನ್ನುವಲ್ಲಿನ 'ಹೇತುಗರ್ಭ' ಎನ್ನುವ ವಿಶೇಷಣವನ್ನು ಇಲ್ಲಿಗೂ ಸಂಯೋಜಿಸಿಕೊಳ್ಳಬೇಕು ಎಂದು ಸೂಚಿಸಿದಂತಾಗುವುದು. ಒಟ್ಟಿನಲ್ಲಿ 'ಹೇತು ಗರ್ಭಿತವಾದ ಪ್ರತಿಜ್ಞಾವಾಕ್ಯದ ಅಂದರೆ 'ಧೂಮವತ್ ಪರ್ವತಃ ವಹ್ನಿಮಾನ್' ಎಂಬ ವಾಕ್ಯದ ಸಹಕಾರವನ್ನು ಹೊಂದಿದ ದೃಷ್ಟಾಂತ ವಾಕ್ಯವೂ ಸ್ವತಂತ್ರವಾಗಿ ಪೂರ್ಣ ಯುಕ್ತಿಯಾಗಬಹುದು'. ಪ್ರಕೃತದಲ್ಲಿ 'ಮಹಾನಸದಂತೆ ಹೊಗೆಯನ್ನು ಹೊಂದಿದ ಪರ್ವತವೂ ಬೆಂಕಿಯನ್ನು ಹೊಂದಿದೆ' ಎನ್ನುವದೇ ಉದಾಹರಣ ವಾಕ್ಯ ಎಂದು ಭಾವ.

3. ಪ್ರತಿಜ್ಞಾವಾಕ್ಯಸಹಕೃತವಾದ ಕೇವಲ ದೃಷ್ಟಾಂತವಾಕ್ಯದಿಂದ ಲಿಂಗರೂಪ ಧರ್ಮಿಯ ಪ್ರತೀತಿಯಾಗದಿರುವುದರಿಂದ ಇಂತಹ ದೃಷ್ಟಾಂತವನ್ನು ಹೇಳಿದರೂ ಸಹ ಯಾವುದೇ ವ್ಯಾಪ್ತಿಸ್ಮರಣಾದಿಗಳು ಪ್ರಾಪ್ತವಾಗಲಾರದು. ವ್ಯಾಪ್ತಿಯ ಸ್ಮರಣೆಗೆ ಹೇತು ಮತ್ತು ಸಾಧ್ಯಗಳ ಉಲ್ಲೇಖವು ಅಗತ್ಯ ಎಂದು ಭಾವ.

(ಎಲ್ಲಿ ಹೊಗೆ ಇರುವುದೋ ಅಲ್ಲಿ ಬೆಂಕಿಯು ಇರುವುದು, ಹೊಗೆಯನ್ನು ಹೊಂದಿದ ಬೆಟ್ಟದಲ್ಲಿ ಬೆಂಕಿಯು ಇದೆ ಎಂಬ) ಕೇವಲ ಉಪನಯವಾಕ್ಯವು ವ್ಯಾಪ್ತಿಯುಕ್ತವಾದುದರಿಂದ ಪೂರ್ಣ ಅನುಮಾನವಾಗಬಹುದು.

**ಲಿಙ್ಗಧರ್ಮಿಣಃ ಪಕ್ಷಧರ್ಮತಾಯಾಶ್ಚ ಪ್ರತೀತಾವಪಿ ಸಾಧ್ಯಧರ್ಮಸ್ಯ ಅಪ್ರತೀತ್ಯಾ ವ್ಯಾಪ್ತಿಸ್ಮೃತ್ಯಾದ್ಯಯೋಗಾತ್ ಕಥಮುಪನಯಮಾತ್ರಸ್ಯ ಉಪಯುಕ್ತತ್ವಮ್? ಇತ್ಯತ ಆಹ- 'ಉಪನಯಃ' ಇತಿ । ವ್ಯಾಪ್ತಿಂ-ವ್ಯಾಪ್ತಿವಚನಮ್ । 'ಕೇವಲಮ್' ಇತಿ ಕ್ರಿಯಾವಿಶೇಷಣಂ 'ದೃಷ್ಟಾಂತೋಕ್ತಿಮ(ಪ್ಯ)ನಪೇಕ್ಷ್ಯ' ಇತಿ । 'ಮಾನತಾಂ ಯಾತಿ' ಇತಿ ವರ್ತತೇ । ದೃಷ್ಟಾನ್ತಾನುಕ್ತೌ 'ತಥಾ' ಇತ್ಯಸ್ಯಾರ್ಥೋ ನ ಪ್ರತೀಯತೇ ಇತಿ ಚೇನ್ನ । 'ಯೋ ಧೂಮವಾನಸಾವಗ್ನಿಮಾನ್ ಧೂಮವಾಂಶ್ಚಾಯಂ ಪರ್ವತಃ' ಇತ್ಯೇತಾವತಾ ಪೂರ್ಣತ್ವಾತ್ । 'ವ್ಯಾಪ್ತಿಮಾಶ್ರಿತ್ಯ' ಇತ್ಯಪಿ ಪಕ್ಷಾನ್ತರಪ್ರದರ್ಶನಮ್ । ಅನ್ಯಥಾ 'ಸಿದ್ಧತ್ವೇನ ಪ್ರತಿಜ್ಞಾಯಾಃ' ಇತ್ಯುಕ್ತರೀತ್ಯೈವೋಪಪತ್ತೇಃ ।**

ಲಿಂಗರೂಪವಾದ ಧರ್ಮಿಯ ಮತ್ತು ಪಕ್ಷಧರ್ಮತಾದ ಪ್ರತೀತಿಯು ಆದರೂ ಸಹ ಸಾಧ್ಯಾಖ್ಯಧರ್ಮದ ಪ್ರತೀತಿಯು ಆಗದಿರುವುದರಿಂದ ವ್ಯಾಪ್ತಿಯ (ಸಾಧ್ಯ ನಿರೂಪಿತವಾದ ವ್ಯಾಪ್ತಿಯ) ಸ್ಮರಣೆ ಮುಂತಾದವುಗಳಿಗೆ ಅವಕಾಶವಿಲ್ಲದಿರುವುದರಿಂದ ಕೇವಲ ಉಪನಯವಾಕ್ಯವು ಹೇಗೆ ಉಪಯುಕ್ತವಾದೀತು[1]? ಈ ಕಾರಣದಿಂದ ತಿಳಿಸುವರು '**ಉಪನಯಃ**' ಎಂದು. **ವ್ಯಾಪ್ತಿಂ**-ವ್ಯಾಪ್ತಿವಚನವನ್ನು. '**ಕೇವಲಂ**' ಎನ್ನುವದು ಕ್ರಿಯಾವಿಶೇಷಣ[2],

---

1. 'ತಥಾ ಚಾಯಂ- ಮಹಾನಸದಂತೆ ಈ ಪರ್ವತವೂ ಧೂಮವನ್ನು ಹೊಂದಿದೆ' ಎನ್ನುವುದು ಉಪನಯವಾಕ್ಯ. ಈ ಉಪನಯವಾಕ್ಯದಿಂದ ಹೇತುವಿನ ಅರಿವು, ಹೇತುವು ಪಕ್ಷದಲ್ಲಿದೆ ಎನ್ನುವ ಪಕ್ಷಧರ್ಮತಾದ ಅರಿವು ಮಾತ್ರ ಪ್ರಾಪ್ತವಾಗುವುದು. ಸಾಧ್ಯದ ಅರಿವಿಗೆ ಈ ಉಪನಯವಾಕ್ಯದಲ್ಲಿ ಅವಕಾಶವಿಲ್ಲ, ತನ್ನಿಮಿತ್ತ ಸಾಧ್ಯ ಹೇತುಗಳ ಸಾಹಚರ್ಯಾದಿಗಳ ಅರಿವಾಗದೆ ಕೇವಲ ಉಪನಯವಾಕ್ಯವು ಪೂರ್ಣಪ್ರಮಾಣದ ಪ್ರಮಾಣವಾಗಲಾರದು, ಎನ್ನುವುದು ಪೃಚ್ಛಕನ ಭಾವ.

2. 'ವ್ಯಾಪ್ತಿಮಾಶ್ರಿತ್ಯ ಕೇವಲಮ್' ಎಂದು ಮೂಲದಲ್ಲಿದೆ. ಈ ವಾಕ್ಯದಲ್ಲಿನ 'ವ್ಯಾಪ್ತಿಂ' ಎನ್ನುವದಕ್ಕೆ 'ಕೇವಲಂ' ಎನ್ನುವದನ್ನು ವಿಶೇಷಣವನ್ನಾಗಿಸಲು ಆಗದು ಭಿನ್ನಲಿಂಗಕವಾದುದರಿಂದ. ತನ್ನಿಮಿತ್ತವಾಗಿ 'ಆಶ್ರಿತ್ಯ' ಎನ್ನುವ ಕ್ರಿಯೆಗೆ ವಿಶೇಷಣವನ್ನಾಗಿಸಬೇಕು ಎಂದು ಸೂಚಿಸಿರುವರು.

'ದೃಷ್ಟಾಂತೋಕ್ತಿಯನ್ನು ಅಪೇಕ್ಷಿಸದೇ' ಎಂದು. 'ಮಾನತಾಂ ಯಾತಿ' ಎಂದು ಇರುವುದು. (ಹಿಂದಿನ ವಾಕ್ಯದಲ್ಲಿನ 'ಮಾನತಾಂ ಯಾತಿ' ಎನ್ನುವುದನ್ನು ಈ ವಾಕ್ಯದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು)[1]. ದೃಷ್ಟಾಂತವನ್ನು ಹೇಳದ ಪಕ್ಷದಲ್ಲಿ 'ತಥಾ' ಎನ್ನುವದರ ಅರ್ಥವು ಪ್ರತೀತವಾಗುವುದಿಲ್ಲ ಎನ್ನಲಾಗದು. 'ಯಾವುದು ಧೂಮವನ್ನು ಹೊಂದಿದೆಯೋ, ಅದು ವಹ್ನಿಯನ್ನು ಹೊಂದಿದೆ, ಈ ಪರ್ವತವಾದರೋ ಧೂಮವನ್ನು ಹೊಂದಿದೆ' ಇಷ್ಟನ್ನು ಹೇಳುವುದರಿಂದಲೇ (ಅನುಮಾನದ ಉಪದೇಶವು) ಪೂರ್ಣವಾಗುವುದು[2]. **'ಕೇವಲಂ ವ್ಯಾಪ್ತಿಮಾಶ್ರಿತ್ಯ'** ಎನ್ನುವುದು ಇನ್ನೊಂದು ಪಕ್ಷ[3]. ಹಾಗಾಗದ ಪಕ್ಷದಲ್ಲಿ (ಎರಡು ರೀತಿಗಳನ್ನು ಮೂಲಕಾರರು ಅಭಿಮತಿಸಲಿಲ್ಲ ಎಂದಾದ ಪಕ್ಷದಲ್ಲಿ) **'ಸಿದ್ಧತ್ವೇನ ಪ್ರತಿಜ್ಞಾಯಾಃ'** ಎಂದು ತಿಳಿಸಿದ್ದರಿಂದಲೇ ಉಪಪನ್ನವಾಗುವುದರಿಂದ, ('ವ್ಯಾಪ್ತಿಮಾಶ್ರಿತ್ಯ ಕೇವಲಂ' ಎನ್ನುವುದರ ಅಗತ್ಯವಿರಲಿಲ್ಲ)[4].

---

1. 'ದೃಷ್ಟಾಂತವಾಕ್ಯದ ಕಥನವಿಲ್ಲದೆ, ಕೇವಲ ವ್ಯಾಪ್ತಿಯ ಉಲ್ಲೇಖದಿಂದಲೇ ಅನುಮಿತಿಯ ಅರಿವು ಆಗದು' ಎಂದು ಭಾವ.

2. ಕೇವಲ ವ್ಯಾಪ್ತಿಯ ಆಖ್ಯಾನದಿಂದ ಉಪನಯವಾಕ್ಯವು ಪೂರ್ಣಪ್ರಮಾಣದಲ್ಲಿ ಪ್ರಮಾಣವಾಗುವುದು ಎಂದು ತಿಳಿಸಲಾಗಿದೆ, ಆದರೆ ಉಪನಯವಾಕ್ಯದಲ್ಲಿ 'ತಥಾ ಚಾಯಂ' ಎಂದಿದೆ. ಇಲ್ಲಿ ಘಟಿತವಾದ 'ತಥಾ' ಶಬ್ದದ ಅರ್ಥವಾಗಬೇಕಿದ್ದಲ್ಲಿ ದೃಷ್ಟಾಂತ ವಾಕ್ಯದ ಅಗತ್ಯವಿದೆ ಎನ್ನುವ ಸಂದೇಹವನ್ನು ಪರಿಹರಿಸುವರು. ದೃಷ್ಟಾಂತವಾಕ್ಯಘಟಿತವಾಗದ ಉಪನಯವಾಕ್ಯದ ಪ್ರಕಾರವನ್ನು ಪ್ರದರ್ಶಿಸಿರುವರು.

3. ಉಪನಯವಾಕ್ಯ ಸಹಿತವಾದ ವ್ಯಾಪ್ತಿವಾಕ್ಯವೂ ಸಹ ಪೂರ್ಣಪ್ರಮಾಣದ ಅನುಮಾನಮುದ್ರಾವನ್ನು ಹೊಂದಿದೆ ಎನ್ನುವುದು ಒಂದು ಪಕ್ಷ. 'ಕೇವಲ ವ್ಯಾಪ್ತಿವಚನವೇ ಪೂರ್ಣಪ್ರಮಾಣದ ಅನುಮಾನ' ಎನ್ನುವುದು ಇನ್ನೊಂದು ಪಕ್ಷ ಎಂದು ಭಾವ.

4. 'ವ್ಯಾಪ್ತಿಯ ಸಹಕಾರವನ್ನು ಹೊಂದಿದ ಉಪನಯವಾಕ್ಯವು ಪ್ರಾಮಾಣ್ಯವನ್ನು ಹೊಂದುವುದು' ಎಂದು ತಿಳಿಸಲಾಗಿದೆ. ಹಿಂದೆ ತಿಳಿಸಿದಂತೆ ವಿವಾದದಿಂದಲೇ ಪ್ರತಿಜ್ಞಾವಾಕ್ಯದಲ್ಲಿ ಘಟಕವಾದ ಸಾಧ್ಯದ ಪ್ರಸ್ತಾಪವಾಗುತ್ತಿರಲು, ಕೇವಲ ಉಪನಯ-ವಾಕ್ಯವೇ ಪ್ರಾಮಾಣ್ಯವನ್ನು ಹೊಂದುವ ಸಂಭವವಿರುವುದರಿಂದ 'ವ್ಯಾಪ್ತಿಯಿಂದ ಸಹಕೃತವಾದ...' ಎಂದು ತಿಳಿಸುವ ಅಗತ್ಯವಿದೆಯೇ? ಎಂದು ಸಂದೇಹಿಸಲು ಉತ್ತರಿಸುವರು- ವಿವಾದದಿಂದಲೇ ಸಾಧ್ಯಪ್ರಸಿದ್ಧವಾದ ಸಂದರ್ಭದಲ್ಲಿ 'ವ್ಯಾಪ್ತಿವಚನದ ಸಹಕಾರವಿಲ್ಲದ ಕೇವಲ ಉಪನಯ ವಾಕ್ಯವೇ' ಪ್ರಾಮಾಣ್ಯವನ್ನು ಹೊಂದುವುದು ಎನ್ನುವುದು ಒಂದು ಪಕ್ಷ.

ಪುಟ 442ರಲ್ಲಿ........

**ಕೇವಲ ನಿಗಮನವಾಕ್ಯವೂ ಪೂರ್ಣಾನುಮಾನವಾಗಬಹುದು**

**ವ್ಯಾಪ್ತಿಸ್ತು ಕೇವಲಾಽಪಿ ಸ್ಯಾತ್ ಪ್ರಮಾಣಂ ನಿಯಮಾಶ್ರಯಾತ್ ।**
**ತಥಾ ನಿಗಮನಂ ಚೋಪಸಂಹಾರೈಕಸ್ವರೂಪತಃ ।**
**ಪ್ರಾಮಾಣ್ಯಂ ಯಾತಿ - - - - - - - - - - ।**

(ಹೇತು ಸಾಧ್ಯಗಳ ಸಾಹಚರ್ಯದ) ನಿಯಮವನ್ನು ಹೊಂದಿರುವುದರಿಂದ ಕೇವಲ ವ್ಯಾಪ್ತಿವಚನವೇ ಪೂರ್ಣಾನುಮಾನವಾಗುವುದು. (ಪ್ರಸ್ತುತ ವಾದದಲ್ಲಿ ತನ್ನ ಪಾಲಿನ ವಾದದ) ಉಪಸಂಹಾರಾತ್ಮಕವಾಕ್ಯವಾದ ನಿಗಮನವು ಪೂರ್ಣಪ್ರಮಾಣದ ಅನುಮಾನತ್ವವನ್ನು ಹೊಂದಿದೆ.

ಪ್ರಾಗನುಕ್ತಮಪಿ ಪ್ರಕಾರಾನ್ತರಮಾಹ- '**ವ್ಯಾಪ್ತಿಸ್ತು**' ಇತಿ । ಪ್ರತಿಜ್ಞಾರ್ಥ-ಸಿದ್ಧಿಸಮುಚ್ಚಯಾರ್ಥಃ ತುಶಬ್ದಃ । ಅನ್ಯಥಾ ಪಕ್ಷಧರ್ಮತಾಽಪ್ರತೀತೇಃ । 'ಕುತಃ ಪರ್ವತೋಽಗ್ನಿಮಾನ್?' ಇತಿ ಪ್ರಶ್ನವಾಕ್ಯೇನ ಸಹ ವ್ಯಾಪ್ತ್ಯುಕ್ತಿ-ಮಾತ್ರಸ್ಯಾನ್ವಯೋ ನಾಸ್ಯೇವೇತ್ಯತ ಉಕ್ತಮ್ - '**ನಿಯಮಾಶ್ರಯಾದ್**' ಇತಿ । 'ಯೋ ಧೂಮವಾನಸೌ ಅಗ್ನಿಮಾನಿತಿ ನಿಯಮಾದ್' ಇತ್ಯಾದ್ಯುಕ್ತೇಃ ಆಶ್ರಯಣಾದಿತ್ಯರ್ಥಃ । ನಿಗಮನಸ್ಯ ತು ಸ್ಮಾರಕತ್ವಾದಿಕಂ ಸ್ಫುಟಮೇವ ಇತ್ಯಾಹ- '**ತಥಾ**' ಇತಿ ॥ 'ಸಂಪೂರ್ಣಪ್ರಯೋಗ ಇವ' ಇತ್ಯರ್ಥಃ । 'ಉಪಸಂಹಾರೈಕಸ್ವರೂಪತಃ' ಇತಿ ಸರ್ವಾರ್ಥಸಂಗ್ರಹಕತ್ವಾದಿತ್ಯರ್ಥಃ । 'ಅಗ್ನಿನಾ ವ್ಯಾಪ್ತಸ್ಯ ಧೂಮಸ್ಯ ಪರ್ವತೇ ವಿದ್ಯಮಾನತ್ವಾತ್, ಪರ್ವತೋಽಗ್ನಿಮಾನ್' ಇತ್ಯಾದಿರೂಪಂ ವಾಕ್ಯಮತ್ರ ವಿವಕ್ಷಿತಮ್ ॥

---

...... ಪುಟ 441 ರಿಂದ

'ವ್ಯಾಪ್ತಿವಚನ ಸಹಕೃತವಾದ ಉಪನಯವಾಕ್ಯವು ಪ್ರಮಾಣವಾಗುವುದು' ಎನ್ನುವುದು ಇನ್ನೊಂದು ಪಕ್ಷ ಎಂದು ತಿಳಿಯುವುದು. ಮೂಲಕಾರರಿಗೆ ಎರಡು ಪಕ್ಷಗಳು ಅಭಿಮತ ಎನ್ನುವುದು ಹೇಗೆ ? ಎರಡು ಪಕ್ಷಗಳು ಅಭಿಮತವಾಗದಿದ್ದಲ್ಲಿ ಉಪನಯ ವಾಕ್ಯವು ಹೇಗೆ ಪ್ರಾಮಾಣ್ಯವನ್ನು ಹೊಂದುವುದು? ಎಂದು ಪ್ರಶ್ನಿಸಿದಾಗ 'ಸಿದ್ಧತ್ವೇನ ಪ್ರತಿಜ್ಞಾಯಾಃ' ಎಂಬ ಹಿಂದಿನ ವಚನವೇ ಸಾಕಾಗಿತ್ತು, ಪುನಃ 'ವ್ಯಾಪ್ತಿಮಾಶ್ರಿತ್ಯ ಕೇವಲಂ' ಎಂದು ಹೇಳುವ ಅಗತ್ಯವಿರಲಿಲ್ಲ. ಒಟ್ಟಿನಲ್ಲಿ ಸಾಧ್ಯದ ಪ್ರತೀತಿಯು ಎರಡು ವಿಧದಲ್ಲಿಯೂ ಸಂಭಾವಿತ. ಒಂದು ಪ್ರತಿಜ್ಞಾವಾಕ್ಯದಿಂದ, ಇನ್ನೊಂದು ವ್ಯಾಪ್ತಿಯಿಂದ ಸಹಕೃತ ಉಪನಯವಾಕ್ಯದಿಂದ ಎಂದು ಭಾವ.

ಹಿಂದೆ ತಿಳಿಸದೆ ಇದ್ದರೂ ಸಹ ಮತ್ತೊಂದು ಪ್ರಕಾರವನ್ನು[1] ತಿಳಿಸುತ್ತಾರೆ **'ವ್ಯಾಪ್ತಿಃ'** ಎಂದು. **'ತು'** ಶಬ್ದವು ಪ್ರತಿಜ್ಞಾರ್ಥಸಿದ್ಧಿಯ ಸಮುಚ್ಚಾಯಕ ಎಂದು ತಿಳಿಸುವುದು. ಹಾಗಾಗದ ಪಕ್ಷದಲ್ಲಿ ('ತು' ಶಬ್ದವನ್ನು ಸಮುಚ್ಚಯಾರ್ಥ ಎಂದು ಒಪ್ಪದ ಪಕ್ಷದಲ್ಲಿ) ಪಕ್ಷಧರ್ಮತಾದ ಪ್ರತೀತಿಯು ಆಗದೇ ಹೋದೀತು[2]. ಪರ್ವತವು ಅಗ್ನಿಯನ್ನು ಹೊಂದಿದೆ ಎನ್ನುವಲ್ಲಿ ಏನು ಪ್ರಮಾಣ? ಎಂದು ಪ್ರಶ್ನಿಸಿದಾಗ (ಉತ್ತರ ರೂಪದಲ್ಲಿ) ಕೇವಲ ವ್ಯಾಪ್ತಿಯ (ಸೂಚಕ) ವಚನಕ್ಕೆ ಅನ್ವಯವು ಇರುವುದಿಲ್ಲ[3] ? ಆದುದರಿಂದ ಉತ್ತರಿಸುವರು **'ನಿಯಮಾ-ಶ್ರಯಾತ್'** ಎಂದು. 'ಎಲ್ಲಿ ಧೂಮವಿದೆಯೋ ಅಲ್ಲಿ ವಹ್ನಿ ಇರುವುದು, ಎಂಬ ನಿಯಮವಿರುವುದರಿಂದ' ಎಂಬಿತ್ಯಾದಿ ಯುಕ್ತಿಯನ್ನು ಒಪ್ಪಲಾಗಿರುವುದರಿಂದ ಎಂದು ಭಾವ. ಇನ್ನು ನಿಗಮನಕ್ಕಾದರೋ ಸ್ಮಾರಕತ್ವವೇ ಮುಂತಾದವು ಸ್ಫುಟ ಎಂದು ಹೇಳುವರು **'ತಥಾ'** ಎಂದು. ಪೂರ್ಣ ಪ್ರಮಾಣದ (ಅನುಮಾನದ) ಪ್ರಯೋಗವೇ ಆಗಿದೆ ಎಂದು ಭಾವ. **'ಉಪಸಂಹಾರೈಕಸ್ವರೂಪತಃ'** ಎಂದು. (ನಿಗಮನವಾಕ್ಯವು) ಎಲ್ಲ ವಿಷಯದ ಸಂಗ್ರಹರೂಪವಾದುದರಿಂದ ಎಂದು ಭಾವ. 'ಅಗ್ನಿಯಿಂದ ವ್ಯಾಪ್ತವಾದ ಧೂಮವು ಪರ್ವತದಲ್ಲಿ ಇರುವುದರಿಂದ, ಪರ್ವತವು ಅಗ್ನಿಯನ್ನು ಹೊಂದಿದೆ' ಇತ್ಯಾದಿ ರೂಪದ ವಾಕ್ಯವನ್ನು ಪ್ರಕೃತದಲ್ಲಿ ವಿವಕ್ಷಿಸಲಾಗಿದೆ[4].

---

1. 'ಯುಕ್ತಿಃ ಪ್ರತಿಜ್ಞಾ ರೂಪಾ ಚ..' ಎಂದು ಹಿಂದೆ (ಪುಟ 430ರಲ್ಲಿ) ಮೂಲದಲ್ಲಿ ಪ್ರಸ್ತಾಪಿತವಾದ ಸಂದರ್ಭದಲ್ಲಿ, ಈ ಪ್ರಕಾರವನ್ನು ಸೂಚಿಸಲಾಗಿಲ್ಲ ಎಂದು ಭಾವ.

2. 'ತು' ಶಬ್ದವನ್ನು ಸಮುಚ್ಚಯಾರ್ಥಕ ಎಂದು ತಿಳಿಸಿರುವದರಿಂದ, 'ಪ್ರತಿಜ್ಞಾವಾಕ್ಯ ಸಹಕೃತವಾದ ವ್ಯಾಪ್ತಿವಚನವೂ ಸಹ ಸ್ವತಂತ್ರವಾಗಿ ಅನುಮಿತಿಗೆ ಕಾರಣವಾಗುವುದು' ಎಂದು ಮೂಲದ ಭಾವವನ್ನು ತಿಳಿಸಿದಂತಾಗುವುದು.

3. 'ಎಲ್ಲಿ ಧೂಮವೋ ಅಲ್ಲಿ ಅಗ್ನಿ' ಎನ್ನುವ ವಾಕ್ಯಕ್ಕೆ 'ಪರ್ವತದಲ್ಲಿ ಅಗ್ನಿಯು ಇದೆ' ಎನ್ನಲು ಏನು ಪ್ರಮಾಣ? ಎನ್ನುವ ಪ್ರಶ್ನೆಯೊಡನೆ ಸಂಗತಿಯು ಇಲ್ಲ ಎಂದು ಭಾವ.

4. ಈ ರೀತಿಯ ನಿಗಮನವಾಕ್ಯವನ್ನು ಇಲ್ಲಿ ವಿವಕ್ಷಿಸಿದ್ದರಿಂದ 'ಅಗ್ನಿಯಿಂದ ವ್ಯಾಪ್ತವಾದ ಧೂಮವು' ಎನ್ನುವುದರಿಂದ ದೃಷ್ಟಾಂತವು ಸ್ಮರಣೆಗೆ ಪ್ರಾಪ್ತವಾಗುವುದು. 'ಧೂಮವು ಪರ್ವತದಲ್ಲಿರುವುದರಿಂದ' ಎನ್ನುವುದರಿಂದ ಹೇತು ಮತ್ತು ಉಪನಯವಾಕ್ಯಗಳನ್ನು ತಿಳಿಸಿದಂತಾಗುವುದು. 'ಪರ್ವತವು ಅಗ್ನಿಯನ್ನು ಹೊಂದಿದೆ' ಎನ್ನುವುದರಿಂದ ಪ್ರತಿಜ್ಞಾವಾಕ್ಯದ ಲಾಭವಾಗುವುದು. ಹೀಗೆ ಸಮಗ್ರವಾದ ಅನುಮಾನದ ಪಂಚ ಅವಯವಗಳೂ ಪ್ರಾಪ್ತವಾಗುವವು ಎಂದು ಭಾವ.

**ಲೋಕಾನುಭವದಂತೆ ವ್ಯವಸ್ಥೆ**

**- - - -ಅನುಭವೋ ಜ್ಞಾಪಯತ್ಯುಪಪತ್ತಿತಾಮ್ ।**

(ಹೀಗೆ ಒಂದೊಂದೇ ವಾಕ್ಯವು) ಪೂರ್ಣಪ್ರಮಾಣದ ಅನುಮಾನವಾಗಿದೆ ಎನ್ನುವದನ್ನು ಅನುಭವವು ತಿಳಿಸುತ್ತಿದೆ.

**ನನು, ಉಕ್ತವಿಧಸ್ಯ ಪ್ರತಿಜ್ಞಾದಿಮಾತ್ರಸ್ಯ ಸ್ಮರಣಾದಿಹೇತುತ್ವಂ ಕುತಃ ಪ್ರಮಾಣಾದ್? ಇತಿ ಚೇತ್, ಪಂಚಾದ್ಯವಯವಸ್ಯ ಮಹಾವಾಕ್ಯಸ್ಯಾಪಿ ಕುತಃ? ಸ್ಮರಣಾದೇಸ್ತದ್ಭಾವಭಾವಿತ್ವಾನುಭವಾದಿತಿ ಚೇತ್, ಸಮಾನಮ್ ಏತದತ್ರಾಪೀತ್ಯಾಹ- 'ಅನುಭವಃ' ಇತಿ । ಪ್ರತಿಜ್ಞಾದೀನಾಂ ಉಪಪತ್ತಿತಾಂ- ತತ್ಸ್ಮಾರಕತ್ವಾದಿಕಮ್ । ಏತೇನ 'ಅಪೌರುಷೇಯತ್ವಾತ್' ಇತ್ಯಾದಯಃ ಪ್ರಯೋಗಾಃ ಸಮಾಹಿತಾ ಭವನ್ತಿ ।**

ಸರಿ ಹಾಗಾದಲ್ಲಿ, (ಈವರೆಗೆ) ತಿಳಿಸಿದ ಕೇವಲ ಪ್ರತಿಜ್ಞಾದಿ ವಾಕ್ಯಗಳೇ (ವ್ಯಾಪ್ತ್ಯಾದಿಗಳ) ಸ್ಮರಣಾದಿಗಳಿಗೆ ಕಾರಣವಾಗಿವೆ ಎನ್ನುವುದು ಯಾವ ಮಾನದಿಂದ ತಿಳಿಯುವುದು ಎಂದಲ್ಲಿ, ಪಂಚಾವಯವಗಳನ್ನು ಹೊಂದಿರುವ ಮಹಾವಾಕ್ಯವೂ ಸಹ (ಸ್ಮರಣಾದಿಗಳಿಗೆ ಕಾರಣ ಎನ್ನುವುದು) ಯಾವುದರಿಂದ (ತಿಳಿಯುವುದು)? ಅವು (ಪಂಚಾವಯವಗಳು) ಇದ್ದಲ್ಲಿ ಸ್ಮರಣಾದಿಗಳು ಇರುವುದು ಅನುಭವದಿಂದ ವೇದ್ಯ ಎಂದಲ್ಲಿ, ಇಲ್ಲೂ ಸಹ ಅದು ಸಮಾನ ಎಂದು ತಿಳಿಸುವರು '**ಅನುಭವ..**' ಎಂದು. ಪ್ರತಿಜ್ಞಾದಿಗಳಿಗೆ **ಉಪಪತ್ತಿತಾಂ**- ಅದರ ಸ್ಮಾರಕತ್ವವು (ಅನುಭವದಿಂದ ಕಂಡಿದೆ). ಇದರಿಂದ ('ಸಿದ್ಧತ್ವೇನ ಪ್ರತಿಜ್ಞಾಯಾ ಹೇತುರ್ಮಾನಂ ಪೃಥಗ್ ಭವೇತ್'- ಪ್ರತಿಜ್ಞಾದಿಗಳು ಸಿದ್ಧ ವಾದುದರಿಂದ ಹೇತು ಮುಂತಾದವುಗಳು ಒಂದೊಂದೂ ಪ್ರತ್ಯೇಕವಾಗಿಯೇ ಅನುಮಿತಿಗೆ ಕಾರಣವಾಗುವವು ಎಂದು ತಿಳಿಸಿದ್ದರಿಂದ) 'ಅಪೌರುಷೇಯ- ತ್ವಾತ್' ಈ ಮುಂತಾದ ಎಲ್ಲ ಪ್ರಯೋಗಗಳು (ಸಾಧು ಎಂದು) ಉತ್ತರಿಸಿದಂತಾಯಿತು[1].

---

1. ಈ ಗ್ರಂಥದಲ್ಲಿ ಆಚಾರ್ಯರು ಅನೇಕ ಸಂದರ್ಭಗಳಲ್ಲಿ ಕೇವಲ ಹೇತುವಚನವನ್ನೋ, ದೃಷ್ಟಾಂತವಾಕ್ಯವನ್ನೋ, ಉಪನಯ ವಾಕ್ಯದಂತಿರುವ ಕೇವಲ ಪ್ರಮಾಣವಚನವನ್ನೋ ಉಪದೇಶಿಸಿರುವರು, ಆ ಎಲ್ಲ ಸಂದರ್ಭದಲ್ಲಿ ಉಕ್ತೇತರ ವಾಕ್ಯಗಳು ಇರುವುದಿಲ್ಲ. ಆ ಸಂದರ್ಭದಲ್ಲಿ ನ್ಯೂನತಾದಿ ದೋಷಗಳನ್ನು ಶಂಕಿಸಲು ಅವಕಾಶವಿಲ್ಲ ಎಂದು ಭಾವ.

**ಅನುಮಾನದೋಷಗಳು**

**ವಿರೋಧಶ್ಚ ತಥಾಽಧಿಕ್ಯಂ ನ್ಯೂನತಾಽಸಙ್ಗತಿಸ್ತಥಾ ।**
**ಉಪಪತ್ತಿದೋಷಾ ವಿಜ್ಞೇಯಾಃ - - - - - - -॥**

ಅನುಮಾನದ ದೋಷಗಳು ವಿರೋಧ, ಆಧಿಕ್ಯ ಮತ್ತು ನ್ಯೂನತಾ ಹಾಗೂ ಅಸಂಗತಿ ಎಂದು ತಿಳಿಯುವುದು.

ಏವಂ ನಿರ್ದೋಷೋಪಪತ್ತಿರೂಪೇಽನುಮಾನೇ ನಿರೂಪಿತೇ ನಿರ್ದೋಷತಾಯಾ ದೋಷಜ್ಞಾನಾಧೀನತ್ವಾತ್ ಕೇತೇ ಉಪಪತ್ತಿದೋಷಾಃ? ಇತ್ಯಪೇಕ್ಷಾಯಾಮಾಹ - '**ವಿರೋಧಶ್ಚ**' ಇತಿ । ಯೋಗ್ಯತಾವಿರಹೋ- **ವಿರೋಧಃ** । ಸತ್ಯಾಂ ಸಂಗತೌ ಅಧಿಕತ್ವಮ್- **ಆಧಿಕ್ಯಮ್** । ವಿವಕ್ಷಿತಾಸಂಪೂರ್ತಿಃ- **ನ್ಯೂನತಾ** । ಆಕಾಂಕ್ಷಾವಿರಹಃ- **ಅಸಙ್ಗತಿಃ** । ಅತ್ರ ವಿರೋಧೋಽಸಙ್ಗತಿಶ್ಚ ಅರ್ಥದೋಷೌ, ತದ್ದ್ವಾರಾ ಶಬ್ದಸ್ಯಾಪಿ । ನ್ಯೂನತಾ(ನ್ಯೂನಾಧಿ)ಧಿಕ್ಯೇ ವಚನದೋಷೌ, ತದ್ದ್ವಾರಾಽರ್ಥಸ್ಯಾಪಿ । ಅತ ಏವಾರ್ಥಶಬ್ದಾತ್ಮಕತ್ವೇನಾನುಮಾನವಿಭಾಗಕಥನಪ್ರಸ್ತಾವೇ ತಥಾವಿಭಕ್ತ- ತದ್ದೋಷಕಥನಂ ನಾಸಙ್ಗತಮ್ ॥

ಈ ರೀತಿಯಾಗಿ 'ನಿರ್ದೋಷೋಪಪತ್ತಿ ರೂಪವಾದದ್ದು ಅನುಮಾನ' ಎಂದು ಅನುಮಾನದ ಸ್ವರೂಪವನ್ನು ತಿಳಿಸಲಾಗಿ, ನಿರ್ದೋಷತ್ವದ ಅರಿವು ದೋಷದ ಅರಿವಿನ ಅಧೀನವಾದುದರಿಂದ, ಆ ಉಪಪತ್ತಿಯ ದೋಷಗಳು ಯಾವವು? ಎನ್ನುವ ಸಂದೇಹವಿರಲು ಉತ್ತರಿಸುವರು '**ವಿರೋಧಶ್ಚ**' ಎಂದು. 'ಯೋಗ್ಯತಾರಾಹಿತ್ಯವೇ ವಿರೋಧ'[1] ಸಂಗತಿಯು ಪೂರ್ಣವಾದನಂತರವೂ ಅಧಿಕವಾದ ವಚನವು ಇದ್ದಲ್ಲಿ ಆಧಿಕ್ಯ[2]. ವಿವಕ್ಷಿತವಾದದ್ದು ( ಪ್ರಯೋಗಿಸಿದ ಶಬ್ದಗಳಿಂದ ಆಕಾಂಕ್ಷೆಯು) ಪೂರ್ಣಗೊಳ್ಳದಿದ್ದಲ್ಲಿ ನ್ಯೂನತಾ (ದೋಷವು).

---

1. ಪ್ರಯೋಗಿಸಿದ ಶಬ್ದ ಅಥವಾ ವಾಕ್ಯಗಳಿಗೆ ಪರಸ್ಪರ ಸಂಗತಿಯು ಇಲ್ಲದಿರುವುದು ವಿರೋಧ ಎಂದು ಪರಿಗಣಿತವಾಗಿದೆ.

2. ಒಂದು ವಾಕ್ಯದಲ್ಲಿನ ಕೆಲವು ಪದಗಳಿಂದಲೇ ಆಕಾಂಕ್ಷೆಯು ಪೂರ್ಣಗೊಂಡು, ಆನಂತರದಲ್ಲಿ ವ್ಯರ್ಥವಾದ- ನಿರಾಕಾಂಕ್ಷಗಳಾದ ಶಬ್ದಗಳ ಪ್ರಯೋಗವು ಇದ್ದಲ್ಲಿ, ಆ ವಾಕ್ಯಕ್ಕೆ ಅಧಿಕ್ಯ ಎಂಬ ದೋಷವು ಎಂದು ಭಾವ.

ಆಕಾಂಕ್ಷಾ ರಾಹಿತ್ಯವನ್ನು ಅಸಂಗತಿ (ಎಂದು ತಿಳಿಯುವುದು). ಇವುಗಳಲ್ಲಿ ವಿರೋಧ ಮತ್ತು ಅಸಂಗತಿ ಎರಡು ಅರ್ಥದೋಷಗಳು. ಆ ಮುಖಾಂತರ ಶಬ್ದಕ್ಕೂ ದೋಷ[1]. ನ್ಯೂನತಾ, ಆಧಿಕ್ಯಗಳು ವಚನದ ದೋಷಗಳು. ಆ ಮುಖಾಂತರ ಅರ್ಥಕ್ಕೂ ದೋಷ[2]. ಆದುದರಿಂದಲೇ ( ಈ ನಾಲ್ಕುದೋಷಗಳು ಸಾಕ್ಷಾತ್ತಾಗಿ ಹಾಗೂ ಪಾರಂಪರ್ಯವಾಗಿ) ಅರ್ಥಾತ್ಮಕ ಮತ್ತು ಶಬ್ದಾತ್ಮಕವಾದುದರಿಂದ (ಸ್ವಾರ್ಥಾನುಮಾನ ಮತ್ತು ಪರಾರ್ಥಾನುಮಾನಕ್ಕೆ ಸಂಬಂಧಿಸಿರುವ ದೋಷಗಳಾದುದರಿಂದ) ಅನುಮಾನವಿಭಾಗವನ್ನು ಹೇಳುವ ಸಂದರ್ಭದಲ್ಲಿ, ಹಾಗೆ ವಿಭಕ್ತವಾದ ಆ ದೋಷಗಳನ್ನು ಹೇಳಿದ್ದು ಅಸಂಗತವಾಗದು.

**ಪರರು ಹೇಳಿದ ಅನುಮಾನದ ದೋಷಗಳ ಅಂತರ್ಭಾವ**

**- - - - - - - -ವಿರೋಧಶ್ಚ ಸ್ವತೋಽನ್ಯತಃ ।**

ವಿರೋಧವಾದರೋ ಸ್ವವಿರೋಧ, ಅನ್ಯಪ್ರಮಾಣವಿರೋಧ ಎಂದು ಎರಡು ವಿಧ.

ನನು ಕಾಲಾತ್ಯಯಾಪದಿಷ್ಟತ್ವಾದಯೋಽನುಮಾನದೋಷಾಃ ಪರೈಃ

---

1. 'ಪರ್ವತವು ವಹ್ನಿಯನ್ನು ಹೊಂದಿದೆ ನೀರಿರುವುದರಿಂದ' ಎನ್ನುವಲ್ಲಿ ನೀರಿಗೂ ಬೆಂಕಿಯ ಅಸ್ತಿತ್ವಕ್ಕೂ ವಿರೋಧವಿದೆ. ಆದುದರಿಂದ ಇದು ಶಬ್ದ ಬೋಧಿತ ಅರ್ಥದ ಅಂದರೆ ಅನುಮಾನರೂಪ ಪದಾರ್ಥದ ದೋಷ. ಈ ಪದಾರ್ಥವು- ಅನುಮಾನವು ದುಷ್ಟವಾದುದರಿಂದ, ಇಂತಹ ಅನುಮಾನದಿಂದ ಉಪದಿಷ್ಟವಾದಾಗ ಇಂತಹ ವಚನವೂ ದುಷ್ಟವಾಗುವುದು ಎಂದು ಭಾವ.

2. ಪರಾರ್ಥಾನುಮಾನವು ಉಪದೇಶರೂಪಾತ್ಮಕವಾಗಿ ಇರುವುದು. ಈ ವಚನಗಳಲ್ಲಿ ನ್ಯೂನತಾ ಆಧಿಕ್ಯಗಳು ಇರುವ ಸಂಭಾವ್ಯತೆ ಇದೆ. ಸಾಧ್ಯಾದಿಗಳನ್ನೇ ನಿರ್ದೇಶಿಸದೇ ಇರುವ ನ್ಯೂನತೆಗಳಿರಬಹುದು, ಅಥವಾ ಕಾಡು-ಮೇಡುಗಳಿಂದ ಕೂಡಿದ ಬೆಟ್ಟವು, ಕೆಂಪುಬಣ್ಣದ ವಹ್ನಿಯನ್ನು ಹೊಂದಿದೆ... ಇತ್ಯಾದಿಯಾಗಿ ಅನಗತ್ಯವಾದ ವಿಶೇಷಣಗಳನ್ನೋ, ಸಾಧ್ಯ ಹೇತು ಮುಂತಾದವುಗಳು ಪೂರ್ವದಲ್ಲೇ ಪ್ರಸಕ್ತವಾಗಿದ್ದರೂ ಪುನಃಪುನಃ ಅವುಗಳನ್ನು ನಿರ್ದೇಶಿಸುವುದೋ ಮುಂತಾದವು ಆಧಿಕ್ಯದೋಷದಿಂದ ದುಷ್ಟವಾದವು ಎಂದು ಪರಿಗಣಿತವಾಗಿವೆ. ಇದು ವಚನದ ದೋಷ, ಈ ಅನುಮಾನಾಖ್ಯವಚನವು ದುಷ್ಟವಾದುದರಿಂದ ಅನುಮಾನವೆಂಬ ಅರ್ಥವೂ ದುಷ್ಟ ಎಂದು ಭಾವ.

**ಪರಿಗಣಿತಾಃ, ತತ್ ಕಥಮೇತದ್? ಇತ್ಯತಸ್ತೇಷಾಮೇತೇಷ್ವೇವಾನ್ತರ್ಭಾವಂ ಸೂಚಯಿತುಂ ವಿರೋಧವಿಭಾಗಮಾಹ- 'ವಿರೋಧಶ್ಚ' ಇತಿ ॥ 'ಇತಿ ದ್ವಿವಿಧಃ' ಇತಿ ಶೇಷಃ । 'ಸ್ವತಃ' ಇತಿ ॥ ಸ್ವವಚನೇನ, ಸ್ವಕ್ರಿಯಯಾ, ಸ್ವನ್ಯಾಯೇನ, ಸ್ವಾಭ್ಯುಪಗಮೇನ ಚೇತ್ಯರ್ಥಃ । ಅನ್ಯತಃ- ಪ್ರಮಾಣಾನ್ತ-ರೇಣ । ಏವಮನ್ಯೋಽಪಿ ವಿಭಾಗ ಊಹನೀಯಃ ॥**

ಸರಿ ಹಾಗಾದಲ್ಲಿ, ಬಾಧ ಮುಂತಾದವುಗಳು ಅನುಮಾನದ ದೋಷಗಳು ಎಂದು ಪರರಿಂದ ಪರಿಗಣಿತವಾಗಿವೆ, ಆದುದರಿಂದ ಇದು (ಈ ವಿಭಾಗವು) ಹೇಗೆ (ಸಮಂಜಸ)? ಆದುದರಿಂದ ಅವುಗಳಿಗೆ (ಬಾಧಾದಿ ದೋಷಗಳಿಗೆ) ಇವುಗಳಲ್ಲೇ (ಇಲ್ಲಿ ಪ್ರಸಕ್ತವಾದ ದೋಷಗಳಲ್ಲಿಯೇ) ಅಂತರ್ಭಾವವನ್ನು ಸೂಚಿಸಲು ವಿರೋಧದ ವಿಭಾಗವನ್ನು ಹೇಳುವರು **'ವಿರೋಧಶ್ಚ'** ಎಂದು. **'ಇತಿ ದ್ವಿವಿಧಃ'** ಎಂದು ಶೇಷಪೂರಣವನ್ನು ಮಾಡಿಕೊಳ್ಳಬೇಕು. **'ಸ್ವತಃ'** ಎಂದು. ತನ್ನ ವಚನದಿಂದ, ತನ್ನ ಕ್ರಿಯೆಯಿಂದ, ತನ್ನ ನ್ಯಾಯದಿಂದ ತಾನು ಒಪ್ಪಿರುವ ನ್ಯಾಯದಿಂದಲೂ ಎಂದು ಭಾವ. **ಅನ್ಯತಃ-** ಪ್ರಮಾಣಾಂತರದಿಂದ. ಇದೇ ರೀತಿಯಲ್ಲಿ ಬೇರೇ ವಿಭಾಗಗಳನ್ನೂ ಊಹಿಸಿಕೊಳ್ಳುವುದು[1].

---

1. ವಿಭಾಗದ ಕ್ರಮವನ್ನು 'ಪ್ರಮಾಣಪದ್ಧತಿ' ಎಂಬ ಗ್ರಂಥದಲ್ಲಿ ಹೀಗೆ ತಿಳಿಸಲಾಗಿದೆ- ಅನುಮಾನದ ವಿರೋಧವು ಮೂರು ವಿಧ-

1) ಪ್ರತಿಜ್ಞಾವಿರೋಧ 2) ಹೇತುವಿರೋಧ 3) ದೃಷ್ಟಾಂತವಿರೋಧ ಎಂದು.

1) ಪ್ರತಿಜ್ಞಾವಿರೋಧವು ಎರಡು ವಿಧ-

ಯ) ಪ್ರಮಾಣವಿರೋಧ ರ) ಸ್ವವಾಕ್ಯವಿರೋಧ ಎಂದು.

ಯ) ಪ್ರಮಾಣವಿರೋಧವು ಮೂರು ವಿಧ-

ಕ) ಪ್ರತ್ಯಕ್ಷಪ್ರಮಾಣವಿರೋಧ

ಖ) ಅನುಮಾನಪ್ರಮಾಣವಿರೋಧ

ಗ) ಆಗಮಪ್ರಮಾಣವಿರೋಧ ಎಂದು.

ಈ ಮೂರೂ ವಿರೋಧಗಳು ಎರಡು ವಿಧ.

ಕ) ಪ್ರಬಲಪ್ರಮಾಣವಿರೋಧ

ಖ) ಸಮಬಲಪ್ರಮಾಣವಿರೋಧ ಎಂದು.

ಕ) ಪ್ರಮಾಣದಲ್ಲಿನ ಪ್ರಾಬಲ್ಯವು ಎರಡು ವಿಧ.

ಪುಟ 448ರಲ್ಲಿ........

**ಜಾತ್ಯುತ್ತರನಿಗ್ರಹಸ್ಥಾನದ ವಿಶ್ಲೇಷಣೆ**

**ಜನಕಸ್ಯಾತ್ಯಯೋ ಜಾತಿಃ ಸ್ವಸ್ಯ ವಾಽನ್ಯಸ್ಯವಾ ಭವೇತ್ ।**
**ಜನಕಂ ಪ್ರಮಾಣಮುದ್ದಿಷ್ಟಂ ಸ್ವಸ್ಯಾರ್ಥಸ್ಯ ಪ್ರಕಾಶನಾತ್।**

(ತನ್ನ )ಜ್ಞಾಪಕಕ್ಕೆ ಕಾರಣವಾದದ್ದನ್ನು (ಸ್ವವಿಷಯಪ್ರಕಾಶಕವಾದ ಪ್ರಮಾಣವನ್ನು) ಅತಿಕ್ರಮಿಸುವುದು 'ಜಾತಿ' (ಎಂದು ತಿಳಿಯುವುದು), (ಈ ಪ್ರಮಾಣವು) ತಾನೇ ಆಗಿರಬಹುದು, ಭಿನ್ನವೂ ಆಗಿರಬಹುದು. ತನ್ನ ವಿಷಯದ ಪ್ರಕಾಶಕವಾದುದರಿಂದ, ಇದನ್ನು ಪ್ರಮಾಣ ಎಂದು (ಔಪಚಾರಿಕವಾಗಿ) ವ್ಯವಹರಿಸಲಾಗುವುದು.

ಏವಂ ವಿಭಾಗೇ ಸತಿ ಕಿಂ ಲಬ್ಧಮ್? ಇತ್ಯತೋ ದಿಕ್‌ಪ್ರದರ್ಶನಾಯ 'ಜಾತೇರರ್ನ್ತರ್ಭಾವಃ ಸಿದ್ಧಃ' ಇತಿ ಸೂಚಯಿತುಂ ತತ್ಸ್ವರೂಪಂ ನಿರೂಪಯತಿ 'ಜನಕಸ್ಯ' ಇತಿ । 'ಸ್ವಸ್ಯ ವಾ ಜನಕಸ್ಯ,ಅನ್ಯಸ್ಯ ವಾ ಜನಕಸ್ಯ'

---

...... ಪುಟ 447 ರಿಂದ

ಯ) ಬಹುಪ್ರಮಾಣವಿರೋಧ ರ) ಸ್ವಾಭಾವಿಕ ಪ್ರಮಾಣವಿರೋಧ (ಪ್ರಮಾಣದ ಸ್ವಭಾವ ಅಂದರೆ- ಉಪಜೀವ್ಯತ್ವ ನಿರವಕಾಶತ್ವ ಬಹುತ್ವ ಎಂದು.).

ರ) ಸ್ವವಾಕ್ಯವಿರೋಧವು ಎರಡು ವಿಧ-
ಕ) ಅಪಸಿದ್ಧಾಂತ ಖ) ಜಾತಿ ಎಂದು.

ಖ) ಜಾತಿಯು ಮೂರುವಿಧ-
ಯ) ಸ್ವವಚನವಿರೋಧ
ರ) ಸ್ವಕ್ರಿಯಾವಿರೋಧ
ಲ) ಸ್ವನ್ಯಾಯವಿರೋಧ ಎಂದು.

2) ಹೇತುವಿರೋಧವು ಎರಡು ವಿಧ- ಅ) ಸ್ವರೂಪಾಸಿದ್ಧಿ ಆ) ಅವ್ಯಾಪ್ತಿ ಎಂದು.

ಆ) ಅವ್ಯಾಪ್ತಿಯು ಮೂರು ವಿಧ-
ಯ) ಸಾಧ್ಯದಿಂದ ಮತ್ತು ಸಾಧ್ಯಾಭಾವದಿಂದಲೂ ಸಂಬದ್ಧವಾಗುವುದು (ಸಾಧಾರಣಾನೈಕಾನ್ತಿಕ)
ರ) ಸಾಧ್ಯದೊಡನೆ ಸಂಬದ್ಧವಾಗದೆ ಕೇವಲ ಸಾಧ್ಯಾಭಾವದೊಡನೆಯೇ ಸಂಬದ್ಧವಾಗಿರುವುದು (ವಿರುದ್ಧ)
ಲ) ಎರಡರೊಡನೆಯೂ ಸಂಬದ್ಧವಾಗದಿರುವುದು (ಅಸಾಧಾರಣಾನೈಕಾಂತಿಕ).

3) ದೃಷ್ಟಾಂತವಿರೋಧವು ಎರಡು ವಿಧ- ಅ)ಸಾಧ್ಯವೈಕಲ್ಯ ಆ) ಸಾಧನವೈಕಲ್ಯ ಎಂದು.

**ಇತಿ ಸಾಮಾನಾಧಿಕರಣ್ಯಮ್ । ಅತ್ಯಯಃ- ಅತಿಕ್ರಮೋ- ವಿರೋಧಃ । ಕಿಂ ಜನಕಮ್? ಇತ್ಯತ ಆಹ 'ಜನಕಂ' ಇತಿ । ಸ್ವಸ್ಯಾರ್ಥಸ್ಯ ಪ್ರಕಾಶನಾತ್- ಸ್ವವಿಷಯಪ್ರತಿಪಾದನಾತ್ । 'ಪ್ರಮಾಣಮ್' ಇತಿ ಜ್ಞಾಪಕತ್ವಮಾತ್ರೇಣ ಉಪಚಾರಃ, ಸ್ವವ್ಯಾಹತಸ್ಯ ಪ್ರಾಮಾಣ್ಯಾಯೋಗಾತ್ ।**

ಈ ರೀತಿಯಾಗಿ ವಿಭಜಿಸಿದ್ದರಿಂದ ಏನು ಪ್ರಯೋಜನವಾಯಿತು? ಇದರಿಂದ ಜಾತಿಗೆ ಅಂತರ್ಭಾವವು ಸಿದ್ಧವಾಯಿತು ಎಂದು ಸೂಚಿಸಲು, (ಅಂತರ್ಭಾವಕ್ರಮದ) ದಿಗ್‌ದರ್ಶನಮಾಡಲು ಅದರ (ಜಾತಿಯ) ಸ್ವರೂಪವನ್ನು ನಿರೂಪಿಸುವರು 'ಜನಕಸ್ಯ' ಎಂದು. 'ಸ್ವಸ್ಯ ಜನಕಸ್ಯ' ಮತ್ತು 'ಅನ್ಯಸ್ಯ ಜನಕಸ್ಯ' ಎನ್ನುವ (ಶಬ್ದಗಳಿಗೆ) ಸಾಮಾನಾಧಿಕರಣ್ಯ[1]. **ಅತ್ಯಯಃ-**

1. 'ಸ್ವಸ್ಯ ವಾ ಅನ್ಯಸ್ಯ ವಾ ಜನಕಸ್ಯ ಅತ್ಯಯಃ ಜಾತಿಃ' ಎಂದು ಜಾತಿಯ (ನಿಗ್ರಹಸ್ಥಾನ ಒಂದರ) ಲಕ್ಷಣವನ್ನು ತಿಳಿಸಲಾಗಿದೆ. ವಸ್ತುತಃ ಜಾತಿಯ ಲಕ್ಷಣವು 'ಸ್ವವ್ಯಾಹತಿಃ' ಎಂದು ಶಾಸ್ತ್ರದಲ್ಲಿ ನಿಶ್ಚಯಿಸಲಾಗಿದೆ. ವ್ಯಾಹತಿಯು ಮೂರುವಿಧ. ಸ್ವವಚನವಿರೋಧ, ಸ್ವಕ್ರಿಯಾವಿರೋಧ ಮತ್ತು ಸ್ವನ್ಯಾಯವಿರೋಧ ಎಂದು. 'ನನ್ನ ತಾಯಿಯು ಬಂಜೆ' ಎನ್ನುವುದು ಸ್ವವಚನವಿರೋಧಕ್ಕೂ, 'ನಾನು ಮೂಕ' ಎನ್ನುವುದು ಸ್ವಕ್ರಿಯಾವಿರೋಧಕ್ಕೂ, 'ಘಟಃ ನಿತ್ಯಃ, ದ್ರವ್ಯದ್ರವ್ಯತ್ವಾತ್ ಗಗನವತ್' ಎನ್ನುವುದು ಸ್ವನ್ಯಾಯವಿರೋಧಕ್ಕೂ ದೃಷ್ಟಾಂತವೆಂದು ಪರಿಗಣಿಸಲಾಗಿದೆ. ಘಟಃ ಅನಿತ್ಯಃ ದ್ರವ್ಯತ್ವಾತ್ ಪಟವತ್ ಎಂದು ಅದೇ ಯುಕ್ತಿಯಿಂದ ಅನಿತ್ಯತ್ವವನ್ನು ಸಾಧಿಸಬಹುದು. ಈ ಮೂರೂತರಹೇ ವಿರೋಧವಿದ್ದರೂ ಜಾತಿ ಎಂಬ ನಿಗ್ರಹಸ್ಥಾನದಿಂದ ಪ್ರತಿವಾದಿಯನ್ನು ನಿಗ್ರಹಿಸಲಾಗುವುದು. ಪ್ರಕೃತ ಮೂಲವಾಕ್ಯದಿಂದ ಝಟಿತಿ ಪ್ರತಿಭಾಸಮಾನವಾಗುವ ಅರ್ಥವು- 'ತನ್ನ ಜನಕನಿಗೂ ಮತ್ತು ಬೇರೆಯೊಂದರ ಜನಕನಿಗೂ ವಿರುದ್ಧವಾದದು ಜಾತಿ' ಎಂದು ಜಾತಿಯ ಲಕ್ಷಣವನ್ನು ತಿಳಿಸಿದಂತೆ ತೋರುತ್ತದೆ. ಜಾತಿಯ ಲಕ್ಷಣದಲ್ಲಿ ಘಟಿತವಾದ 'ಸ್ವಸ್ಯ ಅತ್ಯಯಃ' ಎನ್ನುವ ಭಾಗದಿಂದ ಪರಿಗೃಹೀತವಾಗುವುದು ಸ್ವವಚನವಿರೋಧ, ಅಂದರೆ 'ನನ್ನ ತಾಯಿಯು ಬಂಜೆ' ಈ ವಚನವು ವಿರುದ್ಧವಾದ 'ತಾಯಿತನ' ಮತ್ತು 'ಬಂಜೆತನ' ಇವುಗಳನ್ನು ಬೋಧಿಸುವುದು. 'ಅನ್ಯಸ್ಯ ಅತ್ಯಯಃ' ಎನ್ನುವುದರಿಂದ ಪರಿಗೃಹೀತವಾಗುವವು ಸ್ವಕ್ರಿಯಾವಿರೋಧ ಮತ್ತು ಸ್ವನ್ಯಾಯವಿರೋಧಗಳು, 'ನಾನು ಮೂಕ' ಎನ್ನುವ ಪ್ರತಿಜ್ಞೆಯನ್ನು ಆತನ ವಚನರೂಪ ಕ್ರಿಯೆಯು ವಿರೋಧಿಸುವುದು. ವಚನರೂಪ 'ಕ್ರಿಯೆ' ಮಾತಿನಿಂದ ಭಿನ್ನವಾದ ಪ್ರಮಾಣ. ಹಾಗೆಯೇ 'ದ್ರವ್ಯವಾದುದರಿಂದ' ಎನ್ನುವ ಆತನ ಆ ಯುಕ್ತಿಯಿಂದಲೇ ಆತನಪ್ರತಿಜ್ಞೆಯಾದ 'ಗಡಿಗೆಯು ನಿತ್ಯ' ಎನ್ನುವುದನ್ನು ನಿರಾಕರಿಸಲು ಶಕ್ಯವಿದೆ. ಆತನ ಯುಕ್ತಿಯು ಆತನ

**ಪುಟ 450ರಲ್ಲಿ........**

ಅತಿಕ್ರಮಿಸಿರುವುದು-ವಿರುದ್ಧವಾದದ್ದು ('ಜಾತಿ' ಎಂದು ತಿಳಿಸಿದಂತಾಯಿತು.)

...... ಪುಟ 449 ರಿಂದ

ವಚನದಿಂದ ಭಿನ್ನವೇ ಆಗಿದೆ. ಆದುದರಿಂದ ಇವೆರಡೂ ಜಾತಿಯ ಲಕ್ಷಣದಲ್ಲಿ ಘಟಿತವಾದ 'ಅನ್ಯಸ್ಯ ಅತ್ಯಯಃ' ಎನ್ನುವದಕ್ಕೆ ದೃಷ್ಟಾಂತಗಳು. 'ಸ್ವಸ್ಯ ಜನಕಸ್ಯ ಅತ್ಯಯಃ ಜಾತಿಃ' ಮತ್ತು 'ಅನ್ಯಸ್ಯ ಜನಕಸ್ಯ ಅತ್ಯಯಃ ಜಾತಿಃ' ಎಂದು ಎರಡು ವಿಧದಲ್ಲಿ ಜಾತಿಯ ಲಕ್ಷಣವನ್ನು ತಿಳಿಸಿದಂತಾಗಿದೆ. ಆದರೆ ದೃಷ್ಟಾಂತವಾಗಿ ತಿಳಿಸಿದ ಈ ಮೂರೂ ಸಂದರ್ಭಗಳಲ್ಲಿ ಆ ಆ ವಾಕ್ಯದ ಅಥವಾ ವಕ್ತೃವಿನ ಕ್ರಿಯಾ ಅಥವಾ ವಕ್ತೃವಿನ ಯುಕ್ತಿಗಳಿಂದಲೇ ವಿರೋಧವು ಪ್ರಸಕ್ತವಾಗಿದೆ ಹೊರತು, ಅವುಗಳಿಂದ ವಿಭಿನ್ನವಾದ ಪದಾರ್ಥಾಂತರದ ವಿರೋಧವು ಕಾಣಸಿಗದು. ಆದರೆ ಪ್ರಕೃತದಲ್ಲಿ 'ಸ್ವಸ್ಯ ಜನಕಸ್ಯ, ಅನ್ಯಸ್ಯ ಜನಕಸ್ಯ ಅತ್ಯಯಃ' ಎಂದು ಜಾತಿ ಶಬ್ದವನ್ನು ನಿರ್ವಚಿಸಿರುವರು. ಲೋಕದಲ್ಲಿ ಜನ್ಯ-ಜನಕಗಳಲ್ಲಿ ಭೇದವು ಕಂಡಿದೆ. ಆದುದರಿಂದ ಮೂಲವಾಕ್ಯದ ಅಭಿಪ್ರಾಯವೇನು? ಎನ್ನುವ ಸಂದೇಹಕ್ಕೆ 'ಸಾಮಾನಾಧಿಕರಣ್ಯಂ' ಎಂದು ಟೀಕೆಯಲ್ಲಿ ಉತ್ತರಿಸಿರುವರು. ಸಾಮಾನಾಧಿಕರಣ್ಯ ಎಂದರೆ ವಿರುದ್ಧಪದಾರ್ಥಗಳ ಸಮಾವೇಶ ಎಂದು. ಉದಾಹರಣೆಗೆ ಕಪಿಯ ಸಂಯೋಗ ಮತ್ತು ಸಂಯೋಗಾಭಾವ ಇವೆರಡೂ ಏಕಕಾಲದಲ್ಲಿ ವೃಕ್ಷ ಒಂದರಲ್ಲಿ ಇರುವವು. ಹಾಗೆಯೇ ಪ್ರಕೃತ ಶಬ್ದದಲ್ಲಿ ಸಾಮಾನಾಧಿಕರಣ್ಯ ಎಂದರೆ 'ವಿಭಿನ್ನ ಪದಾರ್ಥಗಳನ್ನು ಬೋಧಿಸುವ ಶಬ್ದಗಳು ಒಂದೇ ಪದಾರ್ಥವನ್ನು ಬೋಧಿಸುವುದು' ಎಂದು ಶಾಸ್ತ್ರದಲ್ಲಿ ತಿಳಿಸಿರುವರು. ಪ್ರಕೃತ ಸ್ವಸ್ಯ ಜನಕಸ್ಯ ಅನ್ಯಸ್ಯ ಜನಕಸ್ಯ ಎನ್ನುವದನ್ನು ಈ ರೀತಿಯಲ್ಲಿ ಅರ್ಥೈಸುವುದು- 'ತಾನೆಂಬ ಜನಕ'- ತನ್ನಿಂದ ಅಭಿನ್ನವಾದ ಜನಕ ಎಂದು, 'ಅನ್ಯನೆಂಬ ಜನಕ'- ಅನ್ಯನಿಂದ ಅಭಿನ್ನನಾದ ಜನಕ ಎಂದು ಭಾವ . ಆದುದರಿಂದಲೇ ಮೂಲದಲ್ಲಿ ಆಚಾರ್ಯರು ಮುಂದೆ 'ಜನಕಂ ಪ್ರಮಾಣಮುದ್ದಿಷ್ಟಂ ಸ್ವಸ್ಯಾರ್ಥಸ್ಯ ಪ್ರಕಾಶನಾತ್' ಜನಕ ಎಂದು ವ್ಯವಹರಿಸಲು ಕಾರಣ, ಅದು- ಅರ್ಥಪ್ರಕಾಶಕವಾದುದರಿಂದ ಎಂದು ತಿಳಿಸಿರುವರು. ಅಂದರೆ 'ಮೇ ಮಾತಾ ವಂಧ್ಯಾ' ಎನ್ನುವ ಮಾತೇ ವಿರುದ್ಧವಾದ ಮಾತೃತ್ವ ಮತ್ತು ವಂಧ್ಯಾತ್ವವನ್ನು ತಿಳಿಸುವುದು. ಇದು 'ಸ್ವಸ್ಯ ಅತ್ಯಯಃ' ಎನ್ನುವದಕ್ಕೆ ಉದಾಹರಣೆ. 'ಮೂಕೋಽಹಂ' ಎನ್ನುವ ಆತನ ಪ್ರತಿಜ್ಞೆಗೆ ವಿರುದ್ಧವಾದದ್ದನ್ನು- 'ಆತನು ಮೂಕನಲ್ಲ' ಎನ್ನುವದನ್ನು ಆತನ ವಚನಕ್ರಿಯೆಯೇ ಅದನ್ನು ತಿಳಿಸುವುದು. ಇಲ್ಲಿ ಆತನ ಪ್ರತಿಜ್ಞೆಯಿಂದ ಭಿನ್ನವಾದದು ಆತನ ವಚನಕ್ರಿಯೆ. 'ಗಡಿಗೆಯು ನಿತ್ಯ, ದ್ರವ್ಯವಾದುದರಿಂದ ಗಗನದಂತೆ' ಎನ್ನುವಲ್ಲಿ, 'ದ್ರವ್ಯವಾದುದರಿಂದ' ಎನ್ನುವ ಆತನ ಯುಕ್ತಿಯಿಂದಲೇ, 'ಗಡಿಗೆಯು ಅನಿತ್ಯ ದ್ರವ್ಯವಾದುದರಿಂದ ಪಟದಂತೆ' ಎಂದೂ ಸಾಧಿಸಬಹುದು. ಇಲ್ಲಿ ಯುಕ್ತಿಯು ಆತನ ಪ್ರತಿಜ್ಞೆಯಿಂದ ಭಿನ್ನವಾಗಿದೆ. ಇವೆರಡೂ ಉದಾಹರಣೆಗಳು 'ಅನ್ಯಸ್ಯ ಅತ್ಯಯಃ' ಎನ್ನುವುದರಿಂದ ಪರಿಗ್ರಹಿಸಲಾಗುವುದು. ಸಂಸ್ಕೃತಭಾಷೆಯಲ್ಲಿ ಭಾಷಾಭಾವವನ್ನು ರೂಢಿಕೊಳ್ಳುವ ವಿಧಾನಗಳಲ್ಲಿ ಇದೂ ಒಂದು ಎನ್ನುವುದನ್ನು ವಾಚಕರು ಗಮನಿಸುವುದು.

ಜನಕ ಎಂದರೇನು? ಆದುದರಿಂದ ಉತ್ತರಿಸುತ್ತಾರೆ 'ಜನಕಂ' ಎಂದು. **ಸ್ವಸ್ಯಾರ್ಥಸ್ಯ ಪ್ರಕಾಶನಾತ್**- ತನ್ನ ವಿಷಯವನ್ನು ಪ್ರತಿಪಾದಿಸಿದ್ದರಿಂದ. '**ಪ್ರಮಾಣಮ್**' ಎಂದು ಕೇವಲ ಸೂಚಕತ್ವವು ಇರುವುದರಿಂದ ಔಪಚಾರಿಕ (ವ್ಯವಹಾರ). ಸ್ವವ್ಯಾಹತವಾದುದಕ್ಕೆ ಪ್ರಾಮಾಣ್ಯವು ಅಯುಕ್ತವಾದುದರಿಂದ[1].

**ಜಾತಿ ಶಬ್ದದ ಸಾಧುತ್ವ ಮತ್ತು ನಿರ್ವಚನೆ**

**'ಅನ್ಯೇಷ್ವಪಿ ದೃಶ್ಯತೇ' ಇತಿ ದೃಶಿಗ್ರಹಣಾತ್ ನಿರುಪಪದಾತ್ ಪ್ರಾದುರ್ಭಾವಾರ್ಥಾತ್ ಜನೇರಪಾದಾನೇ, ಣ್ಯನ್ತಾದ್ವಾ ಕರ್ತರಿ ಡಪ್ರತ್ಯಯೇ ಕೃತೇ 'ಜಂ' ಇತಿ ಜ್ಞಾಪಕಂ ವಾಕ್ಯಮುಚ್ಯತೇ । 'ಉಪಸರ್ಗಾಶ್ಚ ಕ್ರಿಯಾಸನ್ನಿಧಾನೇ ಸತಿ ತದ್ವಿಶೇಷಕಾ ಭವನ್ತಿ । ಅಸನ್ನಿಧಾನೇ ತು ಸಸಾಧನಾನಾಂ ಕ್ರಿಯಾಮಾಹುಃ, ಯಥಾ 'ಪ್ರಾಚಾರ್ಯಃ, ಪ್ರಾನ್ತೇವಾಸೀ' ಇತಿ । ತತಃ ಅತಿಃ- ಅತ್ಯಯಸ್ಯ ವಾಚಕಃ । ತಥಾಚ 'ಜಸ್ಯ- ಸ್ವವಾಕ್ಯಸ್ಯ ಅನ್ಯಸ್ಯ ವಾ, ಜನಕಸ್ಯ- ಜ್ಞಾಪಕಸ್ಯ, ಅತಿಃ- ಅತ್ಯಯೋ ಜಾತಿಃ' ಇತ್ಯುಕ್ತಂ ಭವತಿ । ಅನ್ಯಚ್ಚಾತ್ರ ಸ್ವಕ್ರಿಯಾ ವಾ ಸ್ವನ್ಯಾಯೋ ವಾ, ಅನ್ಯಥಾ ಕಾಲಾತೀತಾದೇರಪಿ ಜಾತಿತ್ವಪ್ರಸಙ್ಗಾತ್ । ಏವಂ ಚ ಸ್ವವ್ಯಾಹತಿಃ- ಜಾತಿಃ, ಸಾ ತ್ರಿವಿಧಾ- ಸ್ವವಚನವಿರೋಧಃ ಸ್ವಕ್ರಿಯಾವಿರೋಧಃ ಸ್ವನ್ಯಾಯವಿರೋಧಶ್ಚೇತಿ ಲಭ್ಯತೇ । ತಥಾಚ ಸ್ವತೋ ವಿರೋಧೇ ಜಾತೇರನ್ತರ್ಭಾವಃ ಸೂಚಿತೋ ಭವತಿ । ಏವಮನ್ಯೇಷಾಮ್ ಅನ್ತರ್ಭಾವೋ ದ್ರಷ್ಟವ್ಯಃ ।**

'ಅನ್ಯೇಷ್ವಪಿ ದೃಶ್ಯತೇ' (ಪಾ.ಅ.3.2.101.) ಎಂದು 'ದೃಶಿ' ಎಂದು ಪರಿಗ್ರಹಿಸಿರುವುದರಿಂದ ನಿರುಪಪದವಾದ ಪ್ರಾದುರ್ಭಾವಾರ್ಥಕವಾದ 'ಜನೀ' ಧಾತುವಿಗೆ ಅಪಾದಾನಾರ್ಥದಲ್ಲಿ ಅಥವಾ ಣ್ಯಂತವಾದುದರಿಂದ

---

1. ಮೂಲದಲ್ಲಿ 'ಸ್ವಸ್ಯ ವಾ ಅನ್ಯಸ್ಯ ಜನಕಸ್ಯ ವಾ ಅತ್ಯಯಃ' ಎಂದು ಜಾತಿಯ ಲಕ್ಷಣವನ್ನು ತಿಳಿಸಿ, ಜನಕಶಬ್ದದ ವಿವರವನ್ನು ತಿಳಿಸುವರು- 'ಜನಕಂ ಪ್ರಮಾಣಮುದ್ದಿಷ್ಟಮ್ ಸ್ವಸ್ಯಾರ್ಥಸ್ಯ ಪ್ರಕಾಶನಾತ್' ಎಂದು. ಆದರೆ ಜಾತಿರೂಪ ದೋಷವಿಶಿಷ್ಟವಾದವು- ಸ್ವವ್ಯಾಹತವಾದವು ಪ್ರಮಾಣವಾಗಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಿಕೊಂಡು ಉತ್ತರಿಸುವರು 'ಜ್ಞಾಪಕತ್ವಮಾತ್ರೇಣೋಪಚಾರಃ' ಎಂದು. ಇಲ್ಲಿ ಪ್ರಾಮಾಣ್ಯವು ಇಲ್ಲ, ಜ್ಞಾಪಕವಾದುದರಿಂದ ಪ್ರಮಾಣ ಎಂದು ಕೇವಲ ಔಪಚಾರಿಕ ವ್ಯವಹಾರ ಎಂದು ಭಾವ.

ಕರ್ತ್ರರ್ಥದಲ್ಲಿ 'ಡ' ಪ್ರತ್ಯಯವು ಪ್ರಾಪ್ತವಾಗಲು 'ಜಂ' ಎನ್ನುವುದು ಜ್ಞಾಪಕವಾದ ವಾಕ್ಯವನ್ನು ಹೇಳುತ್ತದೆ[1]. ಉಪಸರ್ಗಗಳು (ಧಾತುವಿನ ಹಿಂದೆ

---

1. 'ಜಾತಿ' ಶಬ್ದದ ನಿಷ್ಪತ್ತಿಯ ವಿವರ- 'ಜನೀ-ಪ್ರಾದುರ್ಭಾವೇ' ಎಂಬ ಧಾತುವು ದಿವಾದಿಗಣದಲ್ಲಿ ಪಠಿತವಾಗಿದೆ. ಈ ಧಾತುವಿನಿಂದ ನಿಷ್ಪನ್ನವಾದ ಈ ಜಾತಿ ಎಂಬ ಶಬ್ದದಿಂದ 'ಜನಕಸ್ಯ ಅತ್ಯಯಃ- ಜಾತಿಃ' ಎಂಬಿತ್ಯಾದಿ ಭಾವವು ಪ್ರಾಪ್ತವಾಗಬೇಕಾದಲ್ಲಿ, 'ಜ-ಜ್ಞಾಪ್ಯತೇ ಅಸ್ಮಾತ್ ಅರ್ಥಃ' ಎಂದು ಪ್ರಕೃತ ಶಬ್ದವನ್ನು ನಿರ್ವಚಿಸಬೇಕು. ಆದರೆ 'ಸಪ್ತ್ಯಮ್ಯಾಂ ಜನೇರ್ಡಃ' (ಪಾ.ಅ.3.2.97.)ಎನ್ನುವ ಸೂತ್ರದಂತೆ- 'ಪಂಕೇ ಜಾತಂ ಪಂಕಜಮ್' ಎಂದು ಸಪ್ತಮೀ ವಿಭಕ್ತಿಯೊಡನೆ ಸಮಾಸವಾದಾಗ 'ಡ' ಪ್ರತ್ಯಯವು ಮತ್ತು 'ಪಂಚಮ್ಯಾಮಜಾತೌ' (ಪಾ.ಅ.3.2.98.) ಎನ್ನುವ ಸೂತ್ರದಂತೆ 'ಪದ್ಮಾತ್ ಜಾತಃ- ಪದ್ಮಜಃ' ಎಂದು, ಜಾತಿವಾಚಕವಲ್ಲದ ಶಬ್ದದೊಡನೆ ಪಂಚಮೀ ವಿಭಕ್ತಿಯೊಡನೆ ಸಮಾಸವಾದಾಗ 'ಡ' ಪ್ರತ್ಯಯವು ಪ್ರಾಪ್ತವಾಗುವುದು. 'ಅನ್ಯೇಷ್ವಪಿ ದೃಶ್ಯತೇ' (ಪಾ.ಅ.3.3.101.) ಸೂತ್ರದಂತೆ ಬೇರೇ ಉಪಪದಗಳು ಇದ್ದಾಗಲೂ 'ಡ'ಪ್ರತ್ಯವು ವಿಹಿತವಾಗಿದೆ. ದ್ವಿರ್ಜಾತಃ ದ್ವಿಜಃ ಎನ್ನುವುದು ಉದಾಹರಣೆಯಾಗಿದೆ. ಒಟ್ಟಿನಲ್ಲಿ ಉಪಪದವು ಇದ್ದಾಗ ಮಾತ್ರ ಡಪ್ರತ್ಯಯವು ವಿಹಿತವಾಗಿದೆ ಹೊರತು, ನಿರುಪಪದವಾದ ಜನಿ ಧಾತುವಿಗೆ 'ಡ'ಪ್ರತ್ಯಯದ ಯೋಗವಿಲ್ಲ ಎಂಬ ಸಂದೇಹವನ್ನು ಪರಿಹರಿಸುವರು 'ಅನ್ಯೇಷ್ವಪಿ ದೃಶ್ಯತೇ' ಎಂಬ ಸೂತ್ರದಲ್ಲಿ 'ಅನ್ಯೇಷು' ಎಂಬ ಪದವು ವ್ಯರ್ಥ, ಆದರೂ ಪಾಣಿನಿಗಳು ಬಳಸಿದ್ದರಿಂದ ಅದರ ಭಾವವು 'ನಿರುಪಪದವಾದ ಜನಿ ಧಾತುವಿಗೂ 'ಡ'ಪ್ರತ್ಯಯದ ಯೋಗವು ಇದೆ' ಎಂಬುವುದಾಗಿತಿಳಿಯುವುದು. ಒಟ್ಟಿನಲ್ಲಿ 'ಜಂ' ಎಂಬ ರೂಪವು ಸಿದ್ಧವಾಗುವುದು. ಅಥವಾ ಈ ಜನಿಧಾತುವು 'ಣಿಚ್' ಪ್ರತ್ಯಯಾಂತವಾಗಿದೆ. 'ಜಾಯತೇ' ಎಂಬ ಪ್ರಯೋಗವಲ್ಲ 'ಜನಯತಿ' ಎಂಬ ಪ್ರಯೋಗ ಎಂದು ಭಾವ. ಆಗ ರೂಪಸಿದ್ಧಿಯು- ಜನೀ ಎಂದು ಮೂಲರೂಪ, ಧಾತುವಿನ ಕೊನೆಯ ಈ ಕಾರಕ್ಕೆ ಲೋಪ, ಜನ್ ಎಂದು ಪರಿವಸಿತವಾಗುವುದು. ಣಿಚ್ ಪ್ರತ್ಯಯವನ್ನು ವಿಧಿಸಲಾಗಿ, ಚಕಾರಕ್ಕೆ- ಅಂತ್ಯವಾದ ಹಲ್ ವರ್ಣಕ್ಕೆ ಲೋಪವು ಪ್ರಾಪ್ತವಾಗಲು 'ಜನ್+ಣಿ' ಎಂದಿರಲು 'ಅನ್ಯೇಷ್ವಪಿ ದೃಶ್ಯತೇ' ಎಂಬ ಸೂತ್ರದಂತೆ 'ಡ'ಪ್ರತ್ಯಯವು ಪ್ರಾಪ್ತವಾಗಲು ಜನ್+ಣಿ+ಡ ಎಂದಿರಲು 'ಚುಟೂ' (ಪಾ.ಅ.1.2.7.) ಎನ್ನುವ ಸೂತ್ರದ ನಿಯಮದಂತೆ 'ಡ' ಪ್ರತ್ಯಯದಲ್ಲಿನ 'ಡ್' ಕಾರಕ್ಕೆ ಲೋಪವು ಪ್ರಾಪ್ತವಾಗಿ ಜನ್+ಣಿ+ಅ ಎಂದು ಪರಿವಸಿತವಾಗುವುದು. 'ಣೇರನಿಟಿ' (ಪಾ.ಅ.6.4.51.) ಸೂತ್ರದಂತೆ ಟಿತ್ ಆಗಿರದ ಧಾತುವಿನೊಡನೆ ಸಂಬಂಧಿಸಿದ ಣಿಚ್ ಪ್ರತ್ಯಯಕ್ಕೆ ಲೋಪವು ಪ್ರಾಪ್ತವಾಗಿ ಜನ್+ಅ ಎಂದು ಪರಿವಸಿತವಾಗುವುದು. 'ಅಚೋಽನ್ತ್ಯಾದಿ ಟಿ' (ಪಾ.ಅ.1.1.34.) ಈ ಸೂತ್ರದಂತೆ ಪದ ಒಂದರಲ್ಲಿನ ಕೊನೆಯ ಸ್ವರವರ್ಣ ಮತ್ತು ಅದರ ಮುಂದಿನ ವ್ಯಂಜನಗಳಿಗೆ 'ಟಿ' ಎಂದು

ಪುಟ 453ರಲ್ಲಿ........

ಯೋಜಿಸುವ ಪ್ರತ್ಯಯಗಳು) ಕ್ರಿಯೆಯ (ಕ್ರಿಯಾವಾಚಕ ಶಬ್ದದ) ಸನ್ನಿಧಾನವಿರಲು ಅದರ (ಆ ಧಾತುವಿನ) ಅರ್ಥವಿಶೇಷವನ್ನು ತಿಳಿಸುತ್ತವೆ[1]. (ಕ್ರಿಯಾಪದದ) ಸನ್ನಿಧಾನವು ಇಲ್ಲದಿರಲು, (ಜ್ಞಾನ) ಸಾಧನೀಭೂತಗಳೊಡನೆ (ಕ್ರಿಯಾವಾಚಕ, ಕರ್ಮವಾಚಕ, ಭಾವವಾಚಕ ಪದಗಳೊಡನೆ) ಯುಕ್ತವಾದ (ಉಪಸರ್ಗಗಳು ಆ ಆ ವಾಚಕಗಳ) ಕ್ರಿಯೆಯನ್ನು (ಅವಸ್ಥಾ ವಿಶೇಷವನ್ನು) ತಿಳಿಸುತ್ತವೆ. ಉದಾಹರಣೆಗೆ- ಪ್ರಾಚಾರ್ಯಃ, ಪ್ರಾಂತೇವಾಸೀ ಎನ್ನುವುದು[2]. ಆದುದರಿಂದ (ಅರಿವಿಗೆ ಕಾರಣವಾದ ಕರ್ತ್ರರ್ಥಕ ಭಾವಾರ್ಥಕ

---

...... ಪುಟ 452 ರಿಂದ

ಹೆಸರಿಸಿರುವರು. ಆದರ ಪ್ರಕಾರ 'ಜನ್' ಎನ್ನುವಲ್ಲಿನ್ನ 'ಅನ್' ಎನ್ನುವದಕ್ಕೆ 'ಟಿ' ಸಂಜ್ಞೆಯು ಪ್ರಾಪ್ತವಾಗುವುದು. 'ಟೇಃ' (ಪಾ.ಅ.6.4.143.) ಸೂತ್ರದಂತೆ 'ಭ' ಸಂಜ್ಞೆಯನ್ನು ಹೊಂದಿರುವ ಟಿಗೆ ಲೋಪವು ಪ್ರಾಪ್ತವಾಗುವುದು. ಆದರೆ ಪ್ರಕೃತ ಟಿಸಂಜ್ಞೆಯನ್ನು ಹೊಂದಿರುವ ಈ 'ಅನ್'ಗೆ ಭಸಂಜ್ಞೆಯನ್ನು ವಿಧಿಸುವ 'ಯಚಿ ಭಮ್' (ಪಾ.ಅ.1.4.18.)ಪ್ರಕಾರ ಭಸಂಜ್ಞೆಯು ಇರುವುದಿಲ್ಲ, ಹಾಗಾಗಿ ಭಸಂಜ್ಞೆಯನ್ನು ಹೊಂದದ ಈ ಟಿಗೆ ಅಂದರೆ 'ಅನ್'ಗೆ ಲೋಪವು ಪ್ರಾಪ್ತವಾಗದು. ಆದರೆ 'ಡಿತ್ಯಭಸ್ಯಾಪಿ ಟಿಲೋಪಃ' ಎನ್ನುವ ವ್ಯಾಕರಣಾಭಿಜ್ಞರ ವಚನದಂತೆ ಡಕಾರವು ಇತ್‌ಸಂಜ್ಞೆಯನ್ನು ಹೊಂದಿದ ಭಸಂಜ್ಞೆಯನ್ನು ಹೊಂದಿರದ ಟಿಗೂ ಲೋಪವನ್ನು ವಿಧಿಸಲಾಗಿರುವುದರಿಂದ 'ಅನ್'ಗೆ ಲೋಪವು ಪ್ರಾಪ್ತವಾಗುವುದು. 'ಜ್+ಅ= ಜಂ' ಎಂದು ರೂಪವು ಸಿದ್ಧವಾಗುವುದು ಎಂದು ಭಾವ.

1. ಉಪಸರ್ಗಗಳಿಗೆ ಪ್ರತ್ಯೇಕವಾಗಿ ಅರ್ಥವು ಇರುವುದಿಲ್ಲ. ಆದರೆ ಕ್ರಿಯಾಪದದೊಡನೆ ಪ್ರಯೋಗಿಸಿದಾಗ ಆ ಕ್ರಿಯಾಪದದ ಅರ್ಥವಿಶೇಷವನ್ನು ಸೂಚಿಸುವುದು ಎಂದು, 'ಉಪಸರ್ಗಾಃ ಕ್ರಿಯಾಯೋಗೇ' (ಪಾ.ಅ.1.4.59.) ಎಂಬ ಸೂತ್ರವು ತಿಳಿಸುವುದು. ಉದಾ- ಹೃ ಎಂಬ ಧಾತುವಿನೊಡನೆ ಪ್ರ ಎಂಬ ಉಪಸರ್ಗವು ಸೇರಲಾಗಿ 'ಪ್ರಹಾರ- ಬಡಿ' ಎಂಬ ಅರ್ಥವಿಶೇಷವು, 'ಆ' ಎಂಬ ಉಪಸರ್ಗವು ಸೇರಿದಲ್ಲಿ 'ಆಹಾರ- ತಿನಿಸು' ಎಂಬ ಅರ್ಥವು ಪ್ರಾಪ್ತವಾಗುವುದು ಇತ್ಯಾದಿಗಳು ಕಂಡಿದೆ ಎಂದು ಭಾವ.

2. ಇಲ್ಲಿ ಕ್ರಿಯಾವಾಚಕಗಳಲ್ಲದ ಆಚಾರ್ಯ ಮತ್ತು ಅಂತೇವಾಸೀ ಶಬ್ದದೊಡನೆ ಪ್ರ ಎಂಬ ಉಪಸರ್ಗವು ಮಿಲಿತವಾಗಿದೆ. ಈ ಸಂದರ್ಭದಲ್ಲಿ 'ಆಚಾರ್ಯನು ಹೊರಟನು, ಶಿಷ್ಯನು ಹೊರಟನು' ಎಂದು ಆ ಶಬ್ದಗಳಿಗೆ ಅರ್ಥೈಸಲಾಗಿದೆ. 'ಜೀವಿಕೋಪನಿಷದಾವೌಪಮ್ಯೇ' (ಪಾ.ಅ.1.4.79.) ಸೂತ್ರದ ವ್ಯಾಖ್ಯಾನದ ಸಂದರ್ಭದಲ್ಲಿ 'ಪ್ರಾದಯೋ ಪ್ರಥಮಾದ್ಯರ್ಥೇ ಪ್ರಥಮಯಾ' ಎಂದು ವಾರ್ತಿಕಾಚಾರ್ಯರು ತಿಳಿಸಿರುವಂತೆ ಅರ್ಥವಿಶೇಷವನ್ನು ತಿಳಿಸುತ್ತದೆ ಎಂದು ಭಾವ.

ಶಬ್ದದೊಡನೆಯೂ ಉಪಸರ್ಗಗಳ ಪ್ರಯೋಗವಿದ್ದು, ಅವುಗಳಿಗೆ ಅವಸ್ಥಾವಿಶೇಷವಾಚಿತ್ವವು ಇರುವುದರಿಂದ) 'ಅತಿ' ಎನ್ನುವದು 'ಅತ್ಯಯ' ಎಂದು ತಿಳಿಸುತ್ತದೆ. ಹಾಗಾಗಿ ಜಸ್ಯ - ತನ್ನ ಅರಿವಿಗೆ ಕಾರಣವಾದುದರ ಅಥವಾ ಅನ್ಯಸ್ಯ - ಜನಕಸ್ಯ -ಜ್ಞಾಪಕಕ್ಕೆ ಕಾರಣವಾದುದರ ಅತಿಃ- ಅತ್ಯಯವು 'ಜಾತಿ' ಎಂದು ತಿಳಿಸಿದಂತಾಯಿತು. ಇಲ್ಲಿ ಅನ್ಯವಾದದ್ದು (ಮೂಲದಲ್ಲಿನ 'ಅನ್ಯಸ್ಯ' ಪದದಿಂದ ಸೂಚಿತವದದ್ದು) ಸ್ವಕ್ರಿಯಾವಿರೋಧ ಅಥವಾ ಸ್ವನ್ಯಾಯವಿರೋಧ. ಹಾಗಾಗದ ಪಕ್ಷದಲ್ಲಿ ಕಾಲಾತೀತಾದಿಗಳನ್ನೂ ಜಾತಿಯೆಂದೇ ಪರಿಗಣಿಸಬೇಕಾದೀತು[1]. ಒಟ್ಟಿನಲ್ಲಿ ಸ್ವವ್ಯಾಹತಿಯನ್ನು ಜಾತಿ (ಎಂದು ತಿಳಿಯುವುದು) ಅದು ಮೂರುವಿಧ ಸ್ವವಚನವಿರೋಧ, ಸ್ವಕ್ರಿಯಾವಿರೋಧ, ಸ್ವನ್ಯಾಯವಿರೋಧ ಎಂದು ತಿಳಿಯುವುದು. ಹಾಗಾಗಿ ಸ್ವತಃ ವಿರೋಧವು (ಕಂಡಲ್ಲಿ) ಜಾತಿಯಲ್ಲಿ ಅಂತರ್ಭಾವ ಎಂದು ತಿಳಿಸಿದಂತಾಯಿತು. ಇದೇರೀತಿಯಲ್ಲಿ ಉಳಿದ ವಿರೋಧಗಳ ( ಅನ್ಯರು ತಿಳಿಸಿರುವ ಎಲ್ಲ ವಿಧವಾದ ಅನುಮಾನದೋಷಗಳ) ಅಂತರ್ಭಾವವನ್ನು ತಿಳಿಯುವುದು[2].

**ಆರೇ ನಿಗ್ರಹಸ್ಥಾನಗಳು**

**ನಿಗ್ರಹಾ ಏತ ಏವ ಸ್ಯುಃ ಸಂವಾದಾನುಕ್ತಿಸಂಯುತಾಃ ।**

ಸಂವಾದ, ಅನುಕ್ತಿ, ಇವುಗಳಿಂದ ಕೂಡಿದ ಇವೇ ( ವಿರೋಧ, ಆಧಿಕ್ಯ,

1. ಮೂಲದಲ್ಲಿನ 'ಸ್ವಸ್ಯ ವಾ ಅನ್ಯಸ್ಯ ವಾ' ಎನ್ನುವ ಪದಗಳಿಗೆ ಅರ್ಥೈಸುವಾಗ ಸ್ವಸ್ಯ ಎನ್ನುವದಕ್ಕೆ ಸ್ವಚನವಿರೋಧ ಎಂದು ಅರ್ಥೈಸಲಾಗಿದೆ. ಅನ್ಯಸ್ಯ ಎನ್ನುವದಕ್ಕೆ ಸ್ವಕ್ರಿಯಾ-ಸ್ವನ್ಯಾಯ ವಿರೋಧಗಳನ್ನು ಮಾತ್ರ ಪರಿಗ್ರಹಿಸಲಾಗಿದೆ. ಅನ್ಯಸ್ಯ ಎನ್ನುವುದರಿಂದ ಎಲ್ಲ ವಿಧವಾದ ಅನ್ಯಪ್ರಮಾಣಗಳ ವಿರೋಧವನ್ನೂ ಪರಿಗ್ರಹಿಸದೇ ಕೇವಲ ಇವೆರಡನ್ನು ಮಾತ್ರ ಪರಿಗ್ರಹಿಸಲು ಕಾರಣವೇನು? ಎಲ್ಲ ರೀತಿಯ ವಿರೋಧವನ್ನು ಪರಿಗ್ರಹಿಸಿದಲ್ಲಿ ಸತ್‌ಪ್ರತಿಪಕ್ಷ (ಸಮಬಲಪ್ರಮಾಣವಿರೋಧ), ಬಾಧವನ್ನೂ (ಪ್ರಬಲ ಪ್ರಮಾಣವಿರೋಧ ವನ್ನೂ) ಸಹ 'ಜಾತಿ' ಎಂಬುವ ನಿಗ್ರಹಸ್ಥಾನದಿಂದ ಪರಿಗಣಿಸಿದಂತಾಗುವುದು. ಹಾಗಾದಲ್ಲಿ ಇವೆರಡು ಬಾಧ-ಸತ್‌ಪ್ರತಿಪಕ್ಷಗಳು ಅನುಮಾನದ ದೋಷಗಳಾಗುವವು ಹೊರತು, ಪ್ರತ್ಯಕ್ಷಾಗಮಗಳಿಗೂ ಸಂಬಂಧಿಸಿದ ದೋಷಗಳಲ್ಲ ಎಂದಾದೀತು ಎಂದು ಭಾವ.

2. ವಿರೋಧದ ವಿಭಾಗವನ್ನು ಪುಟ ಸಂಖ್ಯೆ 447ರಲ್ಲಿ ತಿಳಿಸಲಾಗಿದೆ. ಆ ಎಲ್ಲ ದೋಷಗಳನ್ನು ವಿರೋಧ ಎಂಬ ದೋಷದಲ್ಲಿ ಅಂತರ್ಭಾವಗೊಳಿಸಲಾಗಿದೆ ಎಂದು ಭಾವ.

ನ್ಯೂನತಾ, ಅಸಂಗತಿಗಳೇ ಒಟ್ಟು ಆರು) ನಿಗ್ರಹಸ್ಥಾನಗಳು (ಇವುಗಳಲ್ಲೇ ಪರರು ಹೇಳಿದ ಎಲ್ಲ ನಿಗ್ರಹಸ್ಥಾನಗಳು ಅಂತರ್ಭಾವಗೊಳ್ಳುವವು).

**ನ ಕೇವಲಮನುಮಾನದೋಷಾಣಾಂ ವಿರೋಧಾದಿಭಿಃ ಸಂಗ್ರಹಃ, ಕಿನ್ತು ಪರನಿರೂಪಿತಾನಾಂ ಸರ್ವನಿಗ್ರಹಸ್ಥಾನಾನಾಮಪೀತ್ಯಾಹ 'ನಿಗ್ರಹಾಃ' ಇತಿ । ನಿಗ್ರಹಸ್ಥಾನಾನಿ । ಏತ ಏವ ವಿರೋಧಾದಯಃ ಪ್ರತಿಜ್ಞಾಹಾನ್ಯಾದಯಃ । ಪ್ರತಿಜ್ಞಾಹಾನ್ಯಾದೀನಾಂ ವಕ್ತೃದೋಷಾಣಾಂ ಕಥಮರ್ಥವಚನದೋಷೇಷು ವಿರೋಧಾದಿಷ್ವನ್ತರ್ಭಾವಃ? ಇತ್ಯತ ಆಹ 'ಸಂವಾದ..' ಇತಿ । ವಿಪ್ರತಿಪನ್ನ-ಪ್ರಮೇಯಾಭ್ಯುಪಗಮಃ- ಸಂವಾದಃ । ತೂಷ್ಣೀಂ ಭಾವಃ- ಅನುಕ್ತಿಃ ಏತಾಭ್ಯಾಂ ಸಂಯುತಾ ವಿರೋಧಾದಯಃ । ಏತೇನ ಪ್ರತ್ಯಭಿಜ್ಞಾ-ವಿರೋಧಾದಿನಾ ವರ್ಣಾನಿತ್ಯತ್ವಾದ್ಯನುಮಾನದೂಷಣಮುಪಪಾದಿತಂ ಭವತಿ ।**

ಕೇವಲ ಅನುಮಾನದ ದೋಷಗಳಾದ ವಿರೋಧಾದಿಗಳ ಸಂಗ್ರಹ ಮಾತ್ರವಲ್ಲ, ಮತ್ತೆ ಪರರು ನಿರೂಪಿಸಿರುವ ಎಲ್ಲ ನಿಗ್ರಹಸ್ಥಾನಗಳೂ ಎಂದು ಹೇಳುವರು '**ನಿಗ್ರಹಾಃ**' ಎಂದು. ನಿಗ್ರಹಸ್ಥಾನಗಳು[1]. ಏತ ಏವ-ವಿರೋಧಾದಿಗಳು ಪ್ರತಿಜ್ಞಾಹಾನಿ ಮುಂತಾದವುಗಳೇ. ಪ್ರತಿಜ್ಞಾಹಾನಿ ಮುಂತಾದ ವಕ್ತೃವಿನ ದೋಷಗಳಿಗೆ, ಅರ್ಥ ಮತ್ತು ವಚನದೋಷಗಳಾದ ವಿರೋಧಾದಿಗಳಲ್ಲಿ ಹೇಗೆ ಅಂತರ್ಭಾವ? ಎಂದಲ್ಲಿ ಉತ್ತರಿಸುವರು '**ಸಂವಾದ...**' ಎಂದು. ವಿವಾದಕ್ಕೆ ವಿಷಯವಾದ ಪ್ರಮೇಯದ ಒಪ್ಪುವಿಕೆಯನ್ನು **ಸಂವಾದ** (ಎಂದು ವ್ಯವಹರಿಸುವರು). (ಉತ್ತರಿಸದೇ) ಸುಮ್ಮನಿರುವುದನ್ನು **ಅನುಕ್ತಿ** (ಎಂದು ಕರೆಯುವರು). ಇವುಗಳಿಂದ ಯುಕ್ತವಾದವು ವಿರೋಧಾದಿಗಳು[1]. ಇದರಿಂದ ( ವಿರೋಧವನ್ನು

1. ಮೂಲದಲ್ಲಿನ ನಿಗ್ರಹ ಎನ್ನುವದಕ್ಕೆ ನಿಗ್ರಹಸ್ಥಾನ ಎಂದು ಅರ್ಥವನ್ನು ತಿಳಿಸಿರುವರು. 'ನಿಗೃಹ್ಯತೇ ಅನೇನ ಇತಿ ನಿಗ್ರಹಃ' ವಾದಿಯು ಯಾವುದರಿಂದ ನಿಗ್ರಹೀತನಾಗುವನೋ ಅದನ್ನು ನಿಗ್ರಹ ಎಂದು ಪ್ರಕೃತದಲ್ಲಿ ವಿವಕ್ಷಿಸಲಾಗಿದೆ ಎಂದು ಭಾವ.

2. ವಿರೋಧ ಮತ್ತು ಅಸಂಗತಿ ಈ ಎರಡು ನಿಗ್ರಹಸ್ಥಾನಗಳು ಅರ್ಥದೋಷಗಳು, ನ್ಯೂನತಾ ಮತ್ತು ಆಧಿಕ್ಯ ಈ ಎರಡು ನಿಗ್ರಹಸ್ಥಾನಗಳು ವಚನದೋಷಗಳು. ಸಂವಾದ ಅನುಕ್ತಿ ಈ ಎರಡು ನಿಗ್ರಹಸ್ಥಾನಗಳು ಪುರುಷದೋಷಗಳು. ಎಂದು ಭಾವ.

ಅನುಮಾನದೋಷ ಎಂದು ತಿಳಿಸಿದ್ದರಿಂದ) 'ಪ್ರತ್ಯಭಿಜ್ಞಾವಿರೋಧದಿಂದ, ವರ್ಣಗಳನ್ನು ಅನಿತ್ಯ ಎಂದು ಸಾಧಿಸಲು ತಿಳಿಸಿದ ಅನುಮಾನಾದಿಗಳ ನಿರಾಕರಣಮಾಡಿದ್ದು' ಉಪಪಾದಿತವಾಯಿತು[1].

**ಅರ್ಥಾಪತ್ತಿಪ್ರಮಾಣದ ವಿಶ್ಲೇಷಣೆ**

**ಅರ್ಥತಃ ಪ್ರಾಪ್ತಿರೇವ 'ಅರ್ಥಾಪತ್ತಿಃ' ಇತ್ಯಭಿಧೀಯತೇ ।**

ಹೊಂದಿಕೆಯಾಗದ ವಿಷಯಗಳನ್ನು ಉಪಪಾದಿಸುವ ನಿಮಿತ್ತವಾಗಿ ಪ್ರಾಪ್ತವಾಗುವ ವಿಷಯಾಂತರದ ಅರಿವನ್ನು 'ಅರ್ಥಾಪತ್ತಿ' ಎಂದು ಹೇಳುವರು.

ನನು, ಅರ್ಥಾಪತ್ತ್ಯಾದೀನ್ಯಪಿ ಪ್ರಮಾಣಾನಿ ಸನ್ತಿ । ತಾನಿ ಕಿಮಿತಿ ನ ವ್ಯುತ್ಪಾದ್ಯನ್ತೇ? ಇತ್ಯತಃ 'ತೇಷಾಮತ್ರೈವಾನ್ತರ್ಭಾವಾದ್' ಇತಿ ವಕ್ತುಮ್, ಅಜ್ಞಾತಸ್ವರೂಪಸ್ಯಾನ್ತರ್ಭಾವೋ ದುರ್ಜ್ಞಾನೇತಿ ತತ್ಸ್ವರೂಪಂ ಜ್ಞಾಪಯನ್ ಅರ್ಥಾಪತ್ತಿಂ ತಾವದ್ ದರ್ಶಯತಿ **'ಅರ್ಥತಃ'** ಇತಿ । ನ ಚೇದನುಮಾನವಿಭಾಗಪ್ರಸಙ್ಗೇ ಪ್ರಮಾಣಾನ್ತರ್ಭಾವಕಥನಮಸಙ್ಗತಮ್ । ಅಸ್ಯಾಪ್ಯನುಮಾನಪ್ರಭೇದಕಥನಪರತ್ವಾತ್, ಯದ್ವಕ್ಷ್ಯತಿ 'ಅನುಮಾಭೇದ ಏವ ತು' ಇತಿ । ಅರ್ಥತಃ- 'ಅನುಪಪದ್ಯಮಾನಸ್ಯಾರ್ಥಸ್ಯ ದರ್ಶನಾತ್ ಪ್ರಾಪ್ತಿಃ, ತದುಪಪಾದಕಾರ್ಥಾನ್ತರಪ್ರಮಿತಿಃ- ಅರ್ಥಾಪತ್ತಿಃ' ಇತ್ಯಭಿಧೀ-ಯತೇ ಪ್ರಾಮಾಣಿಕೈಃ । ಯದ್ಯನ್ಯಾ ಕಾಚಿತ್ ಸ್ಯಾತ್ ತದಾನ್ತರ್ಭಾವಕಥನೇ ಸಙ್ಕಟಂ ಭವೇತ್ । ಯದಾ ತ್ವೇಷೈವ ತದಾ ಕಿಮಶಕ್ಯಮ್? ಇತಿ ಸೂಚಯಿತುಂ 'ಏವ' ಶಬ್ದಃ । ಅಥವಾ 'ಪ್ರಮಾಣದ್ವಯವಿರೋಧಃ- ಅರ್ಥಾಪತ್ತಿಃ' ಇತ್ಯಸತ್, ಆಪಾತತೋ ವ್ಯಾಘಾತಾತ್ । ಅನ್ಯಥಾ

1. 'ವರ್ಣಾಃ ಅನಿತ್ಯಾಃ ಉಚ್ಚಾರಣಕಾಲ ಏವ ಉತ್ಪನ್ನತ್ವಾತ್' ಎನ್ನುವ ಅನುಮಾನಕ್ಕೆ ಹಿಂದೆ 'ಸೋಽಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞಾದ ವಿರೋಧವನ್ನು ತಿಳಿಸಲಾಗಿತ್ತು. ಅನುಮಾನದ ದೋಷಗಳು ಬಾಧ ವ್ಯಭಿಚಾರ ಮುಂತಾದವುಗಳು ಎಂದು ಒಪ್ಪಿತವಾಗಿದೆಯೇ ಹೊರತು, ವಿರೋಧಾದಿಗಳಲ್ಲ ಎನ್ನುವ ಸಂದೇಹಕ್ಕೆ ಉತ್ತರಿಸಿದಂತಾಯಿತು. ಪ್ರತ್ಯಭಿಜ್ಞಾವಿರೋಧವು ಸಾಕ್ಷಿಪ್ರಮಾಣವಿರೋಧ. ಇದು ಪ್ರಬಲಪ್ರಮಾಣ ವಿರೋಧವೆಂದು, ಬಾಧರೂಪ ದೋಷವನ್ನು ಆ ಅನುಮಾನಕ್ಕೆ ತಿಳಿಸಿದಂತಾಯಿತು ಎಂದು ಭಾವ.

**ಉಕ್ತಲಕ್ಷಣಾಬಹಿರ್ಭಾವಾದ್ ಇತಿ 'ಏವ' ಅರ್ಥಃ । ಯಥಾ ಜೀವತೋ ದೇವದತ್ತಸ್ಯ ಗೃಹೇಽಭಾವದರ್ಶನೇನ ಬಹಿರ್ಭಾವಜ್ಞಾನಮ್ ।**

ಸರಿ, ಆದರೆ ಅರ್ಥಾಪತ್ತಿ ಮುಂತಾದ ಪ್ರಮಾಣಗಳೂ ಇವೆ. ಅವುಗಳನ್ನು ಏಕೆ ವಿವರಿಸಲಿಲ್ಲ? ಎಂದು. 'ಅವುಗಳು ಇಲ್ಲಿಯೇ (ಹಿಂದೆ ತಿಳಿಸಿದ ಪ್ರಮಾಣಗಳಿಗಳಲ್ಲಿಯೇ) ಅಂತರ್ಭವಿಸುವುದರಿಂದ' ಎಂದು ಹೇಳಲು, (ಆದರೆ ಅರ್ಥಾಪತ್ತಿಯ) ಸ್ವರೂಪದ ಅರಿವು ಇಲ್ಲದೇ (ಅದರ) ಅಂತರ್ಭಾವವು ತಿಳಿಯಲು ಅಶಕ್ಯ ಎಂದು ಅದರ ಸ್ವರೂಪವನ್ನು ತಿಳಿಸಲು ಅರ್ಥಾಪತ್ತಿಯನ್ನು ಮೊದಲು ವಿವರಿಸುವರು '**ಅರ್ಥತಃ**' ಎಂದು . ಅನುಮಾನದ ವಿಭಾಗವನ್ನು ತಿಳಿಸುವಾಗ ಈ ಪ್ರಮಾಣಾಂತರ್ಭಾವವನ್ನು ತಿಳಿಸುವುದು ಅಸಂಗತವಲ್ಲವೇ? ಅಲ್ಲ, ಅದನ್ನೂ ಸಹ (ಅರ್ಥಾಪತ್ತಿಯನ್ನೂ-ಸಹ) ಅನುಮಾನಪ್ರಭೇದ ಎಂದು ಹೇಳುವುದರಿಂದ. ಮುಂದೆ (ಪುಟ 411ರಲ್ಲಿ) (ಇದನ್ನೇ) ತಿಳಿಸುವರು 'ಅನುಮಾಭೇದ ಏವ ತು' ಎಂದು. **ಅರ್ಥತಃ-** ಅನುಪಪದ್ಯಮಾನವಾದ ವಿಷಯದ ದರ್ಶನ ವಾದುದರಿಂದ **ಪ್ರಾಪ್ತಿಃ**-ಪ್ರಾಪ್ತವಾದುದು, ಅದನ್ನು ಉಪಪಾದಿಸಲು ವಿಷಯಾಂತರದ ಅರಿವನ್ನು 'ಅರ್ಥಾಪತ್ತಿ' ಎಂದು ಹೇಳುವರು ಪ್ರಮಾಣಜ್ಞರು[1]. ಒಂದು ವೇಳೆ (ಈಗ ವಿವರಿಸಿದ ಪ್ರಕಾರದಿಂದ) ಭಿನ್ನಪ್ರಕಾರವೆಂದಾದಲ್ಲಿ ಆಗ ಅಂತರ್ಭಾವವನ್ನು ತಿಳಿಸುವುದು ಕಷ್ಟವಾದೀತು. ಒಂದು ವೇಳೆ ಇದೇ (ಪ್ರಕಾರ ಎಂದಾದಲ್ಲಿ) ಆಗ (ಅಂತರ್ಭಾವವನ್ನು

1. ಅರ್ಥಾಪತ್ತಿ ಎಂದರೆ 'ಅರ್ಥತಃ ಪ್ರಾಪ್ತಿಃ' -ಅರ್ಥತಃ- ಸಮಂಜಸವಾಗದಿರುವ ವಿಷಯದ ದರ್ಶನದಿಂದ ಪ್ರಾಪ್ತವಾಗುವುದರಿಂದ, ಅದನ್ನು ಸಮಂಜಸಗೊಳಿಸಲು ಪದಾರ್ಥಾಂತರದ ಪ್ರಾಪ್ತಿಯನ್ನು- 'ಅರ್ಥಾಪತ್ತಿ' ಎಂದು ನಿರ್ವಚಿಸಿದಂತಾಯಿತು. ದೇವದತ್ತನು ಜೀವಿಸಿರುವನು, ಆದರೆ ಮನೆಯಲ್ಲಿ ಕಾಣಸುತ್ತಿಲ್ಲ. ಈ ಎರಡು ಸಂಗತಿಗಳು ಅಸಮಂಜಸವಾಗಿವೆ, ಈ ಸಂಗತಿಗಳನ್ನು ಸಂಮಂಜಸಗೊಳಿಸಲು 'ಹೊರಗಿರುವನು' ಎನ್ನುವ ಅರಿವನ್ನು ಒಪ್ಪಬೇಕು, ಒಪ್ಪಿದಲ್ಲಿ ಸಮಂಜಸವಾಗುವುದು ಈ ಅರಿವನ್ನೇ ಅರ್ಥಾಪತ್ತಿ ಎಂದು ಶಾಸ್ತ್ರಜ್ಞರು ವಿವರಿಸಿರುವರು. ಯಾವ ಒಂದು ವಸ್ತುವನ್ನು ಒಪ್ಪದೆ ಪ್ರಸಕ್ತವಾದ ವಿಷಯಗಳು ಉಪಪನ್ನವಾಗುವದಿಲ್ಲವೋ ಅದನ್ನು ಉಪಪಾದಕ ಎಂದು, ಪ್ರಸ್ತುತ ಸಂಗತಿಯನ್ನು ಉಪಪಾದ್ಯ ಎಂದು ತಿಳಿಯುವುದು. ಈ ಉಪಪಾದ್ಯವನ್ನು (ಕಾಣದ) ಅರ್ಥದ ಪ್ರಾಪ್ತಿಗೆ ಕಾರಣ ಎನ್ನುವರು ಎಂದು ಭಾವ.

ತಿಳಿಸುವುದು) ಯಾವ ಕ್ಲೇಶವಾದೀತು? ಎಂದು ಸೂಚಿಸಲು 'ಏವ' ಎನ್ನುವ ಶಬ್ದವು (ಉಕ್ತವಾಗಿದೆ). ಅಥವಾ 'ಪ್ರಮಾಣದ್ವಯದ ವಿರೋಧವನ್ನು ಅರ್ಥಾಪತ್ತಿ' ಎಂದು (ವಿವರಿಸಿರುವುದು) ಸರಿಯಾದುದಲ್ಲ. ಮೇಲ್ನೋಟದಿಂದ ವಿರುದ್ಧವಾಗಿರುವುದರಿಂದ[1]. ಅಥವಾ ( ಈ ರೀತಿಯಲ್ಲಿ ವಿರೋಧವನ್ನು ಪರಿಹರಿಸಿದಲ್ಲಿ) ಹೇಳಿದ ಲಕ್ಷಣದಿಂದ ಭಿನ್ನವಾಗದಿರುವುದರಿಂದ' ಎನ್ನುವುದು 'ಏವ' ಶಬ್ದದ ಅರ್ಥ. ಹೇಗೆಂದರೆ 'ಜೀವಿಸಿರುವ ದೇವದತ್ತನ ಕಾಣದಿರುವಿಕೆಯಿಂದ ಬಹಿರ್ಭಾವದ ಅರಿವು ಪ್ರಾಪ್ತ ವಾಗುವುದು[2].

**ಉಪಮಾನದ ವಿಶ್ಲೇಷಣೆ**

**ದೃಷ್ಟ್ವಾ ಸದೃಶಮೇವಾನ್ಯಂ ಪೂರ್ವದೃಷ್ಟೇ ತು ವಸ್ತುನಿ ।**
**ಏತತ್ಸದೃಶತಾ ಜ್ಞಾನಂ 'ಉಪಮಾನಂ' ಪ್ರಕೀರ್ತಿತಮ್ ॥**

ಸದೃಶವಾದ ಮತ್ತೊಂದು (ಹೊಸ)ವಸ್ತುವನ್ನು ಕಂಡು ಮೊದಲು ತಿಳಿದ ವಸ್ತುವಿನಲ್ಲಿ ಈ ವಸ್ತುವಿನ (ಹೊಸದಾಗಿ ಕಂಡ ಈ ವಸ್ತುವಿನ)ಸಾದೃಶ್ಯದ ಅರಿವನ್ನು 'ಉಪಮಾನ' ಎನ್ನುವರು.

**ಉಪಮಾನಸ್ವರೂಪಮಾಹ 'ದೃಷ್ಟ್ವಾ' ಇತಿ । ನಗರೇ ಗಾಂ ದೃಷ್ಟವತಃ ಪುರುಷಸ್ಯ ವನೇ ತತ್ಸದೃಶಮನ್ಯಂ ಗವಯಂ ದೃಷ್ಟ್ವಾ ಪೂರ್ವದೃಷ್ಟೇ ಸ್ಮರ್ಯಮಾಣೇ ವಸ್ತುನಿ ನಗರಸ್ಥೇ ಗವಿ ಯದೇತದ್**

1. 'ದೇವದತ್ತನು ಗೃಹದಲ್ಲಿ ಇಲ್ಲ' ಎನ್ನುವುದು ಪ್ರತ್ಯಕ್ಷ. 'ಅವನು ಜೀವಿಸಿರುವನು' ಎಂದು ಪ್ರಮಾಣಾಂತರದಿಂದ ತಿಳಿದ ವಿಷಯ. ಇವು ಮೇಲ್ನೋಟದಲ್ಲಿ ವಿರುದ್ಧವಾಗಿದ್ದರೂ, ವಸ್ತುತಃ ವಿರುದ್ಧವಾಗಿರುವುದಿಲ್ಲ. ದೇವದತ್ತನನ್ನು ಕಾಣಲು ಬಂದ ವ್ಯಕ್ತಿಯು ಜೀವಿಸಿದ್ದು ಹೊರಗಿರುವನು ತಾನೇ ? ತನ್ನ ದೃಷ್ಟಾಂತದಿಂದಲೇ ಈ ಪ್ರಮಾಣದ್ವಯಗಳಿಗೆ ವಿರೋಧವು ಇಲ್ಲ ಎಂದು ವಿದಿತವಾಗುವುದು ಎಂಬ ಭಾವ.

2. ಅರ್ಥಾಪತ್ತಿಯನ್ನು ಪ್ರತ್ಯೇಕ ಪ್ರಮಾಣ ಎಂದು ವಾದಿಸುವ ಮೀಮಾಂಸಕರೇ ಹೀಗೆ ತಮ್ಮ ಗ್ರಂಥದಲ್ಲಿ ತಿಳಿಸಿರುವರು- 'ವಿದ್ಯಮಾನತ್ವಸಂಸ್ಪೃಷ್ಟಗೇಹಾಭಾವಧಿಯಾಽನಯಾ । ಗೇಹಾದುತ್ಕಲಿತಾ ಸತ್ತಾ ಬಹಿರೇವಾವಗಮ್ಯತೇ ॥- ದೇವದತ್ತನು ಬದುಕಿರುವನು ಎಂಬ ಅರಿವಿನಿಂದ ಯುಕ್ತನಾದ ವ್ಯಕ್ತಿಗೆ 'ಮನೆಯಲ್ಲಿ ಇಲ್ಲ' ಎಂಬ ಬುದ್ಧಿಯಿಂದ, ದೇವದತ್ತನ ಅಸ್ತಿತ್ವವು ಮನೆಯಲ್ಲಿ ಇಲ್ಲದಿರುವುದರಿಂದ ಹೊರಗಿರುವನು ಎಂಬ ಅರಿವು ಪ್ರಾಪ್ತವಾಗುವುದು' ಎಂದು ಭಾವ.

**ಗವಯಸದೃಶತಾಜ್ಞಾನಂ ಜಾಯತೇ ತದೇವ 'ಉಪಮಾನಂ' ಪ್ರಕೀರ್ತಿತಂ ವೃದ್ಧೈಃ । ಪೂರ್ವವತ್ ಅತಂರ್ಭಾವಸೌಕರ್ಯಸೂಚನಾಯ 'ಏವ'ಶಬ್ದಃ । ಯಚ್ಚಕ್ಷುರಾದಿವ್ಯಾಪಾರಾನನ್ತರಂ 'ಸದೃಶೌ ಇಮೌ' ಇತಿ, ತತ್‌ಸದೃಶೋಽ-ಯಮಿತಿ ವಾ ಸಾದೃಶ್ಯಜ್ಞಾನಮುತ್ಪದ್ಯತೇ, ಯಚ್ಚ 'ಗೋಸದೃಶೋ ಗವಯ' ಇತಿ ವಾಕ್ಯಶ್ರವಣಾನನ್ತರಂ, ತದುಭಯವ್ಯಾವೃತ್ಯರ್ಥೋ ವಾ 'ಏವ'ಶಬ್ದಃ । ತಸ್ಯ ಸ್ಫುಟಪ್ರತ್ಯಕ್ಷಾದಿತ್ವೇನ ಪೃಥಕ್ ಶಙ್ಕಾನಾಸ್ಪದತ್ವಾತ್ ।**

ನಗರದಲ್ಲಿ ಹಸುವನ್ನು ಕಂಡ ವ್ಯಕಿಗೆ ವನದಲ್ಲಿ ಅದಕ್ಕೆ (ಗೋವಿಗೆ) ಸದೃಶವಾದ (ಗೋವಿನಿಂದ) ಅನ್ಯವಾದ ಗವಯವನ್ನು ನೋಡಿ, ಹಿಂದೆ ಕಂಡಿದ್ದ, ಸ್ಮರಣೆಗೆ ಬಂದ ಊರಿನಲ್ಲಿರುವ ವಸ್ತುವಾದ ಗೋವಿನಲ್ಲಿ ಈ ಗವಯದ ಸಾದೃಶ್ಯದ ಅರಿವು ಯಾವಾಗ ಉತ್ಪನ್ನವಾಗುವುದೋ ಅದನ್ನೇ **'ಉಪಮಾನ'** ಎಂದು ತಿಳಿದವರು ಕರೆಯುವರು . ಹಿಂದಿನಂತೆ ಅಂತರ್ಭಾವವನ್ನು ಸೂಚಿಸಲು **'ಏವ'** ಎನ್ನುವ ಶಬ್ದವು (ಇದೆ). ಅಥವಾ ಕಣ್ಣು ಮುಂತಾದ (ಇಂದ್ರಿಯಗಳ) ವ್ಯಾಪಾರದ ನಂತರದಲ್ಲಿ 'ಇವೆರಡು ಸದೃಶವಾಗಿವೆ, ಇದು ಅದಕ್ಕೆ ಸದೃಶವಾಗಿದೆ' ಎಂಬ ಯಾವ ಅರಿವು ಉತ್ಪನ್ನವಾಗುವುದೋ, ಯಾವಾಗ 'ಗೋವಿಗೂ ಗವಯಕ್ಕೂ ಸಾದೃಶ್ಯವಿದೆ' ಎನ್ನುವ ಮಾತನ್ನು ಕೇಳಿದ ನಂತರ (ಪ್ರಾಪ್ತವಾಗುವ ಅರಿವು) ಈ ಎರಡನ್ನು (ಜ್ಞಾನಗಳನ್ನು) ಹೊರತುಪಡಿಸಲು 'ಏವ' ಶಬ್ದವು (ಇದೆ). ಅವು ಪ್ರತ್ಯಕ್ಷಾದಿಜನ್ಯಜ್ಞಾನಗಳು ಎನ್ನುವುದು ಸ್ಫುಟ-ವಾದುದರಿಂದ ಪ್ರತ್ಯೇಕ ಸಂದೇಹಕ್ಕೆ ಅವಕಾಶವಿಲ್ಲದಿರುವುದರಿಂದ[1].

**ಅಭಾವದ ವಿಶ್ಲೇಷಣೆ**

**ಅಭಾವಸ್ಯ ಪರಿಜ್ಞಾನಂ ದ್ವಿವಿಧಂ ಸಮುದಾಹೃತಮ್ ।**

---

1. ಅವಳೀ ಮಕ್ಕಳನ್ನು ಕಂಡಾಗ 'ಇವೆರಡು ಮಕ್ಕಳು ಸದೃಶರಾಗಿರುವರು' ಎಂಬ ಉಪಮಾನದ ಅರಿವು ಬರುವುದು ಇದು ಪ್ರತ್ಯಕ್ಷದಿಂದ ಬಂದ ಅರಿವು. ಹಾಗೇ 'ದೇವದತ್ತನ ಅವಳೀ ಮಕ್ಕಳು ಸದೃಶರಾಗಿರುವರು' ಎಂಬ ವಾಕ್ಯವನ್ನು ಕೇಳಿದಾಗ ಬರುವ ಉಪಮಾನದ ಅರಿವು ಶಬ್ದಜನ್ಯ. ಈ ಅರಿವಿನ ವಿಷಯದಲ್ಲಿ ಯಾವುದೇ ಸಂದೇಹಕ್ಕೆ ಎಡೆಯಿಲ್ಲ. ಇಂತಹ ಅರಿವನ್ನು ಹೊರತು ಪಡಿಸಲು ಮೂಲದಲ್ಲಿ ವ್ಯಾವೃತ್ಯರ್ಥಕವಾದ ಏವ ಶಬ್ದವನ್ನು ಬಳಸಲಾಗಿದೆ ಎಂದು ಭಾವ.

**ಏಕಂ ತತ್ರಾನುಭವತೋ ಯೋಗ್ಯಸ್ಯಾನುಪಲಬ್ಧಿತಃ ।**
**ದ್ವಿತೀಯಮಪಿ ವಿಜ್ಞೇಯಂ ಸುಖಾದ್ಯೇ ಚ ಘಟಾದಿಕೇ ।**

ಅಭಾವದ ಅರಿವು ಎರಡು ವಿಧದಲ್ಲಿ ಇದೆ ಎಂದು ತಿಳಿಸಿರುತ್ತಾರೆ. ಅದರಲ್ಲಿ ಒಂದು ಸಾಕ್ಷಿಯಿಂದ ತಿಳಿಯುವುದು. ಎರಡನೆಯದು ಯೋಗ್ಯಾನುಪಲಬ್ಧಿಯಿಂದ ಊಹಿಸಿ(ಅನುಮಾನದಿಂದ) ತಿಳಿಯುವುದು. ಸುಖಾದಿಗಳು (ಸಾಕ್ಷಿವೇದ್ಯವಾದ ಪದಾರ್ಥಗಳು) ಪ್ರತಿಯೋಗಿಯಾದಲ್ಲಿ (ಸುಖಾದಿಗಳ ಅಭಾವದ ಅರಿವು) ಸಾಕ್ಷಿಯಿಂದ, ಘಟಾದಿಗಳು (ಬಾಹ್ಯೇಂದ್ರಿಯವೇದ್ಯ ಪದಾರ್ಥಗಳು) ಪ್ರತಿಯೋಗಿಯಾದಲ್ಲಿ (ಘಟಾದಿಗಳ ಅಭಾವದ ಅರಿವು ಅನುಪಲಬ್ಧಿ ಎಂಬ) ಅನುಮಾನದಿಂದ ಪ್ರಾಪ್ತವಾಗುವುದು.

ಅಭಾವಪ್ರಮಿತಿಸಾಧನಮಭಾವಾಖ್ಯಂ ಪ್ರಮಾಣಮ್ । ತದನ್ತರ್ಭಾವಕಥನಸೌಕರ್ಯಾಯ ವಿಭಾಗೇನ ನಿರೂಪಯತಿ **'ಅಭಾವಸ್ಯ'** ಇತಿ । **ದ್ವಿವಿಧಂ-** ದ್ವಿವಿಧಸಾಧನಜನ್ಯಮ್ । ದ್ವೈವಿಧ್ಯಂ ವಿವೃಣೋತಿ **'ಏಕಂ'** ಇತಿ । ಅನುಭವತೋ ಜಾಯತೇ । ಉಪಚಾರೇಣೇಯಮುಕ್ತಿಃ । ಉಪಲಬ್ಧಿಯೋಗ್ಯಸ್ಯಾನುಪಲಬ್ಧ್ಯಾ ಕರಣೇನ ದ್ವಿತೀಯಂ ಜಾಯತ ಇತಿ ವಿಜ್ಞೇಯಮ್ । ದ್ವಯೋರುದಾಹರಣಮಾಹ **'ಸುಖಾದ್ಯೇ ಚ'** ಇತಿ । ಸುಖಾದ್ಯೇ- ಸಾಕ್ಷಿವೇದ್ಯೇ ವಸ್ತುನಿ ಪ್ರತಿಯೋಗಿನಿ ಸತಿ ಯತ್ 'ನಾಸ್ತೀದಾನೀಂ ಮಮ ಸುಖಂ' ಇತ್ಯಾದ್ಯಭಾವಜ್ಞಾನಮುತ್ಪದ್ಯತೇ ತತ್ ಸಾಕ್ಷಿಜನ್ಯಮ್ । ಯತ್ತು ಘಟಾದಿಕೇ ಚಕ್ಷುರಾದಿವೇದ್ಯೇ ವಸ್ತುನಿ ಪ್ರತಿಯೋಗಿನಿ ಸತಿ 'ನಾಸ್ತ್ಯತ್ರ ಘಟಃ' ಇತ್ಯಾದ್ಯಭಾವಜ್ಞಾನಂ ಜಾಯತೇ ತದ್ ಯೋಗ್ಯಾನುಪಲಬ್ಧಿಜನ್ಯಮ್ । ಅನುಮಾನಿಕಾಗಮಿಕಾರ್ಥ-ಪ್ರತಿಯೋಗಿಕಾಭಾವಜ್ಞಾನಸ್ಯಾನುಮಾನಾಗಮಜನ್ಯತಾಯಾಮವಿವಾದಾತ್ ತನ್ನೋಪನ್ಯಸ್ತಮ್ ।

ಅಭಾವದ ಅರಿವು ಪ್ರಾಪ್ತವಾಗಲು ಸಾಧನವಾದದ್ದು 'ಅಭಾವಪ್ರಮಾಣ' ಎಂದು ವ್ಯವಹೃತವಾಗುವುದು. ಅದರ ಅಂತರ್ಭಾವವನ್ನು ತಿಳಿಸಲು ಸೌಕರ್ಯಕ್ಕಾಗಿ ವಿಭಾಗವನ್ನು ವಿವರಿಸುವರು 'ಅಭಾವಸ್ಯ' ಎಂದು. ದ್ವಿವಿಧಂ-ಎರಡು ಬಗೆಯ ಸಾಧನಗಳಿಂದ ಜನ್ಯವಾದದ್ದು. ಎರಡುಬಗೆಯನ್ನು

ವಿವರಿಸುವರು '**ಏಕಂ**' ಎಂದು. ಅನುಭವದಿಂದ ಉತ್ಪನ್ನವಾಗುವುದು (ಒಂದು ಬಗೆಯ ಅಭಾವ). ಈ ಮಾತು ಔಪಚಾರಿಕ[1]. (ಅರಿವಿನ) ಪ್ರಾಪ್ತಿಗೆ ಯೋಗ್ಯವಾದುದರ 'ಅಪ್ರಾಪ್ತಿರೂಪ' ಸಾಧನದಿಂದ ಉತ್ಪನ್ನವಾಗುವುದು ಎರಡನೆಯ (ಅಭಾವ) ಎಂದು ತಿಳಿಯುವುದು. ಎರಡು ಬಗೆಯ (ಅಭಾವಗಳಿಗೆ) ಉದಾಹರಣೆಯನ್ನು ಹೇಳುತ್ತಾರೆ '**ಸುಖಾದ್ಯೇ**..' ಎಂದು. ಸುಖವೇ ಮುಂತಾದ ಸಾಕ್ಷಿವೇದ್ಯವಸ್ತುಗಳು ಪ್ರತಿಯೋಗಿಯಾದಾಗ 'ನನಗೆ ಈಗ ಸುಖವಿಲ್ಲ' ಎನ್ನುವ ಅಭಾವದ ಅರಿವು ಪ್ರಾಪ್ತವಾಗುವುದು ಅದು ಸಾಕ್ಷಿಜನ್ಯ ( ಎಂದು ತಿಳಿಯುವುದು). ಚಕ್ಷುರಾದಿ (ಇಂದ್ರಿಯಗಳಿಗೆ) ವೇದ್ಯವಾದ ಘಟಾದಿ ಪದಾರ್ಥಗಳು ಪ್ರತಿಯೋಗಿಯಾದಾಗ 'ಇಲ್ಲಿ ಈಗ ಗಡಿಗೆಯು ಇಲ್ಲ' ಈ ಮುಂತಾದ ಅಭಾವದ ಅರಿವು ಪ್ರಾಪ್ತವಾಗುವುದು, ಅದು ಯೋಗ್ಯಾನುಪಲಬ್ಧಿಯಿಂದ ಜನ್ಯವಾದದ್ದು ಎಂದು (ತಿಳಿಯುವುದು)[2]. ಅನುಮಾನವೇದ್ಯವಾದ, ಆಗಮವೇದ್ಯವಾದ (ವಸ್ತುಗಳ) ಪ್ರತಿಯೋಗಿಕವಾದ ಅಭಾವಗಳ ಅರಿವನ್ನು ಅನುಮಾನಾಗಮಜನ್ಯ ಎನ್ನುವದು ಅವಿವಾದಿತ-ವಾದದ್ದು ಎಂದು ಇಲ್ಲಿ ಅವುಗಳ ಪ್ರಸ್ತಾವನೆಯನ್ನು ಮಾಡಲಾಗಿಲ್ಲ.

**ಅಭಾವದ ಅಂತರ್ಭಾವನಿರೂಪಣೆ**

**ಏಕಂ ಪ್ರತ್ಯಕ್ಷರೂಪಂ ಸ್ಯಾತ್ ದ್ವಿತೀಯಮನುಮಾತ್ಮಕಮ್ ।**
**ಕ್ವಚಿದ್ ಘಟಾದ್ಯಭಾವೋಽಪಿ ಪ್ರತ್ಯಕ್ಷೇಣಾವಗಮ್ಯತೇ ॥**

(ಈ ಎರಡು ವಿಧದ ಅಭಾವದಲ್ಲಿ) ಒಂದು (ಸುಖಾದ್ಯಭಾವವು) ಪ್ರತ್ಯಕ್ಷದಲ್ಲಿ ಅಂತರ್ಭಾವವನ್ನು ಹೊಂದುವುದು. ಎರಡನೆಯದು

---

1. ಸುಖಾದಿಗಳ ಅಭಾವದ ಅರಿವು ಸಾಕ್ಷೀಂದ್ರಿಯದಿಂದ ವೇದ್ಯ. ಸಾಕ್ಷಿಜ್ಞಾನವು ಸ್ವರೂಪಭೂತವಾದದ್ದು. ಸ್ವರೂಪಕ್ಕೆ ಉತ್ಪತ್ತಿ ಇಲ್ಲ, ಆದರೂ ವಿಷಯಕ್ಕೂ ಸಾಕ್ಷಿಗೂ ಸಂಬಂಧವು ಜನ್ಯವಾಗುವುದು ಇದರ ವಿವಕ್ಷೆಯಿಂದ ಜ್ಞಾನವನ್ನು ಜನ್ಯ ಎಂದು ಔಪಚಾರಿಕವಾಗಿ ಹೇಳಲಾಗಿದೆ ಎಂದು ಭಾವ.

2. ಟೀಕೆಯಲ್ಲಿ 'ವಸ್ತುನಿ ಪ್ರತಿಯೋಗಿನಿ ಸತಿ...' ಎಂದು ತಿಳಿಸಿರುವ ಭಾಗವನ್ನು ಮೂಲದಲ್ಲಿನ 'ಸುಖಾದ್ಯೇ' ಮತ್ತು 'ಘಟಾದಿಕೇ' ಎನ್ನುವ ಶಬ್ದಗಳೊಡನೆ ಶೇಷಪೂರಣ ಮಾಡಿಕೊಳ್ಳಬೇಕು ಎಂದು ತಿಳಿಯುವುದು.

(ಘಟಾದ್ಯಭಾವದ ಅರಿವು) ಅನುಮಾನದಲ್ಲಿ ಅಂತರ್ಭಾವವನ್ನು ಹೊಂದುವುದು. ಕೆಲವೊಮ್ಮೆ ಘಟಾದ್ಯಭಾವದ ಅರಿವು ಪ್ರತ್ಯಕ್ಷದಿಂದಲೇ ಪ್ರಾಪ್ತವಾಗುವುದು.

**ಏವಂ ನಿರೂಪಿತಾನಾಮಿದಾನೀಮನ್ತರ್ಭಾವೋ ವಾಚ್ಯಃ । ತತ್ರ ಲಾಘವಾಯ ಕ್ರಮಮತಿಕ್ರಮ್ಯಾನನ್ತರೋಕ್ತಸ್ಯಾಪ್ಯಭಾವಪ್ರಮಾಣಸ್ಯ ಅನ್ತರ್ಭಾವಮಾಹ 'ಏಕಂ' ಇತಿ । ಸುಖಾದ್ಯಭಾವಜ್ಞಾನಮ್, ಸಾಕ್ಷಿಣಃ ಪ್ರತ್ಯಕ್ಷೇಽನ್ತರ್ಭಾವಾತ್ । ದ್ವಿತೀಯಂ- ಘಟಾದ್ಯಭಾವಜ್ಞಾನಮ್, ಯೋಗ್ಯಾನುಪಲಬ್ಧೇರ್ಲಿಙ್ಗತ್ವಾತ್ । 'ಘಟೋಽತ್ರೇದಾನೀಂ ನಾಸ್ತಿ, ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್ ಗಜವತ್' ಇತ್ಯಾದಿ-ಪ್ರಯೋಗಸಮ್ಭವಾತ್ । ಉಕ್ತಸ್ಯಾಪವಾದಮಾಹ 'ಕ್ವಚಿತ್' ಇತಿ । 'ನ ಕೇವಲಂ ಸುಖಾದ್ಯಭಾವಃ' ಇತ್ಯಪೇರರ್ಥಃ ।**

ಹೀಗೆ ನಿರೂಪಿಸಿದವುಗಳಿಗೆ (ಅರ್ಥಾಪತ್ತಿ, ಉಪಮಾ ಮತ್ತು ಅಭಾವ ರೂಪ ಪ್ರಮಾಣಗಳಿಗೆ) ಅಂತರ್ಭಾವವನ್ನು ಹೇಳಬೇಕು. ಪ್ರಕೃತದಲ್ಲಿ (ಹಿಂದೆ ಹೇಳಿದ) ಕ್ರಮವನ್ನು ಅತಿಕ್ರಮಿಸಿ, ನಂತರದಲ್ಲಿ ಹೇಳಿದ್ದರೂ ಸಹ ಅಭಾವಪ್ರಮಾಣದ ಅಂತರ್ಭಾವವನ್ನು ಸೌಕರ್ಯಕ್ಕಾಗಿ (ಮೊದಲು) ಹೇಳುತ್ತಾರೆ '**ಏಕಂ**' ಎಂದು. ಸುಖ ಮುಂತಾದವುಗಳ ಅಭಾವ ಜ್ಞಾನವು[1]. ಸಾಕ್ಷಿಗೆ ಪ್ರತ್ಯಕ್ಷದಲ್ಲಿ ಅಂತರ್ಭಾವವಿರುವುದರಿಂದ[2]. ದ್ವಿತೀಯಂ- ಘಟಾದ್ಯಭಾವದ ಅರಿವು. ಯೋಗ್ಯಾನುಪಲಬ್ಧಿ ಎಂಬ ಹೇತುವಿನಿಂದ. 'ಈಗ ಘಟವು ಇಲ್ಲಿ ಇಲ್ಲ, (ಪ್ರತ್ಯಕ್ಷಕ್ಕೆ) ಯೋಗ್ಯವಾಗಿದ್ದು ಅನುಪಲಬ್ಧವಾಗಿರುವುದರಿಂದ ಆನೆಯಂತೆ' ಈ ಮುಂತಾದ ಪ್ರಯೋಗಗಳು ಸಂಭಾವಿತವಾದುದರಿಂದ. ತಿಳಿಸಿದ (ವಿಚಾರದಲ್ಲಿ) ಅಪವಾದವನ್ನು ತಿಳಿಸುತ್ತಾರೆ '**ಕ್ವಚಿತ್**' ಎಂದು.

---

1. ಮೂಲದಲ್ಲಿನ 'ಏಕಂ' ಎನ್ನುವುದರ ಭಾವಾರ್ಥವಿದು. 'ಹಿಂದೆ ತಿಳಿಸಿದ ಎರಡು ವಿಧವಾದ ಅಭಾವಗಳಲ್ಲಿ ಒಂದಾದ' ಎಂದು ಭಾವ.

2. ಸುಖಾದ್ಯಭಾವದ ಅರಿವನ್ನು ಸಾಕ್ಷಿಯು ಪರಿಗ್ರಹಿಸಿದಲ್ಲಿ, ಪ್ರತ್ಯಕ್ಷದಲ್ಲಿ ಹೇಗೆ ಅಂತರ್ಭಾವ? ಎನ್ನುವ ಸಂದೇಹಕ್ಕೆ ಉತ್ತರ- ಸಾಕ್ಷಿಯು ಏಳನೆಯ ಇಂದ್ರಿಯ ಎಂದು ಮುಂದೆ (483ನೇ ಪುಟದಲ್ಲಿ) ತಿಳಿಸಲಾಗುವುದು ಎಂದು ಭಾವ.

'ಸುಖಾದ್ಯಭಾವದ ಅರಿವು ಮಾತ್ರವಲ್ಲ (ಘಟಾದ್ಯಭಾವಗಳ ಅರಿವೂ ಸಹ)' ಎಂದು 'ಅಪಿ' ಎನ್ನುವದರ ಅರ್ಥ[1].

**ಅಭಾವದ ಅರಿವು ಪರೋಕ್ಷವೂ ಆಹುದು ಅಪರೋಕ್ಷವೂ ಆಹುದು**

**ಅತ್ರಾಯಂ ವಿವೇಕಃ- ಯದಾಽನ್ಧಕಾರೇ ಕಿಮತ್ರಾಸ್ತಿ ಘಟೋ ನ ವೇತಿ ವಿಮೃಶ್ಯ ಹಸ್ತಪ್ರಸರಣಾದೌ ಕೃತೇಽಪಿ ಘಟಮನುಪಲಭ್ಯ 'ನಾಸ್ತ್ಯತ್ರ ಘಟ' ಇತಿ ಜಾನಾತಿ, ತತ್ರ ಯೋಗ್ಯಾನುಪಲಬ್ಧಿಲಿಙ್ಗಕಾನುಮಾನಮ್ । ಯದಾ ಚ ರಾಜಗೃಹಾದಿಮಾತ್ರಮನುಭೂಯ ಗಜಸ್ಮರಣಾಭಾವೇನ ಗಜಾಭಾವಮ್ ಅನನುಭೂಯಾನ್ಯತ್ರ ಗತಃ ಪುನರ್ಜಿಜ್ಞಾಸಾಯಾಂ ಸತ್ಯಾಮ್, ಇಂದ್ರಿಯವ್ಯಾಪಾರಾಭಾವೇಽಪಿ 'ನಾಭೂತ್ ತತ್ರ ಗಜಃ' ಇತಿ ಜಾನಾತಿ, ಏವಂ 'ಪ್ರಾತರತ್ರ ಗಜೋ ನಾಭೂತ್' ಇತಿ ಚಾಭಾವಜ್ಞಾನಮ್ । ತತ್ರ ಸ್ಮರಣಯೋಗ್ಯಸ್ಯಾಸ್ಮರಣಂ ಲಿಙ್ಗಮ್ । ಯತ್ತು ಸ್ಫೀತಾಲೋಕೇ ಘಟಸ್ಮೃತಿಮತಃ ಪುರೋವರ್ತಿನಿ ಭೂತಲೇ ವಿನಾ ವಿಮರ್ಶೇನ ಚಕ್ಷುರ್ವ್ಯಾಪಾರಾನನ್ತರಮೇವ 'ನಾಸ್ತ್ಯತ್ರ ಘಟ' ಇತಿ ಜ್ಞಾನಮ್ ಉತ್ಪದ್ಯತೇ ತತ್ ಪ್ರತ್ಯಕ್ಷಜನ್ಯಮ್ ಇತಿ।**

ಈ ವಿಷಯದಲ್ಲಿ ಈ ರೀತಿಯಲ್ಲಿ ವಿಭಾಗ- ಕತ್ತಲೆಯಲ್ಲಿ 'ಇಲ್ಲಿ ಗಡಿಗೆಯು ಇದೆಯೋ ಇಲ್ಲವೋ' ಎಂದು ಸಂದೇಹಿಸಿ ಕೈಯನ್ನು ಚಾಚುವುದೇ ಮುಂತದವುಗಳನ್ನು ಮಾಡಿದರೂ ಸಹ ಯಾವಾಗ ಗಡಿಗೆಯು ಪ್ರಾಪ್ತವಾಗದೆ 'ಇಲ್ಲಿ ಗಡಿಗೆಯು ಇಲ್ಲ' ಎಂದು ತಿಳಿಯುವುದೋ, ಅಲ್ಲಿ 'ಯೋಗ್ಯಾನುಪಲಬ್ಧಿ' ಎಂಬ ಹೇತುಕಾನುಮಾನವು (ಈ ಅರಿವಿಗೆ ಕಾರಣ ಎಂದು ತಿಳಿಯುವುದು). ಒಂದು ಸಂದರ್ಭದಲ್ಲಿ ರಾಜನ ಮನೆ ಮುಂತಾದವುಗಳನ್ನು ಮಾತ್ರ ಅನುಭವಿಸಿದ ವ್ಯಕ್ತಿಯೋರ್ವನು (ಕಾಲಾಂತರದಲ್ಲಿ ಅರಮನೆಯ ಸ್ಮರಣೆಯು ಪ್ರಾಪ್ತವಾದಾಗ) ಆನೆಯ ಸ್ಮರಣೆ ಇಲ್ಲದಿರುವುದರಿಂದ ಆನೆಯ ಅಭಾವವನ್ನು ಅನುಭವಿಸದೆ, ಬೇರಡೆಗೆ ಸಾಗಿದಾಗ, ಅವನಲ್ಲಿ ಜಿಜ್ಞಾಸೆಯು ಉಂಟಾಗಲು, ಇಂದ್ರಿಯದ ವ್ಯಾಪಾರವಿಲ್ಲದೆ 'ಅಲ್ಲಿ (ರಾಜನ ಮನೆಯಲ್ಲಿ) ಆನೆಯು

---

1. ಸುಖಾದಿಗಳ ಅರಿವು ಮಾತ್ರ ಪ್ರತ್ಯಕ್ಷವೇದ್ಯ ಎಂದಲ್ಲ, ಘಟಾದ್ಯಭಾವದ ಅರಿವೂ ಕೆಲವು ಸಂದರ್ಭದಲ್ಲಿ ಪ್ರತ್ಯಕ್ಷದಿಂದ ವೇದ್ಯ ಎಂದು ಒಟ್ಟು ಭಾವ.

ಇರಲಿಲ್ಲ' ಎಂದು ತಿಳಿಯುವನು 'ಅಲ್ಲಿ ಪ್ರತಃಕಾಲದಲ್ಲಿ ಆನೆಯು ಇರಲಿಲ್ಲ' ಎಂದು ಅಭಾವದ ಅರಿವು ಪ್ರಾಪ್ತವಾಗುವುದು. ಇಲ್ಲಿ ಸ್ಮರಣೆಗೆ ಯೋಗ್ಯವಾದುದು ಸ್ಮರಣೆಗೆ ಬಾರದಿರುವುದೇ ಕಾರಣ (ಅಭಾವದ ಅರಿವಿಗೆ ಎಂದು ಭಾವ). ಯಾವಾಗ ಸಂಪೂರ್ಣ ಬೆಳಕಿನ ಸ್ಥಳದಲ್ಲಿ ಘಟದ ಸ್ಮರಣೆಯು ಬರಲು, ಮುಂಭಾಗದ ಸ್ಥಳದಲ್ಲಿ ಯಾವುದೇ ವಿಮರ್ಶೆಯಿಲ್ಲದೆ ಕೇವಲ ಚಕ್ಷುರಿಂದ್ರಿಯದ ವ್ಯಾಪಾರದಿಂದಲೇ 'ಇಲ್ಲಿ ಗಡಿಗೆಯು ಇಲ್ಲ' ಎಂದು ಅರಿವು ಪ್ರಾಪ್ತವಾಗುವುದೋ ಅದು ಪ್ರತ್ಯಕ್ಷದಿಂದ ಉತ್ಪನ್ನವಾದದು (ಎಂದು ತಿಳಿಯುವುದು)[1].

**ಅಭಾವ ಅರಿವು ಅನುಮಾನದಿಂದಲೇ ಎನ್ನುವ ವಾದದ ನಿರಾಕರಣೆ**

**ಝುಟಿತ್ಯೇವ ಪರಿಜ್ಞಾನಾನ್ನ ಲಿಙ್ಗೋದ್ಭವತಾ ಮತಾ ॥**

(ಲಿಂಗಸ್ಮರಣಾದಿಗಳ ವಿಲಂಬವಿಲ್ಲದೆ) ಕೂಡಲೇ ಪ್ರತ್ಯಕ್ಷದಿಂದಲೇ ಅರಿವು ಪ್ರಾಪ್ತವಾಗುವುದರಿಂದ (ಎಲ್ಲ ತರಹದ ಅಭಾವದ ಅರಿವಿಗೆ) ಲಿಂಗಜನ್ಯತ್ವವು ಇಲ್ಲ ಎಂದು ಅಭಿಮತ.

'ಪ್ರತ್ಯಕ್ಷಾರ್ಥಪ್ರತಿಯೋಗಿಕಾಭಾವಜ್ಞಾನಸ್ಯ ಸರ್ವಸ್ಯಾಪಿ ಲಿಙ್ಗೋದ್ಭವತಾ' ಇತಿ ಸೌಗತಾಃ । ತನ್ನಿರಾಕರೋತಿ '**ಝುಟಿತ್ಯೇವ**' ಇತಿ । ಪಕ್ಷದರ್ಶನ-ಲಿಙ್ಗಜ್ಞಾನ-ವ್ಯಾಪ್ತಿಸ್ಮರಣ-ಲಿಙ್ಗಾನುಸನ್ಧಾನರೂಪವಿಲಮ್ಬೇನ ವಿನಾ ಘಟಾದ್ಯಭಾವಸ್ಯ ಪರಿತೋಽಪರೋಕ್ಷತಯಾ ಚ ಜ್ಞಾನಾನ್ನ ಸರ್ವಸ್ಯಾಭಾವಜ್ಞಾನಸ್ಯ ಲಿಙ್ಗೋದ್ಭವತಾ ಮತಾಽನುಭವಾನುಸಾರಿಣಾಮ್ । ಅಭ್ಯಾಸಪಾಟವಾದ್ವ್ಯವಧಾನಾನುಪಲಬ್ಧಿಃ । ಅಪರೋಕ್ಷಾಧಿಕರಣಾನುಭವ-ಸನ್ನಿಧಾನಾಚ್ಚಾಪರೋಕ್ಷತ್ವಾಭಿಮಾನ ಇತಿ ಚೇನ್ನ । ಧೂಮಾನುಮಾನೇಽಪಿ ತತ್ಪ್ರಸಙ್ಗಾದ್ ಬಾಧಕಾಭಾವಾಚ್ಚ । ಅಭಾವಸ್ಯ ತುಚ್ಛತ್ವೇನ ಸಾಕ್ಷಾತ್ಕಾರ-

---

1. ಪ್ರಕೃತ ಮೂರು ಸ್ಥಳಗಳನ್ನು ನಿರ್ದೇಶಿಸಿ ಅಭಾವದ ಅರಿವು ಅನುಮಾನಜನ್ಯವೂ ಆಗಬಹುದು, ಅನುಪಲಬ್ಧಿಯಲ್ಲೂ ಸ್ಮರಣಾನುಪಲಬ್ಧಿ ಹಾಗೂ ಸ್ಪರ್ಶಾದ್ಯನುಪಲಬ್ಧಿಯು ಹೇತುವಾಗಿರುವುದು. ಹಾಗೂ ಪ್ರತ್ಯಕ್ಷಜನ್ಯವೂ ಆಗಬಹುದು ಎಂದು ಸ್ಫುಟೀಕರಿಸಲಾಗಿದೆ.

**ವಿಷಯತ್ವಾನುಪಪತ್ತಿರ್ಬಾಧಕಮ್ ಇತಿ ಚೇನ್ನ ತಥಾ ಸತಿ ಶಶವಿಷಾಣವದ್ ಅನುಮಿತಿವಿಷಯತ್ವಸ್ಯಾಪ್ಯಭಾವಾಪಾತಾತ್ ।**

'ಪ್ರತ್ಯಕ್ಷಕ್ಕೆ ವಿಷಯವಾದ ಪದಾರ್ಥಗಳ ಪ್ರತಿಯೋಗಿಕವಾದ ಎಲ್ಲ ಅಭಾವಗಳ ಅರಿವು ಆನುಮಾನಿಕ' ಎಂದು ಸೌಗತರು (ವಾದಿಸುವರು). ಅದನ್ನು ನಿರಾಕರಿಸುವರು **'ಝುಟಿತ್ಯೇವ'** ಎಂದು. (ಅನುಮಿತಿಗೆ ನಿಮಿತ್ತವಾದ) ಪಕ್ಷದ ದರ್ಶನ, ಲಿಂಗದ ಅರಿವು, (ಸಾಧ್ಯ-ಸಾಧನಗಳ) ವ್ಯಾಪ್ತಿಯ ಸ್ಮರಣೆ, ಹೇತುವಿನ ಅನುಸಂಧಾನ (ಈ ನಿಮಿತ್ತಕವಾದ) ವಿಲಂಬವಿಲ್ಲದೆ, ಘಟಾದಿಗಳ (ಪ್ರತಿಯೋಗಿಕವಾದ) ಅಭಾವದ **ಪರಿತಃ-** ಅಪರೋಕ್ಷೀಭೂತವಾದ **ಜ್ಞಾನಾತ್-**ಅರಿವಾದುದರಿಂದ 'ಎಲ್ಲ ಅಭಾವದ ಅರಿವು ಆನುಮಾನಿಕ' ಎನ್ನುವ ಮತವು ಅನುಭವಾನುಸಾರಿಗಳ (ಮತವು) ಆಗಲಾರದು. ಅಭ್ಯಾಸಪಾಟವ-ದಿಂದ ವ್ಯವಧಾನವಿಲ್ಲ, ಅಪರೋಕ್ಷಿತವಾದ (ಅಭಾವದ) ಅಧಿಕರಣದ ಸಾನ್ನಿಧ್ಯವಿರುವುರಿಂದ (ಅನುಮಿತವಾದ ಅಭಾವದ ಅರಿವಿನಲ್ಲಿ) ಅಪರೋಕ್ಷ ಎಂದು ಅಭಿಮಾನ(ವಿರುವುದು) ಎಂದು ಹೇಳುವುದು ತರವಲ್ಲ[1]. ಧೂಮಾನುಮಾನದಲ್ಲೂ (ಅಗ್ನಿಯು ಅನುಮಿತವಲ್ಲ ಪ್ರತ್ಯಕ್ಷಜನ್ಯ ಎನ್ನುವ ಅನುಭವವು ಬರಲಿ, ಅಲ್ಲಿಯೂ ಸಹ ಅಧಿಕರಣವಾದ ಪರ್ವತದ ಅಪರೋಕ್ಷವು ಇದೆ.) ಆ ಪ್ರಸಂಗವು ಒದಗೀತು, (ಪ್ರತ್ಯಕ್ಷಜನ್ಯ ಎಂದಾದಲ್ಲಿ ಯಾವವಿಧವಾದ) ಬಾಧಕವು ಇಲ್ಲವಾದುದರಿಂದಲೂ ಸಹ . ಅಭಾವವು ಶೂನ್ಯವಾದುದರಿಂದ ಪ್ರತ್ಯಕ್ಷಕ್ಕೆ ವಿಷಯವಾಗದು, ಎಂಬ ಬಾಧಕವಿದೆ ಎಂದು

1. ಅನುಮಾನದಿಂದ ಅರಿವು ಪ್ರಾಪ್ತವಾಗಲು ಲಿಂಗಜ್ಞಾನ ವ್ಯಾಪ್ತಿಯ ಸ್ಮರಣೆ ಈ ಮುಂತಾದವುಗಳ ಸಹಕಾರದ ಅಗತ್ಯವಿರುವುದರಿಂದ, ಪ್ರತ್ಯಕ್ಷಜ್ಞಾನಕ್ಕಿಂತಲೂ ಕಾಲದಿಂದ ಸ್ವಲ್ಪ ವಿಲಂಬವಾಗುವುದು ಸಹಜ. ಆದರೆ ಅಭ್ಯಸ್ತವಾದ ಅನುಮಾನದಿಂದ ಅರಿವು ಪ್ರತ್ಯಕ್ಷಾನುಭವದಂತೆ ಶೀಘ್ರವಾಗಿರುವುದು ಕಂಡಿದೆ. ಅದರಂತೆ ಪ್ರಕೃತದಲ್ಲೂ ಸಹ ಅಭಾವದ ಅರಿವು ಅನುಮಾನಜನ್ಯವೇ ಆಗಿದ್ದರೂ, ಅಭ್ಯಾಸದ ಪಟುತನದಿಂದ ಶೀಘ್ರದಲ್ಲಿ ಪ್ರಾಪ್ತವಾಗುವುದು. ಇನ್ನು 'ಅಭಾವದ ಅಪರೋಕ್ಷವು ಎನಗೆ ಇದೆ' ಎಂಬ ಅನುಭವವಾದರೋ ಔಪಚಾರಿಕ, ಕಾರಣ- ಅಭಾವದ ಅಧಿಕರಣ- ಭೂತಲಾದಿಗಳು ಅಪರೋಕ್ಷಕ್ಕೆಪ್ರಾಪ್ತವಾಗಿವೆ ಹೊರತಾಗಿ ಅಭಾವವಲ್ಲ. 'ಅಧಿಕರಣದ ಪ್ರತ್ಯಕ್ಷವನ್ನೇ ಧರ್ಮದ ಪ್ರತ್ಯಕ್ಷ ಎಂಬುವುದು ಭ್ರಾಂತಿ' ಎಂದು ಸೌಗತವಾದಿಗಳ ಭಾವ, ಇದು ತರವಲ್ಲ.

ಹೇಳುವುದು ತರವಲ್ಲ. ಹಾಗಾದಲ್ಲಿ (ಅಭಾವವು ಶೂನ್ಯವಾದಲ್ಲಿ) ಶಶವಿಷಾಣದಂತೆ ಅನುಮಿತಿಗೂ ವಿಷಯವಾಗದೇ ಇರಬೇಕಾದೀತು[1].

**ಅಭಾವದ ಅರಿವು ಕೇವಲ ಪ್ರಾತ್ಯಕ್ಷಿಕ ಎನ್ನುವುದೂ ತರವಲ್ಲ**

ವಿಮರ್ಶಾನನ್ತರಂ ಜಾಯಮಾನಮಪ್ಯಭಾವಜ್ಞಾನಂ ಪ್ರತ್ಯಕ್ಷಫಲಮ್ ಇತಿ ನೈಯಾಯಿಕಾದಯಃ । ತದಪ್ಯಸತ್ । ಪರೋಕ್ಷತಯಾಽನುಭವಾತ್ । ತದಪಲಾಪೇ ಚಾಗ್ನಿಜ್ಞಾನಸ್ಯಾಪಿ ಪರೋಕ್ಷತಾ ನ ಸ್ಯಾತ್।

ಸರ್ವತ್ರಾಭಾವಜ್ಞಾನಸ್ಯಾನುಪಲಬ್ಧಿರೇವ ಕಾರಣಮ್ । ಸಾ ಚ ಸ್ವರೂಪೇಣೈವ ಲಿಙ್ಗತಯೇತಿ ಚೇನ್ನ । ಅಪರೋಕ್ಷಪ್ರತೀತೇರನುಭವ-ಸಿದ್ಧತ್ವಾತ್ । ವ್ಯಾಪ್ತ್ಯಾದ್ಯನುಸನ್ಧಾನಸ್ಯಾಪಿ ತಥಾತ್ವಾತ್ । ಅಧಿಕರಣಗ್ರಹಣಂ ಪ್ರತಿಯೋಗ್ಯನುಸ್ಮರಣಂ ಯೋಗ್ಯಾನುಪಲಬ್ಧಿಶ್ಚೇತ್ಯೇತಾವದುಭಯವಾದಿ-ಸಿದ್ಧಮ್ । ತನ್ಮಾತ್ರೇಣೈವಾಭಾವಜ್ಞಾನೋತ್ಪತ್ತೌ ಇಂದ್ರಿಯಾದಿವ್ಯಾಪಾರ-ಕಲ್ಪನಾಯಾಂ ಗೌರವಪ್ರಸಙ್ಗ ಇತಿ ಚೇನ್ನ । ಕಲ್ಪಕಸ್ಯೋಕ್ತತ್ವಾತ್ ।

(ಲಿಂಗಾದಿಗಳ) ವಿಮರ್ಶಾನಂತರದಲ್ಲಿ ಜನ್ಯವಾಗುವ ಅಭಾವದ ಅರಿವೂ ಸಹ ಪ್ರತ್ಯಕ್ಷದ ಫಲ ಎಂದು ನೈಯಾಯಿಕರೇ ಮುಂತಾದವರು

---

1. ಧೂಮಾನುಮಾನದಿಂದ ಅಗ್ನಿಯ ಅರಿವು ಬರುವುದು. ಯಾರಿಗೂ ಈ ಅಗ್ನಿಯ ಅರಿವು ಪ್ರತ್ಯಕ್ಷಜನ್ಯ ಎಂದು ಅನುಭವವಿಲ್ಲ, ಹಾಗೇ ಘಟಾದಿಗಳ ಅಭಾವದ ಅರಿವು ಅನುಮಾನಜನ್ಯ ಎಂದೂ ಅನುಭವವಿಲ್ಲ. ಹೀಗಿದ್ದರೂ ಸೌಗತರು ಅಭಾವದ ಅರಿವು ಅನುಮಾನಜನ್ಯ ಎನ್ನಲು ಒಂದು ಕಾರಣವನ್ನು ತಿಳಿಸಿರುವರು- 'ಅಗ್ನಿಯು ಭಾವ ಪದಾರ್ಥ ಅದು ಪ್ರತ್ಯಕ್ಷದಿಂದಲೂ ಗೋಚರವಾಗಲು ಶಕ್ಯವಿದೆ, ಆದರೆ ಘಟಾಭಾವಾದಿಗಳಾದರೋ ಶೂನ್ಯಭೂತವಾದವುಗಳು. ಶೂನ್ಯಕ್ಕೆ ಇಂದ್ರಿಯ ಸಂಪರ್ಕವಿಲ್ಲ, ಆದುದರಿಂದ ಶೂನ್ಯವು ಪ್ರತ್ಯಕ್ಷದಿಂದ ಗೋಚರವಾಗ-ಲಾರದು. ಹಾಗಾಗಿ 'ಅಭಾವದ ಪ್ರತ್ಯಕ್ಷವಿದೆ' ಎಂಬ ಅನುಭವವು ಕೇವಲ ಔಪಚಾರಿಕ ಎಂದು ಕಲ್ಪಿಸುವವು ಎನ್ನುವುದು ತರವಲ್ಲ. ಘಟಾಭಾವಾದಿಗಳು ಶೂನ್ಯವಾದುದರಿಂದ ಪ್ರತ್ಯಕ್ಷಕ್ಕೆ ಗೋಚರವಾಗಲಾರದು ಎಂದಾದಲ್ಲಿ, ಶೂನ್ಯವಾದ ಶಶವಿಷಾಣವು ಅನುಮಿತಿಗೂ ಅಗೋಚರ. ಹಾಗಾಗಿ ಶೂನ್ಯಭೂತವಾದ ಘಟಾಭಾವವು ಅನುಮಿತಿಗೂ ವಿಷಯ ವಾಗದಿರಬೇಕಿತ್ತು ಎಂದು ಭಾವ.

(ಅಭಿಮತಿಸುವರು). ಅದೂ ಸರಿಯಾದುದಲ್ಲ, (ಪ್ರತ್ಯಕ್ಷಜನ್ಯವಾದ ಅರಿವಲ್ಲ) ಪರೋಕ್ಷಜ್ಞಾನ ಎಂದು ಅನುಭವವು ಇರುವುದರಿಂದ. ಅದನ್ನು ಅಪಲಾಪಿಸುವದಾದಲ್ಲಿ (ಧೂಮಾನುಮಾನದಿಂದ ಜನ್ಯವಾದ) ಅಗ್ನಿಯ ಅರಿವೂ ಅನುಮಿತ ಎಂದಾಗದೇ ಹೋದೀತು.

(ಅನುಪಲಬ್ಧಿಯನ್ನು ಪ್ರತ್ಯೇಕ ಪ್ರಮಾಣ ಎಂದು ಅಭಿಮತಿಸುವ ಪ್ರಾಭಾಕರರು ಪ್ರಶ್ನಿಸುವರು) ಎಲ್ಲೆಡೆಯೂ ಅಭಾವದ ಅರಿವು ಪ್ರಾಪ್ತವಾಗಲು ಅನುಪಲಬ್ಧಿಯೇ ಕಾರಣ, ಅದಾದರೋ (ಅನುಪಲಬ್ಧಿಯಾದರೋ) ಸ್ವರೂಪತಃ ಕಾರಣವಾಗಿದೆ ಹೊರತು ಲಿಂಗವಾಗಿ ಅಲ್ಲ ಎಂದೆನ್ನಲಾಗದು[1]. '(ಅಭಾವದ ಅರಿವು) ಅಪರೋಕ್ಷ' ಎಂದು ಅನುಭವದಿಂದ ಸಿದ್ಧವಾಗಿರುವುದ-ರಿಂದ. (ಇನ್ನು ಅನುಮಾನದಿಂದ ಅಭಾವದ ಅರಿವು ಪ್ರಾಪ್ತವಾದ ಸ್ಥಳದಲ್ಲಿಯೂ ಸಹ) ವ್ಯಾಪ್ತಿ ಮುಂತಾದ ಅನುಸಂಧಾನವೂ ಸಹ ಹಾಗೆಯೇ ಆದುದರಿಂದ[2]. (ಅಭಾವದ) ಅಧಿಕರಣ ಗ್ರಹಣ ಮತ್ತು ಅನುಪಲಬ್ಧಿ ಇವೆರಡು ಉಭಯವಾದಿಗಳಿಗೂ ಸಮ್ಮತ. ಇಷ್ಟರಿಂದಲೇ ಅಭಾವದ ಅರಿವು ಪ್ರಾಪ್ತವಾಗಲು ಇಂದ್ರಿಯವ್ಯಾಪಾರವನ್ನು (ಹೆಚ್ಚಿನ ಕಾರಣ ಎಂದು)

---

1. ಧೂಮವು ವಹ್ನಿಯ ಅರಿವಿಗೆ ಲಿಂಗವಾಗಿ ಕಾರಣವಾಗಿದೆ. ಲಿಂಗವಾದ ಧೂಮದ ಪೂರ್ಣಅರಿವು ಇಲ್ಲದ ವ್ಯಕ್ತಿಗೆ ೯ ಧೂಮವು ಅಗ್ನಿಯ ಜ್ಞಾನವನ್ನು ಉಂಟುಮಾಡಲಾರವು. ಅಂದರೆ 'ವಹ್ನಿಯಿಂದ ವ್ಯಾಪ್ತವಾದದ್ದು ಧೂಮ, ಅಂತಹ ಧೂಮವು ಇಲ್ಲಿದೆ' ಎಂಬ ಅರಿವು ಇದ್ದಲ್ಲಿ ಮಾತ್ರ ವಹ್ನಿಯ ಅನುಮಿತಿಯು ಪ್ರಾಪ್ತವಾಗುವುದು. ಇಂದ್ರಿಯಗಳಾದರೋ ಹಾಗಲ್ಲ, ಕೇವಲ ಇಂದ್ರಿಯಗಳ ಇರುವಿಕೆಯಿಂದಲೇ ಘಟಾದಿ ಪದಾರ್ಥಗಳ ಅರಿವನ್ನು ಇಂದ್ರಿಯಗಳು ಉಂಟುಮಾಡುವವು. ಅನುಪಲಬ್ಧಿಯೂ ಸಹ ಚಕ್ಷುರಾದಿ ಇಂದ್ರಿಯಗಳಂತೆ ಕೇವಲ ಅಸ್ತಿತ್ವದಿಂದ ಪ್ರಮಾಜನಕವಾಗುವುದು. ಆದುದ್ದರಿಂದ ವ್ಯಾಪ್ತಿಸ್ಮರಣೆ ಮುಂತಾದ ವಿಲಂಬದ ಸಂದೇಹಕ್ಕೆ ಅವಕಾಶವಿಲ್ಲ ಎಂದು ಉಪಪಾದಿಸುವುದು ತರವಲ್ಲ ಎಂದು ಭಾವ.

2. ಈ ಹಿಂದೆ ತಿಳಿಸಿದಂತೆ 'ಕರಪ್ರಸಾರಣಾದಿಗಳ ನಂತರ ಅಭಾವದ ಅರಿವು ಪ್ರಾಪ್ತವಾಗುವುದು ಅನುಮಾನದಿಂದಲೇ, ವ್ಯಾಪ್ತ್ಯಾದಿಸ್ಮರಣೆಯಿಂದ' ಎಂಬುವುದೂ ಅನುಭೂತವಾದುದರಿಂದ ಎಂದು ಭಾವ.

ಕಲ್ಪಿಸುವುದು ಗೌರವವಲ್ಲವೇ? ಎಂದು ಹೇಳುವುದು ತರವಲ್ಲ[1]. ಕಲ್ಪಕವನ್ನು ಹೇಳಲಾಗಿರುವುದರಿಂದ[2].

**ಅಭಾವದೊಡನೆ ಇಂದ್ರಿಯಗಳಿಗೆ ಸಂಬಂಧವು ಹೇಗೆ ?**

ಅಭಾವೇನ ಇಂದ್ರಿಯಸನ್ನಿಕರ್ಷೋ ನಾಸ್ತೀತಿ ಚೇತ್? 'ಘಟೇನ ಅಸ್ತಿ' ಇತ್ಯಪಿ ಕುತಃ? ಅಪರೋಕ್ಷಪ್ರತೀತಿಲಕ್ಷಣಕಾರ್ಯೇಣ ಕಲ್ಪ್ಯತ? ಇತಿ ಚೇತ್, ತದಾ ಅಪರೋಕ್ಷ್ಯಮಪಿ ಕುತಃ? ಪ್ರತೀತಿಗ್ರಾಹಕಪ್ರಮಾಣಾದಿತಿ ಚೇತ್, ಸಮಮ್ ಏತತ್ ಸರ್ವಂ ಪ್ರಕೃತೇಽಪಿ । ಕೋಽಸೌ ಸನ್ನಿಕರ್ಷ ಇತಿ ಚೇತ್? ಸಂಯೋಗ ಏವೇತಿ ಬ್ರೂಮಃ । ವೈಶೇಷಿಕಾದಿಪ್ರಕ್ರಿಯಾಯಾ ಅಪ್ರಾಮಾಣಿಕತ್ವಾತ್ । ಕಿಞ್ಚ ಯಥಾ ಕಾರ್ಯದರ್ಶನೇನ ಸಂಯೋಗಾತಿರಿಕ್ತಃ ಸಮವಾಯಃ ಅಙ್ಗೀಕ್ರಿಯತೇ ತಥೇಂದ್ರಿಯಾಭಾವಯೋರಪ್ಯಪರಃ ಕಲ್ಪ್ಯತಾಮ್ ।

ಅನುಪಲಬ್ಧೇರ್ಲಿಙ್ಗತ್ವೇ ತಜ್ಜ್ಞಾನಾವಶ್ಯಂ ಭಾವಾತ್ । ಅಭಾವತ್ವಾವಿಶೇಷೇಣಾನುಪಲಬ್ಧ್ಯನ್ತರಾಪೇಕ್ಷಾಯಾಮನವಸ್ಥಾಪಾತ ಇತಿ ಚೇನ್? ನ । ಅನುಪಲಬ್ಧೇಃ ಸಾಕ್ಷಿವೇದ್ಯತಾಯಾ ಉಕ್ತತ್ವಾದಿತಿ ।

---

1. ಅಭಾವದ ಅರಿವಿಗೆ ಪ್ರತ್ಯಕ್ಷಾನುಮಾನಗಳು ಕಾರಣ ಎಂದು ವಾದಿಸುವವರು ತತ್ತ್ವವಾದಿಗಳು. ಅನುಪಲಬ್ಧಿಯು ಕಾರಣ ಎಂದು ಪ್ರಾಭಾಕರರು ವಾದಿಸುವವರು. ಈ ಈರ್ವರೂ ಸಹ ಅಭಾವದ ಅಧಿಕರಣವಾದ ಭೂತಲಾದಿಗಳ ಅರಿವು ಮತ್ತು ಅಭಾವಪ್ರತಿಯೋಗಿಯ ಸ್ಮರಣೆ ಇವುಗಳನ್ನು ಕಾರಣ ಎಂದು ಒಪ್ಪಿರುವರು. ಇವುಗಳಿಂದಲೇ ಅಭಾವದ ಅರಿವಿನ ನಿರ್ವಹಣೆಯು ಸಾಗುತ್ತಿರಲು, ಅಭಾವವು ಪ್ರತ್ಯಕ್ಷಾದಿಗಮ್ಯವೆಂದು ವಾದಿಸುವವರು, ಅಭಾವದ ಅರಿವಿನ ಕಾರಣಸಾಮಗ್ರಿಯಲ್ಲಿ ಇಂದ್ರಿಯಾದಿಗಳ ವ್ಯಾಪಾರವನ್ನು, ವ್ಯಾಪ್ತಿ-ಸ್ಮರಣಾದಿಗಳನ್ನು ಹೆಚ್ಚಿನ ಕಾರಣವನ್ನಾಗಿ ಪ್ರತಿಪಾದಿಸುವುದು ಗೌರವವಲ್ಲವೆ ಎಂದು ಪ್ರಾಶ್ನಿಕನ ಭಾವ.

2. ಅಭಾವದ ಅರಿವು ಪರೋಕ್ಷವಾಗಿಯೂ ಅಪರೋಕ್ಷವಾಗಿಯೂ ಪ್ರಾಪ್ತವಾಗುವ ಅನುಭವವು ಲೋಕದಲ್ಲಿರುವುದೇ ಇಂದ್ರಿಯಾದಿಗಳ ವ್ಯಾಪಾರ, ಮತ್ತು ವ್ಯಾಪ್ತಸ್ಮರಣಾದಿಗಳನ್ನು ಅಭಾವದ ಅರಿವಿಗೆ ಕಾರಣ ಎಂದು ಹೇಳಲು ಕಲ್ಪಕವಾಗಿದೆ ಎಂದು ಭಾವ.

ಅಭಾವರೂಪ ಪದಾರ್ಥದಿಂದ ಇಂದ್ರಿಯಕ್ಕೆ ಸನ್ನಿಕರ್ಷವು ಇರುವುದಿಲ್ಲ[1]? ಎಂದಲ್ಲಿ, ಘಟದಿಂದ (ಇಂದ್ರಿಯಕ್ಕೆ ಸನ್ನಿಕರ್ಷವು) ಇದೆ ಎನ್ನುವುದೂ ಸಹ ಯಾವುದರಿಂದ (ಯಾವ ಪ್ರಮಾಣದಿಂದ ತಿಳಿಯುವುದು)? ಅಪರೋಕ್ಷ ಲಕ್ಷಣಕ ಕಾರ್ಯವು ಇರುವುದರಿಂದ ಕಲ್ಪಿಸಲಾಗುವುದು ಎಂದಲ್ಲಿ[2], ಅದರ (ಘಟಾದಿಗಳ) ಅಪರೋಕ್ಷವು ಇದೆ ಎನ್ನುವುದಾದರೂ ಏತರಿಂದ? ಪ್ರತೀತಿಯನ್ನು ಗ್ರಹಿಸುವ ಪ್ರಮಾಣದಿಂದ ಎಂದು ಹೇಳುವುದಾದಲ್ಲಿ[3], ಈ ಎಲ್ಲವೂ ಸಹ ಪ್ರಕೃತದಲ್ಲಿ (ಅಭಾವದ ಪ್ರತ್ಯಕ್ಷದಲ್ಲಿ) ಸಮವಾಗಿದೆ[4]. (ಹಾಗಾದಲ್ಲಿ) ಆ ಸಂಬಂಧವು ಯಾವುದು? ಎಂದು ಪ್ರಶ್ನಿಸುವದಾದಲ್ಲಿ, ಸಂಯೋಗ ಎಂದು ಹೇಳುವೆವು. ವೈಶೇಷಿಕಾದಿಗಳ ಪ್ರಕ್ರಿಯೆಗಳು ಅಪ್ರಾಮಾಣಿಕವಾದುದರಿಂದ[5]. ಮತ್ತು ಸಹ ಅನುಭವವು ಇರುವುದರಿಂದ ಸಂಯೋಗದಿಂದ ವಿಭಿನ್ನವಾದ ಸಮವಾಯ ಸಂಬಂಧವನ್ನು ಹೇಗೆ

---

1. ಇಂದ್ರಿಯ ಮತ್ತು ದ್ರವ್ಯಗಳ ಸನ್ನಿಕರ್ಷವಾದಲ್ಲಿ ಮಾತ್ರ ಪದಾರ್ಥದ ಅಪರೋಕ್ಷಾನುಭವವು ಪ್ರಾಪ್ತವಾಗುವುದು, ಈ ಸನ್ನಿಕರ್ಷವು ಸಂಯೋಗ ಎಂಬ ಗುಣ. ಇದು ದ್ರವ್ಯಗಳಲ್ಲಿ ಮಾತ್ರ ಇರುವ ಗುಣ. ಆದುದರಿಂದ ಅಭಾವದಲ್ಲಿ ಸನ್ನಿಕರ್ಷಕ್ಕೆ ಅವಕಾಶವಿಲ್ಲ ಎಂದು ವೈಶೇಷಿಕರ ಅಭಿಮತಿ.

2. ಚಕ್ಷುರಾದಿ ಇಂದ್ರಿಯಗಳ ವ್ಯಾಪಾರವಿದ್ದಲ್ಲಿ ಘಟಾದಿ ಪದಾರ್ಥಗಳ ಅನುಭವವು ಪ್ರಾಪ್ತವಾಗುವುದು, ಇಲ್ಲದ ಪಕ್ಷದಲ್ಲಿ ಪ್ರಾಪ್ತವಾಗದು. ಆದುದರಿಂದ ಘಟಾದಿಗಳ ಅನುಭವವಾದಾಗ ಇಂದ್ರಿಯ ಸನ್ನಿಕರ್ಷವಿದೆ ಎಂದು ಊಹಿಸಲಾಗುವುದು ಎಂದು ವೈಶೇಷಿಕರ ಭಾವ.

3. 'ಘಟಮಹಂ ಅಪರೋಕ್ಷತಯಾ ಜಾನಾಮಿ' ಎನ್ನುವ ಅನುವ್ಯವಸಾಯವಿರುವುದರಿಂದ ಎಂದು ಭಾವ.

4. ಚಕ್ಷುರಾದಿ ಇಂದ್ರಿಯದ ವ್ಯಾಪಾರವು ಇದ್ದಾಗಲೇ ಅಭಾವದ ಅರಿವು ಪ್ರಾಪ್ತವಾಗುವುದು, ಮತ್ತೂ ಸಹ 'ಅಭಾವಮಹಮಪರೋಕ್ಷತಯಾ ಜಾನಾಮಿ' ಎಂಬ ಅನುವ್ಯವಸಾಯವೂ ಇದೆ ಎಂದು ಭಾವ.

5. 'ದ್ರವ್ಯಗಳಲ್ಲಿ ಮಾತ್ರ ಸಂಯೋಗ ಸಂಬಂಧವಿರುವುದು, ಅಭಾವಾದಿಗಳಲ್ಲಿ ಸಂಯೋಗ ಸಂಬಂಧವು ಇಲ್ಲ' ಎನ್ನುವುದು ವೈಶೇಷಿಕಾದಿವಾದಿಗಳು ಒಪ್ಪಿರುವುರು, ಅದು ಪ್ರಮಿತ-ವಾದುದಲ್ಲ. ಅಭಾವಾದಿಗಳಲ್ಲೂ ಸಂಯೋಗಾದಿ ಸಂಬಂಧವನ್ನು ಒಪ್ಪಿದಲ್ಲಿ ಯಾವ ವಿಧವಾದ ಬಾಧಕವಿಲ್ಲ ಎಂದು ಭಾವ.

ಕಲ್ಪಿಸಲಾಗಿದೆಯೋ ಹಾಗೆಯೇ ಇಂದ್ರಿಯ ಮತ್ತು ಅಭಾವಗಳಿಗೂ ಸಂಬಂಧಾಂತರವನ್ನು ಕಲ್ಪಿಸಿ[1].

ಅನುಪಲಬ್ಧಿಯನ್ನು (ಅಭಾವದ ಅರಿವಿಗೆ) ಕಾರಣ ಎಂದಾದಲ್ಲಿ ಅದರ ಅರಿವೂ ಅವಶ್ಯಕವಾದುದರಿಂದ[2]. ಅಭಾವತ್ವವು ಇಲ್ಲೂ ಇರುವುದರಿಂದ (ಅನುಪಲಬ್ಧಿ ಎಂದರೆ ಉಪಲಬ್ಧಿಯ ಅಭಾವ. ಹಾಗಾಗಿ ಅಭಾವವು ವಿಶೇಷಣವಾಗಿರುವುದರಿಂದ, ಅನುಪಲಬ್ಧಿಯಲ್ಲಿ ಘಟಕವಾದ ಅಭಾವದ ಅರಿವಿಗೆ) ಅಭಾವಾಂತರದ ಅಪೇಕ್ಷೆಯು ಇರುವುದರಿಂದ ಅನವಸ್ಥಾ ಪ್ರಾಪ್ತವಾಗುವುದರಿಂದ ಎಂದೆನ್ನಲಾಗದು. ಅನುಪಲಬ್ಧಿಯು ಸಾಕ್ಷಿಯಿಂದ ವೇದ್ಯ ಎಂದು ತಿಳಿಸಲಾಗಿರುವುದರಿಂದ ಎಂದು[3].

---

1. ದ್ರವ್ಯ-ದ್ರವ್ಯಗಳಲ್ಲಿರುವ ಇರುವ ಸಂಬಂಧವನ್ನು ಸಂಯೋಗ ಎಂದು ಒಪ್ಪಲಾಗಿದೆ. ಆದರೆ ದ್ರವ್ಯ-ಗುಣಗಳಿಗೆ ಇರುವ ಸಂಬಂಧವು ಸಂಯೋಗ ಎಂದು ಹೇಳಲಾಗದು, ಕಾರಣ ಸಂಯೋಗಸಂಬಂಧದಿಂದ ಈ ಸಂಬಂಧವು ವಿಭಿನ್ನವಾಗಿದೆ. ಆದುದರಿಂದ ಸಮವಾಯ ಎನ್ನುವ ಹೊಸಸಂಬಂಧವನ್ನು ಕಲ್ಪಿಸಲಾಗುವುದು. ಅದರಂತೆ ಅಭಾವ ಮತ್ತು ಇಂದ್ರಿಯಗಳಿಗೆ ಈ ಎರಡೂ ಸಂಬಂಧಗಳೂ ಸರಿಯಾಗದ ಪಕ್ಷದಲ್ಲಿ ಹೊಸಸಂಬಂಧವನ್ನು ಕಲ್ಪಿಸಬೇಕೇ ಹೊರತು ಸಂಬಂಧವೇ ಇಲ್ಲ ಎಂದು ವಾದಿಸುವುದು ತರವಲ್ಲ ಎಂದು ಭಾವ.

2. ಅನುಪಲಬ್ಧಿ ಎಂಬುವುದು ಅಭಾವದ ಅರಿವಿಗೆ ಹೇತುವಾಗಿ ಕಾರಣ ಎಂದು ತತ್ತ್ವವಾದಿಗಳ ಅಭಿಮತ. ಆದರೆ ಹೇತುವಿನ ಅರಿವಿಲ್ಲದೆ ಅನುಮಿತಿಯು ಬರಲಾರದು ಆದುದರಿಂದ ಅನುಪಲಬ್ಧಿಯ ಅರಿವು ಅವಶ್ಯಕ ಎಂದು ಪ್ರಶ್ನಕನ ಭಾವ.

3. 'ಕೆಲವು ಅಭಾವದ ಅರಿವು ಅನುಪಲಬ್ಧಿರೂಪ ಲಿಂಗದಿಂದಲೂ ಪ್ರಾಪ್ತವಾಗುವುದು' ಎಂದು ತಿಳಿಸಲಾಗಿದೆ. ಆದರೆ ಅನುಪಲಬ್ಧಿ ಎನ್ನುವುದು ಒಂದು ಅಭಾವರೂಪ ಪದಾರ್ಥವೇ ಆಗಿದೆ. ಹಾಗಾಗಿ ಲಿಂಗಭೂತವಾದ ಅನುಪಲಬ್ಧಿಯ ಅರಿವಿಲ್ಲದೆ ಸಾಧ್ಯವಾದ ಅಭಾವದ ಅರಿವಾಗಲಾರದು, ಲಿಂಗರೂಪದ ಅಭಾವದ ಅರಿವಿಗಾಗಿ ಮತ್ತೊಂದು ಅನುಪಲಬ್ಧಿಯನ್ನು ಕಲ್ಪಿಸಿದಲ್ಲಿ ಅನವಸ್ಥಾ ದೋಷವು ಪ್ರಾಪ್ತವಾಗುವುದು ಎಂಬ ಸಂದೇಹವನ್ನು ಪರಿಹರಿಸುವರು- ಸಾಧ್ಯವಾದ ಅಭಾವದ ಅರಿವಿಗೆ ಲಿಂಗರೂಪವಾದ ಅನುಪಲಬ್ಧಿಯ ಅರಿವು ಕಾರಣವಾದರೂ, ಕಾರಣಭೂತವಾದ ಅನುಪಲಬ್ಧಿಯ ಅರಿವಿಗೆ ಮತ್ತೊಂದು ಅಭಾವದ ಅರಿವಿನ ಅಗತ್ಯವಿಲ್ಲ, ಆ ಕಾರಣವಾದ ಹೇತುವಿನ ಅರಿವು ಸಾಕ್ಷಿಯಿಂದ ಪ್ರಾಪ್ತವಾಗುವುದು. 'ಈಗ ನನಗೆ ಘಟದ ಉಪಲಬ್ಧಿಯು ಇಲ್ಲ' ಇತ್ಯಾದಿ ಅನುಭವವು ಸಾಕ್ಷಿವೇದ್ಯ ಎಂದು ಭಾವ.

**ಅರ್ಥಾಪತ್ತಿ ಮತ್ತು ಉಪಮಾನ ಪ್ರಮಾಣಗಳ ಅಂತರ್ಭಾವ**

**ಅರ್ಥಾಪತ್ತಿಶ್ಚೋಪಮಾ ಚ ಹ್ಯನುಮಾಭೇದ ಏವ ತು ।**

ಅರ್ಥಾಪತ್ತಿ ಮತ್ತು ಉಪಮಾನವು ಅನುಮಾನದ ಪ್ರಭೇದವೇ ಆಗಿವೆ.

**ಅರ್ಥಾಪತ್ತ್ಯುಪಮಾನಯೋರಪ್ಯನ್ತರ್ಭಾವಮಾಹ 'ಅರ್ಥಾಪತ್ತಿಶ್ಚ' ಇತಿ । ಅನುಮಾನಸಾಮಗ್ರೀಸದ್ಭಾವಸ್ಯ ಸ್ಫುಟತ್ವಾದಿತಿ ಹೇರರ್ಥಃ । ಏವಶಬ್ದಃ ಪೃಥಕ್ಪ್ರಮಾಣತ್ವವ್ಯಾವೃತ್ತ್ಯರ್ಥಃ । ತುಶಬ್ದೋಽಭಾವಾದ್ ವ್ಯವಚ್ಛಿನತ್ತಿ । ತಸ್ಯೋಭಯತ್ರಾನ್ತರ್ಭಾವಾತ್ , ಏತಯೋಸ್ತ್ವನುಮಾನ ಏವೇತಿ ।**

ಅರ್ಥಾಪತ್ತಿ, ಉಪಮಾನಗಳಿಗೆ ಅಂತರ್ಭಾವವನ್ನು ಹೇಳುತ್ತಾರೆ '**ಅರ್ಥಾಪತ್ತಿಶ್ಚ**' ಎಂದು. '**ಹಿ**' (ಶಬ್ದದ) ಅರ್ಥವು 'ಅನುಮಾನದ ಸಾಮಗ್ರಿಗಳ (ವ್ಯಾಪ್ತ್ಯಾದಿ ಸ್ಮರಣೆಗಳ) ಇರುವಿಕೆಯು ಸ್ಫುಟವಾಗಿರುವುದರಿಂದ' ಎಂದು. '**ಏವ**' ಶಬ್ದವು ' (ಅರ್ಥಾಪತ್ತಿ ಮತ್ತು ಉಪಮಾನವು) ಪ್ರತ್ಯೇಕ ಪ್ರಮಾಣಗಳಲ್ಲ ' ಎನ್ನುವ ಅರ್ಥವನ್ನು (ತಿಳಿಸುತ್ತದೆ). '**ತು**' ಶಬ್ದವು (ಅರ್ಥಾಪತ್ತಿ ಮತ್ತು ಉಪಮಾನಗಳನ್ನು) ಅಭಾವಪ್ರಮಾಣದಿಂದ ಪ್ರತ್ಯೇಕಿಸುತ್ತಿದೆ. ಅದಕ್ಕೆ (ಅಭಾವಕ್ಕೆ) ಎರಡು ಕಡೆಯಲ್ಲಿ (ಪ್ರತ್ಯಕ್ಷ ಮತ್ತು ಅನುಮಾನದಲ್ಲಿ) ಅಂತರ್ಭಾವವು ಇರುವುದರಿಂದ, ಇವುಗಳಿಗಾದರೋ ಅನುಮಾನದಲ್ಲಿಯೇ (ಅಂತರ್ಭಾವವನ್ನು ಹೇಳಿರುವುದರಿಂದ).

**ಅರ್ಥಾಪತ್ತಿಯು ಅನುಮಾನದ ಪ್ರಭೇದ**

**ನನು, ದೇವದತ್ತಸ್ಯ ಬಹಿರ್ಭಾವೇ ನ ತಾವದ್ ಜೀವನಮೇವ ಲಿಂಗಂ, ಗೃಹೇ ಸತಿ ವ್ಯಭಿಚಾರಾತ್ । ನಾಪಿ ಗೃಹೇಽಸತ್ತ್ವಮಾತ್ರಂ ಮೃತಾದೌ ವ್ಯಭಿಚಾರಾತ್ । ನ ಚ ವಿಶಿಷ್ಟಂ, ಯೇನ ಹಿ 'ಜೀವನಂ ಗೃಹ ಏವ' ಇತಿ ನಿಶ್ಚಿತಂ, ತಸ್ಯ ಪರಸ್ಪರವಿರೋಧೇನ ವಿಶೇಷಣವಿಶೇಷ್ಯಭಾವಾನುಪಪತ್ತೇರಿತಿ ಚೇನ್ನ । ವಿಪ್ರತಿಪತ್ತ್ಯಾ ಸಂಶಯಸ್ಯೈವಾವಶ್ಯಕತ್ವೇನಾರ್ಥಾಪತ್ತೇರಪ್ಯನು-ದಯಪ್ರಸಙ್ಗಾತ್ । ಅತೋ ಜೀವನಪ್ರಮಾಣೇನ ಸಾಮಾನ್ಯತೋ ಜೀವನೇ ಪ್ರಮಿತೇ, ಗೃಹಾಭಾವಪ್ರಮಾಣೇನ ಚ ಪ್ರಸಕ್ತಪ್ರತಿಷೇಧೇ ಸತಿ ಪರಿಶಿಷ್ಯಮಾಣೇ ಬಹಿರ್ಭಾವೇ ಬುದ್ಧಿಃ, ಅನುಮಾನಜನ್ಯೈವ । ಅನ್ಯಥಾ ಪರಿಶೇಷಸ್ಯಾಪಿ ಪೃಥಕ್ಪ್ರಾಮಾಣ್ಯಂ ಸ್ಯಾತ್?**

ಸರಿ ಆದರೆ, ದೇವದತ್ತನ 'ಜೀವಿತವೇ' ದೇವದತ್ತನ ಹೊರ ಇರುವುಕೆಗೆ ಹೇತುವು ಆಗಲಾರದು, ಮನೆಯಲ್ಲೇ ಇದ್ದಲ್ಲಿ (ಜೀವಿಸುವಿಕೆ ಎಂಬ ಹೇತುವು) ವ್ಯಭಿಚರಿತವಾಗುವುದರಿಂದ. (ಹಾಗೆಯೇ) ಕೇವಲ ಮನೆಯಲ್ಲಿ ಇಲ್ಲದಿರುವದೂ ಸಹ (ಹೊರಗಿರುವಿಕೆಗೆ ಹೇತುವಾಗಲಾರದು) ಮರಣಾದಿ-ಗಳನ್ನು ಹೊಂದಿದಲ್ಲಿ ವ್ಯಭಿಚರಿತವಾಗುವುದರಿಂದ. ವಿಶಿಷ್ಟವಾದದೂ (ಜೀವತಿ ಸತಿ ಬಹಿರ್ಭಾವಾತ್ ಎಂಬುವುದೂ ಹೇತುವೂ) ಆಗಲಾರದು, ಯಾವ ವ್ಯಕ್ತಿಯು 'ಜೀವಿತನು ಮನೆಯಲ್ಲೇ ಇರುವನು' ಎಂದು ನಿಶ್ಚಯಿಸಿರುವನೋ ಆತನಿಗೆ ಪರಸ್ಪರವಿರುದ್ಧವಾದುದರಿಂದ ವಿಶೇಷಣ- ವಿಶೇಷ್ಯಭಾವವು ಅನುಪಪನ್ನವಾಗಿರುವುದರಿಂದ ಎಂದು ಎನ್ನಲಾಗದು[1]. ವಿಮತಿಯಿಂದ

---

1. ದೇವದತ್ತನು ಜೀವಿಸಿರುವನು ಎಂದು ಪ್ರಮಾಣಾಂತರದಿಂದ ತಿಳಿದಿರುವ ವ್ಯಕ್ತಿಯೋರ್ವನು ದೇವದತ್ತನ ಮನೆಗೆ ಹೋದಾಗ, ಮನೆಯವರ ವಚನದಿಂದಲೋ ಅಥವಾ ನೋಟದಿಂದಲೋ ದೇವದತ್ತನು ಮನೆಯಲ್ಲಿ ಇಲ್ಲ ಎಂದು ತಿಳಿಯುವನು. ಅನಂತರದಲ್ಲಿ 'ದೇವದತ್ತನು ಹೊರಗಿರುವನು' ಎಂಬ ಅರಿವು ಆತನಿಗೆ ಪ್ರಾಪ್ತವಾಗುವುದು. ಪ್ರಕೃತ 'ದೇವದತ್ತನು ಹೊರಗಿರುವನು' ಎಂಬ ಅರಿವು ಪ್ರತ್ಯಕ್ಷದಿಂದಾಗಲಿ ಆಗಮದಿಂದಾಗಲಿ ಪ್ರಾಪ್ತವಾದದ್ದಲ್ಲ, ಹಾಗಾದಲ್ಲಿ ಯಾವ ಪ್ರಮಾಣದಿಂದ ಎಂಬ ಜಿಜ್ಞಾಸೆಯು ಪ್ರಾಪ್ತವಾದಾಗ ಅರ್ಥಾಪತ್ತಿ ಎಂಬ ಪ್ರತ್ಯೇಕ ಪ್ರಮಾಣದಿಂದ ಎಂದು ಹಲವು ವಾದಿಗಳು ಅಭಿಮತಿಸಿರುವರು. ಅರ್ಥಾಪತ್ತಿ ಎಂದರೆ ಎರಡು ಪ್ರಮಾಣಗಳ ವಿರೋಧದಿಂದ ಪ್ರಾಪ್ತವಾಗುವ ಅರಿವು ಎಂಬ ಅರ್ಥದಲ್ಲಿ ವ್ಯವಹರಿಸುವರು. ಯಾರು ಅರ್ಥಾಪತ್ತಿಯನ್ನು ಪ್ರತ್ಯೇಕ ಪ್ರಾಮಾಣ ಎಂದು ವಾದಿಸುವನೋ ಅವನ ಅಭಿಪ್ರಾಯದಂತೆ 'ದೇವದತ್ತನು ಬದುಕಿರುವಿಕೆ' ಮತ್ತು 'ಮನೆಯಲ್ಲಿ ಇಲ್ಲದಿರುವಿಕೆ' ಇವೆರಡು ಅತ್ಯಂತವಿರುದ್ಧವಾದ ಎರಡು ಸಂಗತಿಗಳು. ಇವುಗಳ ವಿರೋಧವನ್ನು ಪರಿಹರಿಸಲು 'ದೇವದತ್ತನು ಹೊರಗಿರುವನು' ಎಂದು ಕಲ್ಪಿಸ ಬೇಕು ಇದನ್ನೇ ಅರ್ಥಾಪಾತ್ತಿ 'ಅರ್ಥತಃ ಪ್ರಾಪ್ತ' ಎಂದು ವಿವರಿಸಲಾಗಿದೆ. ಪ್ರಕೃತ ಈ ಪ್ರಮಾಣಕ್ಕೆ ಅನುಮಾನದಲ್ಲಿ ಅಂತರ್ಭಾವ ಎಂದು ತತ್ತ್ವವಾದಿಗಳು ವಾದಿಸಲು, ಪ್ರತ್ಯೇಕ ಪ್ರಮಾಣ ಎಂದು ಒಪ್ಪಿರುವ ವಾದಿಗಳು ಪ್ರಶ್ನಿಸುವರು- 'ದೇವದತ್ತನು ಬದುಕಿದ್ದಾನೆ' ಎನ್ನುವ ಅರಿವು 'ದೇವದತ್ತನು ಹೊರಗಿರುವನು' ಎನ್ನುವದನ್ನು ಸಾಧಿಸಲಾರದು, ದೇವದತ್ತನು ಮನೆಯಲ್ಲಿಯೇ ಇದ್ದರೂ ಬದುಕಿರಬಹುದಲ್ಲವೆ? ಹಾಗೆ 'ದೇವದತ್ತನು ಮನೆಯಲ್ಲಿ ಇಲ್ಲ' ಎನ್ನುವ ಅರಿವೂ ಸಹ ದೇವದತ್ತನು ಹೊರಗಿರುವನು ಎನ್ನುವದನ್ನು ಸಾಧಿಸಲಾರದು, ಮೃತನೂ ಆಗಿರಬಹುದು. ಇನ್ನು 'ಬದುಕಿದ್ದೂ ಮನೆಯಲ್ಲಿ ಇಲ್ಲದಿರುವಿಕೆ' ಎಂಬ ವಿಶಿಷ್ಟವಾದ ಅರಿವು 'ಹೊರ

ಪುಟ 473ರಲ್ಲಿ........

('ಜೀವಿಸಿರುವನು' 'ಮನೆಯಲ್ಲಿ ಇಲ್ಲ' ಎಂಬ ವಿರುದ್ಧಜ್ಞಾನದಿಂದ) ಸಂದೇಹಕ್ಕೆ ಎಡೆಯಿರುವುದರಿಂದ ಅರ್ಥಾಪತ್ತಿಯ ಪ್ರಾಪ್ತಿಗೆ ಅವಕಾಶವಿಲ್ಲದೇ ಹೋದೀತು[1]. ಆದುದರಿಂದ (ಅರ್ಥಾಪತ್ತಿಗೆ ಅವಕಾಶವನ್ನು ಕಲ್ಪಿಸಬೇಕಾದುದ-ರಿಂದ) 'ಬದುಕಿರುವನು' ಎಂಬುವ ಪ್ರಮಾಣದಿಂದ ('ಎಲ್ಲಿಯೋ ಒಂದೆಡೆ ಇರುವನು' ಎಂದು) ಸಾಮಾನ್ಯವಾಗಿ ಪ್ರಮಿತವಾಗಿರಲು, 'ಮನೆಯಲ್ಲಿ ಇಲ್ಲ' ಎಂಬುವದನ್ನು ಪ್ರಮಾಣದಿಂದ ತಿಳಿಯಲಾಗಿ, ಪ್ರಸಕ್ತವಾದದು (ಮನೆಯಲ್ಲಿ ಇರುವನು ಎಂಬುದು) ನಿಷೇಧಿತವಾಗಲು ಉಳಿದದ್ದು 'ಹೊರಗಿರುವನು' ಎಂಬ ಅರಿವು ಅನುಮಾನದಿಂದ ಜನ್ಯವಾದದ್ದೇ ಆಗಿದೆ. ಹಾಗಾಗದ ಪಕ್ಷದಲ್ಲಿ ಪರಿಶೇಷಕ್ಕೂ (ಪರಿಶೇಷಾನುಮಾನಕ್ಕೆ) ಪ್ರತ್ಯೇಕ ಪ್ರಾಮಾಣ್ಯವು ಒದಗೀತು[2].

---

...... ಪುಟ 472 ರಿಂದ

ಇರುವಿಕೆಯನ್ನು' ಸಾಧಿಸಬಲ್ಲದು ಎಂದೂ ಹೇಳಬಹುದು, ಆದರೆ ಅರ್ಥಾಪತ್ತಿಯನ್ನು ಪತ್ಯೇಕ ಪ್ರಮಾಣ ಎಂದು ಒಪ್ಪಿರುವ ವಾದಿಗಳ ಪ್ರಕಾರ ಬದುಕಿರುವಿಕೆ ಮತ್ತು ಮನೆಯಲ್ಲಿ ಇಲ್ಲದಿರುವಿಕೆ ಇವೆರಡು ಪರಸ್ಪರ ವಿರುದ್ಧವಾದ ಅರಿವು. ಹಾಗಾಗಿ ಅವುಗಳಿಗೆ ವಿಶೇಣ-ವಿಶೇಷ್ಯ ಭಾವವು ಸಲ್ಲದು. ಸತ್ವೇ ಸತಿ ಅಸತ್ವಾಭಾವಾತ್ ಎಂಬುವುದು ಹೇಗೆ ಹೇತುವಾಗಲಾರದೋ ಹಾಗೇ ಎಂದು ಭಾವಿಸುರುವುದರಿಂದ 'ಜವಿತ್ವೇ ಸತಿ ಗೃಹಾಭಾವಾತ್' ಎಂಬ ಹೇತುವನ್ನು ಉದ್ಧರಿಸಲು ಶಕ್ಯವೇ ಇಲ್ಲವೆಂದು ಪ್ರಚ್ಛಕನ ಭಾವ.

1. ಅರ್ಥಾಪತ್ತಿಯನ್ನು ಪೃಥಕ್ ಪ್ರಮಾಣ ಎಂದು ವಾದಿಸುವವರ ಪ್ರಕಾರ 'ಜೀವಿಕೆ' ಮತ್ತು 'ಮನೆಯಲ್ಲಿ ಇಲ್ಲದಿರುವಿಕೆ' ಇವೆರಡೂ ಪರಸ್ಪರ ವಿರುದ್ಧ ಪ್ರಮೇಯಗಳಾದುದರಿಂದ ಇವುಗಳಿಗೆ ವಿಶೇಷ್ಯ-ವಿಶೇಣಭಾವವು ಕೂಡುವದಿಲ್ಲ ಎಂದು ಹೇಳುವದಾದಲ್ಲಿ, ವಿರುದ್ಧಪ್ರಮಾಣಗಳು ಸಂದೇಹಕ್ಕೆ ಅವಕಾಶವನ್ನು ನೀಡುವುದೇ ಹೊರತು ನಿಮಗೆ ಅಭಿಮತವಾದ ಬಹಿರ್ಭಾವರೂಪ-ಅರ್ಥಾಪತ್ತಿಗೆ ಅವಕಾಶವಿಲ್ಲ. ಎದುರಿನಲ್ಲಿರುವುದು ಮಾವೋ ಹಲಸೋ ಎನ್ನುವ ಸಂದೇಹವು ಒದಗಿದಾಗ ಪ್ರಮಾಣಾಂತರವನ್ನು ಅವಲಂಬಿಸಿ ಇವೆರಡರಲ್ಲಿ ಯಾವುದಾದರೂ ಒಂದು ಎಂದು ನಿಶ್ಚಯಿಸುವರು. ಹಾಗೆ ಪ್ರಕೃತದಲ್ಲಿ 'ಜೀವಿಕೆ' ಮತ್ತು ಮನೆಯಲ್ಲಿ ಇಲ್ಲದಿರುವಿಕೆ' ಇವೆರಡರಲ್ಲಿ ಯಾವುದಾದರೂ ಒಂದನ್ನು ನಿಶ್ಚಯಿಸುತ್ತಾರೆ ಹೊರತು 'ಹೊರಗಿರುವನು' ಎಂಬ ಬೇರೇಯದೇ ಆದ ಮೂರನೆಯ ಅರಿವಿಗೆ-ಅರ್ಥಾಪತ್ತಿಗೆ ಅವಕಾಶವಿಲ್ಲದೇ ಹೋದೀತು ಎಂದು ಭಾವ.

2. ಪ್ರಕೃತದಲ್ಲಿ 'ದೇವದತ್ತಃ ಬಹಿರಸ್ತಿ, ಜೀವತಿ ಸತಿ ಗೃಹೇಽಸತ್ವಾತ್' ಎಂದು ಅನುಮಾನಿಸಲಾಗುವುದು. ಈ ಅನುಮಾನವನ್ನು ಪ್ರತ್ಯೇಕ ಪ್ರಮಾಣ ಎಂದು ವಾದಿಸಿದಲ್ಲಿ ಅನುಮಾನದ ಪ್ರಭೇದವೆಂದು ಎಲ್ಲರೂ ಒಪ್ಪಿರುವ ಪರಿಶೇಷಾನುಮಾನವನ್ನು ಪ್ರತ್ಯೇಕ ಪ್ರಮಾಣ ಎಂದು ಒಪ್ಪಬೇಕಾದೀತು ಎಂದು ಭಾವ.

**ಏತೇನ, ಗೃಹಾಭಾವಪ್ರಮಾಣೇನ ಸನ್ದಿಗ್ಧಂ ಜೀವನಂ ಕಥಂ ವಿಶೇಷಣಂ ಭವತೀತಿ ಚೇನ್ನ । ಭಿನ್ನವಿಷಯತ್ವೇನ ಸಂಶಯಾಜನನಾತ್ । ಗೃಹಾದ್ ಬಹಿರ್ಭಾವಸ್ಯಾನೇನಾನವಗತತ್ವಾತ್ ಕಥಮನುಮಾನಮ್? ಇತಿ ಚೇನ್ನ । ಕೇವಲವ್ಯತಿರೇಕತ್ವೋಪಪತ್ತೇಃ । 'ಯೋ ಜೀವನ್ ಯತ್ರ ನಾಸ್ತಿ ಸಃ ತತೋಽನ್ಯತ್ರಾಸ್ತಿ' ಇತಿ ಸಾಮಾನ್ಯವ್ಯಾಪ್ತ್ಯುಪಪತ್ತೇಶ್ಚ । ತದಿದಮುಕ್ತಂ 'ಅನುಮಾನಭೇದ ಏವ' ಇತಿ ।**

ಇದರಿಂದ (ಪ್ರಸಕ್ತವಾದದಿಂದ), ಗೃಹಾಭಾವ ರೂಪ ಪ್ರಮಾಣದಿಂದ, ಸಂದಿಗ್ಧವಾದ ಜೀವಿತವನ್ನು ಹೇಗೆ ವಿಶೇಷಣವನ್ನಾಗಿಸಲಾಗುವುದು ಎಂದೆನ್ನಲಾಗದು. ಭಿನ್ನ ವಿಷಯಗಳಾದುದರಿಂದ ಸಂಶಯಕ್ಕೆ ಅವಕಾಶ ಇಲ್ಲದಿರುವುದರಿಂದ[1]. ಗೃಹಾದ್ ಬಹಿರ್ಭಾವವು ಈತನಿಂದ ಅವಗತವಾಗಿಲ್ಲ-ದಿರುವದರಿಂದ ಅನುಮಿತಿ ಹೇಗಾದೀತು? ಎಂದು ಪ್ರಶ್ನಿಸಬಾರದು[2]. ಕೇವಲ ವ್ಯತಿರೇಕ್ಯನುಮಾನವು ಯುಕ್ತವಾಗುವುದರಿಂದ[3]. 'ಯಾವಾತನು ಬದುಕಿದ್ದು

---

1. 'ಜೀವಿತ್ವೇ ಸತಿ ಗೃಹಾಭಾವಾತ್- ಬದುಕಿದ್ದು ಮನೆಯಲ್ಲಿ ಇಲ್ಲದಿರುವುದರಿಂದ' ಎನ್ನುವದನ್ನು ಹೇತುವೆಂದು ತಿಳಿಸಲಾಗಿದೆ. ಆದರೆ ಗೃಹಾಭಾವವು ಪ್ರತ್ಯಕ್ಷಪ್ರಮಾಣದಿಂದ ಪ್ರಮಿತವಾಗಿದೆ. ಆದರೆ ದೇವದತ್ತನು ಬದುಕಿರುವನೋ ಮೃತನಾಗಿರುವನೋ ಎನ್ನುವುದು ನಿಶ್ಚಿತವಲ್ಲ. ಹಾಗಾಗಿ ಸಂದೇಹಗ್ರಸ್ತವಾದ 'ಜೀವಿತ್ವೇ ಸತಿ' ಈ ಭಾಗವನ್ನು ಹೇತುವಿನ ಘಟಕವನ್ನಾಗಿ ಹೇಗೆ ಪರಿಗ್ರಹಿಸಲಾಗುವುದು? ವಿಶೇಷಣವು ಅಸಿದ್ಧವಾದಲ್ಲಿ ವಿಶಿಷ್ಟವೂ ಅಸಿದ್ಧ. ಒಟ್ಟಿನಲ್ಲಿ ಹೇತ್ವಸಿದ್ಧಿ ಎಂದು ಪೃಚ್ಛಕನ ಭಾವ. 'ಸಂಶಯಕ್ಕೆ ಅವಕಾಶವಿಲ್ಲದಿರುವುದರಿಂದ' ಎಂದು ಉತ್ತರಿಸಿರುವರು. ಅಂದರೆ ಗೃಹಾಭಾವವು ಪ್ರತ್ಯಕ್ಷದಿಂದ ತಿಳಿದಿದೆ, ಜೀವಿತವನ್ನು ಜ್ಯೋತಿಶಾಸ್ತ್ರಾದಿಗಳಿಂದ ತಿಳಿದಿರುವನು. ಈ ಎರಡೂ ವಿಷಯಗಳು ಬೇರೇ ಪ್ರಮಾಣಗಳಿಂದ ವಿದಿತವಾಗಿರುವುದರಿಂದ, ಬದಿಕಿರುವನೋ ಮೃತನಾಗಿರುವನೋ ಎಂಬ ಸಂದೇಹವಿಲ್ಲ. ಆದುದರಿಂದ ಹೇತುವು ಸಂದಿಗ್ಧವಲ್ಲ ಎಂದು ಭಾವ.

2. ದೇವದತ್ತನನ್ನು ಕಾಣಲು ಬಂದ ವ್ಯಕ್ತಿಯು ದೇವದತ್ತನು ಮನೆಯಲ್ಲಿಯೇ ಇರುವನು ಎಂದು ತಿಳಿದಿರುವನು. ಹಾಗಾಗಿ ಆತನಿಗೆ ದೇವದತ್ತನ ಬಹಿರ್ಭಾವವು ಅಪ್ರಸಿದ್ಧ. ಆದುದರಿಂದ ಅಪ್ರಸಿದ್ಧವಾದುದನ್ನು ಸಾಧ್ಯವನ್ನಾಗಿಸಲು ಅವಕಾಶವಿಲ್ಲ ಎಂದು ಪ್ರಶ್ನೆಯ ಭಾವ.

3. ಕೇವಲವ್ಯತಿರೇಕ್ಯನುಮಾನದಲ್ಲಿ ಸಾಧ್ಯಾಪ್ರಸಿದ್ಧಿಯು ದೋಷವಲ್ಲ, 'ಜೀವಚ್ಛರೀರಂ ಸಾತ್ಮಕಂ ಚೇತನತ್ವಾತ್' ಇತ್ಯಾದಿ ಸ್ಥಳಗಳಲ್ಲಿ ಕಂಡಿದೆ ಎಂದು ಭಾವ.

ಇಲ್ಲಿ ಇಲ್ಲವೋ, ಆತನು ಬೇರೆಡೆ ಇರುವನು' ಎಂಬ ಸಾಮಾನ್ಯವ್ಯಾಪ್ತಿಯು ಉಪಪನ್ನವಾಗಿರುವುದರಿಂದಲೂ ಸಹ. ಆದುದರಿಂದಲೇ ಹೇಳಿದರು 'ಅನುಮಾಭೇದ ಏವ' ಎಂದು[1].

**ಉಪಮಿತಿಯು ಪೃಥಕ್ ಪ್ರಮಾಣವಲ್ಲ**

**ಸ್ಯಾದೇತತ್, ಪಕ್ಷಾನ್ತರಾಸಮ್ಭವಾದುಪಮಾನೇ ಗಾಂ ಪಕ್ಷೀಕೃತ್ಯ ತದ್ಗತಂ ಸಾದೃಶ್ಯಮನುಮೇಯಮ್ । ಗವಯಗತಂ ಚ ಸಾದೃಶ್ಯಂ ಲಿಙ್ಗಮಿತಿ ವಾಚ್ಯಮ್ । ತಥಾಚ ವ್ಯಧಿಕರಣತ್ವಾನ್ನಾನುಮಾನಮಿತಿ । ಮೈವಮ್ 'ಯೋ ಯತ್ಸದೃಶಃ ಸಃ ತತ್ಸದೃಶೋ ಯಥಾ ಯಮೋ ಯಮಾನ್ತರೇಣ' ಇತಿ ವ್ಯಾಪ್ತಿಸಮ್ಭವೇ ವೈಯಧಿಕರಣ್ಯಸ್ಯಾದೋಷತ್ವಾತ್ । ಗವಯಗತಸಾದೃಶ್ಯ-ಪ್ರತಿಯೋಗಿತ್ವಸ್ಯ ಲಿಙ್ಗತ್ವೇನಾಙ್ಗೀಕಾರಾದ್ವಾ । ಸದೃಶಾವೇವ ಯೇನ ಪ್ರಾಙ್ನೋಪಲಬ್ಧೌ ತಸ್ಯ ಕಥಮ್? ಇತಿ ಚೇನ್ನ । ಕೇವಲವ್ಯತಿರೇಕಿತ್ವೋ-ಪಪತ್ತೇಃ । ಅತ ಏವೋಕ್ತಮ್ 'ಅನುಮಾಭೇದ..' ಇತಿ । ಕಿಞ್ಚ ಸ್ವಕರತಲದ್ವಯಾದೌ ಸರ್ವೈರಪಿ ವ್ಯಾಪ್ತಿರ್ಗ್ರಹೀತ್ರೈವೇತಿ ಯತ್ಕಿಞ್ಚಿದೇತತ್ । ನೈಯಾಯಿಕೋದೀರಿತೋಪಮಾನಸ್ಯ ತ್ವನುಮಾನೇಽನ್ತರ್ಭಾವಃ ಸ್ಫುಟ ಏವೇತಿ ತದತ್ರ ನಾಶಙ್ಕಿತಮ್ । ಅನೇನ ಪ್ರತ್ಯಕ್ಷಾದಿವಿರೋಧವದ್ ಅರ್ಥಾಪತ್ತ್ಯಾದಿವಿರೋಧೋಽಪ್ಯೈಕ್ಯಾಗಮಸ್ಯ ಕುತೋ ನೋಚ್ಯತ ಇತ್ಯಾದಿ ಪರಿಹೃತಂ ಭವತಿ ।**

ಇದಾಗುತ್ತಿತ್ತು, ಮತ್ತೊಂದನ್ನು ಪಕ್ಷೀಕರಿಸಲು ಅಶಕ್ಯವಾದುದರಿಂದ ಉಪಮಾನದಲ್ಲಿ ಗೋವನ್ನು ಪಕ್ಷೀಕರಿಸಿ ಗೋವಿನಲ್ಲಿರುವ ಸಾದೃಶ್ಯವನ್ನು ಅನುಮಾನಿಸಬೇಕು. ಗವಯದಲ್ಲಿರುವ ಸಾದೃಶ್ಯವನ್ನು ಹೇತು ಎಂದು ಹೇಳಬೇಕು. ಹಾಗಾದಲ್ಲಿ (ಈ ಅನುಮಾನವು) ವೈಯ್ಯಧಿಕರಣ್ಯದಿಂದ (ರೂಪ

1. ಕೇವಲ ವ್ಯತಿರೇಕ ವ್ಯಾಪ್ತಿಯನ್ನು ಹೊಂದಿರುವ ಈ ಅನುಮಾನವು ಅನ್ನುಮಾ ವಿಶೇಷ, ಇಂತಹ ಅನುಮಾನದಲ್ಲಿ ಸಾಮಾನ್ಯವ್ಯಾಪ್ತಿಯಿಂದ ವಿಶೇಷವ್ಯಾಪ್ತಿಯನ್ನು ನಿಶ್ಚಯಗೊಳಿಸಿ ಕೊಳ್ಳಲಾಗುವುದು ಎಂದು ಭಾವ.

ದೋಷದಿಂದ ) ಯುಕ್ತವಾದುದರಿಂದ ಅನುಮಿತಿಯು ಪ್ರಾಪ್ತವಾಗದು[1]. ಹಾಗಲ್ಲ. 'ಯಾವುದು ಯಾವುದರ ಸದೃಶವೋ ಅದು ಅದರ ಸದೃಶ, ಹೇಗೆ ಅವಳಿ ಮಕ್ಕಳಲ್ಲಿ ಓರ್ವನು ಮತ್ತೊಬ್ಬನ ಸದೃಶನಾಗಿರುವನೋ ಹಾಗೆ' ಎಂದು ವ್ಯಾಪ್ತಿಯನ್ನು ಹೇಳಲು ಅವಕಾಶವಿರುವುದರಿಂದ ವೈಯಧಿಕರಣ್ಯವು ದೋಷವಾಗದಿರುವುದರಿಂದ. ಅಥವಾ ಗವಯಗತಸಾದೃಶ್ಯವನ್ನೇ ಪ್ರತಿಯೋಗಿತಾ ಸಂಬಂಧದಿಂದ ಹೇತುವನ್ನು ಒಪ್ಪಿರುವುದರಿಂದ (ಹೇತುವಿಗೆ ವೈಯಧಿಕರಣ್ಯವು ಇಲ್ಲ)[2]. ಯಾವ ವ್ಯಕ್ತಿಗೆ ಈ ಮೊದಲು ಸಾದೃಶ್ಯದ ಅರಿವೇ ಇಲ್ಲವೋ ಅಂತಹ ವ್ಯಕ್ತಿಗೆ ಹೇಗೆ ಎಂದೆನ್ನಲಾಗದು. ಕೇವಲ

---

1. ಕಾಡಿಗೆ ಹೋದ ವ್ಯಕ್ತಿಯೋರ್ವನು ಗವಯವನ್ನು (ಕಾಡು ಹಸುವನ್ನು) ನೋಡುವನು. ಆತನ ಸ್ಮರಣೆಗೆ ಬಂದ ಊರಿನ ಹಸುವಿನಲ್ಲಿರುವ ಈ ಗವಯದ ಸಾದೃಶ್ಯದ ಅರಿವು ಪ್ರಾಪ್ತವಾಗುವುದು 'ಅಯಂ ಗೋಸದೃಶಃ' ಎಂದು. ಇದನ್ನು ಉಪಮಿತಿ ಎಂದು ಕೆಲವು ವಾದಿಗಳು ತಿಳಿಸಿರುವರು. ಈ ಅರಿವನ್ನು 'ಗವಯಾನುಯೋಗಿಕ, ಗೋಪ್ರತಿಯೋಗಿಕ ಸಾದೃಶ್ಯಜ್ಞಾನ' ಎಂದು ವಿಶ್ಲೇಷಿಸುವರು. ಊರಿನ ಹಸುವಿನ ಸ್ಮರಣೆ ಮಾತ್ರವಿರುವ ಈ ಸಂದರ್ಭದಲ್ಲಿ, ಗೋವಿನಲ್ಲಿರುವ ಸಾದೃಶ್ಯರೂಪಧರ್ಮದ ಈ ಅರಿವನ್ನು ಪ್ರತ್ಯಕ್ಷಜನ್ಯ ಎಂದು ಹೇಳಲಾಗದು. ಪ್ರಕೃತದಲ್ಲಿ ಹಸುವಿಗೂ ಇಂದ್ರಿಯಕ್ಕೂ ಸನ್ನಿಕರ್ಷವಿರದಪ್ರಯುಕ್ತ. ಆಗಮವೂ ಇಲ್ಲ. ಇನ್ನು ಅನುಮಿತಿ ಎಂದು ಹೇಳಬೇಕು, ಅದೂ ಶಕ್ಯವಿಲ್ಲ. ಗವಯವನ್ನು ಪಕ್ಷೀಕರಿಸಿ ಗೋವಿನ ಸಾದೃಶ್ಯವನ್ನು ಅನುಮಾನಿಸಲು ಆಗದು, ಗವಯದಲ್ಲಿನ ಸಾದೃಶ್ಯದ ಅರಿವು ಪ್ರತ್ಯಕ್ಷದಿಂದಲೇ ಪ್ರಾಪ್ತವಾಗುವುದು ಗವಯವು ಸನ್ನಿಧಿಯಲ್ಲೇ ಇರುವುದರಿಂದ. ತನ್ನಿಮಿತ್ತ ಗೋವನ್ನೇ ಪಕ್ಷೀಕರಿಸಬೇಕು. 'ಹಸುವು ಗವಯದ ಸಾದೃವನ್ನು ಹೊಂದಿದೆ, ಗವಯವು ಗೋವಿನ ಸದೃಶವಾದುದರಿಂದ' ಎಂದು ಅನುಮಾನವನ್ನು ಒಪ್ಪಬೇಕು. ಅಂದರೆ ಗವಾನುಯೋಗಿಕ ಸಾದೃಶ್ಯವನ್ನು ಹೇತುವನ್ನಾಗಿ ಪರಿಗಣಿಸಬೇಕು. ಗವಾನುಯೋಗಿಕ ಸಾದೃಶ್ಯವು ಗವಯದಲ್ಲಿದೆ ಹೊರತಾಗಿ ಗೋವಿನಲ್ಲಿ ಇಲ್ಲ, ಆ ಪ್ರಯುಕ್ತ ವೈಯಧಿಕರಣ್ಯ ಎಂಬ ದೋಷದಿಂದ ಯುಕ್ತವಾಗಿ ಅನುಮಿತಿಜನಕವಾಗುವುದಿಲ್ಲ. ಆದುದರಿಂದ ಈ ಅರಿವನ್ನು ಉಪಮಾನ ಎಂಬ ಬೇರೇ ಪ್ರಮಾಣದಿಂದ ಜನ್ಯವಾದ ಉಪಮಿತಿ ಎಂದೇ ತಿಳಿಯಬೇಕು ಎಂದು ಪ್ರಶ್ನೆಯ ಭಾವ.

2. ಸಾದೃಶ್ಯ ಭೇದ ಮುಂತಾದ ಧರ್ಮಗಳನ್ನು ಅನುಯೋಗಿತಾ ಸಂಬಂಧದಿಂದ, ಪ್ರತಿಯೋಗಿತಾ ಸಂಬಂಧದಿಂದ ಉಭಯತರವೃತ್ತಿ ಎಂದು ಶಾಸ್ತ್ರಗಳಲ್ಲಿ ಒಪ್ಪಲಾಗಿದೆ. ಆದುದರಿಂದ ಗವಯದಲ್ಲೂ ಹಸುವಿನಲ್ಲೂ ಒಂದೇ ಆದ ಸಾದೃಶ್ಯವು ಇರಬಹುದು, ತನ್ನಿಮಿತ್ತ ವೈಯಧಿಕರಣ್ಯವು ಇಲ್ಲ ಎಂದು ಭಾವ.

ವ್ಯತಿರೇಕಾನುಮಾನದಿಂದ (ಸಾದೃಶ್ಯದ ಅರಿವು ) ಉಪಪನ್ನವಾಗುವದರಿಂದ[1]. ಆದುದರಿಂದಲೇ ಹೇಳಲಾಗಿದೆ '**ಅನುಮಾಭೇದ..**' ಎಂದು. ಮತ್ತೂ ಸಹ ತನ್ನ ಎರಡು ಕೈಗಳೇ ಮುಂತಾದವುಗಳಲ್ಲಿ ಎಲ್ಲರಿಂದಲೂ (ಸಾದೃಶ್ಯದ) ವ್ಯಾಪ್ತಿಯ ಅರಿವು ಪ್ರಾಪ್ತವಾಗಿರುವುದು ಎಂದು (ಈ ಸಂದೇಹವು) ದುರ್ಬಲವಾಗಿದೆ. ನ್ಯಾಯಾಯಿಕಾದಿಗಳು ಹೇಳುವ ಉಪಮಾನವು ಅನುಮಾನದಲ್ಲಿ ಅಂತರ್ಭಾವಗೊಳ್ಳುವುದು ಎನ್ನುವುದು ಸ್ಫುಟವಾಗಿದೆ ಎಂದು ಇಲ್ಲಿ ಆಶಂಕಿಸಲಾಗಿಲ್ಲ[2]. ಇದರಿಂದ (ಅರ್ಥಾಪತ್ತಿ ಮತ್ತು ಉಪಮಾನವನ್ನು ಪ್ರತ್ಯೇಕ ಪ್ರಮಾಣಗಳು ಅಲ್ಲ ಎಂದು ಹೇಳಿದ್ದರಿಂದ) ಪ್ರತ್ಯಕ್ಷಾದಿಗಳ ವಿರೋಧದಂತೆ ಅರ್ಥಾಪತ್ಯಾದಿಗಳ ವಿರೋಧವನ್ನು ಐಕ್ಯಾಗಮಗಳಿಗೆ ಏಕೆ ತಿಳಿಸಲಿಲ್ಲ ಈ ಮುಂತಾದವುಗಳನ್ನು (ಪ್ರಶ್ನೆಗಳನ್ನು) ಪರಿಹರಿಸಿದಂತಾಯಿತು.

**ಆಗಮದ ವಿಭಾಗ**

**ಆಗಮೋ ದ್ವಿವಿಧೋ ಜ್ಞೇಯೋ ನಿತ್ಯೋऽನಿತ್ಯಸ್ತಥೈವ ಚ ॥**

ಆಗಮವು ಎರಡು ವಿಧ, ನಿತ್ಯ ಮತ್ತು ಅನಿತ್ಯ ಎಂದು ತಿಳಿಯುವುದು.

**ಅನುಮಾನಾನನ್ತರಪ್ರಾಪ್ತಸ್ಯಾऽಗಮಸ್ಯ ವಿಭಾಗಮಾಹ 'ಆಗಮಃ' ಇತಿ । ಅಪೌರುಷೇಯಃ ಪೌರುಷೇಯಶ್ಚೇತ್ಯರ್ಥಃ । ತಥೈವೇತ್ಯನೇನ ಯಥಾ ಪ್ರತ್ಯಕ್ಷಮನುಮಾನಂ ವಾ ಪ್ರಮಾಣಮನ್ಯತ್ರಾನನ್ತರ್ಭೂತಂ ಚ**

1. ಯಾವುದು ಯಾವದರ ಸದೃಶವಲ್ಲವೋ ಅದು ಅದರ ಸದೃಶವಾಗಲಾರದು ಎಂದು ವ್ಯತಿರೇಕವ್ಯಾಪ್ತಿಯು ಸಂಭಾವಿತವಾಗಿದೆ ಎಂದು ಭಾವ.

2. ಅರಣ್ಯ ವಾಸಿ ಪುರುಷನೋರ್ವನು ಗ್ರಾಮಸ್ಥ ಪುರುಷನನ್ನು ಉದ್ದೇಶಿಸಿ ಹೇಳುವನು 'ಗವಯವು ಗೋವಿನ ಸದೃಶವಾಗಿದೆ' ಎಂದು. ಗ್ರಾಮದಲ್ಲಿನ ಪುರುಷನು ಅರಣ್ಯಕ್ಕೆ ಹೋದಾಗ ಗೋವಿನಂತಿರುವ ವಸ್ತು ಒಂದನ್ನು ಕಾಣುವನು. ಅರಣ್ಯಕ ಪುರುಷನ ವಚನವು ಸ್ಮರಣೆಗೆ ಬರುವುದು, ಆಗ ಇದು ಗೋವಿನ ಸದೃಶವಾಗಿರುವದರಿಂದ 'ಇದು ಗವಯಪದದಿಂದ ವಾಚ್ಯ' ಎಂಬ ಅರಿವು ಪ್ರಾಪ್ತವಾಗುವುದು. ಈ ಅರಿವನ್ನು ಉಪಮಿತಿ ಎಂದು ನ್ಯಾಯಾಯಿಕರ ಅಭಿಮತ. ಈ ವಾಚ್ಯ-ವಾಚಕಭಾವ ಸಂಬಂಧದ ಅರಿವು, ಅನುಮಾನದಿಂದ ಎನ್ನುವದು ಸ್ಫುಟ, 'ಇದು ಗವಯ ಶಬ್ದದಿಂದ ವಾಚ್ಯ' 'ಗವಯವು ಗೋಸದೃಶವಾಗಿದೆ ಎಂದು ಅರಣ್ಯಕನು ಉಪದೇಶಿಸಿರುವುದರಿಂದ' ಎಂದು ಊಹಿಸುವುದು ಸುಲಭವೇದ್ಯವಾಗಿದೆ ಎಂದು ಭಾವ.

ತಥಾಽಗಮೋಽಪೀತ್ಯಾಚಷ್ಟೇ । ತಥಾಹಿ- ನ ತಾವದಾಗಮೋ ನ ಬೋಧಕಃ, ಅನುಭವವಿರೋಧಾದ್ ವ್ಯವಹಾರವಿಲೋಪಪ್ರಸಙ್ಗಾಚ್ಚ । ನಾಪಿ ವಿಪರೀತಬೋಧಕೋ, ಬಾಧಕಾಭಾವಾತ್ । ಅನ್ಯತ್ರಾನ್ತರ್ಭಾವೋಽಪಿ, ಕಿಂ ಕರ್ತುಂ ಶಕ್ಯತೇತ್ಯೇವ ವಾ ಕರ್ತವ್ಯ, ಉತ ಪೃಥಕ್ತ್ವೇ ಬಾಧಕ- ಸದ್ಭಾವಾದ್ ಅಥವಾ ತತ್ಸಾಧಕಾಭಾವಾತ್ । ನಾಽದ್ಯಃ- ಪ್ರತ್ಯಕ್ಷಸ್ಯಾಪ್ಯನು-ಮಾನೇಽನ್ತರ್ಭಾವಯಿತುಂ ಶಕ್ಯತ್ವಾತ್ । ಫಲವೈಜಾತ್ಯಾದೇಃ ಅವಾನ್ತರಭೇದತ್ವೇನೋಪಪತ್ತೇಃ । ನ ದ್ವಿತೀಯಃ- ತದದರ್ಶನಾತ್ । ಕಲ್ಪನಾಗೌರವಂ ಬಾಧಕಮಿತಿ ಚೇನ್ನ, ಪ್ರತ್ಯಕ್ಷೇಽಪಿ ಸಮಾನತ್ವಾತ್ । ಸಾಮಗ್ರೀಭೇದಾದೇರತ್ರಾಪಿ ವಿದ್ಯಮಾನತ್ವಾತ್ । ಅತ ಏವ ನ ತೃತೀಯಃ ।

ಅನುಮಾನದ (ಕಥನದ) ನಂತರದಲ್ಲಿ ಪ್ರಾಪ್ತವಾದ ಆಗಮದ ವಿಭಾಗವನ್ನು ಹೇಳುತ್ತಾರೆ 'ಆಗಮಃ' ಎಂದು. ಅಪೌರುಷೇಯ ಮತ್ತು ಪೌರುಷೇಯ ಎಂದು ಭಾವ. ತಥೈವ ಎನ್ನುವುದರಿಂದ ಹೇಗೆ ಪ್ರತ್ಯಕ್ಷಾನುಮಾನಗಳು ಬೇರೆಡೆ ಅಂತರ್ಭಾವಗೊಳ್ಳದ ಪ್ರಮಾಣಗಳೋ ಹಾಗೆಯೇ ಆಗಮವೂ ಸಹ ಎಂದು ತಿಳಿಸುತ್ತಾರೆ. ಹೇಗೆಂದರೆ- ಆಗಮವಂತೂ ಅಬೋಧಕವಲ್ಲ, ಅನುಭವಕ್ಕೆ ವಿರುದ್ಧವಾದುದರಿಂದ ಮತ್ತು ವ್ಯವಹಾರದ ಲೋಪವಾಗುವ ಪ್ರಸಂಗವು ಪ್ರಾಪ್ತವಾಗುವುದರಿಂದಲೂ. ಇನ್ನು ವಿರುದ್ಧಬೋಧಕವೂ ಅಲ್ಲ, ಬಾಧಕವು ಇಲ್ಲದಿರುವುದರಿಂದ[1]. (ಆಗಮಪ್ರಮಾಣಕ್ಕೆ) ಬೇರೆಡೆಯಲ್ಲಿ (ಬೇರೇ ಪ್ರಮಾಣದಲ್ಲಿ) ಅಂತರ್ಭಾವವನ್ನು ಮಾಡಲು (ಹೇಳಲು) ಶಕ್ಯವಿದೆ ಆದುದರಿಂದಲೇ ಮಾಡಲಾಗುವುದೋ ಅಥವಾ ಬಾಧಕವಿರುವುದರಿಂದಲೋ ಅಥವಾ ಅದಕ್ಕೆ (ಅಂತರ್ಭಾವವನ್ನು ಹೇಳುವದಕ್ಕೆ) ಸಾಧಕ (ಪ್ರಮಾಣವು) ಇರುವುದರಿಂದಲೋ. ಮೊದಲ ಪಕ್ಷವು (ಅಂತರ್ಭಾವವನ್ನು ಹೇಳಲು ಶಕ್ಯವಿದೆ

1. ಆಗಮವು ಅಪ್ರಮಾಣವಲ್ಲ ಅಬೋಧಕತ್ವ ಮತ್ತು ವಿಪರೀತ ಬೋಧಕತ್ತವು ಇಲ್ಲದಿರುವುದರಿಂದ, ಆದುದರಿಂದ ಪ್ರಮಾಣ ಎಂದು ತಿಳಿಸಿ, ಶಬ್ದಗಳಲ್ಲಿ ಭೋದಕತ್ತವು ಇದೆ ಎನ್ನುವದನ್ನು ವಿಶದಪಡಿಸುವರು. ಶಬ್ದಗಳೆಲ್ಲವೂ ಅಬೋಧಕಗಳಲ್ಲ 'ಈ ಶಬ್ದದಿಂದ ಈ ರೀತಿಯಾಗಿ ಅರಿವು ಪ್ರಾಪ್ತವಾಗುವುದು' ಎಂಬ ಅನುಭವವು ಎಲ್ಲರಿಗೂ ಇರುವುದರಿಂದ. ಎಲ್ಲ ಶಬ್ದವು ಅಬೋಧಕವಾದರೇ, ಹಿರಿಯರ ಅಪ್ಪಣೆ ಮತ್ತು ಅವರ ಅಪ್ಪಣೆಯಂತೆ ಕಿರಿಯರ ವ್ಯವಹಾರಗಳು ಲೋಕದಲ್ಲಿ ನಡೆಯದೇ ಹೋದೀತು ಎಂದು ಭಾವ.

ಆದುದರಿಂದ ಪ್ರಮಾಣಾಂತರದಲ್ಲಿ ಅಂತರ್ಭಾವವನ್ನು ಹೇಳುತ್ತೇವೆ ಎನ್ನುವ ಪಕ್ಷವು) ಸರಿಯಾಗದು. ಪ್ರತ್ಯಕ್ಷಕ್ಕೂ ಅನುಮಾನದಲ್ಲಿ ಅಂತರ್ಭಾವವನ್ನು ಹೇಳಲು ಶಕ್ಯವಿರುವುದರಿಂದ. ಫಲದಲ್ಲಿನ ವಿಭಿನ್ನತೆ ಮುಂತಾದವುಗಳಿಗೆ ಅವಾಂತರ ಭೇದದಿಂದ ಉಪಪತ್ತಿಯನ್ನು ಹೇಳಲು ಶಕ್ಯವಿರುವುದರಿಂದ[1]. ಎರಡನೆಯ ಪಕ್ಷವೂ (ಈ ಪ್ರಮಾಣಗಳು ಪ್ರತ್ಯೇಕವಾದವು ಎಂದಲ್ಲಿ, ಬಾಧಕಪ್ರಮಾಣವಿದೆ ಎನ್ನುವುದೂ) ತರವಲ್ಲ. ಅದು (ಬಾಧಕ ಪ್ರಮಾಣವು) ಕಂಡಿಲ್ಲವಾದುದರಿಂದ. ಕಲ್ಪನಾಗೌರವವೇ ಬಾಧಕ ಎಂದು ಹೇಳುವುದು ತರವಲ್ಲ, ಪ್ರತ್ಯಕ್ಷದ ವಿಷಯದಲ್ಲೂ ಇದು ಸಮಾನವಾದುದರಿಂದ[2]. ಸಾಮಗ್ರೀ

1. 'ಪ್ರತ್ಯಕ್ಷವು ಅನುಮಾನದಿಂದ ಭಿನ್ನವಲ್ಲ, ಎರಡೂ ಅರಿವಿಗೆ ಕಾರಣಗಳಾದುದರಿಂದ, ಪ್ರತ್ಯೇಕವಾದ ಎರಡು ಅನುಮಾನಗಳಂತೆ' ಎನ್ನುವ ಅನುಮಾನದಿಂದ ಪ್ರತ್ಯಕ್ಷಕ್ಕೆ ಅನುಮಾನದಲ್ಲಿ ಅಂತರ್ಭಾವವನ್ನು ಹೇಳಲು ಶಕ್ಯವಿದೆ, ಎಂಬ ಮಾತ್ರಕ್ಕೆ ಅನುಮಾನದಲ್ಲಿ ಅಂತರ್ಭಾವವನ್ನು ಹೇಳಲು ಶಕ್ಯವಿದೆಯೇ? ಇಲ್ಲ ಎನ್ನುವುದಾದಲ್ಲಿ ಆಗಮಕ್ಕೂ ಹೇಳಬಾರದು. ಅನುಮಾನಗಳಿಂದ ಪ್ರಾಪ್ತವಾಗುವ ಅರಿವು ಪರೋಕ್ಷಾನುಭವ. ಪ್ರತ್ಯಕ್ಷದಿಂದ ಪ್ರಾಪ್ತವಾಗುವ ಅರಿವು ಅಪರೋಕ್ಷಾನುಭವ. ಹಾಗಾಗಿ ಪ್ರಮಾಣಗಳಿಂದ ಪ್ರಾಪ್ತವಾಗುವ ಫಲದಲ್ಲಿ- ಅರಿವಿನಲ್ಲಿ ವಿಭಿನ್ನತೆಯು ಇರುವುದರಿಂದ ಎರಡೂ ಪ್ರಮಾಣಗಳನ್ನು ಪೃಥಕ್ ಪ್ರಮಾಣಗಳು ಎಂದು ವ್ಯವಹರಿಸಲಾಗುವುದು ಎನ್ನುವದು ತರವಲ್ಲ. ಹಾಗೆಯೇ ಅನುಮಿತಿಯಾದರೋ ವ್ಯಾಪ್ತ್ಯಾದಿ ಸ್ಮರಣಾದಿಗಳ ಸಹಾಯದಿಂದ ಪ್ರಾಪ್ತವಾಗುವುದು, ಪ್ರತ್ಯಕ್ಷವಾದರೋ ಇಂದ್ರಿಯಾರ್ಥ ಸನ್ನಿಕರ್ಷಾದಿಗಳಿಂದ ಎಂದು, ಆ ಪ್ರಮಾಣಗಳಿಂದ ಪ್ರಾಪ್ತವಾಗುವ ಅರಿವಿನ ಉತ್ಪತ್ತಿಯಲ್ಲಿನ ವಿಭಿನ್ನತೆಯನ್ನು ಪ್ರತ್ಯಕ್ಷಾನುಮಾನಗಳು ಪೃಥಕ್ ಪ್ರಮಾಣಗಳು ಎಂದು ಹೇಳಲು ಆಗದು. ಅನುಮಾನದಲ್ಲಿನ ಅವಾಂತರ ಭೇದದಿಂದಲೇ ಅವುಗಳನ್ನು ಸಂಯೋಜಿಸಬಹುದು. ಸಾಧನಾನುಮಾನಕ್ಕೂ ಪರಿಶೇಷಾನುಮಾನಕ್ಕೂ ಇರುವ ವಿಭಿನ್ನತೆಯಂತೆ, ಈ ಹಿಂದೆ ತಿಳಿಸಿದಂತೆ ಅರ್ಥಾಪತ್ತಿ ಉಪಮಾನಗಳೂ ಅನುಮಾನದ ಪ್ರಭೇದವಾದುದರಿಂದ ಅವುಗಳಂತೆ ಈ ವಿಭಿನ್ನತೆಯನ್ನೂ ಸಂಯೋಜಿಸ ಬಹುದು. ಹಾಗೆಯೇ ಬೇರೆ ಬೇರೇ ಇಂದ್ರಿಯಗಳಿಂದ ಪ್ರಾಪ್ತವಾಗುವ ಗಂಧ, ರಸ ಮುಂತಾದವುಗಳ ಅರಿವಿನಲ್ಲಿನ ಭೇದಗಳನ್ನು ಹೇಗೆ ಪ್ರತ್ಯಕ್ಷದಲ್ಲಿ ಒಪ್ಪಲಾಗುವುದೋ ಹಾಗೆ ಅನುಮಾನದಲ್ಲಿಯೂ ವಿಭಿನ್ನತೆಯನ್ನು ಒಪ್ಪಿ ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಪ್ರತ್ಯೇಕ ಪ್ರಮಾಣಗಳು ಎಂದು ಒಪ್ಪದೇ ಇರುವ ಪ್ರಸಂಗವು ಪ್ರಾಪ್ತವಾದೀತು ಎಂದು ಭಾವ.

2. ಅರಿವಿನಲ್ಲಿ ಎರಡೇ ವಿಧ. ಅಪರೋಕ್ಷ,ಪರೋಕ್ಷ ಎಂದು. ಪರೋಕ್ಷಜ್ಞಾನಕ್ಕೆ ಅನುಮಾನ, ಅಪರೋಕ್ಷಜ್ಞಾನಕ್ಕೆ ಪ್ರತ್ಯಕ್ಷ ಹೀಗಿರುವಾಗ ಅಧಿಕವಾದ ಮೂರನೆಯ ಪ್ರಮಾಣವನ್ನು ಒಪ್ಪುವುದು ಗೌರವ ಎಂದಲ್ಲಿ ಅನುಮಾನದಲ್ಲಿನ ಪ್ರಭೇದದಿಂದಲೇ ಪರೋಕ್ಷ ಅಪರೋಕ್ಷ ವಸ್ತುಗಳ ಅರಿವನ್ನು ಹೊಂದಿಸಲು ಶಕ್ಯವಿರುವಾಗ ಅಧಿಕವಾದ ಪ್ರತ್ಯಕ್ಷ ರೂಪ ಪ್ರಮಾಣದ ಅಗತ್ಯವೇನು? ಎಂದು ಪ್ರತ್ಯಕ್ಷ ವಿಷಯದಲ್ಲೂ ಪ್ರಶ್ನಿಸಲು ಅವಕಾಶವಿದೆ ಎಂದು ಭಾವ.

ಭೇದವು ಇಲ್ಲೂ (ಆಗಮದಲ್ಲೂ) ಇರುವುದರಿಂದ[1]. ಆದುದರಿಂದಲೇ (ಪ್ರತ್ಯಕ್ಷಸಮಾನವಾದ ಯೋಗಕ್ಷೇಮಗಳು ಆಗಮಕ್ಕೂ ಇರುವುದರಿಂದ) ಮೂರನೆಯ ಪಕ್ಷವೂ ತರವಲ್ಲ (ಪೃಥಕ್ ಪ್ರಮಾಣವಲ್ಲ ಎಂದು ಸಾಧಿಸಲು ಸಾಧಕ ಪ್ರಮಾಣವಿದೆ ಎನ್ನುವ ಪಕ್ಷವು).

**ಕಿಞ್ಚಾನ್ತರ್ಭಾವೋऽಪಿ ವಕ್ತೃಜ್ಞಾನಾನುಮಾಪಕತ್ವೇನ ವಕ್ತವ್ಯಃ । ನ ಚಾಪೌರುಷೇಯಸ್ಯ ಮೂಲಭೂತಂ ಜ್ಞಾನಮಸ್ತಿ । ಸಮರ್ಥಿತಂ ಚಾಪೌರುಷೇಯತ್ವಂ ವೇದಸ್ಯ । ಅಪೌರುಷೇಯಸ್ಯ ಪೃಥಕ್‌ಪ್ರಮಾಣತ್ವೇऽಪಿ ಪೌರುಷೇಯಸ್ಯಾನುಮಾನತ್ವಮೇವೇತಿ ಪ್ರಾಭಾಕರಾಃ । ತನ್ನಿರಾಸರ್ಥಮಪಿ ಉಕ್ತಮ್ 'ತಥೈವ' ಇತಿ । ಯಥಾ ನಿತ್ಯಸ್ತಥಾ ಅನಿತ್ಯೋऽಪೀತ್ಯರ್ಥಃ । ತಥಾಹಿ- ಪೌರುಷೇಯವಾಕ್ಯಸ್ಥಾನಿ ಪದಾನಿ ಅನ್ವಿತಾಭಿಧಾನಶಕ್ತಿಮನ್ತಿ ನ ವೇತಿ ವಾಚ್ಯಮ್ । ಆದ್ಯೇ ಕಥಂ ನಾऽಗಮತ್ವಮ್? ದ್ವಿತೀಯೇ ವೇದಸ್ಯಾಪಿ ಕಥಮಾಗಮತ್ವಂ? ಪದಾನಾಮಭೇದಾತ್ ।**

ಮತ್ತೂ ಸಹ (ಆಗಮಕ್ಕೆ ಅನುಮಾನದಲ್ಲಿ) ಅಂತರ್ಭಾವವನ್ನೂ ಸಹ ವಕ್ತೃಜ್ಞಾನದ ಅನುಮಾಪಕವಾದುದರಿಂದ ಎಂದು ಹೇಳಬೇಕು[2]. (ಆದರೆ) ಅಪೌರುಷೇಯವಾದ ವೇದಕ್ಕೆ ಮೂಲಭೂತವಾದ ಜ್ಞಾನವು ಇರುವುದಿಲ್ಲ.

---

1. ಪ್ರತ್ಯಕ್ಷದ ಅರಿವು ಪ್ರಾಪ್ತವಾಗಲು ಸಾಮಗ್ರೀ ಭೇದವಿದೆ. ಇಂದ್ರಿಯಾರ್ಥ ಸನ್ನಿಕರ್ಷ ಇತ್ಯಾದಿಗಳ ಅಗತ್ಯವಿದೆ. ಅನುಮಿತಿಯಲ್ಲಾದರೋ ವ್ಯಾಪ್ತಿಸ್ಮರಣೆ ಮುಂತಾದ ಸಾಮಗ್ರಿಗಳ ಅಗತ್ಯವಿದೆ ಹೀಗಾಗಿ ಪ್ರಮಾಣಗಳಲ್ಲಿ ಭೇದ ಎಂದು ಹೇಳುವುದು ತರವಲ್ಲ. ಆಗಮದಲ್ಲೂ ಶಬ್ದ ಮತ್ತು ಶಕ್ಯವಾದ ಪದಾರ್ಥಕ್ಕೂ ಇರುವ ಸಂಬಂಧದ ಸ್ಮರಣೆ ಮುಂತಾದ ಸಾಮಗ್ರೀ ಭೇದವಿರುವುದರಿಂದ ಪ್ರತ್ಯಕ್ಷಸಮಾನವಾದ ಪೃಥಕ್ ಪ್ರಮಾಣದ ಸ್ಥಾನವನ್ನು ಒಪ್ಪಬೇಕು ಎಂದು ಭಾವ.

2. ಹೇಗೆ ಧೂಮವು ವಹ್ನಿಯ ಅನುಮಾಪಕವೋ ಹಾಗೆ ವಾಕ್ಯವೂ ವಕ್ತೃವಿನ ಜ್ಞಾನದ ಅನುಮಾಪಕ. 'ಗಾಮಾನಯ' ಎಂದು ಹೇಳಿದ ಈ ವ್ಯಕ್ತಿಯು ಗವಾನಯನಕ್ರಿಯೆಯನ್ನು ಅಭಿಮತಿಸಿರುವನು, ಇಂತಹ ಅಭಿಪ್ರಾಯವನ್ನು ಹೊಂದಿದ ನಾನೂ ಈ ವಿಶಿಷ್ಟವಾದ ಶಬ್ದವನ್ನೇ ಪ್ರಯೋಗಿಸುವುದರಿಂದ' ಎಂದು ಭಾವ.

ವೇದಕ್ಕೆ ಅಪೌರುಷೇಯತ್ವವನ್ನು (ಈ ಹಿಂದೆಯೇ) ಸಾಧಿಸಲಾಗಿದೆ[1]. ಅಪೌರುಷೇಯವಾದದ್ದಕ್ಕೆ (ವೇದಕ್ಕೆ ಮಾತ್ರ) ಪ್ರತ್ಯೇಕ ಪ್ರಾಮಾಣ್ಯವು ಇದ್ದರೂ ಪೌರುಷೇಯವಾದುದಕೆ (ಸ್ಮೃತಿ ಮುಂತಾದವುಗಳಿಗೆ ಹಾಗೂ ಲೋಕವ್ಯವಹಾರಗಳಲ್ಲಿರುವ ವಾಕ್ಯಗಳಿಗೆ) ಅನುಮಾನತ್ವವೇ ಎಂದು (ಒಪ್ಪುವರು) ಪ್ರಾಭಾಕರರು[2]. ಅದನ್ನು (ಪ್ರಾಭಾಕರರ ವಾದವನ್ನು) ನಿರಾಕರಿಸಲು ಹೇಳುವರು 'ತಥೈವ' ಎಂದು. ಹೇಗೆ ನಿತ್ಯವಾದುದು (ಪ್ರತ್ಯೇಕ ಪ್ರಮಾಣವೋ) ಹಾಗೆಯೇ ಅನಿತ್ಯವಾದುದೂ ಸಹ ಎಂದು ಭಾವ. ಹೇಗೆಂದರೆ- ಪೌರುಷೇಯವಾಕ್ಯಗಳಲ್ಲಿರುವ ಪದಗಳಿಗೆ ಅನ್ವಿತಾಭಿಧಾನತ್ವವು[3] ಇದೆಯೋ ಇಲ್ಲವೋ? ಮೊದಲ ಪಕ್ಷದಲ್ಲಿ (ಅನ್ವಿತಾಭಿಧಾನತ್ವವು ಇದೆ ಎನ್ನುವ ಪಕ್ಷದಲ್ಲಿ) ಲೌಕಿಕವಾಕ್ಯಕ್ಕೆ ಆಗಮತ್ವವು ಏಕೆ ಇಲ್ಲ[4]? ಎರಡನೆಯ ಪಕ್ಷದಲ್ಲಿ

---

1. ಲೌಕಿಕವಾಕ್ಯದಲ್ಲಾದರೋ ಪದ-ಪದಾರ್ಥ ಸಂಬಂಧ ಮತ್ತು ಆಕಾಂಕ್ಷಾದಿಗಳು ಇರಲು ವಾಕ್ಯದ ವಕ್ತೃವಿನ ಜ್ಞಾನವೇ ಮೂಲವೆಂದು ಹೇಳಲು ಅವಕಾಶವಿದೆ. ಆದುದರಿಂದ ಕಥಂಚಿತ್ ಲೌಕಿಕವಾಕ್ಯಗಳನ್ನು ಅನುಮಾನದಲ್ಲಿ ಅಂತರ್ಭಾವಗೊಳಿಸಿದರೂ, ವೈದಿಕವಾಕ್ಯಕ್ಕೆ ಈ ರೀತಿಯಲ್ಲಿ ವಕ್ತೃವಿನ ಜ್ಞಾನಮೂಲವನ್ನು ಹೇಳಲು ಶಕ್ಯವಿಲ್ಲ, ವೇದಗಳು ಅಪೌರುಷೇಯ ವಾದುದರಿಂದ, ಶಬ್ದವು ಅನುಮಾನದಲ್ಲಿ ಅಂತರ್ಭೂತ ಎಂದು ಸಾಧಿಸುವ 'ವಕ್ತೃಜ್ಞಾನಾನು-ಮಾಪಕತ್ವ' ಎಂಬುವ ಹೇತುವೇ ಅಪೌರುಷೇಯಾಗಮದಲ್ಲಿ ಇಲ್ಲ ಎಂದು ಭಾವ.

2. ಲೌಕಿಕವಾಕ್ಯಗಳಲ್ಲಿ ಪದ-ಪದಾರ್ಥಸಂಬಂಧಾದಿಗಳನ್ನು ವಕ್ತೃವಿನ ಜ್ಞಾನಮೂಲದಿಂದ ಎಂದು ಊಹಿಸಲು ಅವಕಾಶವಿದೆ ಆದುದರಿಂದ ಲೌಕಿಕವಾಕ್ಯಗಳನ್ನು ಅನುಮಾನದಲ್ಲಿ ಅಂತರ್ಭಾವಗೊಳಿಸಲಾಗುವುದು, ವೈದಿಕವಾಕ್ಯಗಳಿಗೆ ವಕ್ತೃವು ಇಲ್ಲದಿರುವುದರಿಂದ ಅವುಗಳನ್ನು ಮಾತ್ರ ಪ್ರತ್ಯೇಕ ಪ್ರಮಾಣ ಎಂದು ಒಪ್ಪಲಾಗುವುದು ಎಂದು ಪ್ರಾಭಾಕರರು ವಾದಿಸುವರು ಎಂದು ಭಾವ.

3. ಪ್ರಾಭಾಕರರು ಅನ್ವಿತಾಭಿಧಾನವಾದಿಗಳು. 'ಗಾಂ' ಎನ್ನುವ ಶಬ್ದವು ಸಾಸ್ನಾದಿಗಳನ್ನು ಹೊಂದಿದ ಪದಾರ್ಥವಿಶೇಷವನ್ನು ತಿಳಿಸುವುದು. ಆನಯ ಎನ್ನುವ ಶಬ್ದವು ಆನಯನ ಕ್ರಿಯೆಯನ್ನು ತಿಳಿಸುವುದು. ಈ ಎರಡಕ್ಕೂ ಇರುವ ಅನ್ವಯ-ಸಂಬಂಧವನ್ನು ಶಬ್ದಬೋಧಿತ ಪದಾರ್ಥಗಳು ತಿಳಿಸುವವು. ಅನ್ಯಶಾಸ್ತ್ರಕಾರರು ಒಪ್ಪಿರುವಂತೆ ಶಬ್ದವೇ ಪದಾರ್ಥವನ್ನು ಇತರ ಪದಾರ್ಥದೊಡನೆಯಿರುವ ಸಂಬಂಧವನ್ನೂ ತಿಳಿಸುತ್ತದೆ ಎಂಬುವದನ್ನು ಪ್ರಾಭಾಕರರು ಒಪ್ಪುವದಿಲ್ಲ. ಈ ಅನ್ವಿತಾಭಿಧಾನತ್ವವು ಲೌಕಿಕವಾಕ್ಯದಲ್ಲಿನ ಶಬ್ದಗಳಿಗೆ ಇದೆಯೋ ಇಲ್ಲವೋ ಎಂದು ಪ್ರಶ್ನೆಯ ಭಾವ.

4. ವೈದಿಕವಾಕ್ಯಗಳಂತೆ ಲೌಕಿಕವಾಕ್ಯಗಳೂ ಸಹ ಅನ್ವಯ ಬೋಧಕವಾದುದರಿಂದ ವೈದಿಕವಾಕ್ಯಗಳಂತೆ ಸ್ವತಂತ್ರಪ್ರಮಾಣವಾಗಲು ಏನು ಬಾಧಕ? ಎಂದು ಭಾವ.

(ಅನ್ವಯಬೋಧಕಗಳಾಗಿಲ್ಲ ಎನ್ನುವ ಪಕ್ಷದಲ್ಲಿ) ವೇದಕ್ಕಾದರೂ ಆಗಮತ್ವವು ಹೇಗೆ? ಪದಗಳಲ್ಲಿ ಭೇದವಿಲ್ಲದಿರುವುದರಿಂದ[1].

**ಅಥೋಚ್ಯೇತ- ಯದ್ಯಪಿ ಪುರುಷಪ್ರಯುಕ್ತಾನಾಂ ಪದಾನಾಮ್ ಅನ್ವಿತಾಭಿಧಾನಸಾಮರ್ಥ್ಯಮಸ್ತಿ । ತಥಾಽಪಿ ಪ್ರಾಯೇಣ ಪುರುಷ-ವಚಸಾಮ್ ಅನೃತಭೂಯಿಷ್ಠತ್ವೇನ ಅನ್ವಿತಾರ್ಥತ್ವಶಙ್ಕಯಾಽನ್ವಯೋ ನ ನಿಶ್ಚೀಯತ ಇತಿ । ಏವಂ ತರ್ಹಿ ಶಬ್ದೋತ್ಥಾಪಿತಸ್ಯಾಪ್ಯರ್ಥಸ್ಯ ವ್ಯಭಿಚಾರೇಣ ವೇದೇಽಪಿ ಶಙ್ಕಾ ಸಮ್ಭವತ್ಯೇವೇತ್ಯನ್ವಯೋ ನ ನಿಶ್ಚೀಯೇತ? ತತ್ರಾಪೌರುಷೇಯತಯಾ ಶಙ್ಕಾನಿವೃತ್ತಿವದತ್ರಾಪ್ಯಾಪ್ತೋಕ್ತತ್ವಾದಿನಾ ಶಙ್ಕಾನಿವೃತ್ತಿರ್ಭವಿಷ್ಯತಿ । ತಥಾ ಚ ಶಬ್ದಾದೇವಾನ್ವಯನಿಶ್ಚಯೋಽ-ಪ್ರಾಮಾಣ್ಯಶಙ್ಕಾನಿವೃತ್ತಿಮಾತ್ರಮುಪಾಯಾನ್ತರೇಣೇತಿ ಲೋಕವೇದಯೋಃ ಸಮಾನಮೇವೇತಿ । ಏತೇನ ಯದ್ 'ಋಗಾದ್ಯಾಃ' ಇತ್ಯುಕ್ತಂ ತದುಪಪನ್ನಂ ಭವತಿ ।**

ನಂತರದಲ್ಲಿ (ಕೆಲವರು) ಹೇಳುವರು– ವಸ್ತುತಃ ಪುರುಷರು ಪ್ರಯೋಗಿಸಿದ ಪದಗಳಿಗೆ ಅನ್ವಿತಾಭಿಧಾನದ ಸಾಮರ್ಥ್ಯವು ಇದೆ. ಆದರೂ ಸಹ ಪುರುಷರ ಮಾತು ಅನೃತಭೂಯಿಷ್ಠವಾದುದರಿಂದ ಅನ್ವಿತಾರ್ಥದಲ್ಲಿ ಸಂದೇಹಕ್ಕೆ ಎಡೆಯಿರುವುದರಿಂದ ಅನ್ವಯವು ನಿಶ್ಚಯವಾಗಲಾರದು ಎಂದು[2]. ಹಾಗಾದಲ್ಲಿ ಶಬ್ದದಿಂದ ಉತ್ಪನ್ನವಾದ ಅರ್ಥಕ್ಕೆ ವ್ಯಭಿಚಾರವು ಕಂಡಿರುವುದರಿಂದ (ಅದೇ ಶಬ್ದಗಳು ವೇದದಲ್ಲೂ ಇರುವುದರಿಂದ) ವೇದವಚನಗಳಲ್ಲೂ (ಇದೇ ತರಹದ) ಶಂಕೆಗೆ ಅವಕಾಶವಿರುವುದರಿಂದ ಅನ್ವಯವು (ವೇದದಲ್ಲೂ) ನಿಶ್ಚಯವಾಗದೇ ಹೋಗಲಿ? ಅಲ್ಲಿ (ವೇದದಲ್ಲಿ) ಅಪೌರುಷೇಯತ್ವವು

---

1. ವೇದವಾಕ್ಯಗಳಲ್ಲಿರುವ ಅಗ್ನಿ, ವಾಯು ಇಂದ್ರ ಇತ್ಯಾದಿ ಅನೇಕ ಪದಗಳೇ ಲೌಕಿಕ ವಾಕ್ಯಗಳಲ್ಲೂ ಇರುವವು. ಅವು ಅಬೋಧಕವಾದಲ್ಲಿ, ವೇದವಾಕ್ಯದೊಡನೆ ಬೆರೆತಾಗಲೂ ಬೋಧಕವಾಗದೆ, ವೇದಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾಗುವುದು ಎಂದು ಭಾವ.

2. ಅನೃತಯುಕ್ತವಾದ ಲೌಕಿಕ ವಾಕ್ಯಗಳಲ್ಲಿ ಅನ್ವಯವು ಬಾಧಿತವಾಗುವದರಿಂದ ಅನೃತರಹಿತ ಲೌಕಿಕ ವಾಕ್ಯದಲ್ಲೂ ಬಾಧ ಸಂದೇಹಕ್ಕೆ ಅವಕಾಶವಿದ್ದು, ಕೇವಲ ವಾಕ್ಯದಿಂದಲೇ ಪ್ರವೃತ್ತ್ಯಾದಿ-ಗಳಿಗೆ ಅವಕಾಶವಿಲ್ಲದಿರುವದರಿಂದ ಅನುಮಾನಾದಿಗಳಿಂದ ಅಲ್ಲಿ ಪ್ರಾಮಾಣ್ಯಾದಿಗಳ ನಿಶ್ಚಯವು ಅವಶ್ಯವಾದುದರಿಂದ ಲೌಕಿಕವಾಕ್ಯಗಳನ್ನು ಪೃಥಕ್‌ಪ್ರಮಾಣ ಎಂದು ಒಪ್ಪಲು ಶಕ್ಯವಿಲ್ಲ ಎಂದು ಭಾವ.

ಇರುವುದರಿಂದ ಶಂಕಾ ನಿವೃತ್ತಿಯು ಆಗುವಂತೆ, ಇಲ್ಲಿಯೂ (ಲೌಕಿಕ-ವಾಕ್ಯದಲ್ಲೂ) ಆಪ್ತೋಕ್ತತ್ವ ಮುಂತಾದವುಗಳಿಂದ ಶಂಕೆಯ ನಿವೃತ್ತಿಯು ಉಂಟಾಗುವುದು. ಹಾಗಾದಲ್ಲಿ ಶಬ್ದದಿಂದಲೇ ಅನ್ವಯದ ನಿಶ್ಚಯವು (ಉಂಟಾಗುವುದು), (ಅದರಲ್ಲಿನ) ಅಪ್ರಾಮಾಣ್ಯಸಂದೇಹದ ನಿವೃತ್ತಿಯು ಕಾರಣಾಂತರದಿಂದ ಎಂದು ಲೋಕ-ವೇದಗಳಿಗೆ (ಲೌಕಿಕವಾಕ್ಯಗಳಿಗೆ ವೇದವಾಕ್ಯಗಳಿಗೆ) ಸಾಮ್ಯವೇ ಇದೆ. ಇದರಿಂದ 'ಋಗಾದ್ಯಾಃ' ಎಂದು ಹೇಳಿರುವುದು ಸಂಗತವಾಯಿತು[1].

**ಪ್ರತ್ಯಕ್ಷಪ್ರಮಾಣದ ವಿಭಾಗ**

**ಪ್ರತ್ಯಕ್ಷಂ ತ್ರಿವಿಧಂ ಜ್ಞೇಯಮೈಶ್ವರಂ ಯೌಗಿಕಂ ತಥಾ ।**
**ಅಯೌಗಿಕಂ ಚೇತಿ ತಥಾ ಸರ್ವಮಕ್ಷಾತ್ಮಕಂ ಮತಮ್ ।**
**ಅಕ್ಷಾಣಿ ಚ ಸ್ವರೂಪಾಣಿ ನಿತ್ಯಜ್ಞಾನಾತ್ಮಕಾನಿ ಚ ।**
**ವಿಷ್ಣೋಃ ಶ್ರಿಯಸ್ತಥೈವೋಕ್ತಾಽನ್ಯೇಷಾಂ ದ್ವಿವಿಧಾನಿ ತು ।**
**ಸ್ವರೂಪಾಣಿ ಚ ಭಿನ್ನಾನಿ ಭಿನ್ನಾನಿ ತ್ರಿವಿಧಾನಿ ಚ ।**
**ದೈವಾಸುರಾಣಿ ಮಧ್ಯಾನೀತ್ಯೇತತ್ ಪ್ರತ್ಯಕ್ಷಮೀರಿತಮ್ ॥**

ಈಶ್ವರಪ್ರತ್ಯಕ್ಷ, ಯೋಗಿಕಪ್ರತ್ಯಕ್ಷ ಮತ್ತು ಅಯೋಗಿಕ ಪ್ರತ್ಯಕ್ಷ ಎಂದು ಮೂರುವಿಧ. ಈ ಮೂರೂ ಪ್ರತ್ಯಕ್ಷಾತ್ಮಕವೇ ಆಗಿವೆ. ವಿಷ್ಣುವಿನ ಇಂದ್ರಿಯ ಹಾಗೂ ಲಕ್ಷ್ಮೀಯ ಇಂದ್ರಿಯಗಳು ನಿತ್ಯ ಹಾಗೂ ಜ್ಞಾನಾತ್ಮಕಗಳು, (ಅವು ಅವರ) ಸ್ವರೂಪಾತ್ಮಕಗಳು. ಉಳಿದ ಜೀವರ ಇಂದ್ರಿಯಗಳು ಎರಡು ವಿಧ- ಸ್ವರೂಪಭೂತವಾದವು ಮತ್ತು ಭಿನ್ನವಾದವು ಎಂದು. ಅವುಗಳಲ್ಲಿ ಭಿನ್ನೇಂದ್ರಿಯಗಳು ಮೂರುವಿಧ- ದೈವ, ಆಸುರ ಮತ್ತು ಮಧ್ಯ ಎಂದು. ಹೀಗೆ ಪ್ರತ್ಯಕ್ಷವು ಕಥಿತವಾಗಿದೆ.

---

1. ಹಿಂದೆ ಈ ಗ್ರಂಥದಲ್ಲಿ ಪ್ರತಿಪಾದಿಸುವ ವಿಷಯಕ್ಕೆ ಪ್ರಮಾಣಗಳು ಯಾವವು ಎಂಬ ಪ್ರಶ್ನೆಯನ್ನು ಉತ್ತರಿಸುವಾಗ 'ಋಗಾದ್ಯಾ ಭಾರತಂ ಚೈವ' ಎಂದು (ಪುಟ 22ರಲ್ಲಿ) ತಿಳಿಸಲಾಗಿತ್ತು. ವೇದಗಳೇನೋ ಅಪೌರುಷೇಯಗಳಾದುದರಿಂದ ಪ್ರಮಾಣಗಳಾಗಬಹುದು ಭಾರತಾದಿಗಳು ಹೇಗೆ ಪ್ರಮಾಣವಾಗುವವು? ಎನ್ನುವ ಸಂದೇಹವು ಪ್ರಕೃತ 'ಆಗಮರೂಪ ಪ್ರಮಾಣವು ಎರಡು ವಿಧ, ಪೌರುಷೇಯ ಅಪೌರುಷೇಯ' ಎಂದು ತಿಳಿಸಿದ್ದರಿಂದ ಪರಿಹೃತವಾಯಿತು ಎಂದು ಭಾವ.

ಅಥ ಪರಿಶೇಷತಃ ಪ್ರಾಪ್ತಸ್ಯ ಪ್ರತ್ಯಕ್ಷಸ್ಯ ವಿಭಾಗಮಾಹ '**ಪ್ರತ್ಯಕ್ಷಂ**' ಇತಿ । '**ಐಶ್ವರಂ**' ಇತಿ ವಿಷ್ಣೋಃ ಶ್ರಿಯಶ್ಚ ಪ್ರತ್ಯಕ್ಷಮೇಕೀಕೃತ್ಯೋಕ್ತಮ್ । ಸಮಾಧಿ ಪರಿಪಾಕವನ್ತೋ ಯೋಗಿನಃ ತದೀಯಂ ಪ್ರತ್ಯಕ್ಷಂ **ಯೌಗಿಕಮ್** । ಅಸ್ಮದಾದೀನಾಂ ಪ್ರತ್ಯಕ್ಷಮ**ಯೌಗಿಕಮ್** । ಈಶ್ವರಸ್ಯ ಶರೀರೇಂದ್ರಿಯ-ರಹಿತತ್ವಾತ್ 'ತತ್ರ ಪ್ರತ್ಯಕ್ಷೋಕ್ತಿಃ ಔಪಚಾರಿಕೀ' ಇತಿ ಶಙ್ಕಾನಿರಾಸಾರ್ಥಮಾಹ '**ತಥಾ ಸರ್ವಂ**' ಇತಿ ಯಥಾ ಯೌಗಿಕಂ ತಥಾ ಸರ್ವಮೈಶ್ವರಮಪೀತಿ ಯಾವತ್ । ತಥಾ ಸತಿ 'ಸರ್ವೇಂದ್ರಿಯವಿವರ್ಜಿತಂ..' ಇತ್ಯಾದಿವಿರೋಧಃ? ಇತ್ಯತ ಆಹ '**ಅಕ್ಷಾಣಿ ಚ**' ಇತಿ । 'ಭಿನ್ನಜಡೇಂದ್ರಿಯಾಭಾವಪರಂ ತದ್ವಾಕ್ಯಮ್' ಇತಿ ಭಾವಃ । ಉಕ್ತಾನಿ 'ಯದಾತ್ಮಕೋ ಭಗವಾನ್..' ಇತ್ಯಾದೌ । ಏತೇನ 'ಅನ್ಯೇಷಾಂ ಭಿನ್ನಾನ್ಯೇವ' ಇತಿ ಪ್ರಾಪ್ತಮತ ಆಹ '**ಅನ್ಯೇಷಾಂ**' ಇತಿ । ದ್ವೈವಿಧ್ಯಮೇವ ದರ್ಶಯತಿ '**ಸ್ವರೂಪಾಣಿ ಚ**' ಇತಿ । ಯತ್ '**ಅದುಷ್ಟಮಿಂದ್ರಿಯಂ**' ಇತಿ 'ಅದುಷ್ಟತ್ವಮುಕ್ತಂ ತತ್ಸ್ವರೂಪೇಂದ್ರಿಯಾಣಾಂ ಸ್ವರೂಪಕಥನಮಾತ್ರಂ, 'ಭಿನ್ನೇಂದ್ರಿಯಾಣಾಮೇವ ತು ವಿಶೇಷಣಮ್' ಇತಿ ಜ್ಞಾಪಯಿತುಂ ತದ್ವಿಭಾಗಮಾಹ '**ಭಿನ್ನಾನಿ**' ಇತಿ । ಸಮ್ಯಗ್ಜ್ಞಾನಪ್ರಚುರಾಣಿ ದೈವಾನಿ । ಮಿಥ್ಯಾಜ್ಞಾನಪ್ರಚುರಾಣ್ಯಾಸುರಾಣಿ । ಉಭಯಸಮಾನಾನಿ ಮಧ್ಯಾನಿ ।

ನಂತರದಲ್ಲಿ ಕೊನೆಯಾದಾಗಿ ಉಳಿದ ಪ್ರತ್ಯಕ್ಷದ ವಿಭಾಗವನ್ನು ತಿಳಿಸುತ್ತಾರೆ '**ಪ್ರತ್ಯಕ್ಷಂ**' ಎಂದು. '**ಐಶ್ವರಂ**' ಎಂದು ವಿಷ್ಣು ಮತ್ತು ಶ್ರೀದೇವಿಯ ಪ್ರತ್ಯಕ್ಷಗಳನ್ನು ಏಕೀಕರಿಸಿ ಹೇಳಲಾಗಿದೆ. ಸಮಾಧಿಯಿಂದ ಪರಿಪಾಕವನ್ನು ಹೊಂದಿರುವವರು ಯೋಗಿಗಳು. ಅವರ ಪ್ರತ್ಯಕ್ಷವು ಯೌಗಿಕಪ್ರತ್ಯಕ್ಷ (ಎಂದು ತಿಳಿಯುವುದು). ಈಶ್ವರನಿಗೆ ಶರೀರ, ಇಂದ್ರಿಯಗಳು ಇಲ್ಲದಿರುವುದರಿಂದ, ಅದನ್ನು ಪ್ರತ್ಯಕ್ಷ ಎಂದು ವ್ಯವಹರಿಸುವುದು ಔಪಚಾರಿಕ (ಗೌಣ) ಎನ್ನುವ ಶಂಕೆಯನ್ನು ನಿರಾಕರಿಸಲು ಹೇಳುವರು '**ತಥಾ ಸರ್ವಂ**' ಎಂದು. 'ಹೇಗೆ ಯೌಗಿಕ (ಪ್ರತ್ಯಕ್ಷವೋ) ಹಾಗೆ ಈಶ್ವರಸಂಬಂಧಿಯಾದ ಎಲ್ಲವೂ ಸಹ' ಎಂದು ಒಟ್ಟು ತಾತ್ಪರ್ಯ. ಹಾಗಾದಲ್ಲಿ 'ಸರ್ವೇಂದ್ರಿಯವಿವರ್ಜಿತಂ' (ಸಕಲ ಇಂದ್ರಿಯ ರಹಿತ) ಇತ್ಯಾದಿಗಳ (ಪ್ರಮಾಣಗಳ) ವಿರೋಧ ಎಂದಲ್ಲಿ, ಹೇಳುವರು '**ಅಕ್ಷಾಣಿ ಚ**' ಎಂದು. '(ಈಶ್ವರನಿಂದ) ಭಿನ್ನವಾದ ಜಡಭೂತವಾದ

ಇಂದ್ರಿಯಗಳ ಅಭಾವವನ್ನು ತಿಳಿಸುವುದು' ಎಂದು ಆ ವಾಕ್ಯದ ಭಾವ[1]. (ಇದನ್ನೇ) ತಿಳಿಸಲಾಗಿದೆ 'ಯದಾತ್ಮಕೋ ಭಗವಾನ್' ಇದೇ ಮುಂತಾದ ಪ್ರಮಾಣಗಳು[2]. ಇದರಿಂದ (ಈಶ್ವರಪ್ರತ್ಯಕ್ಷವು 'ನಿತ್ಯಜ್ಞಾನಾತ್ಮಕಾನಿ ಚ' ಎಂದು ತಿಳಿಸಿದ್ದರಿಂದ) ಅನ್ಯರ (ಪ್ರತ್ಯಕ್ಷವು) ವಿಭಿನ್ನವೇ ಆಗಿದೆ ಎಂದು ತಿಳಿಸಿದಂತಾ-ಯಿತು, ಆದುದರಿಂದ ತಿಳಿಸುವರು **'ಅನ್ಯೇಷಾಂ'** ಎಂದು. ಆ ಎರಡು ವಿಧಗಳನ್ನು ತಿಳಿಸುವರು **'ಸ್ವರೂಪಾಣಿ ಚ'** ಎಂದು. (ಹಿಂದೆ) ಯಾವುದು 'ಅದುಷ್ಟಮಿಂದ್ರಿಯಂ ತ್ವಕ್ಷಂ' ಎಂದು ಅದುಷ್ಟತ್ವವನ್ನು ತಿಳಿಸಲಾಗಿತ್ತೋ ಅದು ಸ್ವರೂಪೇಂದ್ರಿಯಗಳ ಸ್ವರೂಪದ ಕಥನ ಮಾತ್ರ, ಭಿನ್ನೇಂದ್ರಿಯಗಳಿಗೆ (ಬಾಹ್ಯೇಂದ್ರಿಯಗಳಿಗೆ) ಮಾತ್ರ ಈ (ತ್ರಿವಿಧಾನಿ ಎನ್ನುವ) ವಿಶೇಷಣ ಎಂದು ಸೂಚಿಸಲು ಅದರ (ಬಾಹ್ಯೇಂದ್ರಿಯಗಳ) ವಿಭಾಗವನ್ನು ಹೇಳುವರು **'ಭಿನ್ನಾನಿ'** ಎಂದು. ದೈವೇಂದ್ರಿಯಗಳು ಯಥಾರ್ಥಜ್ಞಾನದಿಂದ ಪ್ರಚುರವಾದದ್ದು. ಆಸುರೇಂದ್ರಿಯಗಳು ಮಿಥ್ಯಾಜ್ಞಾನ ಭೂಯಿಷ್ಟವಾದದು. ಎರಡೂ ಸಮನಾದವು ಮಧ್ಯಮೇಂದ್ರಿಯಗಳು.

**ಅಕ್ಷವೇ ಪ್ರತ್ಯಕ್ಷ**

**ವಿಷಯಾನ್ ಪ್ರತಿಸ್ಥಿತಂ ಹ್ಯಕ್ಷಂ ಪ್ರತ್ಯಕ್ಷಮಿತಿ ಕೀರ್ತಿತಮ್ ।**
**ಅಕ್ಷಯಂ ಪುರುಷಸ್ಯಾಕ್ಷಂ ಸ್ವರೂಪೇ ಮುಖ್ಯಮೇವ ತು (ತತ್) ।**
**ಉಪಚಾರಸ್ತದನ್ಯತ್ರ ಸೃಷ್ಟಾವುಪಚಯೋ ಯತಃ ॥**

ಪದಾರ್ಥದೊಡನೆ ಸಂಬಂಧವನ್ನು ಹೊಂದಿದ ಇಂದ್ರಿಯಗಳನ್ನೇ 'ಪ್ರತ್ಯಕ್ಷ' ಎಂದು ಕರೆಯುವರು. ಈಶ್ವರನ (ಹಾಗೂ ಮುಕ್ತಜೀವರ) ಇಂದ್ರಿಯಗಳು, ಮತ್ತು ಸ್ವರೂಪೇಂದ್ರಿಯಗಳು ಮುಖ್ಯವಾಗಿ ಅಕ್ಷಯ- ನಾಶರಹಿತಗಳು. ಸೃಷ್ಟಿಕಾಲದಲ್ಲಿ ಬೇರೇ ಇಂದ್ರಿಯಗಳಿಗೆ ಉಪಚಯವು (ಪ್ರಳಯಕಾಲದಲ್ಲಿ ಅಪಚಯವು) ಇರುವುದರಿಂದ ಅವುಗಳನ್ನು ಅಕ್ಷಯ ಎನ್ನುವುದು ಔಪಚಾರಿಕ.

1. 'ಅಚಕ್ಷುಃ ಅಶ್ರೋತ್ರಂ ತದಪಾಣಿಪಾದಂ' ಇತ್ಯಾದಿ ಪ್ರಮಾಣಗಳು ಈಶ್ವರನಿಗೆ 'ಸರ್ವಥಾ ಶರೀರವಿಲ್ಲ ಇಂದ್ರಿಯಗಳು ಇಲ್ಲ' ಎಂದು ತಿಳಿಸುವುದಿಲ್ಲ, ಮತ್ತೆ 'ಈಶ್ವರನಿಂದ ವಿಭಿನ್ನವಾದ ಭೌತಿಕವಾದ ಜಡಶರೀರಾದಿಗಳು ಇಲ್ಲ' ಎಂದು ತಿಳಿಸುವವು ಎಂದು ಭಾವ.

2. ಯದಾತ್ಮಕೋ ಭಗವಾನ್ ತದಾತ್ಮಿಕಾ ವ್ಯಕ್ತಿಃ । ಕಿಮಾತ್ಮಕೋ ಭಗವಾನ್? ಜ್ಞಾನಾತ್ಮಕ ಐಶ್ವರ್ಯಾತ್ಮಕಃ । ಇತ್ಯಾದಿಯಾಗಿ ಶ್ರುತಿಯು ತಿಳಿಸುತ್ತದೆ.

**ನನು 'ಪ್ರತ್ಯಕ್ಷಂ ತ್ರಿವಿಧಮ್' ಇತ್ಯಸಙ್ಗತಮ್ । ಅಕ್ಷಸ್ಯೈವ ಪ್ರಕೃತತ್ವಾತ್, ಐಶ್ವರ್ಯಮಿತ್ಯಾದಿನಾ ತಸ್ಯೈವ ನಿರೂಪಿತತ್ವಾಚ್ಚ । ಅತ ಏವ 'ಏತತ್ಪ್ರತ್ಯಕ್ಷಮೀರಿತಮ್' ಇತ್ಯುಪಸಂಹಾರೋಽಪ್ಯನುಪಪನ್ನಃ? ಇತ್ಯತ ಆಹ 'ವಿಷಯಾನ್' ಇತಿ । ನಿರ್ದೋಷಾನ್ ಸ್ವಸ್ವವಿಷಯಾನ್ ಪ್ರತಿ ಸ್ಥಿತಂ- ತೈಃ ಸನ್ನಿಕೃಷ್ಟಮ್ । ಅನೇನ ಪ್ರಾದಿ ಸಮಾಸೋಽಯಮಿತ್ಯುಕ್ತಂ ಭವತಿ । ಅವ್ಯಯೀ ಭಾವತ್ವೇ ಹಿ 'ಪ್ರತ್ಯಕ್ಷಸ್ಯ' ಇತಿ ಷಷ್ಠೀ ನ ಶ್ರೂಯೇತ । ಯತೋ 'ಅಕ್ಷಮೇವ ನಿರ್ದೋಷಸ್ವಗೋಚರಸನ್ನಿಕೃಷ್ಟಂ ಪ್ರತ್ಯಕ್ಷಮ್' ಇತಿ ಕೀರ್ತಿತಂ ಶಾಬ್ದಿಕೈಃ ನ ತ್ವರ್ಥಾನ್ತರಮ್, ಅತೋಽನತಿಭಿನ್ನತ್ವಾನ್ನ ಕಶ್ಚಿದ್ವಿರೋಧಃ ।**

ಸರಿ, (ಆದರೆ) 'ಪ್ರತ್ಯಕ್ಷಂ ತ್ರಿವಿಧಂ' ಎನ್ನುವುದು ಅಸಂಗತ. ಅಕ್ಷವೇ ಪ್ರಕೃತವಾದುದರಿಂದ[1], (ಪ್ರಕೃತದಲ್ಲೂ) **'ಜ್ಞೇಯಮೈಶ್ವರಂ'** ಇತ್ಯಾದಿಯಾಗಿ ಅದೇ (ಅಕ್ಷವೇ) ನಿರೂಪಿತವಾಗಿರುವದರಿಂದಲೂ (ಪ್ರತ್ಯಕ್ಷ ತ್ರಿವಿಧ ಎಂದು ಹೇಳಿದ್ದು ಅಸಂಗತ). ಆದುದರಿಂದಲೇ **'ಏತತ್ ಪ್ರತ್ಯಕ್ಷಮೀರಿತಂ'** ಎಂದು ಉಪಸಂಹಾರವನ್ನು ಮಾಡುವುದೂ ಅನುಪಪನ್ನ ಎಂದಲ್ಲಿ ಹೇಳುತ್ತಾರೆ **'ವಿಷಯಾನ್'** ಎಂದು. ನಿರ್ದುಷ್ಟವಾದ ತನ್ನ ತನ್ನ (ವಿಷಯಾನ್ ಪ್ರತಿ) ವಿಷಯಗಳನ್ನು ಉದ್ದೇಶಿಸಿ ( ಸ್ಥಿತಂ) ಇರುವ, ಅವುಗಳಿಂದ ಸನ್ನಿಕೃಷ್ಟವಾದ. ಇದರಿಂದ ('ಅಕ್ಷಂ ಪ್ರತಿ ಸ್ಥಿತಂ- ಪ್ರತ್ಯಕ್ಷಂ' ಎಂದು ಪ್ರತ್ಯಕ್ಷಶಬ್ದದ ನಿರ್ವಚನ ವನ್ನು ತಿಳಿಸಿದ್ದರಿಂದ) ಪ್ರಾದಿ ಸಮಾಸವಿದು ಎಂದು ತಿಳಿಸಿದಂತಾಯಿತು. ಅವ್ಯಯೀಭಾವವಾಗಿದ್ದಲ್ಲಿ 'ಪ್ರತ್ಯಕ್ಷಸ್ಯ' ಎಂದು ಷಷ್ಠೀ ವಿಭಕ್ತಿಯ ಪ್ರಯೋಗವು ಕಾಣದಿರಬೇಕಾದೀತು[2]. ಯಾವ ಕಾರಣದಿಂದ 'ಅಕ್ಷಮೇವ ನಿರ್ದೋಷ-ಸ್ವಗೋಚರಸನ್ನಿಕೃಷ್ಟಂ ಪ್ರತ್ಯಕ್ಷಂ- ನಿರ್ದುಷ್ಟವಾದ ತನ್ನ ವಿಷಯದಿಂದ

1. ಈ ಹಿಂದೆ ಪ್ರಮಾಣಗಳ ವಿವರನ್ನು ತಿಳಿಸುವಾಗ 'ಅದುಷ್ಟಮಿಂದ್ರಿಯಂ ತ್ವಕ್ಷಂ..' ಎಂದು ಅಕ್ಷವೇ- ಇಂದ್ರಿಯವು ಪ್ರಸಕ್ತವಾಗಿದೆ. ಅದನ್ನು ವಿವರಿಸದೆ ಪ್ರತ್ಯಕ್ಷ ಎಂಬ ಬೇರೇ ಪದಾರ್ಥವನ್ನು ವಿವರಿಸುತ್ತಿರುವುದು ಅಸಂಗತ ಎಂದು ಭಾವ.

2. 'ಪ್ರತ್ಯಕ್ಷಂ' ಎನ್ನುವ ಶಬ್ದದ ನಿಷ್ಪತ್ತಿಯು ಹೇಗೆ? 'ಅಕ್ಷಂ ಅಕ್ಷಂ- ಪ್ರತ್ಯಕ್ಷಂ' ಎಂದು ಅವ್ಯಯೀಭಾವ ಸಮಾಸವೋ, ಅಥವಾ 'ವಿಷಯಾನ್ ಪ್ರತಿ ಸ್ಥಿತಂ ಅಕ್ಷಂ- ಪ್ರತ್ಯಕ್ಷಂ' ಎಂದು ಮಧ್ಯಮಪದ ಲೋಪೀ ಸಮಾಸವೋ ಎಂದು ಪ್ರಶ್ನೆಯ ಅಭಿಪ್ರಾಯ. ಇಲ್ಲಿ 'ಪ್ರಗತಃ ಆಚಾರ್ಯಃ- ಪ್ರಾಚಾರ್ಯಃ' ಇತ್ಯಾದಿ ಸ್ಥಳಗಳಂತೆ ಮಧ್ಯಮಪದಲೋಪೀ ಸಮಾಸವನ್ನೇ ಅಭಿಮತಿಸಲಾಗಿದೆ ಎನ್ನುವುದು 'ವಿಷಯಾನ್ ಪ್ರತಿ ಸ್ಥಿತಂ ಅಕ್ಷಂ- ಪ್ರತ್ಯಕ್ಷಂ' ಎಂಬ

ಪುಟ 487ರಲ್ಲಿ........

ಸನ್ನಿಕೃಷ್ಟವಾದ ಇಂದ್ರಿಯವನ್ನೇ ಪ್ರತ್ಯಕ್ಷ' ಎಂದು ವೈಯಾಕರಣಿಗಳು ಹೇಳಿರುವರು, ಹೊರತಾಗಿ (ಪ್ರತ್ಯಕ್ಷ ಎನ್ನುವುದು) ಪೃಥಕ್ಕಾದ ಪದಾರ್ಥವಲ್ಲ. ಆದುದರಿಂದ (ಇವೆರಡಕ್ಕೂ) ಹೆಚ್ಚಿನ ಭೇದವಿಲ್ಲದ ಪ್ರಯುಕ್ತ (ಪ್ರತ್ಯಕ್ಷ ಎಂದಲ್ಲಿ ವಿಷಯದಿಂದ ಸನ್ನಿಕೃಷ್ಟವಾದ ಇಂದ್ರಿಯ ಎಂದು ತಿಳಿಸಿದ್ದರಿಂದ) ಯಾವ ವಿರೋಧವೂ ಇಲ್ಲ[1].

---

...... ಪುಟ 486 ರಿಂದ
ಮೂಲವನ್ನು ಪರಿಶೀಲಿಸಿದಾಗ ತಿಳಿಯುವುದು. 'ಅವ್ಯಯಂ ವಿಭಕ್ತಿ........ಸಾಕಲ್ಯಾಂತ್ಯ-ವಚನೇಷು'(ಪಾ.ಸೂ.2.1.6.) ಎನ್ನುವ ಸೂತ್ರದಲ್ಲಿ ತಿಳಿಸಿರುವಂತೆ ಅವ್ಯಯವು ಯೋಗ್ಯಪದದೊಡನೆ ಸಮಾಸಗೊಳ್ಳುವವು, ಆದುದರಿಂದ ಅವ್ಯಯೀಭಾವವನ್ನು ಏಕೆ ಪ್ರಕೃತದಲ್ಲಿ ಆಶ್ರಯಿಸಲಾಗಿಲ್ಲ ಎನ್ನುವ ಸಂದೇಹಕ್ಕೆ ಉತ್ತರಿಸುವರು- 'ಪ್ರತ್ಯಕ್ಷಸ್ಯ ಲಕ್ಷಣಂ' ಇತ್ಯಾದಿಯಗಿ ಶಾಸ್ತ್ರದಲ್ಲಿ ಪ್ರತ್ಯಕ್ಷ ಪದವನ್ನು ಷಷ್ಠೀ ವಿಭಕ್ತ್ಯಂತವಾಗಿ ಬಳಸಿರುವರು. ಅವ್ಯಯೀಭಾವವನ್ನು ಆಶ್ರಯಿಸಿದಲ್ಲಿ 'ನಾವ್ಯಯೀಭಾವಾದತೋಽಮ್ ತ್ವಪಂಚಮ್ಯಾಃ (ಪಾ.ಅ.ಸೂ.2.4.86.) ಎನ್ನುವ ಸೂತ್ರದ ನಿಯಮದಂತೆ ಪಂಚಮೀ ವಿಭಕ್ತಿಯ ಹೊರತಾಗಿ ಉಳಿದ ವಿಭಕ್ತಿ ಪ್ರತ್ಯಯಕ್ಕೆ 'ಅಮ್' ಆದೇಶವು ಪ್ರಾಪ್ತವಾಗುವುದು. ಅಂದರೆ ಪ್ರತ್ಯಕ್ಷಾತ್ ಎಂಬ ರೂಪದ ಹೊರತಾಗಿ ಇನ್ನುಳಿದ ಎಲ್ಲ ರೂಪದಲ್ಲೂ ಪ್ರತ್ಯಕ್ಷಂ ಎಂದೇ ಆಗುವುದು. ವಸ್ತುತಃ 'ಪ್ರತ್ಯಕ್ಷೇಣ, ಪ್ರತ್ಯಕ್ಷೇ ಎಂದು ಪ್ರಯೋಗಗಳು ಇರುವುದರಿಂದ ಪ್ರತ್ಯಕ್ಷಸ್ಯ ಎಂದೂ ಪ್ರಯೋಗಿಸಬಹುದಲ್ಲವೆ? ಎಂದು ಸಂದೇಹಕ್ಕೆ ಅವಕಾಶವಿದೆ, ಆದರೆ 'ತೃತೀಯಾ ಸಪ್ತಮ್ಯೋರ್ಬಹುಲಮ್' (ಪಾ.ಸೂ.2.4.84.) ಎನ್ನುವ ಸೂತ್ರದ ನಿಯಮದಂತೆ ತೃತೀಯಾ ವಿಭಕ್ತಿ ಮತ್ತು ಸಪ್ತಮೀ ವಿಭಕ್ತಿಗಳಿಗೆ 'ಅಮ್' ಆದೇಶವನ್ನು ವಿಕಲ್ಪಿಸಿರುತ್ತಾರೆ. ಆದುದರಿಂದ ಉಪಕೃಷ್ಣೇನ ಕಾರ್ಯಂ: ಉಪಕೃಷ್ಣಂ ಕಾರ್ಯಂ ಎಂದು, ಹಾಗೆಯೇ ಉಪಕೃಷ್ಣೇ ಸ್ಥಿತಂ: ಉಪಕೃಷ್ಣಂ ಸ್ಥಿತಃ ಇತ್ಯಾದಿಯಾಗಿ ಪ್ರಯೋಗಗಳು ಕಂಡಿವೆ. ಆದರೆ ಷಷ್ಠೀ ವಿಭಕ್ತಿಗೆ ಅಪವಾದವಿಲ್ಲ. ಆ ಪ್ರಯುಕ್ತ ಅವ್ಯಯೀಭಾವ ಸಮಾಸವನ್ನು ಆಶ್ರಯಿಸದೇ ಮಧ್ಯಮಪದ-ಲೋಪೀ ಸಮಾಸವನ್ನು ಆಶ್ರಯಿಸಲಾಗಿದೆ. 'ಕುಗತಿ ಪ್ರಾದಯಃ' (ಪಾ.ಸೂ.2.1.6.) ಎನ್ನುವ ಸೂತ್ರದಲ್ಲಿ ತಿಳಿಸಿರುವಂತೆ ಕು ಮುಂತಾದ ಕೆಲವು ಅವ್ಯಯಗಳು ಯೋಗ್ಯಪದದೊಡನೆ ಸಮಾಸಗೊಳ್ಳುವವು. ಈ ನಿಯಮದಂತೆ ಸಮಾಸವನ್ನು ಅಭಿಮತಿಸಲಾಗಿದೆ. ಈ ನಿಯಮ-ವನ್ನು ಆಶ್ರಯಿಸದ ಪಕ್ಷದಲ್ಲಿ ಪ್ರತ್ಯಕ್ಷೇ, ಪ್ರತ್ಯಕ್ಷಾಣಿ 'ಪ್ರತ್ಯಕ್ಷೋ ಘಟಃ' ಇತ್ಯಾದಿಯಾದ ವಿಶೇಷ ಪ್ರಯೋಗಗಳೂ ಶಾಸ್ತ್ರದಲ್ಲಿ ಇರದೇ ಹೋಗಬೇಕಾದೀತು ಎಂದು ಭಾವ.

1. 'ಅದುಷ್ಟಮಿಂದ್ರಿಯಂ ತ್ವಕ್ಷಂ' ಎಂದು ಪ್ರಸಕ್ತವಾದ ವಾದಸರಣಿಯ ಮಧ್ಯದಲ್ಲಿ ಅಕ್ಷದ ವಿವರಣೆಯ ಬದಲಾಗಿ ಪ್ರತ್ಯಕ್ಷದ ವಿವರವು ಅಸಂಗತವಲ್ಲವೆ? ಎನ್ನುವ ಸಂದೇಹಕ್ಕೆ ಉತ್ತರಿಸಿರುವರು. 'ಅಕ್ಷ-ಪ್ರತ್ಯಕ್ಷಗಳು ಅತ್ಯಂತ ಪೃಥಕ್ ಪದಾರ್ಥಗಳಲ್ಲ' ಎಂದು ಶಾಸ್ತ್ರಗಳಲ್ಲಿ ತಿಳಿಸಲಾಗಿದೆ ಎಂದು ಭಾವ.

ನಿರ್ವಚನಪ್ರಸಙ್ಗಾದಕ್ಷಶಬ್ದಮಪಿ ನಿರ್ವಕ್ತಿ 'ಅಕ್ಷಯಮ್' ಇತಿ । ಏತೇನ 'ನಞ್'ಉಪಪದಾತ್ 'ಕ್ಷಿ - ಕ್ಷಯೇ' ಇತ್ಯಸ್ಮಾದ್ ಧಾತೋಃ 'ಆತೋಽನುಪಸರ್ಗೇ ಕಃ' ಇತಿ 'ಕ'ಪ್ರತ್ಯಯ ಇತ್ಯುಕ್ತಂ ಭವತಿ । 'ಅಕ್ಷಯಂ- ಅಕ್ಷಂ' ಇತಿ ನಿರ್ವಚನಂ ಕಿಮನ್ವರ್ಥಮ್ ಉತ ನ? ಇತಿ ಶಙ್ಕಾಯಾಮ್ ಆಹ 'ಪುರುಷಸ್ಯ ಸ್ವರೂಪೇ' ಇತಿ । ಏತತ್ತು ನಿರ್ವಚನಂ ಪುರುಷಸ್ಯ- ಈಶ್ವರಾದೇಃ ಸ್ವರೂಪೇಽಕ್ಷೇ ಮುಖ್ಯಮ್ ಅನ್ವರ್ಥಮೇವ । ತದನ್ಯತ್ರ ವಿಭಿನ್ನೇಽಕ್ಷೇಽಕ್ಷ-ಶಬ್ದಸ್ಯೋಪಚಾರಃ । ಕುತಃ? ಯತಃ ಸ್ವರೂಪೇಣ ನಿತ್ಯಸ್ಯಾಪಿ ತಸ್ಯ ಸೃಷ್ಟಿಕಾಲೇ ಭೌತಿಕಾಹಙ್ಕಾರಿಕಾವಯವೋಪಚಯರೂಪೋತ್ಪತ್ತಿರಸ್ತಿ, ಪ್ರಲಯೇ ಚ ತದಪಚಯಲಕ್ಷಣಃ ಕ್ಷಯಶ್ಚಾತೋ ಮುಖ್ಯಾಸಮ್ಭವಾದೇಕದೇಶಾಕ್ಷಯತ್ವ-ನಿಮಿತ್ತಾ ಗೌಣೀ ವೃತ್ತಿರಿತಿ ।

ಏತೇನಾನುಭವಸ್ಯ ಪ್ರತ್ಯಕ್ಷಾದಿತ್ರಯಾನನ್ತರ್ಭೂತಸ್ಯ ಪ್ರಮಾಣತ್ವಾ-ಭಾವಾತ್ ಕಥಮ್ ಐಕ್ಯಾಗಮಸ್ಯ ತದ್ವಿರೋಧೇನ ಅಪ್ರಾಮಾಣ್ಯಮುಚ್ಯತೇ? ಇತ್ಯಾಶಙ್ಕಾ ಪರಿಹೃತಾ ಭವತಿ । ಸ್ವರೂಪೇಂದ್ರಿಯಾಭಿವ್ಯಕ್ತಿಭೂತಸ್ಯ ಅನುಭವಸ್ಯ ಪ್ರತ್ಯಕ್ಷೇಽನ್ತರ್ಭೂತತ್ವಾತ್ ।

(ಪ್ರತ್ಯಕ್ಷ ಶಬ್ದವನ್ನು) ನಿರ್ವಚಿಸುವ ಸಂದರ್ಭವಾದುದರಿಂದ (ಅದರಲ್ಲಿ ಘಟಕವಾದ) ಅಕ್ಷ ಶಬ್ದವನ್ನೂ ನಿರ್ವಚಿಸಿ ತಿಳಿಸುವರು 'ಅಕ್ಷಯಂ' ಎಂದು. ಇದರಿಂದ (ಅಕ್ಷಪದದ ನಿರ್ವಚನವು ಈ ರೀತಿಯಾಗಿರುವುದರಿಂದ) 'ನಞ್' (ಶಬ್ದವನ್ನು) ಉಪಪದವನ್ನಾಗಿ ಹೊಂದಿರುವ 'ಕ್ಷಿ - ಕ್ಷಯೇ' (ಭ್ವಾದಿ ಗಣದಲ್ಲಿ ಪಠಿತವಾದ ಧಾತು.) ಎನ್ನುವ ಧಾತುವಿಗೆ 'ಆತೋಽನುಪಸರ್ಗೇ ಕಃ'(3.2.3.) ಎನ್ನುವ ಸೂತ್ರದ ನಿಯಮಾನುಸಾರ 'ಕ' ಪ್ರತ್ಯಯವು ಪ್ರಾಪ್ತವಾಗಿ (ಈ ಅಕ್ಷ ಎನ್ನುವ ಶಬ್ದವು ನಿಷ್ಪನ್ನವಾಗಿದೆ ಎಂದು) ತಿಳಿಸಿದಂತಾಯಿತು[1]. 'ಅಕ್ಷಂ-

1. 'ಆದೇಚ ಉಪದೇಶೇಽಶಿತಿ' (6.1.45.) ಎನ್ನುವ ಸೂತ್ರದ ಪ್ರಕಾರ ಏಜಂತ ಧಾತುಗಳಿಗೆ 'ಆತ್ವ'ವು ಪ್ರಾಪ್ತವಾಗಿ 'ನಞ್+ಕ್ಷ್+ಆ' ಎಂದು ಇರಲಾಗಿ, 'ನ ಲೋಪೋ ನಞಃ' ಎನ್ನುವ ಸೂತ್ರದರೀತ್ಯಾ 'ನಞ್' ನಲ್ಲಿರುವ ನಕಾರಕ್ಕೆ ಲೋಪವು ಬರಲಾಗಿ 'ಅ+ಕ್ಷ್+ಆ' ಎಂದು ಸಿದ್ಧವಾಗುವುದು. 'ಆತೋಽನುಪಸರ್ಗೇ ಕಃ' ಎನ್ನುವ ಸೂತ್ರದ ಪ್ರಕಾರ ಆದಂತಧಾತುವಿಗೆ

ಪುಟ 489ರಲ್ಲಿ.......

ಅಕ್ಷಯಂ (ನಾಶರಹಿತ)' ಎಂದು ನಿರ್ವಚಿಸುವುದು (ಇಂದ್ರಿಯಗಳಿಗೆ ಈ ನಾಮವು) ಅನ್ವರ್ಥವೋ ಅಥವಾ ಅಲ್ಲವೋ ಎನ್ನುವ ಸಂದೇಹವು ಪ್ರಾಪ್ತವಾಗಲು ಉತ್ತರಿಸುವರು '**ಪುರುಷಸ್ಯ ಸ್ವರೂಪೇ**' ಎಂದು. ಈ ನಿರ್ವಚನವು **ಪುರುಷಸ್ಯ**- ಈಶ್ವರಾದಿಗಳ[1], ಸ್ವರೂಪೇಂದ್ರಿಯದ ವಿಷಯದಲ್ಲಿ ಮುಖ್ಯವಾಗಿ ಅನ್ವರ್ಥವೇ (ಆಗಿದೆ). ಆದರಿಂದ ಭಿನ್ನವಾದ ಇಂದ್ರಿಯಗಳಲ್ಲಿ ಅಕ್ಷಶಬ್ದವು ಔಪಚಾರಿಕ (ಗೌಣಾರ್ಥದಲ್ಲಿದೆ). ಏಕೆ? ಯಾವಕಾರಣದಿಂದ (ಇಂದ್ರಿಯಗಳು) ಸ್ವರೂಪತಃ ನಿತ್ಯವಾದರೂ ಅವುಗಳಿಗೆ ಸೃಷ್ಟಿಕಾಲದಲ್ಲಿ ಭೌತಿಕಾಹಂಕಾರದಿಂದ ಉಪಚಯ ರೂಪವಾದ ಉತ್ಪತ್ತಿಯು ಇದೆ, ಪ್ರಲಯಕಾಲದಲ್ಲಿ ಅದಕ್ಕೆ (ಉಪಚಿತಭಾಗಕ್ಕೆ) ನಾಶವೂ (ಇದೆ), ಮುಖ್ಯವಾದದು (ಅಕ್ಷಯತ್ವವು) ಅಸಂಭಾವಿತವಾದುದರಿಂದ ಏಕದೇಶದಲ್ಲಿ ಕ್ಷಯವಿರುವ ಕಾರಣದಿಂದ ಅಮುಖ್ಯವೃತ್ತಿ ಎಂದು[2].

ಪ್ರತ್ಯಕ್ಷಾದಿತ್ರಯದಲ್ಲಿ ಅಂತರ್ಭಾವವನ್ನು ಹೊಂದದ ಅನುಭವಕ್ಕೆ ಪ್ರಾಮಾಣ್ಯವೇ ಇಲ್ಲವಾದುದರಿಂದ ಅನುಭವದ ವಿರೋಧದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವನ್ನು ಹೇಗೆ ಹೇಳುವಿರಿ? ಎನ್ನುವ ಸಂದೇಹವನ್ನು ಇದರಿಂದ (ಅಕ್ಷಶಬ್ದದ ನಿರ್ವಚನದಿಂದ) ಪರಿಹರಿಸಿದಂತಾಯಿತು. ಸ್ವರೂಪೇಂದ್ರಿಯ-ದಿಂದ ಅಭಿವ್ಯಕ್ತವಾದ ಅನುಭವವು ಪ್ರತ್ಯಕ್ಷದಲ್ಲಿಯೇ ಅಂತರ್ಭೂತ-ವಾಗುವುದರಿಂದ.

---

...... ಪುಟ 488 ರಿಂದ

'ಕ' ಪ್ರತ್ಯಯವು ಪ್ರಾಪ್ತವಾಗುವುದು. 'ಲಶಕ್ವತದ್ಧಿತೇ' ಎನ್ನುವ ಸೂತ್ರದ ನಿಯಮದಂತೆ ಕಕಾರಕ್ಕೆ ಲೋಪವು ಪ್ರಾಪ್ತವಾಗಲು ಅ+ಕ್ಷ್+ಅ+ಅ' ಎಂದು ಸಿದ್ಧವಾಗಲಾಗಿ, 'ಆತೋ ಲೋಪ ಇಟಿ ಚ' (6.4.64.) ಎನ್ನುವ ಸೂತ್ರದಂತೆ ಧಾತುವಿನ ಮೇಲಿರುವ 'ಆಕಾರಕ್ಕೆ' ಲೋಪವು ಪ್ರಾಪ್ತವಾಗಲು ಅ+ಕ್ಷ್+ಅ= ಅಕ್ಷ ಎನ್ನುವ ರೂಪವು ಸಿದ್ಧವಾಗುವುದು ಎಂದು ಭಾವ.

1. ಆದಿಪದದಿಂದ ಮುಕ್ತರ ಎಂದು ಗ್ರಹಿಸುವುದು.

2. ಸೂಕ್ಷ್ಮೇಂದ್ರಿಯಾಣಿ ಸನ್ತ್ಯೇವ ಸ್ಯುಃ ಸ್ಥೂಲಾನ್ಯಪ್ಯಹಙ್ಕೃತೇಃ । ತೇಷಾಂ ಭೂತ್ಯೈರುಪಚಯಃ ಸೃಷ್ಟಿಕಾಲೇ ವಿಧೀಯತೇ ॥ ಎಂದು ಭಾಗವತತಾತ್ಪರ್ಯದಲ್ಲಿ ಉಕ್ತವಾದ ಪ್ರಮಾಣವು ತಿಳಿಸುತ್ತದೆ.

**ಸಂಭವ-ಪರಿಶೇಷಾದಿಗಳ ಅಂತರ್ಭಾವ, ಅನುಮಾನ ಆಗಮ ಶಬ್ದಗಳ ನಿರ್ವಚನ**

**ಉಪಪತ್ತಿಸ್ವರೂಪತ್ವಾದ್ ಅನುಮಾ ಸಮ್ಭವಾದಿಕಮ್ ।**
**ಪ್ರತ್ಯಕ್ಷಾಗಮಮಾಹಾತ್ಮ್ಯಾದನುಮಾನಂ ಪ್ರಮಾಣತಾಮ್ ।**
**ಯಾತಿ, ನೈವನ್ಯಥಾ, ತಸ್ಯ ನಿಯತತ್ವಂ ಕ್ವಚಿದ್ ಭವೇತ್ ॥**
**ಇತಿ ಬ್ರಹ್ಮತರ್ಕೇ ॥**

ಸಂಭವ ಮುಂತಾದವು ಯುಕ್ತಿಸ್ವರೂಪವಾದುದರಿಂದ ಅನುಮಾನದಲ್ಲಿಯೇ ಅಂತರ್ಭಾವ. ಪ್ರತ್ಯಕ್ಷ ಮತ್ತು ಆಗಮದ ಅವಲಂಬನದಿಂದ ಅನುಮಾನವು ಅರ್ಥನಿಶ್ಚಾಯಕವಾಗುವುದು, ಇಲ್ಲದಿದ್ದಲ್ಲಿ (ಪ್ರತ್ಯಕ್ಷಾಗಮವನ್ನು ಅವಲಂಬಿಸದ ಪಕ್ಷದಲ್ಲಿ) ಅನುಮಾನಕ್ಕೆ ಎಲ್ಲೂ ಸಹ ಅರ್ಥನಿಶ್ಚಾಯಕತ್ವವು ಇಲ್ಲ. ಎಂದು ಬ್ರಹ್ಮತರ್ಕದಲ್ಲಿ ತಿಳಿಸಲಾಗಿದೆ.

ಪ್ರಮಾಣತ್ರಿತ್ವಸಿದ್ಧಯೇ ಸಮ್ಭವಪರಿಶೇಷಾದೀನಾಮನ್ತರ್ಭಾವಮಾಹ **'ಉಪಪತ್ತಿ..'** ಇತಿ । ವ್ಯಾಪ್ತಿಸ್ಮರಣಮಪೇಕ್ಷ್ಯಾರ್ಥಪ್ರಮಿತಿಜನಕತ್ವಾತ್ ಸಮ್ಭವಾದಿಕಮಪಿ ಪ್ರಮಾಣಮನುಮೈವ । ಏವಮೈತಿಹ್ಯಸ್ಯಾಪ್ಯಾಗಮೇಽನ್ತರ್ಭಾವೋ ವಾಚ್ಯಃ । 'ಅರ್ಥಾಪತ್ತ್ಯಾದೀನಿ ವಾದಿಭಿಃ ಪೃಥಕ್ ಪ್ರಮಾಣತಯಾಽಙ್ಗೀಕೃತಾನಿ, ನತು ಸಮ್ಭವಾದೀನಿ, ಕಿನ್ತು ಪ್ರತೀತಮೇವ ತೇಷಾಂ ಪೃಥಕ್ತ್ವಮ್' ಇತಿ ಜ್ಞಾಪನಾಯ ವಿಪ್ರಕರ್ಷೇಣಾನ್ತರ್ಭಾವೋಕ್ತಿಃ ।

ಪ್ರತ್ಯಕ್ಷಶಬ್ದೇ ನಿರುಕ್ತೇಽನುಮಾನಶಬ್ದೇ ಚ ಪ್ರಸ್ತುತೇ ತನ್ನಿರ್ವಚನಜಿಜ್ಞಾಸಾಯಾಂ ತತ್ಸೂಚಯನ್ನಾಹ 'ಪ್ರತ್ಯಕ್ಷ..' ಇತಿ । ಅನುಕೂಲಾಭ್ಯಾಂ ಪ್ರತ್ಯಕ್ಷಾಗಮಾಭ್ಯಾಮುಪಾಧಿಪ್ರತಿಪಕ್ಷನಿರಾಸಾತ್ ಪ್ರಮಾಣತಾಮರ್ಥನಿಶ್ಚಾಯಕತಾಂ ಯಾತಿ । ಅನ್ಯಥೋಪಾಧ್ಯಾದಿಗ್ರಸ್ತತ್ವೇ ತಸ್ಯ ನಿಯತತ್ವಂ-ನಿಶ್ಚಯಹೇತುತ್ವಮ್ । ಏತೇನ 'ಅನುಸೃತ್ಯ ಮಾನಂ- ಅನುಮಾನಂ' ಇತಿ ನಿರ್ವಚನಂ ಸೂಚಿತಮ್ । ಏವಂ 'ಆ- ಸಮನ್ತಾತ್ ಗಮ್ಯತೇ ಅನೇನ ಅರ್ಥಃ' ಇತ್ಯಾಗಮಶಬ್ದನಿರುಕ್ತಿಃ ದ್ರಷ್ಟವ್ಯೇತಿ । ಏತೇನ **'ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್'** ಇತ್ಯುಕ್ತಂ ದೃಢೀಕೃತಂ ಭವತಿ ।

'ಪ್ರಮಾಣಗಳು ಮೂರು' ಎಂಬುವುದನ್ನು ಸಾಧಿಸುವದಕ್ಕಾಗಿ ಸಂಭವ

ಮತ್ತು ಪರಿಶೇಷ ಮುಂತಾದವುಗಳಿಗೆ (ಈ ಮೂರು ಪ್ರಮಾಣಗಳಲ್ಲೇ) ಅಂತರ್ಭಾವವನ್ನು ಹೇಳುತ್ತಾರೆ '**ಉಪಪತ್ತಿ..**' ಎಂದು. ವ್ಯಾಪ್ತಿಸ್ಮರಣೆಯನ್ನು ಅನುಸರಿಸಿಯೇ ವಿಷಯದ ಅರಿವನ್ನು ಉಂಟುಮಾಡುವುದರಿಂದ ಸಂಭವಾದಿ ಪ್ರಮಾಣಗಳನ್ನೂ ಅನುಮಾನವೇ (ಎಂದು ಹೇಳಲಾಗುವುದು)[1]. ಇದೇ ರೀತಿಯಲ್ಲಿ ಐತಿಹ್ಯವನ್ನು ಆಗಮದಲ್ಲಿ ಅಂತರ್ಭೂತ ಎಂದು ಹೇಳಲಾಗುವುದು. ಅರ್ಥಾಪತ್ಯಾದಿಗಳನ್ನು ಪ್ರತ್ಯೇಕ ಪ್ರಮಾಣಗಳು ಎಂದು (ಕೆಲವು) ವಾದಿಗಳು ಅಭಿಮತಿಸಿರುವರು. ಸಂಭವಾದಿಗಳನ್ನಾದರೋ (ಯಾವ ವಾದಿಗಳೂ) ಅಭಿಮತಿಸಿಲ್ಲ. ಅವು ಕೇವಲ ಪ್ರಾತೀತಿಕವಾಗಿವೆ (ಆದುದರಿಂದ) ಅವುಗಳನ್ನು (ಸಂಭವಾದಿಗಳನ್ನು) ಇವುಗಳಿಂದ (ಅರ್ಥಾಪತ್ಯಾದಿಗಳಿಂದ) ವಿಭಿನ್ನ ಎಂದು ತಿಳಿಸುವ ನಿಮಿತ್ತವಾಗಿ ಪ್ರತ್ಯೇಕವಾಗಿ ಅಂತರ್ಭಾವವನ್ನು ತಿಳಿಸಲಾಗಿದೆ.

ಪ್ರತ್ಯಕ್ಷಶಬ್ದದ ನಿರ್ವಚನವನ್ನು ಮಾಡಿದ ಅನಂತರದಲ್ಲಿ ಪ್ರಸ್ತುತವಾದದ್ದು ಅನುಮಾನ, ಅದರ ನಿರ್ವಚನದ ಜಿಜ್ಞಾಸೆಯು ಪ್ರಾಪ್ತವಾಗಲು ಅದನ್ನು ಸೂಚಿಸಲು ಹೇಳುವರು '**ಪ್ರತ್ಯಕ್ಷ..**' ಎಂದು. ಪ್ರತ್ಯಕ್ಷ ಮತ್ತು ಆಗಮಗಳಿಂದ ಸಂವಾದಿತವಾದ (ಅನುಮಾನಕ್ಕೆ ಆಪಾದಿಸುವ) ಉಪಾಧಿ-ಪ್ರತಿಪಕ್ಷಗಳು ನಿರಸಿತವಾಗುವುದರಿಂದ, **ಪ್ರಮಾಣತಾಂ**- ವಿಷಯನಿಶ್ಚಾಯಕತ್ವವನ್ನು ಹೊಂದುವುದು. ಹಾಗಾಗದ ಪಕ್ಷದಲ್ಲಿ (ಪ್ರತ್ಯಕ್ಷಾಗಮಗಳ ಸಂವಾದವಿಲ್ಲದ ಪಕ್ಷದಲ್ಲಿ) ಉಪಾಧ್ಯಾದಿಗಳಿಂದ ಗ್ರಸ್ತವಾದಲ್ಲಿ ಅದಕ್ಕೆ (ಅನುಮಾನಕ್ಕೆ) **ನಿಯತತ್ವಂ**- ನಿಶ್ಚಯಕಾರಣತ್ವವು (ಇರುವುದಿಲ್ಲ). ಇದರಿಂದ 'ಅನುಸೃತ್ಯ ಮಾನಂ- ಅನುಮಾನಂ' ಎಂದು ನಿರ್ವಚನವನ್ನು ಸೂಚಿಸಿದಂತಾಯಿತು. ಇದೇ ರೀತಿಯಲ್ಲಿ 'ಆ- ಸಮಂತಾತ್ (ಚೆನ್ನಾಗಿ) ಗಮ್ಯತೇ (ತಿಳಿಸುತ್ತದೆ)'

---

1. 'ನೂರು ಯೋಜನ ವಿಸ್ತೀರ್ಣದ ಸಾಗರವನ್ನು ಲಂಘಿಸಿದ ಆಂಜನೇಯನು, ಹತ್ತು ಯೋಜನ ವಿಸ್ತೀರ್ಣದ ನದಿಯನ್ನು ಲಂಘಿಸುವುದು ಸಂಭಾವಿತ' ಎನ್ನುವುದು ಸಂಭವಪ್ರಮಾಣಕ್ಕೆ ಉದಾಹರಣೆ. 'ಅಲ್ಲಿದ್ದ ಚೈತ್ರ-ಮೈತ್ರರಲ್ಲಿ ಮೈತ್ರನು ಕಳ್ಳನಲ್ಲ ಎಂದಾದಲ್ಲಿ, ಉಳಿದವ ಚೈತ್ರನೇ ಕಳ್ಳ' ಎನ್ನುವದು ಪರಿಶೇಷಪ್ರಮಾಣಕ್ಕೆ ಉದಾಹರಣೆ. ಆದಿ ಪದದಿಂದ ಮುಖಮುದ್ರೆಯಿಂದ, ಕರಗಳ ಸೂಚನೆಯಿಂದ ವ್ಯಕ್ತವಾಗುವ ಅರಿವನ್ನು ಪರಿಗ್ರಹಿಸಬೇಕು ಎಂದು ಭಾವ.

ಎನ್ನುವ ಅರ್ಥದಲ್ಲಿ ಆಗಮ ಶಬ್ದದ ನಿರ್ವಚನವನ್ನು ತಿಳಿಯುವುದು. ಇದರಿಂದ (ಅನುಮಾನವು ಪ್ರತ್ಯಕ್ಷಾಗಮಗಳಿಂದ ಸಂವಾದಿತವಾದಲ್ಲಿ ಪ್ರಮಾಣ ವಾಗುವುದು ಎಂದು ಹೇಳಿದ್ದರಿಂದ) '**ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್**'- ವಿರುದ್ಧವಾಗಿಯೂ ಅನುಮಾನವನ್ನು ಹೇಳಲು ಶಕ್ಯವಿದೆ' ಎಂದು ಹೇಳಿದ್ದು ದೃಢೀಕೃತವಾಯಿತು[1].

**-: ಬ್ರಹ್ಮತರ್ಕವಾಕ್ಯೋದ್ಧರಣವು ಪರಿಸಮಾಪ್ತವಾಯಿತು :-**

## ॥ ಭೇದವಾಕ್ಯಪ್ರಾಬಲ್ಯವಾದ ॥

ಅನನುವಾದಕವಾದುದರಿಂದ ಐಕ್ಯವಾಕ್ಯಗಳು ಪ್ರಬಲ, ಅನುವಾದಕವಾದುದರಿಂದ ಬೇದವಾಕ್ಯಗಳು ದುರ್ಬಲ. ಮತ್ತು ವೇದಗಳು ಅಪೌರುಷೇಯವಾದುದರಿಂದ ದೋಷಶಂಕಾರಹಿತವಾಗಿ ಪ್ರಬಲ, ಪ್ರತ್ಯಕ್ಷಾದಿಗಳಾದರೋ ದೋಷಶಂಕಾಕಲಂಕಿತವಾದುದರಿಂದ ದುರ್ಬಲ ಎನ್ನುವುದು ಅಸಂಗತ. ಅನ್ಯಪ್ರಮಾಣಪ್ರಾಪ್ತವಾದದ್ದನ್ನು ತಿಳಿಸಿದಲ್ಲಿ ಅನುವಾದಕ ಹಾಗಾಗಿ ಅದು ದುರ್ಬಲ ಎಂದು ಒಪ್ಪಿದಲ್ಲಿ 'ನೈವ ಕಿಂಚನ ಆಸೀತ್' 'ಅಸದಃ ಸದಜಾಯತ' ಇತ್ಯಾದಿ ವಾಕ್ಯಗಳಿಂದ ಆಪಾತತಃ ತೋರುವ ಸರ್ವಶೂನ್ಯ ವಾದವನ್ನು, ಶೂನ್ಯದಿಂದ ಈ ಜಗದ ಉತ್ಪತ್ತಿಯನ್ನು ಪ್ರಾಮಾಣಿಕ ಎಂದು ಒಪ್ಪಬೇಕಾದೀತು. ಹೇಗೆ ಐಕ್ಯವಾಕ್ಯಗಳನ್ನು ಪ್ರತ್ಯಕ್ಷಾದಿಗಳು ಬಾಧಿ ಸಲಾರವೋ ಹಾಗೆಯೇ ಶೂನ್ಯಪ್ರತಿಪಾದಕವಾಕ್ಯಗಳನ್ನೂ ಅನುಮಾನಾದಿಗಳು ಬಾಧಿಸಲಾರವು ಎಂಬ ಪ್ರತಿತರ್ಕವನ್ನು ಇಲ್ಲಿ ವಿಶದಪಡಿಸಲಾಗಿದೆ. ಭೇದವನ್ನು ತಿಳಿಸುವ ಪ್ರತ್ಯಕ್ಷಾನುಮಾನಗಳು ಉಪಜೀವ್ಯವಾಗಿ ಪ್ರಬಲವಾದುದರಿಂದ

---

1. ಈಶ್ವರನು ಆಗಮದ ಹೊರತಾಗಿ ಬೇರೆ ಪ್ರಮಾಣದಿಂದ ತಿಳಿಯಲಾರನು, ಆದುದರಿಂದ ವೇದವು ಜೀವೇಶ್ವರರ ಭೇದವನ್ನು ಅನುವಾದಿಸಲಾರದು ಎಂದು ತತ್ತ್ವವಾದಿಗಳು ಹೇಳಿದಾಗ, ಅನುಮಾನದಿಂದ ಈಶ್ವರನನ್ನು ತಿಳಿಯಬಹುದಲ್ಲವೇ? ಎನ್ನುವ ಸಂದೇಹವನ್ನು ನಿರಾಕರಿಸುವಾಗ 'ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್' ಎಂದು (ಪುಟ 350ರಲ್ಲಿ) ತಿಳಿಸಲಾಗಿತ್ತು. ಈಗ ಅನುಮಾನ ಶಬ್ದವನ್ನು ನಿರ್ವಚಿಸುವ ಮುಖಾಂತರ ಅನುಮಾನದ ಸ್ವರೂಪವನ್ನು ತಿಳಿಸಿದ್ದರಿಂದ 'ಸ್ವತಂತ್ರವಾಗಿ ಅನುಮಾನವು ಪ್ರಾಮಾಣ್ಯವನ್ನು ಹೊಂದಲಾರದು' ಎನ್ನುವದನ್ನು ದೃಢಪಡಿಸಿದಂತಾಯಿತು ಎಂದು ಭಾವ.

ಐಕ್ಯಗಮವು ಬಾಧಿಸಲಾರದು. ಆದುದರಿಂದ ಜೀವೇಶ್ವರಭೇದದಲ್ಲಿಯೇ ಸಕಲಾಗಮಗಳಿಗೆ ತಾತ್ಪರ್ಯ ಎನ್ನುವುದೇ ಉಚಿತ.

**ಅನುವಾದಕವಾಗಲಿ ಅನನುವಾದಕವಾಗಲೀ ಭೇದವಾಕ್ಯವೇ ಪ್ರಬಲ**

**ಅತ್ರ ಚೋಪಜೀವ್ಯತ್ವೇನ ಪ್ರಮಾಣಪ್ರಾಬಲ್ಯಾದ್ ಭೇದ ಏವ ತಾತ್ಪರ್ಯಂ ಯುಕ್ತಮ್ ।**

ಇಲ್ಲಿ (ಬ್ರಹ್ಮತರ್ಕದಲ್ಲಿ) ಪ್ರಮಾಣಗಳಲ್ಲಿ ಪಜೀವ್ಯವಾದದ್ದು ಪ್ರಬಲ ಎಂದು ಪ್ರತಿಪಾದಿಸಿದ್ದರಿಂದ, ಪ್ರಕೃತದಲ್ಲೂ (ಭೇದಬೋಧಕಪ್ರಮಾಣವು ಉಪಜೀವ್ಯವಾಗಿ ಪ್ರಬಲವಾದುದರಿಂದ ವೇದಗಳಿಗೆ) ಭೇದದಲ್ಲೇ ತಾತ್ಪರ್ಯವನ್ನು ಹೇಳುವುದು ಯುಕ್ತ.

ಇದಾನೀಂ ಪ್ರಕೃತಮನುಸರನ್ನುಕ್ತಮೇವಾರ್ಥಂ ವಿಶದಯತಿ '**ತಥಾಚೋಕ್ತಮ್**' ಇತ್ಯತಃ ಪ್ರಾಕ್ತನೇನ ಗ್ರನ್ಥೇನ । ಯದುಕ್ತಂ '**ಉಪಜೀವ್ಯವಿರೋಧಾದೈಕ್ಯಾಗಮಸ್ಯಾಪ್ರಾಮಾಣ್ಯಮ್**' ಇತಿ ತದಸತ್ । ಅಪೌರುಷೇಯತ್ವೇನ ನಿರ್ದೋಷಸ್ಯಾಪ್ರಾಮಾಣ್ಯಾಯೋಗಾತ್ ಇತ್ಯತ ಆಹ '**ಅತ್ರ ಚ**' ಇತಿ । **ಅತ್ರ**- ಬ್ರಹ್ಮತರ್ಕವಾಕ್ಯೇ **ಚ**, ಉಪಜೀವ್ಯತ್ವೇನ ಪ್ರಮಾಣಪ್ರಾಬಲಸ್ಯೋಕ್ತತ್ವಾದುಪಪತ್ತಿಸಿದ್ಧತಾಚ್ಚ, **ಅತ್ರ ಚ**- ಪ್ರಕೃತೇಽಪಿ, ಉಪಜೀವ್ಯತ್ವೇನ ಭೇದಪ್ರಮಾಣಪ್ರಾಬಲ್ಯಾತ್, ತದ್ವಿರುದ್ಧಸ್ಯೈಕ್ಯಾಗಮಸ್ಯಾಪಿ ಉಪಜೀವ್ಯಾನುಸಾರೇಣ ಜೀವೇಶ್ವರಭೇದ ಏವ ತಾತ್ಪರ್ಯಂ ಯುಕ್ತಮ್, ನ ತು ತದಭೇದ ಇತ್ಯೇವಂ, 'ಪ್ರತೀತಾರ್ಥಪ್ರಚ್ಯುತಿರೇವಾಪ್ರಾಮಾಣ್ಯಪದೇನೋಕ್ತಾ, ನ ತು ಸರ್ವಥಾ ಅಪ್ರಾಮಾಣ್ಯಮ್' ಇತಿ ಭಾವಃ ।

ಈಗ ಪ್ರಕೃತವಾದ ವಾದವನ್ನು ಅನುಸರಿಸಿ , ತಿಳಿಸಿದ ವಿಷಯವನ್ನೇ ವಿಶದಗೊಳಿಸುವರು '**ತಥಾಚೋಕ್ತಮ್**' ಎನ್ನುವ (ಮುಂದೆ (576ನೇ ಪುಟದಲ್ಲಿ) ಬರಲಿರುವ ವಾಕ್ಯದ) ಮುಂಚಿನ ಗ್ರಂಥದಿಂದ. '**ಉಪಜೀವ್ಯವಿರೋಧಾದ್ ಐಕ್ಯಾಗಮಸ್ಯಾಪ್ರಾಮಾಣ್ಯಂ**- ಉಪಜೀವ್ಯ ಪ್ರಮಾಣಗಳಿಂದ ವಿರುದ್ಧವಾದುದರಿಂದ ಐಕ್ಯವಾಕ್ಯಗಳು ಅಪ್ರಮಾಣ' ಎಂದು ಹಿಂದೆ (ಪುಟ 387ರಲ್ಲಿ) ಏನು ಹೇಳಲಾಗಿದೆ ಅದು ಸರಿಯಾದುದಲ್ಲ. (ವೇದವು)

ಅಪೌರುಷೇಯವಾದು- ದರಿಂದ, ನಿರ್ದುಷ್ಟವಾದುದಕ್ಕೆ ಅಪ್ರಾಮಾಣ್ಯವು ಅನುಪಪನ್ನವಾದುದರಿಂದ? ಎಂದು, ಆದುದರಿಂದ ಉತ್ತರಿಸುವರು 'ಅತ್ರ ಚ' ಎಂದು. **ಅತ್ರ ಚ**- ಬ್ರಹ್ಮತರ್ಕದ ವಾಕ್ಯದಲ್ಲಿಯಾದರೋ, ಉಪಜೀವ್ಯತ್ವ-ನಿಮಿತ್ತದಿಂದ ಪ್ರಮಾಣಕ್ಕೆ ಪ್ರಾಬಲ್ಯವನ್ನೇ ಹೇಳಿರುವುದರಿಂದ, ಯುಕ್ತಿಸಿದ್ಧ-ವಾದುದರಿಂದಲೂ ಸಹ, **ಅತ್ರ ಚ**- ಪ್ರಕೃತದಲ್ಲಾದರೋ, ಉಪಜೀವ್ಯ-ವಾದುದರಿಂದ ಭೇದ ಪ್ರಮಾಣವು ಪ್ರಬಲವಾಗುವುದರಿಂದ, ಅದಕ್ಕೆ ವಿರುದ್ಧವಾದ ಐಕ್ಯಾಗಮಕ್ಕೆ ಉಪಜೀವ್ಯವನ್ನು ಅನುಸರಿಸಿ ಜೀವೇಶ್ವರರ ಭೇದದಲ್ಲೇ ತಾತ್ಪರ್ಯವು ಯೋಗ್ಯವಾಗಿದೆ. ಹೊರತಾಗಿ (ಜೀವೇಶ್ವರರ) ಅಭೇದದಲ್ಲಿ ಅಲ್ಲ ಎಂದು, ಈ ರೀತಿಯಾಗಿ 'ಆಪಾತತಃ ತೋರುವ ಅರ್ಥವನ್ನು ಪರಿತ್ಯಜಿಸುವುದನ್ನೇ (ವೇದಕ್ಕೆ) ಅಪ್ರಾಮಾಣ್ಯ' ಎಂದು ಹೇಳಲಾಗಿದೆ ಹೊರತಾಗಿ 'ಸರ್ವಥಾ ಅಪ್ರಾಮಾಣ್ಯ ವನ್ನಲ್ಲ' ಎಂದು ಭಾವ.

#### ಭೇದವು ಸಿದ್ಧವಾಗಿರಲಿ, ಅಸಿದ್ಧವಾಗಿರಲಿ ಐಕ್ಯಾಗಮವು ದುರ್ಬಲ

**ಕಥಂ ಚಾನುವಾದಕತ್ವಂ ಭೇದಸ್ಯ, ಪ್ರಮಾಣೇನಾಸಿದ್ಧೌ? ಸಿದ್ಧೌ ಚ ಕಥಮಭೇದವಾಕ್ಯಸ್ಯಾಬಾಧಃ?**

ಇತರಪ್ರಮಾಣದಿಂದ (ಭೇದವು) ಅಸಿದ್ಧವಾದಲ್ಲಿ ಭೇದಪ್ರತಿಪಾದಕವಾದ (ವೇದ) ವಾಕ್ಯಕ್ಕೆ ಹೇಗೆತಾನೆ ಅನುವಾದಕತ್ವವು ಸಿದ್ಧವಾದೀತು? (ಇತರಪ್ರಮಾಣದಿಂದ ಭೇದವು) ಸಿದ್ಧವಾದಲ್ಲಿ, ಅಭೇದಪ್ರತಿಪಾದಕವಾದ (ವೇದ) ವಾಕ್ಯಕ್ಕೆ, ಹೇಗೆತಾನೆ ಬಾಧವು ಇಲ್ಲವಾದೀತು?

ಯದುಕ್ತಂ 'ಭೇದಾಗಮವಿರೋಧಾದೈಕ್ಯಾಽಗಮಸ್ಯಾಪ್ರಾಮಾಣ್ಯಮ್' ಇತಿ ತದಯುಕ್ತಮ್ । ಭೇದವಾಕ್ಯಾನಾಂ ಪ್ರತ್ಯಕ್ಷಾದಿಸಿದ್ಧಭೇದಾನುವಾದಿತ್ವೇನ ದುರ್ಬಲವತ್ತ್ವಾತ್ । ಐಕ್ಯಾಗಮಸ್ಯ ತ್ವಪೂರ್ವತಾಲಕ್ಷಣಬಲವತ್ತ್ವಾತ್ । ಯದತ್ರೋಕ್ತಮ್ 'ಈಶ್ವರಸ್ಯೈವಾಸಿದ್ಧಿಃ' ಇತಿ, ತನ್ನ । ಕೇವಲಾನುಮಾನೇನ ಈಶ್ವರಸಿದ್ಧ್ಯಭಾವೇಽಪ್ಯಾಗಮಾದ್ಯನುಕೂಲಾನುಮಾನೇನಾಽಗಮೇನೈವ ವಾ ತತ್ಸಿದ್ಧ್ಯುಪಪತ್ತೇಃ? ಇತ್ಯತ ಆಹ 'ಕಥಞ್ಚ' ಇತಿ । ಅನುವಾದಕತ್ವಂ ಭೇದವಾಕ್ಯಾನಾಮಿತಿ ಶೇಷಃ । ಭವತು ಜೀವೇಶ್ವರಯೋಃ ಪ್ರಮಾಣಾನ್ತರೇಣ ಸಿದ್ಧಿರ್ನಚ ತಾವತಾ, ತದ್ಭೇದವಾಕ್ಯಾನಾಮನುವಾದಕತ್ವಂ ಭಿನ್ನವಿಷಯ-

**ತ್ವಾತ್, ಕಿನ್ತು ಭೇದಸ್ಯಾಪಿ ಪ್ರಮಾಣಾನ್ತರೇಣ ಸಿದ್ಧೇ । ನ ಚ ಸಾ ಪರೇಣಾಙ್ಗೀಕರ್ತುಂ ಶಕ್ಯಾ । ಅತೋ ಜೀವೇಶ್ವರಭೇದಸ್ಯ ಪ್ರಮಾಣಾನ್ತರೇಣಾಸಿದ್ಧೌ ಸತ್ಯಾಂ ಭೇದವಾಕ್ಯಾನಾಂ ಕಥಮೇವಾನುವಾದಕತ್ವಂ ಭವತಿ? ಇತಿ ।**

'ಭೇದಾಗಮದ ವಿರೋಧದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯ' ಎಂದು ಏನು ಹೇಳಲಾಗಿದೆಯೋ ಅದು ಅಯುಕ್ತವಾಗಿದೆ. ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಭೇದದ ಅನುವಾದಕತ್ವವೇ ಭೇದವಾಕ್ಯಗಳಿಗೆ ಇರುವುದರಿಂದ ದೌರ್ಬಲ್ಯವೇ ಪ್ರಾಪ್ತವಾಗುವುದರಿಂದ. ಐಕ್ಯಾಗವುಕ್ಕಾದರೋ ಅಪೂರ್ವತಾ ಎಂಬ ಪ್ರಾಬಲ್ಯವೇ ಇರುವುದರಿಂದ[1]. ಯಾವುದನ್ನು ಇಲ್ಲಿ (ಈ ಗ್ರಂಥದಲ್ಲಿ ಈ ಹಿಂದೆ) ಹೇಳಲಾಗಿದೆಯೋ **'ಆಗಮಂ ವಿನಾ ಈಶ್ವರಸ್ಯೈವಾಸಿದ್ಧಿಃ'** ಎಂದು ಅದು ಸರಿಯಾದುದಲ್ಲ[2]. ಕೇವಲ ಅನುಮಾನದಿಂದ (ಪ್ರತ್ಯಕ್ಷಾಗಮಗಳ ಸಹಾಯವಿಲ್ಲದ ಅನುಮಾನದಿಂದ) ಈಶ್ವರನ ಸಿದ್ಧಿಯಾಗದಿದ್ದರೂ ಆಗಮಾದಿಗಳ ಸಹಕೃತವಾದ ಅನುಮಾನದಿಂದ ಅಥವಾ ಕೇವಲ ಆಗಮದಿಂದ ಅದರ (ಈಶ್ವರನ) ಸಿದ್ಧಿಯು ಯುಕ್ತವಾಗುವುದು (ಆದುದರಿಂದ ಜೀವೇಶ್ವರ ಭೇದವೂ ಸಿದ್ಧವಾಗುವುದು) ಎಂದು, ಆದುದರಿಂದ ಹೇಳುತ್ತಾರೆ **'ಕಥಙ್ಚ'** ಎನ್ನುವುದರಿಂದ. **'ಅನುವಾದಕತ್ವಂ'** (ಇದರ ನಂತರದಲ್ಲಿ) 'ಭೇದವಾಕ್ಯಾನಾಂ' ಎಂದು ಶೇಷಪೂರಣಮಾಡಿಕೊಳ್ಳುವುದು. ಜೀವೇಶ್ವರರ ಸಿದ್ಧಿಯು

1. ಪ್ರಮಾಣಾಂತರದಿಂದ ಸಿದ್ಧವಾದ ವಿಷಯವನ್ನು ತಿಳಿಸಿದಲ್ಲಿ ಅಂತಹ ಪ್ರಮಾಣಗಳಿಗೆ ಅನುವಾದಕಪ್ರಮಾಣಗಳು ಎಂದು, ಬೇರೇ ಪ್ರಮಾಣಗಳಿಂದ ಸಿದ್ಧವಾಗದ ವಿಷಯವನ್ನು ತಿಳಿಸುವ ಪ್ರಮಾಣವು 'ಅಪೂರ್ವತಾ' ಎಂಬ ಗುಣದಿಂದ ಕೂಡಿರುವ ಪ್ರಮಾಣಗಳು ಎಂದು ಶಾಸ್ತ್ರಗಳಲ್ಲಿ ಒಪ್ಪಿತವಾಗಿದೆ. ಪ್ರಕೃತ ಜೀವೇಶ್ವರ ಐಕ್ಯವು ಪ್ರಮಾಣಾಂತರದಿಂದ ಸಿದ್ಧವಾಗದ ವಿಷಯ ಆದನ್ನು ತಿಳಿಸುವ ವೇದ ವಾಕ್ಯಕ್ಕೆ ಅಪೂರ್ವತಾ ರೂಪ ಗುಣವು ಪ್ರಾಪ್ತವಾಗುವುದು ತನ್ನಿಮಿತ್ತ ಅದು ಪ್ರಬಲ ಎಂದು. ಜೀವೇಶ್ವರರ ಭೇದವನ್ನು ಪ್ರತಿಪಾದಿಸುವ ವಾಕ್ಯಗಳು ಅನುವಾದಕಗಳಾದುದರಿಂದ ದುರ್ಬಲ ಎಂದು ಅದ್ವೈತಿಗಳ ಹೃದಯ.
2. ಈಶ್ವರನ ಸಿದ್ಧಿಯು ಆಗಮದಿಂದಲೇ ಎಂದಾದಲ್ಲಿ, ಈಶ್ವರಪ್ರತಿಯೋಗಿಕ ಭೇದವಾಗಲಿ, ಈಶ್ವರಾನುಯೋಗಿಕ ಭೇದವಾಗಲಿ ಬೇರೇ ಪ್ರಮಾಣಗಳಿಂದ ಆಗಲಾರದು, ಆಗಮದಿಂದಲೇ ಸಿದ್ಧವಾಗಬೇಕು. ತನ್ನಿಮಿತ್ತವಾಗಿ ಭೇದಪ್ರತಿಪಾದಕ ವಾಕ್ಯಗಳಿಗೂ ಅಪೂರ್ವತಾವು ಪ್ರಾಪ್ತವಾಯಿತು ಎಂದು. ಅದು ಸರಿಯಾದುದಲ್ಲ ಎಂದು ಭಾವ.

ಪ್ರಮಾಣಾಂತರದಿಂದ ಆಗಲಿ, ಇಷ್ಟರಿಂದಲೇ ಆ ಭೇದವಾಕ್ಯಗಳಿಗೆ ಅನುವಾದಕತ್ವವು ಇಲ್ಲ , (ಏಕೆಂದರೆ) ಭಿನ್ನವಿಷಯವಾದುದರಿಂದ, ಮತ್ತೇನೆಂದರೆ (ಜೀವೇಶ್ವರರ) ಭೇದವೂ ಪ್ರಮಾಣಾಂತರದಿಂದ ಸಿದ್ಧವಾದಲ್ಲಿ. (ಆದರೆ) ಅದನ್ನು (ಜೀವೇಶ್ವರರ ಭೇದವು ಪ್ರಮಾಣಾಂತರದಿಂದ ಸಿದ್ಧವಾಗಿದೆ ಎನ್ನುವದನ್ನು) ಪರರಿಂದ ಒಪ್ಪಲು ಶಕ್ಯವಿಲ್ಲ. ಆದುದರಿಂದ ಜೀವೇಶ್ವರರ ಭೇದವು ಪ್ರಮಾಣಾಂತರದಿಂದ ಅಸಿದ್ಧವಾಗಲು (ಜೀವೇಶ್ವರರ) ಭೇದವನ್ನು ಪ್ರತಿಪಾದಿಸುವ ವಾಕ್ಯಗಳಿಗೆ ಅನುವಾದಕತ್ವವು ಹೇಗೆ ಪ್ರಾಪ್ತವಾಗುವುದು? ಎಂದು.

**ನ ಕೇವಲಂ ಜೀವೇಶ್ವರೌ, ಕಿಂ ನಾಮ ತದ್ಭೇದೋಽಪಿ ಪ್ರಮಾಣಾನ್ತರಸಿದ್ಧ ಏವ, ಅತೋ ಭೇದವಾಕ್ಯಾನಾಮನುವಾದಕತ್ವಂ ಸ್ಥಿತಮ್? ಇತ್ಯತ ಆಹ 'ಸಿದ್ಧೌ ಚ' ಇತಿ । ಭೇದಸ್ಯ ಪ್ರಮಾಣಾನ್ತರೇಣ ಸಿದ್ಧೌ , ಅಙ್ಗೀಕ್ರಿಯಮಾಣಾಯಾಮಭೇದವಾಕ್ಯಸ್ಯ ತೇನ ಪ್ರಮಾಣೇನಾಬಾಧಃ- ಅನುಪರೋಧಃ ಕಥಂ ಸ್ಯಾತ್? ನ ಕಥಞ್ಚಿತ್ । ಅತೋ ಭೇದವಾಕ್ಯಾನಾಮ್ ಅನುವಾದಕತ್ವಸಿದ್ಧಯೇ ಭೇದಸ್ಯ ಯೇನ ಪ್ರಮಾಣೇನ ಸಿದ್ಧಿರಙ್ಗೀಕ್ರಿಯತೇ ಐಕ್ಯಾಗಮಸ್ಯ ತತ್ಪ್ರಮಾಣೋಪರೋಧಪ್ರಸಙ್ಗಾದ್ ಭೇದಸ್ಯ ಪ್ರಮಾಣಾ- ನ್ತರೇಣ ಸಿದ್ಧೇರಙ್ಗೀಕರ್ತುಮಶಕ್ಯತ್ವೇನ ತದ್ವಾಕ್ಯಾನಾಂ ನಾನುವಾದಕತ್ವಂ ವಕ್ತವ್ಯಮ್ । ಏವಮಪಿ ಭೇದವಾಕ್ಯವಿರೋಧೋಽಭೇದವಾಕ್ಯಾನಾಂ ಸ್ಯಾದಿತಿ ಚೇತ್ ತರ್ಹೀಯಂ ಪರಸ್ಯ 'ಉಭಯತಃ ಪಾಶಾ ರಜ್ಜುಃ' । ತದ್ಭಯಾತ್ ತತ್ತ್ವಮಸ್ಯಾದಿವಾಕ್ಯಾನಾಂ ಭೇದ ಏವ ತಾತ್ಪರ್ಯಮಙ್ಗೀಕಾರ್ಯಮಿತಿ ।**

ಕೇವಲ ಜೀವೇಶ್ವರರಲ್ಲ, ಮತ್ತೇನು ಅವರಲ್ಲಿನ ಭೇದವೂ ಸಹ ಪ್ರಮಾಣಾಂತರದಿಂದ ಸಿದ್ಧವೇ ಆಗಿದೆ. ಆದುದರಿಂದ ಭೇದವಾಕ್ಯಗಳಿಗೆ ಅನುವಾದಕತ್ವವು ಸ್ಥಿರವಾಗಿದೆ? ಎಂದು, ಆದುದರಿಂದ ಉತ್ತರಿಸುತ್ತಾರೆ '**ಸಿದ್ಧೌ ಚ**' ಎಂದು. ಪ್ರಮಾಣಾಂತರದಿಂದ ಭೇದವು ಸಿದ್ಧ ಎಂದು ಒಪ್ಪಿದಲ್ಲಿ ಅಭೇದವಾಕ್ಯಕ್ಕೆ ಆ ಪ್ರಮಾಣದಿಂದ (ಭೇದವನ್ನು ಪ್ರತಿಪಾದಿಸುವ ಪ್ರಮಾಣದಿಂದ) **ಅಬಾಧಃ**- ತಡೆಯಿಲ್ಲದಿರುವಿಕೆಯು (ಬಾಧಾಭಾವವು)

ಹೇಗೆ ಪ್ರಾಪ್ತವಾಗುವುದು? ಹೇಗೂ ಶಕ್ಯವಿಲ್ಲ. ಆದುದರಿಂದ ಭೇದವಾಕ್ಯಗಳಿಗೆ ಅನುವಾದಕತ್ವದ ಸಿದ್ಧಿಗಾಗಿ ಯಾವ ಪ್ರಮಾಣದಿಂದ ಭೇದದ ಸಿದ್ಧಿಯನ್ನು ಅಂಗೀಕರಿಸಲಾಗುವುದೋ, ಆ ಪ್ರಮಾಣದಿಂದ ಐಕ್ಯಾಗಮಕ್ಕೆ ಉಪರೋಧವು ಪ್ರಾಪ್ತವಾಗುವ ಪ್ರಸಂಗವು ಇರುವುದರಿಂದ, ಭೇದವನ್ನು ಪ್ರಮಾಣಾಂತರದಿಂದ ಸಿದ್ಧ ಎಂದು ಒಪ್ಪಲು ಅಶಕ್ಯವಾಗಿರುವುದರಿಂದ, ಆ ವಾಕ್ಯಗಳಿಗೆ (ಭೇದವಾಕ್ಯಗಳಿಗೆ) ಅನನುವಾದಕತ್ವವನ್ನೇ ಹೇಳಬೇಕು. ಹಾಗಾದರೂ (ಭೇದವಾಕ್ಯಗಳು ಅನನುವಾದಕ ಎಂದಾದಲ್ಲಿ ಅಪೂರ್ವತಾ ರೂಪ ಗುಣದಿಂದ ಕೂಡಿವೆ ಎಂದಾಗಿ ಪ್ರಬಲ ಪ್ರಮಾಣವಾಗುವುದರಿಂದ) ಅಭೇದವಾಕ್ಯಗಳಿಗೆ ಭೇದವಾಕ್ಯದ ವಿರೋಧವು ಪ್ರಾಪ್ತವಾಯಿತು ಎಂದಾದಲ್ಲಿ ಪರರಿಗೆ (ಅದ್ವೈತವಾದಿಗಳಿಗೆ) 'ಎರಡು ಕಡೆಯಿಂದಲೂ ಹಗ್ಗದ ಉರುಳು'[1]. ಆ ಭಯದಿಂದ 'ತತ್ತ್ವಮಸಿ' ಮುಂತಾದ (ಐಕ್ಯಪ್ರತಿಪಾದಕವೆಂದು ಅದ್ವೈತಿಗಳು ಒಪ್ಪಿರುವ) ವಾಕ್ಯಗಳಿಗೆ ಭೇದದಲ್ಲೇ ತಾತ್ಪರ್ಯ ಎಂದು ಒಪ್ಪಬೇಕು ಎಂದು.

**ಭೇದಪ್ರತಿಪಾದಕವೇ ಆದ ಪ್ರತ್ಯಕ್ಷ-ವೇದಗಳೆರಡೂ ಪ್ರಮಾಣ**

**ನ ಚಾಪ್ರಮಾಣಸಿದ್ಧೇನಾನುವಾದಕತ್ವಂ ಪ್ರಮಾಣಸ್ಯ ಭವತಿ ।**

ಅಪ್ರಮಾಣಗಳಿಂದ (ಪ್ರತ್ಯಕ್ಷಾದಿ ಪ್ರಮಾಣಗಳಿಂದ) ಸಿದ್ಧವಾದುದರಿಂದ, ಪ್ರಮಾಣಭೂತವಾದುದಕೆ (ಭೇದಪ್ರತಿಪಾದಕ ವೇದವಾಕ್ಯಕ್ಕೆ) ಅನುವಾದಕತ್ವವು ಕೂಡದು.

**ಜೀವೇಶ್ವರಭೇದಃ ಪ್ರತ್ಯಕ್ಷಾದಿಸಿದ್ಧ ಏವ । ತೇನ ಭೇದವಾಕ್ಯಾನಾಮ್**

---

1. ಭೇದವಾಕ್ಯಗಳು ದುರ್ಬಲ ಎಂದಾಗಬೇಕಾದಲ್ಲಿ ಅನುವಾದಕ ಎಂದು ಪ್ರತಿಪಾದಿಸಬೇಕು. ಆಗ ಭೇದವು ಅನ್ಯಪ್ರಮಾಣದಿಂದ ಸಿದ್ಧ ಎಂದು ಒಪ್ಪಬೇಕು. ಭೇದವು ಪ್ರಮಾಣಪ್ರಮಿತವಾದಲ್ಲಿ ಐಕ್ಯಾಗಮಕ್ಕೆ ಭೇದಪ್ರತಿಪಾದಕ ಪ್ರಮಾಣದಿಂದ ವಿರೋಧ. ಇನ್ನು ಭೇದವು ಅನ್ಯಪ್ರಮಾಣದಿಂದ ಪ್ರಮಿತವಾಗಿಲ್ಲ ಎಂದು ಒಪ್ಪಿದಲ್ಲಿ ಭೇದ ಪ್ರತಿಪಾದಕವಾಕ್ಯವೂ ಅಪೂರ್ವ ವಿಷಯವನ್ನು ಪ್ರತಿಪಾದಿಸುವುದು ಎಂದಾಗಿ ಭೇದವಾಕ್ಯಕ್ಕೆ ಪ್ರಾಮಾಣ್ಯವು ಪ್ರಾಪ್ತವಾಗಿ ಆ ಭೇದವಾಕ್ಯದಿಂದಲೇ ಐಕ್ಯಾಗಮಕ್ಕೆ ಬಾಧ. ಒಟ್ಟಿನಲ್ಲಿ 'ಅತ್ತ ದರಿ ಇತ್ತ ಪುಲಿ' ಎನ್ನುವ ನಾಣ್ನುಡಿಯಂತಾಯಿತು ಐಕ್ಯವಾದಿಗಳ ಪ್ರಸಕ್ತಪ್ರಸಂಗ ಎಂದು ಭಾವ.

ಅನುವಾದಿತ್ವಸಿದ್ಧಿಃ । ಕಿನ್ತು ತತ್ಪ್ರತ್ಯಕ್ಷಾದಿಕಮಪ್ರಮಾಣಮೇವ । ವ್ಯಾವಹಾರಿಕತ್ವಮಾತ್ರೇಣ ತತ್ರ ಪ್ರಮಾಣವಾಚೋಯುಕ್ತಿಃ । ಐಕ್ಯವಾಕ್ಯನ್ತು ತತ್ತ್ವಾವೇದಕಂ ಪ್ರಮಾಣಮ್ । ಅತೋ ನ ತತ್ ತೇನೋಪರುಧ್ಯತ? ಇತಿ ಚೇತ್, ಅತ್ರ ವಕ್ತವ್ಯಮ್ । ಭೇದವಾಕ್ಯಮಪಿ ಕಿಮಪ್ರಮಾಣಮ್, ಉತ ಪ್ರಮಾಣಮ್? ಇತಿ । ಆದ್ಯೇ ವಕ್ಷ್ಯಾಮಃ । ದ್ವಿತೀಯೇ ದೋಷಮಾಹ 'ನ ಚ' ಇತಿ । ಅಪ್ರಮಾಣಸಿದ್ಧೇನ ಪ್ರತಿಪಾದಿತೇನ ನಿಮಿತ್ತೇನ, ಯದಿ ಪ್ರತ್ಯಕ್ಷಾದೇರಪ್ರಾಮಾಣ್ಯಂ, ಭೇದವಾಕ್ಯಾನಾನ್ತು ಪ್ರಾಮಾಣ್ಯಮಙ್ಗೀ-ಕ್ರಿಯತೇ ತದಾ ಭಿನ್ನವಿಷಯತ್ವಂ ಸ್ಯಾತ್ । ಸಮಾನವಿಷಯತ್ವೇ ಹಿ ದ್ವಯಮಪಿ ಪ್ರಮಾಣಂ ಸ್ಯಾದಪ್ರಮಾಣಂ ವಾ । ನ ತ್ವಯಂ ವಿಭಾಗಃ । ಭಿನ್ನವಿಷಯತ್ವೇ ಚ ನಾನುವಾದಕತ್ವಂ ಭವತಿ । ಅತಃ 'ಪ್ರಾಮಾಣ್ಯಾ-ಪ್ರಾಮಾಣ್ಯವಿಭಾಗೋಽನುವಾದಕತ್ವಂ ಚೇತಿ ಪರಸ್ಪರಪರಾಹತಮ್' ಇತಿ ಭಾವಃ ।

ಜೀವೇಶ್ವರರ ಭೇದವು ಪ್ರತ್ಯಕ್ಷಾದಿಗಳಿಂದ ಸಿದ್ಧವೇ ಆಗಿದೆ. ಆದುದರಿಂದ ಭೇದವಾಕ್ಯಕ್ಕೆ ಅನುವಾದಕತ್ವವು ಸಿದ್ಧವಾಯಿತು. ಆದರೆ ಪ್ರತ್ಯಕ್ಷಾದಿಗಳು ಅಪ್ರಾಮಾಣಿಕಗಳಾಗಿವೆ. ಅವುಗಳಲ್ಲಿ 'ಪ್ರಮಾಣ' ಎನ್ನುವ ಉಕ್ತಿಯು ಕೇವಲ ವ್ಯಾವಹಾರಿಕ. ಐಕ್ಯವಾಕ್ಯಗಳಾದರೋ ತತ್ತ್ವಾವೇದಕಗಳಾದುದರಿಂದ ಪ್ರಮಾಣವಾಗಿದೆ. ಆದುದರಿಂದ (ಭೇದವಾಕ್ಯಗಳು ಅನುವಾದಕಗಳು ಪ್ರತ್ಯಕ್ಷವು ಅಪ್ರಮಾಣ, ಆದುದರಿಂದ) ಅದು (ಐಕ್ಯವಾಕ್ಯವು) ಉಪರುದ್ಧ ವಾಗುವುದಿಲ್ಲ? ಎಂದಲ್ಲಿ ಆಗ ಕೇಳುವೆವು. ಭೇದವಾಕ್ಯವು ಅಪ್ರಮಾಣವೋ ಅಥವಾ ಪ್ರಮಾಣವೋ? ಮೊದಲ ಪಕ್ಷವಾದಲ್ಲಿ ಮುಂದೆ ಉತ್ತರಿಸುವೆವು. ಎರಡನೆಯ ಪಕ್ಷವಾದಲ್ಲಿ ದೋಷವನ್ನು ಹೇಳುತ್ತಾರೆ 'ನ ಚ' ಎಂದು. ಅಪ್ರಮಾಣದಿಂದ ಸಿದ್ಧವಾದ (ವಿಷಯವನ್ನು) ಪ್ರತಿಪಾದಿಸಿದ ಕಾರಣದಿಂದ[1],

1. ಮೂಲದಲ್ಲಿನ 'ಅಪ್ರಮಾಣಸಿದ್ಧೇನ' ಎನ್ನುವ ವಾಕ್ಯದಲ್ಲಿನ ಸಿದ್ಧೇನ ಎನ್ನುವುದರ ಅರ್ಥವನ್ನು ಟೀಕಾದಲ್ಲಿ 'ಪ್ರತಿಪಾದಿತೇನ ನಿಮಿತ್ತೇನ' ಎಂದು ತಿಳಿಸಲಾಗಿದೆ. ಇಲ್ಲಿ 'ವೃಧಿ ಕರಣೇ ತೃತೀಯಾ' ಎನ್ನುವ ಭಾಷಾನಿಯಮದಂತೆ ತೃತೀಯಾವಿಭಕ್ತಿಗೆ ಷಷ್ಠ್ಯರ್ಥವನ್ನು ಅಭಿಮತಿಸಲಾಗಿದೆ. 'ಅಪ್ರಮಾಣಭೂತವಾದ ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಭೇದದ ಪ್ರತಿಪಾದಕವಾದುದರಿಂದ' ಎಂದು ಒಟ್ಟು ತಾತ್ಪರ್ಯಾರ್ಥ ಎಂದು ಭಾವ.

ಒಂದು ವೇಳೆ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವನ್ನು, ಭೇದವಾಕ್ಯಗಳಿಗಾದರೋ ಪ್ರಾಮಾಣ್ಯವನ್ನು ಒಪ್ಪುವದಾದಲ್ಲಿ ಆಗ ( ಈ ಎರಡೂ ಪ್ರಮಾಣಗಳು) ಭಿನ್ನವಿಷಯಿಗಳಾಗುವವು. ಸಮಾನವಿಷಯಿಗಳಾದಲ್ಲಿ ಎರಡೂ ಪ್ರಮಾಣಗಳಾಗಬೇಕು ಅಥವಾ ಅಪ್ರಮಾಣಗಳಾಗಬೇಕು. ಹೊರತು ಈ ವಿಭಾಗವು ಸಲ್ಲದು. (ಎರಡೂ ಪ್ರಮಾಣಗಳು) ಭಿನ್ನವಿಷಯಕಗಳಾದಲ್ಲಿ ಅನುವಾದಕತ್ವವು ಇಲ್ಲ. ಆದುದರಿಂದ 'ಪ್ರಾಮಾಣ-ಅಪ್ರಮಾಣ ಎನ್ನುವ ವಿಭಜನೆ, ಅನುವಾದಕ ಎನ್ನುವುದು ಪರಸ್ಪರ ವಿರುದ್ಧವಾಗಿದೆ' ಎಂದು ಭಾವ[1].

**ಭೇದಪ್ರತಿಪಾದಕವಾಕ್ಯಗಳೇ ಪ್ರಬಲ**

**ದುರ್ಬಲತ್ವೇ ಚ ಭೇದಪ್ರಮಾಣಸ್ಯಾಽಭಾಸತ್ವಾನ್ನ ಭೇದ-ವಾಕ್ಯಾನಾಮ್ ಅನುವಾದಿತ್ವಮ್ । ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಮ್ ।**

ಭೇದಬೋಧಕಪ್ರಮಾಣಗಳು ದುರ್ಬಲ ಎಂದಾದಲ್ಲಿ, (ಭೇದಬೋಧಕ ಪ್ರತ್ಯಕ್ಷವು) ಪ್ರಮಾಣಾಭಾಸವಾಗುವುದರಿಂದ ಭೇದಪ್ರತಿಪಾದಕ ವಾಕ್ಯಗಳಿಗೆ ಅನುವಾದಕತ್ವವು ಇಲ್ಲ. ಆದುದರಿಂದ (ಅನನುವಾದಕಗಳಾದುದರಿಂದ) ಭೇದವಾಕ್ಯಗಳಿಗೇ ಪ್ರಾಬಲ್ಯ.

**ಕಿಞ್ಚ ಪ್ರತ್ಯಕ್ಷಾದೇಃ ಕುತೋಽಪ್ರಾಮಾಣ್ಯಮ್? ಐಕ್ಯವಾಕ್ಯವಿರೋಧಾದಿತಿ ಚೇನ್ನ । ಅನ್ಯೋನ್ಯಾಶ್ರಯಪ್ರಸಙ್ಗಾತ್- 'ಸಿದ್ಧೇ ಖಲ್ವೈಕ್ಯವಾಕ್ಯ-ಪ್ರಾಮಾಣ್ಯೇ ತದ್ವಿರೋಧೇನ ಪ್ರತ್ಯಕ್ಷಾದೇರಪ್ರಾಮಾಣ್ಯಸಿದ್ಧಿಃ । ತಸ್ಯಾಂ ಚ**

---

1. ಪ್ರಮಾಣ-ಅಪ್ರಮಾಣ ಎಂದು ವಿಭಾಗಿಸಿ, ಅವುಗಳಲ್ಲಿ ಒಂದಕ್ಕೆ ಅನುವಾದಕತ್ವವನ್ನು ಹೇಳುವುದು ವಿರುದ್ಧವಾದ ವಾದವಾಗಿದೆ. ಅಪ್ರಮಾಣದಿಂದ ಪ್ರಾಪ್ತವಾದುದನ್ನು ಅನುವಾದಿಸುವ ವಾಕ್ಯದ ವಿಷಯವೂ ಅಪ್ರಮಾಣವೇ ಆಗಬೇಕು. ಅಥವಾ ಎರಡೂ ಪ್ರಮಾಣವೇ ಆಗಬೇಕು. 'ಪ್ರತ್ಯಕ್ಷಾದಿಗಳು ಹೀಗೆ ತಿಳಿಸುತ್ತಿವೆ ಅದು ಸರಿಯಲ್ಲ' ಎಂದು ವೇದವು ತಿಳಿಸಿದ್ದರೆ, ಆಗ ನೀವು ತಿಳಿಸಿದಂತೆ ವೇದವು ಪ್ರಾಮಾಣಿಕ, ಪ್ರತ್ಯಕ್ಷವು ಅಪ್ರಾಮಾಣಿಕ ಎಂಬ ವಿಭಾಗವು ಸರಿಯಾಗುತ್ತಿತ್ತು. ಆದರೆ ಪ್ರಕೃತದಲ್ಲಿ ಎರಡೂ ಪ್ರಮಾಣಗಳು ಸ್ವತಂತ್ರವಾಗಿ ಜೀವೇಶ್ವರರಭೇದ ಎಂಬ ಒಂದೇ ವಿಷಯವನ್ನು ಪ್ರತಿಪಾದಿಸುತ್ತಿರುವಾಗ ಒಂದನ್ನು ಪ್ರಮಾಣ ಮತ್ತೊಂದನ್ನು ಅಪ್ರಮಾಣ ಎಂದು ವಿಭಜಿಸುವುದು ತರವಾಗಲಾರದು ಎಂದು ಭಾವ.

**ಸತ್ಯಾಂ ವಿರೋಧಿಪ್ರಮಾಣಾಭಾವೇನೈಕ್ಯಪ್ರಾಮಾಣ್ಯಸಿದ್ಧಿಃ' ಇತಿ । ಸ್ಯಾದೇತದನ್ಯೋನ್ಯಾಶ್ರಯತ್ವಂ, ಯದ್ಯೈಕ್ಯವಾಕ್ಯಂ ಭೇದವಿಷಯಂ ಪ್ರತ್ಯಕ್ಷಾದಿಕಂ ಚ ಸಮಬಲಂ ಸ್ಯಾತ್, ನ ತ್ವೇತದಸ್ತಿ । ಶ್ರುತೇಃ ಅಪೌರುಷೇಯತ್ವೇನಾನಾಶಙ್ಕಿತದೋಷಾಯಾಃ ಪ್ರಬಲತ್ವಾತ್ । ಪ್ರತ್ಯಕ್ಷಾದೇಃ ಸಂಭಾವಿತದೋಷಸ್ಯ ತತೋ ದುರ್ಬಲತ್ವಾತ್ । ಪ್ರಬಲಸ್ಯ ದುರ್ಬಲ-ವಿರೋಧಪರಿಹಾರಾನಪೇಕ್ಷಮೇವ ಪ್ರಾಮಾಣ್ಯಸ್ಥಿತೇಃ? ಇತ್ಯತ ಆಹ 'ದುರ್ಬಲತ್ವೇ ಚ' ಇತಿ ।**

ಮತ್ತೂ ಸಹ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವು ಏಕೆ? ಐಕ್ಯವಾಕ್ಯದ ವಿರೋಧವಿರುವುದರಿಂದ ಎಂದೆನ್ನುವುದು ತರವಲ್ಲ. ಅನ್ಯೋನ್ಯಾಶ್ರಯ ಪ್ರಸಂಗವಿರುವುದರಿಂದ- 'ಐಕ್ಯವಾಕ್ಯಗಳಿಗೆ ಪ್ರಾಮಾಣ್ಯವು ಸಿದ್ಧವಾದಲ್ಲಿ ಅದರ ವಿರೋಧವಿರುವುದರಿಂದ (ಜೀವೇಶ್ವರರ ಭೇದವನ್ನು ಗ್ರಹಿಸುವ) ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವು ಸಿದ್ಧವಾಗುವುದು. ಅದು ಇದ್ದಲ್ಲಿ (ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವು ಸಿದ್ಧವಾದಲ್ಲಿ) ವಿರೋಧಿಪ್ರಮಾಣವು ಇಲ್ಲದಿರುವುದರಿಂದ ಐಕ್ಯವಾಕ್ಯಗಳಿಗೆ ಪ್ರಾಮಾಣ್ಯವು ಸಿದ್ಧವಾಗುವುದು' ಎಂದು[1]. ಒಂದು ವೇಳೆ ಐಕ್ಯವಾಕ್ಯವು ಮತ್ತು ಭೇದವನ್ನು ತಿಳಿಸುವ ಪ್ರತ್ಯಕ್ಷಾದಿಗಳೂ ಸಮಬಲಗಳಾಗಿದ್ದಲ್ಲಿ ಈ ಅನ್ಯೋನ್ಯಾಶ್ರಯವು ಪ್ರಾಪ್ತವಾಗುತ್ತಿತ್ತು, ಆದರೆ ಹಾಗಿಲ್ಲ. ಶ್ರುತಿಯು ಅಪೌರುಷೇಯ-ವಾದುದರಿಂದ ದೋಷದ ಸಂದೇಹವನ್ನೇ ಹೊಂದದೇ ಪ್ರಬಲ-ವಾಗಿರುವುದರಿಂದ. ದೋಷವು ಸಂಭಾವಿತವಾದುದರಿಂದ ಪ್ರತ್ಯಕ್ಷಾದಿಗಳಿಗೆ, ಅದರಿಂದ (ಐಕ್ಯಾಗಮದಿಂದ) ದೌರ್ಬಲ್ಯವು ಪ್ರಾಪ್ತವಾಗುವುದರಿಂದ.

1. ಜೀವೇಶ್ವರರ ಭೇದವನ್ನು ಗ್ರಹಿಸುವ ಪ್ರತ್ಯಕ್ಷಾದಿಗಳು ಪ್ರಮಾಣಭೂತವಾದ ಐಕ್ಯವಾಕ್ಯಗಳಿಗೆ ವಿರುದ್ಧವಾದುದರಿಂದ ಅಪ್ರಮಾಣವೆಂದೂ, ಐಕ್ಯವಾಕ್ಯಗಳಿಗೆ ಯಾವುದೇ ಪ್ರಮಾಣದ ವಿರೋಧವಿಲ್ಲದೇ ಇರುವುದರಿಂದ ಅವು ಪ್ರಮಾಣ ಎಂದು ವಾದಿಸಬೇಕು. ಆದರೆ ಪ್ರಕೃತ ಐಕ್ಯವಾಕ್ಯಗಳಿಗೆ ಪ್ರತ್ಯಕ್ಷಾದಿಗಳ ವಿರೋಧವಿದೆ. ಪ್ರತ್ಯಕ್ಷಾದಿಗಳು ಅಪ್ರಮಾಣ ಎಂದಾದಲ್ಲಿ ಐಕ್ಯಾಗಮಕ್ಕೆ ಪ್ರಮಾಣದ ವಿರೋಧವು ಇಲ್ಲದಿರುವುದರಿಂದ ಪ್ರಮಾಣ ಎಂದು ನಿಶ್ಚಯಿಸಬೇಕು, ಐಕ್ಯಾಗಮವು ಪ್ರಮಾಣ ಎಂದು ನಿಶ್ಚಿತವಾದಲ್ಲಿ ಪ್ರತ್ಯಕ್ಷಾದಿಗಳು ಅಪ್ರಮಾಣ ಎಂದು ನಿಶ್ಚಿತವಾಗುವುದು ಹೀಗಾಗಿ ಅನ್ಯೋನ್ಯಾಶ್ರಯ ಎಂದು ಭಾವ.

ಪ್ರಬಲವಾದುದಕ್ಕೆ (ಪ್ರಬಲಪ್ರಮಾಣಕ್ಕೆ) ದುರ್ಬಲದ (ಪ್ರಮಾಣದ) ವಿರೋಧದ ಪರಿಹಾರದ ಅಪೇಕ್ಷೆಯಿಲ್ಲದೆ ಪ್ರಾಮಾಣ್ಯದ ಸ್ಥಿತಿಯು ನಿಶ್ಚಿತವಾಗುವುದರಿಂದ, ಎಂದಲ್ಲಿ ಉತ್ತರಿಸುವರು '**ದುರ್ಬಲತ್ವೇ ಚ**' ಎಂದು.

**ಯದಿ ಶ್ರುತ್ಯಪೇಕ್ಷಯಾ ಭೇದಪ್ರಮಾಣಸ್ಯ ಪ್ರತ್ಯಕ್ಷಾದೇರ್ದುರ್ಬಲ-ತ್ವಮ್ ಆಶ್ರಿತ್ಯಾನ್ಯೋನ್ಯಾಶ್ರಯತ್ವಪರಿಹಾರಃ ಕ್ರಿಯತೇ ತದಾ ಭೇದ-ವಾಕ್ಯಾನಾಮ್ ಅನುವಾದಿತ್ವಮುಚ್ಯಮಾನಂ ನ ಸ್ಯಾತ್, ಕುತಃ? ಆಭಾಸತ್ವಾದಕಿಞ್ಚಿತ್ಕರತ್ವಾತ್ । ಯಥಾ ಹಿ- ದುರ್ಬಲತ್ವಾತ್ ಪ್ರತ್ಯಕ್ಷಾದಿಕಂ ನೈಕ್ಯಶ್ರುತೇರ್ವಿಷಯಾಪಹಾರಂ ಕರೋತಿ, ತಥಾ ಭೇದ-ಶ್ರುತೇರ್ವಿಷಯೋಪಹಾರಮಪಿ ನ ಕರೋತಿ । ತಥಾ ಚ ಸ್ವಾತಂತ್ರ್ಯೇಣ ಸ್ವವಿಷಯೇ ಪ್ರವೃತ್ತಾ ಭೇದಶ್ರುತಿಃ ಕಥಮನುವಾದಿನೀ ಸ್ಯಾದ್? ಇತಿ, ನ ಕೇವಲಮನನುವಾದಿತ್ವಸಾಮ್ಯಾದ್ ಭೇದವಾಕ್ಯಾನಾಂ ಸಮಬಲತ್ವಮ್ । ಕಿನ್ತು ಸ್ವಾತಂತ್ರ್ಯೇಣ ಪ್ರವೃತ್ತಾನಾಂ ಭೇದವಾಕ್ಯಾನಾಂ ದೈವಾದಾಗತೇನ ಪ್ರತ್ಯಕ್ಷಾದಿಸಂವಾದೇನ ಐಕ್ಯವಾಕ್ಯಾಪೇಕ್ಷಯಾ ಪ್ರಾಬಲ್ಯಮೇವ, ತಸ್ಯ ಸಂವಾದಾಭಾವಾದಿತ್ಯಾಹ 'ಅತಶ್ಚ' ಇತಿ । 'ತಥಾಚ ತದ್ವಿರೋಧಾದೈಕ್ಯವಾಕ್ಯಸ್ಯಾಪ್ರಾಮಾಣ್ಯಮ್' ಇತಿ ಶೇಷಃ ।**

ಒಂದು ವೇಳೆ ಶ್ರುತಿಯ ಅಪೇಕ್ಷೆಯಿಂದ ಭೇದಪ್ರಮಾಣವಾದ ಪ್ರತ್ಯಕ್ಷಾದಿಗಳಿಗೆ ದೌರ್ಬಲ್ಯವನ್ನು ಒಪ್ಪಿ ಅನ್ಯೋನ್ಯಾಶ್ರಯತ್ವಕ್ಕೆ (ದೋಷಕ್ಕೆ) ಪರಿಹಾರವನ್ನು ಒಪ್ಪುವದಾದಲ್ಲಿ ಆಗ ಭೇದವಾಕ್ಯಕ್ಕೆ ಹೇಳಿದ ಅನುವಾದಕತ್ವವು ಇಲ್ಲದಾದೀತು. ಏಕೆ? (ಪ್ರತ್ಯಕ್ಷಾದಿಗಳು ಪ್ರಮಾಣದ) ಆಭಾಸವಾಗಿರುವುದರಿಂದ ಏನೂ ಮಾಡಲಾರವು ಆದುದರಿಂದ. ಹೇಗೆ (ಪ್ರತ್ಯಕ್ಷಾದಿಗಳು) ದುರ್ಬಲವಾದುದರಿಂದ ಐಕ್ಯಶ್ರುತಿಯ ವಿಷಯದ ಅಪಹಾರಕವಾಗಲಾರದೋ ಹಾಗೆಯೇ ಭೇದಶ್ರುತಿಗೆ ವಿಷಯದ ಉಪಹಾರಕವೂ(ಆಕರವೂ) ಆಗಲಾರದು. ಹಾಗಾದಲ್ಲಿ ಸ್ವತಂತ್ರವಾಗಿ ತನ್ನ ವಿಷಯದದಲ್ಲಿ ಪ್ರವೃತ್ತವಾದ ಭೇದಶ್ರುತಿಯು ಹೇಗೆ ಅನುವಾದಕವಾದೀತು? ಎಂದು. ಕೇವಲ ಅನನುವಾದಿತ್ವದಿಂದ ಭೇದಶ್ರುತಿಗೆ (ಅಭೇದಶ್ರುತಿಯಿಂದ) ಸಾಮ್ಯತೆಯಿರುವುದರಿಂದ ಸಮಬಲ ಎನ್ನುವಂತಿಲ್ಲ. ಆದರೆ ಸ್ವತಂತ್ರವಾಗಿ

ಪ್ರವೃತ್ತವಾದ ಭೇದವಾಕ್ಯಗಳಿಗೆ ಅದೃಷ್ಟವಶಾತ್ ಪ್ರಾಪ್ತವಾದ ಪ್ರತ್ಯಕ್ಷಾದಿಗಳ ಸಂವಾದವು ಇರುವುದರಿಂದ ಐಕ್ಯವಾಕ್ಯದಿಂದ ಪ್ರಾಬಲ್ಯವೇ, ಅದಕ್ಕೆ (ಐಕ್ಯವಾಕ್ಯಕ್ಕೆ) ಸಂವಾದವಿಲ್ಲದಿರುವುದರಿಂದ (ದುರ್ಬಲ) ಎಂದು ತಿಳಿಸುತ್ತಾರೆ 'ಅತಶ್ಚ' ಎಂದು.'ತಥಾಚ ತದ್ವಿರೋಧಾದ್ ಐಕ್ಯವಾಕ್ಯಸ್ಯಾಪ್ರಾಮಾಣ್ಯಂ, ಭೇದವಾಕ್ಯದ ವಿರೋಧವಿರುವುದರಿಂದ 'ಐಕ್ಯವಾಕ್ಯಕ್ಕೆ ಅಪ್ರಾಮಾಣ್ಯವು' ಎಂದು ಶೇಷ ಪೂರಣಮಾಡಿಕೊಳ್ಳಬೇಕು.

**ಕೇವಲ ಅಪೂರ್ವತೆಯು ಪ್ರಾಮಾಣ್ಯಕ್ಕೆ ಕಾರಕವಾಗದು**

**ಸರ್ವಪ್ರಮಾಣವಿರುದ್ಧವಚನಾನಾಮೇವ ಪ್ರಾಬಲ್ಯಾಙ್ಗೀಕಾರೇ 'ಇದಂ ವಾऽಗ್ರೇ ನೈವ ಕಿಞ್ಚನಾಽಸೀತ್' 'ಅಸತಃ ಸದಜಾಯತ' ಇತ್ಯಾದೀನಾಮೇವಾವಿಚಾರೇಣ ಪ್ರತೀಯಮಾನಸ್ಯಾರ್ಥಸ್ಯ ಸರ್ವ-ಪ್ರಮಾಣವಿರುದ್ಧತ್ವಾತ್ ತತ್ರ ಸರ್ವಾಗಮಾನಾಂ ಮಹಾತಾತ್ಪರ್ಯಂ ಪ್ರಸಜ್ಯೇತ ।**

ಸರ್ವಪ್ರಮಾಣಗಳಿಂದ ವಿರುದ್ಧವಾದ ವಚನಗಳಿಗೇ (ಅಪೂರ್ವತೆಯು ಇರುವುದರಿಂದ) ಪ್ರಾಬಲ್ಯವನ್ನು ಒಪ್ಪಿದಲ್ಲಿ, 'ಇದಂ ವಾऽಗ್ರೇ ಕಿಞ್ಚನಾऽಸೀತ್' 'ಅಸತಃ ಸದಜಾಯತ' (ಸೃಷ್ಟಿಯ ಮೊದಲೂ ಏನೂ ಇರಲಿಲ್ಲ, ಅಸತ್‌ನಿಂದ-ಶೂನ್ಯದಿಂದ ಸತ್ ಉತ್ಪನ್ನವಾಯಿತು) ಈ ಮುಂತಾದವುಗಳಿಗೆ ಮೇಲ್ನೋಟದಿಂದ ಪ್ರತೀಯಮಾನವಾದ ಅರ್ಥವು ಸರ್ವಪ್ರಮಾಣ ವಿರುದ್ಧವಾದುದರಿಂದ ಆ ಅರ್ಥದಲ್ಲಿಯೇ ಎಲ್ಲ ಆಗಮಗಳಿಗೆ ತಾತ್ಪರ್ಯವನ್ನು ಒಪ್ಪಬೇಕಾದೀತು.

**ನನು, ಏತದ್ ವಿಪರೀತಮುಚ್ಯತೇ 'ಪ್ರಮಾಣಾನ್ತರಸಂವಾದವತಾಂ ಭೇದವಾಕ್ಯಾನಾಂ ಪ್ರಾಬಲ್ಯಂ ತದ್ರಹಿತಾನಾಮೈಕ್ಯವಾಕ್ಯಾನಾಂ ದೌರ್ಬಲ್ಯಂ' ಇತಿ । ಯತಃ ಸಂವಾದೋऽಪೂರ್ವತಾವಿರೋಧೀ ತದ್ರಾಹಿತ್ಯಮ್ ಅಪೂರ್ವತಾಹೇತುಃ । ಅಪೂರ್ವತಾ ಚ ಪ್ರಾಬಲ್ಯಲಿಙ್ಗತಯಾ ಪ್ರಸಿದ್ಧಾ । ತತಃ ಪ್ರಮಾಣಾನ್ತರಾಪ್ರಾಪ್ತಮಪೂರ್ವಮರ್ಥಂ ಪ್ರತಿಪಾದಯತಾಮೈಕ್ಯ-ವಾಕ್ಯಾನಾಮೇವ ಪ್ರಾಬಲ್ಯಮ್ । ಅನ್ಯೇಷಾಮಪಿ ವಾಕ್ಯಾನಾಂ 'ತದೇಕ-**

**ವಾಕ್ಯತ್ವಾದ್ ಜೀವೇಶ್ವರೈಕ್ಯೇ ಸರ್ವಾಗಮಾನಾಂ ಮಹಾತಾತ್ಪರ್ಯಮ್' ಇತಿ ।**

ಸರಿ ಆದರೆ, ಇದನ್ನು ವಿರುದ್ಧವಾಗಿ ಹೇಳುತ್ತಿರುವಿರಿ 'ಪ್ರಮಾಣಾಂತರದ ಸಂವಾದವನ್ನು ಹೊಂದಿರುವ ಭೇದವಾಕ್ಯಗಳಿಗೆ ಪ್ರಾಬಲ್ಯ, ಅದಿಲ್ಲದ (ಸಂವಾದವಿಲ್ಲದ) ಐಕ್ಯವಾಕ್ಯಗಳಿಗೆ ದೌರ್ಬಲ್ಯ' ಎಂದು. ಏಕೆಂದರೆ ಸಂವಾದವು ಅಪೂರ್ವತಾಕ್ಕೆ ವಿರೋಧಿಯಾದುದು. ಆದರ (ಸಂವಾದದ) ರಾಹಿತ್ಯವೇ ಅಪೂರ್ವತಾಕ್ಕೆ ಕಾರಣವಾಗಿದೆ[1]. ಅಪೂರ್ವತೆಯು (ಪ್ರಮಾಣದ) ಪ್ರಾಬಲ್ಯಕ್ಕೆ ಕಾರಣ ಎನ್ನುವುದು (ಶಾಸ್ತ್ರ)ಪ್ರಸಿದ್ಧವಾಗಿದೆ[2]. ಆದುದರಿಂದ ಪ್ರಮಾಣಾಂತರದಿಂದ ಅಪ್ರಾಪ್ತವಾದ (ಅಗ್ರಹೀತವಾದ) ಅಪೂರ್ವಾರ್ಥ-ವನ್ನು ಪ್ರತಿಪಾದಿಸುವ ಐಕ್ಯವಾಕ್ಯಗಳಿಗೆ ಪ್ರಾಬಲ್ಯ. (ವೇದದ) ಬೇರೆ ವಾಕ್ಯಗಳಿಗೆ ಇದರಿಂದ (ಐಕ್ಯವಾಕ್ಯದಿಂದ) ಏಕಾಭಿಪ್ರಾಯವಿರುವುದರಿಂದ ಜೀವೇಶ್ವರೈಕ್ಯದಲ್ಲೇ ಸಮಸ್ತ ಆಗಮಗಳಿಗೆ ತಾತ್ಪರ್ಯವಿದೆ ಎಂದು.

**ಅತ್ರ ವಕ್ತವ್ಯಮ್- ಕಿಂ ಪ್ರಮಾಣಾನ್ತರವಿರೋಧೇಽಪಿ ಅಪೂರ್ವತಾ-ಮಾತ್ರಮಾಶ್ರಿತ್ಯೇತದುಚ್ಯತೇ, ಉತ ತದವಿರೋಧೇ । ಆದ್ಯೇಽತಿಪ್ರಸಙ್ಗಮ್ ಆಹ 'ಸರ್ವ..' ಇತಿ । ಸರ್ವಪ್ರಮಾಣವಿರುದ್ಧಾನಾಮೈಕ್ಯವಚನಾನಾಮೇವ ಅಪೂರ್ವತಾಮಾತ್ರೇಣ ಪ್ರಾಬಲ್ಯಾಙ್ಗೀಕಾರೇ, ತಥಾ ಅನ್ಯೇಷಾಮಪಿ**

---

1. ಶಾಸ್ತ್ರದಲ್ಲಿ ಪ್ರತಿಪಾದಿಸುವ ವಿಷಯವು ಮತ್ತೊಂದು ಪ್ರಮಾಣದಿಂದ ಸಿದ್ಧವಾಗಿರಬಾರದು, ಸಿದ್ಧವಾದ ವಿಷಯವನ್ನು ಪ್ರತಿಪಾದಿಸಿದಲ್ಲಿ ಅಂತಹ ಶಾಸ್ತ್ರವನ್ನು 'ಅಪೂರ್ವವಾದ ವಿಷಯವನ್ನು ಪ್ರತಿಪಾದಿಸುತ್ತಿಲ್ಲ ಆದುದರಿಂದ ವ್ಯರ್ಥ' ಎಂದು ಭಾವಿಸಲಾಗುವುದು. ಉದಾಹರಣೆಗೆ- ಸಾಮಾನ್ಯ ಅನುಭವದಿಂದ ತಿಳಿದ ವಿಷಯ 'ಅಗ್ನಿರ್ಹಿಮಸ್ಯ ಭೇಷಜಮ್' ಬೆಂಕಿಯು ಚಳಿಗೆ ಮದ್ದು ಎನ್ನುವುದು, ಇದನ್ನು ಶಾಸ್ತ್ರವು ತಿಳಿಸಿದಲ್ಲಿ ಅಂತಹ ಶಾಸ್ತ್ರಭಾಗಕ್ಕೆ ಅಪ್ರಾಮಾಣ್ಯವನ್ನು ಒಪ್ಪಲಾಗುವುದು. ಕಾರಣ ಇಲ್ಲಿ ಪ್ರತಿಪಾದಿವಾದ ವಿಷಯವು ಅಪೂರ್ವವಾಗಿಲ್ಲ ಎಂದು. ಪ್ರಕೃತ ಜೀವೇಶ್ವರಭೇದವು ಪ್ರತ್ಯಕ್ಷಸಿದ್ಧವಾದುದು. ಅದನ್ನು ವೇದಭಾಗವು ತಿಳಿಸಿದಲ್ಲಿ ಅಪೂರ್ವತಾ ಇಲ್ಲದ ಪ್ರಯುಕ್ತ ಅಂತಹ ವೇದ ಭಾಗಕ್ಕೆ ಅಪ್ರಮಾಣ್ಯವು ಪ್ರಾಪ್ತವಾಗುವುದು ಎಂದು ಭಾವ.

2. ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾಫಲಮ್ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥ ಎಂದು ಪ್ರಮಾಣವಿರುವದರಿಂದ ಎಂದು ಭಾವ.

**ವಾಕ್ಯಾನಾಂ ತದೇಕವಾಕ್ಯತಾಂ ವ್ಯಾಖ್ಯಾಯ ಸರ್ವಾಗಮಾನಾಂ ಜೀವೇಶ್ವರೈಕ್ಯೇ ಮಹಾತಾತ್ಪರ್ಯಾಙ್ಗೀಕಾರೇ, 'ಇದಂ ವಾಽಗ್ರೇ....' ಇತ್ಯಾದೀನಾಮೇವ ವಾಕ್ಯಾನಾಂ ಪ್ರಾಬಲ್ಯಮಙ್ಗೀಕರ್ತವ್ಯಮ್ । ಕುತಃ? ಅವಿಚಾರೇಣ ಪ್ರತೀಯಮಾನಸ್ಯ ತದರ್ಥಸ್ಯ ಸರ್ವಪ್ರಮಾಣವಿರುದ್ಧ-ತ್ವಾತ್ । ಸರ್ವಪ್ರಮಾಣಾಸಿದ್ಧತ್ವಾದಪೂರ್ವತಾಲಾಭಾದ್ ಇತಿ ಯಾವತ್ ।**

ಇಲ್ಲಿ ವಿವೇಚಿಸಲಾಗುವುದು- ಪ್ರಮಾಣಾಂತರ ವಿರೋಧವಿದ್ದರೂ ಕೇವಲ ಅಪೂರ್ವತಾದ ಬಲದಿಂದ ಇದನ್ನು (ಪ್ರಾಮಾಣ್ಯವನ್ನು) ಒಪ್ಪುವಿರೋ ಅಥವಾ ಅದರ (ಪ್ರಮಾಣಾಂತರದ) ವಿರೋಧವಿಲ್ಲದಿರುವಾಗಲೋ? ಮೊದಲ ಪಕ್ಷದಲ್ಲಿ ಅತಿಪ್ರಸಂಗವನ್ನು ಹೇಳುತ್ತಾರೆ '**ಸರ್ವ...**' ಎಂದು. ಸರ್ವಪ್ರಮಾಣವಿರುದ್ಧವಾದ ಐಕ್ಯವಾಕ್ಯಗಳಿಗೆ ಕೇವಲ ಅಪೂರ್ವತಾ ಇರುವುದರಿಂದ ಪ್ರಾಬಲ್ಯವನ್ನು ಒಪ್ಪುವದಾದಲ್ಲಿ, ಹಾಗೆಯೇ ಬೇರೇ ವಾಕ್ಯಗಳಿಗೂ ಅದರಿಂದ (ಐಕ್ಯವಾಕ್ಯದಿಂದ) ಏಕವಾಕ್ಯತ್ವವು (ಸಿದ್ಧಿಸುವ ಹಾಗೆ) ವ್ಯಾಖ್ಯಾನಿಸಿ 'ಸರ್ವ ಆಗಮಗಳಿಗೂ ಜೀವೇಶ್ವರರ ಐಕ್ಯದಲ್ಲಿ ತಾತ್ಪರ್ಯ' ಎಂದು ಒಪ್ಪುವದಾದಲ್ಲಿ, '**ಇದಂ ವಾ ಅಗ್ರೇ..**' ಇತ್ಯಾದಿ ವಾಕ್ಯಗಳಿಗೂ ಪ್ರಾಬಲ್ಯವನ್ನು ಒಪ್ಪಬೇಕು. ಏಕೆ? ವಿವೇಚಿಸದೇ ತೋರುವ ಆ ಅರ್ಥವು ಸರ್ವಪ್ರಮಾಣವಿರುದ್ಧವಾದುದರಿಂದ. ಸರ್ವಪ್ರಮಾಣಗಳಿಂದ ಅಸಿದ್ಧ-ವಾದುದರಿಂದ ಅಪೂರ್ವತ್ವವು ಪ್ರಾಪ್ತವಾಗುವುದು ಎಂದು ಒಟ್ಟು ಭಾವ.

**ತಥಾಚಾನ್ಯೇಷಾಮಪಿ ವಾಕ್ಯಾನಾಂ ತದೇಕವಾಕ್ಯತಾಮಾದಾಯ ತತ್ರ-ಶೂನ್ಯಸ್ಯೈವ ಜಗತ್ಕಾರಣತ್ವೇ ಸರ್ವಾಗಮಾನಾಂ ಮಹಾತಾತ್ಪರ್ಯಮ್ ಅಙ್ಗೀಕಾರ್ಯಂ ಪ್ರಸಜ್ಯೇತ? ಅವಿಶೇಷಾದಿತಿ । ಇತ್ಯಾದೀನಾಮ್ 'ಅರ್ಥಸ್ಯ' ಇತಿ ಸಂಬಂಧಃ । 'ಅರ್ಥಸ್ಯ' ಇತ್ಯೇತಾವತ್ಯುಕ್ತೇ ವಸ್ತುತಸ್ತದರ್ಥತ್ವಂ ಪ್ರಸಜ್ಯೇತ, ಅತಃ 'ಅವಿಚಾರೇಣೈವ ಪ್ರತೀಯಮಾನಸ್ಯ' ಇತ್ಯುಕ್ತಮ್ । ಏತೇನ 'ತತ್ ತ್ವಮಸ್ಯಾದಿವಾಕ್ಯಾನಾಮಪಿ ಜೀವಬ್ರಹ್ಮೈಕ್ಯಮ್ ಅವಿಚಾರೇಣೈವಾರ್ಥತಯಾ ಪ್ರತೀಯತ' ಇತಿ ಸೂಚಯತಿ ।**

ಹಾಗಯೇ ಬೇರೇ ಎಲ್ಲ ವಾಕ್ಯಗಳಿಗೂ ಅದರಿಂದ (ಇದಂ ವಾ ಅಗ್ರೇ... ಎನ್ನುವ ವಾಕ್ಯದಿಂದ) ಏಕಾಭಿಪ್ರಾಯವನ್ನು ಸಂಪಾದಿಸಿ ತತ್ರ- ಶೂನ್ಯವೇ ಜಗತ್ತಿಗೆ ಕಾರಣವಾಗಿದೆ ಎನ್ನುವ ವಿಷಯದಲ್ಲಿ ಎಲ್ಲ ಆಗಮಗಳಿಗೆ

ಮಹಾತಾತ್ಪರ್ಯವನ್ನು ಒಪ್ಪಬೇಕಾದೀತು, (ಈ ಎರಡೂ ವಾದಗಳಲ್ಲಿ) ವಿಶೇಷವಿಲ್ಲದಿರುವುದರಿಂದ[1]. 'ಇತ್ಯಾದೀನಾಂ' ಎನ್ನುವುದಕ್ಕೆ 'ಅರ್ಥಸ್ಯ' ಎನ್ನುವುದರಿಂದ ಅನ್ವಯಿಸಬೇಕು[2]. 'ಅರ್ಥಸ್ಯ' ಎಂದಿಷ್ಟೇ ಹೇಳಿದಲ್ಲಿ 'ಯಥಾರ್ಥವಾದ ಅದರ (ವೇದವಾಕ್ಯದ) ಅರ್ಥ' ಎಂದು ಪ್ರಸಕ್ತವಾಗುತ್ತಿತ್ತು, ಆದುದರಿಂದ '**ಅವಿಚಾರೇಣೈವ ಪ್ರತೀಯಮಾನಸ್ಯ**, (ವಿವೇಚಿಸದೇ ತೋರಿದ)' ಎಂದು ಹೇಳಲಾಗಿದೆ[3]. ಇದರಿಂದ (ವಿವೇಚಿಸದೇ ತೋರಿದ ಅರ್ಥವನ್ನು ಪರಿಗ್ರಹಿಸುವುದರಿಂದ ಎಂದು ತಿಳಿಸಿದ್ದರಿಂದ) 'ಜೀವ-ಈಶ್ವರರ ಐಕ್ಯವು ಸಹ 'ತತ್ ತ್ವಮಸಿ' ಮುಂತಾದ ವಾಕ್ಯಗಳಿಗೆ, ವಿವೇಚಿಸದೇ ತೋರಿದ ಅರ್ಥ' ಎಂದು ಸೂಚಿಸುತ್ತದೆ.

#### ಸರ್ವಪ್ರಮಾಣವಿರೋಧವು ಗುಣವೇ?

**ನಚ ತತ್ರ ಯುಕ್ತಿವಿರೋಧ ಇತಿ ವಾಚ್ಯಮ್, ತಸ್ಮಿನ್ ಪಕ್ಷೇ ಯುಕ್ತಿವಿರುದ್ಧತ್ವೇನಾನನುವಾದಿತ್ವಮಿತಿ ಗುಣ ಏವ ಸ್ಯಾತ್ । ಯುಕ್ತಿಸಿದ್ಧತ್ವೇ ಹ್ಯನುವಾದಿತ್ವಂ ಸ್ಯಾತ್ ॥**

ಇಲ್ಲಿ ('ಇದಂ ವಾಽಗ್ರೇ ಕಿಞ್ಚನಾಽಸೀತ್' 'ಅಸತಃ ಸದಜಾಯತ' ಎಂಬ ಶ್ರುತಿಗಳ ವಿಷಯದಲ್ಲಿ) ಯುಕ್ತಿಯ ವಿರೋಧವು ಇದೆ ಎನ್ನುವುದು ತರವಲ್ಲ. ಆ ಪಕ್ಷದಲ್ಲಿ (ಅನನುವಾದಿತ್ವವು ಪ್ರಾಮಾಣ್ಯಕ್ಕೆ ಕಾರಣ ಎನ್ನುವ ಪಕ್ಷದಲ್ಲಿ)

1. 'ಐಕ್ಯವಾಕ್ಯದಲ್ಲಿ ಎಲ್ಲ ಆಗಮಗಳಿಗೆ ತಾತ್ಪರ್ಯವಿದೆ' ಎನ್ನುವ ವಾದಕ್ಕೂ 'ಶೂನ್ಯಕ್ಕೇ ಜಗತ್ಕಾರಣತ್ವವನ್ನು ಪ್ರತಿಪಾದಿಸುವುದರಲ್ಲಿ ಎಲ್ಲ ವೇದಕ್ಕೆ ತಾತ್ಪರ್ಯವಿದೆ' ಎನ್ನುವ ವಾದಕ್ಕೂ ಯಾವುದೇ ವ್ಯತ್ಯಾಸವಿಲ್ಲ ಎಂದು ಭಾವ.

2. 'ಇತ್ಯಾದೀನಾಂ' ಎನ್ನುವ ಷಷ್ಠ್ಯಂತ ಶಬ್ದಕ್ಕೆ ಷಷ್ಠ್ಯಂತವಾದ 'ಆಗಮಾನಾಮ್' ಎನ್ನುವ ಶಬ್ದದೊಡನೆ ಅನ್ವಯವು ಸಹಜವಾಗಿ ತೋರಲಿದೆ, ಅದು ಸಲ್ಲದು. ಇತ್ಯಾದೀನಾಂ (ವಾಕ್ಯಾನಾಂ) ಪ್ರತೀಯಮಾನಸ್ಯಾರ್ಥಸ್ಯ ಎಂದು ಅನ್ವಯಿಸಿಕೊಂಡು ಅರ್ಥೈಸಿಕೊಳ್ಳಬೇಕು ಎಂದು ಭಾವ.

3. ಮೂಲದಲ್ಲಿ 'ಅವಿಚಾರೇಣೈವ ಪ್ರತೀಯಮಾನಸ್ಯಾರ್ಥಸ್ಯ' ಎಂದು ತಿಳಿಸಲಾಗಿದೆ. ಇಲ್ಲಿ 'ಅವಿಚಾರೇಣ' ಎಂದು ವಿಶೇಷಣವನ್ನು ಹೇಳದೇ ಕೇವಲ 'ಪ್ರತೀಯಮಾನಸ್ಯಾರ್ಥಸ್ಯ' ಎಂದು ಹೇಳಿದರೆ 'ಇದಂ ವಾ ಅಗ್ರೇ..' ಇತ್ಯಾದಿವಾಕ್ಯಗಳ ನಿಜಾರ್ಥವೂ ಅಪ್ರಾಮಾಣಿಕ ಎಂದಾಗುತ್ತಿತ್ತು, ಆ ಅನರ್ಥವನ್ನು ಪರಿಹರಿಸಲು ಅವಿಚಾರೇಣೈವ ಎಂದು ವಿಶೇಷಣವನ್ನು ತಿಳಿಸಲಾಗಿದೆ ಎಂದು ಭಾವ.

ಯುಕ್ತಿವಿರುದ್ಧವಾಗುವುದರಿಂದ ಅನನುವಾದಿತ್ವವು ಗುಣವೇ ಆದೀತು. ಹಾಗಾಗಿ ಯುಕ್ತಿಯಿಂದ ಸಿದ್ಧವಾದಲ್ಲಿ ಅನುವಾದಿತ್ವವು (ಆದುದರಿಂದ ಅಪ್ರಾಮಾಣ್ಯವು) ಪ್ರಾಪ್ತವಾದೀತು.

**ಪ್ರಮಾಣಾನ್ತರವಿರೋಧಾಭಾವೇಽಪೂರ್ವತಾ ಪ್ರಾಬಲ್ಯಹೇತುಃ ನ ತು ತದ್ವಿರೋಧೇ । ಅಸ್ತಿ ಚ ಶೂನ್ಯಸ್ಯ ಜಗತ್ಕಾರಣತ್ವೇ ಪ್ರಮಾಣವಿರೋಧಃ- 'ವಿಮತೋ ವಿನಾಶಃ ಸಚ್ಛೇಷೋ ವಿನಾಶತ್ವಾತ್ ಯುದ್ಧಾದಿವಿನಾಶವತ್' ಇತಿ, 'ಆದಿಕಾರ್ಯಂ ಸತ್ಕಾರಣಕಂ ಕಾರ್ಯತ್ವಾತ್ ಪಟವತ್' ಇತ್ಯಾದಿ-ಯುಕ್ತಿವಿರೋಧಾತ್ । ಅತೋ ನಾತಿಪ್ರಸಙ್ಗ ಇತಿ ದ್ವಿತೀಯ-ಪಕ್ಷಮಾಶಙ್ಕ್ಯಾಽಹ 'ನಚ ತತ್ರ' ಇತಿ । ಕುತೋ ನ ವಾಚ್ಯಮ್? ಇತಿ ಚೇತ್, ತದ್ವದೇವೈಕ್ಯವಾಕ್ಯಾನಾಮಪಿ, ತರ್ಹಿ 'ಸರ್ವಪ್ರಮಾಣವಿರುದ್ಧತ್ವಾತ್ ನಾಪೂರ್ವತಾಮಾತ್ರೇಣ ಪ್ರಾಬಲ್ಯಮಿತ್ಯಾಪಾತಾತ್' ಇತಿ ಪರಿಹಾರಸ್ಯ ಸ್ಫುಟತ್ವಾತ್ ಸೋತ್ಪ್ರಾಸಂ ಪರಿಹಾರಾನ್ತರಮಾಹ 'ತಸ್ಮಿನ್' ಇತಿ ।**

ಪ್ರಮಾಣಾಂತರದ ವಿರೋಧವು ಇಲ್ಲದ ಸಂದರ್ಭದಲ್ಲಿ (ಮಾತ್ರ) ಅಪೂರ್ವತಾವು ಪ್ರಾಬಲ್ಯಕ್ಕೆ ಕಾರಣವಾಗುವುದು, ವಿರೋಧವು ಇದ್ದಲ್ಲಿ ಇಲ್ಲ. ಶೂನ್ಯಕ್ಕೆ ಜಗತ್ಕಾರಣತ್ವವಿಷಯದಲ್ಲಿ ಪ್ರಮಾಣವಿರೋಧವಿದೆ- 'ವಿವಾದಕ್ಕೆ ವಿಷಯವಾದ ವಿನಾಶವು ಸತ್‌ಪದಾರ್ಥವನ್ನು ಶೇಷವನ್ನಾಗಿ ಹೊಂದಿರುವುದು, ವಿನಾಶವಾದುದರಿಂದ ಯುದ್ಧವಿನಾಶವೇ ಮುಂತಾದ ವಿನಾಶದಂತೆ' ಎಂದು, ಆದಿಕಾರ್ಯವು ಸತ್‌ಪದಾರ್ಥವನ್ನು ಕಾರಣವನ್ನಾಗಿ ಹೊಂದಿದೆ, ಕಾರ್ಯವಾಗಿರುವುದರಿಂದ ಪಟದಂತೆ' ಈ ಮುಂತಾದ ಯುಕ್ತಿವಿರೋಧವು ಇರುವುದರಿಂದ. ಆದುದರಿಂದ ಅತಿಪ್ರಸಂಗವಿಲ್ಲ ಎಂದು ಎರಡನೆಯ ಪಕ್ಷವನ್ನು ಆಶಂಕಿಸಿ ಉತ್ತರಿಸುತ್ತಾರೆ 'ನ ಚ ತತ್ರ' ಎಂದು.[1] ಏಕೆ ಹೇಳಬಾರದು

1. 'ಐಕ್ಯಪ್ರತಿಪಾದಕ ವಾಕ್ಯವು ಅಪೂರ್ವವಾದ ವಿಷಯವನ್ನು ಪ್ರತಿಪಾದಿಸುವುದರಿಂದ ಪ್ರಬಲ' ಎಂದು ಐಕ್ಯವಾದಿಗಳು ಹೇಳಿದರೆ 'ಶೂನ್ಯವಾದವೂ ಅಪೂರ್ವವಾಗಿದೆ ಆದುದರಿಂದ ಅದೂ ಪ್ರಬಲವಾಗಲಿ' ಎಂಬ ಅತಿಪ್ರಸಂಗವನ್ನು ತತ್ತ್ವವಾದಿಗಳು ಹೇಳಿದ್ದರು. ಆದರೆ ಕೇವಲ ಅಪೂರ್ವತಾ ಮಾತ್ರ ಪ್ರಾಬಲ್ಯಕ್ಕೆ ಕಾರಣವಲ್ಲ, ಮತ್ತೆ ಪ್ರಮಾಣವಿರೋಧವಿಲ್ಲದ ಅಪೂರ್ವತೆಯು ಪ್ರಾಬಲ್ಯಕ್ಕೆ ಕಾರಣ. ಶೂನ್ಯವಾದಕ್ಕೆ ಯುಕ್ತಿ ವಿರೋಧವಿದೆ, ಐಕ್ಯವಾದಕ್ಕೆ ಯಾವ ಪ್ರಮಾಣವಿರೋಧವಿಲ್ಲದ ಅಪೂರ್ವತೆಯು ಇದೆ, ಆದುದರಿಂದ ಯಾವುದೇ ವಿಧವಾದ ಅತಿಪ್ರಸಂಗಕ್ಕೆ ಎಡೆ ಇಲ್ಲವೆಂಬ ವಾದವನ್ನು ಆಶಂಕಿಸಿ ಉತ್ತರಿಸುತ್ತಾರೆಂದು ಭಾವ.

ಎಂದಲ್ಲಿ, ಅದರಂತೆ (ಶೂನ್ಯಪ್ರತಿಪಾದಕ ವಾಕ್ಯಗಳಂತೆ) ಐಕ್ಯವಾಕ್ಯಗಳೂ ಸಹ. ಹಾಗಾದಲ್ಲಿ 'ಸರ್ವಪ್ರಮಾಣಗಳ ವಿರುದ್ಧವಾದುದರಿಂದ ಕೇವಲ ಅಪೂರ್ವತೆಯಿಂದ ಪ್ರಾಬಲ್ಯವಿಲ್ಲ ಎಂದಾಗುವುದರಿಂದ' ಎಂಬ ಪರಿಹಾರವು ತುಂಬ ಸ್ಫುಟವಾದುದರಿಂದ ಉಪಹಾಸ ಪುರಸ್ಸರವಾಗಿ (ಅದಕ್ಕೆ ಉತ್ತರವನ್ನು ತಿಳಿಸದೆ) ಬೇರೇ ಪರಿಹಾರವನ್ನು ಹೇಳುತ್ತಾರೆ 'ತಸ್ಮಿನ್' ಎಂದು.

**'ಅನನುವಾದಿತ್ವಂ ಪ್ರಾಬಲ್ಯಕಾರಣಂ' ಇತ್ಯಸ್ಮಿನ್ ಪಕ್ಷೇ 'ಯುಕ್ತಿವಿರುದ್ಧತ್ವಾತ್, ಇದಂ ವಾ ಇತ್ಯಾದೀನಾಂ ನ ಪ್ರಾಬಲ್ಯಂ' ಇತಿ ವಕ್ತುಂ ನ ಶಕ್ಯತೇ । ಯತೋ ಯುಕ್ತಿವಿರೋಧೇನಾನನುವಾದಿತ್ವಂ ಭವತಿ, ಇತಿ ಯುಕ್ತಿವಿರೋಧೋ ಗುಣ ಏವ ಸ್ಯಾತ್, ಪ್ರಾಬಲ್ಯಕಾರಣಸ್ಯಾನನುವಾದಿತ್ವಸ್ಯ ಹೇತುಭೂತೋ ಯುಕ್ತಿವಿರೋಧಃ ಕಥಂ ಪ್ರಾಬಲ್ಯವಿಘಾತೀ ಭವೇತ್? ಇತ್ಯರ್ಥಃ । ಯುಕ್ತಿವಿರೋಧಃ ಕಥಮನನುವಾದಿತ್ವಸ್ಯ ಹೇತುಃ? ಇತ್ಯತ ಆಹ 'ಯುಕ್ತಿ..' ಇತಿ । ಶೂನ್ಯಸ್ಯ ಜಗತ್ಕಾರಣತಾಯಾ ಯುಕ್ತಿಸಿದ್ಧತ್ವೇ ಹಿ 'ಇದಂ ವಾ' ಇತ್ಯಾದಿವಾಕ್ಯಸ್ಯಾನುವಾದಿತ್ವಂ ಸ್ಯಾತ್ । ತತಶ್ಚ ವಿರೋಧಿನೀ ಯುಕ್ತಿಃ, ತಾಂ ಸಾಧಿಕಾಂ ಯುಕ್ತಿಮಾಭಾಸೀಕುರ್ವನ್ತೀ 'ಸ್ಯಾದ್ ಏವಾನನುವಾದಿತ್ವಸ್ಯ ಹೇತುಃ' ಇತಿ ಭಾವಃ ।**

'ಅನನುವಾದಿತ್ವವು ಪ್ರಾಬಲ್ಯಕ್ಕೆ ಕಾರಣ' ಎನ್ನುವ (ಮೊದಲ) ಪಕ್ಷದಲ್ಲಿ 'ಯುಕ್ತಿವಿರುದ್ಧವಾದುದರಿಂದ 'ಇದಂ ವಾ...' (ಶೂನ್ಯವು ಜಗತ್ತಿಗೆ ಕಾರಣ ಎಂದು ತಿಳಿಸುವ) ಇತ್ಯಾದಿಗಳಿಗೆ (ವಾಕ್ಯಗಳಿಗೆ) ಪ್ರಾಬಲ್ಯವಿಲ್ಲ' ಎಂದು ಹೇಳಲು ಆಗದು. ಯುಕ್ತಿವಿರೋಧದಿಂದ ಅನನುವಾದಿತ್ವವು ಪ್ರಾಪ್ತವಾಗುವುದು, ಆದುದರಿಂದ ಯುಕ್ತಿವಿರೋಧವು ಗುಣವೇ ಆಗುವುದು, (ಪ್ರಮಾಣದ) ಪ್ರಾಬಲ್ಯಕ್ಕೆ ಕಾರಣವಾದ ಅನನುವಾದಿತ್ವಕ್ಕೆ ನಿಮಿತ್ತೀಭೂತವಾದ ಯುಕ್ತಿವಿರೋಧವು ಹೇಗೆ ತಾನೆ ಪ್ರಾಬಲ್ಯದ ವಿಘಟಕವಾದೀತು? ಎಂದು ಭಾವ. ಯುಕ್ತಿವಿರೋಧವು ಹೇಗೆ ಅನನುವಾದಿತ್ವಕ್ಕೆ ನಿಮಿತ್ತವಾಗಿದೆ? ಆದುದರಿಂದ ಉತ್ತರಿಸುತ್ತಾರೆ **'ಯುಕ್ತಿ..'** ಎಂದು. ಶೂನ್ಯವು ಜಗತ್ಕಾರಣ ಎನ್ನುವುದು ಯುಕ್ತಿಯಿಂದ ಸಿದ್ಧವಾದಲ್ಲಿ 'ಇದಂ ವಾ..' ಇತ್ಯಾದಿವಾಕ್ಯಕ್ಕೆ ಅನುವಾದಿತ್ವವು ಪ್ರಾಪ್ತವಾಗುತ್ತಿತ್ತು. ಆದುದರಿಂದ (ಪ್ರಮಾಣ)ವಿರುದ್ಧವಾಗಿದೆ

ಎಂಬ ಯುಕ್ತಿಯು, ಆ (ಸತ್ಕಾರಣತ್ವದ) ಸಾಧಕಯುಕ್ತಿಯನ್ನು ಅಭಾಸಗೊಳಿಸುವುದು, (ಆದುದರಿಂದ) ಅನನುವಾದಿತ್ವಕ್ಕೆ (ಪ್ರಮಾಣವಿರೋಧವು) ಕಾರಣವೇ ಆಗುವುದು ಎಂದು ಭಾವ[1].

**ಭೇದವಾಕ್ಯಗಳಿಗೆ ದೌರ್ಬಲ್ಯವಿಲ್ಲ**

**ಅತಃ ಪ್ರಮಾಣಸಿದ್ಧತ್ವೇ ತದಪಲಾಪಾಯುಕ್ತೇಃ, ಅಪ್ರಮಾಣಸಿದ್ಧತ್ವೇ ಚ ಭೇದಪ್ರಮಾಣಸ್ಯಾನುವಾದಿತ್ವಾಭಾವಾಚ್ಚ ನ ಭೇದವಾಕ್ಯಾನಾಂ ದೌರ್ಬಲ್ಯಮ್ ।**

ಆದುದರಿಂದ (ಭೇದವು) ಪ್ರಮಾಣಪ್ರಮಿತವಾದಲ್ಲಿ ಅದನ್ನು ಅಪಲಪಿಸುವುದು ಅಯುಕ್ತ. (ಭೇದವು) ಪ್ರಮಾಣಪ್ರಮಿತವಾಗದಿದ್ದರೆ ಭೇದಪ್ರಮಾಣಕ್ಕೆ ಅನುವಾದಿತ್ವವು ಇಲ್ಲದ ಪ್ರಯುಕ್ತ ಭೇದವಾಕ್ಯಗಳಿಗೆ ದೌರ್ಬಲ್ಯವಿಲ್ಲ.

**'ಇದಂ ವಾ' ಇತ್ಯಾದಿವಾಕ್ಯವದೈಕ್ಯವಾಕ್ಯಸ್ಯಾಪಿ ಪ್ರಮಾಣವಿರುದ್ಧತ್ವಾತ್ 'ನಾಪೂರ್ವತಾಮಾತ್ರೇಣ ಪ್ರಾಬಲ್ಯಮ್' ಇತಿ ಯದಭಿಪ್ರೇತಂ ತದ್ ಅಸತ್ । ಭೇದವಾಕ್ಯಾನಾಂ ಪ್ರತ್ಯಕ್ಷಾದಿಸಿದ್ಧಾರ್ಥವಿಷಯತಯಾಽನುವಾದಿತ್ವೇನ ದುರ್ಬಲತ್ವಾತ್, ಐಕ್ಯಾಗಮಸ್ಯಾನನುವಾದಿತ್ವೇನ ಪ್ರಾಬಲ್ಯಾತ್, ಪ್ರತ್ಯಕ್ಷಾದೇಶ್ಚಾಪ್ರಮಾಣತ್ವಾತ್, 'ನ ಹಿ ಪ್ರಬಲಸ್ಯ ಪ್ರಮಾಣಸ್ಯ ದುರ್ಬಲೇನ ಅಪ್ರಮಾಣೇನ ಚ ವಿರೋಧಃ ಕಿಞ್ಚಿತ್ಕರೋ ಭವತಿ' ಇತ್ಯಾಶಙ್ಕ್ಯ, ಉಪಸಂಹಾರವ್ಯಾಜೇನ ಪ್ರಾಗುಕ್ತಮೇವೋತ್ತರಮಾಹ 'ಅತಃ' ಇತಿ ।**

''ಇದಂ ವಾ...' ಈ ಮುಂತಾದ ವಾಕ್ಯಗಳಂತೆ ಐಕ್ಯವಾಕ್ಯವೂ ಸಹ, ಪ್ರಮಾಣವಿರುದ್ಧವಾದುದರಿಂದ ಕೇವಲ ಅಪೂರ್ವತಾದಿಂದಲೇ

---

1. ಪ್ರಮಾಣವೊಂದಕ್ಕೆ ಸಂವಾದಿಪ್ರಮಾಣವು ಇದ್ದಲ್ಲಿ ಅಂತಹ ಪ್ರಮಾಣವು ಅಪೂರ್ವತೆಯನ್ನು ಹೊಂದದೆ ಅಪ್ರಮಾಣವಾಗುವುದು. ಸಕಲಪ್ರಮಾಣಗಳಿಂದ ವಿರುದ್ಧವಾದ ಪ್ರಮಾಣವಾದರೋ ಅನನುವಾದಕತ್ವರೂಪ ಅಪೂರ್ವತೆಯನ್ನು ಹೊಂದಿ ಪ್ರಬಲಪ್ರಮಾಣವಾಗುವುದು. ಆದುದರಿಂದ ಪರವಾದಿಗಳ ರೀತಿಯಲ್ಲಿ ಸಕಲಪ್ರಮಾಣವಿರೋಧವು ಪ್ರಾಮಾಣ್ಯದ ಪ್ರಾಬಲ್ಯಕ್ಕೆ ಕಾರಣವೇ ಆಗುವುದು ಎಂದು ಭಾವ.

ಪ್ರಾಬಲ್ಯವಿಲ್ಲ' ಎಂದು ಯಾವುದನ್ನು ಅಭಿಮತಿಸಲಾಗಿದೆಯೋ ಅದು ತಪ್ಪು. ಭೇದವಾಕ್ಯಗಳಿಗೆ ಪ್ರತ್ಯಕ್ಷಾದಿಸಿದ್ಧವಾದ ಪದಾರ್ಥಗಳು ವಿಷಯವಾಗಿದೆ ಎಂದು ಅನುವಾದಕತ್ವವು, ಹಾಗಾಗಿ ದುರ್ಬಲವಾದುದರಿಂದ. ಐಕ್ಯಾಗಮಕ್ಕೆ ಅನನುವಾದಕತ್ವವಿರುವುದರಿಂದ ಪ್ರಾಬಲ್ಯವು ಪ್ರಾಪ್ತವಾಗುವುದರಿಂದ. ಪ್ರತ್ಯಕ್ಷಾದಿಗಳಾದರೋ ಅಪ್ರಮಾಣಗಳಾದುದರಿಂದ. ಪ್ರಬಲಪ್ರಮಾಣಕ್ಕೆ ದುರ್ಬಲವಾದ ಅಪ್ರಮಾಣದ ವಿರೋಧವು ಹಾನಿಕಾರಕವಲ್ಲ ಎಂದು ಸಂದೇಹಿಸಿ (ವಾದವನ್ನು) ಉಪಸಂಹಾರಗೊಳಿಸುವ ನಿಮಿತ್ತವಾಗಿ ಹಿಂದೆ ತಿಳಿಸಿದ್ದನ್ನೇ[1] ಉತ್ತರವಾಗಿ ಹೇಳುತ್ತಾರೆ 'ಅತಃ' ಎಂದು.

**ಭೇದವಾಕ್ಯಾನಾಮನುವಾದಿತ್ವಸಿದ್ಧ್ಯರ್ಥಂ ಭೇದಸ್ಯ ಪ್ರತ್ಯಕ್ಷಾದಿ-ಪ್ರಮಾಣಸಿದ್ಧತ್ವೇಽಙ್ಗೀಕ್ರಿಯಮಾಣೇ ಪ್ರತ್ಯಕ್ಷಾದಿಪ್ರಮಾಣಪ್ರತಿರುದ್ಧೇನ ಐಕ್ಯವಾಕ್ಯೇನ ಭೇದನಿರಾಕರಣಾನುಪಪತ್ತಿಪ್ರಸಙ್ಗಾತ್ । ತತ್ಪರಿಹಾರಾಯ ಯದಿ ಪ್ರತ್ಯಕ್ಷಾದೀನಾಮಾಪ್ರಾಮಾಣ್ಯಮಙ್ಗೀಕ್ರಿಯತೇ ಭೇದವಾಕ್ಯಾನಾಂ ಚ ಪ್ರಾಮಾಣ್ಯಂ ತದಾ ಭೇದಸ್ಯಾಪ್ರಮಾಣಸಿದ್ಧತ್ವೇ ಪ್ರಮಾಣಾಪ್ರಮಾಣಯೋಃ ಸಮಾನವಿಷಯತ್ವಾನುಪಪತ್ತೇಃ ಭೇದಪ್ರಮಾಣಸ್ಯಾಽಗಮಸ್ಯಾನುವಾದಿ-ತ್ವಾಭಾವಾದ್ 'ಭೇದವಾಕ್ಯಾನಾಮೇವ ದೌರ್ಬಲ್ಯಂ ನಾಭೇದವಾಕ್ಯಾನಾ-ಮಿತಿ ಯದುಕ್ತಂ ತನ್ನ' ಇತ್ಯರ್ಥಃ । ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಮ್ ।**

ಭೇದವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಸಬೇಕು ಎಂದು 'ಭೇದವನ್ನು ಪ್ರತ್ಯಕ್ಷಾದಿ ಪ್ರಮಾಣಸಿದ್ಧ' ಎಂದು ಒಪ್ಪಿದಲ್ಲಿ, ಪ್ರತ್ಯಕ್ಷಾದಿ ಪ್ರಮಾಣದ ಪ್ರತಿರೋಧವಿರುವುದರಿಂದ ಐಕ್ಯವಾಕ್ಯಕ್ಕೆ ಭೇದವನ್ನು ನಿರಾಕರಿಸಲು ಅನುಪಪತ್ತಿಪ್ರಸಂಗವು ಪ್ರಾಪ್ತವಾಗುವುದು. ಅದರ ( ಈ ಅನುಪಪತ್ತಿಯ) ಪರಿಹಾರಕ್ಕಾಗಿ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯ, ಭೇದವಾಕ್ಯಗಳಿಗೆ ಪ್ರಾಮಾಣ್ಯವು (ಇದೆ ಎಂದು ಒಪ್ಪಬೇಕು), ಆಗ ಭೇದವು ಅಪ್ರಮಾಣದಿಂದ ಸಿದ್ಧ ಎಂದಾದಲ್ಲಿ, ಪ್ರಮಾಣಾಪ್ರಮಾಣಗಳಿಗೆ ಸಮಾನವಿಷಯತ್ವವು

1. 'ಸಿದ್ಧೌ ಚ ಕಥಂ ಅಭೇದವಾಕ್ಯಸ್ಯ ಅಬಾಧಃ..' ಇತ್ಯಾದಿ- ವಾಕ್ಯಗಳಿಂದ (ಪುಟ 494ರಲ್ಲಿ) ತಿಳಿಸಲಾಗಿದೆ ಎಂದು ಭಾವ.

ಅನುಪಪನ್ನವಾಗಿರುವುದರಿಂದ[1], ಭೇದಪ್ರಮಾಣಕ್ಕೆ (ಭೇದಬೋಧಕ ವಾಕ್ಯಗಳಿಗೆ) ಅನುವಾದಿತ್ವವು ಇಲ್ಲದಾಗುವುದು, ಆದುದರಿಂದ 'ಭೇದವಾಕ್ಯಗಳೇ ದುರ್ಬಲ, ಐಕ್ಯವಾಕ್ಯಗಳು ಪ್ರಬಲ' ಎಂದು ಹೇಳಿರುವುದು ಯೋಗ್ಯವಲ್ಲ ಎಂದು ಭಾವ. ಆದುದರಿಂದ ಭೇದವಾಕ್ಯಗಳೇ ಪ್ರಬಲ ಎಂದು.

**ಬಹುಪ್ರಮಾಣಸಂವಾದವು ದಾರ್ಢ್ಯಕಾರಕ**

**ನಚ ಪ್ರಮಾಣಬಹುತ್ವೇ ದೌರ್ಬಲ್ಯಂ, ದಾರ್ಢ್ಯಮೇವ ಹಿ ಬಹುವಾಕ್ಯಸಂವಾದೇ ದೃಷ್ಟಮ್ । ತಥಾ ಸತ್ಯಭ್ಯಾಸಾದೇರಪ್ರಾಮಾಣ್ಯ-ಹೇತುತ್ವಂ ಸ್ಯಾತ್ । ಅಭ್ಯಾಸಸ್ಯ ಚ ತಾತ್ಪರ್ಯಲಿಙ್ಗತ್ವಂ ಸರ್ವೇಷಾಂ ಸಿದ್ಧಮ್ । ತದನಙ್ಗೀಕಾರೇ ತತ್ಪಕ್ಷೇಽಪಿ ನವಕೃತ್ವಃ 'ತತ್ ತ್ವಮಸಿ' ಇತ್ಯಭ್ಯಾಸಸ್ಯ ಅನುವಾದಕತ್ವೇನಾಪ್ರಾಮಾಣ್ಯಂ ಸ್ಯಾತ್ ।**

ಪ್ರಮಾಣ ಬಹುತ್ವವು ದೌರ್ಬಲ್ಯಕ್ಕೆ ಕಾರಣವಾಗದು, ಬಹುವಾಕ್ಯಗಳ ಸಂವಾದವು ಇದ್ದಲ್ಲಿ (ಪ್ರತಿಪಾದಿತ ವಿಷಯದಲ್ಲಿ) ದಾರ್ಢ್ಯವೇ ಕಂಡಿದೆ. ಹಾಗಾದಲ್ಲಿ (ಅಭ್ಯಾಸವು ದಾರ್ಢ್ಯಕ್ಕೆ ಕಾರಣವಲ್ಲ ಎಂದಾದಲ್ಲಿ) ಅಭ್ಯಾಸಾದಿಗಳು ಅಪ್ರಾಮಾಣ್ಯಕ್ಕೆ ಕಾರಣವಾಗಬೇಕಾದೀತು. ಅಭ್ಯಾಸಕ್ಕಾದರೋ (ಪ್ರತಿಪಾದಿತ ವಿಷಯದಲ್ಲಿ) ತಾತ್ಪರ್ಯಕ್ಕೆ (ನೈರ್ಭರ್ಯಕ್ಕೆ) ಕಾರಣ ಎಂದು ಸರ್ವವಾದಿಗಳಿಗೆ ಸಿದ್ಧವಾಗಿದೆ. ಅದನ್ನು ಒಪ್ಪದ ಪಕ್ಷದಲ್ಲಿ ಅವರ (ಮಾಯಾವಾದಿಗಳ) ಪಕ್ಷದಲ್ಲಿಯೇ ಒಂಭತ್ತುಬಾರಿ 'ತತ್ ತ್ವಮಸಿ' ಎಂಬ ಅಭ್ಯಾಸಕ್ಕೆ ಅನುವಾದತ್ವವು ಇರುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾದೀತು.

**'ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಮ್' ಇತಿ**

---

1. 'ಭೇದ ಬೋಧಕ ಪ್ರತ್ಯಕ್ಷವು ಅಪ್ರಮಾಣ, ಆದರೆ ಅದೇ ಭೇದವನ್ನು ಬೋಧಿಸುವ ಆಗಮವನ್ನು ಪ್ರಮಾಣ' ಎಂದು ಒಪ್ಪಲು ಶಕ್ಯವಿಲ್ಲ. ಎರಡೂ ಪ್ರಮಾಣಗಳೂ ಗ್ರಹಿಸುವ ವಿಷಯವು ಒಂದೇ ತರಹ ಎಂದು ಒಪ್ಪಿ ಒಂದಕ್ಕೆ ಪ್ರಾಮಾಣ್ಯ ಮತ್ತೊಂದಕ್ಕೆ ಅಪ್ರಾಮಾಣ್ಯವನ್ನು ಒಪ್ಪುವುದು ಶಾಸ್ತ್ರಸಮ್ಮತವಲ್ಲ. ವಿರುದ್ಧಬೋಧಕಗಳಿಗೆ ಪ್ರಾಮಾಣ್ಯಾಪ್ರಾಮಾಣ್ಯವನ್ನು ಒಪ್ಪುವುದು ಪರಿಪಾಠಿ ಎಂದು ಭಾವ.

**ಪ್ರತ್ಯಕ್ಷಾದಿಸಂವಾದೇನಾಭೇದವಾಕ್ಯಾಪೇಕ್ಷಯಾ ಯದ್ಭೇದವಾಕ್ಯಾನಾಂ ಪ್ರಾಬಲ್ಯಮುಕ್ತಮ್, ತದಸತ್ । ಪ್ರತ್ಯುತ ಸಂವಾದಸ್ಯ ವೈಯರ್ಥ್ಯೇನ ದೌರ್ಬಲ್ಯಹೇತುತ್ವಾದಿತ್ಯಾಶಙ್ಕಾಂ ಪರಿಹೃತಾಮಪ್ಯಧಿಕಂ ವಕ್ತುಂ ಪುನಃ ಪರಿಹರತಿ 'ನಚ' ಇತಿ । 'ಏಕಸ್ಮಿನ್ನೇವಾರ್ಥೇ ಪ್ರಮಾಣಬಹುತ್ವೇ ಪ್ರವೃತ್ತೇ ಸತಿ ದ್ವಿತೀಯಾದೀನಾಂ ದೌರ್ಬಲ್ಯಮಿತಿ ಚ ನ' ಇತ್ಯರ್ಥಃ । ಕುತಃ? ಇತ್ಯತ ಆಹ 'ದಾರ್ಢ್ಯಮೇವ' ಇತಿ । 'ನಿಶ್ಶಙ್ಕಾ ಪ್ರಮಿತಿರೇವ' ಇತ್ಯರ್ಥಃ । ಏವಶಬ್ದೇನ 'ನೋಪೇಕ್ಷಾ' ಇತ್ಯಾಹ । ಅನೇನ ವೈಯರ್ಥ್ಯಂ ಪರಿಹೃತಮ್ । ವಿಷಯೇ ವಿಶೇಷಾನಾಧಾಯಕಸ್ಯ ಕಥಂ ದಾರ್ಢ್ಯಹೇತುತ್ವಮ್, ಅನ್ಯಥಾ ಪ್ರಥಮಪ್ರಮಾಣಸ್ಯಾಪಿ ತತ್ ಸ್ಯಾದ್? ಇತ್ಯತೋ 'ದೃಷ್ಟಂ' ಇತ್ಯುಕ್ತಮ್ ।**

'ಪ್ರತ್ಯಕ್ಷಾದಿಗಳ ಸಂವಾದವಿರುವುದರಿಂದ ಅಭೇದವಾಕ್ಯಗಳಿಂದ ಭೇದವಾಕ್ಯಗಳೇ ಪ್ರಬಲ' ಎಂದು 'ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಮ್' ಎನುವುದರಿಂದ ಹೇಳಿರುವುದು ಸರಿಯಾದುದಲ್ಲ. ವಸ್ತುತಃ 'ವ್ಯರ್ಥವಾದುದರಿಂದ ಸಂವಾದವು ದೌರ್ಬಲ್ಯಕ್ಕೆ ಕಾರಣವಾಗುವುದು' ಎನ್ನುವ ಶಂಕೆಯನ್ನು ಪರಿಹರಿಸಲಾಗಿದೆ, ಆದರೂ ಹೆಚ್ಚಿನದನ್ನು ತಿಳಿಸಲು ಪುನಃ ಉತ್ತರಿಸುತ್ತಾರೆ 'ನ ಚ' ಎಂದು. ಒಂದೇ ವಿಷಯದಲ್ಲಿ ಅನೇಕ ಪ್ರಮಾಣಗಳು ಪ್ರವೃತ್ತವಾದಲ್ಲಿ, ಎರಡನೆಯದೇ ಮುಂತಾದವುಗಳು (ಪ್ರಮಾಣಗಳು) ದುರ್ಬಲ ಎನ್ನುವುದು ಸರಿಯಲ್ಲ' ಎಂದು ಅರ್ಥ. ಏಕೆ? ಆದುದರಿಂದ ಉತ್ತರಿಸುತ್ತಾರೆ '**ದಾರ್ಢ್ಯಮೇವ**' ಎಂದು. ನಿಸ್ಸಂದಿಗ್ಧವಾದ ಅರಿವು (ಪ್ರಾಪ್ತವಾಗುವುದು) ಎಂದು ಅರ್ಥ. 'ಏವ' ಶಬ್ದದಿಂದ 'ಉಪೇಕ್ಷಿತವಲ್ಲ' ಎಂದು ಹೇಳಿದಂತಾಯಿತು. ಇದರಿಂದ (ಎರಡನೆಯದೇ ಮೊದಲಾದ ಪ್ರಮಾಣಗಳಿಂದ ಮೊದಲು ಪ್ರಾಪ್ತವಾದ ಅರಿವಿಗೆ ದಾರ್ಢ್ಯವು ಲಭಿಸುವುದು ಎಂದು ಹೇಳಿದ್ದರಿಂದ) ವ್ಯರ್ಥತೆಯನ್ನು ಪರಿಹರಿಸಿದಂತಾಯಿತು (ಮುಂದಿನ,ಮುಂದಿನ ಪ್ರಮಾಣಗಳು ವ್ಯರ್ಥ ಎನ್ನುವ ಪ್ರಶ್ನೆಯನ್ನು ಉತ್ತರಿಸಿದಂತಾಯಿತು ಎಂದು ಭಾವ). (ಪ್ರಥಮಪ್ರಾಪ್ತ) ವಿಷಯದಲ್ಲಿ (ಯಾವುದೇ) ವಿಶೇಷವನ್ನು ಉಂಟುಮಾಡದಿದ್ದಲ್ಲಿ ಹೇಗೆ ದಾರ್ಢ್ಯಕ್ಕೆ

ಕಾರಣವಾಗುವುದು[1]?. ಹಾಗಾಗದ ಪಕ್ಷದಲ್ಲಿ (ಎರಡನೆಯ ಪ್ರಮಾಣವು ಪ್ರಥಮಪ್ರಾಪ್ತವಾದ ಅರಿವಿನಲ್ಲಿ ಏನಾದರೂ ವೈಶಿಷ್ಟ್ಯವನ್ನು ಉಂಟುಮಾಡುವುದಾದಲ್ಲಿ) ಪ್ರಥಮಪ್ರಮಾಣದಿಂದಲೇ ಅದು (ಆ ವೈಶಿಷ್ಟ್ಯವು) ಪ್ರಾಪ್ತವಾಗಬಹುದಿತ್ತಲ್ಲವೇ? ಆದುದರಿಂದ ಹೇಳಿದರು **'ದೃಷ್ಟಮ್'** ಎಂದು.

ತೇನ 'ಪೂರ್ವಸಂಸ್ಕಾರಸಚಿವಸ್ಯ ತನ್ಮಾತ್ರಗೋಚರಸ್ಯಾಪಿ ದಾರ್ಢ್ಯ-**ಹೇತುತ್ವಂ ಯುಕ್ತಂ**' ಇತಿ **ಸೂಚಿತಮ್** । ತದನಙ್ಗೀಕಾರೇ ಬಾಧಕಮಾಹ **'ತಥಾ ಸತಿ'** ಇತಿ । ಸಂವಾದಸ್ಯ ವೈಯರ್ಥ್ಯೇನೋಪೇಕ್ಷಣೀಯತ್ವೇ ಸತಿ । ಅಭ್ಯಸನಂ- **ಅಭ್ಯಾಸಃ** । ಆದಿಪದೇನ ನಿಗಮನಂ ಗೃಹ್ಯತೇ । **ಅಪ್ರಾಮಾಣ್ಯಂ**- ಉಪೇಕ್ಷಣೀಯತ್ವಮ್ । ಅಸ್ತು ತದಪಿ? ಇತ್ಯತ ಆಹ **'ಅಭ್ಯಾಸಸ್ಯ ಚ'** ಇತಿ । ಏವಂ ನಿಗಮನಸ್ಯಾಪಿ ಬುಧ್ಯಾರೋಹಾದ್ಯರ್ಥ-ತ್ವಮ್ । ಸರ್ವಸಮ್ಮತಮಪಿ ಮಯಾ ನಾಙ್ಗೀಕ್ರಿಯತೇ ಕೋ ದೋಷಃ, ನಹಿ ಪ್ರತಿತನ್ತ್ರಸಿದ್ಧಾನ್ತೋ ನಾಮ ನಾಸ್ತಿ? ಇತ್ಯತ ಆಹ **'ತದನಙ್ಗೀಕಾರೇ'** ಇತಿ । **ಅಪ್ರಾಮಾಣ್ಯಂ ಸ್ಯಾತ್** 'ತತ್ತ್ವಮಸ್ಯಾದಿವಾಕ್ಯಸ್ಯ' ಇತಿ ಶೇಷಃ ।

ಆದುದರಿಂದ (ಎರಡನೆಯ ಅರಿವು ಪ್ರಥಮಪ್ರಾಪ್ತವಾದ ಅರಿವಿನಲ್ಲಿ ದಾರ್ಢ್ಯವನ್ನು ಉಂಟುಮಾಡುವುದು ಕಂಡಿದೆ ಎಂದು ಹೇಳಿದ್ದರಿಂದ) 'ಮೊದಲ (ಅರಿವಿನ) ಸಂಸ್ಕಾರದಿಂದ ಕೂಡಿದ (ಎರಡನೆಯ ಅರಿವು) ಕೇವಲ ಅಷ್ಟನ್ನೇ (ಮೊದಲ ಅರಿವಿನ ವಿಷಯವನ್ನೇ) ತಿಳಿಸಿದರೂ ಸಹ ದಾರ್ಢ್ಯಕ್ಕೆ ಕಾರಣವಾಗುವುದು ಯುಕ್ತವೇ ಆಗಿದೆ' ಎಂದು ಸೂಚಿಸಿದಂತಾಯಿತು. ಅದನ್ನು (ದಾರ್ಢ್ಯಕ್ಕೆ ಕಾರಣವಾಗಿದೆ ಎಂಬುವುದನ್ನು) ಒಪ್ಪದ ಪಕ್ಷದಲ್ಲಿ ಬಾಧಕವನ್ನು ಹೇಳುತ್ತಾರೆ 'ತಥಾ ಸತಿ' ಎಂದು. ಸಂವಾದವು ವೈಯರ್ಥ್ಯ ಎಂದು

---

1. 'ಇದು ಗಡಿಗೆ' ಎಂದು ಒಂದು ಅರಿವು ಪ್ರಾಪ್ತವಾಯಿತು. ನಂತರದಲ್ಲಿ ಓರ್ವನು ಹೇಳಿದನು 'ಇದು ಗಡಿಗೆ' ಎಂದು. ಮೊದಲು ಪ್ರಾಪ್ತವಾದ ಅರಿವಿನಲ್ಲಿ ಎರಡನೆಯ ಪ್ರಮಾಣವು ಯಾವುದೇ ವಿಧದಲ್ಲಿ ವೈಶಿಷ್ಟ್ಯವನ್ನು ಉಂಟುಮಾಡಲಾರದು. ಹಾಗಾದಲ್ಲಿ 'ಸಂವಾದ ಪ್ರಮಾಣವು ದಾರ್ಢ್ಯಕ್ಕೆ ಕಾರಣ, ನಿಃಶಂಕಾಪ್ರವೃತ್ತಿಗೆ ಕಾರಣ' ಎನ್ನುವ ಮಾತು ಹೇಗೆ ಯುಕ್ತವಾದೀತು? ಎಂದು ಭಾವ.

ಉಪೇಕ್ಷಿಸಿದಲ್ಲಿ. **ಅಭ್ಯಾಸಃ**- ಅಭ್ಯಸನವು. ಆದಿಪದದಿಂದ ನಿಗಮನವನ್ನು ಪರಿಗ್ರಹಿಸುವುದು. **ಅಪ್ರಾಮಾಣ್ಯಂ**- ಉಪೇಕ್ಷಣೀಯ[1]. ಅದೂ ಸಹ (ಅಭ್ಯಾಸವೂ ಸಹ ಅಪ್ರಮಾಣವು) ಆಗಲಿ, ಆದುದರಿಂದ ಹೇಳುತ್ತಾರೆ '**ಅಭ್ಯಾಸಸ್ಯ ಚ**' ಎಂದು. ಇದೇ ರೀತಿಯಲ್ಲಿ ನಿಗಮನವೂ ಸಹ (ಪ್ರತಿಪಾದಿಸಿದ ಸಮಗ್ರವಿಷಯವು) ಬುದ್ಧಿಯಲ್ಲಿ ಕ್ರೋಡೀಭೂತವಾಗುವ ಉದ್ದೇಶವನ್ನು (ಪ್ರಯೋಜನವನ್ನು) ಹೊಂದಿದೆ. ಎಲ್ಲರಿಗೂ ಸಮ್ಮತವಾಗಿದ್ದರೂ ನಾನು ಇದನ್ನು ಒಪ್ಪದೇ ಇದ್ದಲ್ಲಿ ಏನು ದೋಷ? 'ಅನ್ಯವಾದಿಗಳು ಒಪ್ಪದ (ಸ್ವತಂತ್ರವಾದ) ಸಿದ್ಧಾಂತವು ಇಲ್ಲ ಎಂದಿಲ್ಲ'? ಎಂದು, ಆದುದರಿಂದ ಉತ್ತರಿಸುತ್ತಾರೆ '**ತದನಙ್ಗೀಕಾರೇ**' ಎಂದು. 'ಅಪ್ರಾಮಾಣ್ಯಂ ಸ್ಯಾತ್' ಎನ್ನುವ ವಾಕ್ಯದ ನಂತರದಲ್ಲಿ 'ತತ್ ತ್ವಮಸ್ಯಾದಿವಾಕ್ಯಸ್ಯ' ಎಂದು ಶೇಷಪೂರಣ ಮಾಡಿಕೊಳ್ಳಬೇಕು. (ಪುನಃ ಪುನಃ ಅಭ್ಯಸ್ತವಾದ 'ತತ್ ತ್ವಮಸಿ' ಈ ಮುಂತಾದ ವಾಕ್ಯಗಳು ಅಪ್ರಮಾಣವಾಗಬೇಕಾದೀತು ಎಂದು ಭಾವ.)

**ವಿಷ್ಣುಸರ್ವೋತ್ತಮತ್ವದಲ್ಲೇ ವೇದಗಳಿಗೆ ತಾತ್ಪರ್ಯ**

**ಪ್ರಥಮವಾಕ್ಯೇನೈವ ಯಸ್ಯಾಸಿದ್ಧಂ ತದರ್ಥಮಪರಮಿತ್ಯುಕ್ತೇ ಪ್ರತ್ಯಕ್ಷಾದಿನಾ ಭೇದೋ ಯೇನಾನಿಶ್ಚಿತಸ್ತದರ್ಥಮಪರಂ ವಾಕ್ಯಮ್**

---

1. 'ತಥಾ ಸತ್ಯಭ್ಯಾಸಾದೇರಪ್ರಾಮಾಣ್ಯಹೇತುತ್ವಂ ಸ್ಯಾತ್' ಎನ್ನುವ ಮೂಲವಾಕ್ಯದ ಒಟ್ಟು ಅರ್ಥವು :- ತಥಾ ಸತಿ- ಸಂವಾದವಾಕ್ಯಗಳು ವ್ಯರ್ಥವಾದುದರಿಂದ ಉಪೇಕ್ಷಣೀಯ ಎಂದು ಒಪ್ಪಿದಲ್ಲಿ, ಅಭ್ಯಾಸಾದೇಃ- ಪುನಃಪುನಃ ಹೇಳುವಿಕೆಯು ಹಾಗೂ ನಿಗಮನವಾಕ್ಯ ಮುಂತಾದವುಗಳು, ಅಪ್ರಾಮಾಣ್ಯಹೇತುತ್ವಂ ಸ್ಯಾತ್- ಉಪೇಕ್ಷಣೀಯತೆಗೆ ಕಾರಣವಾಗುತ್ತಿತ್ತು ಎಂದು. ಈ ವಾಕ್ಯದಲ್ಲಿನ 'ಅಭ್ಯಾಸ' ಎನ್ನುವ ಶಬ್ದಕ್ಕೆ ಪುನಃಪುನರಾವೃತ್ತಿ ಎಂದು ಅರ್ಥೈಸಲಾಗಿದೆ. 'ಅಭ್ಯಸ್ಯತೇ ಇತಿ- ಅಭ್ಯಾಸಃ' ಎನ್ನುವ ಪ್ರಸಿದ್ಧ ನಿಷ್ಪತ್ತಿಯಂತೆ ಅರ್ಥೈಸಿದಲ್ಲಿ 'ಪುನಃಪುನಃ ಉಚ್ಚರಿಸುವ ಕ್ರಿಯೆಗೆ ಕರ್ಮವಾದ ವಾಕ್ಯ' ಅಂದರೆ 'ಯಾವುದನ್ನು ಉಚ್ಚರಿಸುವವೋ ಅದು' ಎನ್ನುವ ಅರ್ಥವು ಪ್ರಾಪ್ತವಾಗುವುದು, ಅದು ಪ್ರಕೃತಕ್ಕೆ ಅನುಪಯುಕ್ತವಾಗಿದೆ. ಹಾಗಾಗಿ ಅಭ್ಯಸನ ಎಂಬ ಭಾವಪ್ರತ್ಯಯಾರ್ಥವನ್ನು ವಿವಕ್ಷಿಸಲಾಗಿದೆ. ಹಾಗೆಯೇ ಅಪ್ರಾಮಾಣ್ಯ ಎಂದಿದೆ, ಅದಕ್ಕೂ ಪ್ರಸಿದ್ಧಾರ್ಥವನ್ನು ಅಭಿಮತಿಸಲಾಗಿಲ್ಲ. ಆದುದರಿಂದ 'ಉಪೇಕ್ಷಣೀಯತ್ವರೂಪ ಅಪ್ರಾಮಾಣ್ಯ' ಎಂದು ಅರ್ಥೈಸಲಾಗಿದೆ ಎನ್ನುವದನ್ನು ಗಮನಿಸುವುದು.

**ಇತ್ಯುತ್ತರಮ್ । ತಸ್ಮಾದ್ ಬಹುಪ್ರಮಾಣಸಂವಾದಿತ್ವೇ ಪ್ರಾಬಲ್ಯಮೇವ । ಅತಃ ಸರ್ವಪ್ರಮಾಣವಿರುದ್ಧತ್ವಾನ್ನಾಭೇದೇ ತಾತ್ಪರ್ಯಂ ವಾಕ್ಯಸ್ಯ । ಕಿನ್ತು ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ ।**

'ಮೊದಲ ಉಪದೇಶದಿಂದ ಯಾರಿಗೆ (ಜೀವೇಶ್ವರರ ಐಕ್ಯವು ಸಿದ್ಧವಾಗಲಿಲ್ಲವೋ) ಅಂತಹವರಿಗಾಗಿ ಮುಂದಿನ ಉಪದೇಶ' ಎಂದು ಉತ್ತರಿಸಿದಲ್ಲಿ 'ಯಾರಿಗೆ ಪ್ರತ್ಯಕ್ಷಾದಿಗಳಿಂದ (ಜೀವೇಶ್ವರರ) ಭೇದವು ನಿಶ್ಚಯವಾಗಿಲ್ಲವೋ ಅಂತಹವರಿಗಾಗಿ ಮತ್ತೊಂದು (ವೇದ) ವಾಕ್ಯ' ಎಂದು ಉತ್ತರ. ಆದುದರಿಂದ ಬಹುಪ್ರಮಾಣಗಳ ಸಂವಾದವು ಪ್ರಾಬಲ್ಯಕ್ಕೆ ಕಾರಣ (ಎನ್ನುವುದು ನಿಶ್ಚಿತವಾಯಿತು). ಆದುದರಿಂದ ಸರ್ವಪ್ರಮಾಣಗಳಿಂದ ವಿರುದ್ಧವಾದ ಅಭೇದದಲ್ಲಿ ವೇದವಾಕ್ಯಗಳಿಗೆ ತಾತ್ಪರ್ಯವಿಲ್ಲ. ಆದರೆ ಎಲ್ಲ ಆಗಮಗಳಿಗೆ ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ಮಹಾತಾತ್ಪರ್ಯ.

**ವೈಷಮ್ಯಮಾಶಙ್ಕ್ಯ ಪರಿಹರತಿ 'ಪ್ರಥಮ..' ಇತಿ । ಅಸಿದ್ಧಂ-ಜೀವೇಶ್ವರೈಕ್ಯಮ್ । ಐಕ್ಯಸ್ಯ ದುರ್ಬೋಧತ್ವಾತ್, ಪುರುಷಾಣಾಂ ಚ ಮೃದುಮಧ್ಯಾಧಿಮಾತ್ರಾಧಿಮಾತ್ರತರತ್ವಾದಿಭೇದಭಿನ್ನತ್ವಾದ್ ಇತಿ ಭಾವಃ । 'ಪ್ರತ್ಯಕ್ಷಾದಿನಾ' ಇತಿ । ಪ್ರತ್ಯಕ್ಷಾದೇರ್ದೋಷಶಙ್ಕಾಕಲಙ್ಕಿತತ್ವಾದಿತಿ ಭಾವಃ । ಏತೇನಾನಧಿಗತಾರ್ಥವಿಷಯತ್ವಮಪಿ ಭೇದವಾಕ್ಯಾನಾಮುಕ್ತಂ ಭವತಿ ।**

**'ನ ಚ ಪ್ರಮಾಣಬಹುತ್ವೇ' ಇತ್ಯಾದಿನೋಕ್ತಮುಪಸಂಹರತಿ 'ತಸ್ಮಾತ್' ಇತಿ । ತತಃ ಕಿಂ? ಇತ್ಯತ ಆಹ 'ಅತಃ' ಇತಿ । ವಾಕ್ಯಸ್ಯ- 'ತತ್ ತ್ವಮಸಿ' ಇತ್ಯಾದೇಃ । ತಥಾಚ ಮಹಾವಾಕ್ಯಾಭಾವಾತ್ 'ನ ತದೇಕವಾಕ್ಯತಯಾ ಸರ್ವವಾಕ್ಯಾನಾಮೈಕ್ಯೇ ಮಹಾತಾತ್ಪರ್ಯಂ' ಇತಿ ಭಾವಃ । ಏವಂ ತರ್ಹಿ ಸರ್ವಾಗಮಾನಾಮೇಕಸ್ಯ ವಿಷಯಸ್ಯಾಭಾವಾದೇಕವಾಕ್ಯತಾ ನ ಸ್ಯಾದ್? ಇತ್ಯಭಿಪ್ರಾಯೇಣ ಪೃಚ್ಛತಿ 'ಕಿನ್ತು' ಇತಿ । ಉತ್ತರಮಾಹ 'ವಿಷ್ಣೋಃ' ಇತಿ । ಯದುಕ್ತಂ 'ಸದಾಗಮೈಕವಿಜ್ಞೇಯಂ' ಇತಿ 'ತದೇವೇದಮ್' ಇತಿ ಜ್ಞಾತವ್ಯಮ್ । ತತ್ಪ್ರಕಾರಶ್ಚ ಪ್ರಾಗೇವ ಸಙ್ಕ್ಷೇಪೇಣ ವರ್ಣಿತ ಇತಿ ।**

ವೈಷಮ್ಯವನ್ನು (ದೃಷ್ಟಾಂತ ದಾರ್ಷ್ಟಾಂತಿಕಗಳಲ್ಲಿ ವ್ಯತ್ಯಾಸವಿದೆ ಎಂದು)

ಶಂಕಿಸಿ ಪರಿಹರಿಹರಿಸುತ್ತಾರೆ '**ಪ್ರಥಮ**..' ಎಂದು. ಅಸಿದ್ಧಂ- ಜೀವೇಶ್ವರರ ಐಕ್ಯವು[1]. ಐಕ್ಯವು ದುರ್ಬೋಧವಾದುದರಿಂದ, ಪುರುಷರಲ್ಲಿ (ಸಾಧಕರಲ್ಲಿ) ಅತ್ಯಲ್ಪಪ್ರಜ್ಞಾವಂತ, ಅಲ್ಪಪ್ರಜ್ಞಾವಂತ, ಬಹುಪ್ರಜ್ಞಾವಂತ ಎಂಬ ಭೇದದಿಂದ ವಿಭಿನ್ನತೆಯಿರುವುದರಿಂದ ಎಂದು ಭಾವ. '**ಪ್ರತ್ಯಕ್ಷಾದಿನಾ**' ಎಂದು. ಪ್ರತ್ಯಕ್ಷಾದಿಗಳು ದೋಷವನ್ನು ಹೊಂದಿವೆ ಎಂಬ ಸಂದೇಹದಿಂದ ಕಲಂಕಿತವಾದುದರಿಂದ ಎಂದು ಭಾವ. ಇದರಿಂದ (ಪ್ರತ್ಯಕ್ಷಾದಿಗಳಿಂದ ಪ್ರಾಪ್ತವಾಗದ ದಾರ್ಢ್ಯವು ವೇದವಾಕ್ಯದಿಂದ ಪ್ರಾಪ್ತವಾಗುವುದು ಎಂದು ತಿಳಿಸಿದ್ದರಿಂದ) ಭೇದವಾಕ್ಯಗಳಿಗೆ 'ಅನಧಿಗತಾರ್ಥವಿಷಯತ್ವ' ಎಂಬ ಪ್ರಾಮಾಣ್ಯವೂ ಪಾಪ್ತವಾಯಿತು ಎನ್ನುವುದನ್ನು ತಿಳಿಸಿದಂತಾಯಿತು[2].

'ನಚ ಪ್ರಮಾಣಬಹುತ್ವೇ' ಈ ಮುಂತಾದವುಗಳಿಂದ ತಿಳಿಸಿದ (ವಾದಸರಣಿಯನ್ನು) ಉಪಸಂಹರಿಸುತ್ತಾರೆ '**ತಸ್ಮಾತ್**' ಎಂದು. ಆದುದರಿಂದ ಏನು? ಆದುದರಿಂದ ಹೇಳುತ್ತಾರೆ '**ಅತಃ**' ಎಂದು. **ವಾಕ್ಯಸ್ಯ**- 'ತತ್ತ್ವಮಸಿ' ಮುಂತಾದವುಗಳಿಗೆ (ವಾಕ್ಯಗಳಿಗೆ). ಹಾಗಾಗಿ ಮಹಾವಾಕ್ಯವೇ ಇಲ್ಲದಿರುವುದರಿಂದ 'ಅದರಿಂದ (ಮಹಾವಾಕ್ಯದಿಂದ) ಏಕವಾಕ್ಯತ್ವವನ್ನು ಹೊಂದಿಸುವ ಉದ್ದೇಶದಿಂದ ಎಲ್ಲ (ವೇದ) ವಾಕ್ಯಗಳಿಗೆ ಐಕ್ಯದಲ್ಲಿ ಮಹಾತಾತ್ಪರ್ಯ ಎನ್ನುವದು ಇಲ್ಲ' ಎಂದು ಭಾವ. ಹಾಗಾದಲ್ಲಿ ಎಲ್ಲ ಆಗಮಗಳಿಗೂ ಒಂದೇ ವಿಷಯ ಎನ್ನುವುದು ಇಲ್ಲದಿರುವುದರಿಂದ (ವೇದಗಳಿಗೆ) ಏಕವಾಕ್ಯತ್ವವೇ ಇಲ್ಲದಂತಾದೀತು? ಎನ್ನುವ ಭಾವದಿಂದ

---

1. 'ಪ್ರಥಮವಾಕ್ಯೇನೈವಾಸಿದ್ಧಮ್' ಎಂದಿದೆ. ಅಸಿದ್ಧವಾದುದು ಯಾವುದು ಎನ್ನುವುದು ಸ್ಫುಟವಿಲ್ಲ, ಹಾಗಾಗಿ ಟೀಕೆಯಲ್ಲಿ 'ಜೀವೇಶ್ವರೈಕ್ಯಮ್' ಎಂದು ಶೇಷಪೂರಣ ಮಾಡಿಕೊಳ್ಳಬೇಕು ಎಂದು ತಿಳಿಸಲಾಗಿದೆ.

2. ಪರವಾದಿಗಳು 'ಅನಧಿಗತಾರ್ಥಗನ್ತೃತ್ವಂ' ಎಂದು ಪ್ರಾಮಾಣ್ಯದ ಲಕ್ಷಣವನ್ನು ಅಭಿಮತಿಸಿರುವರು. ಅಂದರೆ 'ಈ ಹಿಂದೇ ತಿಳಿಸಲಾಗದ ವಿಷಯವನ್ನು ತಿಳಿಸುವಿಕೆಯೇ' ಪ್ರಾಮಾಣ್ಯದ ಲಕ್ಷಣ ಎಂದು. ಪ್ರಕೃತದಲ್ಲಿ ಪ್ರತ್ಯಕ್ಷಾದಿಗಳಿಂದ ತಿಳಿದ ಜೀವೇಶ್ವರರ ಭೇದವು ಅನಿಶ್ಚಿತವಾದುದರಿಂದ, ಆ ಭೇದವನ್ನು ಭೇದವಾಕ್ಯವು ತಿಳಿಸುವುದು; ಆಗ ಭೇದದಲ್ಲಿ ದಾರ್ಢ್ಯವು ಪ್ರಾಪ್ತವಾಯಿತು ಎಂದು ಪ್ರತಿಪಾದಿಸಿದ್ದರಿಂದ, ಅವರು ಅಭಿಮತಿಸಿದ 'ಅನಧಿಗತಾರ್ಥಗನ್ತೃತ್ವಂ' ಎಂಬ ಪ್ರಾಮಾಣ್ಯವೇ ಭೇದವಾಕ್ಯಗಳಿಗೆ ಪ್ರಾಪ್ತವಾಯಿತು ಎಂದು ಭಾವ.

ಪ್ರಶ್ನಿಸುವನು 'ಕಿಂತು' ಎಂದು. ಉತ್ತರಿಸುತ್ತಾರೆ 'ವಿಷ್ಣೋಃ' ಎಂದು. 'ಹಿಂದೆ 'ಸದಾಗಮೈಕವಿಜ್ಞೇಯಂ' ಎಂದು ಯಾವುದನ್ನು ಹೇಳಲಾಗಿದೆಯೋ ಅದೇ' ಎಂದು ತಿಳಿಯುವುದು. ಅದು ಹೇಗೆ ಎನ್ನುವದನ್ನು ಈ ಹಿಂದೆ ಸಂಕ್ಷೇಪದಲ್ಲಿ ತಿಳಿಸಲಾಗಿದೆ ಎಂದು[1].

**-: ಭೇದವಾಕ್ಯಪ್ರಾಬಲ್ಯವಾದಸಮಾಪ್ತಿ :-**

**॥ ವಿಷ್ಣುಸರ್ವೋತ್ತಮತ್ವವು ಶ್ರುತಿಸ್ಮೃತ್ಯುಕ್ತಯುಕ್ತಿಸಿದ್ಧ ॥**

ಶ್ರೀಮದಾಚಾರ್ಯರು ತಮ್ಮ ಪರಿಪಾಟಿಯಂತೆ ಉಪದಿಷ್ಟತತ್ತ್ವಗಳು ಅಬಾಧಿತವಾಗಿ ಮನದಲ್ಲಿ ನೆಲೆಯೂರಲು ಪ್ರಸಿದ್ಧ ಶ್ರುತಿ-ಸ್ಮೃತಿಗಳನ್ನು ಸಂವಾದಿಯಾಗಿ ಉಪದೇಶಿಸುವರು. ತರ್ಕವು ಉಪದಿಷ್ಟತತ್ತ್ವಗಳಿಗೆ ಮೆರಗನ್ನು ನೀಡಬಹುದೇ ಹೊರತು ತತ್ತ್ವದ ಸುಸ್ಥಿಗೆ ಕೇವಲತರ್ಕವು ಸಾಲದು. ಆದರೆ ಸದಾಗಮಗಳು ತಿಳಿಸಿದ ತರ್ಕವು ಪ್ರಬಲಾತಿಪ್ರಬಲ ಎನ್ನುತ್ತಾರೆ.

**ವಿಷ್ಣುಸರ್ವೋತ್ತಮತ್ವಪ್ರತಿಪಾದಕ ಭಗವದ್ಗೀತಾವಚನಗಳು**

**ತಥಾಚೋಕ್ತಂ ಭಗವತಾ-**

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥**

ಭಗವಂತನು ಹೀಗೆ ತಿಳಿಸಿರುವನು- ಅರ್ಜುನನೆ! (ನಿಯಮ್ಯವಾದ) ಈ ಲೋಕವನ್ನು ಪರಾಮರ್ಶಿಸಲಾಗಿ ಕ್ಷರ ಮತ್ತು ಅಕ್ಷರ ಎಂದು ಈರ್ವರೇ ಚೇತನರು. ಕ್ಷರರು ಎಲ್ಲ ಜೀವರು, ಅಕ್ಷರಳು ಕೂಟಸ್ಥಳಾದ (ಅವ್ಯಾಕೃತಾಕಾಶದಂತೆ ನಿತ್ಯಳಾದ) ಮಹಾಲಕ್ಷ್ಮಿ ಎಂದು ತಿಳಿಸಲಾಗಿದೆ.

**ನನು ಕುತ ಏತತ್? ನಹಿ 'ಜೀವಬ್ರಹ್ಮಣೋರೇಕತ್ವೇ ಸರ್ವಾಗಮಾನಾಂ ಮಹಾತಾತ್ಪರ್ಯಂ ನ ಸಮ್ಭವತಿ' ಇತ್ಯೇತಾವತಾ 'ಸಮತೀತಕ್ಷರಾಕ್ಷರತ್ವಾದಿ-ಲಕ್ಷಣೇ ವಿಷ್ಣೌ ತೇನ ಭಾವ್ಯಮ್' ಇತ್ಯತ್ರ ನಿಯಾಮಕಮಸ್ತಿ । ನಾಪಿ**

---

1. ಕಾರ್ಯತಾವಾದದ ವಿಮರ್ಶಾ ಸಂದರ್ಭದ 'ಇಯಂ ಮಾತಾ, ಅಯಂ ಪಿತಾ' ಇತ್ಯಾದಿ ಮೂಲವಾಕ್ಯಗಳನ್ನು ವ್ಯಾಖ್ಯಾನಿಸುವಾಗ ಟೀಕಾದಲ್ಲಿ ಸಮಸ್ತವೇದಗಳಿಗೆ ಏಕತ್ರ ಸಮನ್ವಯದ ವಿಧಾನವನ್ನು (ಪುಟ 321ರಲ್ಲಿ) ತಿಳಿಸಲಾಗಿದೆ ಎಂದು ಭಾವ.

'ಯೋಜಯಿತುಂ ಶಕ್ಯತೇ' ಇತ್ಯೇತಾವತಾ ತತ್ಸಿದ್ಧಿಃ । ಅನ್ಯಥಾಽಪಿ ಯೋಜನಾಯಾಃ ಕರ್ತುಂ ಶಕ್ಯತ್ವಾದ್? ಇತಿ ಚೇನ್ನ । 'ಸರ್ವಜ್ಞಂ ಸರ್ವಕರ್ತಾರಮ್' ಇತಿ ಪ್ರಮಾಣಸ್ಯೋಕ್ತತ್ವಾತ್ । ಪರಮಾಪ್ತೇನ ಭಗವತಾ ವಾಸುದೇವೇನ ಚ ತಥೋಕ್ತಮಿತ್ಯಾಹ **'ತಥಾ ಚ'** ಇತಿ । ತದ್ವಾಕ್ಯಂ ಪಠತಿ **'ದ್ವಾವಿಮೌ'** ಇತಿ । ದ್ವಾವೇವೇತಿ ಸಮ್ಬನ್ಧಃ । **ಇಮೌ-** ಪ್ರಮಿತೌ । **ಪುರುಷೌ-** ಚೇತನೌ । **ಲೋಕೇ-** ಅವಲೋಕೇ- ಪರ್ಯಾಲೋಚನೇ ಸತಿ । ಅಥವಾ 'ದ್ವಾವೇವ' ಇತ್ಯಸ್ಯ ಉಪಪತ್ತಯೇ ಪರಮಪುರುಷಂ ವ್ಯಾವರ್ತಯಿತುಂ **'ಲೋಕೇ'** ಇತ್ಯುಕ್ತಮ್, ಈಶಿತವ್ಯವರ್ಗ ಇತ್ಯರ್ಥಃ । **ಸರ್ವಾಣಿ ಭೂತಾನಿ-** ಬ್ರಹ್ಮಾದಯೋ ಜೀವಾಃ । **ಕೂಟಸ್ಥೋ-** ಮಹಾಲಕ್ಷ್ಮೀಃ ।

ಸರಿ, ಇದು ಹೇಗೆ? (ವೇದಗಳಿಗೆ ವಿಷ್ಣುಸರ್ವೋತ್ತಮತ್ವದಲ್ಲೇ ಮುಖ್ಯ ತಾತ್ಪರ್ಯ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುವುದು?) 'ಜೀವ-ಬ್ರಹ್ಮರ ಐಕ್ಯದಲ್ಲಿ ಎಲ್ಲ ವೇದಗಳಿಗೆ ಮಹಾತಾತ್ಪರ್ಯವಿಲ್ಲ' ಎಂದಮಾತ್ರಕ್ಕೆ 'ಸಮತೀತಕ್ಷರಾಕ್ಷರತ್ವಾದಿಲಕ್ಷಣಯುಕ್ತನಾದ ವಿಷ್ಣುವಿನಲ್ಲಿ ಅದರಿಂದ (ಸಕಲಾಗಮಗಳು ಮಹಾತಾತ್ಪರ್ಯದಿಂದ) ಯುಕ್ತವಾಗಿದೆ' ಎನ್ನುವ ವಿಷಯದಲ್ಲಿ ನಿಯಾಮಕವು (ಪ್ರಮಾಣವು) ಇಲ್ಲ. 'ಯೋಜಿಸಲು ಶಕ್ಯ' ಎಂದ ಮಾತ್ರದಿಂದ ಅದು (ವಿಷ್ಣುವಿನಲ್ಲಿ ಸಕಲಾಗಮಗಳಿಗೆ ತಾತ್ಪರ್ಯವಿದೆ ಎನ್ನುವುದು) ಸಿದ್ಧವಾಗುವುದಿಲ್ಲ. ಬೇರೇ ವಿಧದಿಂದಲೂ ಯೋಜಿಸಲು ಶಕ್ಯವಿರುವುದರಿಂದ ಎಂದು, ಹೇಳುವುದು ತರವಲ್ಲ[1]. 'ಸರ್ವಜ್ಞಂ ಸರ್ವಕರ್ತಾರಮ್' ಎಂಬ ಪ್ರಮಾಣವನ್ನು ಹೇಳಲಾಗಿರುವುದರಿಂದ. ಪರಮ ಆಪ್ತನಾದ ಭಗವಂತನಾದ ವಾಸುದೇವನಿಂದಲೂ ಸಹ ಹಾಗೇ ಹೇಳಲಾಗಿದೆ ಎಂದು ಹೇಳುತ್ತಿದ್ದಾರೆ **'ತಥಾಚೋಕ್ತಮ್'** ಎಂದು. ಆ

1. 'ಇಯಂ ಮಾತಾ' 'ಅಯಂ ಪಿತಾ' ಇತ್ಯಾದಿ ಮೂಲವಾಕ್ಯದ ವ್ಯಾಖ್ಯಾನಾವಸರದಲ್ಲಿ (ಪುಟ 321ರಲ್ಲಿ) 'ಅನೇನೈತಾಂ ವೇದವಾಕ್ಯಾನಾಂ ಯೋಜನಾಂ ಸೂಚಯತಿ' ಎನ್ನುವ ಟೀಕಾವಾಕ್ಯಗಳಿಂದ ವಿಷ್ಣುಪರವಾಗಿ ವೇದಗಳ ಯೋಜನೆಯು ಹೇಗೆ ಎನ್ನುವುದನ್ನು ತಿಳಿಸಲಾಗಿದೆ. ಹಾಗೆಯೇ ಅಲ್ಲಿಯೇ ಪೀಠಿಕಾರೂಪದ ಟೀಕಾವಾಕ್ಯವಾದ 'ಅತ್ರ ಅದ್ವೈತವಾದಿನೋ ವದನ್ತಿ' ಎನ್ನುವುದರಿಂದ ಜೀವ-ಬ್ರಹ್ಮರ ಅಭೇದದಲ್ಲಿಯೇ:ಸಕಲಾಗಮಗಳಿಗೆ ತಾತ್ಪರ್ಯ ಎನ್ನುವುದನ್ನೂ (ಪುಟ 344ರಲ್ಲಿ) ತಿಳಿಸಲಾಗಿದೆ. ಹಾಗಾಗಿ ಯೋಜಿಸಲು ಶಕ್ಯವಿದೆ ಎನ್ನುವ ಮಾತ್ರದಿಂದ 'ಇದೇ ವೇದಾರ್ಥ' ಎನ್ನುವದು ನಿಶ್ಚಯವಾಗಲಾರದು ಎಂದು ಭಾವ.

ವಾಕ್ಯಗಳನ್ನು (ಪರಮಾತ್ಮನು ತಿಳಿಸಿದ ವಾಕ್ಯಗಳನ್ನು) ಹೇಳುತ್ತಾರೆ '**ದ್ವಾವಿಮೌ**' ಎಂದು. 'ದ್ವೌ ಏವ' (ಈರ್ವರೇ) ಎಂದು ಅನ್ವಯಿಸುವುದು. **ಇಮೌ-** ಪ್ರಮಾಣ ಸಿದ್ಧರಾದ[1]. **ಪುರುಷೌ-** (ಈರ್ವರು) ಚೇತನರು[2]. **ಲೋಕೇ-** ಅವಲೋಕಿಸಿದಲ್ಲಿ- ಪರ್ಯಾಲೋಚಿಸಿದಲ್ಲಿ. ಅಥವಾ '**ದ್ವಾವೇವ**' ಎನ್ನುವುದಕ್ಕೆ ಉಪಪತ್ತಿಯನ್ನಾಗಿ ಪರಮಪುರುಷನನ್ನು ವ್ಯಾವರ್ತಿಸುವ ಸಲುವಾಗಿ '**ಲೋಕೇ**' ಎಂದು ಹೇಳಲಾಗಿದೆ, ನಿಯಮ್ಯವಾದ ಗುಂಪಿನಲ್ಲಿ ಎಂದು ಅರ್ಥ[3]. **ಸರ್ವಾಣಿ ಭೂತಾನಿ-** ಬ್ರಹ್ಮಾದಿಜೀವರು. **ಕೂಟಸ್ಥಃ-** ಮಹಾಲಕ್ಷ್ಮೀದೇವಿಯು.

**ಉತ್ತಮಃ ಪುರುಷಸ್ತ್ವನ್ಯಃ 'ಪರಮಾತ್ಮೇ'ತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**

ಯಾರು ಎಲ್ಲ ಲೋಕಗಳಲ್ಲಿ ಪ್ರವೇಶಿಸಿ (ಈ ಎಲ್ಲಲೋಕಗಳನ್ನು) ಧರಿಸಿರುವನೋ, ಅವ್ಯಯನೋ, ಈಶ್ವರನೋ ಆ ನಾನು, (ಈ ಕ್ಷರಾಕ್ಷರರಿಂದ) ಬೇರೆಯಾದ ಉತ್ತಮನಾದ ಪುರುಷನು ಪರಮಚೇತನ ಎಂದು ಉದಾಹೃತನಾಗಿರುವೆನು.

**ಯದರ್ಥಂ ಪುರುಷದ್ವಯನಿರೂಪಣಂ ಕೃತಂ ತದಾಹ 'ಉತ್ತಮಃ' ಇತಿ । ಅನ್ಯಃ ಕ್ಷರಾಕ್ಷರಾಭ್ಯಾಮ್, ನ ಪುನರೇತಯೋರ್ಮಧ್ಯೇ ಕಶ್ಚಿತ್**

1. 'ಇಮೌ ಪುರುಷೌ' ಎಂದು ಮೂಲದಲ್ಲಿದೆ. ಆದರೆ, ಜಗದಲ್ಲಿ ಎಲ್ಲೆಡೆ ವ್ಯಾಪ್ತರಾದ ಕ್ಷರಾಕ್ಷರ ಪುರುಷರು ಇಲ್ಲಿ ಉಕ್ತರಾಗಿದ್ದಾರೆ. ಹಾಗಾಗಿ ಆ ಪುರುಷರು ಪರಿದೃಶ್ಯಮಾನರಾದವರಲ್ಲಿ ಯಾರೋ ಈರ್ವರಲ್ಲ ಎಂದಾದಲ್ಲಿ, 'ಇಮೌ' ಎಂದು ನಿರ್ದೇಶಿಸುವುದು ತರವೆ? ಇಮೌ ಎನ್ನುವುದು ಅಪರೋಕ್ಷನಿರ್ದೇನದಲ್ಲಿಯೇ ಪ್ರಯೋಗವು ಇರುವುದರಿಂದ, ಎಂಬ ಸಂದೇಹವನ್ನು ನಿವಾರಿಸಲು ಇಮೌ- ಪ್ರಮಾಣಗಳಿಂದ ಪ್ರಮಿತರು ಎಂದು ಅರ್ಥೈಸಲಾಗಿದೆ ಎಂದು ತಿಳಿಯುವುದು.

2. ಇಲ್ಲಿ ಅಕ್ಷರ ಶಬ್ದದಿಂದ ಪ್ರತಿಪಾದಿತವಾಗಿರುವುದು ಶ್ರೀತತ್ತ್ವ. ಪುರುಷ ಶಬ್ದದಿಂದ ಶ್ರೀತತ್ತ್ವದ ಪರಾಮರ್ಶವು ಹೇಗೆ ಶಕ್ಯ? ಎನ್ನುವ ಸಂದೇಹವನ್ನು ಪರಿಹರಿಸಲು ಪುರುಷಶಬ್ದವು ಪುಂವಾಚಕವಲ್ಲ, ಚೇತನಾರ್ಥದಲ್ಲಿದೆ ಎಂದು ತಿಳಿಸಿರುವರು.

3. ಮುಂದೆ 'ಉತ್ತಮಃ ಪುರುಷಸ್ತ್ವನ್ಯಃ' ಎಂದು ಮೂರನೇ ವ್ಯಕ್ತಿಯನ್ನು ಹೇಳಲಿರುವರು, ಇಲ್ಲಿ 'ದ್ವಾವೇವ' ಎಂದು ಹೇಳುವುದು ಹೇಗೆ ಸಮಂಜಸವಾದೀತು? ಉತ್ತರಿಸುವರು 'ಲೋಕೇ' ಎಂದು. ನಿಯಮ್ಯವರ್ಗದಲ್ಲಿ ಇರುವ ಪುರುಷರು ಎರಡು ಬಗೆಯವರು. ಈಶ್ವರನು ನಿಯಾಮಕವರ್ಗಕ್ಕೆ ಸೇರಿದವನು ಎಂದು ಭಾವ.

**ಪುರುಷೋತ್ತಮಃ ಕಲ್ಪನೀಯಃ । ತತ್ರ ಶ್ರುತ್ಯಾದಿಸಮ್ಮತಿಮಾಹ 'ಪರಮಾತ್ಮಾ' ಇತಿ । ಆತ್ಮಶಬ್ದೋ ಹಿ ಚೇತನಪರ್ಯಾಯಃ । ಯುಕ್ತಿಮಪ್ಯಾಹ 'ಯಃ' ಇತಿ । 'ಲೋಕತ್ರಯಂ' ಇತಿ ಸರ್ವೋಪಲಕ್ಷಣಮ್ । ಯೋ ಹಿ ಯಸ್ಯ ಧಾರಣಪೋಷಣಾದಿಕರ್ತಾ ಸ ತಸ್ಮಾದ್ ಉತ್ತಮೋ ಯುಕ್ತಃ । ತದಾವಿಷ್ಟಸ್ಯ ತನ್ನಾಶೇ ನಾಶಪ್ರಸಙ್ಗಃ? ಇತ್ಯತ ಉಕ್ತಂ 'ಅವ್ಯಯಃ' ಇತಿ । ತತ್ಕಥಮ್? ಐಶ್ವರ್ಯಾದ್ ಇತ್ಯಾಹ 'ಈಶ್ವರಃ' ಇತಿ ।**

ಪುರುಷದ್ವಯರ ಉಲ್ಲೇಖವನ್ನು ಯಾವ ಉದ್ದೇಶಕ್ಕಾಗಿ ತಿಳಿಸಲಾಗಿದೆ? ಅದನ್ನು ತಿಳಿಸುವರು **'ಉತ್ತಮಃ'** ಎಂದು. ಅನ್ಯಃ (ಭಿನ್ನನು) ಕ್ಷರಾಕ್ಷರ ಪುರುಷರಿಂದ[1]. ಹೊರತಾಗಿ ಈ ಪುರುಷರ ಮಧ್ಯದಲ್ಲಿ ಯಾವನೋ ಓರ್ವನನ್ನು ಉತ್ತಮ ಎಂದು ಕಲ್ಪಿಸುವುದಲ್ಲ. ಈ ವಿಷಯದಲ್ಲಿ ಶ್ರುತ್ಯಾದಿಗಳ ಸಮ್ಮತಿಯನ್ನು ತಿಳಿಸುತ್ತಾರೆ **'ಪರಮಾತ್ಮಾ'** ಎಂದು. 'ಆತ್ಮ' ಶಬ್ದವು 'ಚೇತನ' (ಶಬ್ದದಲ್ಲಿ) ಪರ್ಯಾಯ ಎಂಬುವುದು ಪ್ರಸಿದ್ಧ[2]. ಯುಕ್ತಿಯನ್ನೂ ತಿಳಿಸುತ್ತಾರೆ **'ಯಃ'** ಎಂದು. **'ಲೋಕತ್ರಯಂ'** ಎನ್ನುವುದು ಎಲ್ಲದಕ್ಕೂ (ಹದಿನಾಲ್ಕು ಲೋಕಕ್ಕೂ)

---

1. ಅನ್ಯಃ ಎನ್ನುವುದು ಸಾಪೇಕ್ಷ ಪದ. 'ಯಾರಿಂದ ಅನ್ಯ' ಎನ್ನುವ ಪ್ರಶ್ನೆಯು ಪ್ರಾಪ್ತವಾಗುವುದು ಸಹಜ, ಅದನ್ನು ಪರಿಹರಿಸಲಾಗಿದೆ.

2. ಪ್ರಕೃತ ಗೀತಾವಾಕ್ಯವು 'ಕ್ಷರಾಕ್ಷರ ಪುರುಷರಿಂದ ಬೇರೆಯಾದ ಪುರುಷನು ಉತ್ತಮನು' ಎಂದು ತಿಳಿಸಿದೆ. ಈ ವಿಷಯದಲ್ಲಿ ಆಗಮಪ್ರಮಾಣವಿದೆ ಎಂದು 'ಪರಮಾತ್ಮೇತ್ಯುದಾಹೃತಃ' ಎನ್ನುವುದರಿಂದ ತಿಳಿಸಲಾಗಿದೆ, 'ತಸ್ಯಾಃ ಶಿಖಾಯಾಂ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ' ಎನ್ನುವ ಶ್ರುತಿಯನ್ನು ಸೂಚಿಸುತ್ತದೆ ಎಂದು ವ್ಯಾಖ್ಯಾನಿಸಲಾಗಿದೆ. ಆದರೆ ಈ ಶ್ರುತಿಯು ಪ್ರಕೃತ ವಿಷಯದಲ್ಲಿ ಸಂವಾದಿ ಪ್ರಮಾಣವಾಗಲಾರದು. ಸಂವಾದಿಪ್ರಮಾಣವಾಗಬೇಕಿದ್ದಲ್ಲಿ ಶ್ರುತಿಯಲ್ಲಿ 'ಪರಮಪುರುಷ' ಎಂಬ ಸಮಾನಶಬ್ದವು ಇರಬೇಕಾಗಿತ್ತು. ಅಥವಾ ಅರ್ಥತಃ ಸಮಾನಶಬ್ದವನ್ನು ಹೊಂದಿದೆ ಎಂದು ಹೇಳುವುದಾದಲ್ಲಿ 'ಪರಮಚೇತನ' ಎಂದಿರಬೇಕಾಗಿತ್ತು, ಇವೆರಡೂ ಕಾಣದಿರುವುದರಿಂದ ಪ್ರಕೃತ ಶ್ರುತಿಯು ಗೀತೆಯ ಉಪದೇಶಕ್ಕೆ ಹೇಗೆ ಸಂವಾದಿ ಯಾಗುವುದು? ಎಂಬ ಸಂದೇಹವನ್ನು ಪರಿಹರಿಸುತ್ತಿರುವರು 'ಆತ್ಮಶಬ್ದೋ ಹಿ ಚೇತನ-ಪರ್ಯಾಯಃ' ಎನ್ನುವುದರಿಂದ. ಶ್ರುತಿಯಲ್ಲಿರುವ 'ಆತ್ಮ' ಶಬ್ದವು ಚೇತನ ಎನ್ನುವ ಅರ್ಥ ವನ್ನು ಹೊಂದಿದೆ, ಇನ್ನು 'ಪರಮ' ಎನ್ನುವ ಶಬ್ದವು ಉತ್ತಮ ಎಂಬ ಅರ್ಥವನ್ನು ಹೊಂದಿದೆ ಎನ್ನುವುದು ಪ್ರಸಿದ್ಧ. ಆದುದರಿಂದ ಅದನ್ನು ಇಲ್ಲಿ ಹೇಳಲಾಗಿಲ್ಲ. ಹೀಗಾಗಿ ಶ್ರುತಿಯು 'ಉತ್ತಮಚೇತನ' ಎಂದು ಉಪದೇಶಿಸಿದ್ದರಿಂದ ಪ್ರಕೃತಕ್ಕೆ ಸಂವಾದಿಯಾಯಿತು ಎಂದು ಭಾವ.

ಸಂಗ್ರಾಹಕ[1]. 'ಯಾರು ಯಾರ ಧಾರಣ-ಪೋಷಣಾದಿಗಳನ್ನು ನಡೆಸುವನೋ ಆತನು ಅವರಿಗಿಂತ ಉತ್ತಮ' ಎನ್ನುವುದು ಯುಕ್ತವೇ (ಆಗಿದೆ). ಅದರ (ಮೂರು ಲೋಕದ) ನಾಶವಾದಲ್ಲಿ, ಅದರಲ್ಲಿ (ಮೂರು ಲೋಕದಲ್ಲಿ) ಪ್ರವಿಷ್ಟನಿಗೆ (ಹರಿಗೆ) ನಾಶವು ಸಂಭಾವಿತ ಎಂದು[2], ಆದುದರಿಂದ ಉತ್ತರಿಸುವರು '**ಅವ್ಯಯಃ**' ಎಂದು. ಇದು ಹೇಗೆ? ಐಶ್ವರ್ಯವಂತ ನಾದುದರಿಂದ ಎಂದು ಉತ್ತರಿಸುವರು '**ಈಶ್ವರಃ**' ಎಂದು[3].

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**

ಯಾವಕಾರಣದಿಂದ ಕ್ಷರಪುರುಷರನ್ನು ಮೀರಿರಿವನೊ ಮತ್ತು ಅಕ್ಷರ ಪುರುಷಳನ್ನೂ ಮೀರಿರಿವನೋ ಆದುದರಿಂದ ಪೌರುಷೇಯಾಗಮದಲ್ಲಿ ಮತ್ತು ವೇದದಲ್ಲಿ 'ಪುರುಷೋತ್ತಮ' ಎಂದು ಖ್ಯಾತನಾಗಿರುವೆ.

**ಸ ಚ ಕಃ? ಇತ್ಯಪೇಕ್ಷಾಯಾಂ 'ಅಹಮೇವ' ಇತಿ ಸಪ್ರಮಾಣಮಾಹ 'ಯಸ್ಮಾತ್' ಇತಿ । ಕ್ಷರಂ ಚ ಇತ್ಯನ್ವಯಃ । ಲೋಕೇ-ಪೌರುಷೇಯಾಗಮೇ ।**

ಅವ ಯಾರು? ಎಂದು ಪ್ರಶ್ನೆಯು ಪ್ರಾಪ್ತವಾಗಲು 'ನಾನೇ' (ಗೀತೋಪ-ದೇಶಕನಾದ ಕೃಷ್ಣನು) ಎಂದು ಪ್ರಮಾಣಪುರಸ್ಸರವಾಗಿ ಹೇಳುತ್ತಾರೆ '**ಯಸ್ಮಾತ್**' ಎಂದು. ಕ್ಷರಂ ಚ ಎಂದು ಅನ್ವಯ[4]. **ಲೋಕೇ**- ಪೌರುಷೇಯಾಗಮಗಳಲ್ಲಿ[5].

---

1. ಪ್ರಕೃತ ಗೀತೆಯು ತಿಳಿಸಿರುವ 'ಲಕ್ಷ್ಮೀ-ಬ್ರಹ್ಮಾದಿ ಸಕಲ ಜೀವರಿಂದ ಪುರುಷನು ಉತ್ತಮ' ಎಂಬ ವಿಷಯವನ್ನು ಪುಷ್ಟೀಕರಿಸಬೇಕಾದಲ್ಲಿ 'ಕೇವಲ ಮೂರು ಲೋಕದ ಧಾರಕ' ಎಂದು ತಿಳಿಸಿದಲ್ಲಿ ಸಾಲದು. ಅದಕ್ಕಾಗಿ 'ಲೋಕತ್ರಯಂ' ಎನ್ನುವುದು ಹದಿನಾಲ್ಕು ಲೋಕಗಳನ್ನು ಸೂಚಿಸುವುದು ಎಂದು ತಿಳಿಯುವುದು ಎಂಬ ಭಾವ.
2. ಮನೆಗೆ ಬೆಂಕಿಯು ತಗುಲಿ ನಾಶವಾದಲ್ಲಿ ಮನೆಯಲ್ಲಿರುವವನೂ ಸಾವನ್ನು ಅಪ್ಪುವನು, ಹಾಗೆ ಈಶ್ವರನೂ ಮೂರು ಲೋಕದ ನಾಶವಾದಾಗ ನಾಶವನ್ನು ಹೊಂದುವ ಪ್ರಸಂಗವಿರಬಹುದು ಎಂದು ಸಂದೇಹದ ಭಾವ.
3. ಈಶ್ವರ ಎಂದರೆ ಅಘಟಿತಘಟನಾ ಸಾಮರ್ಥ್ಯವನ್ನು ಹೊಂದಿದವ ಎಂದು ಭಾವ.
4. ಮೂಲದಲ್ಲಿನ ಗೀತಾಶ್ಲೋಕದಲ್ಲಿ ಅಪಿ ಮತ್ತು ಚ ಎಂದು ಎರಡು ಸಮುಚ್ಚಯಾರ್ಥಕ ಅವ್ಯಯಗಳು ಇವೆ, ಅವುಗಳಲ್ಲಿ ಒಂದಾದ ಚ ಶಬ್ದಕ್ಕೆ ಅನ್ವಯವನ್ನು ತಿಳಿಸಿರುವರು.
5. ಲೋಕೇ ಎನ್ನುವುದಕ್ಕೆ ಜಗದಲ್ಲಿ ಎಂದು ಸರ್ವರೂಢಾರ್ಥವಿದೆ. ಪ್ರಕೃತದಲ್ಲಿ ಆ ಅರ್ಥವು ಅನಗತ್ಯವೆಂದು, ವೇದಶಬ್ದದ ಜೊತೆಗಿರುವ ಲೋಕಶಬ್ದಕ್ಕೆ ಸಮುಚಿತಾರ್ಥವನ್ನು ತಿಳಿಸಿರುವರು.

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥**

ಯಾರು ಮೋಹರಹಿತನಾಗಿ ನನ್ನನ್ನು 'ಪುರುಷೋತ್ತಮ' ಎಂದು ತಿಳಿಯುವನೋ ಆತನು ಎಲ್ಲವನ್ನು ತಿಳಿದಂತೆ, ಆತನು ಎಲ್ಲವಿಧದಿಂದಲೂ ನನ್ನನ್ನು ಹೊಂದುವನು.

**ಅತ್ರ ಆತ್ಮನಸ್ತಾತ್ಪರ್ಯದ್ಯೋತನಾಯ ವೇತ್ತುಃ ಫಲಮಾಹ 'ಯೋ ಮಾಂ' ಇತಿ । ಏವಂ ನತ್ವಶ್ವಕರ್ಣಾದಿವತ್ ಸಂಜ್ಞಾತ್ವೇನ । ಏತಚ್ಚ ಪುರುಷೋತ್ತಮತ್ವಮಪರಮಾರ್ಥಿಕಮ್? ಇತಿ ಸಂಮೋಹವರ್ಜಿತಃ । ಸರ್ವವಿತ್, ಅಸ್ಯೈವ ಸರ್ವಶಾಸ್ತ್ರಾರ್ಥತ್ವಾತ್ । ಸರ್ವಭಾವೇನ-ಸರ್ವಪ್ರಕಾರೇಣ ।**

ಈ ವಿಷಯದಲ್ಲಿ ತನಗೆ (ಗೀತೋಪದೇಶಕನಾದ ಭಗವಂತನಿಗೆ) ನೈರ್ಭರ್ಯವನ್ನು ಸೂಚಿಸಲು (ಈ ವಿಷಯವನ್ನು) ತಿಳಿದವಗೆ (ಪ್ರಾಪ್ತವಾಗುವ) ಫಲವನ್ನು ತಿಳಿಸುವನು **'ಯೋ ಮಾಂ'** ಎಂದು[1]. ಈ ರೀತಿಯಾಗಿ (ತಿಳಿದವಗೆ) ಹೊರತಾಗಿ, 'ಅಶ್ವಕರ್ಣ' ಮುಂತಾದವುಗಳಂತೆ ಹೆಸರು ಎಂದು (ತಿಳಿದವಗಲ್ಲ)[2]. ಈ ಪುರುಷೋತ್ತಮತ್ವವು ಪಾರಮಾರ್ಥಿಕ ಅಲ್ಲ? ಎಂಬ (ಸಂದೇಹವನ್ನು ಪರಿಸಲು) ಮೋಹದಿಂದ ರಹಿತನಾದವನು[3].

---

1. ಶಾಸ್ತ್ರದಲ್ಲಿ ವಿಷಯ ಒಂದರಲ್ಲಿ ನೈರ್ಭರ್ಯವನ್ನು ಸೂಚಿಸಲು ಅನೇಕ ಮಾರ್ಗಗಳಿವೆ. ಉಪಕ್ರಮೋಪಸಂಹಾರಗಳಲ್ಲಿ ಆ ವಿಷಯವನ್ನು ಹೇಳಿರುವುದು ಇತ್ಯಾದಿಗಳು. ಅವುಗಳಲ್ಲಿ ಫಲವಾಚನವೂ ಒಂದು ಎಂಬುವುದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ ಎಂದು ಭಾವ.
2. 'ಅಶ್ವಕರ್ಣ' ಎಂದು ಓರ್ವನಿಗೆ ನಾಮಕರಣವನ್ನು ಮಾಡಿರುತ್ತಾರೆ. ಈ ನಾಮೋಕ್ತ ಗುಣಗಳು ಆ ವ್ಯಕ್ತಿಯಲ್ಲಿ ಇರುವುದಿಲ್ಲ. ಅದರಂತೆ 'ಪುರುಷೋತ್ತಮ' ಎಂಬುವುದು ಭಗವಂತನಿಗೆ ಕೇವಲ ಹೆಸರು ಎಂದು ತಿಳಿಯುವುದಲ್ಲ. ಮತ್ತೆ ಶ್ರುತಿ-ಸ್ಮೃತಿಗಳಲ್ಲಿ ತಿಳಿಸಿರುವಂತೆ 'ಕ್ಷರಾಕ್ಷರಾತೀತ- ಪುರುಷೋತ್ತಮ' ಎಂದು ತಿಳಿಯುವುದು ಎಂದು ಭಾವ.
3. ಅಸಮ್ಮೂಢಃ ಎಂಬ ಗೀತೆಯಲ್ಲಿನ ಶಬ್ದದ ಭಾವಾರ್ಥವಿದು.

'ಸರ್ವವಿತ್' ಇದೇ ಸಕಲ ಶಾಸ್ತ್ರದ ಸಾರಾರ್ಥವಾದುದರಿಂದ[1]. ಸರ್ವಭಾವೇನ- ಎಲ್ಲ ರೀತಿಯಿಂದಲೂ[2].

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**
**ಏತದ್ ಬುಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ಇತಿ ॥**

ಪಾಪರಹಿತನೇ! ಈ ಗುಹ್ಯಾತಿಗುಹ್ಯವಾದ ಈ ಶಾಸ್ತ್ರವನ್ನು ನಾನು ಹೇಳಿರುವೆನು. ಹೇ ಭರತನೇ! ಇದನ್ನು ತಿಳಿದವನು ಜ್ಞಾನಿ, ಮತ್ತು ಕೃತಕೃತ್ಯನಾಗುವನು ಎಂದು.

**ಏತಚ್ಚ ನಾಯೋಗ್ಯಾಯ ವಾಚ್ಯಮಿತ್ಯಾಶಯೇನಾಹ 'ಇತಿ' ಇತಿ । 'ಸ ಸರ್ವವಿತ್' ಇತ್ಯಾದ್ಯುಕ್ತಮ್ ।ತತಃ ಕಿಮ್? ಇತ್ಯತ ಆಹ 'ಏತತ್' ಇತಿ । ಬುದ್ಧಿಮಾನ್- ಅಪರೋಕ್ಷಜ್ಞಾನೀ । ಕೃತಕೃತ್ಯಃ- ಮುಕ್ತಃ । ಅತ್ರ ಹಿ 'ಸರ್ವವಿತ್' ಇತ್ಯುಕ್ತತ್ವಾತ್ 'ಸರ್ವೇಷಾಂ ಪೌರುಷೇಯ-ಅಪೌರುಷೇಯಾಗಮಾನಾಂ ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಮ್' ಇತಿ ಸ್ಫುಟಂ ಪ್ರತೀಯತೇ ।**

ಇದನ್ನಾದರೋ ಅಯೋಗ್ಯನಿಗೆ ಉಪದೇಶಿಸಬಾರದು ಎಂಬ ಭಾವದಿಂದ ಹೇಳುವರು 'ಇತಿ' ಎಂದು. 'ಸ ಸರ್ವವಿತ್' ಈ ಮುಂತಾದಕ್ರಮದಲ್ಲಿ ತಿಳಿಸಿದಂತೆ. ಇದರಿಂದ ಏನು? ಆದುದರಿಂದ ಹೇಳುತ್ತಾರೆ **'ಏತತ್'** ಎಂದು. **ಬುದ್ಧಿಮಾನ್**- ಅಪರೋಕ್ಷಜ್ಞಾನಿ[3]. **ಕೃತಕೃತ್ಯಃ**- ಮುಕ್ತನು. ಇಲ್ಲಿ **'ಸರ್ವವಿತ್'**

---

1. ಸಕಲಶಾಸ್ತ್ರದ ಸಾರವು 'ಹರಿಯು ಸರ್ವೋತ್ತಮ' ಎನ್ನುವುದು, ಅದನ್ನು ಯಾರು ತಿಳಿದಿರುವನೋ ಆತನನ್ನೇ 'ಸರ್ವವಿತ್' ಎಂದು ತಿಳಿಯುವುದು ಎಂಬ ಭಾವ.

2. ಸರ್ವಭಾವ ಶಬ್ದಕ್ಕೆ ಆಪಾತತಃ ತೋರುವ ಅರ್ಥವು ಸರ್ವರಿಂದ (ಭಗವಂತನಿಗೆ) ಅಭೇದ. ಆದರೆ ಇದು 'ಉತ್ತಮಃ ಪುರುಷಸ್ತ್ವನ್ಯಃ' ಎನ್ನುವುದಕ್ಕೆ ವಿರುದ್ಧವಾಗಿದೆ, ಆದುದರಿಂದ 'ಎಲ್ಲ ರೀತಿಯಿಂದ' ಎಂದು ಅರ್ಥೈಸಲಾಗಿದೆ. ಈ ಗೀತೆಯಲ್ಲಿಯೇ ಈ ಹಿಂದೆ 'ತ್ವಮೇವ ಮಾತಾ ಚ ಪಿತಾ ತ್ವಮೇವ...' ಎಂದು ತಿಳಿಸಲಾಗಿದೆ, ಆ ರೀತಿಯಲ್ಲಿ ಎಂದು ಭಾವ.

3. ಗೀತೆಯಲ್ಲಿ 'ಬುಧ್ವಾ' ಮತ್ತು 'ಬುದ್ಧಿಮಾನ್' ಎಂದು ಇದೆ. ಪೌನರುಕ್ತಿಯನ್ನು ಪರಿಹರಿಸಲು ಬುದ್ಧಿಮಾನ್ ಎಂದರೆ ಅಪರೋಕ್ಷಜ್ಞಾನಿ ಎಂದು, ಬುಧ್ವಾ ಎಂದರೆ ಪರೋಕ್ಷಜ್ಞಾನಿ ಎಂದು ತಿಳಿಯುವುದು ಎಂದು ಭಾವ.

ಎಂದು ಹೇಳಿರುವುದರಿಂದ ಎಲ್ಲ ಪೌರುಷೇಯಾಪೌರುಷೇಯಾಗಮಗಳಿಗೆ ವಿಷ್ಣುವಿನ ಸರ್ವೋತ್ತಮತ್ವದಲ್ಲೇ ಮಹಾತಾತ್ಪರ್ಯವಿದೆ ಎನ್ನುವುದು ಸ್ಫುಟವಾಗಿ ತಿಳಿಯುವುದು[1].

**ಶ್ರುತಿ-ಪುರಾಣಗಳಲ್ಲಿ ವಿಷ್ಣುಸರ್ವೋತ್ತಮತ್ವ**

**ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ**
**ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।**
**ಅವಾನ್ತರಂ ತತ್ಪರತ್ವಂ ತದನ್ಯತ್**
**ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥ ಇತಿ ಪೈಙ್ಗಿಶ್ರುತಿಃ ।**

**ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀಪತೇಃ ಪರಮ್ ।**
**ಉತ್ಕರ್ಷೇ ತು ತದನ್ಯತ್ರ ತಾತ್ಪರ್ಯಂ ಸ್ಯಾದವಾನ್ತರಮ್ ॥**
**ಇತಿ ಮಹಾವರಾಹೇ ॥**

(ಎಲ್ಲ) ದೇವತೆಗಳಿಂದ ಸ್ತುತ್ಯನಾದ ವಿಷ್ಣುವಿಗೆ ಎಲ್ಲರಿಂದ ಶ್ರೇಷ್ಠತೆಯನ್ನು ತಿಳಿಸುವುದರಲ್ಲಿ ಎಲ್ಲ ಆಗಮಗಳಿಗೆ ಮಹಾತಾತ್ಪರ್ಯ , ಬೇರೇ ವಿಷಯದಲ್ಲಿ (ಧರ್ಮಾದಿಗಳಲ್ಲಿ ತಾತ್ಪರ್ಯವು) ಇಲ್ಲ ಎನ್ನುವುದೇ ದಿಟ. ಪುರುಷಾರ್ಥವು (ಮೋಕ್ಷವು) ಆತನಿಂದ (ಭಗವಂತನಿಂದ) ಆದುದರಿಂದ, ಆಗಮದ ಒಂದು ಭಾಗವು ಅಮುಖ್ಯತಾತ್ಪರ್ಯವನ್ನು ಬೇರೆಡೆಯಲ್ಲಿ (ಧರ್ಮಾದಿಗಳಲ್ಲಿ) ಹೊಂದಿದೆ. ಎಂದು ಪೈಂಗಿಶ್ರುತಿಯು ತಿಳಿಸಿದೆ.

ಎಲ್ಲ ವೇದಗಳಿಗೆ ಶ್ರೀಪತಿಯ ಉತ್ಕರ್ಷದಲ್ಲಿ ಮುಖ್ಯತಾತ್ಪರ್ಯ, ಬೇರೆಡೆಯಲ್ಲಿಯಾದರೋ (ಧರ್ಮಾದಿಗಳಲ್ಲಿಯಾದರೋ) ಕೇವಲ ಅವಾಂತರ (ಅಮುಖ್ಯ) ತಾತ್ಪರ್ಯ. ಎಂದು ಮಹಾವಾರಾಹಪುರಾಣವು ಸಾರಿದೆ.

**ಶ್ರುತಿರಪ್ಯೇವಮೇವಾಽಹೇತ್ಯಾಹ 'ಸರ್ವೋತ್ಕರ್ಷೇ' ಇತಿ । ಸರ್ವಸ್ಮಾದುತ್ಕರ್ಷ ಉತ್ತಮತ್ವಂ- ಸರ್ವೋತ್ಕರ್ಷಃ । ದೇವಾನಾಂ ದೇವಃ-**

1. ಪ್ರಕೃತ ಗೀತೆಯಲ್ಲಿ ಹರಿಯನ್ನು 'ಕ್ಷರಾಕ್ಷರೋತ್ತಮ' ಎಂದು ತಿಳಿದವನು 'ಸರ್ವವಿತ್' (ಸರ್ವಜ್ಞನು) ಎಂದಾದಲ್ಲಿ, ಎಲ್ಲ ಆಗಮಗಳಲ್ಲಿ ಇದೇ ಉಕ್ತವಾಗಿರಬೇಕು ಎಂದು ಊಹಿಸುವುದು ಸುಲಭ ಎಂದು ಭಾವ.

**ಸ್ತುತ್ಯೋ- ದೇವದೇವಃ ।** 'ಸರ್ವಾಗಮಾನಾಂ ಮಹಾತಾತ್ಪರ್ಯಂ' ಇತಿ ಸಮ್ಬನ್ಧಃ । **ಅನ್ಯತ್ರ-** ಧರ್ಮಾದೌ ತು ಮಹಾತಾತ್ಪರ್ಯಂ ನೈವ । ಕಿಂ ತರ್ಹಿ? **ತದನ್ಯತ್ರ-** ಆಗಮೈಕದೇಶಸ್ಯ, **ಅವಾನ್ತರಂ-** ವಿಷ್ಣೋಃ ಸರ್ವೋತ್ಕರ್ಷ-ಪ್ರತಿಪತ್ತ್ಯರ್ಥತ್ವಾದಮುಖ್ಯಂ **ತತ್ಪರತ್ವಮ್** । ಯತಃ ಸರ್ವಾಗಮಸಾಧ್ಯಃ ಪುರುಷಾರ್ಥೋ ಮೋಕ್ಷಃ, **ತತೋ-** ವಿಷ್ಣೋಃ ಸರ್ವೋತ್ತಮತ್ವಜ್ಞಾನಾದೇವ ಭವತಿ । **ಅತಃ-** ಕಾರಣಾದ್, ಉಕ್ತಮೇತತ್ **'ಸತ್ಯಮ್'** ಇತಿ ।

ಪುರಾಣೇಽಪ್ಯೇವಮೇವೋಕ್ತಮ್ ಇತ್ಯಾಹ **'ಮುಖ್ಯಂ ಚ'** ಇತಿ । ಸರ್ವ-ವೇದಾನಾಂ ಶ್ರೀಪತೇರುತ್ಕರ್ಷ ಏವ **ಪರಂ-** ಮುಖ್ಯಂ ತಾತ್ಪರ್ಯಮ್ । **ತದನ್ಯತ್ರ ತು ಪರಂ** - ಕೇವಲಮವಾನ್ತರಂ ತಾತ್ಪರ್ಯಂ ಸ್ಯಾದಿತಿ ಯೋಜನಾ ।

ಶ್ರುತಿಯೂ ಇದನ್ನೇ ತಿಳಿಸುವುದು ಎಂದು ಹೇಳುವರು **'ಸರ್ವೋತ್ಕರ್ಷೇ'** ಎಂದು. ಎಲ್ಲದರಿಂದ ಶ್ರೇಷ್ಠತೆಯೇ- ಸರ್ವೋತ್ಕರ್ಷ. (ದೇವ-) ದೇವತೆಗಳಿಂದ ದೇವ- ಸ್ತುತ್ಯನಾದವನು- **ದೇವದೇವ. 'ಇತಿ'** ಎನ್ನುವ ಶಬ್ದಕ್ಕೆ (ಹಿಂದೆ ಉಕ್ತವಾದ) 'ಸರ್ವಾಗಮಾನಾಂ ಮಹಾತಾತ್ಪರ್ಯಂ' ಎನ್ನುವಲ್ಲಿ ಅನ್ವಯ. **ಅನ್ಯತ್ರ-** ಧರ್ಮಾದಿಗಳಲ್ಲಾದರೋ ಮಹಾತಾತ್ಪರ್ಯವು ಇಲ್ಲವೇ ಇಲ್ಲ. ಏನು ಹಾಗಾದಲ್ಲಿ? **ತದನ್ಯತ್ರ-** ವೇದದ ಒಂದು ಭಾಗಕ್ಕೆ, **ಅವಾನ್ತರಂ-** ವಿಷ್ಣುವಿನ ಸರ್ವೋತ್ಕರ್ಷವನ್ನು ಪ್ರತಿಪಾದಿಸುವ ಸಲುವಾಗಿ ಅಮುಖ್ಯವಾಗಿ ಅವುಗಳ (ಕರ್ಮಾದಿಗಳ) ಪ್ರತಿಪಾದಕತ್ವವು (ಇದೆ)[1]. ಯಾವ ಕಾರಣದಿಂದ ಸರ್ವಾಗಮಗಳಿಂದ ಸಾಧ್ಯವಾದ ಮುಖ್ಯಫಲವಾದ ಮೋಕ್ಷವು, **ತತಃ-** ವಿಷ್ಣುವಿನ ಸರ್ವೋತ್ತಮಜ್ಞಾನದಿಂದಲೇ ಪ್ರಾಪ್ತವಾಗುವುದು. **ಅತಃ-** ಆಕಾರಣದಿಂದ, ಹೇಳಿದ ಇದು (ಭಗವಂತನಲ್ಲಿಯೇ ಸರ್ವವೇದಗಳಿಗೆ ಮುಖ್ಯತಾತ್ಪರ್ಯ ಎಂಬುವ ವಿಷಯವು) **'ಸತ್ಯ'** ಎಂದು.

ಪುರಾಣದಲ್ಲೂ ಇದನ್ನೇ ಹೇಳಿರುವರು ಎಂದು ಹೇಳುತ್ತಾರೆ **'ಮುಖ್ಯಂ ಚ'** ಎಂದು. ಎಲ್ಲ ವೇದಗಳಿಗೆ ಲಕ್ಷ್ಮೀಪತಿಯ ಉತ್ಕರ್ಷದಲ್ಲೇ **ಪರಮ್-** ಮುಖ್ಯ

---

1. 'ಪ್ರತಿಜ್ಞಾಸಿದ್ಧೇಃ ಲಿಙ್ಗಮಾಶ್ಮರಥ್ಯಃ' ಬ್ರಹ್ಮಸೂ.2.2.2. ರಲ್ಲಿ ತಿಳಿಸಿರುವಂತೆ ಬ್ರಹ್ಮೇತರವಾದ ಕರ್ಮಾದಿಗಳನ್ನು ವೇದವು ಬ್ರಹ್ಮಜ್ಞಾನಾಂಗವಾಗಿ ಬೋಧಿಸುವುದು (ವಿಷಯವು ಈ ಹಿಂದೆ ಪುಟ 322ರಲ್ಲಿ ಪ್ರಸ್ತುತವಾಗಿದೆ) ಎಂದು ಭಾವ.

ತಾತ್ಪರ್ಯವಿದೆ. ಆದರಿಂದ ಬೇರೆಡೆಯಲ್ಲಿಯಾದರೋ ಪರಮ್- ಕೇವಲ ಅವಾಂತರ ತಾತ್ಪರ್ಯವು ಇದೆ ಎಂದು ಯೋಜಿಸುವುದು[1].

**ವಿಷ್ಣುಸರ್ವೋತ್ತಮತ್ವವು ಶ್ರುತಿಸ್ಮೃತ್ಯುಕ್ತ ಯುಕ್ತಿಯಿಂದ**

**ಯುಕ್ತಂ ಚ ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ । ಮೋಕ್ಷೋ ಹಿ ಸರ್ವಪುರುಷಾರ್ಥೋತ್ತಮಃ-**

**ಧರ್ಮಾರ್ಥಕಾಮಾಃ ಸರ್ವೇಽಪಿ ನ ನಿತ್ಯಾ ಮೋಕ್ಷ ಏವ ಹಿ ।**
**ನಿತ್ಯಸ್ತಸ್ಮಾತ್ ತದರ್ಥಾಯ ಯತೇತ ಮತಿಮಾನ್ ನರಃ ॥**

**ಇತಿ ಭಾಲ್ಲವೇಯಶ್ರುತಿಃ ।**

**ಅನಿತ್ಯತ್ವಾತ್ ಸದುಃಖತ್ವಾನ್ನ ಧರ್ಮಾದ್ಯಾಃ ಪರಂ ಸುಖಮ್ ।**
**ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಮ್ ॥**

**ಇತಿ ಭಾರತೇ ।**

ಎಲ್ಲ ಆಗಮಗಳಿಗೆ ವಿಷ್ಣುವಿನ ಸರ್ವೋತ್ತಮತ್ವದಲ್ಲೇ ಮಹಾತಾತ್ಪರ್ಯ ಎನ್ನುವುದು ಯುಕ್ತವೂ ಆಗಿದೆ. ಎಲ್ಲ ಪುರುಷಾರ್ಥಗಳಲ್ಲಿ ಉತ್ತೋತ್ತಮವಾದದ್ದು ಮೋಕ್ಷವೇ- 'ಧರ್ಮ-ಅರ್ಥ-ಕಾಮಗಳಿಂದ ಪ್ರಾಪ್ತವಾಗುವ ಫಲಗಳು ನಿತ್ಯಗಳಲ್ಲ, ಮೋಕ್ಷವೇ ನಿತ್ಯ, ಆದುದರಿಂದ ಆ ಮೋಕ್ಷಕ್ಕಾಗಿ ಜ್ಞಾನಿಗಳಾದ ಮನುಜನು ಯತ್ನಿಸುವುದು' ಎಂದು ಭಾಲ್ಲವೇಯ ಶ್ರುತಿಯು ಸಾರಿದೆ. 'ಸಂಸಾರದಲ್ಲಿ ಸುತ್ತುತ್ತಿರುವ ಸಾಧಕರಿಗೆ ಧರ್ಮಾದಿಗಳಿಂದ ಪ್ರಾಪ್ತವಾಗುವ ಫಲವು ಅನಿತ್ಯವಾಗಿರುವುದರಿಂದ, ದುಃಖಸಹಿತವಾಗಿರುವುದರಿಂದ ಮುಖ್ಯಸುಖವಲ್ಲ, ಮುಖ್ಯಾನಂದದಾಯಕವಾದ ಮೋಕ್ಷವೇ (ಮುಖ್ಯಸುಖ)' ಎಂದು ಮಹಾಭಾರತವು ತಿಳಿಸಿದೆ.

**ನ ಕೇವಲಂ ಶ್ರುತೀತಿಹಾಸಪುರಾಣಸಿದ್ಧಮೇತತ್, ಕಿಂ ತರ್ಹಿ? ಇತ್ಯತ ಆಹ 'ಯುಕ್ತಂ ಚ' ಇತಿ । ಯುಕ್ತಿಸಿದ್ಧಂ ಚೇತ್ಯರ್ಥಃ ।**

1. ಮೂಲದಲ್ಲಿರುವ ಎರಡು ಪರಶಬ್ದಗಳಲ್ಲಿ ಒಂದಕ್ಕೆ ಮುಖ್ಯ ಎಂದು, ಮತ್ತೊಂದಕ್ಕೆ ಬೇರೆ ಎಂದು ಅರ್ಥೈಸಲಾಗಿದೆ. ಈ ಎರಡು ವಿಧವಾದ ಅರ್ಥವೂ ರೂಢಿಯಲ್ಲಿದೆ- 'ಸತ್ಯಂ ಪರಂ ಧೀಮಹಿ' ಎಂದು, 'ಕೌರವಃ ಪಾಂಡವಾತ್ ಪರಃ' ಎಂದು.

**'ಪುರುಷಾರ್ಥಸ್ತತೋಽತಃ'** ಇತಿ ಶ್ರುತ್ಯುಕ್ತಾಮೇವ ಯುಕ್ತಿಂ ಪ್ರಪಞ್ಚಯಿತುಮಿಯಂ ಪ್ರತಿಜ್ಞಾ, ಇತಿ ಜ್ಞಾತವ್ಯಮ್ । ಕಥಂ ಯುಕ್ತಮ್? ಇತಿ ಚೇತ್, ಶ್ರುತಿಸ್ಮೃತಿಲಕ್ಷಣೋ ಹಿ ಸರ್ವೋಽಪ್ಯಾಮ್ನಾಯಃ ತಾವದ್ ಏಕಮೇವ ಶಾಸ್ತ್ರಮ್, ಭೇದೇ ಪ್ರಮಾಣಾಭಾವಾತ್ । ಶಾಸ್ತ್ರೈಕ್ಯಂ ಚ ವಿಷಯಪ್ರಯೋಜನೈಕ್ಯನಿಮಿತ್ತಮುಪಾಧ್ಯನ್ತರಾಭಾವಾತ್ । ಸರ್ವೋತ್ತಮಂ ಚೇದಂ ಶಾಸ್ತ್ರಂ ಪ್ರಸಿದ್ಧಮ್ । 'ವೇದಶಾಸ್ತ್ರಾತ್ ಪರಂ ನಾಸ್ತಿ' ಇತಿ ವಚನಾತ್ । ಸರ್ವೋತ್ತಮತಾ ಚಾಸ್ಯ ಸರ್ವೋತ್ತಮಪ್ರಯೋಜನವತ್ತಾಯಾಮ್ ಉಪಪದ್ಯತೇ ನಾನ್ಯಥಾ । ಸರ್ವೋತ್ತಮಂ ಚ ಪ್ರಯೋಜನಂ ಮೋಕ್ಷ ಏವ ನಾನ್ಯದಿತಿ ಸರ್ವಶಾಸ್ತ್ರಾಣಾಂ ಮೋಕ್ಷಾರ್ಥತ್ವೇ ಸ್ಥಿತೇ, ವಿಷಯೋ ವಿಚಾರ್ಯತೇ- ತತ್ರ ಪ್ರತಿವಾಕ್ಯಂ ವಾಕ್ಯಾರ್ಥಾನಾಮನೇಕತ್ವೇಽಪಿ ನ ತೈರಸ್ಯ ಶಾಸ್ತ್ರಸ್ಯ ವಿಷಯವತ್ತಾ ಯುಜ್ಯತೇ ಭೇದಪ್ರಸಙ್ಗಾತ್ । ಅತೋ ಯತ್ ಪ್ರತಿಪತ್ತ್ಯರ್ಥಮ್ ಅವಾನ್ತರವಾಕ್ಯಾರ್ಥಪ್ರತಿಪಾದನಂ ತೇನೈಕೇನ ಮಹಾತಾತ್ಪರ್ಯಗೋಚರೇಣ ವಿಷಯೇಣ ಭವಿತವ್ಯಮ್ ।

ಇದು (ವಿಷ್ಣುಸರ್ವೋತ್ತಮತ್ವವು) ಕೇವಲ ಶ್ರುತಿ-ಸ್ಮೃತಿ-ಪುರಾಣಗಳಿಂದ[1] ಮಾತ್ರ ಸಿದ್ಧವಲ್ಲ, ಏನು ಹಾಗಾದಲ್ಲಿ, ಆದುದರಿಂದ ಉತ್ತರಿಸುತ್ತಾರೆ **'ಯುಕ್ತಂ ಚ'** ಎಂದು. ಯುಕ್ತಿಸಿದ್ಧವೂ ಆಗಿದೆ ಎಂದು ಅರ್ಥ. **'ಪುರುಷಾರ್ಥಸ್ತತೋಽತಃ'** ಎಂದು ಶ್ರುತಿಯಲ್ಲಿಯೇ ತಿಳಿಸಿದ ಯುಕ್ತಿಯನ್ನು ಸ್ಫುಟಗೊಳಿಸಲು ಈ ಪ್ರತಿಜ್ಞೆಯು ಎಂದು ತಿಳಿಯುವುದು[2]. ಹೇಗೆ ಯುಕ್ತಿಯುಕ್ತವಾಗಿದೆ? ಶ್ರುತಿ-ಸ್ಮೃತ್ಯಾತ್ಮಕವಾದ ಎಲ್ಲ ಆಗಮಗಳೂ ಸಹ ಒಂದೇ ಶಾಸ್ತ್ರ (ಇವುಗಳು)

---

1. 'ಸರ್ವೋತ್ತರ್ಷೇ ದೇವದೇವಸ್ಯ...' ಎನ್ನುವ ಪೈಂಗಿಶ್ರುತಿ, 'ದ್ವಾವಿಮೌ ಪುರುಷೌ..' ಎನ್ನುವ ಇತಿಹಾಸದ (ಮಹಾಭಾರತದ) ವಚನ, 'ಮುಖ್ಯಂ ಚ ಸರ್ವವೇದಾನಾಂ..' ಎನ್ನುವ ವರಾಹಪುರಾಣದ ವಚನ ಎಂದು ತಿಳಿಯುವುದು.

2. 'ಯುಕ್ತಂ ಚ.....ಸರ್ವಾಗಮಾನಾಮ್' ಎಂದು ಆಚಾರ್ಯರು ಪ್ರತಿಜ್ಞೆಯನ್ನು ಪುನಃ ಇಲ್ಲಿ (ಪುಟ 525ರಲ್ಲಿ) ಮಾಡಿರುವರು.ಈ ಹಿಂದೆಯೇ ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಯುಕ್ತಿಗಳನ್ನು ಹೇಳಿರುವಾಗ ಪುನಃ ಯುಕ್ತಿಯ ಕಥನವು ಏಕೆ? ಎನ್ನುವ ಸಂದೇಹವನ್ನು ಪರಿಹರಿಸುವರು. ಸ್ವತಂತ್ರಯುಕ್ತಿಗಳಲ್ಲ ಇವು, ಪೈಙ್ಗಿಶ್ರುತಿಯಲ್ಲಿ ಉಕ್ತವಾದ ಯುಕ್ತಿಗಳು' ಎಂದು.

ವಿಭಿನ್ನ (ಶಾಸ್ತ್ರ) ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ. ಶಾಸ್ತ್ರೈಕ್ಯವಾದರೋ ವಿಷಯ-ಪ್ರಯೋಜನಗಳ ಏಕತೆಯಿಂದಲೇ, (ಐಕ್ಯತೆಗೆ) ಬೇರೇ ಕಾರಣವಿಲ್ಲದೇ ಇರುವುದರಿಂದ[1]. 'ವೇದಶಾಸ್ತ್ರಾತ್ ಪರಂ ನಾಸ್ತಿ' ಎಂಬುವ (ಪ್ರಮಾಣ) ವಚನವಿರುವುದರಿಂದ, ಇದೇ( ವೇದಶಾಸ್ತ್ರವೇ) ಸರ್ವೋತ್ತಮಶಾಸ್ತ್ರ ಎನ್ನುವುದು ಪ್ರಸಿದ್ಧ. ಇದಕ್ಕೆ (ಶಾಸ್ತ್ರಕ್ಕೆ) ಸರ್ವೋತ್ತಮತ್ವವಾದರೋ ಸರ್ವಶ್ರೇಷ್ಠಪ್ರಯೋಜನವನ್ನು ಹೊಂದಿಸಿದಲ್ಲಿ ಮಾತ್ರ ಯುಕ್ತವಾಗುವುದು, ಬೇರೇ ಕಾರಣಗಳು ಇಲ್ಲ. ಸರ್ವಶ್ರೇಷ್ಠ ಪ್ರಯೋಜನವಾದರೋ ಮೋಕ್ಷವೇ ಬೇರೇ ಮತ್ತಾವುದೂ ಅಲ್ಲ ಎಂದು ಸರ್ವಶಾಸ್ತ್ರಗಳೂ ಮೋಕ್ಷರೂಪ ಪ್ರಯೋಜನಕ್ಕಾಗಿರಲು, ವಿಷಯವು ಚರ್ಚಿಸಲಾಗುವುದು- ಅಲ್ಲಿ (ಶಾಸ್ತ್ರಗಳಲ್ಲಿ) ಪ್ರತಿವಾಕ್ಯಗಳಿಗೂ ವಾಕ್ಯಾರ್ಥಗಳಿಗೂ ವಿಭಿನ್ನತೆಯು ಇದ್ದರೂ ಅವುಗಳಿಂದ ಶಾಸ್ತ್ರಕ್ಕೆ ವಿಷಯವತ್ತೆಯು ಪ್ರಾಪ್ತವಾಗುವುದಿಲ್ಲ, (ಶಾಸ್ತ್ರಕ್ಕೆ ಪ್ರತಿವಾಕ್ಯದಿಂದ ವಿಷಯದ ಪ್ರಾಪ್ತಿಯನ್ನು ಒಪ್ಪಿದಲ್ಲಿ ಅಂತಹ ಶಾಸ್ತ್ರದಲ್ಲಿ) ಪ್ರಭೇದಪ್ರಸಂಗವು ಒದಗುವುದರಿಂದ. ಆದುದರಿಂದ ಯಾವುದರ ಅರಿವಿಗಾಗಿ ಅವಾಂತರ ವಾಕ್ಯಾರ್ಥಗಳ ಪ್ರತಿಪಾದನೆಯೋ, ಅದರಿಂದ (ಆ ಅವಾಂತರವಾಕ್ಯದ ಪ್ರತಿಪಾದನೆಯಿಂದ), ಮಹಾತಾತ್ಪರ್ಯದಿಂದ ತಿಳಿಯುವ ವಿಷಯದಿಂದ ಏಕತೆಯು ಅವಶ್ಯವಾಗಿರಬೇಕು. (ಈ ಪ್ರತಿಪಾದನೆಯಿಂದ ಪ್ರಕೃತಕ್ಕೆ ಏನು ಪ್ರಯೋಜನ ಎನ್ನುವುದನ್ನು ತಿಳಿಸುತ್ತಾರೆ)

---

1. 'ಅರ್ಥೈಕತ್ವಾದೇಕಂ ವಾಕ್ಯಂ ಸಾಕಾಂಕ್ಷಂ ಚೇತ್ ವಿಭಾಗೇ ಸ್ಯಾತ್' ಜೈ.ನ್ಯಾ.ಸೂ.2.1.46.- ವಾಕ್ಯಗಳಲ್ಲಿ ಏಕತೆಯು ಪ್ರಯೋಜನದ ಐಕ್ಯತೆಯಿಂದ, ಅಕಾಂಕ್ಷೆಯನ್ನು ವಿವಕ್ಷಿಸಿದಲ್ಲಿ ಅಂಗವಾಕ್ಯಗಳಲ್ಲಿ ಭಿನ್ನವಾಕ್ಯತ್ವವು ಪ್ರಾಪ್ತವಾಗುವುದು. 'ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ ಅಗ್ನಯೇ ಜುಷ್ಟಂ ನಿರ್ವಪಾಮಿ' ಎಂಬುವ ವೇದವಾಕ್ಯದಲ್ಲಿ, ದೇವಸ್ಯ ತ್ವಾ ಪ್ರಸವೇ ನಿರ್ವಪಾಮಿ, ಅಶ್ವಿನೋರ್ಬಾಹುಭ್ಯಾಂ ನಿರ್ವಪಾಮಿ, ಪೂಷ್ಣೋ ಹಸ್ತಾಭ್ಯಾಂ ನಿರ್ವಪಾಮಿ ಎಂದು ಅಂಗವಾಕ್ಯಗಳು ಆಕಾಂಕ್ಷಾನುಸಾರವಾಗಿ ಲಭಿಸುವವು, ಈ ಎಲ್ಲವಾಕ್ಯಗಳಿಗೂ 'ನಿರ್ವಪಾ ಪ್ರಕಾಶಕತ್ವ' ಎಂಬ ಏಕಾರ್ಥದಲ್ಲಿ ಏಕವಾಕ್ಯತ್ವವು ಇದೆ 'ಇಲ್ಲಿ ಉಕ್ತರಾದ ಎಲ್ಲ ದೇವತೆಗಳನ್ನು ಉದ್ದೇಶಿಸಿ ನಿರ್ವಪಣ ಕ್ರಿಯೆಯನ್ನು ಆಚರಿಸುವುದು' ಎಂಬ ಒಂದು ವಿಷಯವನ್ನು ಈ ಮಂತ್ರವು ತಿಳಿಸುತ್ತದೆ ಎಂದು ಒಟ್ಟು ತಾತ್ಪರ್ಯ. ಎಂಬುವದಾಗಿ ಜೈಮಿನಿಗಳು ತಿಳಿಸಿರುವರು ಎಂದು ಭಾವ.

'ಯಶ್ಚ ಜ್ಞಾತೋ ಅಭಿಪ್ರೇತಪ್ರಯೋಜನಹೇತುಃ ಸ ಏವ ತಥಾಭಾವಮ್' ಆಪದ್ಯತೇ । ಅನ್ಯಥಾ ವಿಷಯಪ್ರಯೋಜನಯೋಃ ಸಮ್ಬನ್ಧಾಭಾವೇ, ಶಾಸ್ತ್ರಸ್ಯ ಅನುಪಾದೇಯತ್ವಪ್ರಸಙ್ಗಾತ್ । ಅಭಿಪ್ರೇತಪ್ರಯೋಜನಸ್ಯ ಚ ಮೋಕ್ಷಸ್ಯ ಸರ್ವೋತ್ಕೃಷ್ಟತಯಾ ಜ್ಞಾತಃ ಪ್ರಸನ್ನೋ ಭಗವಾನ್ ವಿಷ್ಣುರೇವ ಹೇತುಃ । ಅತಃ 'ಸ ಏವ ತಥಾವಿಧಃ ಸಕಲಸದಾಗಮಮಹಾತಾತ್ಪರ್ಯಗೋಚರೋ ಅಙ್ಗೀಕಾರ್ಯಃ' ಇತ್ಯಾಶಯವಾನ್ ಸ್ವರ್ಗಾದೇರೇವ ಪರಮ-ಪುರುಷಾರ್ಥತಾಂ ಮನ್ಯಮಾನಾನಾಮುಪಾಕರಣಾಯ ಮೋಕ್ಷಸ್ಯ ಸರ್ವ-ಪುರುಷಾರ್ಥೋತ್ತಮತ್ವಂ ಸಾಧಯನ್ನಾಹ **'ಮೋಕ್ಷೋ ಹಿ'** ಇತಿ । ಕುತಃ? ಇತ್ಯತಃ ತತ್ರ ಶ್ರುತಿಸ್ಮೃತೀ ಪಠತಿ **'ಧರ್ಮ...'** ಇತಿ । ಧರ್ಮಾರ್ಥಕಾಮಾ ಇತಿ ತತ್ಸಾಧ್ಯಂ ಸ್ವರ್ಗಾದಿಕಮ್ ಉಚ್ಯತೇ । ಸ ಚಾಸಾವರ್ಥಶ್ಚೇತಿ-ತದರ್ಥಃ । **ಪರಿವರ್ತತಾಂ-** ಪರಿವರ್ತಮಾನಾನಾಮ್ । ಉದ್ದೇಶ್ಯ ಇತಿ ಶೇಷಃ । 'ವ್ಯತ್ಯಯೋ ಬಹುಲಮ್' ಇತಿ ಪರಸ್ಮೈಪದಮ್ ।

ಯಾವುದನ್ನು (ತನಗೆ) ಅಭೀಷ್ಟವಾದುದಕ್ಕೆ ಕಾರಣ ಎಂದು ತಿಳಿದಿರುವನೋ, ಅದು ಹಾಗೆಯೇ ಇರಬೇಕು. ಹಾಗಾಗದ ಪಕ್ಷದಲ್ಲಿ ವಿಷಯ-ಪ್ರಯೋಜನ ಗಳಿಗೆ ಸಂಬಂಧವಿಲ್ಲದೇ ಶಾಸ್ತ್ರವು ಅನುಪಾದೇಯವಾಗಬೇಕಾದೀತು. (ಪರಮ) ಪ್ರಯೋಜನವೆಂದು ಅಭಿಪ್ರೇತವಾದ ಮೋಕ್ಷಕ್ಕೆ ಸರ್ವೋತ್ತಮನೆಂದು ಜ್ಞಾತನಾದ, ಪ್ರಸನ್ನನಾದ ವಿಷ್ಣುವೇ ಕಾರಣ. ಆದುದರಿಂದ ಆ ರೀತಿಯವನಾದ (ಸರ್ವೋತ್ತಮತ್ತ್ವೇನ ಜ್ಞಾತನಾದ ಸುಪ್ರಸನ್ನನಾದ) ಅವನೇ (ವಿಷ್ಣುವೇ) ಎಲ್ಲ ಸದಾಗಮಗಳಲ್ಲಿ ಮಹಾತಾತ್ಪರ್ಯತ್ವೇನ ಗೋಚರನು ಎಂದು ಒಪ್ಪಬೇಕು. ಇಷ್ಟು ಅಭಿಪ್ರಾಯವನ್ನು (ಮನದಲ್ಲಿ) ಇಟ್ಟುಕೊಂಡು ಸ್ವರ್ಗಾದಿಗಳಿಗೆ ಪರಮಪುರುಷಾರ್ಥವೆಂದು ತಿಳಿದಿರುವವರನ್ನು ನಿರಾಕರಿಸಲು ಮೋಕ್ಷಕ್ಕೆ ಪುರುಷಾರ್ಥತೆಯನ್ನು ಸಾಧಿಸಲು ಹೇಳುವರು **'ಮೋಕ್ಷೋ ಹಿ'** ಎಂದು. ಏಕೆ ಎಂದು ಪ್ರಶ್ನಿಸಿದ್ದರಿಂದ (ಉತ್ತರರೂಪವಾಗಿ) ಶ್ರುತಿ-ಸ್ಮೃತಿಗಳನ್ನು ಹೇಳುತ್ತಾರೆ **'ಧರ್ಮ..'** ಎಂದು. ಧರ್ಮ-ಅರ್ಥ-ಕಾಮಗಳು ಎಂದು, ಅವುಗಳಿಂದ ಸಾಧ್ಯವಾದುದು ಸ್ವರ್ಗಾದಿಗಳು ಎಂದು ಹೇಳಲಾಗಿದೆ. 'ಸ ಚಾಸೌ ಅರ್ಥಶ್ಚ-

ತದರ್ಥಃ'[1] (ಎಂದು ವಿಗ್ರಹವಾಕ್ಯವೆಂದು ತಿಳಿಯುವುದು). ಪರಿವರ್ತತಾಂ- ಪರಿವರ್ತಮಾನಾನಾಂ (ಸಂಸಾರದಲ್ಲಿ ತಿರುಗುತ್ತಿರುವವರಿಗೆ). 'ಉದ್ದೇಶ್ಯ' ಎಂದು ಶೇಷವನ್ನು ಪೂರ್ಣಮಾಡಿಕೊಳ್ಳುವುದು[2]. 'ವ್ಯತ್ಯಯೋ ಬಹುಲಮ್' (ಪಾ.ಸೂ.3.1.85.) ಎಂದು ಉಕ್ತವಾಗಿರುವುದರಿಂದ ಪರಸ್ಮೈಪದಿಯೂ ಆಗಬಹುದು[3].

**ವಿಷ್ಣುಪ್ರಸಾದದಿಂದಲೇ ಮೋಕ್ಷ**

> **ಮೋಕ್ಷಶ್ಚ ವಿಷ್ಣುಪ್ರಸಾದೇನ ವಿನಾ ನ ಲಭ್ಯತೇ-**
> **ಯಸ್ಯ ಪ್ರಸಾದಾತ್ ಪರಮಾರ್ತಿರೂಪಾದ್**
> **ಅಸ್ಮಾತ್ ಸಂಸಾರಾನ್ ಮುಚ್ಯತೇ ನಾಪರೇಣ ।**
> **ನಾರಾಯಣೋಽಸೌ ಪರಮೋ ವಿಚಿನ್ತ್ಯೋ**
> **ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥**
>
> **ಇತಿ ನಾರಾಯಣಶ್ರುತಿಃ ।**

---

1. ಇಲ್ಲಿ 'ತದರ್ಥಾಯ' ಎಂದಿದೆ, 'ತದರ್ಥಂ' ಎಂದು ಹೇಳಿದ್ದರೂ ಅದೇ ಭಾವವು ಪ್ರಾಪ್ತವಾಗುವಾಗ ಚತುರ್ಥ್ಯಂತವಾಗಿ ಪ್ರಯೋಗಿಸಿದ್ದರ ಔಚಿತ್ಯವೇನು? ಎನ್ನುವ ಸಂದೇಹಕ್ಕೆ ಅವಕಾಶವಿರುವುದರಿಂದ, ಈ ರೀತಿಯಾಗಿ ವಿಗ್ರಹದ ಪ್ರದರ್ಶನವನ್ನು ತೋರಿಸಿ ಮೂಲದಲ್ಲಿನ 'ತದರ್ಥಾಯ' ಎನ್ನುವ ಪದದಿಂದ 'ನಿತ್ಯಭೂತವಾದ ಮೋಕ್ಷರೂಪ ಪ್ರಯೋಜನಕ್ಕಾಗಿ' ಎನ್ನುವ ಭಾವವು ಲಭಿಸುವುದು ಎಂದು ತಿಳಿಸಿರುವರು.

2. ಮೂಲದಲ್ಲಿ 'ಸಂಸಾರೇ ಪರಿವರ್ತತಾಂ ಮೋಕ್ಷ ಏವ ಪರಾನಂದಃ' ಎಂದಿದೆ 'ಸಂಸಾರಿಗಳ ಆನಂದಗಳಲ್ಲಿ ಮೋಕ್ಷಾನಂದವು ಹಿರಿದು' ಎಂಬ ಅಪಾರ್ಥವು ಆಗುವಸಂಭಾವನೆಯು ಇರುವುದರಿಂದ ಟೀಕಾದಲ್ಲಿ ಶೇಷಪೂರಣಮಾಡಿಕೊಂಡು ಅರ್ಥೈಬೇಕೆಂದು ತಿಳಿಸಲಾಗಿದೆ. ಆಗ 'ಸಂಸಾರಿಗಳಿಂದ ಉದ್ದಿಷ್ಟವಾದ- ಪ್ರಾರ್ಥ್ಯವಾದ ಆನಂದಗಳಲ್ಲಿ ಮುಖ್ಯಾನಂದವು ಮೋಕ್ಷಾನಂದ' ಎಂಬ ಭಾವವು ಸ್ಫುಟವಾಗುವುದು ಎಂದು ಭಾವ.

3. 'ಪರಿ ಉಪಸರ್ಗಪೂರ್ವಕ ವೃತು ವರ್ತನೇ' ಧಾತುವು ನಿತ್ಯ ಆತ್ಮನೇಪದಿ ಎಂದು ವ್ಯಾಕರಣಶಾಸ್ತ್ರದಲ್ಲಿ ಉಪದಿಷ್ಟವಾಗಿದೆ. ಆತ್ಮನೇಪದಿಯಾದುದರಿಂದ 'ಶಾನಚ್' ಪ್ರತ್ಯಯವು ಪ್ರಾಪ್ತವಾಗಿ ಪರಿವರ್ತಮಾನಾನಾಮ್' ಎಂದು ರೂಪವು ಸಿದ್ಧವಾಗಬೇಕು. ಆದರೆ ಮೂಲದಲ್ಲಿ 'ಪರಿವರ್ತತಾಂ' ಎಂದು 'ಶತೃ' ಪ್ರತ್ಯಯಾಂತವಾದ ಪರಸ್ಮೈಪದಿಯರೂಪವು ಉಕ್ತವಾಗಿದೆ ಇದು ಸಾಧುವೇ? ಎನ್ನುವ ಸಂದೇಹಕ್ಕೆ ಉತ್ತರಿಸಿದರು ಪರಸ್ಮೈಪದಿಯಾಗಿಯೂ ಈ ಧಾತುವನ್ನು ಶಾಸ್ತ್ರಕಾರರು ಬಳಸುವರು ಎಂದು.

ಮೋಕ್ಷವಾದರೋ ವಿಷ್ಣುವಿನ ಪ್ರಸಾದದಿಂದ, ಇದರ ಹೊರತಾಗಿ ಬೇರೆ ಉಪಾಯದಿಂದ ದೊರೆಯದು- 'ಯಾರ ಪ್ರಸಾದದಿಂದ ಅತ್ಯಂತ ದುಃಖರೂಪವಾದ ಈ ಸಂಸಾರದಿಂದ ಮುಕ್ತನಾಗುವನೋ, ಬೇರೆ ಉಪಾಯದಿಂದ ಇಲ್ಲವೋ, ಈ ಕರ್ಮಪಾಶದಿಂದ ಬಿಡುಗಡೆಯನ್ನು ಬಯಸುವವರು ಆ ನಾರಾಯಣನನ್ನು ಸರ್ವೋತ್ತಮ ಎಂದು ಚಿಂತಿಸುವುದು' ಎಂದು ನಾರಾಯಣಶ್ರುತಿಯು ತಿಳಿಸಿದೆ.

**ಅಸ್ತು ಮೋಕ್ಷಃ ಸರ್ವಪುರುಷಾರ್ಥೋತ್ತಮಃ ಸರ್ವೋತ್ತಮಶಾಸ್ತ್ರಪ್ರಯೋಜನಂ ಚ । ಸ ಚ 'ಬ್ರಹ್ಮಾತ್ಮೈಕ್ಯವಿದ್ಯಾಸಾಧ್ಯಃ ಕರ್ಮಸಾಧ್ಯೋ ವಾ' ಇತಿ ವದತಾಂ ನಿರಾಕರಣಾಯ ತಸ್ಯ ವಿಷ್ಣುಪ್ರಸಾದೈಕಸಾಧ್ಯತಾಂ ಸಾಧಯನ್ನಾಹ 'ಮೋಕ್ಷಶ್ಚ' ಇತಿ । ವಿಷ್ಣುಪ್ರಸಾದೇನ ಲಭ್ಯತೇ, ತಂ ವಿನಾಽನ್ಯೇನ ನ ಲಭ್ಯತೇ 'ಚ' ಇತ್ಯರ್ಥಃ । ತದುಭಯಂ ಕುತಃ? ಇತ್ಯತಸ್ತತ್ರ ಶ್ರುತಿಸ್ಮೃತೀರುದಾಹರತಿ 'ಯಸ್ಯ' ಇತಿ । ಪರಮೋ ವಿಚಿನ್ತ್ಯಃ ಪ್ರೀತ್ಯರ್ಥಂ ಸರ್ವೋತ್ಕೃಷ್ಟತಯಾ ಜ್ಞಾತವ್ಯಃ ।**

ಸರ್ವಶ್ರೇಷ್ಠಪುರುಷಾರ್ಥವು, ಸಕಲಶಾಸ್ತ್ರಗಳ ಪ್ರಯೋಜನವೂ ಮೋಕ್ಷವೇ ಆಗಲಿ. ಅದಾದರೋ (ಮೋಕ್ಷವಾದರೋ) ಬ್ರಹ್ಮಾತ್ಮೈಕ್ಯವಿದ್ಯೆಯಿಂದ ಸಾಧ್ಯ, ಅಥವಾ ಕರ್ಮದಿಂದ ಸಾಧ್ಯ ಎಂದು ವಾದಿಸುವವರನ್ನು ನಿರಾಕರಿಸಲು, ವಿಷ್ಣುಪ್ರಸಾದೈಕ ಸಾಧ್ಯತೆಯನ್ನು ಸಾಧಿಸಲು ಹೇಳುವರು 'ಮೋಕ್ಷಶ್ಚ' ಎಂದು. ವಿಷ್ಣುಪ್ರಸಾದದಿಂದ ಲಭ್ಯವಾಗುವುದು, ಅದಿಲ್ಲದೇ ಮೋಕ್ಷವು ಲಭ್ಯವಾಗುವುದಿಲ್ಲ ಎಂದೂ 'ಚ' ಶಬ್ದದ ಅರ್ಥ[1]. ಇವೆರಡೂ ಏತರಿಂದ

1. 'ಮೋಕ್ಷಶ್ಚ ವಿಷ್ಣುಪ್ರಸಾದೇನ ವಿನಾ ನ ಲಭ್ಯತೇ' ಎಂದು ಮೂಲದಲ್ಲಿದೆ. ಮೋಕ್ಷವಾದರೋ ವಿಷ್ಣುಪ್ರಸಾದವಿಲ್ಲದೇ ಪ್ರಾಪ್ತವಾಗುವುದಿಲ್ಲ ಎನ್ನುವುದು ಶಬ್ದತಾಡಿತ ಅರ್ಥ. ಆದರೆ ಪ್ರಕೃತವಾದ ವಾದದ ಉದ್ದೇಶವನ್ನು ಗಮನಿಸಿದಾಗ 'ವಿಷ್ಣುಪ್ರಸಾದದಿಂದಲೇ ಮೋಕ್ಷವು ಪ್ರಾಪ್ತವಾಗುವುದು' ಮತ್ತು 'ವಿಷ್ಣುಪ್ರಸಾದವಿಲ್ಲದೇ ಮೋಕ್ಷವು ಪ್ರಾಪ್ತವಾಗುವುದಿಲ್ಲ' ಎನ್ನುವ ಎರಡೂ ಅರ್ಥವೂ ಅಗತ್ಯವಾಗಿದೆ. ಆದುದರಿಂದ ಟೀಕೆಯಲ್ಲಿ ಎರಡೂ ಅರ್ಥವನ್ನು ಹೇಳಿರುವರು. ಶಬ್ದಶಾಸ್ತ್ರದ ಮರ್ಯಾದೆಯಂತೆ ಹೀಗೆ ಅರ್ಥೈಸಬಹುದು. ಮೂಲದಲ್ಲಿರುವ 'ಚ' ಶಬ್ದವು ಅನುಕ್ತವಾದ ಅರ್ಥವನ್ನು ಸಮುಚ್ಚಯಗೊಳಿಸುವುದು, ಅಥವಾ ವ್ಯತಿರೇಕಾರ್ಥದಲ್ಲಿ ಲಕ್ಷಣಾವನ್ನು ಆಶ್ರಯಿಸಬಹುದು ಎನ್ನುವುದು ಪ್ರಾಜ್ಞರ ಅಭಿಮತ.

(ಯಾವ ಪ್ರಮಾಣದಿಂದ ತಿಳಿದಿದೆ) ಎಂದು ಆದುದರಿಂದ ಇಲ್ಲಿ ( ಈ ವಿಷಯದಲ್ಲಿ) ಶ್ರುತಿಸ್ಮೃತಿಗಳನ್ನು ಉದಾಹರಿಸುವರು 'ಯಸ್ಯ' ಎಂದು. ಪರಮೋ ವಿಚಿನ್ತ್ಯಃ- (ಆತನ) ಪ್ರೀತಿಗಾಗಿ ಸರ್ವೋತ್ತಮತ್ವೇನ ತಿಳಿಯಬೇಕು.

**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯಃ**
**ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥**

**ಇತಿ ಕಠಶ್ರುತಿಃ ।**

ಈ ಪರಮಾತ್ಮನು ಪ್ರವಚನದಿಂದ ಪ್ರಾಪ್ಯನಲ್ಲ, ಬುದ್ಧಿಶಕ್ತಿಯಿಂದ ತಿಳಿಯಲಾರನು, ಹೆಚ್ಚಿನ ಅಧ್ಯಯನದಿಂದ ತಿಳಿಯಲಾರನು, ಯಾರಿಗೆ ಅನುಗ್ರಹಿಸುವನೋ ಆತನಿಂದ ಲಭ್ಯ, ಈ ಪರಮಾತ್ಮನು ತನ್ನ ರೂಪವನ್ನು ಪ್ರಕಟಗೊಳಿಸುವನು, ನಂತರದಲ್ಲಿ ಆತನ (ಉಪಾಸಕನ) ಅವಿದ್ಯೆಯಿಂದ ಆವೃತವಾದ (ಚಿದಾನಂದ)ಸ್ವರೂಪವನ್ನು ಆವಿರ್ಭಾವಗೊಳಿಸುವನು. ಎಂದು ಕಠಶ್ರುತಿಯು ತಿಳಿಸಿದೆ.

**ಲಭ್ಯಃ- ಪ್ರಾಪ್ಯಃ । ಏಷಃ- ಪರಮಾತ್ಮಾ ,ಯಂ ವೃಣುತೇ- ಯಸ್ಯ ಪ್ರಸೀದತಿ ತೇನೈವ ಲಭ್ಯಃ । ಕಥಂ? ಯತಸ್ತಸ್ಯ ಸ್ವಾಂ ತನುಂ ವಿವೃಣುತೇ- ಪ್ರಕಾಶಯತಿ, ತತಶ್ಚಾಸ್ಯ ಸ್ವಾಂ ತನುಂ- ಅವಿದ್ಯಾವೃತಂ ಸ್ವರೂಪಂ ವಿವೃಣುತೇ- ಆವಿರ್ಭಾವಯತಿ । 'ಅಹಂ ಸಮುದ್ಧರ್ತಾ ಭವಾಮಿ' ಇತ್ಯುಕ್ತೇ 'ಪ್ರಸನ್ನೇ' ಇತ್ಯರ್ಥಾಲ್ಲಭ್ಯತೇ । ಏವಮುತ್ತರತ್ರಾಪಿ ಜ್ಞಾತವ್ಯಮ್ ।**

**ಲಭ್ಯಃ-** ಪ್ರಾಪ್ಯನಾಗುವನು. ಏಷಃ- ಪರಮಾತ್ಮನು **ಯಂ ವೃಣುತೇ-** ಯಾರಿಗೆ ಪ್ರಸನ್ನನಾಗುವನೋ ಅವನಿಂದಲೇ ಲಭ್ಯನು. ಹೇಗೆ? ಯಾವ ಕಾರಣದಿಂದ ಆತನಿಗೆ (ಭಗವಂತನಿಂದ ಸ್ವೀಕೃತನಾದವನಿಗೆ) ತನ್ನ (ಭಗವಂತನ) ಸ್ವರೂಪವನ್ನು **ವಿವೃಣುತೇ-** ಪ್ರಕಾಶಗೊಳಿಸುತ್ತಾನೆ. ನಂತರದಲ್ಲಿ ಆತನ (ಸಾಧಕನ) **ಸ್ವಾಂ ತನುಂ-** ಅವಿದ್ಯೆಯಿಂದ ಆವೃತವಾದ ಸ್ವರೂಪವನ್ನು **ವಿವೃಣುತೇ-** ಆವಿರ್ಭಾವಗೊಳಿಸುತ್ತಾನೆ. 'ಅಹಂ ಸಮುದ್ಧರ್ತಾ ಭವಾಮಿ'

ಎಂದು ಹೇಳಿದ್ದರಿಂದ 'ಪ್ರಸನ್ನನಾದಲ್ಲಿ' ಎನ್ನುವುದು ಅರ್ಥಾತ್ ತಿಳಿಯುವುದು. ಇದೇ ರೀತಿಯಾಗಿ ಮುಂದೆಯೂ ತಿಳಿಯುವುದು[1].

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥**

**ಇತಿ ಭಗವದ್ವಚನಮ್ ।**

'ನನ್ನ ಧ್ಯಾನದಲ್ಲಿ ರತನಾದವರನ್ನು ಮೃತ್ಯುಮಯವಾದ ಸಂಸಾರಸಾಗರದಿಂದ ಶೀಘ್ರವಾಗಿ ಉದ್ಧರಿಸುವೆನು' ಎಂದು ಭಗವಂತನ ನುಡಿಯು ಇದೆ.

**ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।**
**ಬನ್ಧಮೋಕ್ಷೌ ಚ ಪುರುಷಾದ್ ಯಸ್ಮಾತ್ ಸ ಹರಿರೇಕರಾಟ್ ॥**

**ಇತಿ ಸ್ಕಾನ್ದೇ ।**

'ಯಾವ ಪುರುಷನಿಂದ (ಈ ಜಗದ) ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳು ಆಗುವವೋ ಆ ಹರಿಯು ಸರ್ವೋತ್ತಮನು' ಎಂದು ಸ್ಕಂದಪುರಾಣವು ತಿಳಿಸಿದೆ.

**ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ ।**
**ಆನನ್ದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥ ಇತಿ ಚ ।**

'ಅಜ್ಞಾನಿಗಳಿಗೆ ಜ್ಞಾನವನ್ನು ಕೊಡುವವನು, ಮತ್ತು ಜ್ಞಾನಿಗಳಿಗೆ ಮೋಕ್ಷವನ್ನು ಕೊಡುವವನು, ಮತ್ತೆ ಮುಕ್ತರಿಗೆ ಸ್ವರೂಪಾನಂದದ ಅನುಭವವನ್ನು ಕೊಡುವವ ಆ ಜನಾರ್ದನನೊಬ್ಬನೇ' ಎಂದೂ ಸಹ (ಸ್ಕಂದಪುರಾಣವು ತಿಳಿಸಿದೆ).

**ಬನ್ಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।**
**ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥ ಇತಿ ಚ ।**

---

1. ಮುಂದಿನ ಪ್ರಮಾಣವಾಕ್ಯಗಳಲ್ಲಿ 'ಅಹಂ ಸಮುದ್ಧರ್ತಾ' 'ಮೋಕ್ಷದಶ್ಚ' ಇತ್ಯಾದಿಯಾಗಿವೆ. ಆ ಎಲ್ಲ ಸಂದರ್ಭಗಳಲ್ಲಿಯೂ ಸಹ ಪ್ರಸನ್ನನಾದಲ್ಲಿ ಉದ್ಧಾರಕನು, ಮೋಕ್ಷದನು ಆಗುವೆನು ಎಂದು ಅರ್ಥೈಸಬೇಕು ಎಂದು ಭಾವ.

ಸಂಸಾರಪಾಶದಿಂದ ಬಂಧಿಸುವವನು, ಸಂಸಾರ ಬಂಧನದಿಂದ ಬಿಡಿಸುವವನು, ಸ್ವರೂಪಾನಂದದ ಅನುಭವವನ್ನು ನೀಡುವವನು ಪರಬ್ರಹ್ಮನಾದ ವಿಷ್ಣುವೆ ಸಂದೇಹವಿಲ್ಲ. ಎಂದೂ ಸಹ (ಸ್ಕಂದವು ಸಾರಿದೆ).

**ಆವೃತಿಃ- ಅಜ್ಞಾನಮ್ । ಏಕರಾಟ್- ಸ್ವತನ್ತ್ರಃ । ವಿರಿಞ್ಚಾದಿಷ್ವತಿವ್ಯಾಪ್ತಿ-ಪರಿಹಾರಾರ್ಥಮೇತತ್ । ಮೋಕ್ಷದಃ- ಅವಿದ್ಯಾನಿವೃತ್ತಿದಃ । ಆನಂದದಃ- ಸ್ವರೂಪಾನಂದಾನುಭವಶಕ್ತಿದಃ । ಕೈವಲ್ಯದ ಇತ್ಯಸ್ಯಾಪ್ಯಯಮೇವಾರ್ಥಃ ।**

**ಆವೃತಿಃ**- ಅಜ್ಞಾನ. **ಏಕರಾಟ್**- ಸ್ವತಂತ್ರನು. ಬ್ರಹ್ಮಾದಿಗಳಲ್ಲಿ (ವಿಷ್ಣುವಿನ ಲಕ್ಷಣಕ್ಕೆ) ಅತಿವ್ಯಾಪ್ತಿಯನ್ನು ಪರಿಹರಿಸಲು ಇದು (ಏಕರಾಟ್ ಎನ್ನುವ ವಿಶೇಷಣ)[1]. **ಮೋಕ್ಷದಃ**- ಅವಿದ್ಯೆಯನ್ನು ಪರಿಹರಿಸುವವ. **ಆನಂದದಃ**- ಸ್ವರೂಪಾನಂದದ ಅನುಭವದ ಶಕ್ತಿಯನ್ನು ನೀಡುವವ. '**ಕೈವಲ್ಯದಃ**' ಎನ್ನುವುದಕ್ಕೂ ಇದೇ ಅರ್ಥ (ಸ್ವರೂಪಾನಂದದ ಅನುಭವವನ್ನು ನೀಡುವವನು).

### ಗುಣೋತ್ಕರ್ಷಜ್ಞಾನದಿಂದಲೇ ಪ್ರೀತಿ

**ಪ್ರೀತಿಶ್ಚ ಗುಣೋತ್ಕರ್ಷಜ್ಞಾನಾದೇವ ವಿಶೇಷತೋ ದೃಷ್ಟಾ, ನಾಭೇದ-ಜ್ಞಾನಾತ್ ।**

ಗುಣೋತ್ಕರ್ಷಜ್ಞಾನದಿಂದಲೇ ವಿಶೇಷವಾದ ಪ್ರೀತಿಯು ಕಂಡಿದೆ, ಅಭೇದದ ಅರಿವಿನಿಂದಲ್ಲ.

**ಅಸ್ತು ವಿಷ್ಣುಪ್ರೀತಿರೇವ ಮೋಕ್ಷಸಾಧನಮ್ । ಸಾ ಚ ಕರ್ಮಾದಿನಾ ಭವಿಷ್ಯತಿ? ಇತ್ಯತ ಆಹ 'ಪ್ರೀತಿಶ್ಚ' ಇತಿ । ಯದ್ಯಪಿ ಕರ್ಮಾದಿನಾ ಭಗವತ್ಪ್ರೀತಿರ್ಭವತಿ ತಥಾಽಪಿ ನಾಸೌ ಮೋಕ್ಷಸಾಧನಂ ಕಿನ್ತು ಪರಮಾ ಪ್ರೀತಿರೇವ । ಸಾ ಚ ವಿಶೇಷತಃ ಪ್ರೀತಿರ್ಗುಣೋತ್ಕರ್ಷಜ್ಞಾನಾದೇವ ಭವತಿ ನ ಕರ್ಮಾದಿನಾ, ಕುತಃ? ತಥಾ ಲೋಕೇ ದೃಷ್ಟತ್ವಾದತಿ । ನನು ಯದಾ ರಾಜಾ**

---

1. ಸೃಷ್ಟಿಕರ್ತಾ, ಸಂಹಾರಕರ್ತಾ ಇತ್ಯಾದಿ ಲಕ್ಷಣಗಳು ಪ್ರತ್ಯೇಕವಾಗಿ ಬ್ರಹ್ಮ ರುದ್ರಾದಿಗಳಲ್ಲೂ ಇರುವುದರಿಂದ ಅತಿವ್ಯಾಪ್ತವಾಗುವುದು, ಪರಿಹಾರಕ್ಕಾಗಿ ಏಕರಾಟ್ ಎನ್ನುವ ವಿಶೇಷಣ. ಅವರು ಸೃಷ್ಟ್ಯಾದಿಗಳ ಕರ್ತೃಗಳಾಗಿದ್ದರೂ ಸ್ವತಂತ್ರ ಕರ್ತೃಗಳಲ್ಲ ಎಂದು ಭಾವ.

**ಗುರುರ್ವಾ ಭೃತ್ಯಂ ಶಿಷ್ಯಂ ವಾ ಪ್ರತಿ ಬ್ರೂತೇ 'ಅಹಮೇವ ತ್ವಂ' ಇತಿ, ತದಾऽಸೌ ಭೃತ್ಯಾದಿರ್ವಚನಾನುಮಿತಯಾऽಭೇದಪ್ರತಿಪತ್ತ್ಯಾ ಪರಮ-ಪ್ರೀತಿಮಾನ್ ದೃಶ್ಯತೇ । ತತ್ಕಥಂ ಗುಣೋತ್ಕರ್ಷಜ್ಞಾನಾದೇವ ಪರಮಾ ಪ್ರೀತಿರಿತ್ಯುಚ್ಯತೇ? ಇತ್ಯತ ಆಹ 'ನ' ಇತಿ । ಪ್ರತಿಪತ್ತಿರಿಹ ಜ್ಞಾನಶಬ್ದೇನೋಚ್ಯತೇ ।**

ವಿಷ್ಣುವಿನ ಪ್ರೀತಿಯೇ ಮೋಕ್ಷಕ್ಕೆ ಸಾಧನವಾಗಲಿ. ಅದಾದರೋ (ಆ ಪ್ರೀತಿಯಾದರೋ) ಕರ್ಮಾದಿಗಳಿಂದ ಪ್ರಾಪ್ತವಾಗುವುದು? ಎಂದು ಆದುದರಿಂದ ಹೇಳುತ್ತಾರೆ 'ಪ್ರೀತಿಶ್ಚ' ಎಂದು. ವಸ್ತುತಃ ಕರ್ಮಾದಿಗಳಿಂದ ಭಗವತ್‌ಪ್ರೀತಿಯು ಪ್ರಾಪ್ತವಾಗುವುದು, ಆದರೆ ಅದು (ಆ ಪ್ರೀತಿಯು ) ಮೋಕ್ಷಕ್ಕೆ ಸಾಧನವಲ್ಲ, ಆದರೆ ಪರಮಪ್ರೀತಿಯೇ (ಮೋಕ್ಷಕ್ಕೆ ಸಾಧನ). ಆ ಪ್ರೀತಿಯಾದರೋ ಗುಣೋತ್ಕರ್ಷದ ಜ್ಞಾನದಿಂದಲೇ ವಿಶೇಷವಾಗಿ ಪ್ರಾಪ್ತವಾಗುವುದು ಕರ್ಮಾದಿಗಳಿಂದಲ್ಲ. ಏಕೆ? ಹಾಗೆಯೇ ಲೋಕದಲ್ಲಿ ಕಂಡಿರುವುದರಿಂದ ಎಂದು. ಸರಿ, ಆದರೆ ಯಾವಾಗ ರಾಜನೋ ಗುರುವೋ ಭೃತ್ಯನನ್ನು ಅಥವಾ ಶಿಷ್ಯನನ್ನು ಉದ್ದೇಶಿಸಿ ಹೇಳುವರು 'ನಾನೇ ನೀನು' ಎಂದು, ಆಗ ಭೃತ್ಯಾದಿಗಳು (ಆ) ಮಾತಿನಿಂದ ಊಹಿಸಿದ ಅಭೇದದ ಅರಿವಿನಿಂದ ಪರಮಪ್ರೀತಿಯನ್ನು ಹೊಂದಿರುವುದು ಕಂಡಿದೆ. ಆದುದರಿಂದ ಹೇಗೆ ಹೇಳಿದಿರಿ 'ಗುಣೋತ್ಕರ್ಷದ ಜ್ಞಾನದಿಂದಲೇ ಪರಮಪ್ರೀತಿ'? ಎಂದು ಆದುದರಿಂದ ಹೇಳುತ್ತಾರೆ 'ನ' ಎಂದು. ಇಲ್ಲಿ 'ಜ್ಞಾನ' ಶಬ್ದದಿಂದ 'ಪ್ರತಿಪತ್ತಿ' ಎನ್ನುವುದು ಉಕ್ತವಾಗಿದೆ[1].

#### ಹಿರಿಯರ ಮಾತು ಪ್ರಶಂಸಾ ಸೂಚಕ

**ಅಯಮಭಿಪ್ರಾಯಃ- ಯದ್ಯುತ್ತಮೋऽಧಮಂ ಪ್ರತ್ಯಭೇದಪ್ರತಿಪತ್ತಿಂ ಕರೋತಿ ತದಾऽಧಿಕಗುಣಾರೋಪಣೇನ 'ಅಹಮನೇನ ಮಾನಿತಃ' ಇತಿ**

1. 'ನಾಭೇದಜ್ಞಾನಾತ್' ಎಂದು ಮೂಲದಲ್ಲಿದೆ. ಈ ಜ್ಞಾನಶಬ್ದಕ್ಕೆ ಏನು ಅರ್ಥ? 'ನಾನೇ ನೀನಯ್ಯ' ಎಂಬ ಗುರುವಿನ ಅಥವಾ ರಾಜನ ವಚನದಿಂದ ಅಭೇದದ ಅರಿವು ಬರಲಾರದು, ಆತನಿಗೆ ಅವರಿಂದ ತಾನು ಭಿನ್ನ ಎಂಬ ಅರಿವೇ ಇರುವುದರಿಂದ. ಆದುದರಿಂದ ಕೇವಲ ಅವರ ವಚನದಿಂದ ಆ ರೀತಿಯ ಶಾಬ್ದಬೋಧವು ಪ್ರಾಪ್ತವಾಗುವುದು, ನನ್ನನ್ನು ಆದರಿಸಿರುವವನು ಎಂಬ ಭಾವನಾರೂಪ ಪ್ರತಿಪತ್ತಿಯು ಮಾತ್ರ ಬರುವುದು ಎಂದು ಭಾವ.

**ಮನ್ಯಮಾನೋಽಧಮಸ್ತಸ್ಮಿನ್ ಪ್ರೀಯತೇ, ನ ತ್ವಧಮೇನೋತ್ತಮಂ ಪ್ರತ್ಯಭೇದಪ್ರತಿಪತ್ತೌ ಕೃತಾಯಾಮ್ ಉತ್ತಮಸ್ಯಾಧಮೇ ಪ್ರೀತಿರ್ಭವತಿ, ನಿಮಿತ್ತಾಭಾವಾತ್ । ತತಶ್ಚಾಧಮೋ ಜೀವಃ ಕಥಮುತ್ತಮಂ ಭಗವನ್ತಂ ಪ್ರತಿ ತತ್ಪ್ರೀತಿಕಾಮೋಽಭೇದಪ್ರತಿಪತ್ತಿಂ ಕುರ್ಯಾತ್? ಯೇನ ವೇದೋ ಜೀವಂ ಪ್ರತ್ಯಭೇದಪ್ರತಿಪತ್ತ್ಯರ್ಥಮಪಿ ವದೇತ್? ಇತಿ ।**

ಇದು ಭಾವಾರ್ಥ- ಒಂದು ವೇಳೆ ಉತ್ತಮನು ಅಧಮನನ್ನು ಉದ್ದೇಶಿಸಿ ಅಭೇದಪ್ರತಿಪತ್ತಿಯನ್ನು ಉಂಟುಮಾಡುವನೋ ಅಧಿಕಗುಣದ ಆರೋಪಣವನ್ನು ಮಾಡಿದ್ದರಿಂದ 'ನಾನು ಈತನಿಂದ ಸನ್ಮಾನಿತನಾದೆ' ಎಂದು ತಿಳಿದ ಅಧಮನು ಆತನಲ್ಲಿ (ಉತ್ತಮನಲ್ಲಿ) ಸಂತೋಷಗೊಳ್ಳುವನು, ಅಧಮನಿಂದ ಉತ್ತಮನನ್ನು ಉದ್ದೇಶಿಸಿ ಅಭೇದಪ್ರತಿಪತ್ತಿಯನ್ನು ಉಂಟುಮಾಡಿದಲ್ಲಿ ಉತ್ತಮನಿಗೆ ಅಧಮನಲ್ಲಿ ಪ್ರೀತಿಯು ಉಂಟಾಗುವುದಿಲ್ಲ, (ಪ್ರೀತಿಯುಂಟಾಗಲು) ಕಾರಣವಿಲ್ಲದ ಪ್ರಯುಕ್ತ. ಹಾಗಾಗಿ ಅಧಮನಾದ ಜೀವನು ಉತ್ತಮನಾದ ಭಗವಂತನನ್ನು ಉದ್ದೇಶಿಸಿ ಆತನ (ಭಗವಂತನ) ಪ್ರೀತಿಯನ್ನು ಬಯಸುವವನು ಅಭೇದಪ್ರತಿಪತ್ತಿಯನ್ನು ಹೇಗೆ ಮಾಡಿಯಾನು? ಯಾವಕಾರಣದಿಂದ ಜೀವನನ್ನು ಉದ್ದೇಶಿಸಿ ವೇದವು ಅಭೇದದ ಪ್ರತಿಪತ್ತಿಗಾಗಿ ಉಪದೇಶಿಸೀತು? ಎಂದು.

#### ಅಭೇದದ ಅರಿವು ಅವಕೃಪೆಗೆ ಕಾರಣ

**ಅಭೇದಜ್ಞಾನಾದಪ್ರೀತಿರೇವೋತ್ತಮಾನಾಂ ಭವತಿ । ಘಾತಯನ್ತಿ ಹಿ ರಾಜಾನೋ 'ರಾಜಾಽಹಮ್' ಇತಿ ವದನ್ತಮ್ ।**

(ನೀಚರು ಉತ್ತಮರಿಂದ ತಮಗೆ ಅಭೇದವನ್ನು ಚಿಂತಿಸಿದಲ್ಲಿ, ಇಂತಹ) ಅಭೇದದ ಅರಿವಿನಿಂದ ಉತ್ತಮರಿಗೆ (ಅಭೇಧ ಚಿಂತಕನಲ್ಲಿ) ಅಪ್ರೀತಿಯೇ ಉಂಟಾಗುವುದು. 'ನಾನೇ ರಾಜ' ಎಂದು ಹೇಳುವವನನ್ನು ರಾಜರು ಶಿಕ್ಷಿಸುತ್ತಾರೆ, ಇದು ಪ್ರಸಿದ್ಧವೇ ಆಗಿದೆ.

**ನ ಕೇವಲಮ್ ಅಭೇದಜ್ಞಾನಾತ್ ಪ್ರೀತಿರ್ನ ಭವತಿ ಕಿಂ ತರ್ಹಿ? ಇತ್ಯತ ಆಹ 'ಅಭೇದಜ್ಞಾನಾತ್' ಇತಿ । ಅಭೇದಪ್ರತಿಪತ್ತ್ಯಾ-**

ಅಧಮತ್ವಾರೋಪಾತ್ । ಏತದೇವ ದೃಷ್ಟಾನ್ತೇನ ದರ್ಶಯತಿ '**ಘಾತಯನ್ತಿ ಹಿ**' ಇತಿ । ಪಾಟಲೀಪುತ್ರಾದ್ಯಧಿಪತಯೋ ಭದ್ರಸೇನಾದ್ಯಾ ರಾಜಾನಃ 'ಪಾಟಲೀಪುತ್ರಸ್ಯ ಅಧಿಪತಿರಿದಾನೀಮಹಮೇವ' ಇತಿ ವದನ್ತಮತದರ್ಹಂ ವಚನೇನ ತದೀಯಾಂ ಪ್ರತಿಪತ್ತಿಮನುಮಾಯ ಘಾತಯನ್ತೋ ದೃಶ್ಯನ್ತೇ । ತೇನ ತೇಷಾಂ ತತ್ರಾಪ್ರೀತಿರನುಮೀಯತೇ । ಭವೇದೇವಂ ಲೌಕಿಕಾನಾಂ ಭಯಮತ್ಸರಾದಿಗ್ರಸ್ತಾನಾಂ, ಈಶ್ವರಸ್ಯ ತು ನೈವಮ್? ಇತಿ ಚೇನ್ನ । ತಥಾ ಸತ್ಯಪರಾಧಪರಿಹಾರಸ್ಯಾಪ್ಯಕರ್ತವ್ಯತಾಪಾತಾತ್ । ಅತ ಏವ

ನಿನ್ದನಸ್ತವಸತ್ಕಾರನ್ಯಕ್ಕಾರಾರ್ಥಂ ಕಲೇವರಮ್ ।
ಪ್ರಧಾನಪರಯೋ ರಾಜನ್ನವಿವೇಕೇನ ಕಲ್ಪಿತಮ್ ॥
ಸರ್ವಾತ್ಮನಃ ಸರ್ವದೃಶೋ ಹ್ಯದ್ವಯಸ್ಯಾನಹಙ್ಕೃತೇಃ ।
ತತ್ಕೃತಂ ಮತಿವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್ ॥

ಇತ್ಯಾದಿಕಂ ಭಕ್ತಕೃತಪ್ರಾಮಾದಿಕಾಪರಾಧವಿಷಯಂ ಜ್ಞಾತವ್ಯಮ್ । ಏತೇನ ಜೀವೇಶ್ವರಯೋಃ ಪಾರಮಾರ್ಥಿಕಭೇದಮಙ್ಗೀಕೃತ್ಯ ಅಭೇದಶ್ರುತೀನಾಂ ಪ್ರತಿಪತ್ತ್ಯರ್ಥತಾಂ ವ್ಯಾಚಕ್ಷಾಣಾ ನೈಯಾಯಿಕಾದಯೋ ನಿರಸ್ತಾ ವೇದಿತವ್ಯಾಃ ।

ಅಭೇದದ ಅರಿವಿನಿಂದ ಪ್ರೀತಿಯು ಪ್ರಾಪ್ತವಾಗಲಾರದು ಎಂದು ಮಾತ್ರವಲ್ಲ, ಹಾಗಾದರೆ ಮತ್ತೇನು ಅಂದರೆ ಉತ್ತರಿಸುತ್ತಾರೆ '**ಅಭೇದಜ್ಞಾನಾತ್**' ಎಂದು. ಅಭೇದದ ಅರಿವಿನಿಂದ ಅಧಮತೆಯನ್ನು ಅರೋಪಿಸಿದಂತಾಗುವುದರಿಂದ. ಇದನ್ನೇ ಸೋದಾಹರಣವಾಗಿ ತಿಳಿಸುತ್ತಾರೆ '**ಘಾತಯನ್ತಿ ಹಿ**' ಎಂದು. ಪಾಟಲೀಪುತ್ರಾದಿ ದೇಶದ ಅಧಿಪತಿಗಳಾದ ಭದ್ರಸೇನಾದಿ ರಾಜರು 'ಈಗ ಪಾಟಲೀಪುತ್ರದ ಅಧಿಪತಿಯು ನಾನೇ' ಎಂದು ಅಯೋಗ್ಯರೀತಿಯಲ್ಲಿ ಹೇಳುವವನನ್ನು ಆತನ ಮಾತಿನಿಂದ (ಆತನ) ಅಭಿಪ್ರಾಯವನ್ನು ಊಹಿಸಿ (ಆತನನ್ನು) ಶಿಕ್ಷೆಗೆ ಒಳಪಡಿಸುವುದು ಕಂಡಿದೆ. ಇದರಿಂದ ಅವರಿಗೆ (ರಾಜರಿಗೆ) ಅವನಲ್ಲಿ (ಅಧಮನಾದವನು ಉತ್ತಮನೊಡನೆ ಅಭೇದವನ್ನು ಚಿಂತಿಸಿದವನಲ್ಲಿ) ದ್ವೇಷವನ್ನೇ ಊಹಿಸಬಹುದಾಗಿದೆ. ಭಯ-ಮತ್ಸರಾದಿ ಗ್ರಸ್ತರಾದ ಲೌಕಿಕರಲ್ಲಿ ಈ ರೀತಿಯಾಗಿರಬಹುದು,

ಈಶ್ವರನಲ್ಲಿ ಈ ರೀತಿಯಾಗಲಾರದು? ಎಂದೆನ್ನುವುದು ತರವಲ್ಲ. ಹಾಗಾದ ಪಕ್ಷದಲ್ಲಿ ಅಪರಾಧಗಳ ಪರಿಹಾರವನ್ನು ಮಾಡದಿರಬೇಕಾದೀತು[1]. ಆದುದರಿಂದಲೇ (ಭಗವದ್‌ದ್ವೇಷಾದಿಗಳಿಂದ ಭಗವಂತನಿಗೆ ದ್ವೇಷಿಯ ವಿಷಯದಲ್ಲಿ ಅಪ್ರೀತಿಯು ಉಂಟಾಗುವುದರಿಂದ) ನಿಂದನಸ್ತವ.....।......॥ (ಭಾಗ.7.1.28.) ಸರ್ವಾತ್ಮನಃ.....। .....ನ ಕ್ವಚಿತ್ ॥(ಭಾಗ.1.9.28.) ಇದೇ ಮುಂತಾದವು ಭಕ್ತನಿಂದ ಆಚರಿತವಾದ ಪ್ರಾಮಾದಿಕ ಅಪರಾಧದ ವಿಷಯ ಎಂದು ತಿಳಿಯುವುದು[2]. ಇದರಿಂದ (ಅಭೇದಪ್ರತಿಪತ್ತಿಯಿಂದ

---

1. 'ಅಪರಾಧಸಹಸ್ರಾಣಿ ಕ್ರಿಯನ್ತೇಽಹರ್ನಿಶಂ ಮಯಾ । ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಮಧುಸೂದನ ॥ ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ । ತ್ರಾಹಿ ಮಾಂ ಕೃಪಯಾ ದೃಷ್ಟ್ಯಾ ಶರಣಾಗತವತ್ಸಲ ॥' ಇತ್ಯಾದಿ ಬ್ರಹ್ಮಕೃತ ಪ್ರಾರ್ಥನೆ, 'ಯದನಿನ್ದತ್ ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ । ತಸ್ಮಾತ್ ಪಿತಾ ಮೇ ಪೂಯೇತ ದುರನ್ತಾದ್ ದುಸ್ತರಾದ್ ಅಘಾತ್ ॥'- 'ನನ್ನ ತಂದೆಯು ನಿನ್ನ ಭಕ್ತರನ್ನು ಮತ್ತು ನನ್ನನ್ನು ನಿಂದಿಸಿದನು, ದ್ರೋಹಬಗೆದನು, ದಾಟಲಾಗದ ಈ ದುರಂತಗಳಿಂದ ನನ್ನ ತಂದೆಯನ್ನು ಸಂರಕ್ಷಿಸು' (ಭಾಗ.7.10.15.) ಎನ್ನುವ ಪ್ರಹ್ಲಾದನ ಪ್ರಾರ್ಥನೆ, 'ನಿನ್ದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ । ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥'- 'ಹರಿಯ ಹರಿಯ ಭಕ್ತರ ನಿಂದೆಯನ್ನು ಕೇಳಿದೊಡನೆ ಆ ಸ್ಥಳದಿಂದ ದೂರ ಸರಿಯದಿದ್ದಲ್ಲಿ, ಪುಣ್ಯಶಾಲಿಯೂ ಸಹ ಅಧೋಲೋಕವನ್ನು ಹೊಂದುವನು)' (ಭಾಗ. 10.72.37.) ಎಂಬ ಶುಕರ ಉಪದೇಶ. ಮತ್ತು 'ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ । ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥' (ಭ.ಗೀ.9.11) ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಂ ಅಶುಭಾನ್ ಆಸುರೀಷ್ವೇವ ಯೋನಿಷು ॥' (ಭ.ಗೀ.16.19.), ಇತ್ಯಾದಿ ಭಗಂತನ ಉಪದೇಶಗಳು ವ್ಯರ್ಥವಾಗಬೇಕಾದೀತು.

2. ರಾಜಾದಿಗಳನ್ನು ದ್ವೇಷಿಸುವ-ಪ್ರೀತಿಸುವ ವ್ಯಕ್ತಿಯನ್ನು, ರಾಜಾದಿಗಳು ದ್ವೇಷಿಸುವರು-ಪ್ರೀತಿಸುವರು ಎನ್ನುವುದು ರಾಜಾದಿಗಳಲ್ಲಿ ರಾಗದ್ವೇಷಾದಿ ದೋಷಗಳು ಇರುವುದರಿಂದ ಸಂಭಾವಿತವಾಗಿದೆ. ಭಗವಂತನಲ್ಲಿ ರಾಗದ್ವೇಷಾದಿದೋಷಗಳು ಇಲ್ಲದಿರುವುದರಿಂದ ಅದು ಸಂಭಾವಿತವಲ್ಲ. ಆದುದರಿಂದಲೇ ಭಾಗವತದಲ್ಲಿ ಭಗವಂತನನ್ನು 'ಸಮದೃಶಃ, ನಿರವದ್ಯಃ' ಇತ್ಯಾದಿ ವಿಶೇಷಣಗಳಿಂದ ಸ್ತುತಿಸಿರುವರು. ಎನ್ನುವ ಸಂದೇಹವನ್ನು ಪರಿಹರಿಸುವರು ಭಾಗವತದ ಈ ಎರಡು ಶ್ಲೋಕಗಳನ್ನು ಉದ್ಧರಿಸಿ. ಮೊದಲ ಶ್ಲೋಕವನ್ನು ನಾರದರು ಯುಧಿಷ್ಠಿರನಿಗೆ ಉಪದೇಶಿಸಿದ್ದು, ಶಿಶುಪಾಲನು ಭಗವಂತನ ದ್ವೇಷವನ್ನು ಮಾಡಿದರೂ ಮೋಕ್ಷವನ್ನು

ಪುಟ 538ರಲ್ಲಿ........

ಅನರ್ಥವೇ ಉಂಟಾಗುವುದು ಎಂದು ಪ್ರತಿಪಾದಿಸಿದ್ದರಿಂದ) 'ಜೀವೇಶ್ವರರಿಗೆ ಪಾರಮಾರ್ಥಿಕ ಭೇದವನ್ನೇ ಒಪ್ಪಿ, ಉಪಾಸನಾರ್ಥವಾಗಿ (ಐಕ್ಯವನ್ನು) ಉಪದೇಶಿಸಲಾಗಿದೆ' ಎಂದು ಅಭೇದಶ್ರುತಿಗಳಿಗೆ ವ್ಯಾಖ್ಯಾನಿಸುವ ನೈಯಾಯಿಕಾದಿವಾದಿಗಳೂ ನಿರಾಕೃತರಾದರು. (ಆ ರೀತಿಯ ಉಪಾಸನೆಯು ಅನರ್ಥಕ್ಕೆ ಕಾರಣ ಎಂದು ತಿಳಿಸಲಾಗಿರುವುದರಿಂದ,) ಎಂದು ತಿಳಿಯುವುದು.

**ಅತ್ಯರ್ಥಪ್ರಸಾದವು ಸರ್ವೋತ್ತಮತ್ವದ ಅರಿವಿನಿಂದಲೇ**

**ದದತಿ ಚ ಸರ್ವಮಭಿಪ್ರೇತಂ ಗುಣೋತ್ಕರ್ಷಂ ವದತಃ ।**

**ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ**
**ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।**
**ತತ್ಪ್ರೀಣನಾನ್ ಮೋಕ್ಷಮಾಪ್ನೋತಿ ಸರ್ವಃ**
**ತತೋ ವೇದಾಸ್ತತ್ಪರಾಃ ಸರ್ವ ಏವ ॥ ಇತಿ ಸೌಪರ್ಣಶ್ರುತಿಃ ।**

---

...... ಪುಟ 537 ರಿಂದ

ಹೊಂದಿದನು ಅದು ಹೇಗೆ? ಎಂಬ ಧರ್ಮಜನ ಪ್ರಶ್ನೆಗೆ ಮೊದಲ ಶ್ಲೋಕವು ಉತ್ತರಿಸುತ್ತದೆ. ರಾಜನ್- ಹೇ ರಾಜನೆ, ನಿಂದನ- ಸ್ತವ-ಸತ್ಕಾರ-ನ್ಯಕ್ಕಾರಾರ್ಥಂ- ನಿಂದೆ, ಸ್ತುತಿ, ಪುರಸ್ಕಾರ, ಧಿಕ್ಕಾರಗಳಿಂದ ಪ್ರಾಪ್ತವಾಗುವ ಸುಖ-ದುಃಖಗಳಿಗೆ ಶರೀರವು ಗುರಿಯಾಗಿರುವುದು ಪ್ರಧಾನಪರಯೋಃ- ದೇಹಾತ್ಮಗಳ, ಅವಿವೇಕೇನ- ಭೇದದ ಅರಿವಿಲ್ಲದಿರುವುದರಿಂದ. ಶಿಶುಪಾಲನು ಅವಿವೇಕದಿಂದ ಅಪರಾಧವನ್ನು ಆಚರಿಸಿದ್ದು, ಆತನು ಭಕ್ತನಾದುದರಿಂದ ಅವಿವೇಕದಿಂದ ಆ ಅಪರಾಧವನ್ನೂ ಆಚರಿಸಿದ್ದರೂ ಭಗವಂತನು ಕ್ಷಮಿಸಿದನು ಎಂದು ಭಾವ. ಎರಡನೆಯ ಶ್ಲೋಕವನ್ನು ಭೀಷ್ಮರು ಧರ್ಮರಾಜನಿಗೆ ಉಪದೇಶಿಸಿದ್ದು. ಭಕ್ತರೇ ಆದ ಯುಧಿಷ್ಠಿರಾದಿಗಳು ಕೃಷ್ಣನನ್ನು ಸೋದರಮಾವನ ಮಗ ಆಪ್ತಸ್ನೇಹಿತ ಎಂಬ ಭಾವನೆಯಿಂದ ದೌತ್ಯಾದಿ ನೀಚಕರ್ಮಗಳಲ್ಲಿ ನಿಯೋಜಿಸಿದರು. ಆದರೂ ಭಗವಂತನು ಅವರನ್ನು ಕ್ಷಮಿಸಿದನು. ಸಮದೃಶಃ- ಜೀವರನ್ನು ಅವರವರ ಯೋಗ್ಯತಾನುಸಾರವಾಗಿ ನೋಡುವ, ಅದ್ವಯಸ್ಯ- ಸಮಾಧಿಕ ಎಂಬ ಭೇದ ಬುದ್ಧಿರಹಿತನಾದ, ನಿರಹಂಕೃತೇಃ- ಅಹಂಕಾರದ ಪ್ರಭಾವವಿಲ್ಲದ, ನಿರವದ್ಯಸ್ಯ- ರಾಗಾದಿ ದೋಷರಹಿತನಾದ, ಸರ್ವಾತ್ಮನಃ- ಸರ್ವಸ್ವಾಮಿಗೆ, ತತ್ಕೃತಂ- ಭಕ್ತರು ಮಾಡಿದ, ಮತಿವೈಷಮ್ಯಂ- ಅಪ್ರೀತ್ಯಾದಿ ವ್ಯಾಪಾರವು, ನ ಕ್ವಚಿತ್- ಯಾವ ವಿಧದಲ್ಲೂ ಅನರ್ಥಕ್ಕೆ ಕಾರಣವಾಗಲಾರದು. ಈ ಎರಡೂ ಸಂದರ್ಭಗಳಲ್ಲಿ ಅವರು ಭಕ್ತರಾಗಿದ್ದರೂ ಎನ್ನುವುದನ್ನು ಗಮನಿಸುವುದು. ಭಕ್ತೇತರರು ಅಪರಾಧವನ್ನು ಆಚರಿಸಿದಲ್ಲಿ ಭಗವಂತನು ಕ್ಷಮಿಸಲಾರ ಎಂದು ಒಟ್ಟು ಭಾವ.

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥**
**ಇತಿ ಗುಣೋತ್ಕರ್ಷಜ್ಞಾನಾದೇವ ಪರಮಾ ಪ್ರೀತಿರ್ಭಗವತಾ ಸ್ವಯಮೇವ ಅಭಿಹಿತಾ ।**

ಗುಣೋತ್ಕರ್ಷವನ್ನು ಸಾರುವ (ಪರಿಚಾರಕರಿಗೆ) (ರಾಜರು) ಎಲ್ಲ ವಿಧದ ಅಭೀಷ್ಟಗಳನ್ನು ಪೂರ್ಣಗೊಳಿಸುವರು. ಸ್ತುತ್ಯನಾದ ವಿಷ್ಣುವಿಗೆ ಗುಣೋತ್ಕರ್ಷದ ಅರಿವು ಇರುವ ವ್ಯಕ್ತಿಯಲ್ಲಿ ಯಾವವಿಧವಾದ ಪ್ರೀತಿಯೋ (ಕರ್ಮಕರೇ ಮುಂತಾದ ಅನ್ಯರಲ್ಲಿ) ಆತರಹದ ಪ್ರೀತಿಯು ಇಲ್ಲ. ಎಲ್ಲರೂ ಆತನ (ವಿಷ್ಣುವಿನ) ಪ್ರೀತಿಯಿಂದ ಮೋಕ್ಷವನ್ನು ಹೊಂದುವರು, ಆದುದರಿಂದ ಎಲ್ಲ ವೇದವೂ ಆತನನ್ನೇ ಸ್ತುತಿಸುವವು. ಎಂದು ಸೌಪರ್ಣಶ್ರುತಿಯು ಸಾರಿದೆ.

'ಹೇ ಭರತಕುಲೋತ್ಪನ್ನನೇ! ಮೋಹರಹಿತನಾಗಿ ಯಾರು ನನ್ನನ್ನು 'ಪುರುಷೋತ್ತಮ' ಎಂದು ತಿಳಿಯುವನೋ ಆತನು ಎಲ್ಲವನ್ನೂ ತಿಳಿದಂತೆ, ಎಲ್ಲ ವಿಧದಿಂದಲೂ ನನ್ನನ್ನು ಭಜಿಸಿದಂತೆ.

ಎಂದು ಗುಣೋತ್ಕರ್ಷದ ಅರಿವಿನಿಂದಲೇ ಭಗವಂತನ ಮುಖ್ಯ ಪ್ರೀತಿ' ಎನ್ನುವುದನ್ನು ಭಗವಂತನೇ ಸ್ವತಃ ಹೇಳಿರುವನು.

**'ಪ್ರೀತಿಶ್ಚ ಗುಣೋತ್ಕರ್ಷಜ್ಞಾನಾದೇವ ವಿಶೇಷತೋ ದೃಷ್ಟಾ' ಇತ್ಯುಕ್ತಂ ವಿವೃಣೋತಿ- 'ದದತಿ ಚ' ಇತಿ । ರಾಜಾನ ಇತಿ ವರ್ತತೇ । 'ಕರ್ಮಕರೇಭ್ಯೋಽಪ್ಯತಿಶಯೇನ' ಇತಿ ಶೇಷಃ । 'ವಚನೇನ ಜ್ಞಾನಮ್ ಅನುಮಾಯ' ಇತಿ ಚ । ತೇನ ಚ ತೇಷಾಂ ತತ್ರ ಪರಮಾ ಪ್ರೀತಿರನುಮೀಯತೇ । ಸಮ್ಪ್ರದಾನತ್ವಸ್ಯಾವಿವಕ್ಷಿತತ್ವಾದ್ 'ರಜಕಸ್ಯ ವಸ್ತ್ರಂ ದದಾತಿ' ಇತ್ಯಾದಿವಚ್ಛೇಷವಿವಕ್ಷಯಾ 'ವದತಃ' ಇತಿ ಷಷ್ಠೀ । 'ವದತಃ ಪ್ರತಿ' ಇತಿ ವಾ । ತಥಾಚ ಪ್ರಯೋಗಃ- 'ವಿಷ್ಣುಃ ಗುಣೋತ್ಕರ್ಷಜ್ಞಾತರಿ ಅತಿಶಯೇನ ಪ್ರೀಯತೇ, ಸತ್ಪುರುಷತ್ವಾತ್ ಪುಣ್ಯಶ್ಲೋಕರಾಜವತ್' ಇತಿ ।**

'ಪ್ರೀತಿಶ್ಚ ಗುಣೋತ್ಕರ್ಷಜ್ಞಾನಾದೇವ ವಿಶೇಷತೋ ದೃಷ್ಟಾ (ಭಗವಂತನ ಗುಣೋತ್ಕರ್ಷದ ಅರಿವಿನಿಂದಲೇ ವಿಶೇಷವಾದ ಪ್ರೀತಿಯು ಕಂಡಿದೆ)' ಎಂದು ಹಿಂದೆ (533ನೇ ಪುಟದಲ್ಲಿ) ಹೇಳಿರುವುದನ್ನು ಸ್ಫುಟಗೊಳಿಸುವರು 'ದದತಿ ಚ'

ಎಂದು. 'ರಾಜಾನಃ' ಎಂದು ಹಿಂದಿನ ವಾಕ್ಯದಿಂದ ಆವರ್ತನ ಮಾಡಿ-ಕೊಳ್ಳುವುದು. 'ಕರ್ಮ- ಕರೇಭ್ಯೋಽಪ್ಯತಿಶಯೇನ (ಸೇವಕರಿಗಿಂತಲೂ ಹೆಚ್ಚಾಗಿ)' ಎಂದು ಶೇಷಪೂರಣ ಮಾಡಿಕೊಳ್ಳುವುದು. 'ವಚನೇನ ಜ್ಞಾನಂ ಅನುಮಾಯ (ಮಾತಿನಿಂದ ಅರಿವನ್ನು ಊಹಿಸಿ)' ಎಂದೂ ಸಹ (ಶೇಷಪೂರಣ ಮಾಡಿಕೊಳ್ಳಬೇಕು). ಇದರಿಂದ ('ಗುಣಗಾನವನ್ನು ಮಾಡುವವಗೆ ಅಭೀಷ್ಟವನ್ನು ಪೂರ್ಣಗೊಳಿಸುವನು' ಎಂದು ತಿಳಿಸಿದ್ದರಿಂದ)ಅವರುಗಳಿಗೆ (ಸ್ತುತ್ಯರಾದ ರಾಜಾದಿಗಳಿಗೆ) ಅವರುಗಳಲ್ಲಿ (ಗುಣಗಾನಮಾಡಿದವರಲ್ಲಿ) ಮುಖ್ಯಪ್ರೀತಿಯನ್ನು ಊಹಿಸಲಾಗುವುದು. ಸಂಪ್ರದಾನ ಸಂಜ್ಞೆಯನ್ನು ವಿವಕ್ಷಿಸದಕಾರಣ 'ರಜಕಸ್ಯ ವಸ್ತ್ರಮ್ ದದಾತಿ' ಇತ್ಯಾದಿಪ್ರಯೋಗಗಳಂತೆ ಶೇಷ ('ಶೇಷೇ ಷಷ್ಠೀ' ಎಂಬುವುದರ) ವಿವಕ್ಷೆ ಯಿಂದ 'ವದತಃ' ಎಂದು ಷಷ್ಠೀ (ವಿಭಕ್ತ್ಯಂತವಾಗಿ ಪ್ರಯೋಗಿಸಲಾಗಿದೆ)[1]. 'ವದತಃ ಪ್ರತಿ' ಎಂದಾದರೂ

1. 'ವದತಃ ದದತಿ' ಎಂದು ಪ್ರಯೋಗಿಸಲಾಗಿದೆ. 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನವ್' ಪಾ.ಸೂ. 1.4.32. ಕರ್ಮದಿಂದ ಯಾವ ಪದಾರ್ಥವನ್ನು ಅಭಿಪ್ರೇತಿಸಲಾಗುವುದೋ ಆ ಪದಾರ್ಥವಾಚಕಶಬ್ದವು ಸಂಪ್ರದಾನಸಂಜ್ಞೆಯನ್ನು ಹೊಂದುವುದು. ಕರ್ಮದ ಅನಿರಾಕರ್ತೃ, ಪ್ರೇರಕ, ಮತ್ತು ಅನುಮಂತೃ ಈ ಮೂವರನ್ನೂ ಕರ್ಮಾಭಿಪ್ರೇತರು ಎಂದು ಪರಿಗಣಿಸಲಾಗಿದೆ. 'ಚತುರ್ಥೀ ಸಂಪ್ರದಾನೇ' ಪಾ.ಸೂ. 2.3.32.ರ ಪ್ರಕಾರ ಸಂಪ್ರದಾನ ಸಂಜ್ಞೆಯನ್ನು ಹೊಂದಿರುವ ಶಬ್ದಕ್ಕೆ ಚತುರ್ಥೀವಿಭಕ್ತಿಯು ಪ್ರಾಪ್ತವಾಗುವುದು. ಸೂರ್ಯಾಯ ಅರ್ಘ್ಯಂ ದದಾತಿ, ಇಲ್ಲಿ ಸೂರ್ಯನು ಕರ್ಮವನ್ನು ನಿರಾಕರಿಸುವುದಿಲ್ಲ, ಆದುದರಿಂದ ಅನಿರಾಕರ್ತೃ. 'ವಿಪ್ರಾಯ ಗಾಂ ದದತಿ' ಇಲ್ಲಿ ವಿಪ್ರನು ಗೋವನ್ನು ದಾನವನ್ನಾಗಿ ನೀಡು ಎಂದು ಪ್ರೇರೇಪಿಸಿರುತ್ತಾನೆ, ಆದುದರಿಂದ ಆತನು ಪ್ರೇರೇಪಕ. ಉಪಾಧ್ಯಾಯಾಯ ದಕ್ಷಿಣಾಂ ದದಾತಿ, ಇಲ್ಲಿ ಗುರುವು ದಕ್ಷಿಣೆಯನ್ನು ಯಾಚಿಸಿರುವುದಿಲ್ಲ, ಆದರೆ ಅನುಮತಿಸಿವನು. ಇತ್ಯಾದಿ ಪ್ರಯೋಗಗಳನ್ನು ಉದಾಹರಿಸ-ಲಾಗಿದೆ. ಆದುದರಿಂದ ಪ್ರಕೃತದಲ್ಲಿ 'ವದತೇ ದದಾತಿ' ಎಂದು ಚತುರ್ಥ್ಯಂತವಾದ ಪ್ರಯೋಗವು ಸಾಧುವಾಗುವುದು, 'ವದತಃ' ಎನ್ನುವ ಷಷ್ಠ್ಯಂತವು ಹೇಗೆ? ಎನ್ನುವ ಸಂದೇಹವನ್ನು ಪರಿಹರಿಸಲಾಗಿದೆ. 'ವಿವಕ್ಷಾತಃ ಕಾರಕಾಣಿ ಸಂಭವನ್ತಿ'- 'ಕಾರಕವಿಭಕ್ತಿಗಳು ವಿವಕ್ಷೆಯಂತೆ ಪ್ರಾಪ್ತವಾಗುವವು' ಎಂದು ಭಾಷಾಶಾಸ್ತ್ರಕಾರರ ಮಾತು . ಆದುದರಿಂದ ಪ್ರಕೃತದಲ್ಲಿ ಈ ಸಂಪ್ರದಾನ ಸಂಜ್ಞೆಯನ್ನು ವಿವಕ್ಷಿಸದೇ ಇರುವುದರಿಂದ 'ರಜಕಸ್ಯ ವಸ್ತ್ರಂ ದದಾತಿ' ಇತ್ಯಾದಿ ಪ್ರಯೋಗಗಳಂತೆ ಈ ಪ್ರಯೋಗವೂ ಸಾಧು ಎಂದು ತಿಳಿಯುವುದು. 'ಷಷ್ಠೀ ಶೇಷೇ ' ಪಾ.ಸೂ.2.3.50.ರ ಅನುಸಾರ ಸಂಬಂಧಶೇಷಗಳಿಗೆ (ಈ ಹಿಂದೆ ತಿಳಿಸದೇ ಉಳಿದ ಸಸಂಬಂಧಿಗಳಿಗೆ) ಷಷ್ಠೀ ವಿಭಕ್ತಿಯು ಪ್ರಾಪ್ತವಾಗುವುದು, ಎಂಬ ನಿಯಮದಂತೆ ಪ್ರಕೃತದಲ್ಲೂ ಪ್ರಾಪ್ತವಾಗಿದೆ ಎಂದು ಭಾವ.

(ಭಾವಿಸಬಹುದು)[1]. ಒಟ್ಟಿನಲ್ಲಿ ಹೀಗೆ ಅನುಮಾನಿಸಬಹುದು- 'ವಿಷ್ಣುವು, ತನ್ನಲ್ಲಿ ಗುಣೋತ್ಕರ್ಷದ ಅರಿವನ್ನು ಹೊಂದಿದವನಲ್ಲಿ ಅತಿಶಯವಾಗಿ ಪ್ರೀತಿಯನ್ನು ಹೊಂದಿರುವವನು, ಸತ್ಪುರುಷನಾದುದರಿಂದ, ಮಂಗಳ ಕೀರ್ತಿಯನ್ನು ಹೊಂದಿದ ರಾಜರಂತೆ' ಎಂದು.

**ನ ಕೇವಲಮನುಮಾನಸಿದ್ಧಮೇತತ್, ಕಿಂ ತರ್ಹಿ? ಇತ್ಯತೋಽಭಿಹಿತಾಶೇಷಾರ್ಥಸಂಗ್ರಹರೂಪಾಂ ಶ್ರುತಿಮಪಿ ಪಠತಿ 'ನ ತಾದೃಶೀ' ಇತಿ । 'ಕರ್ಮಕರಾದಿಷು' ಇತಿ ಶೇಷಃ । ತತ್ಪ್ರೀಣನಾತ್- ತಥಾವಿಧಾತ್ । ಇತಶ್ಚೈವಮಿತ್ಯಾಹ 'ಯೋ ಮಾಂ' ಇತಿ । ಅತ್ರ 'ಭಜತಿ ಮಾಂ ಸರ್ವಭಾವೇನ' ಇತಿ ಪರಮಪ್ರೀತೇರ್ದ್ಯೋತಕಮ್ । ಪರಮಾ ಪ್ರೀತಿಃ ಆತ್ಮನಃ । ತದೇವಂ 'ಜೀವಾನಾಂ ಮೋಕ್ಷಮುದ್ದಿಶ್ಯ ಪ್ರವರ್ತಮಾನೈಃ ಸದಾಗಮೈಃ ತತ್ಸಾಧನಭಗವತ್ಪ್ರೀತಿಹೇತುಭೂತಗುಣೋತ್ಕರ್ಷಜ್ಞಾನಾಯ ತತ್ರೈವ ಮಹಾತಾತ್ಪರ್ಯವದ್ಭಿಃ ಭವಿತವ್ಯಮ್' ಇತಿ ಸ್ಥಿತಮ್ ।**

ಇದು ಕೇವಲ ಅನುಮಾಸದಿಂದ ಸಿದ್ಧವಾದುದಲ್ಲ, ಏನು ಹಾಗಾದಲ್ಲಿ? ಆದುದರಿಂದ ಈ ಹಿಂದೆ ಹೇಳಿದ ಎಲ್ಲ ವಿಷಯಗಳ ಸಂಗ್ರಹರೂಪವಾದ ಶ್ರುತಿಯನ್ನು ತಿಳಿಸುತ್ತಾರೆ **'ನ ತಾದೃಶೀ'** ಎಂದು. 'ಕರ್ಮಕರಾದಿಷು' ಎಂದು ಶೇಷಪೂರಣ ಮಾಡಿಕೊಳ್ಳುವುದು. **ತತ್ಪ್ರೀಣನಾತ್**- ಆ ತರಹದ ಪ್ರೀತಿಯಿಂದ[2]. ಮತ್ತೂ ಸಹ ಇದೇ ರೀತಿಯಲ್ಲಿ ಹೇಳಲಾಗಿದೆ **'ಯೋ ಮಾಂ'**

1. ವದತಃ ಎನ್ನುವುದು ದ್ವಿತೀಯಾ ವಿಭಕ್ತಿಯ ಬಹುವಚನ ಎಂದು ಭಾವಿಸಿದಲ್ಲಿ 'ಸ್ತುತಿಸಿದವರನ್ನು ಉದ್ದೇಶಿಸಿ' ಎಂಬ ಅರ್ಥದಲ್ಲಿ ಪ್ರಯೋಗದ ಸಾಧುತ್ವವನ್ನು ಕಾಣಬಹುದಾಗಿದೆ ಎಂದು ಭಾವ.

2. 'ತತ್ಪ್ರೀಣನಾತ್' ಎಂದು ಶ್ರುತಿಯಲ್ಲಿ ಇದೆ. 'ತಸ್ಯ ಪ್ರೀಣನಾತ್- ಹರಿಯ ಅನುಗ್ರಹದಿಂದ' ಎಂದೂ ಅರ್ಥೈಸಬಹುದು. ಪ್ರಕೃತದ ವಿಷಯವನ್ನು ಸಮರ್ಥಿಸಲು ಈ ಅರ್ಥವು ಸಮರ್ಥವಾಗದು ಎಂದು, ಪ್ರಕೃತಕ್ಕೆ ಯೋಗ್ಯವಾದ ಅರ್ಥವನ್ನು ತಿಳಿಸುತ್ತಾರೆ. ತಂ ಚ ತತ್ ಪ್ರೀಣನಂ ಚ- ತತ್ಪ್ರೀಣನಂ, ತತ್- ತಥಾವಿಧಾತ್ ಪ್ರೀಣನಾತ್: ಅಂತಹ ಪ್ರೀತಿಯಿಂದ. ಅನುಗ್ರಹವು ಕರ್ಮಾದಿಗಳಿಂದಲೂ ಸಾಧ್ಯವಿದೆ. 'ತತ್ಕರ್ಮ ಹರಿತೋಷಣಂ' ಎಂಬ ಪ್ರಮಾಣವು ಇರುವುದರಿಂದ. ಆದುದರಿಂದ ಅಂತಹ ಸಾಮಾನ್ಯಾನುಗ್ರಹವು ಪ್ರಕೃತದಲ್ಲಿ ವಿವಕ್ಷಿತವಲ್ಲ ಅತ್ಯರ್ಥಾನುಗ್ರಹ ಎಂದು ತಿಳಿಸಲು 'ತಥಾ ವಿಧಾತ್-ಅಂತಹ ಅನುಗ್ರಹ' ಎಂದು ವ್ಯಾಖ್ಯಾನಿಸಲಾಗಿದೆ ಎಂದು ಭಾವ.

ಎಂದು. ಇಲ್ಲಿ 'ಭಜತಿ ಮಾಂ ಸರ್ವಭಾವೇನ' ಎಂದು ಪರಮ ಪ್ರೀತಿಯ ದ್ಯೋತಕವಾಗಿದೆ. ಪರಮಾ ಪ್ರೀತಿಃ ಆತ್ಮನಃ- ತನ್ನ[1]. ಈ ರೀತಿಯಾಗಿ 'ಜೀವಿಗಳ ಮೋಕ್ಷಕ್ಕಾಗಿ ಪ್ರವರ್ತಮಾನವಾದ ಸದಾಗಮಗಳು ಅದರ (ಮೋಕ್ಷದ) ಸಾಧನವಾದ (ಭಗವತ್) ಗುಣೋತ್ಕರ್ಷದ ಅರಿವಿಗಾಗಿ ಅದರಲ್ಲೇ ಮಹಾ ತಾತ್ಪರ್ಯವನ್ನು ಹೊಂದಿವೆ' ಎಂದು ಸ್ಥಿರವಾಯಿತು.

**ವೇದಗಳಿಗೆ ಅನ್ಯಥಾ ಯೋಜನೆಯು ಮಂದರಮಣೀಯ**

**ಅತೋ ವಿಷ್ಣೋರ್ಗುಣೋತ್ಕರ್ಷ ಏವ ಸರ್ವಶ್ರುತಿಸ್ಮೃತೀನಾಂ ಮಹಾತಾತ್ಪರ್ಯಮ್ । ನಚ 'ಅಭೇದೇ ತಾತ್ಪರ್ಯಮ್' ಇತ್ಯತ್ರ ಕಿಞ್ಚಿನ್ ಮಾನಮ್ ।**

ಆದುದರಿಂದ ವಿಷ್ಣುವಿನ ಗುಣೋತ್ಕರ್ಷದಲ್ಲೇ ಎಲ್ಲ ಶ್ರುತಿ-ಸ್ಮೃತಿಗಳಿಗೆ ಮುಖ್ಯತಾತ್ಪರ್ಯ (ಎಂದು ತಿಳಿಯುವುದು). '(ಶ್ರುತಿ-ಸ್ಮೃತಿಗಳಿಗೆ) ಅಭೇದದಲ್ಲಿ ತಾತ್ಪರ್ಯವಿದೆ' ಎನ್ನುವ ವಾದದಲ್ಲಿ ಯಾವ ಪ್ರಮಾಣವೂ ಇಲ್ಲ.

'ವಿಷ್ಣೋಃ ಸರ್ವೋತ್ತಮತ್ವ ಏವ...' ಇತ್ಯಾದಿನೋಕ್ತಂ ಸ್ವಪಕ್ಷಸಾಧನಮ್ ಉಪಸಂಹರತಿ 'ಅತ' ಇತಿ । ಸ್ಮೃತಿಗ್ರಹಣೇನ ಪೌರುಷೇಯಾಃ ಸರ್ವೇಽಪಿ ಸದಾಗಮಾ ಗೃಹ್ಯಂತೇ । ತೇನ 'ಲೋಕೇ ವೇದೇ ಚ' ಇತಿ ವ್ಯಾಖ್ಯಾತಂ ಭವತಿ । ಸರ್ವಪ್ರಮಾಣವಿರುದ್ಧತ್ವೇನ ಜೀವಬ್ರಹ್ಮಣೋರಭೇದೇ ತತ್ತ್ವಮಸ್ಯಾದಿವಾಕ್ಯಾನಾಂ ತಾತ್ಪರ್ಯಾಯೋಗಾತ್, ಪ್ರಧಾನವಾಕ್ಯಾಭಾವೇನ ತತ್ರ ಸರ್ವಾಗಮಾನಾಂ ಮಹಾತಾತ್ಪರ್ಯಕಲ್ಪನಮಯುಕ್ತಮಿತ್ಯುಕ್ತಮ್ । ಇತೋಽಪಿ ತದಯುಕ್ತಮಿತ್ಯಾಹ 'ನ ಚ' ಇತಿ । ಯಥಾಽಸ್ಮಾಭಿರ್ಭಗವತೋ ಗುಣೋತ್ಕರ್ಷೇ ಸರ್ವಾಗಮಾನಾಂ ಮಹಾತಾತ್ಪರ್ಯಮಿತ್ಯತ್ರ ಶ್ರುತಿ-ಸ್ಮೃತಿಯುಕ್ತಯಃ ಪ್ರಮಾಣತ್ವೇನ ಪ್ರದರ್ಶಿತಾಃ, ನ ಚ ತಥಾ ಪರಾಭಿಮತಾರ್ಥೇ ಕಿಞ್ಚಿದಪಿ ಪ್ರಮಾಣಮಸ್ತಿ । ಪ್ರಕ್ರಿಯಾ ತು ಮಂದಜನಮನೋಹರಾ ನಿರ್ಮೂಲತ್ವಾದ್ ಉಪೇಕ್ಷಣೀಯೇತಿ ।

1. ಮೂಲದಲ್ಲಿ 'ಪರಮಾ ಪ್ರೀತಿಃ' ಎಂದಿದೆ ಪ್ರೀತಿಯು ಯಾರ ವಿಷಯಕ ಎನುವುದು ಸ್ಫುಟವಿಲ್ಲ ತನ್ನಿಮಿತ್ತವಾಗಿ ತಿಳಿಸಿದರು ಆತ್ಮನಃ ಎಂದು 'ಮಾಂ ಭಜತಿ' ಎಂದು ಭಗವಂತನ ವಚನವು ಇರುವುದರಿಂದ ತನ್ನ ವಿಷಯಕಪ್ರೀತಿ ಎನ್ನುವುದು ತಿಳಿಯುವುದು ಎಂದು ಭಾವ.

'ವಿಷ್ಣೋಃ ಸರ್ವೋತ್ತಮತ್ವ ಏವ... (ವಿಷ್ಣುಸರ್ವೋತ್ತಮತ್ವದಲ್ಲೇ ಸಕಲಾಗಮಗಳಿಗೆ ಮಹಾತಾತ್ಪರ್ಯ)' ಈ ಮುಂತಾದವುಗಳಿಂದ ತಿಳಿಸಿದ ಸ್ವಪಕ್ಷಸಾಧನವನ್ನು ಉಪಸಂಹಾರಗೊಳಿಸುವರು 'ಅತಃ' ಎಂದು. 'ಸ್ಮೃತಿ' ಎಂದು ಪರಿಗ್ರಹಿಸಿದ್ದರಿಂದ ಪುರುಷನಿರ್ಮಿತವಾದ ಎಲ್ಲ ಸದಾಗಮಗಳನ್ನು ಸಂಗ್ರಹಿಸಿದಂತಾಯಿತು. ಇದರಿಂದ (ಸಕಲಸದಾಗಮಗಳನ್ನು ಪರಿಗ್ರಹಿಸಿದ್ದರಿಂದ) 'ಲೋಕೇ ವೇದೇ ಚ' ಎನ್ನುವದನ್ನು ವ್ಯಾಖ್ಯಾನಿಸಿದಂತಾಯಿತು[1]. ಎಲ್ಲ ಪ್ರಮಾಣವಿರುದ್ಧವಾದುದರಿಂದ ಜೀವ-ಬ್ರಹ್ಮರ ಅಭೇದದಲ್ಲಿ 'ತತ್ ತ್ವಮಸಿ' ಮುಂತಾದ ವಾಕ್ಯಗಳಿಗೆ ತಾತ್ಪರ್ಯವು ಸಮಂಜಸವಾಗದಿರುವುದರಿಂದ, ಮಹಾವಾಕ್ಯವೇ ಇಲ್ಲದ ಪ್ರಯುಕ್ತ ಅಲ್ಲಿ (ಜೀವಬ್ರಹ್ಮರ ಐಕ್ಯದಲ್ಲಿ) ಮಹಾತಾತ್ಪರ್ಯವನ್ನು ಕಲ್ಪಿಸುವುದು ಅಯುಕ್ತ ಎಂದು ತಿಳಿಸಿದಂತಾಯಿತು. ಅಷ್ಟೇ ಅಲ್ಲ (ಜೀವಬ್ರಹ್ಮರ ಐಕ್ಯವು) ಅಯುಕ್ತವೂ ಕೂಡ ಎಂದು ತಿಳಿಸುವರು 'ನ ಚ' ಎಂದು. ಹೇಗೆ ನಾವು 'ಭಗವಂತನ ಗುಣೋತ್ಕರ್ಷದಲ್ಲಿ ಸರ್ವಾಗಮಗಳಿಗೆ ಮಹಾತಾತ್ಪರ್ಯವು ಇದೆ' ಎನ್ನುವ ವಿಷಯದಲ್ಲಿ ಶ್ರುತಿ-ಸ್ಮೃತಿ-ಯುಕ್ತಿಗಳನ್ನು ಪ್ರಮಾಣವನ್ನಾಗಿ ಉದಾಹರಿಸಲಾಯಿತೋ, ಹಾಗೆ ಪರರು (ಅದ್ವೈತವಾದಿಗಳು) ಅಭಿಮತಿಸಿದ ವಿಷಯದಲ್ಲಿ (ಜೀವಬ್ರಹ್ಮರ ಐಕ್ಯದಲ್ಲಿ) ಯಾವ ಪ್ರಮಾಣವೂ ಇಲ್ಲ. ಪ್ರಕ್ರಿಯೆಯಾದರೋ ('ಮನ್ತ್ರಬ್ರಾಹ್ಮಣಲಕ್ಷಣಸ್ತಾವದ್ವೇದಃ..' ಇತ್ಯಾದಿಯಾಗಿ ತಿಳಿಸಿದ ಪ್ರಕ್ರಿಯೆಯು) ಅಲ್ಪಬುದ್ಧಿಗಳಿಗೆ ಖುಶಿ ಕೊಡುವ ಸಂಗತಿ, ಆ ವಿಷಯವು ನಿರ್ಮೂಲವಾದದ್ದು (ಪ್ರಮಾಣಪ್ರಮಿತವಾಗಿಲ್ಲ) ಆದುದರಿಂದ ಉಪೇಕ್ಷಣೀಯ ಎಂದು.

**-: ಸರ್ವೋತ್ತಮತ್ವವು ಶ್ರುತಿ-ಸ್ಮೃತ್ಯುಕ್ತಯುಕ್ತಿಸಿದ್ಧವಾದ ಸಮಾಪ್ತ :-**

---

1. ಈ ಹಿಂದೆ (ಪುಟ 520ರಲ್ಲಿ) ಗೀತಾವಾಕ್ಯವನ್ನು ವ್ಯಾಖ್ಯಾನಿಸುವಾಗ 'ಲೋಕೇ' ಎನ್ನುವ ಶಬ್ದಕ್ಕೆ 'ಸಕಲ ಪೌರುಷೇಯ ಸದಾಗಮಗಳು' ಎಂದು ಟೀಕೆಯಲ್ಲಿ ವ್ಯಾಖ್ಯಾನಿಸಲಾಗಿತ್ತು, ಅದು ಆಚಾರ್ಯರಿಗೆ ಸಮ್ಮತ ಎನ್ನುವದನ್ನು ಈಗ ದೃಢೀಕರಿಸಿದಂತಾಯಿತು ಎಂದು ಭಾವ.

## ॥ ಪ್ರತೀತಿಯ ತೊಡಕು ಭೇದವನ್ನು ತಡೆಯಲಾರದು ॥

ಭೇದವು ಪ್ರಮಾಣಿಕವಾದಲ್ಲಿ ಜೀವೇಶ್ವರರ ಭೇದವನ್ನು ಒಪ್ಪಬಹುದಿತ್ತು , ಹೇಗೆ ಶುಕ್ತಿಯಲ್ಲಿ ತೋರಿದ ರಜತವು ಪ್ರಮಾಣಪ್ರಮಿತವಾಗಿಲ್ಲ, ಆದುದರಿಂದ ಮಿಥ್ಯೆಯೋ ಹಾಗೆಯೇ ಭೇದವು ಅಪ್ರಮಿತವಾದುದರಿಂದ ಮಿಥ್ಯೆ ಎಂದು ಒಪ್ಪುವುದೇ ಉಚಿತ. ಭೇದವು ಅರಿವಿಗೆ ಪ್ರಾಪ್ತವಾಗುವ ಮೊದಲೇ ಭೇದಾಂತರದ ಅರಿವು ಅಗತ್ಯ – ಘಟಾತ್ ಪಟೋ ಭಿನ್ನಃ ಎಂದೋ, ಘಟಪಟೌ ಭಿನ್ನೌ ಎಂದೋ ಭೇದವು ತೊರುವುದು. ಅಂದರೆ ಭೇದದ ಅರಿವು ಪ್ರಾಪ್ತವಾಗಲು ಅ ಮೊದಲು ಪ್ರತಿಯೋಗಿ ಅನುಯೋಗಿಯ ಅರಿವು ಅಥವಾ ವಿಶೇಷಣ-ವಿಶೇಷ್ಯದ ಅರಿವು ಅಗತ್ಯ . ಈ ಎಲ್ಲ ಅರಿವು ಭೇದದ ಅರಿವಿನ ಅನಂತರದ್ದೇ ಆಗಿವೆ. ಇಂತಹ ಭೇದದ ಅರಿವಿನ ಹಿಂದೆ ತುಂಬ ತೊಡಕುಗಳು ಇವೆ. ಮತ್ತು ಮೊದಲು ಭೇದವೋ ಅಥವಾ ಪದಾರ್ಥವೋ? ಪಾದಾರ್ಥದ ಅರಿವಾದನಂತರವೇ ಅದರಲ್ಲಿನ ಭೇದದ ಅರಿವು ಪ್ರಾಪ್ತವಾಗುವುದು ಎಲ್ಲರ ಅನುಭವ. ಹಾಗಾಗಿ ಮೊದಲು ಭೇದವು ತೋರಲಾರದು. ಮತ್ತೂ ಇಂದ್ರಿಯವು ಒಂದರ ನಂತರ ಮತ್ತೊಂದ್ದನ್ನು ಗ್ರಹಿಸುವುದು ಎಂದು ಕಲ್ಪಿಸಲು ಆಗದು. ಶಾಸ್ತ್ರದಲ್ಲಿ ಇದನ್ನು ವಿರಮ್ಯವ್ಯಾಪಾರ ಎಂದು ಹೇಳುವರು. ವಿರಮ್ಯವ್ಯಾಪಾರವು ಚೇತನನ ಧರ್ಮ, ಇದು ಜಡಗಳಲ್ಲಿ ಕಾಣದು. ಇಂದ್ರಿಯವು ತನ್ನ ಪರಿಧಿಯಲ್ಲಿನ ಎಲ್ಲ ವಸ್ತುಗಳನ್ನು ಒಮ್ಮೆಯೇ ಗ್ರಹಿಸುವುದು. ಇಂತಹ ಅನೇಕ ತೊಡಕು ಭೇದವನ್ನು ಮಿಥ್ಯಾ ಎಂದೇ ಸಾರುವುದು. ಇಂತಹ ಹತ್ತಾರು ಸಂದೇಹಗಳನ್ನು ಆಚಾರ್ಯರು ಭೇದವು ಧರ್ಮಿಯ ಸ್ವರೂಪ ಎಂದು ತಿಳಿಸುವದರ ಮುಖಾಂತರ ಉತ್ತರಿಸಿದ್ದಾರೆ. ಪ್ರತಿಯೋಗಿ ಮತ್ತು ಅನುಯೋಗಿಯ ಅರಿವಿನ ಸಾಪೇಕ್ಷತೆಯು ಜೀವೇಶ್ವರರ ಐಕ್ಯದ ಅರಿವಿಗೆ ಇದೆ, ಇದ್ದರೂ ಅದನ್ನು ಅಪ್ರಮಿತ ಎಂದು ಮಾಯಾವಾದಿಗಳು ಅಲ್ಲಗಳೆಯಲಾರರು ತಾನೇ? ಹಾಗೆಯೇ ಉಪಮಿತಿಯ ಅರಿವಿಗೂ ಈ ಎಲ್ಲ ತೊಡಕಿದೆ. ಅಂದ ಮಾತ್ರಕ್ಕೆ ಬಂದ ಉಪಮಾನದ ಅರಿವನ್ನು ನಿರಾಕರಿಸಲು ಶಕ್ಯವೇ? ಒಂದು ಹೊಸತರಹದ ಸಸ್ಯವನ್ನು ಕಂಡಾಗ, ಆ ಸಸ್ಯವು ನಾವು ತಿಳಿದ ಸಸ್ಯಗಳ ಪ್ರಭೇದದಲ್ಲಿ ಒಂದಾಗಿಲ್ಲ ಎಂದ ಮಾತ್ರಕ್ಕೆ ಅದು ಸಸ್ಯವೇ ಅಲ್ಲ ಎಂದಾಗಲಿ. ಆ ಸಸ್ಯವೇ ಮಿಥ್ಯೆ ಎಂದಾಗಲಿ ವಾದಿಸಲು ಆದೀತೇ? ಎಂದು ಆಚಾರ್ಯರು ಪ್ರಶ್ನಿಸುತ್ತಾರೆ.ಇಂತಹ ಅನೇಕ

ಲೊಕವ್ಯವಹಾರಗಳನ್ನು ಇಲ್ಲಿ ಉದಾಹರಿಸಲಾಗಿದೆ. ಭೇದದ ಬಗ್ಗೆ ವೈಜ್ಞಾನಿಕವಾದ ಮತ್ತು ಅತಿಸೂಕ್ಷ್ಮವಾದ ವಿಶ್ಲೇಷಣವನ್ನು ಇಲ್ಲಿ ಕಾಣಬಹುದಾಗಿದೆ. ಮನಸ್ಸಿಗೆ ಮುದನೀಡುವ ವಿಮರ್ಶೆಯನ್ನು ಈ ದೀರ್ಘಪ್ರಬಂಧದಲ್ಲಿ ಉಪದೇಶಿಸಿರುವರು. ಶ್ರೀಜಯತೀರ್ಥರೂ ಸಹ ಅನುವ್ಯಾಖ್ಯಾನದ ಅನೇಕ ಉಪದೇಶಗಳನ್ನು ಇಲ್ಲಿ ಸಂಗ್ರಹಿಸಿ, ಪ್ರಬಂಧವನ್ನು ಪುಷ್ಟೀಕರಿಸಿರುತ್ತಾರೆ.

**ಧರ್ಮಿಸ್ವರೂಪವಾದ ಭೇದವು ಅದರೊಡನೆ ಭಾನವಾಗುವುದು**

**ನಚ 'ವಿಶೇಷಣವಿಶೇಷ್ಯತಯಾ ಭೇದಸಿದ್ಧಿಃ- ವಿಶೇಷಣವಿಶೇಷ್ಯ-ಭಾವಶ್ಚ ಭೇದಾಪೇಕ್ಷಃ । ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸಿದ್ಧಿಃ- ಭೇದಾಪೇಕ್ಷಂ ಚ ಧರ್ಮಿಪ್ರತಿಯೋಗಿತ್ವಂ.' ಇತ್ಯನ್ಯೋನ್ಯಾಶ್ರಯತಯಾ ಭೇದಸ್ಯಾಯುಕ್ತಿಃ, ಪದಾರ್ಥಸ್ವರೂಪತ್ವಾದ್ ಭೇದಸ್ಯ ।**

('ಘಟಪಟೌ ಭಿನ್ನೌ' 'ಘಟಪಟಯೋರ್ಭೇದಃ' ಎಂದು) 'ವಿಶೇಷಣವಾಗಿಯೋ ವಿಶೇಷ್ಯವಾಗಿಯೋ ಭೇದದ ಸಿದ್ಧಿಯಾಗಬೇಕು- ವಿಶೇಷಣ-ವಿಶೇಷ್ಯಭಾವವಾದರೋ ಭೇದದ ಅರಿವಿನ ಅಧೀನ. ಅನುಯೋಗಿ-ಪ್ರತಿಯೋಗಿಗಳ ಅರಿವಿನಿಂದ ಭೇದದ ಸಿದ್ಧಿ ಎಂದು ಒಪ್ಪಿದಲ್ಲಿ, ಅನುಯೋಗಿ-ಪ್ರತಿಯೋಗಿಗಳ ಅರಿವಾದರೋ ಭೇದದ ಅರಿವಿನ ಅಧೀನವೇ ಆಗಿದೆ' ಹೀಗೆ ಅನ್ಯೋನ್ಯಾಶ್ರಯತ್ವವು ಇರುವುದರಿಂದ ಭೇದವನ್ನು ಒಪ್ಪಲು ಆಗದು ಎಂದು ಹೇಳುವುದು ತರವಲ್ಲ. ಭೇದವು ಪದಾರ್ಥದ ಸ್ವರೂಪವಾದುದರಿಂದ (ಪದಾರ್ಥವು ತೋರುವಾಗಲೇ ಅದರೊಡನೆ ಭೇದವೂ ತೋರುವುದು ಎಂದು ಭಾವ).

**ಏವಂ ತಾವದ್ 'ವಿಷ್ಣೋಃ ಸರ್ವೋತ್ತಮತ್ವೇ ಸರ್ವೇಷಾಂ ಸದಾಗಮಾನಾಂ ಮಹಾತಾತ್ಪರ್ಯಮ್' ಇತಿ ಪ್ರಮಾಣೈರುಪಪಾದಿತಮ್ । ತತ್ರ ಬಾಧಕಪರಿಹಾರಾರ್ಥಃ 'ಕಥಂ ಚ ಜೀವಪರಮಾತ್ಮೈಕ್ಯೇ' ಇತ್ಯತಃ ಪ್ರಾಕ್ತನೋ ಗ್ರನ್ಥಃ । ತಥಾಹಿ- 'ಕ್ಷರಾಕ್ಷರಜಡಾತ್ಮಕಾತ್ ಸರ್ವಸ್ಮಾದುತ್ತಮತ್ವಂ' ಇತ್ಯಯಮರ್ಥೋ ಭೇದಸಾಪೇಕ್ಷಃ । ಭೇದಸ್ತು ನ ಕಶ್ಚಿದಪಿ ಪ್ರಾಮಾಣಿಕಃ । ನ ಚ 'ಘಟಪಟಾದಿಭೇದಸ್ತಾವತ್ ಪ್ರತ್ಯಕ್ಷಾದಿಸಿದ್ಧಃ' ಇತಿ ವಾಚ್ಯಮ್ ।**

**ಭೇದೋ ಹಿ ನ ತಾವತ್ ಸ್ವತನ್ತ್ರಃ ಪ್ರತಿಭಾಸತೇ, ಕಿನ್ತು 'ಘಟಪಟೌ ಬಿನ್ನೌ' ಇತಿ ಘಟಪಟವಿಶೇಷಣತಯಾ ವಾ 'ಘಟಪಟಯೋರ್ಭೇದಃ' ಇತಿ ತದ್ವಿಶೇಷ್ಯತಯಾ ವಾ, ಏಕ್ಯಸ್ಯೈವ ಭೇದಸ್ಯ ದ್ವಿಷ್ಠತ್ವಪಕ್ಷೇ । ಭೇದದ್ವಯಾಙ್ಗೀಕಾರೇಣಾನ್ಯತರಮಾತ್ರಾಽಶ್ರಯತ್ವೇಽಪಿ ವಿಶೇಷಣವಿಶೇಷ್ಯಭಾವಂ ಧರ್ಮಪ್ರತಿಯೋಗಿಭಾವಂ ವಾಽನಪೇಕ್ಷ್ಯ ಸಮ್ಬನ್ಧಿಮಾತ್ರಾಪೇಕ್ಷಾಯಾಂ ಗತ್ಯನ್ತರಾಭಾವಾತ್ ।**

ಈವರೆಗೆ 'ವಿಷ್ಣುವಿನ ಸರ್ವೋತ್ತಮತ್ವದಲ್ಲಿ ಎಲ್ಲ ಸದಾಗಮಗಳಿಗೆ ಮಹಾತಾತ್ಪರ್ಯವು ಇದೆ' ಎಂದು ಪ್ರಮಾಣಗಳಿಂದ ಉಪಪಾದಿಸಲಾಯಿತು. ಈ ವಿಷಯದಲ್ಲಿನ ಬಾಧಕದ (ಶಂಕಾ) ಪರಿಹಾರಕ್ಕಾಗಿ '**ಕಥಂ ಚ ಜೀವ-ಪರಮಾತ್ಮೈಕ್ಯೇ**' ಎನ್ನುವ ಗ್ರಂಥದ ಪರ್ಯಂತದ ಭಾಗವು (ಪುಟ 649ರ ವರೆಗೆ) (ಇದೆ). ವಿಷದಪಡಿಸಲಾಗುವುದು- 'ನಾಶವಿಲ್ಲದ, ನಾಶವಿರುವ ಸಕಲ ಜೀವ-ಜಡ ಪದಾರ್ಥಗಳಿಂದಲೂ ಹರಿಯು ಉತ್ತಮ' ಎನ್ನುವ ವಿಷಯವು ಭೇದವನ್ನು (ಭೇದದ ಅರಿವನ್ನು) ಬಯಸುವುದು[1]. ಆದರೆ ಯಾವ (ವಿಷಯಕವಾದ) ಭೇದವೂ (ಅರಿವೂ) ಪ್ರಾಮಾಣಿಕವಲ್ಲ. 'ಘಟ-ಪಟಾದಿ-ಭೇದವಾದರೋ ಪ್ರತ್ಯಕ್ಷದಿಂದ ಸಿದ್ಧ' ಎಂದೆನ್ನಲಾಗದು. ಭೇದವಾದರೋ ಸ್ವತಂತ್ರವಾಗಿ ಅರಿವಿಗೆ ನಿಲುಕದು. ಅಂದರೆ 'ಘಟ-ಪಟಗಳು ಭಿನ್ನವಾಗಿವೆ (ಭಿನ್ನವಾದ ಘಟ-ಪಟಗಳು)' ಎಂದು ತೋರುವಾಗ ಘಟ-ಪಟಗಳಿಗೆ ವಿಶೇಷಣವಾಗಿ (ಘಟಪಟಗಳು ವಿಶೇಷ್ಯವಾಗಿ), ಅಥವಾ 'ಘಟ-ಪಟಗಳ ಭೇದ' ಎಂದು ತೋರುವಾಗ (ಘಟ-ಪಟಗಳು ವಿಶೇಷಣವಾಗಿ) ಭೇದವು ವಿಶೇಷ್ಯವಾಗಿ (ತೋರುವುದು.) ಒಂದೇ ಭೇದವು ಎರಡು ವಸ್ತುಗಳಲ್ಲಿ ಇದೆ ಎನ್ನುವ ಪಕ್ಷದಲ್ಲಿ[2]. (ಘಟ-ಪಟಗಳಲ್ಲಿನ) ಭೇದವು ಎರಡು ಎಂದು ಒಪ್ಪಿದಲ್ಲಿ,

---

1. ಕನಿಷ್ಠ ಎರಡು ವಸ್ತುಗಳ ಅರಿವು ಇದ್ದಲ್ಲಿ ಅವುಗಳಲ್ಲಿ ಇದು ಹಿರಿದು, ಇದು ಕಿರಿದು ಎಂಬ ಅರಿವು ಪ್ರಾಪ್ತವಾಗುವುದು. ವಸ್ತುಗಳಲ್ಲಿ ಎರಡು ಮೂರು ಎಂಬ ಅರಿವು ಪ್ರಾಪ್ತವಾಗಲು ಅವುಗಳಲ್ಲಿನ ಭೇದದ ಅರಿವು ಅತ್ಯವಶ್ಯಕ. ಪ್ರಕೃತ 'ಹರಿಯು ಸರ್ವೋತ್ತಮ' ಎಂಬ ಅರಿವು ಆಗಬೇಕಾದಲ್ಲಿ ಆ ಮುನ್ನವೇ ಭೇದದ ಅರಿವು ಅತ್ಯವಶ್ಯ ಎಂದು ಭಾವ.

2. ಘಟ-ಪಟಗಳಲ್ಲಿರುವ ಸಂಯೋಗಾದಿ ಗುಣದಂತೆ ಘಟ-ಪಟಗಳಲ್ಲಿನ ಭೇದವು ಒಂದೇ ಆಗಿದ್ದು ಎರಡೂ ವಸ್ತುಗಳಲ್ಲಿ ಇರುವುದು, ಎಂದು ಕೆಲವು ವಾದಿಗಳ ಅಭಿಮತ. ಆ ಮತದಂತೆ ಭೇದವು ವಿಶೇಷಣವಾಗಿಯೋ ವಿಶೇಷ್ಯವಾಗಿಯೋ ಭಾಸವಾಗುವುದು ಎಂದು ಭಾವ.

(ಆ ಭೇದವು) ಯಾವುದೋ ಒಂದರಲ್ಲಿ ಮಾತ್ರ ಆಶ್ರಯವನ್ನು ಹೊಂದಿದ್ದರೂ ಸಹ, ವಿಶೇಷಣ-ವಿಶೇಷ್ಯಭಾವದ (ಅರಿವು) ಅಥವಾ ಧರ್ಮಿಪ್ರತಿಯೋಗಿ-ಭಾವದ (ಅರಿವು) ಇಲ್ಲದೇ (ಭೇದದ ಅರಿವು ಪ್ರಾಪ್ತವಾಗಬೇಕು) ಉಪಾಯಾಂತರವಿಲ್ಲ[1].

**ಭೇದಸ್ಯ ಚ ವಿಶೇಷಣತ್ವೇ ಘಟಪಟಯೋರ್ವಿಶೇಷ್ಯತ್ವಂ, ತಸ್ಯ ವಿಶೇಷ್ಯತ್ವೇ ತಯೋರ್ವಿಶೇಷಣತ್ವಮ್ । ತಥಾಚ 'ಘಟಪಟೌ' ಇತಿ ವಾ 'ಘಟಪಟಯೋಃ' ಇತಿ ವಾ ದ್ವಿತ್ವಾವಚ್ಛಿನ್ನಯೋರ್ಘಟಪಟಯೋಃ ವಿಶೇಷಣವಿಶೇಷ್ಯತಯಾ ಪ್ರತೀತೌ ಸತ್ಯಾಂ ಭೇದಪ್ರತೀತಿಃ, ವಿಶೇಷಣಾದಿ-ಪ್ರತೀತೇರ್ವಿಶೇಷ್ಯಾದಿಪ್ರತೀತಿಕಾರ್ಯತ್ವಾತ್ । ದ್ವಿತ್ವಾವಚ್ಛಿನ್ನಯೋರ್ಘಟ-ಪಟಯೋಃ ವಿಶೇಷಣವಿಶೇಷ್ಯಭಾವಪ್ರತೀತಿಶ್ಚ ಭೇದಪ್ರತೀತ್ಯಪೇಕ್ಷಾ, ಭೇದ-ಪ್ರತೀತ್ಯವಿನಾಭೂತತ್ವಾದ್ ದ್ವಿತ್ವಪ್ರತೀತೇಃ, ತಥಾಚ ಅನ್ಯೋನ್ಯಾಶ್ರಯತಾ ।**

(ಭೇದದ ಅರಿವಿನಲ್ಲಿ) ಭೇದವು ವಿಶೇಷಣವಾದಲ್ಲಿ ಘಟ-ಪಟಗಳು ವಿಶೇಷ್ಯ, ಅದು (ಭೇದವು) ವಿಶೇಷ್ಯವಾದಲ್ಲಿ ಅವು (ಘಟ-ಪಟಗಳು) ವಿಶೇಷಣ. ಹಾಗಾದಲ್ಲಿ 'ಘಟಪಟೌ' ಎಂದಾಗಲಿ, ಅಥವಾ ಘಟಪಟಯೋಃ' ಎಂದಾಗಲೀ ದ್ವಿತ್ವದಿಂದ ಯುಕ್ತವಾದ ಘಟ-ಪಟಗಳು ವಿಶೇಷಣ (ಅಥವಾ) ವಿಶೇಷ್ಯವಾಗಿ ತೋರಿದರೆ ಭೇದದ ಪ್ರತೀತಿಯು (ಪ್ರಾಪ್ತವಾಗುವುದು, ಏಕೆಂದರೆ) ವಿಶೇಷಣಾದಿಗಳ ಪ್ರತೀತಿಯು ವಿಶೇಷ್ಯಾದಿ ಪ್ರತೀತಿಯ

---

1. 'ಘಟ-ಪಟೌ ಭಿನ್ನೌ' ಎಂಬ ಅರಿವಿನ ವಿವರವು- 'ಘಟಾತ್ ಪಟೋ ಭಿನ್ನಃ' ಮತ್ತು 'ಪಟಾತ್ ಘಟೋ ಭಿನ್ನಃ' ಎಂದಾಗುವುದು. ಅಂದರೆ ಘಟ-ಪಟಗಳಲ್ಲಿ ಎರಡು ಭೇದಗಳು ತೋರುವವು. ಅಂದರೆ ಸಂಯೋಗಾದಿಗಳಂತೆ ಒಂದೇ ಧರ್ಮವಲ್ಲ ಎಂದು ಒಪ್ಪಿದರೂ, ಭೇದದ ಪ್ರತೀತಿಗೆ ಅದಕ್ಕೆ ಸಂಬಂಧಿಸಿದ ಪದಾರ್ಥಗಳ ಅರಿವು ಅವಶ್ಯ. ಆ ಪದಾರ್ಥಗಳಾದರೋ 'ಘಟೋ ಭಿನ್ನಃ' ಎಂದು ಭೇದವು ವಿಶೇಷಣವಾಗಿಯೋ, 'ಘಟೇ ಭೇದಃ' ಎಂದು ಭೇದವು ವಿಶೇಷ್ಯವಾಗಿಯೋ ತೋರುವುದು. ಅಥವಾ 'ಘಟಾತ್ ಪಟೋ ಭಿನ್ನಃ' ಎಂಬ ಅರಿವು ಪ್ರಾಪ್ತವಾಗಬೇಕಾದಲ್ಲಿ ಘಟವು ಪ್ರತಿಯೋಗಿ ಎಂದು, ಪಟವು ಅನುಯೋಗಿ ಎಂದು ಆ ಮೊದಲೇ ಅರಿತಿರಬೇಕು. ಹಾಗಾದಲ್ಲಿ ಮಾತ್ರ ಭೇದದ ಅರಿವು ಪ್ರಾಪ್ತವಾಗಲು ಶಕ್ಯ ಎಂದು ಭಾವ.

ಕಾರ್ಯವಾದುದರಿಂದ[1]. ದ್ವಿತ್ವದಿಂದ ಯುಕ್ತವಾದ ಘಟಪಟಗಳು ವಿಶೇಷಣವಾಗಿಯೋ, ವಿಶೇಷ್ಯವಾಗಿಯೋ ಪ್ರತೀತವಾಗಬೇಕಾದಲ್ಲಿ ( ಆ ಮೊದಲು) ಭೇದದ ಪ್ರತೀತಿಯು ಆವಶ್ಯಕ. ದ್ವಿತ್ವದ ಪ್ರತೀತಿಯು ಭೇದದ ಅರಿವಿಲ್ಲದೇ ಪ್ರಾಪ್ತವಾಗದು ಆದುದರಿಂದ. ಒಟ್ಟಿನಲ್ಲಿ ಅನ್ಯೋನ್ಯಾಶ್ರಯತ್ವವು (ಪ್ರಾಪ್ತವಾಯಿತು)[2].

**ಅಥ ಯದಾಽನ್ಯತರಮಾತ್ರಾಶ್ರಯೋ ಭೇದೋ ಧರ್ಮಿ-ಪ್ರತಿಯೋಗಿಭಾವಾಪೇಕ್ಷಶ್ಚ, ತದಾಽಪ್ಯನ್ಯೋನ್ಯಾಶ್ರಯತಾ । ಘಟಾತ್ ಪಟಸ್ಯ ಭೇದ ಇತಿ ಪಟಸ್ಯ ಭೇದಂ ಪ್ರತಿ ಧರ್ಮಿತ್ವಂ ಘಟಸ್ಯ ಚಾವಧಿತ್ವೇನ ಪ್ರತಿಯೋಗಿತ್ವಂ ಪ್ರತೀತ್ಯ ಹಿ ಭೇದಃ ಪ್ರತ್ಯೇತವ್ಯಃ । ಭೇದಪ್ರತೀತ್ಯಪೇಕ್ಷಾ ಚ ಧರ್ಮಿಪ್ರತಿಯೋಗಿತ್ವಪ್ರತೀತಿಃ । ಅನ್ಯಥಾ ಪಟಸ್ಯೇತಿ ಘಟಾದಿತಿ ಚ ವಿಲಕ್ಷಣಪ್ರತೀತ್ಯನುಪಪತ್ತೇರಿತಿ । ತಥಾಚಾನ್ಯೋನ್ಯಾಶ್ರಯತಯಾ ಪ್ರತ್ಯಕ್ಷೇಣ ಭೇದಪ್ರತೀತೇಃ ಅನುಪಪತ್ತಿರಿತಿ । ತದೇತದಾಶಙ್ಕ್ಯ ನಿಷೇಧತಿ 'ನ ಚ' ಇತಿ । ಉಕ್ತಾನುಸಾರೇಣ ಪದಾನಿ ಯೋಜ್ಯಾನಿ । ಕುತೋ ನೇತ್ಯತ ಆಹ 'ಪದಾರ್ಥ..' ಇತಿ । ಧರ್ಮೀಹ 'ಪದಾರ್ಥಃ' ಇತ್ಯುಚ್ಯತೇ ।**

1. 'ಘಟಪಟೌ ಭಿನ್ನೌ' ಎಂದೋ ಅಥವಾ 'ಘಟಪಟಯೋರ್ಭೇದಃ' ಎಂದೋ ಭೇದದ ಪ್ರತೀತಿಯುಂಟಾಗುವುದು. ಈ ಅರಿವುಗಳಲ್ಲಿ ಘಟಪಟಗಳು ವಿಶೇಷಣ ಭಾವದಿಂದಲೋ ಅಥವಾ ವಿಶೇಷ್ಯ ಭಾವದಿಂದಲೋ ಪ್ರತೀತವಾಗಬೇಕು. 'ಇದು ವಿಶೇಷಣ' ಎಂಬ ಜ್ಞಾನವು ಇನ್ನೊಂದು 'ವಿಶೇಷ್ಯ' ಎಂಬ ಅರಿವಿನ ಅಧೀನವಾಗಿದೆ. ಹಾಗೆಯೇ 'ಇದು ವಿಶೇಷ್ಯ' ಎಂಬ ಅರಿವೂ ಸಹ ಇನ್ನೊಂದು 'ವಿಶೇಷಣ' ಎಂಬ ಅರಿವಿನ ಅಧೀನವಾಗಿದೆ. 'ದಂಡೀ ದೇವದತ್ತಃ' ಎಂಬ ಒಂದು ಅರಿವು ಇದೆ. ಈ ಅರಿವಿನಲ್ಲಿ ದೇವದತ್ತನ ಅರಿವಿಲ್ಲದೆ ಅವನ ವಿಶೇಷಣವಾಗಿ ದಂಡದ ಅರಿವಾಗಲಾರದು. ಹಾಗಯೇ ದಂಡದ ಅರಿವಿಲ್ಲದೆ ಅದಕ್ಕೆ ವಿಶೇಷ್ಯವಾಗಿ ದೇವದತ್ತನ ಅರಿವಾಗಲಾರದು ಎಂದು ಭಾವ.

2. ದ್ವಿತ್ವವು ಎರಡು ಪದಾರ್ಥಗಳಲ್ಲಿರುವ ಧರ್ಮಗಳಲ್ಲಿ ಒಂದು. ಆದುದರಿಂದ ದ್ವಿತ್ವದ ಅರಿವಾಗ ಬೇಕಾದಲ್ಲಿ 'ಪದಾರ್ಥಗಳು ಎರಡು' ಎಂಬ ಅರಿವು ಮೊದಲು ಬೇಕು. ಎರಡು ಪದಾರ್ಥಗಳು ಎಂಬ ಅರಿವಾಗಬೇಕಾದಲ್ಲಿ ಭೇದದ ಅರಿವು ಬೇಕು. ಭೇದದ ಅರಿವಿಲ್ಲದೆ ದ್ವಿತ್ವದ ಅರಿವಿಲ್ಲ, ದ್ವಿತ್ವದ ಅರಿವಾಗದೆ ಭೇದದ ಅರಿವಾಗದು, ಆದುದರಿಂದ ಅನ್ಯೋನ್ಯಾಶ್ರಯ. ಹಾಗೆಯೇ ವಿಶೇಷಣ-ವಿಶೇಷ್ಯಗಳ ಅರಿವಿಲ್ಲದೇ ಭೇದದ ಅರಿವಿಲ್ಲ. ಭೇದದ ಅರಿವಿಲ್ಲದೇ ವಿಶೇಷಣ-ವಿಶೇಷ್ಯಗಲ ಅರಿವಿಲ್ಲ ಎಂದು ಅನ್ಯೋನ್ಯಾಶ್ರಯ ಎಂದು ಭಾವ.

ಮತ್ತೆ ಒಂದು ವೇಳೆ (ಭೇದದ ಅರಿವಿನಲ್ಲಿ ಅನುಯೋಗಿ ಮತ್ತು ಪ್ರತಿಯೋಗಿಗಳಾದ) ಎರಡು ಪದಾರ್ಥಗಳಲ್ಲಿ ಒಂದನ್ನು ಮಾತ್ರ (ಅನುಯೋಗಿಯನ್ನು ಮಾತ್ರ) ಭೇದವು ಆಶ್ರಯಿಸಿದೆ (ಎಂದು ಒಪ್ಪಿದರೂ, ತನ್ನ ಅರಿವಿಗೆ) ಧರ್ಮಿಪ್ರತಿಯೋಗಿಭಾವವನ್ನು ಅಪೇಕ್ಷಿಸುವುದು, ಆಗ ಅನ್ಯೋನ್ಯಾಶ್ರಯತ್ವವು (ಪ್ರಾಪ್ತವಾಗುವುದು). 'ಘಟಾತ್ ಪಟಸ್ಯ ಭೇದಃ' ಎಂಬ (ಅರಿವಿನಲ್ಲಿ) ಪಟವು ಭೇದಕ್ಕೆ ಧರ್ಮಿಯು (ಆಶ್ರಯವು), ಘಟವು ಅವಧಿಯಾಗಿ ಪ್ರತಿಯೋಗಿಯಾಗಿ ತೋರಿದರೆ, ಭೇದವು ತೋರುವುದು. (ಆದರೆ) ಧರ್ಮಿ-ಪ್ರತಿಯೋಗಿಯ ಅರಿವಾದರೋ ಭೇದದ ಅರಿವನ್ನು ಬಯಸುವುದು. ಹಾಗಾಗದ ಪಕ್ಷದಲ್ಲಿ 'ಪಟಸ್ಯ' ಎಂದು 'ಘಟಾತ್' ಎಂದು ವಿಲಕ್ಷಣವಾದ ಅರಿವು (ಷಷ್ಠ್ಯಂತವಾಗಿ ಪಂಚಮ್ಯಂತವಾಗಿ ತೋರುವುದು) ಅನುಪಪನ್ನವಾದೀತು. ಹಾಗಾಗಿ ಅನ್ಯೋನ್ಯಾಶ್ರಯತ್ವವಿರುವುದರಿಂದ ಪ್ರತ್ಯಕ್ಷದಿಂದ ಭೇದದ ಪ್ರತೀತಿಯು ಅನುಪಪನ್ನವಾಗಿದೆ ಎಂದು. ಈ ರೀತಿಯಾಗಿ ಶಂಕಿಸಿ ನಿಷೇಧಿಸುವರು 'ನ ಚ' ಎಂದು. ಹಿಂದೆ ತಿಳಿಸಿದಂತೆ ಪದಗಳಿಗೆ ಅನ್ವಯವನ್ನು ತಿಳಿಯುವುದು[1]. ಏಕೆ ಇಲ್ಲ? ಆದುದರಿಂದ

---

1. 'ನಚ ವಿಶೇಷಣವಿಶೇಷ್ಯತಯಾ...' ಈ ಮುಂತಾದ ಮೂಲದ ವಾಕ್ಯಗಳಲ್ಲಿ ಕೆಲವಂಶವನ್ನು ಅಧ್ಯಾಹಾರಮಾಡಿಕೊಳ್ಳಬೇಕು, ಮತ್ತೆ ಕೆಲವು ಶಬ್ದಗಳಿಗೆ ಲಕ್ಷಣಾವನ್ನು ಆಶ್ರಯಿಸಬೇಕು ಅದಕ್ಕಾಗಿ ಈ ಮೊದಲು ಟೀಕೆಯಲ್ಲಿ ಪೀಠಿಕಾರೂಪದಲ್ಲಿ ತಿಳಿಸಿರುವಂತೆ ವಾಕ್ಯವನ್ನು ಜೋಡಿಸಿ ಕೊಳ್ಳುವುದು. ಒಟ್ಟಿನಲ್ಲಿ ಮೂಲವನ್ನೂ ಹೀಗೆ ಅರ್ಥೈಸಿಕೊಳ್ಳುವುದು- 'ವಿಶೇಷಣ-ವಿಶೇಷ್ಯತಯಾ ಭೇದಸಿದ್ಧಿಃ' ಎನ್ನುವ ವಾಕ್ಯದಲ್ಲಿ 'ದ್ವಿತ್ವಾವಚ್ಛಿನ್ನಯೋಃ' ಎನ್ನುವುದನ್ನು ವಾಕ್ಯದ ಮೊದಲು, 'ಪ್ರತೀತ್ಯಾಂ ಸತ್ಯಾಂ' ಎನುವುದನ್ನು 'ವಿಶೇಷ್ಯತಯಾ' ಎನ್ನುವುದರ ನಂತರ ಅಧ್ಯಾಹಾರಮಾಡಿಕೊಳ್ಳಬೇಕು. 'ಭೇದಸಿದ್ಧಿಃ' ಎನ್ನುವುದನ್ನು 'ಭೇದಪ್ರತೀತಿಸಿದ್ಧಿಃ' ಎಂದು ಅರ್ಥೈಸಬೇಕು. ಆಗ ಆ ವಾಕ್ಯದ ಭಾವವು- ' ದ್ವಿತ್ವಯುಕ್ತವಾದ ಪದಾರ್ಥಗಳಲ್ಲಿ ವಿಶೇಷಣ-ವಿಶೇಷ್ಯಭಾವವು ತೋರಿದಲ್ಲಿ ಭೇದಪ್ರತೀತಿಯು ಉಂಟಾಗುವುದು' ಎಂದು. ಮತ್ತು 'ವಿಶೇಷಣ-ವಿಶೇಷ್ಯಭಾವಶ್ಚ ಭೇದಾಪೇಕ್ಷಃ' ಎನ್ನುವ ವಾಕ್ಯವನ್ನು 'ದ್ವಿತ್ವಾವಚ್ಛಿನ್ನಯೋಃ ವಿಶೇಷಣ-ವಿಶೇಷ್ಯಭಾವಪ್ರತೀತಿಶ್ಚ ಭೇದಪ್ರತೀತ್ಯಪೇಕ್ಷಾ' ಎಂದು ಪರಿವರ್ತಿಸಿಕೊಳ್ಳುವುದು, ಆಗ 'ದ್ವಿತ್ವಯುಕ್ತವಾದ ಪದಾರ್ಥಗಳಲ್ಲಿ ವಿಶೇಷಣವಿಶೇಷ್ಯಭಾವಪ್ರತೀತಿಯು ಭೇದಪ್ರತೀತಿಯನ್ನು ಬಯಸುವುದು' ಎಂದು ಅರ್ಥವು ಪ್ರಾಪ್ತವಾಗುವುದು. ಹಾಗೆಯೇ 'ಧರ್ಮಿ-ಪ್ರತಿಯೋಗ್ಯಪೇಕ್ಷಯಾ ಭೇದಸಿದ್ಧಿಃ' ಇತ್ಯಾದಿವಾಕ್ಯಗಳನ್ನು 'ಧರ್ಮಿಪ್ರತಿಯೋಗಿಜ್ಞಾನಾ-ಪೇಕ್ಷಯಾ ಭೇದಸಿದ್ಧಿಃ' 'ಭೇದಜ್ಞಾನಾಪೇಕ್ಷಯಾ ಧರ್ಮಿಪ್ರತಿಯೋಗಿತ್ವಜ್ಞಾನಸಿದ್ಧಿಃ' ಎಂದು ಪರಿವರ್ತಿಸಿಕೊಂಡು ಅರ್ಥೈಸಿಕೊಳ್ಳುವುದು ಎಂದು ಭಾವ.

ಉತ್ತರಿಸುವರು 'ಪದಾರ್ಥ..' ಎಂದು. ಧರ್ಮಿಯನ್ನು ಪದಾರ್ಥ ಎಂದು ಕರೆಯುವರು[1].

**ಭೇದವು ದ್ವಿಷ್ಠವಲ್ಲ, ಏಕಧರ್ಮಿನಿಷ್ಠವಾದ ಧರ್ಮ**

**ಅಯಮರ್ಥಃ- ನ ಭೇದೋ ಯುಗಧರ್ಮಃ । ಕಿನ್ತ್ವೇಕಸ್ಯ ಧರ್ಮೋಽಪರೇಣ ನಿರೂಪ್ಯಃ । ಘಟಪಟೌ ಭಿನ್ನಾವಿತ್ಯತ್ರಾಪಿ 'ಘಟಾತ್ ಪಟೋ ಭಿನ್ನಃ' 'ಪಟಾದ್ ಘಟೋ ಭಿನ್ನಃ' ಇತ್ಯೇವಾರ್ಥಃ । ಏವಂ 'ಘಟಪಟಯೋರ್ಭೇದಃ' ಇತ್ಯತ್ರಾಪಿ ಘಟಪಟಧರ್ಮಿಕಂ ಭೇದ-ದ್ವಯಮೇವ ಪ್ರತೀಯತೇ । ಏಕವಚನಂ ತು 'ಘಟಪಟಯೋ ರೂಪಮ್' ಇತಿವತ್ ಸಮುದಾಯಾಪೇಕ್ಷಮ್ ।**

ಇದು ಅಭಿಪ್ರಾಯ- ಭೇದವು ಯುಗಧರ್ಮವಲ್ಲ[2]. ಮತ್ತೇನು? ಒಂದರ ಧರ್ಮ, ಮತ್ತೊಂದರಿಂದ ನಿರೂಪ್ಯವಾಗಿದೆ[3]. 'ಘಟ-ಪಟೌ ಭಿನ್ನೌ' ಎನ್ನುವಲ್ಲಿ ಸಹ ಘಟದಿಂದ ಪಟವು ಭಿನ್ನ, ಪಟದಿಂದ ಘಟವು ಭಿನ್ನ ಎಂದೇ ಅರ್ಥೈಸಲಾಗುವುದು. ಇದೇ ರೀತಿಯಲ್ಲಿ 'ಘಟಪಟಯೋರ್ಭೇದಃ' ಎನ್ನುವಲ್ಲಿಯೂ ಸಹ ಘಟಪಟಧರ್ಮಿಕ ಭೇದದ್ವಯಗಳನ್ನೇ ಒಪ್ಪಲಾಗುವುದು[4].

1. ಅನುಯೋಗಿಯೂ ಪ್ರತಿಯೋಗಿಯೂ ಎರಡೂ ಪದಾರ್ಥಗಳೇ, ಆದರೆ ಭೇದವು ಅನುಯೋಗಿಯ ಸ್ವರೂಪ, ಪ್ರತಿಯೋಗಿಯ ಸ್ವರೂಪವಲ್ಲ. ಆದುದರಿಂದ ಪದಾರ್ಥ-ಸ್ವರೂಪತ್ವಾತ್ ಎನ್ನುವಲ್ಲಿನ ಪದಾರ್ಥಶಬ್ದಕ್ಕೆ ಧರ್ಮಿ ಎಂದು ಅರ್ಥ ಎಂದು ತಿಳಿಸಿರುವರು.
2. ಎರಡು ಪದಾರ್ಥಗಳಲ್ಲಿರುವ ಒಂದು ಧರ್ಮವನ್ನು ಯುಗಧರ್ಮ ಎಂದು ತಿಳಿಯುವುದು. ಭೇದವು ಪಾಲಕಿಯಂತೆ ಎರಡು ವ್ಯಕ್ತಿಗಳ ಹೆಗಲಲ್ಲಿರುವ ಒಂದೇ (ಪದಾರ್ಥವಲ್ಲ) ಧರ್ಮವಲ್ಲ. ಧರ್ಮಿಯಲ್ಲಿ ಮಾತ್ರ ಇರುವ ಉಪಮೆಯಂತಹ ಧರ್ಮ ಎಂದು ಭಾವ.
3. ಭೇದವು ಸಾದೃಶ್ಯಾದಿಗಳಂತಹ ಪದಾರ್ಥ. ಗೋ-ಗವಯಗಳಿಗೆ ಸಾದೃಶ್ಯವಿದೆ. ಗೋವಿನಲ್ಲಿರುವ ಸಾದೃಶ್ಯರೂಪಧರ್ಮವು ಗವಯದಿಂದ ನಿರೂಪಿತವಾಗಿದೆ, 'ಗವಯ-ಸದೃಶೋಽಯಂ ಗೌಃ' ಎನ್ನುವಂತೆ 'ಘಟಾತ್ ಪಟೋ ಭಿನ್ನಃ' ಎಂದು ಭಾವ.
4. 'ಘಟ-ಪಟೌ ಭಿನ್ನೌ' ಎಂದು ಘಟಪಟಗಳಲ್ಲಿ ಇರಬಹುದಾದ ಒಂದೇ ಭೇದವು ಪ್ರತೀತಮಾನವಾಗಿದೆ. ಹಾಗೇ 'ಘಟಪಟಯೋರ್ಭೇದಃ'ಘಟ-ಪಟಗಳಲ್ಲಿ ಇರಬಹುದಾದ ಒಂದೇ ಭೇದುವು ಪ್ರತೀಯಮಾನವಾಗಿದೆ. ಹೀಗಿರುವಾಗ ಘಟಪಟಗಳಲ್ಲಿ ಇರುವುದು ಒಂದೇ ಭೇದವು ಎರಡು ಅಲ್ಲ ಎನ್ನುವುದು ಹೇಗೆ? ಎನ್ನುವ ಸಂದೇಹಕ್ಕೆ ಅವಕಾಶವಿಲ್ಲ. ಅಲ್ಲೂ ಸಹ ಭೇದದ್ವಯವೇ ಭಾಸಮಾನವಾಗುವುದು ಎಂದು ಭಾವ.

ಏಕವಚನವಾದರೋ 'ಘಟಪಟಯೋಃ ರೂಪವ್' ಎನ್ನುವಂತೆ ಸಮುದಾಯದಲ್ಲಿನ ಏಕವಚನ[1].

**ಸ ಚ ಭೇದೋ ಧರ್ಮಿಣಃ ಸ್ವರೂಪಮೇವ । 'ತೇನ ಧರ್ಮಿಪ್ರತೀತಿರೇವ ಭೇದಪ್ರತೀತಿಃ' ಇತಿ ಪ್ರತೀತಿದ್ವಯಾಭಾವಾನ್ನಾನ್ಯೋನ್ಯಾಶ್ರಯತ್ವಮ್ । ಘಟಸ್ಯ ಪ್ರತಿಯೋಗಿತಾ ಚ ಪಟಪ್ರತಿಯೋಗಿಕತದ್ಧರ್ಮಿಕಭೇದ-ನಿಬಂಧನೈವ । ಸೋಽಪಿ ಘಟಸ್ಯ ಸ್ವರೂಪಮೇವ । ತಥಾಽಪಿ ಪ್ರತಿಪನ್ನಭೇದಸ್ಯ ಪ್ರತಿಯೋಗಿತ್ವಾದ್ ಘಟಾತ್ ಪಟಸ್ಯ ಭೇದಸಿದ್ಧೌ ಪಟಾದ್ ಘಟಸ್ಯ ಭೇದಸಿದ್ಧಿರಿತ್ಯನ್ಯೋನ್ಯಾಶ್ರಯತ್ವಮ್ ಇತಿ ಚೇನ್ನ । ವಿದ್ಯಮಾನ-ಭೇದಸ್ಯ ಪ್ರತೀತಿಮಾತ್ರೇಣ ಪ್ರತಿಯೋಗಿತ್ವೋಪಪತ್ತೇರಿತಿ ।**

ಆ ಭೇದವಾದರೋ ಧರ್ಮಿಯ ಸ್ವರೂಪವೇ. ಆದುದರಿಂದ ಧರ್ಮಿಯ ಪ್ರತೀತಿಯೇ ಭೇದದ ಪ್ರತೀತಿಯು ಎಂದು, ಎರಡು ಪ್ರತೀತಿಗಳು ಇಲ್ಲವಾದುದರಿಂದ ಅನ್ಯೋನ್ಯಾಶ್ರಯತ್ವವು ಇಲ್ಲ[2]. ಘಟದ ಪ್ರತಿಯೋಗಿತ್ವವಾದರೋ; ಪಟಪ್ರತಿಯೋಗಿಕವಾದ ಆ (ಘಟ) ಧರ್ಮಿಕ

---

1. 'ಘಟ-ಪಟೌ ಭಿನ್ನೌ' ಎನ್ನುವಲ್ಲಿಯಾದರೋ ದ್ವಿವಚನವು ಇರುವುದರಿಂದ ಏನಾದರೂ ಅರ್ಥಾಂತರವನ್ನು ಊಹಿಸಲು ಅವಕಾಶವಿದೆ, ಆದರೆ 'ಘಟಪಟಯೋರ್ಭೇದಃ' ಎನ್ನುವಲ್ಲಿ 'ಭೇದಃ' ಎಂದು ಏಕವಚನವಿರುವುದರಿಂದ ಭೇದವನ್ನು 'ಯುಗಧರ್ಮ- ಎರಡು ಪದಾರ್ಥಗಳಲ್ಲಿರುವ ಒಂದೇ ಧರ್ಮ' ಎಂದು ಒಪ್ಪಬೇಕಲ್ಲವೇ ಎನ್ನುವ ಸಂದೇಹವನ್ನು ಪರಿಹರಿಸುವರು, ಆಲ್ಲಿಯೂ ಯುಗಧರ್ಮ ಎಂದು ಒಪ್ಪುವ ಅಗತ್ಯವಿಲ್ಲ, ಪ್ರತ್ಯೇಕವಾದ ಧರ್ಮ ಎಂದೇ ತಿಳಿಯುವುದು. ಅಲ್ಲಿ ಕಾಣುವ ಏಕವಚನವು, 'ಘಟಪಟಯೋ ರೂಪಂ' ಎನ್ನುವಂತೆ ಸಮುದಾಯದಲ್ಲಿನ ಏಕತ್ವವನ್ನು ಸೂಚಿಸುವುದೇ ಹೊರತು, ಧರ್ಮದಲ್ಲಿನ ಸಂಖ್ಯಾವನ್ನಲ್ಲ. ಈ ವಿಚಾರವನ್ನು ಅನುವ್ಯಾಖ್ಯಾನದಲ್ಲಿ2.2.ವೈಶೇ.121. 'ತತ್ರೈಕವಚನಂ ಯತ್ತದ್ವಿಪ್ರಾಣಾಂ ಭೋಜನಂ ಯಥಾ' ಎಂಬುದಾಗಿ ಉಪದೇಶಿಸಿರುವರು ಎಂದು ಭಾವ.

2. ಭೇದವು ವಿಶೇಷಣವಾಗಿಯೋ ವಿಶೇಷ್ಯವಾಗಿಯೋ ತೋರುವುದು, ಹಾಗಾಗಿ ಧರ್ಮ-ಧರ್ಮಿ ಈ ಎರಡರ ಭಾನವಿಲ್ಲದೇ ಭೇದದ ಭಾನವು ಅಶಕ್ಯ ಎಂದು ಹಿಂದೆ ಸಂದೇಹಿಸಲಾಗಿತ್ತು. ಈಗ ಆ ಸಂದೇಹಕ್ಕೆ ಎಡೆಯಿಲ್ಲ. ಧರ್ಮವಾದ ಭೇದವು ಧರ್ಮಿಯ ಸ್ವರೂಪ ಎಂದು ಒಪ್ಪಲಾಗಿದೆ. ಧರ್ಮಿಯ ಭಾನವಾದಾಗ ಅದರ ಧರ್ಮವಾದ ಭೇದದ ಭಾನವೂ ರೂಪಾದಿಗಳ ಭಾನದಂತೆ ಪ್ರಾಪ್ತವಾಗುವುದು ಹಾಗಾಗಿ ಅನ್ಯೋನ್ಯಾಶ್ರಯತ್ವರೂಪ ದೋಷದ ಪ್ರಸಕ್ತಿಯಿಲ್ಲಎಂದು ಭಾವ.

ಭೇದದಿಂದ ನಿರೂಪಿತವಾದುದೇ ಆಗಿದೆ[1]. ಅದಾದರೋ (ಘಟಾನು-ಯೋಗಿಕತ್ವಾಂಶವಾದರೋ) ಘಟದ ಸ್ವರೂಪವೇ ಆಗಿದೆ[2]. ಹಾಗಾದರೂ ತೋರುತ್ತಿರುವ ಭೇದದ ಪ್ರತಿಯೋಗಿಯಾದ ಘಟದಿಂದ ಪಟಕ್ಕೆ ಭೇದವು ಸಿದ್ಧವಾದಲ್ಲಿ ಮಾತ್ರ ಪಟದಿಂದ ಘಟಕ್ಕೆ ಭೇದವೂ ಸಿದ್ಧವಾಗುವುದು ಆದುದರಿಂದ (ಪುನಃ) ಅನ್ಯೋನ್ಯಾಶ್ರಯತ್ವವು (ಉಂಟು) ಎಂದರೆ, ಇದು ಸರಿಯಲ್ಲ. ಇರುವ ಭೇದದ (ಭೇದವನ್ನು ಹೊಂದಿರುವ ಘಟಾದಿ ಧರ್ಮಿಗಳ) ಕೇವಲ ಪ್ರತೀತಿಯಿಂದ ಪ್ರತಿಯೋಗಿತ್ವವು ಉಪಪನ್ನವಾಗುವುದರಿಂದ ಎಂದು[3].

---

1. ಭೇದದ ಭಾನವಾಗಬೇಕಾದಲ್ಲಿ ಅನುಯೋಗಿ ಮತ್ತು ಪ್ರತಿಯೋಗಿ ಇವೆರಡರ ಭಾನವಾಗ ಬೇಕು. ಅಂದರೆ ಪಟಾನುಯೋಗಿಕ, ಘಟಪ್ರತಿಯೋಗಿಕವಾಗಿ ಭೇದವು ಭಾನವಾಗುವುದು. ಪಟಾನುಯೋಗಿಕತ್ವಾಂಶವು ಪಟದ ಸ್ವರೂಪವಾದುದರಿಂದ ಪಟದ ಜೊತೆಯಲ್ಲಿಯೇ ತೋರಿದರೂ, ಘಟಪ್ರತಿಯೋಗಿಕತ್ವವು ಅದರಿಂದ ಭಿನ್ನವಾದುದರಿಂದ ಅದರ ಭಾನವು ಪ್ರತ್ಯೇಕವಾಗಿಯೇ ಆಗಬೇಕು, ಅದರ ಭಾನವಾಗದೇ ಭೇದದ ಭಾನವಿಲ್ಲ. ಪ್ರತಿಯೋಗಿ ಅನುಯೋಗಿ ಎಂಬ ಭೇದದ ಅರಿವಿಲ್ಲದೇ ಪಟ-ಘಟಗಳ ಭೇದದ ಅರಿವಿಲ್ಲ. ಹಾಗಾಗಿ ಅನ್ಯೋನ್ಯಾಶ್ರಯತ್ವವು ಪುನಃ ಅಪರಿಹಾರ್ಯ ಎಂಬ ಸಂದೇಹವನ್ನು ಪರಿಹರಿಸುವರು. ಘಟಪ್ರತಿಯೋಗಿಕತ್ವಾಂಶವು ಒಂದು ಭೇದದ ಅರಿವೇ ಆಗಿದೆ. ಈ ಅರಿವು ಪಟಪ್ರತಿಯೋಗಿಕ ಘಟಧರ್ಮಿಕವಾದದ್ದು. ಅಂದರೆ ಘಟದ ಅರಿವಿನಿಂದಲೇ ಈ ಅರಿವು ಪ್ರಾಪ್ತವಾಗುವುದು ಎಂದು ಭಾವ.

2. ಭೇದಭಾನದಲ್ಲಿನ ಒಂದು ಅಂಶವಾದ ಅನುಯೋಗಿತ್ವವು ಧರ್ಮಿಯ (ಪಟದ) ಸ್ವರೂಪ, ಇನ್ನು ಪ್ರತಿಯೋಗಿಕತ್ವಾಂಶವು ಧರ್ಮಿಯಿಂದ (ಪಟದಿಂದ) ಭಿನ್ನವಾದರೂ ಅದು ಘಟಾನುಯೋಗಿಕ ಧರ್ಮವಾಗಿದೆ. ಅದು ಘಟದ ಸ್ವರೂಪವೇ ಆಗಿದೆ. ಹಾಗಾಗಿ ಘಟದ ಭಾನವಾದಲ್ಲಿ ಆ ಭೇದವೂ ಭಾನವಾಗುವುದು ಎಂದು ಭಾವ.

3. ಪಟಾನುಯೋಗಿಕ ಘಟಪ್ರತಿಯೋಗಿಕ ಭೇದದ ಪ್ರತಿಯೋಗಿತ್ವಕ್ಕೆ ಅಧಿಕರಣವಾದ ಘಟಾದಿಗಳ ಭಾನ ಮಾತ್ರದಿಂದಲೇ ಆ ಪದಾರ್ಥಕ್ಕೆ ಪ್ರತಿಯೋಗಿತ್ವವು ಪ್ರಾಪ್ತವಾಗುವುದು. ಅಂದರೆ ಪ್ರತಿಯೋಗಿತ್ವೇನ ಘಟಾದಿಗಳ ಭಾನದ ಅಗತ್ಯವಿಲ್ಲ. ಪ್ರತಿಯೋಗಿತ್ವೇನ ಭಾನವಾಗ ಬೇಕು ಎಂದಾದಲ್ಲಿ ಅನ್ಯೋನ್ಯಾಶ್ರಯತ್ವಕ್ಕೆ ಎಡೆಯಿತ್ತು, ಈಗ ಆ ದೋಷಕ್ಕೆ ಪ್ರಸಕ್ತಿಯು ಇಲ್ಲ. ಹೇಗೆ ಅರಣ್ಯಕ್ಕೆ ಹೋದಾಗ ಗವಯವನ್ನು ಕಂಡ ವ್ಯಕ್ತಿಗೆ ಆ ಕೂಡಲೇ 'ಗವಯವು ಗೋವಿನ ಸದೃಶವಾಗಿದೆ' ಎಂಬ ಅರಿವು ಪ್ರಾಪ್ತವಾಗುವುದು. ಈ ಅರಿವಿನಲ್ಲಿ ಗವಯವು ಸಾದೃಶ್ಯಕ್ಕೆ ಅನುಯೋಗಿಯೂ, ಗೋವು ಪ್ರತಿಯೋಗಿಯಾಗಿಯೂ ಭಾನವಾಗಿದೆ. ಆದರೆ

ಪುಟ 553ರಲ್ಲಿ........

**ಏತೇನ ವಿಶೇಷಣವಿಶೇಷ್ಯಭಾವಪ್ರತೀತೇಃ ಭೇದಪ್ರತೀತ್ಯಧೀನತ್ವಸ್ಯ ದಣ್ಡ್ಯಾದೌ ದರ್ಶನೇನ ಭೇದಪ್ರತೀತಿಪರಮ್ಪರಯಾ ಅನವಸ್ಥಾ-ಪ್ರಸಙ್ಗೋಽಪಿ ಪರಾಸ್ತಃ ।**

ಇದರಿಂದ (ಭೇದವು ಧರ್ಮಿಯ ಸ್ವರೂಪ ಎಂದು ಹೇಳಿದ್ದರಿಂದ) 'ವಿಶೇಷಣವಿಶೇಷ್ಯಭಾವದ ಅರಿವು ಭೇದಜ್ಞಾನದ ಅಧೀನ' ಎನ್ನುವುದು 'ದಂಡೀ' ಮುಂತಾದ ಸಂದರ್ಭದಲ್ಲಿ (ದಂಡೀ ಎಂಬಿತ್ಯಾದಿ ವಿಶಿಷ್ಟದ ಅರಿವು ಪ್ರಾಪ್ತವಾಗುವಾಗ ಅವಶ್ಯ ಎಂದು) ಕಂಡಿರುವುದರಿಂದ, ಭೇದದ ಅರಿವಿನ ಪರಂಪರೆಯಿಂದ ಅನವಸ್ಥಾ ಪ್ರಸಂಗವು ಪ್ರಾಪ್ತವಾಗುವುದು ಎಂಬುದೂ ನಿರಾಕೃತವಾಯಿತು[1].

---

...... **ಪುಟ 552 ರಿಂದ**

ಆತನಿಗೆ ಈ ಮುನ್ನ ಗೊತ್ತ್ವೇನ ಗೋವಿನ ಅರಿವು ಇದೆಯೇ ಹೊರತು, ಪ್ರತಿಯೋಗಿತ್ವೇನ ಗೋವಿನ ಅರಿವು ಇರಲಿಲ್ಲ. ಹಾಗಿದ್ದರೂ ಗೋಪ್ರತಿಯೋಗಿಕ ಗವಯಾನುಯೋಗಿಕ ಸಾದೃಶ್ಯದ ಅರಿವು ಆ ವ್ಯಕ್ತಿಗೆ ಆಗಿರುವುದು ಅನುಭವದಲ್ಲಿ ತಿಳಿದ ಸಂಗತಿ. ಹಾಗೆಯೇ ಕೇವಲ ಘಟತ್ವೇನ ಘಟದ ಅರಿವು ಇದ್ದರೂ, ಪ್ರತಿಯೋಗಿತ್ವೇನ ಅರಿವು ಇಲ್ಲದಿದ್ದರೂ ಪಟಧರ್ಮಿಕ ಘಟಪ್ರತಿಯೋಗಿಕ ಭೇದದ ಅರಿವು ಪ್ರಾಪ್ತವಾಗಲು ಯಾವುದೇ ಪ್ರತಿಬಂಧಕವು ಇಲ್ಲ ಎಂದು ಭಾವ.

1. 'ಘಟಪಟೌ ಭಿನ್ನೌ' ಎನ್ನುವಲ್ಲಿ ಭೇದವು ವಿಶೇಷಣ , ಭೇದದ ಧರ್ಮಿಯಾದ ಘಟಪಟಗಳು ವಿಶೇಷ್ಯ ಎಂದು ಈ ಹಿಂದೆ ಪ್ರತಿಪಾದಿಸಲಾಗಿದೆ. ಈ ವಿಶೇಷಣವಿಶೇಷ್ಯದ ಅರಿವಾಗಬೇಕಾದಲ್ಲಿ ಅವುಗಳಲ್ಲಿನ ಭೇದದ ಅರಿವು ಆ ಮುನ್ನ ಅವಶ್ಯಕ. 'ದಂಡೀ ದೇವದತ್ತಃ' ಎನ್ನುವ ಅರಿವು ಪ್ರಾಪ್ತವಾಗುವ ಮುನ್ನ, ವಿಶೇಷಣವಾದ ದಂಡ ಮತ್ತು ವಿಶೇಷ್ಯನಾದ ದೇವದತ್ತ ಈ ಎರಡು ಪದಾರ್ಥಗಳಲ್ಲಿನ ಭೇದದ ಅರಿವು ಬೇಕು ಎನ್ನುವುದು ಎಲ್ಲರ ಅನುಭವದಲ್ಲಿದೆ. ಹಾಗಾಗಿ ಭೇದ ಅರಿವಿಲ್ಲದೆ ವಿಶೇಷಣ ವಿಶೇಷ್ಯಭಾವದ ಅರಿವಿಲ್ಲ, ವಿಶೇಷಣವಿಶೇಷ್ಯಭಾವದ ಅರಿವಿಲ್ಲದೇ ಭೇದದ ಅರಿವಾಗದು ಹಾಗಾಗಿ 'ಭೇದವು ಪ್ರತ್ಯಕ್ಷದಿಂದ ವೇದ್ಯ' ಎಂದು ಒಪ್ಪಿದಲ್ಲಿ ಅನ್ಯೋನ್ಯಾಶ್ರಯತ್ವ ದೋಷವು ಪ್ರಾಪ್ತವಾಗುವುದು ಎಂದು ಈ ಹಿಂದೆ ಸಂದೇಹಿಸಲಾಗಿತ್ತು. ವಿಶೇಷಣವು- ಭೇದವು, ವಿಶೇಷ್ಯದ- ಪದಾರ್ಥದ ಸ್ವರೂಪ ಎಂದು ಪ್ರತಿಪಾದಿಸಿದ್ದರಿಂದ, ವಿಶೇಷ್ಯದ ಅರಿವಾಗುವಾಗಲೇ ಆ ಪದಾರ್ಥಗಳಲ್ಲಿನ ವಿಶೇಷಣವಾದ ಭೇದದ ಅರಿವೂ ಆಗುವುದು ಹಾಗಾಗಿ ಆ ಅನ್ಯೋನ್ಯಾಶ್ರಯತ್ವದ ಶಂಕೆಗೆ ಎಡೆಯಿಲ್ಲ ಎಂದು ಭಾವ.

**ಧರ್ಮಿಯ ಸ್ವರೂಪವಾದ ಭೇದವು ಧರ್ಮಿಯೊಡನೆ ಭಾನವಾಗುವುದು**

**ತಥಾ ಪ್ರತ್ಯಕ್ಷಂ ಕಿಂ ಭೇದಮೇವ ಗೋಚರಯೇದುತ ವಸ್ತ್ವಪಿ । ನಾऽದ್ಯಃ, 'ಭೇದಃ' ಇತ್ಯೇವ ಪ್ರತೀತ್ಯಭಾವಾತ್ । ದ್ವಿತೀಯೇऽಪಿ ಕಿಂ ಭೇದಪೂರ್ವಂ ವಸ್ತು ಗೋಚರಯೇದುತ ವಸ್ತುಪೂರ್ವಂ ಭೇದಂ ಯುಗಪದ್ವೋಭಯಮ್ । ನಾऽದ್ಯಃ, ಭೇದ ಇತ್ಯೇವಾಪ್ರತೀತೇಃ, ವಿರಮ್ಯ ವ್ಯಾಪಾರಾಯೋಗಾಚ್ಚ । ಅತ ಏವ ನ ದ್ವಿತೀಯಃ , ನಾಪಿ ತೃತೀಯಃ, ವಸ್ತುಪ್ರತೀತೇರ್ಭೇದಪ್ರತೀತಿಕಾರಣತ್ವೇನ ಯೌಗಪದ್ಯಾಯೋಗಾತ್, ಇತ್ಯೇತದಪಿ ನಿರವಕಾಶಮಿತಿ ।**

ಹಾಗಾದಲ್ಲಿ ಪ್ರತ್ಯಕ್ಷವು ಕೇವಲ ಭೇದವನ್ನು ಮಾತ್ರ ತಿಳಿಸುವುದೋ, ಅಥವಾ ವಸ್ತುವನ್ನೂ ತಿಳಿಸುವುದೋ? ಮೊದಲ ಪಕ್ಷವು ಸರಿಯಾಗದು, ಕೇವಲ 'ಭೇದ' ಎಂದು ಅರಿವು (ಎಲ್ಲೂ, ಯಾರಿಗೂ) ಇಲ್ಲದಿರುವುದರಿಂದ. ಎರಡನೆಯ ಪಕ್ಷದಲ್ಲೂ ಸಹ (ಪ್ರತ್ಯಕ್ಷವು ವಸ್ತುವನ್ನೂ ಗ್ರಹಿಸುವುದು ಎನ್ನುವ ಪಕ್ಷದಲ್ಲಿ) ಭೇದವು ಮೊದಲು ತೋರಿ ನಂತರ ವಸ್ತುವು ತೋರುವುದೋ ಅಥವಾ ವಸ್ತುವು ಮೊದಲು ತೋರಿ ನಂತರದಲ್ಲಿ ಭೇದವು ತೋರುವುದೋ ಅಥವಾ ಎರಡೂ ಒಟ್ಟಿಗೆ ತೋರುವುದೋ? ಮೊದಲ ಪಕ್ಷವು ಸರಿಯಾಗದು, ಕೇವಲ 'ಭೇದ' ಎಂದು ಅರಿವು ಇಲ್ಲದಿರುವುದರಿಂದ, ವಿರಮಿಸಿ ವ್ಯಾಪಾರವು ಇಲ್ಲದಿರುವುದರಿಂದಲೂ[1]. ಆದುದರಿಂದಲೇ (ವಿರಮಿಸಿ ವ್ಯಾಪಾರವು ಅಸಂಗತವಾದುದರಿಂದಲೇ) ಎರಡನೆಯ (ಮೊದಲು ಪದಾರ್ಥ, ಅನಂತರ ಭೇದ ಎಂಬ) ಪಕ್ಷವು ಸರಿಯಾಗದು. ಮೂರನೆಯ ಪಕ್ಷವೂ ಸರಿಯಾಗದು, ವಸ್ತುವಿನ ಪ್ರತೀತಿಯು ಭೇದದ ಪ್ರತೀತಿಗೆ ಕಾರಣವಾದುದರಿಂದ ಒಟ್ಟಿಗೆ ಎರಡೂ (ಭೇದದ ಮತ್ತು ಪದಾರ್ಥದ) ತೋರುವಿಕೆಯು ಅಸಂಭಾವಿತ

1. ಒಮ್ಮೆ ಇಂದ್ರಿಯಕ್ಕೆ ಪದಾರ್ಥಗಳಿಂದ ಸನ್ನಿಕರ್ಷವಾದ ನಂತರದಲ್ಲಿ ಒಟ್ಟಿಗೆ ಪದಾರ್ಥ ಮತ್ತು ಅದರಲ್ಲಿನ ಗುಣ ಎಲ್ಲವೂ ತೋರುವುದು. ಪ್ರಥಮಕ್ಷಣದಲ್ಲಿ ಒಂದು ವಿಷಯ ದ್ವಿತೀಯಕ್ಷಣದಲ್ಲಿ ಮತ್ತೊಂದು ವಿಷಯ ಎಂದು ವಿರಮಿಸಿ, ವಿರಮಿಸಿ ಅರಿವು ಉತ್ಪನ್ನವಾಗುವುದಿಲ್ಲ. ಘಟವು ತೋರಿದಾಗ ಅದರಲ್ಲಿನ ಘಟತ್ವವೂ, ಕೃಷ್ಣವರ್ಣವೂ ಒಟ್ಟಿಗೆ ತೋರುವುದು. ವಿರಮಿಸಿ ವ್ಯಾಪಾರವು ಚೇತನನ ಗುಣ, ಜಡವಾದ ಪ್ರತ್ಯಕ್ಷದ ಗುಣವಾಗಲಾರದು ಎಂದು ಭಾವ.

ವಾದುದರಿಂದ, ಈ ಎಲ್ಲದ್ದಕ್ಕೂ (ಈ ಎಲ್ಲ ಸಂದೇಹಗಳಿಗೆ) ಅವಕಾಶವಿಲ್ಲ ಎಂದು[1].

**ಸಾಪೇಕ್ಷಕ ಪ್ರತೀತವಾದರೂ ಭೇದವೂ ಧರ್ಮಿಸ್ವರೂಪ ಐಕ್ಯದಂತೆ**

**ನಚ ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸ್ಯಾಸ್ವರೂಪತ್ವಮ್, ಐಕ್ಯವತ್ ಸ್ವರೂಪಸ್ಯೈವ ತಥಾತ್ವಾತ್ ।**

ಅನುಯೋಗಿ-ಪ್ರತಿಯೋಗಿಗಳ ಅರಿವನ್ನು ಬಯಸುವ ಭೇದಕ್ಕೆ (ನಿರಪೇಕ್ಷವಾಗಿ ತೋರುವ ಧರ್ಮಿಯ) ಸ್ವರೂಪತ್ವವು ಇಲ್ಲ, ಎನ್ನುವುದು ತರವಲ್ಲ, ಐಕ್ಯದಂತೆ (ಧರ್ಮಿಯ) ಸ್ವರೂಪವೇ ಆದ ಭೇದಕ್ಕೆ ಸಾಪೇಕ್ಷಪ್ರತೀತಕತ್ವವು ಯುಕ್ತವಾಗುವುದರಿಂದ.

ಭವೇದಯಂ ಪರಿಹಾರೋ ಯದಿ ಭೇದಸ್ಯ ಧರ್ಮಿಸ್ವರೂಪತ್ವಂ ಸ್ಯಾತ್, ನ ಚ ತದ್ ಯುಕ್ತಮ್ । ಧರ್ಮಿಸ್ವರೂಪಂ ಹಿ ಪರಪ್ರತೀತಿನಿರಪೇಕ್ಷಮೇವ ಪ್ರತೀಯತೇ । ನ ಹಿ ಕಸ್ಯಚಿದ್ 'ಅಸ್ಮಾದಯಂ ಪಟಃ' ಇತಿ ವಾ 'ಅಸ್ಮಾದಸ್ಯ ಪಟಃ' ಇತಿ ವಾ ಪ್ರತೀತಿರಸ್ತಿ । ಕಿಂ ನಾಮ 'ಪಟ' ಇತ್ಯೇವ । ಭೇದಸ್ತು 'ಘಟಾತ್ ಪಟೋ ಭಿನ್ನಃ' ಇತಿ ವಾ 'ಘಟಾದ್ ಪಟಸ್ಯ ಭೇದಃ' ಇತಿ ವಾ ಧರ್ಮಿಪ್ರತಿಯೋಗಿಪ್ರತೀತ್ಯಪೇಕ್ಷ್ಯೈವ ಪ್ರತೀಯತೇ, ನ ತು ಜಾತುಚಿತ್ 'ಭೇದಃ' ಇತ್ಯೇವ । ತಥಾಚ ಸಾಪೇಕ್ಷನಿರಪೇಕ್ಷತಾಲಕ್ಷಣವಿರುದ್ಧಧರ್ಮಾಧಿಕರಣಯೋಃ ಭೇದಧರ್ಮಿಸ್ವರೂಪಯೋಃ ಕಥಮೈಕ್ಯಂ ಸ್ಯಾತ್? ಇತ್ಯಾಶಙ್ಕ್ಯಾऽಹ 'ನ ಚ' ಇತಿ । 'ಧರ್ಮಿಪ್ರತಿಯೋಗೀ' ಇತಿ ತತ್ಪ್ರತೀತಿರುಪಲಕ್ಷ್ಯತೇ । 'ಅಪೇಕ್ಷಯಾ ಪ್ರತೀಯಮಾನತ್ವಾದ್' ಇತಿ ಶೇಷಃ । **ಅಸ್ವರೂಪತ್ವಂ**- ಪರಪ್ರತೀತಿನಿರಪೇಕ್ಷಪ್ರತೀತಿಕಧರ್ಮಿಸ್ವರೂಪತ್ವಾಭಾವಃ । ಕುತೋ ನ? ಇತ್ಯತ ಆಹ 'ಐಕ್ಯವತ್' ಇತಿ । ಯಥಾ ಅನಪೇಕ್ಷಪ್ರತೀತಿಕಪ್ರತ್ಯಕ್ಚೈತನ್ಯಸ್ವರೂಪಸ್ಯಾಪಿ ಜೀವಬ್ರಹ್ಮೈಕ್ಯಸ್ಯ 'ಜೀವಸ್ಯ ಬ್ರಹ್ಮಣಾ

1. ಭೇದವು ವಸ್ತುವಿನ ಸ್ವರೂಪ ಎಂದು ಪ್ರತಿಪಾದಿಸಿರುವುದರಿಂದ ಈ ತರಹದ ಯಾವ ವಿಧವಾದ ಸಂದೇಹಕ್ಕೆ ಅವಕಾಶವಿಲ್ಲ, ಹೇಗೆ ಘಟವು ತೋರಿದಾಗ ಅದರಲ್ಲಿ ರೂಪವೂ ತೋರುವುದೋ ಹಾಗೆ ವಸ್ತುವು ತೋರುವಾಗಲೇ ಅದರಲ್ಲಿನ ಭೇದವೂ ತೋರುವುದು ಎಂದು ಭಾವ.

ಐಕ್ಯಮ್' ಇತಿ ಧರ್ಮಿಪ್ರತಿಯೋಗಿಪ್ರತೀತ್ಯಪೇಕ್ಷಯಾ ಪ್ರತೀಯಮಾನತ್ವಂ ಪರೇಣಾಙ್ಗೀಕ್ರಿಯತೇ, ತಥಾ ನಿರಪೇಕ್ಷಪ್ರತೀತಿಕಧರ್ಮಿಸ್ವರೂಪಸ್ಯೈವ ಭೇದಸ್ಯ ಧರ್ಮಿಪ್ರತಿಯೋಗಿಪ್ರತೀತ್ಯಪೇಕ್ಷಯಾ ಪ್ರತೀಯಮಾನತ್ವೋಪ-ಪತ್ತೇಃ ।

ಒಂದು ವೇಳೆ ಭೇದವು ಧರ್ಮಿಯ ಸ್ವರೂಪ ಎನ್ನುವುದು ದಿಟವಾದಲ್ಲಿ ಈ ಪರಿಹಾರವು (ಯುಕ್ತವಾಗುತ್ತಿತ್ತು), ಆದರೆ ಇದು ಸರಿಯಾಗದು. ಧರ್ಮಿಯ ಸ್ವರೂಪವಾದರೊ ಇನ್ನೊಂದರ ಪ್ರತೀತಿಯನ್ನು ಅಪೇಕ್ಷಿಸದೇ ತೋರುವುದು. ಯಾರಿಗೂ 'ಇದರಿಂದ ಇದು ಪಟ' ಎಂದಾಗಲಿ, ಅಥವಾ 'ಇದರಿಂದ ಇದರ ಪಟ' ಎಂದಾಗಲಿ ಪ್ರತೀತಿಯು ಕಂಡಿಲ್ಲ. ಮತ್ತೇ ಹೇಗೆ? 'ಪಟಃ' ಎಂದೇ ತೋರುವುದು. ಭೇದವಾದರೋ 'ಘಟದಿಂದ ಪಟವು ಭಿನ್ನವಾಗಿದೆ' ಎಂದೋ ಅಥವಾ ಪಟಕ್ಕೆ ಘಟದಿಂದ ಭೇದವಿದೆ' ಎಂದೋ, ಧರ್ಮಿ-ಪ್ರತಿಯೋಗಿಗಳ ಪ್ರತೀತಿಯನ್ನು ಅಶ್ರಯಿಸಿಕೊಂಡೇ ತೋರುವುದೇ ಹೊರತು, ಎಂದೂ 'ಭೇದಃ' ಎಂದಿಷ್ಟೇ (ತೋರದು). ಹಾಗಾಗಿ ಸಾಪೇಕ್ಷತ್ವ-ನಿರಪೇಕ್ಷತ್ವ ರೂಪವಾದ ವಿರುದ್ಧ ಧರ್ಮಗಳಿಗೆ ಅಧಿಕರಣಗಳಾದ ಭೇದ ಮತ್ತು ಧರ್ಮಿಗಳಿಗೆ ಐಕ್ಯವು ಹೇಗೆ ಸಮಂಜಸವಾದೀತು? ಎಂದು ಶಂಕಿಸಿಕೊಂಡು ಹೇಳುತ್ತಾರೆ 'ನ ಚ' ಎಂದು. 'ಧರ್ಮಿಪ್ರತಿಯೋಗಿ' ಎನ್ನುವುದು ಅದರ ಅರಿವನ್ನು ಸೂಚಿಸುವುದು. 'ಅಪೇಕ್ಷಯಾ ಪ್ರತೀಯಮಾನತ್ವಾತ್' ಎಂದು ಶೇಷಪೂರಣಮಾಡಿಕೊಳ್ಳುವುದು. ಅಸ್ವರೂಪತ್ವಂ- ಮತ್ತೊಂದರ ಅರಿವಿನ ಅಪೇಕ್ಷೆಯಿಲ್ಲದೆ ತೋರುವ ಧರ್ಮಿಯ ಸ್ವರೂಪತ್ವವು ಇಲ್ಲದಿರುವುದು[1]. ಏಕೆ ಅಲ್ಲ? ಎಂದಲ್ಲಿ ಉತ್ತರಿಸುವರು 'ಐಕ್ಯವತ್' ಎಂದು. ಹೇಗೆ (ಮತ್ತೊಂದರ) ಅರಿವಿನ ನೆರವಿಲ್ಲದೇ ತೋರುವ ಪ್ರತ್ಯಕ್‌ಚೈತನ್ಯದ ಸ್ವರೂಪವಾದರೂ ಜೀವಬ್ರಹ್ಮೈಕ್ಯವು 'ಜೀವನಿಗೆ ಬ್ರಹ್ಮನಿಂದ ಐಕ್ಯ' ಎಂದು 'ಧರ್ಮಿ ಮತ್ತು ಪ್ರತಿಯೋಗಿಯ ಪ್ರತೀತಿಯ ನೆರವಿನಿಂದ ತೋರುವುದು'

1. 'ನ ಚ ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸ್ಯಾಸ್ವರೂಪತ್ವಂ' ಎನ್ನುವ ವಾಕ್ಯದ ಒಟ್ಟು ಭಾವವು- 'ಧರ್ಮಿ ಮತ್ತು ಪ್ರತಿಯೋಗಿಗಳ ಅರಿವಿನ ನೆರವಿನಿಂದ ತೋರುವ ಭೇದವು, ಅನ್ಯ ಪದಾರ್ಥದ ಅರಿವಿನ ನೆರವು ಇಲ್ಲದೇ ತೋರುವ ಪದಾರ್ಥದ (ಧರ್ಮಿಯ) ಸ್ವರೂಪವಲ್ಲ ಎಂದೆನ್ನಲಾಗದು' ಎಂದು.

ಎಂದು ಪರರು ಒಪ್ಪಿರುವದರಿಂದ, ಹಾಗೆಯೇ (ಮತ್ತೊಂದರ) ಪ್ರತೀತಿಯ ನೆರವಿಲ್ಲದೇ ತೋರುವ ಧರ್ಮಿಯ ಸ್ವರೂಪವೇ ಆದ ಭೇದಕ್ಕೆ ಧರ್ಮಿಪ್ರತಿಯೋಗಿಯ ಪ್ರತೀತಿಯ ನೆರವನ್ನು ಬಯಸಿ ತೋರುವಿಕೆಯು ಯುಕ್ತವೇ ಆಗಿದೆ[1].

**'ಐಕ್ಯವು ಸಾಪೇಕ್ಷಪ್ರತೀತಿಕವಲ್ಲ' ಎಂದೆನ್ನಲಾಗದು**

ಏತೇನ, 'ಭೇದಪಟೌ ನಾಭಿನ್ನೌ ಸಾಪೇಕ್ಷನಿರಪೇಕ್ಷಪ್ರತೀತಿಕತ್ವೇನ ವಿರುದ್ಧ-ಧರ್ಮಾಧಿಕರಣತ್ವಾದ್' ಇತ್ಯಸ್ಯಾನ್ಯತರಾನೈಕಾನ್ತಿಕತ್ವಮುಕ್ತಂ ಭವತಿ । 'ನಚೈಕ್ಯಂ ನ ಸ್ವರೂಪಮ್' ಇತಿ ವಾಚ್ಯಮ್, ಅಸ್ವರೂಪತ್ವೇ ಮಿಥ್ಯಾತ್ವ-ಪ್ರಸಙ್ಗೇನ ತತ್ಪರಸ್ಯ ತತ್ತ್ವಮಸ್ಯಾದಿವಾಕ್ಯಸ್ಯಾತತ್ತ್ವಾವೇದಕತ್ವಪ್ರಸಙ್ಗಾತ್ । ಅಸ್ವರೂಪಸ್ಯಾಪಿ ಸತ್ಯತ್ವೇ ಸದದ್ವೈತಭಙ್ಗಪ್ರಸಙ್ಗಾತ್ । ನಚ 'ಐಕ್ಯಂ ನ ಸಾಪೇಕ್ಷಮ್' ಇತಿ ವಾಚ್ಯಮ್ । ತಥಾ ಸತಿ ತತ್ತ್ವಮ್ಪದಾರ್ಥ-ಪ್ರತಿಪಾದಕಾನಾಂ ವೇದಾನ್ತವಾಕ್ಯಾನಾಮೈಕ್ಯಪರಮಹಾವಾಕ್ಯೈಕವಾಕ್ಯತಾ-ಽಭಾವಪ್ರಸಙ್ಗೇನ ವೈಯರ್ಥ್ಯಾಪಾತಾತ್ । ಅಥ ತತ್ರ ಪ್ರತೀತ್ಯೋರೇವ ಸಾಪೇಕ್ಷನಿರಪೇಕ್ಷತ್ವಲಕ್ಷಣವಿರುದ್ಧಧರ್ಮಾಧಿಕರಣತ್ವೇನ ಭೇದೋಽಸ್ತು ನ ತು ತದ್ವಿಷಯಸ್ಯ, 'ಏಕಸ್ಯೈವಾಗ್ನೇಃ ಸಾಪೇಕ್ಷನಿರಪೇಕ್ಷಾನುಮಿತಿಪ್ರತ್ಯಕ್ಷ-ವಿಷಯತ್ವದರ್ಶನೇನ ವಿರೋಧಾಭಾವಾದ್' ಇತಿ ಬ್ರೂಯಾತ್ ತರ್ಹಿ ತತ್ ಪ್ರಕೃತೇಽಪಿ ಸಮಾನಮ್ । ಅಧಿಕಶ್ಚಾತ್ರ ಸವಿಶೇಷಾಭೇದಾಙ್ಗೀಕಾರೇಣ ಪರಿಹಾರೋ ಭವಿಷ್ಯತೀತಿ ।

ಇದರಿಂದ ('ಸಾಪೇಕ್ಷಪ್ರತೀಕವಾದ ಭೇದವೂ ಧರ್ಮಿಯ ಸ್ವರೂಪವಾಗಿದ್ದರೂ ಐಕ್ಯದಂತೆ ಯಾವ ಬಾಧಕವೂ ಇಲ್ಲ' ಎಂದು ಹೇಳಿದ್ದರಿಂದ)

1. ಐಕ್ಯವು ಬ್ರಹ್ಮನ ಸ್ವರೂಪ. ಬ್ರಹ್ಮನನ್ನೇ ಪ್ರತ್ಯಕ್ ಚೈತನ್ಯ ಎನ್ನುವರು. ಈ ಬ್ರಹ್ಮನ ಪ್ರತೀತಿಗೆ ಮತ್ತೊಂದರ ಅರಿವಿನ ಅಗತ್ಯವಿಲ್ಲ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂದು ತೋರುವನು. ಆದರೆ ಬ್ರಹ್ಮನ ಸ್ವರೂಪವೇ ಆದ ಐಕ್ಯದ ಅರಿವು ಮತ್ತೊಂದನ್ನು ಬಯಸುವುದು 'ಬ್ರಹ್ಮನಿಂದ ಜೀವಿಗೆ ಐಕ್ಯ' ಎಂದು. ಹೀಗೆ ಸಾಪೇಕ್ಷಪ್ರತೀತಿಕತ್ವ ನಿರಪೇಕ್ಷಪ್ರತೀತಿಕತ್ವ ವಿರುದ್ಧ-ಧರ್ಮಾಧಿಕರಣಗಳಾದ ಐಕ್ಯ-ಬ್ರಹ್ಮರಿಗೆ ಅಭೇದವನ್ನು ಅದ್ವೈತಿಗಳು ಒಪ್ಪಿರುವಂತೆ, ವಿರುದ್ಧಧರ್ಮಾಧಿಕರಣಗಳಾದ ಧರ್ಮಿ-ಭೇದಗಳಿಗೆ ಅಭೇದವನ್ನು ತತ್ವವಾದಿಗಳೂ ಒಪ್ಪಿರುವರು ಎಂದು ಭಾವ.

'ಭೇದಪಟಗಳು ಅಭಿನ್ನಗಳಲ್ಲ (ಭೇದವು ಪಟದ ಸ್ವರೂಪವಲ್ಲ) ವಿರುದ್ಧಧರ್ಮಕ್ಕೆ ಆಶ್ರಯವಾಗಿರುವದರಿಂದ' ಎನ್ನುವದಕ್ಕೆ (ಅನುಮಾನಕ್ಕೆ) ಏಕಪಕ್ಷೀಯವಾಗಿ ವ್ಯಭಿಚಾರವನ್ನು ಹೇಳಿದಂತಾಯಿತು[1]. ಐಕ್ಯವು (ಬ್ರಹ್ಮನ) ಸ್ವರೂಪವಲ್ಲ ಎನ್ನಲಾಗದು. (ಐಕ್ಯವು ಬ್ರಹ್ಮನ) ಸ್ವರೂಪವಾಗದ ಪಕ್ಷದಲ್ಲಿ (ಐಕ್ಯಕ್ಕೆ) ಮಿಥ್ಯಾತ್ವವು ಒದಗುವುದರಿಂದ ಅದನ್ನು ಪ್ರತಿಪಾದಿಸುವ 'ತತ್ ತ್ವಮಸಿ' ಮುಂತಾದ ವಾಕ್ಯಗಳಿಗೆ ಅತತ್ವಾವೇದಕತ್ವವು ಒದಗೀತು. ಅಸ್ವರೂಪ-ವಾದರೂ ಸತ್ಯ ಎಂದು ಒಪ್ಪಿದಲ್ಲಿ 'ಸತ್‌ಪದಾರ್ಥ ಒಂದೇ' ಎನ್ನುವುದು (ಅದ್ವೈತವಾದವು) ಭಂಗವಾದೀತು. ಐಕ್ಯವು ಸಾಪೇಕ್ಷಕವಲ್ಲ ಎಂದೆನ್ನಲಾಗದು. ಹಾಗಾದಲ್ಲಿ ತತ್-ತ್ವಂ ಪದಾರ್ಥಗಳನ್ನು ತಿಳಿಸುವ (ತತ್ ತ್ವಮಸಿ ಮುಂತಾದ) ವೇದಾಂತವಾಕ್ಯಗಳಿಗೆ ಐಕ್ಯವನ್ನು ಬೋಧಿಸುವ ('ಸೋಽಹಮ್' ಇತ್ಯಾದಿ) ಮಹಾವಾಕ್ಯದಿಂದ ಏಕಾರ್ಥಪ್ರತಿಪಾದಕತ್ವವಿಲ್ಲದೇ ವ್ಯರ್ಥವಾಗುವ ಪ್ರಸಂಗವು ಒದಗೀತು. ಒಂದೇ (ಪದಾರ್ಥವಾದ) ಅಗ್ನಿಯು, ಸಾಪೇಕ್ಷವಾದ ಅನುಮಿತಿ ಮತ್ತು ನಿರಪೇಕ್ಷವಾದ ಪ್ರತ್ಯಕ್ಷ ಇವುಗಳಿಗೆ ವಿಷಯವಾಗಿರುವುದು ಕಂಡಿದೆ (ಆದರೂ ಅಗ್ನಿಸ್ವರೂಪದಲ್ಲಿ) ವಿರೋಧವಿಲ್ಲದಿರುವುದರಿಂದ, ಹಾಗೆಯೇ ಅರಿವಿನಲ್ಲಿ ಮಾತ್ರ ಸಾಪೇಕ್ಷತ್ವ ನಿರಪೇಕ್ಷತ್ವ ರೂಪ ವಿರುದ್ಧಧರ್ಮ-ಗಳಿಗೆ ಆಶ್ರಯತ್ವವು ಇರುವುದರಿಂದ (ಅರಿವಿನಲ್ಲಿ) ಭೇದವಿರಲಿ, ಅದರ ವಿಷಯಕ್ಕೆ (ಐಕ್ಯಜ್ಞಾನಕ್ಕೆ ವಿಷಯವಾದ ಐಕ್ಯದಲ್ಲಿ ಭೇದವು) ಇಲ್ಲ ಎಂದು ಹೇಳುವುದಾದಲ್ಲಿ ಅದು ಪ್ರಕೃತಕ್ಕೂ (ಭೇದದ ವಿಷಯದಲ್ಲೂ) ಸಮಾನ[2]. ಇಲ್ಲಿ

---

1. ಬ್ರಹ್ಮನು ನಿರಪೇಕ್ಷಪ್ರತೀತಿಕನು, ಬ್ರಹ್ಮನ ಸ್ವರೂಪವೇ ಆದ ಐಕ್ಯವು ಸಾಪೇಕ್ಷತೀತಿಕವಾಗಿದೆ, ಆದುದರಿಂದ ವಿರುದ್ಧಧರ್ಮಾಶ್ರಯತ್ವವು ಬ್ರಹ್ಮ ಮತ್ತು ಐಕ್ಯದಲ್ಲಿ ಇದ್ದರೂ ಬ್ರಹ್ಮ ಮತ್ತು ಐಕ್ಯಗಳಿಗೆ ಭೇದವಿಲ್ಲ ತನ್ನಿಮಿತ್ತವಾಗಿ ಹೇತು ವ್ಯಭಿಚರಿತವಾಗಿದೆ ಎನ್ನುವುದು ಅದ್ವೈತಮತದರೀತಿಯಲ್ಲಿ ಮಾತ್ರ ಸಂಗತವಾಗುವುದು, ದ್ವೈತಿಗಳು ಐಕ್ಯವನ್ನೇ ಒಪ್ಪಿಲ್ಲ, ಇನ್ನು ಐಕ್ಯಕ್ಕೂ ಬ್ರಹ್ಮನಿಗೂ ಅಭೇದವನ್ನು ಸುತರಾಂ ಒಪ್ಪಿರುವುದಿಲ್ಲ ಆದುದರಿಂದ ಅನ್ಯತರಾನೈಕಾಂತಿಕ ಎಂದು ಹೇಳಲಾಗಿದೆ ಎಂದು ಭಾವ.

2. ಅಗ್ನಿಯು ಅನುಮಾನದಿಂದಲೂ ಅರಿವಿಗೆ ಪ್ರಾಪ್ತವಾಗುವುದು, ಹಾಗೆಯೇ ಪ್ರತ್ಯಕ್ಷದಿಂದಲೂ ಪ್ರಾಪ್ತವಾಗುವುದು. ಅನುಮಿತಿಯು ಸಾಪೇಕ್ಷಕ ಪ್ರತೀತಿಕ, ಪ್ರತ್ಯಕ್ಷವು ನಿರಪೇಕ್ಷಕಪ್ರತೀತಿಕ. ಆ ಅರಿವುಗಳಲ್ಲಿ ಭೇದವು ಇದ್ದರೂ ಆ ಅರಿವಿಗೆ ವಿಷಯವಾದ ಅಗ್ನಿಯಲ್ಲಿ ಭೇದವು ಇಲ್ಲ ಎನ್ನುವುದು ಪ್ರಸಿದ್ಧ. ಹಾಗೆಯೇ ಐಕ್ಯದ ವಿಷಯದಲ್ಲೂ ಎಂದು ಭಾವ.

(ಭೇದದ ವಿಷಯದಲ್ಲಿ) ಸವಿಶೇಷಾಭೇದವನ್ನು ಒಪ್ಪಿರುವುದರಿಂದ ಹೆಚ್ಚಿನ ಪರಿಹಾರವು ಪ್ರಾಪ್ತವಾಗುವುದು ಎಂದು[1].

**ಧರ್ಮಿಯ ಭಾನವಾದಾಗ, ಭೇದದ ಭಾನವಾಗದಿದ್ದರೂ ಬಾಧಕವಿಲ್ಲ**

**ಸ್ವರೂಪಸಿದ್ಧಾವಪಿ ತದಸಿದ್ಧಿಶ್ಚ ಜೀವೇಶ್ವರೈಕ್ಯಂ ವದತಃ ಸಿದ್ಧೈವ ।**

ಜೀವೇಶ್ವರರ ಐಕ್ಯವನ್ನು ಹೇಳುವವರಿಗೆ (ಅದ್ವೈತವಾದಿಗಳಿಗೆ) ಧರ್ಮಿಯ ಸಿದ್ಧಿಯಾದರೂ ಅದರಲ್ಲಿರುವ ಭೇದದ ಅಸಿದ್ಧಿಯು (ಧರ್ಮಿ-ಭೇದಗಳ ಅಭೇದಕ್ಕೆ ಅವಿರೋಧಿ ಎನ್ನುವುದು) ಸಿದ್ಧವೇ ಆಗಿದೆ.

**ತಥಾಪಿ ನ ಭೇದೋ ಧರ್ಮಿಸ್ವರೂಪಂ, ತತ್ಪ್ರತೀತಾವಪಿ ಕದಾಚಿದಪ್ರತೀತೇಃ । ಯೋ ಯತ್ಪ್ರತೀತಾವಪಿ ನ ಪ್ರತೀಯತೇ ನಾಸೌ ತತ್ಸ್ವರೂಪಂ, ಯಥಾ ಘಟಪ್ರತೀತಾವಪ್ಯಪ್ರತೀಯಮಾನಃ ಪಟೋ ನ ಘಟಸ್ವರೂಪಮ್ । ನಚಾಯಮಸಿದ್ಧೋ ಹೇತುಃ, ಸ್ಥಾಣುಶುಕ್ತಿಕಾ-ಪ್ರತೀತಾವಪಿ ಪುರುಷರಜತಭೇದಸ್ಯಾಪ್ರತೀತೇಃ । ಪ್ರತೀತೌ ವಾ ಸಂಶಯ-ವಿಪರ್ಯಯಾನುಪಪತ್ತಿಪ್ರಸಙ್ಗಾತ್ । ನಹ್ಯಪ್ರತೀತೇಃ ಸ್ಥಾಣ್ವಾದೌ ಸಂಶಯಾದಿರ್ಭವತಿ? ಇತ್ಯತ ಆಹ 'ಸ್ವರೂಪ..' ಇತಿ । ಧರ್ಮಿಪ್ರತೀತಾವಪಿ ಭೇದಸ್ಯಾಪ್ರತೀತಿರಭೇದಾವಿರೋಧಿತ್ವೇನ ಜೀವೇಶ್ವರೈಕ್ಯಂ ವದತಃ ಪರಸ್ಯ ಸಮ್ಮತೈವ ।**

ಹಾಗಾದರೂ ಭೇದವು ಧರ್ಮಿಯ ಸ್ವರೂಪವಾಗಲಾರದು, ಕೆಲವು ಬಾರಿ ಅದು (ಧರ್ಮಿಯು) ತೋರಿದರೂ (ಭೇದವು) ತೋರದೇ ಇರುವುದರಿಂದ. 'ಯಾವುದು ತೋರಿದರೂ ಯಾವುದು ತೋರುವುದಿಲ್ಲವೋ ಅದು ಅದರ ಸ್ವರೂಪವಲ್ಲ, ಹೇಗೆ ಘಟವು ತೋರಿದರೂ ತೋರದಿರುವ ಪಟವು ಘಟದ ಸ್ವರೂಪವಲ್ಲವೋ (ಹಾಗೆ)' ಈ ಹೇತುವು ('ಧರ್ಮಿಯು ಪ್ರತಿಭಾನವಾದರೂ

1. ಧರ್ಮಿಗೂ (ಘಟಕ್ಕೂ) ಭೇದಕ್ಕೂ ಘಟದಲ್ಲಿರುವ ಪಟಾದಿಪ್ರತಿಯೋಗಿಕಭೇದಕ್ಕೂ ಭೇದಾಭೇದವನ್ನು ತತ್ತ್ವವಾದಿಗಳು ಒಪ್ಪಿರುವರು. ಈ ವಿರುದ್ಧಧರ್ಮಗಳು ಏಕಕಾಲದಲ್ಲಿ ಒಂದೇ ವಸ್ತುವಿನಲ್ಲಿ ಅಸಂಭಾವಿತವಲ್ಲ, ವಿಶೇಷ ಎಂಬ ವಿಶಿಷ್ಟಧರ್ಮವನ್ನು ಪ್ರತಿಪಾದಿಸಲಾಗುವುದರಿಂದ. ಅದ್ವೈತವಾದದಲ್ಲಾದರೋ ಈ ಸವಲತ್ತು ಇಲ್ಲ. ಹಾಗಾಗಿ ತತ್ತ್ವವಾದವು ಸುಸ್ಥ ಎಂದು ಭಾವ.

ಕೆಲವು ಬಾರಿ ಭೇದವು ತೋರದೇ ಇರುವುದರಿಂದ, ಎನ್ನುವ ಹೇತುವು) ಅಸಿದ್ಧವಲ್ಲ, ಸ್ಥಾಣು-ಶುಕ್ತಿಗಳು ತೋರಿದರೂ ಪುರುಷ-ರಜತಗಳ ಭೇದವು ತೋರದೇ ಇರುವುದರಿಂದ. ಅಥವಾ (ಸ್ಥಾಣು-ಪುರುಷರು ತೋರಿದಾಗ ಭೇದವೂ) ಪ್ರತೀತವಾಗಿದೆ (ಎಂದೆನ್ನಲಾಗದು) ಸಂಶಯ-ವಿಪರ್ಯಯಗಳು ಇಲ್ಲದೇ ಇರಬೇಕಾದೀತು. ಸ್ಥಾಣು-ಪುರುಷರು ತೋರದೇ ಇದ್ದರೆ ಸಂಶಯಾದಿಗಳಿಗೆ ಅವಕಾಶವಿಲ್ಲ?[1] ಎಂದು ಆದುದರಿಂದ ಹೇಳುತ್ತಾರೆ 'ಸ್ವರೂಪ...' ಎಂದು. ಧರ್ಮಿಯ ಪ್ರತೀತವಾದರೂ ಭೇದದ ಅಪ್ರತೀತಿಯು (ಧರ್ಮಿ ಮತ್ತು ಭೇದಗಳಲ್ಲಿನ) ಅಭೇದಕ್ಕೆ ವಿರೋಧವಿಲ್ಲ ಎನ್ನುವುದು ಜೀವೇಶ್ವರೈಕ್ಯವನ್ನು ಹೇಳುವ ಪರರಿಗೆ (ಅದ್ವೈತವಾದಿಗಳಿಗೆ) ಸಮ್ಮತವೇ ಆಗಿದೆ.

**ಇದಮುಕ್ತಂ ಭವತಿ- ಪ್ರತ್ಯಕ್‌ಚೈತನ್ಯೇ ಸ್ವಪ್ರಕಾಶತಯಾ ಸಿದ್ಧೇऽಪಿ ಜೀವಬ್ರಹ್ಮಣೋರೈಕ್ಯಂ ನ ಸಿದ್ಧಮ್ । ಅನ್ಯಥೋಪದೇಶಾನರ್ಥಕ್ಯ-ಪ್ರಸಙ್ಗಾತ್, ವಿಪ್ರತಿಪತ್ತ್ಯಭಾವಪ್ರಸಕ್ತೇಶ್ಚ । ತಥಾಪಿ ತತ್‌ಸ್ವರೂಪತಯಾ ಪರೇಣಾಙ್ಗೀಕ್ರಿಯತೇ । ತಸ್ಮಾದಯಮಪಿ ಹೇತುರನ್ಯತರಾನೈಕಾನ್ತಿಕ ಏವ ಭವತಿ । 'ಸ್ವರೂಪಮಪ್ಯೈಕ್ಯಮವಿದ್ಯಾಪ್ರತಿಬನ್ಧಾನ್ ನ ಪ್ರಕಾಶತ' ಇತಿ**

---

1. ದೂರದಲ್ಲಿರುವ ಸ್ಥಾಣುವನ್ನು ಕಂಡಾಗ ಕೆಲವು ಸಂದರ್ಭದಲ್ಲಿ 'ಅಯಂ ಸ್ಥಾಣುರ್ವಾ ಪುರುಷೋ ವಾ' ಎಂದು ಸಂದೇಹವು ಪ್ರಾಪ್ತವಾಗುವುದು ಎಲ್ಲರ ಅನುಭವದಲ್ಲಿದೆ. ಹಾಗಾದಲ್ಲಿ ಧರ್ಮಿಯಾದ ಸ್ಥಾಣುವು ತೋರಿದರೂ ಅದರ ಸ್ವರೂಪವಾದ 'ಸ್ಥಾಣ್ವನುಯೋಗಿಕ ಪುರುಷಪ್ರತಿಯೋಗಿಕಭೇದವೂ' ತೋರಿಲ್ಲ ಎಂದು ಒಪ್ಪಲೇ ಬೇಕು. ಹಾಗಾಗಿ ಸಂಶಯಜ್ಞಾನದಲ್ಲಿ 'ಧರ್ಮಿಯು ತೋರಿದರೂ ಭೇದವು ತೋರದೇ ಇರುವುದರಿಂದ' ಎಂಬ ಹೇತುವು ಸಿದ್ಧವಾಗುವುದು. ಹಾಗೆಯೇ ಶುಕ್ತಿಯನ್ನು ಕಂಡಾಗ 'ಇದಂ ರಜತಂ ' ಎನ್ನುವ ಭ್ರಾಂತಿಜ್ಞಾನವು ಬರುವುದು, ಇಲ್ಲಿಯೂ ಸಹ ಧರ್ಮಿಯಾದ ಶುಕ್ತಿಯು ಕಂಡರೂ ಅದರ ಸ್ವರೂಪವಾದ ಶುಕ್ತ್ಯನುಯೋಗಿಕ-ರಜತಪ್ರತಿಯೋಗಿಕಭೇದವೂ ತೋರದಿರುವುದು ಎಲ್ಲರಿಗೂ ಸಮ್ಮತವೇ ಆಗಿದೆ. ಇನ್ನು ಸ್ಥಾಣುವು ಕಂಡಾಗ ಅದರ ಸ್ವರೂಪವಾದ ಭೇದವೂ ತೋರಿದೆ ಎಂದೂ ಹೇಳಲು ಅವಕಾಶವಿಲ್ಲ, ಭೇದವು ತೋರಿದಲ್ಲಿ ಸಂಶಯಕ್ಕೇ ಎಡೆಯೇ ಇರುತ್ತಿರಲಿಲ್ಲವಾದುದರಿಂದ. ಹಾಗೆಯೇ ಧರ್ಮಿಯೇ ತೋರಿಲ್ಲ ಎಂದು ಹೇಳಲೂ ಆಗದು, ಧರ್ಮಿಯ ಭಾನವಿಲ್ಲದೇ ಹೋದಲ್ಲಿ ಸಂಶಯಾದಿಗಳಿಗೆ ಅವಕಾಶವೇ ಇರುವುದಿಲ್ಲ. ಆದುದರಿಂದ ಧರ್ಮಿಯ ಭಾನವಿದೆ, ಅದರಲ್ಲಿನ ಭೇದದ ಭಾನವಿಲ್ಲ ಎಂದು ಒಪ್ಪಲೇ ಬೇಕು. ಹಾಗದಲ್ಲಿ ಭೇದವು ಧರ್ಮಿಯ ಸ್ವರೂಪವಾಗಲಾರದು ಎಂದು ಸಂದೇಹದ ಭಾವ.

**ಚೇನ್ನ, ಅನೈಕಾನ್ತ್ಯಾಪರಿಹಾರಾತ್ । ವಿಶೇಷಣಪ್ರಕ್ಷೇಪಾಭಿಪ್ರಾಯೇ ಚಾತ್ರಾಪಿ ಸಾದೃಶ್ಯಾದೇಃ ಪ್ರತಿಬನ್ಧಕಸ್ಯ ವಕ್ತುಂ ಶಕ್ಯತ್ವೇನ ವಿಶೇಷಣಾಸಿದ್ಧಿ-ಪ್ರಸಙ್ಗಾದಿತಿ ।**

ಇಷ್ಟು ಹೇಳಿದಂತಾಗುವುದು- ಪ್ರತ್ಯಕ್‌ಚೈತನ್ಯನು (ಬ್ರಹ್ಮನು) ಸ್ವಪ್ರಕಾಶನಾದುದರಿಂದ ಸಿದ್ಧನಾಗಿದ್ದರೂ ಜೀವೇಶ್ವರರ ಐಕ್ಯವು ಸಿದ್ಧವಾಗಿಲ್ಲ. ಹಾಗಾಗದ ಪಕ್ಷದಲ್ಲಿ (ಜೀವೇಶ್ವರೈಕ್ಯವು ಸಿದ್ಧವಾಗಿದ್ದಲಿ) ಉಪದೇಶವು (ಜೀವೇಶ್ವರೈಕ್ಯಪ್ರತಿಪಾದಕ ವಾಕ್ಯಗಳು) ವ್ಯರ್ಥವಾಗಬೇಕಾದೀತು. (ಜೀವೇಶ್ವರೈಕ್ಯವು ಸಿದ್ಧವಾಗಿದ್ದಲ್ಲಿ ಆ ವಿಷಯದಲ್ಲಿ) ವಿರುದ್ಧಾಭಿಪ್ರಾಯಕ್ಕೆ ಎಡೆಯಿಲ್ಲದೇ ಹೋಗಬೇಕಾದೀತು. ಹಾಗಾದರೂ (ಬ್ರಹ್ಮನು ತೋರಿದರೂ ಐಕ್ಯವು ತೋರದಿದ್ದರೂ, ಐಕ್ಯವನ್ನು) ಆತನ ಸ್ವರೂಪವೆಂದು ಪರರಿಂದ ಒಪ್ಪಲಾಗಿದೆ. ಆದುದರಿಂದ ಈ ಹೇತುವೂ ಸಹ ('ಧರ್ಮಿಯು ಪ್ರತಿಭಾನವಾದರೂ ಕೆಲವು ಬಾರಿ ಭೇದವು ತೋರದೇ ಇರುವುದರಿಂದ' ಎನ್ನುವ ಹೇತುವು.) ಅನ್ಯತರ (ಅದ್ವೈತವಾದಿಗಳ ಮತದಂತೆ) ವ್ಯಭಿಚಾರಿಯೇ ಆಯಿತು. ಅವಿದ್ಯಾರೂಪ ಪ್ರತಿಬಂಧವು ಇರುವುದರಿಂದ (ಬ್ರಹ್ಮನ) ಸ್ವರೂಪ-ವಾದ ಐಕ್ಯವು ತೋರುತ್ತಿಲ್ಲ ಎಂದು ಹೇಳುವುದು ತರವಲ್ಲ. ಅನೈಕಾಂತ್ಯವು ಪರಿಹಾರವಾಗದೇ ಇರುವುದರಿಂದ[1]. ವಿಶೇಷಣವನ್ನು ಸಂಯೋಜಿಸುವ ಅಭಿಪ್ರಾಯವು ಇದ್ದಲ್ಲಿ, ಇಲ್ಲೂ ಸಹ ಸಾದೃಶ್ಯಾದಿಗಳನ್ನು ಪ್ರತಿಬಂಧಕ ಎಂದು ಹೇಳಲು ಅವಕಾಶವಿರುವುದರಿಂದ ವಿಶೇಷಣಾಸಿದ್ಧಿಯ ಪ್ರಸಂಗವಿದೆ ಎಂದು[2].

1. 'ಧರ್ಮಿಯ ಸ್ವರೂಪವಾದದ್ದು ಧರ್ಮಿಯು ತೋರಿದಾಗ ತೋರಲೇಬೇಕು ತೋರದೇ ಇದ್ದಪಕ್ಷದಲ್ಲಿ ಅದು ಧರ್ಮಿಯ ಸ್ವರೂಪವಲ್ಲ' ಎಂಬ ನಿಯಮಕ್ಕೆ ಚ್ಯುತಿಯನ್ನು-ವ್ಯಭಿಚಾರವನ್ನು ಒಪ್ಪಿದಂತಾಯಿತು. ಹಾಗಾದಲ್ಲಿ ಪ್ರತಿಬಂಧಕವು ಇದ್ದಾಗ ತೋರದಿದ್ದರೂ 'ಭೇದವನ್ನು ಧರ್ಮಿಯ ಸ್ವರೂಪದಿಂದ ಅಭಿನ್ನ' ಎಂದು ಹೇಳಲು ಬಾಧಕವಿಲ್ಲ ಎಂದು ಒಪ್ಪಿದಂತಾಯಿತು ಎಂದು ಭಾವ.

2. ಭೇದಃ ನ ಧರ್ಮಿಸ್ವರೂಪಃ ಧರ್ಮಿಪ್ರತಿಭಾನೇಽಪಿ ಭೇದಾಪ್ರತಿಭಾನಾತ್' ಎಂದು ಅನುಮಾನವನ್ನು ಪರವಾದಿಗಳು ಭೇದವು ಧರ್ಮಿಯ ಸ್ವರೂಪವಲ್ಲ ಎಂದು ಸಾಧಿಸಲು ಹೇಳಿರುವರು. ಈ ಹೇತುವು ಸ್ವಪ್ರಕಾಶನಾದ ಬ್ರಹ್ಮನ ಸ್ವರೂಪವಾದ ಐಕ್ಯದಲ್ಲಿ

ಪುಟ 562ರಲ್ಲಿ........

**'ಧರ್ಮಿಪ್ರತೀತೇರಪಿ ಭೇದಾಪ್ರತೀತೇಃ' ಎಂಬ ಹೇತುವೇ ಅಸಿದ್ಧ**

**ಭೇದಸ್ತು ಸ್ವರೂಪದರ್ಶನ ಏವ ಸಿದ್ಧಃ । ಪ್ರಾಯಃ ಸರ್ವತೋ ವಿಲಕ್ಷಣಂ ಹಿ ಪದಾರ್ಥಸ್ವರೂಪಂ ದೃಶ್ಯತೇ ।**

ಧರ್ಮಿಯ ಅರಿವಾದಾಗ ಭೇದವಾದರೋ ಸಿದ್ಧಿವೇ ಆಗಿದೆ. ಧರ್ಮಿಯ ಸ್ವರೂಪವು ಪ್ರಾಯಃ (ಇತರ) ಎಲ್ಲ ಪದಾರ್ಥದಿಂದ ವ್ಯಾವೃತ್ತವಾಗಿಯೇ (ಭಿನ್ನವಾಗಿಯೇ) ತೋರುತ್ತದೆ.

**ಅಸಿದ್ಧಾಶ್ಚಾಯಂ ಹೇತುರಿತ್ಯಾಹ 'ಭೇದಸ್ತು' ಇತಿ । ತುಶಬ್ದೇನೈಕ್ಯಾದ್ ವಿಶೇಷಮಾಚಷ್ಟೇ, ಏವಶಬ್ದೇನ ನಿಯಮಮ್ । ಕದಾಚಿದ್ ಧರ್ಮಿ-ಸ್ವರೂಪಸಿದ್ಧೌ ಭೇದಸಿದ್ಧೇಃ ಪರೇಣಾಪ್ಯಭ್ಯುಪಗತತ್ವಾತ್ । ಕುತಃ? ಇತ್ಯತ ಆಹ 'ಪ್ರಾಯಃ' ಇತಿ । ಭೂಮಾರ್ಥಂ ಪ್ರಾಯ ಇತ್ಯವ್ಯಯಮಪ್ಯಸ್ತಿ । ವಿಲಕ್ಷಣಂ- ವ್ಯಾವೃತ್ತಮ್ । ಪ್ರಾಯ ಇತಿ ಸಂಶಯಾದಿಸ್ಥಲ-ವ್ಯುದಾಸಾರ್ಥಮ್ । ತತ್ರಾಪಿ ವಿಶೇಷಂ ವಕ್ಷ್ಯಾಮಃ । 'ಯದ್ಯದ್ ದೃಶ್ಯತೇ ತತ್ತತ್ ಸರ್ವತೋ ವ್ಯಾವೃತ್ತಮೇವ ದೃಶ್ಯತೇ ನ ತು ಸರ್ವಾತ್ಮಕತ್ವೇನ' ಇತಿ ಹ್ಯನುಭವಸಿದ್ಧಮ್ । ವ್ಯಾವೃತ್ತಿರೇವ ಚ ಭೇದಃ । ನಚೈಕಸ್ಮಿನ್ ವಸ್ತುನ್ಯನೇಕೇ ಭೇದಾಃ ಕಿನ್ತ್ವೇಕ ಏವ । ಸ ಚೇದ್ ದೃಷ್ಟಃ ಕಥಂ ತರ್ಹಿ ಧರ್ಮಿಪ್ರತೀತಾವಪಿ ಭೇದಸ್ಯಾಪ್ರತೀತಿಃ ಸಿದ್ಧ್ಯೇತ್? ಇತಿ ।**

ಈ ಹೇತುವು ('ಧರ್ಮಿಪ್ರತೀತೇರಪಿ ಕದಾಚಿತ್ ಭೇದಾಪ್ರತೀತೇಃ' ಎನ್ನುವ ಹೇತುವು) ಅಸಿದ್ಧವಾಗಿದೆ ಎಂದು ಹೇಳುತ್ತಾರೆ '**ಭೇದಸ್ತು**' ಎಂದು. ತು

---

...... ಪುಟ 561 ರಿಂದ

ವ್ಯಭಿಚರಿತವಾಗಿದೆ ಎಂದು ತಿಳಿಸಲಾಯಿತು. ಬ್ರಹ್ಮನು ತೋರಿದರೂ ಐಕ್ಯವು ತೋರದೇ ಇರುವುದರಿಂದ ಎಂದು. ವ್ಯಭಿಚಾರದ ಪರಿಹಾರಕ್ಕಾಗಿ 'ಪ್ರತಿಬಂಧಕಾಭಾವ' ಎಂಬ ವಿಶೇಷಣವನ್ನು ಸಂಯೋಜಿಸಲಾಗುವುದು ಎಂದು ವಾದಿಸಿದರು. ಹಾಗಾದಲ್ಲಿ ಪ್ರಕೃತದಲ್ಲೂ ಸಾದೃಶ್ಯಾದಿಪ್ರತಿಬಂಧಕವಿರುವುದರಿಂದ ಭೇದವು ತೋರುತ್ತಿಲ್ಲ ಎಂದು ಉತ್ತರಿಸಬಹುದು-ಸ್ಥಾಣುವು ತೋರಿದರೂ ಪುರುಷಪ್ರತಿಯೋಗಿಕಭೇದವು ತೋರದಿರಲು ಸ್ಥಾಣು-ಪುರುಷರಲ್ಲಿನ ಸಾದೃಶ್ಯವೇ ಪ್ರತಿಬಂಧಕ ಎಂದು ಹೇಳಲು ಅವಕಾಶವಿದೆ. ಹಾಗಾಗಿ ಹೇತುವು ಅಸಿದ್ಧ ಎಂದು ಭಾವ.

ಶಬ್ದದಿಂದ ಐಕ್ಯದಿಂದ (ಭೇದಕ್ಕೆ) ವೈಶಿಷ್ಟ್ಯವನ್ನು ತಿಳಿಸುತ್ತಾರೆ[1]. ಏವ ಶಬ್ದದಿಂದ ನಿಯಮವನ್ನು (ತಿಳಿಸುತ್ತಾರೆ)[2]. ಕೆಲವು ಸಂದರ್ಭದಲ್ಲಿ (ವಸ್ತುವಿನ ವಿಶೇಷದ ದರ್ಶನವಾದ ಸಂದರ್ಭದಲ್ಲಿ) ಧರ್ಮಿಯ ಸ್ವರೂಪವು ಸಿದ್ಧವಾದಾಗ (ಅದರೊಡನೆ) ಭೇದದ ಸಿದ್ಧಿಯನ್ನು ಪರರೂ ಒಪ್ಪಿರುವುದರಿಂದ. ಏಕೆ? ಎಂದಲ್ಲಿ[3] ಉತ್ತರಿಸುತ್ತಾರೆ '**ಪ್ರಾಯಃ**' ಎಂದು. ಬಹುಲ ಎಂಬ ಅರ್ಥದಲ್ಲೂ ಪ್ರಾಯಃ ಎಂಬ ಅವ್ಯಯವು ಇದೆ[4]. **ವಿಲಕ್ಷಣಂ**- ವಿಭಿನ್ನವಾಗಿ . '**ಪ್ರಾಯಃ**' ಎಂದು ಸಂಶಯಾದಿ ಸಂದರ್ಭಗಳನ್ನು ಪ್ರತ್ಯೇಕಿಸುವ ಸಲುವಾಗಿ (ಹೇಳಿರುವರು)[5]. ಅಲ್ಲೂ ಸಹ (ಸಂಶಯಾದಿ ಸ್ಥಳದಲ್ಲೂ) ವಿಶೇಷವನ್ನು ಮುಂದೆ ತಿಳಿಸುತ್ತೇವೆ[6]. 'ಏನೇನು ಕಾಣುವುದೋ ಅದೆಲ್ಲವೂ ಎಲ್ಲದರಿಂದ

---

1. ಸ್ವಪ್ರಕಾಶನಾದ ಬ್ರಹ್ಮನು ಭಾಸನಾದರೂ ಅವನ ಸ್ವರೂಪವಾದ ಐಕ್ಯವು ತೋರುವುದಿಲ್ಲ. ಆದರೆ 'ಧರ್ಮಿಯು ತೋರಿದಾಗ ಭೇದವೂ ಪ್ರತೀತವೇ ಆಗುವುದು' ಎನ್ನುವುದೇ ಐಕ್ಯಕ್ಕೂ ಭೇದಕ್ಕೂ ಇರುವ ವಿಶೇಷ ಎಂದು ಭಾವ.

2. 'ಭೇದಸ್ತು ಸ್ವರೂಪದರ್ಶನ ಏವ ಸಿದ್ಧಃ' ಎಂದಿದೆ. ಇಲ್ಲಿರುವ ಏವ ಶಬ್ದಕ್ಕೆ 'ಸಿದ್ಧ ಏವ' ಎಂದು ಅನ್ವಯಿಸುವುದು. ಆಗ ಏವ ಶಬ್ದಕ್ಕೆ ಅಯೋಗವ್ಯವಚ್ಛೇದಾರ್ಥವು ಪ್ರಾಪ್ತವಾಗುವುದು. ಉದಾ-'ಶಙ್ಖಃ ಪಾಣ್ಡುರ ಏವ' ಎಂಬಿತ್ಯಾದಿ ಪ್ರಯೋಗಗಳಲ್ಲಿ ಶಂಖಕ್ಕೂ ಪಾಂಡುರವರ್ಣಕ್ಕೂ (ಅವಿನಾಭಾವವು) ವ್ಯಾಪ್ತಿಯು ಭಾಸವಾಗುವಂತೆ 'ಧರ್ಮಿಯು ತೋರಿದಾಗ ಭೇದವೂ ತೋರೇ ತೋರುವುದು' ಎಂಬ ನಿಯಮವನ್ನು ತಿಳಿಸಿದಂತಾಯಿತು ಎಂದು ಭಾವ.

3. ಭೇದವೂ ತೋರೇ ತೋರುವುದು ಎಂಬ ನಿಯಮವನ್ನು ಏಕೆ ಒಪ್ಪಬೇಕು? ಎಂದಲ್ಲಿ.

4. ಪ್ರಾಯೇಣ, ಪ್ರಾಯಶಃ ಎಂದು ಭೂಮಾರ್ಥಕ ಅವ್ಯಯಗಳು ಪ್ರಸಿದ್ಧ. ಪ್ರಾಯಃ ಎನ್ನುವುದು ಉಪವಾಸ ಎಂಬ ಅರ್ಥದಲ್ಲೂ ಇದೆ 'ಪ್ರಾಯೋಪವೇಶ' ಇತ್ಯಾದಿ ಸ್ಥಳದಲ್ಲಿ ಪ್ರಸಿದ್ಧವಾಗಿದೆ, ಆದರೆ ಬಹುಲ ಎಂಬ ಅರ್ಥದಲ್ಲಿ ಪ್ರಸಿದ್ಧವೆ? ಎಂಬ ಸಂದೇಹಕ್ಕೆ ಉತ್ತರಿಸುತ್ತಾರೆ- 'ಪ್ರಾಯಃ ಸಮಾಪನ್ನವಿಪತ್ತಿಕಾಲೇ' ಇತ್ಯಾದಿಸ್ಥಳದಲ್ಲಿ ಪ್ರಾಯಃ ಎಂಬ ಅವ್ಯಯವು ಬಹುಲ ಎಂಬ ಅರ್ಥದಲ್ಲೂ ಇದೆ, ಎಂದು ತಿಳಿಸಿರುವರು.

5. ಪ್ರಾಯಃ......ದೃಶ್ಯತೇ- ಪ್ರಾಯಕವಾಗಿ ಭೇದವು ತೋರುತ್ತದೆ ಎಂದು ಮೂಲದಲ್ಲಿ ತಿಳಿಸಿರುವರು. ಹಾಗಾದಲ್ಲಿ 'ಕೆಲವು ಸಂದರ್ಭದಲ್ಲಿ ಭೇದವು ತೋರದು' ಎಂದಾಯಿತು. ಆದರೆ 'ಧರ್ಮಿಯು ತೋರಿದಾಗ ಭೇದವೂ ತೋರೇ ತೋರುವುದು' ಎಂಬ ನಿಯಮಕ್ಕೆ ಭಂಗವು ಉಂಟೆಂಬ ಸಂದೇಹಕ್ಕೆ ಎಡೆಯಿದೆ. ಅಹುದು ಅದು ಸಾದೃಶ್ಯಾದಿಪ್ರತಿಬಂಧಕವಿರುವ ಸಂದರ್ಭದಲ್ಲಿ ಮಾತ್ರ ಎಂದು ಭಾವ.

6. (ಪು. 572ರಲ್ಲಿ) 'ಜ್ಞಾತ್ವೈವ ಹಿ ಪ್ರಾಯಃ .....' ಎನ್ನುವ ಮೂಲವನ್ನು ವ್ಯಾಖ್ಯಾನಿಸುವಾಗ.

(ಎಲ್ಲ ಇತರ ಪದಾರ್ಥಗಳಿಂದ) ವ್ಯಾವೃತ್ತವಾಗಿಯೇ ತೋರುವುದು, ಹೊರತಾಗಿ ಸಕಲ ವಸ್ತ್ವಾತ್ಮಕವಾಗಿಯಲ್ಲ (ಸಕಲ ವಸ್ತುಗಳಿಂದ ಅಭಿನ್ನವಾಗಿ ಅಲ್ಲ)' ಇದು ಅನುಭವದಿಂದ ಸಿದ್ಧವಾಗಿದೆ. ವ್ಯಾವೃತ್ತಿಯನ್ನೇ ಭೇದ (ಎಂದು ತಿಳಿಯುವುದು). ಒಂದು ವಸ್ತುವಿನಲ್ಲಿ ಅನೇಕ ಭೇದಗಳು ಇಲ್ಲ ಮತ್ತೆ ಒಂದೇ ಭೇದ[1]. ಆ ಭೇದವು ಅರಿವಿಗೆ ಬಂದಿದೆ ಎಂದಾದಲ್ಲಿ 'ಧರ್ಮಿಯ ಪ್ರತೀತಿಯು ಪ್ರಾಪ್ತವಾದರೂ ಭೇದದ ಪ್ರತೀತಿಯು ಕಂಡಿಲ್ಲ' ಎನ್ನುವುದು ಹೇಗೆ ಸಿದ್ಧಿಸುತ್ತದೆ? ಎಂದು.

**ಭಾನಗಳಲ್ಲಿ ವೈಲಕ್ಷಣ್ಯವು ಭೇದಸಾಧಕವಾಗದು**

**'ಅಸ್ಯ ಭೇದಃ' ಇತಿ ತು 'ಪದಾರ್ಥಸ್ಯ ಸ್ವರೂಪಮ್' ಇತಿವತ್ ।**

'ಇದರ ಭೇದ' ಎನ್ನುವ ಪ್ರತೀತಿಯಾದರೋ 'ಪದಾರ್ಥದ ಸ್ವರೂಪ' ಎನ್ನುವ ಪ್ರತೀತಿಯಂತೆ ಎಂದು ತಿಳಿಯುವುದು.

**ತಥಾಪಿ ಭೇದಸ್ಯ ಧರ್ಮಿಸ್ವರೂಪತ್ವಂ ನ ಯುಜ್ಯತೇ । 'ಪಟಸ್ಯ ಭೇದ' ಇತಿ ತತ್ಸಮ್ಬಂಧಿತಯಾ ಪ್ರತೀಯಮಾನತ್ವಾತ್ । 'ಯೋ ಯತ್ಸಮ್ಬನ್ಧಿತಯಾ ಪ್ರತೀಯತೇ ನಾಸೌ ತತ್ಸ್ವರೂಪಮ್, ಯಥಾ ಕಮ್ಬಲೋ ಬ್ರಾಹ್ಮಣಸ್ಯ' ಇತಿ । ಅತ ಆಹ 'ಅಸ್ಯ' ಇತಿ । ಇತಿ ತು 'ಸಮ್ಬನ್ಧಿತಯಾ**

---

1. 'ಸ್ಥಾಣುರ್ವಾ ಪುರುಷೋ ವಾ' ಎನ್ನುವ ಸಂಶಯಜ್ಞಾನದಲ್ಲಿ ಘಟಾದಿ ಅನೇಕ ಪದಾರ್ಥದಿಂದ ವ್ಯಾವೃತ್ತವಾಗಿ ಸ್ಥಾಣುವು ತೋರಿದರೂ ಪುರುಷನಿಂದ ವ್ಯಾವೃತ್ತವಾಗಿ ತೋರಿಲ್ಲ. ಹಾಗಾಗಿ ಸಮಸ್ತ ಭೇದಗಳ ಅರಿವು ಇಲ್ಲ ಎಂದು ಒಪ್ಪಬೇಕು. ಭೇದವು ಅನೇಕನಿರೂಪಕವಾದುದರಿಂದ ಭೇದದಲ್ಲಿ ಅನೇಕತ್ವವು ಇದೆ. ಮತ್ತೆ ಅನೇಕ ನಿರೂಪಕ ಭೇದದ ಅರಿವು ಎಲ್ಲರಿಗೂ ಪ್ರಾಪ್ತವಾಗುವುದಾದಲ್ಲಿ ಎಲ್ಲರಿಗೂ ಸರ್ವಜ್ಞತ್ವವನ್ನು ಒಪ್ಪಬೇಕಾದೀತು. ಧರ್ಮಿಯಲ್ಲಿಯಾದರೋ ಅನೇಕತ್ವವು ಇಲ್ಲದಿರುವುದರಿಂದ ಧರ್ಮಿ ಮತ್ತು ಭೇದಕ್ಕೆ ಅಭೇದವನ್ನು ಒಪ್ಪುವುದು ತರವಾಗಲಾರದು ಎಂಬ ಸಂದೇಹಕ್ಕೆ ಉತ್ತರ- ಧರ್ಮಿಯಲ್ಲಿರುವ ಭೇದವು ಒಂದೇ, ಅದರಲ್ಲಿನ ಪ್ರತಿಯೋಗಿಕತ್ವರೂಪ ಧರ್ಮಗಳು ಅನೇಕ. ಯಾವ ಪದಾರ್ಥಗಳ ಸ್ಮರಣೆಯು ಪ್ರಾಪ್ತವಾಗಿದಿಯೋ, ಆ ಎಲ್ಲ ಪದಾರ್ಥಗಳ ಪ್ರತಿಯೋಗಿತ್ವರೂಪ ಭೇದನಿಷ್ಠಧರ್ಮಗಳು ಪ್ರತಿಭಾಸಮಾನವಾಗುವುದು. ಆದುದರಿಂದ ಭೇದಪ್ರತೀತಿಗೆ ಸರ್ವಜ್ಞತ್ವದ ಅಗತ್ಯವಿಲ್ಲ. ಸಾದೃಶ್ಯವಶಾತ್ ಪುರುಷಪ್ರತಿಯೋಗಿಕತ್ವರೂಪ ಧರ್ಮವು ತೋರದ ಪ್ರಯುಕ್ತ, ಆ ಭೇದದಲ್ಲಿ ಆ ಧರ್ಮವು ಭಾನವಾಗಲಿಲ್ಲ ಎಂದು ಭಾವ.

ಪ್ರತೀತಿರ್ವ್ಯಪದೇಶೋ ವಾ' ಇತಿ ಶೇಷಃ । ಇತಿವದ್ 'ಉಪಪದ್ಯತೇ' ಇತಿ ಚ । ಯಥಾ 'ಪದಾರ್ಥಸ್ಯ ಸ್ವರೂಪಮ್' ಇತಿ ಪದಾರ್ಥಸಮ್ಬನ್ಧಿತಯಾ ಪ್ರತೀಯಮಾನಮಪಿ ಸ್ವರೂಪಂ ನ ತತೋಽನ್ಯತ್, ತಥಾ ಭೇದೋಽಪಿ, ಇತ್ಯನೈಕಾನ್ತಿಕತ್ವಮನೇನೋಕ್ತಮ್ । ತಥಾ 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದ್ಯುದಾಹರಣೀಯಮ್ । ಯದಿ ಚ ತತ್ರ ಭೇದಾತಿರಿಕ್ತಂ ಕಿಮಪಿ ಸಂಬಂಧಪ್ರತೀತಿನಿಮಿತ್ತಮುಚ್ಯತೇ ತರ್ಹ್ಯತ್ರಾಪಿ ವಿಶೇಷಂ ವಕ್ಷ್ಯಾಮ ಇತ್ಯನ್ಯಥಾಸಿದ್ಧಿಃ । ಯದಿ 'ತತ್ರ ವ್ಯಪದೇಶಮಾತ್ರಂ ನ ಪ್ರತೀತಿಃ' ಇತ್ಯಭಿಧೀಯತೇ ತದಾಽತ್ರಾಪಿ ತತ್ಸಮಮಿತಿ ಸ್ವರೂಪಾಸಿದ್ಧಿಃ । ಅನಯೈವ ದಿಶಾ 'ಪಟೋ ಭಿನ್ನ' ಇತಿ ವಿಶೇಷಣತಯಾ ಪ್ರತೀತಿರಪಿ 'ನ ಭೇದಸಾಧಿಕಾ' ಇತಿ ದ್ರಷ್ಟವ್ಯಮ್ । ಅತ ಏವ 'ಸರ್ವತೋ- ವಿಲಕ್ಷಣಂ ಹಿ' ಇತ್ಯಾದಿ-ಪ್ರಯೋಗೋಽಪಿ ಯುಜ್ಯತೇ ।

ನನು, ಏತನ್ನಿಮಿತ್ತಾನ್ತರಾದಿಕಲ್ಪನಂ ಭೇದಸ್ಯ ಧರ್ಮಿಸ್ವರೂಪತ್ವೇ ಸಿದ್ಧೇ ಸ್ಯಾತ್, ತತ್ರೈವ ಕಿಂ ಪ್ರಮಾಣಮ್? ಇತಿ ಚೇತ್, ಯೋ ಭೇದಮೇವ ನಾಙ್ಗೀಕರೋತಿ ಕಿಂ ತಸ್ಯಾನಯಾ ತದ್ವಿಶೇಷಪ್ರಮಾಣಚಿನ್ತಯಾ? ಸ್ವರೂಪೇ ಪ್ರಮಾಣಮುಕ್ತಮ್ । ತಸ್ಯ ಚ ಬಾಧಕಾನಿ ಪರಿಹೃತಾನಿ 'ಅನುಮಾನ-ಮಾತ್ರೇಣ ಪ್ರತ್ಯಕ್ಷಂ ನ ಬಾಧ್ಯತ' ಇತಿ ಚ ವಕ್ಷ್ಯತೇ ।

ಹೀಗಾದರೂ ಭೇದಕ್ಕೆ ಧರ್ಮಿಸ್ವರೂಪತ್ವವು ಯುಕ್ತವಾಗದು. 'ಪಟಸ್ಯ ಭೇದಃ' ಎಂದು ಪಟದ ಸಂಬಂಧಿಯಾಗಿ (ಭೇದವು) ತೋರುವುದರಿಂದ. 'ಯಾವುದು ಯಾವುದರ ಸಂಬಂಧಿಯಾಗಿ ತೋರುವುದೋ ಅದು ಆ ವಸ್ತುವಿನ ಸ್ವರೂಪವಲ್ಲ' 'ಬ್ರಾಹ್ಮಣನ ಕಂಬಳಿ' ಎನ್ನುವುದು ಹೇಗೋ (ಹಾಗೆ)[1]. ಆದುದರಿಂದ ಉತ್ತರಿಸುತ್ತಾರೆ 'ಅಸ್ಯ' ಎಂದು. 'ಇತಿ ತು' ಅನಂತರದಲ್ಲಿ 'ಸಮ್ಬನ್ಧಿತಯಾ ಪ್ರತೀತಿರ್ವ್ಯಪದೇಶೋ ವಾ' ಎಂದು ಶೇಷಪೂರಣವನ್ನು ಮಾಡಿಕೊಳ್ಳುವುದು. 'ಇತಿ ವತ್' ಅನಂತರದಲ್ಲಿ 'ಉಪಪದ್ಯತೇ' ಎಂದು

1. ಬ್ರಾಹ್ಮಣನ ಸಂಬಂಧಿಯಾಗಿ ತೋರುವ ಕಂಬಳಿಗೂ ಬ್ರಾಹ್ಮಣನಿಗೂ-ಭೇದವು ಹೇಗೆ ಅನಿವಾರ್ಯವೋ ಹಾಗೆ 'ಪಟದ ಭೇದ' ಎನ್ನುವಲ್ಲಿಯೂ ಭೇದಕ್ಕೂ ಪಟಕ್ಕೂ ಭೇದವು ಅನಿವಾರ್ಯ ಎಂದು ಭಾವ.

ಶೇಷಪೂರಣ- ಮಾಡಿಕೊಳ್ಳುವುದು[1]. ಹೇಗೆ '**ಪದಾರ್ಥಸ್ಯ ಸ್ವರೂಪ**' ಎಂದು ಪದಾರ್ಥದ ಸಂಬಂಧಿಯಾಗಿ ಪ್ರತೀಯಮಾನವಾದರೂ ಸ್ವರೂಪವು (ಆ ಆ) ಪದಾರ್ಥದಿಂದ ಭಿನ್ನವಲ್ಲವೋ ಹಾಗೆ ಭೇದವೂ (ಪದಾರ್ಥದಿಂದ ಭಿನ್ನವಲ್ಲ), ಆದುದರಿಂದ ವ್ಯಭಿಚಾರವನ್ನು ಇದರಿಂದ ತಿಳಿಸಿದಂತಾಯಿತು[2]. ಹಾಗೆಯೇ 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿಗಳನ್ನೂ ಉದಾಹರಿಸುವುದು[3]. ಒಂದು ವೇಳೆ ಅಲ್ಲಿ (ಮೇಲೆ ವ್ಯಭಿಚರಿತ ಎಂದು ತಿಳಿಸಲು ನಿರ್ದೇಶಿಸಿದ ಸ್ಥಳಗಳಲ್ಲಿ) ಭೇದಕ್ಕಿಂತ ಮಿಗಿಲಾದ ಯಾವುದೋ ಸಂಬಂಧಿಪ್ರತೀತಕವಾದದ್ದು ಇದೆ ಎಂದು ಹೇಳುವುದಾದಲ್ಲಿ ಇಲ್ಲಿಯೂ (ಧರ್ಮಿ ಮತ್ತು ಭೇದಕ್ಕೂ ಆ) ವಿಶೇಷವನ್ನು ಹೇಳುತ್ತೇವೆ ಆದುದರಿಂದ (ನಿಮ್ಮ ಹೇತುವು) ಅನ್ಯಥಾಸಿದ್ಧ[4]. ಒಂದು ವೇಳೆ ಅಲ್ಲಿ (ಪದಾರ್ಥಸ್ಯ ಸ್ವರೂಪಂ) ಎನ್ನುವಲ್ಲಿ ಕೇವಲ ವ್ಯವಹಾರಮಾತ್ರ, ಪ್ರತೀತಿಯು ಇಲ್ಲ ಎಂದು ಹೇಳಿದಲ್ಲಿ ಇಲ್ಲಿಯೂ ಸಹ (ಪಟಸ್ಯ ಭೇದಂ ಎನ್ನುವಲ್ಲಿಯೂ ಸಹ) ಅದು (ವ್ಯವಹಾರ ಮಾತ್ರ ಪ್ರತೀತಿಯು ಇಲ್ಲ ಎನ್ನುವುದು) ಸಮಾನ ಎಂದು ಸ್ವರೂಪಾಸಿದ್ಧಿ (ಸಂಬಂಧಿ ತಯಾ ಪ್ರತೀಯಮಾನತ್ವ ಎಂಬ ಹೇತುವು ಅಸಿದ್ಧ ಎಂದು ಭಾವ). ಇದೇ ರೀತಿಯಲ್ಲಿ 'ಪಟೋ ಭಿನ್ನಃ' ಎಂದು (ಭೇದವು) ವಿಶೇಷಣವಾಗಿ

---

1. ಈ ರೀತಿಯಾಗಿ ಶೇಷಪೂರಣಮಾಡಿಕೊಂಡನಂತರದಲ್ಲಿ ಒಟ್ಟು ಮೂಲವಾಕ್ಯವು- 'ಅಸ್ಯ ಭೇದಃ' ಇತಿ ತು ಸಮ್ಬನ್ಧಿತಯಾ ಪ್ರತೀತಿರ್ವ್ಯಪದೇಶೋ ವಾ, 'ಪದಾರ್ಥಸ್ಯ ಸ್ವರೂಪಃ' ಇತಿ ವತ್ ಉಪಪದ್ಯತೇ ಎಂದು ಸಂಪನ್ನವಾಗುವುದು ಎಂದು ಭಾವ.

2. ಸಂಬಂಧಿತಯಾ ಪ್ರತೀಯಮಾನತ್ವಾತ್ ಎನ್ನುವ ಹೇತುವಿನಿಂದ ಧರ್ಮಿಗೂ ಭೇದಕ್ಕೂ ಭೇದವನ್ನು ಸಾಧಿಸಲು ಶಕ್ಯವಿಲ್ಲ, ಈ ಹೇತುವು ವ್ಯಭಿಚರಿತವಾಗಿದೆ 'ಪದಾರ್ಥಸ್ಯ ಸ್ವರೂಪಂ' ಎನ್ನುವ ಪ್ರತೀತಿಯಲ್ಲಿ ಸ್ವರೂಪವು ಪದಾರ್ಥಕ್ಕೆ ಸಂಬಂಧಿಯಾಗಿ ಪ್ರತೀತವಾಗುತ್ತಿದೆ, ಆದರೂ ಅವೆರಡಕ್ಕೂ ಭೇದವು ಇಲ್ಲದಿರುವುದು ಸಕಲವಾದಿಗಳಿಗೆ ಸಂಮತವಾಗಿದೆ, ಹಾಗೆಯೇ ಪ್ರಕೃತದಲ್ಲಿಯೂ ಸಹ ಎಂದು ಭಾವ.

3. ಬ್ರಹ್ಮನಿಗೂ ಬ್ರಹ್ಮನಲ್ಲಿಯ ಆನಂದಕ್ಕೂ ಅಭೇದವಿದೆ. ಆದರೂ 'ಬ್ರಹ್ಮನ ಆನಂದ' ಎಂದು ಸಂಬಂಧಿಯಾಗಿ ತೋರುವುದು. ಇಂತಹ ಅನೇಕಸ್ಥಳಗಳಲ್ಲಿ 'ಸಂಬಂಧಿತಯಾ ಪ್ರತೀಯಮಾನತ್ವಾತ್' ಎನ್ನುವ ಹೇತುವು ವ್ಯಭಿಚರಿತವಾಗಿದೆ ಎಂದು ಭಾವ.

4. ಸಂಬಂಧಿತಯಾ ಪ್ರತೀಯಮಾನತ್ವ ರೂಪ ಹೇತುವು ಇದ್ದರೂ ಧರ್ಮಿ ಭೇದಗಳಿಗೆ ಭೇದವನ್ನು ಸಾಧಿಸದೇ ಹೇತುವು ಪರ್ಯವಸಾನಗೊಳ್ಳುವುದು ಎಂದು ಭಾವ.

ಪ್ರತೀತವಾಗುವುದೂ ಭೇದಸಾಧಕವಲ್ಲ ಎಂದು ತಿಳಿಯುವುದು[1]. ಆದುದರಿಂದಲೇ (ಭೇದಪ್ರತಿನಿಧಿಯಾದ ವಿಶೇಷವನ್ನು ಒಪ್ಪಿರುವುದರಿಂದ) 'ಸರ್ವತೋ ವಿಲಕ್ಷಣಂ' ಇತ್ಯಾದಿ ಪ್ರಯೋಗಗಳೂ ಯುಕ್ತವಾಗುವುವು.[2]

ಅದು ಸರಿ, 'ಭೇದವು ಧರ್ಮಿಯ ಸ್ವರೂಪ' ಎನ್ನುವುದು ಸಿದ್ಧವಾದಲ್ಲಿ ಈ ನಿಮಿತ್ತಾಂತರವನ್ನು ಕಲ್ಪಿಸುವುದು ಯೋಗ್ಯವಾದೀತು[3], ಈ ವಿಷಯದಲ್ಲಿಯೇ (ಭೇದದ ಅಸ್ತಿತ್ವದ ವಿಷಯದಲ್ಲಿಯೇ) ಏನು ಪ್ರಮಾಣ? ಎಂದಲ್ಲಿ, ಯಾರು ಭೇದವನ್ನೇ ಒಪ್ಪಿಲ್ಲವೋ ಅಂತಹವರಿಗೆ ಈ ವಿಶೇಷವಾದ ಪ್ರಮಾಣದ ಚರ್ಚೆ ಏತಕ್ಕೆ? (ಭೇದದ) ಸ್ವರೂಪದ ವಿಷಯದಲ್ಲಿಯಾದರೋ ಪ್ರಮಾಣವನ್ನು ಹೇಳಿಯಾಗಿದೆ[4]. ಅದರ ಬಾಧಕಗಳನ್ನಾದರೋ ಪರಿಹರಿಸಿಯಾಗಿದೆ[5]. 'ಕೇವಲ

---

1. ದಂಡೀ ದೇವದತ್ತಃ ಎನ್ನುವಲ್ಲಿ ದಂಡವು ವಿಶೇಷಣ, ಈ ವಿಶೇಷಣವು ವಿಶೇಷ್ಯನಾದ ದೇವದತ್ತನಿಂದ ಭಿನ್ನವಾಗಿರುವುದು ಕಂಡಿದೆ, ಹಾಗಾಗಿ 'ಪಟೋ ಭಿನ್ನಃ' ಎನ್ನುವಲ್ಲಿ ಪಟಕ್ಕೆ ವಿಶೇಷಣವಾಗಿ ತೋರುವ ಭೇದವು ಪಟದಿಂದ ಭಿನ್ನವಾಗಿರಬೇಕು ಎನ್ನುವ ಸಂದೇಹಕ್ಕೆ ಎಡೆಯಿಲ್ಲ. ಈ ವಿಶೇಷಣ-ವಿಶೇಷ್ಯಭಾವಪ್ರತೀತಿಯು ಭೇದಸಾಧಕವಲ್ಲ. 'ಜೀವಃ ಬ್ರಹ್ಮಾಭಿನ್ನಃ' ಎಂಬ ವ್ಯವಹಾರವನ್ನು ಐಕ್ಯವಾದಿಗಳು ಹೇಗೆ ನಿರ್ವಹಿಸುವರೋ ಹಾಗೆಯೇ ಈ ವ್ಯವಹಾರವನ್ನು ನಿರ್ವಹಿಸಲಾಗುವುದು. ಅಥವಾ ಭೇದಪ್ರತಿನಿಧಿಯಾದ ವಿಶೇಷವನ್ನು ಇಂತಹ ಸ್ಥಳಗಳಲ್ಲಿ ಒಪ್ಪಿರುವುದರಿಂದ ಈ ವ್ಯವಹಾರವು ನಿರ್ವಾಹ್ಯ ಎಂದು ಭಾವ.

2. ಸರ್ವಪದಾರ್ಥಗಳಲ್ಲಿ ತಾನೂ- ಭೇದವೂ ಸೇರಿದೆ, ಭೇದವೂ ಭೇದದಿಂದ ಭಿನ್ನವಾಗ ಬೇಕಾದೀತು. ಹಾಗಾಗಿ ಈ ಪ್ರಯೋಗವು ಹೇಗೆ ಸಾಧು? ಎಂದು ಪ್ರಚ್ಛಕನ ಭಾವ. ವಿಶೇಷವು ಈ ಎಲ್ಲ ವ್ಯವಹಾರಗಳ ಅಡಚಣೆಯನ್ನು ನಿರ್ವಹಿಸುವುದು ಎಂದು ಉತ್ತರ ಎಂದು ಭಾವ.

3. 'ಪದಾರ್ಥಸ್ಯ ಸ್ವರೂಪಂ' ಎನ್ನುವಲ್ಲಿ ಪದಾರ್ಥಕ್ಕೂ ಸ್ವರೂಪಕ್ಕೂ ಭೇದವಿಲ್ಲ ಎನುವುದು ಎಲ್ಲರಿಗೂ ಸಿದ್ಧವಾಗಿದೆ, ಆದುದರಿಂದ ಸಸಂಬಂಧಿಯಾಗಿ ಪ್ರತೀತಿಯಿದ್ದರೂ ಇಲ್ಲಿ ಭೇದವಿಲ್ಲ ಎನ್ನುವುದನ್ನು ಕಾರಣಾಂತರದಿಂದ ಸಂಯೋಜಿಸಲಾಗುವುದು. ಪ್ರಕೃತದಲ್ಲಿ ಧರ್ಮಿಗೂ ಭೇದಕ್ಕೂ ಅಭೇದವನ್ನು ಸರ್ವರಿಂದಲೂ ಒಪ್ಪಲಾಗಿಲ್ಲ. ಹಾಗಾಗಿ ನಿಮಿತ್ತಾಂತರವನ್ನು ಕಲ್ಪಿಸುವ ಅಗತ್ಯವಿಲ್ಲ ಎಂದು ಭಾವ.

4. ಭೇದಸ್ತು ಸ್ವರೂಪದರ್ಶನ ಏವ ಸಿದ್ಧಃ ಇತ್ಯಾದಿಯಾಗಿ ಪ್ರತ್ಯಕ್ಷವೇ ಪ್ರಮಾಣ ಎಂದು ತಿಳಿಸಿಯಾಗಿದೆ ಎಂದು ಭಾವ.

5. ಭೇದವು ಧರ್ಮಿಯಿಂದ ಭಿನ್ನವೋ ಅಭಿನ್ನವೋ, ಭೇದವು ಮೊದಲು ತೋರುವುದೋ ನಂತರ ತೋರುವುದೋ ಇತ್ಯಾದಿ ಎಲ್ಲ ಸಂದೇಹಗಳಿಗೆ ಈ ಹಿಂದೆಯೇ ಉತ್ತರಿಸಲಾಗಿದೆ ಎಂದು ಭಾವ.

ಅನುಮಾನವು ಪ್ರತ್ಯಕ್ಷವನ್ನು ಬಾಧಿಸಲಾರದು' ಎನುವುದನ್ನು ಮುಂದೆ ತಿಳಿಸಲಾಗುವುದು[1].

**ಪದಾರ್ಥದ ಅರಿವಿನೊಡನೆ ಭೇದದ ಅರಿವೂ ಪ್ರಾಪ್ತವಾಗುವುದು**

**ಯದಿ ನ ಸ್ವರೂಪಂ ಭೇದಃ, ತದಾ ಪದಾರ್ಥೇ ದೃಷ್ಟೇ ಪ್ರಾಯಃ ಸರ್ವತೋ ವೈಲಕ್ಷಣ್ಯಂ ತಸ್ಯ ನ ಜ್ಞಾಯೇತ । ಅಜ್ಞಾತೇ ಚ ವೈಲಕ್ಷಣ್ಯೇ, ಆತ್ಮನಿ ಘಟ ಇತ್ಯಪಿ ಸಂಶಯಃ (ಯಾದಿಃ) ಸ್ಯಾತ್ । ನ ಹಿ ಕಶ್ಚಿತ್ ತಥಾ ಸಂಶಯಂ ಕರೋತಿ ।**

ಒಂದು ವೇಳೆ ಭೇದವು (ಧರ್ಮಿಯ) ಸ್ವರೂಪವಾಗದಿದ್ದಲ್ಲಿ, ಆಗ ಧರ್ಮಿಯು ಪ್ರತ್ಯಕ್ಷವಾಗುತ್ತಿರಲು ಅದಕ್ಕೆ (ಧರ್ಮಿಗೆ) ಸಾಧಾರಣವಾಗಿ ಎಲ್ಲ ಪದಾರ್ಥಗಳಿಂದ ಭೇದವು ತಿಳಿಯದಿರಬೇಕಾಗೀತು. ಭೇದವು ಅಜ್ಞಾತವಾದಲ್ಲಿ ತನ್ನಲ್ಲಿ ಘಟ (ನಾನು ನಾನೋ ಅಥವಾ ಘಟವೋ) ಎಂಬ ಸಂದೇಹವು ಪ್ರಾಪ್ತವಾಗಬೇಕಾದೀತು. ಯಾರೂ ಆ ತರಹದ ಸಂದೇಹವನ್ನು ಹೊಂದಿರುವುದಿಲ್ಲ.

ಅಥ ಯೋ ಭೇದಮಙ್ಗೀಕೃತ್ಯ ತಸ್ಯ ಧರ್ಮಿಸ್ವರೂಪತ್ವೇ ಪ್ರಮಾಣಂ ಜಿಜ್ಞಾಸತೇ ತಂ ಪ್ರತ್ಯಾಹ **'ಯದಿ'** ಇತಿ । ಅತ್ರಾಪಿ ಸಂಶಯಾದಿಸ್ಥಲ-ವ್ಯಾವೃತ್ತಯೇ **'ಪ್ರಾಯಃ'** ಇತ್ಯುಕ್ತಮ್ । ಭೇದಸ್ಯ ಧರ್ಮಿಸ್ವರೂಪತ್ವೇ ಹಿ ತದ್ದರ್ಶನ ಏವ ಪ್ರತಿಭಾಸೋ ಯುಜ್ಯತೇ । ಯದಿ ಚ ಭೇದೋ ಧರ್ಮಿಸ್ವರೂಪಾದತ್ಯನ್ತಂಭಿನ್ನಃ ಸ್ಯಾತ್ ತದಾ ಪಟದರ್ಶನೇ ಘಟ ಇವ ತಸ್ಯ ಸರ್ವತೋ ವ್ಯಾವೃತ್ತಿರ್ನ ಪ್ರತೀಯೇತ, ನಿಯಾಮಕಾಭಾವಾತ್ । ತತಃ ಕಿಂ? ಇತ್ಯತ ಆಹ **'ಅಜ್ಞಾತೇ ಚ'** ಇತಿ । ಆತ್ಮದರ್ಶನೇನ ತಸ್ಯ ಘಟಾದಿಸರ್ವ-ವ್ಯಾವೃತ್ತಾವಜ್ಞಾತಾಯಾಮಾತ್ಮವಿಷಯೇ 'ಕಿಮ್ ಉಪಲಭ್ಯಮಾನೋಽಹಂ ವಾ ಘಟೋ ವಾ' ಇತಿ ಸಂಶಯೋ 'ಘಟ ಏವ' ಇತಿ ವಿಪರ್ಯಯೋ ವಾ

1. 'ಪ್ರತ್ಯಕ್ಷದಿಂದ ಸಿದ್ಧವಾದ ಭೇದವನ್ನು ಅನುಮಾನದಿಂದ ನಿರಾಕರಿಸಲಾಗುವುದು' ಎಂದು ಹೇಳುವುದು ತರವಲ್ಲ. 'ನ ಹಿ ಪ್ರಮಾಣದೃಷ್ಟಂ ತರ್ಕಬಾಧ್ಯಧ್ಯತ್ವಮ್' ಎಂದು ಮುಂದೆ (604ನೇ ಪುಟದಲ್ಲಿ) ಉಪದೇಶಿಸಲಿರುವರು. ತರ್ಕವು ಪ್ರತ್ಯಕ್ಷದೃಷ್ಟವಾದುದನ್ನು ಬಾಧಿಸುವು-ದಾದಲ್ಲಿ ಬಾಧ ಎನ್ನುವ ಅನುಮಾನದ ದೋಷಕ್ಕೆ ಎಡೆಯೇ ಇಲ್ಲದಾದೀತು ಎಂದು ಭಾವ.

**ಸ್ಯಾತ್, ಸಮಾನಧರ್ಮಾದೇಃ ಸದ್ಭಾವಾತ್ ಪ್ರತಿಬನ್ಧಕಸ್ಯ ಚ ವ್ಯಾವೃತ್ತಿ-ಜ್ಞಾನಸ್ಯಾಭಾವಾತ್ । ಅಸ್ತು ತಥಾ ಸಂಶಯಾದಿಕಮ್? ಇತಿ ಚೇನ್ನ । ಅಪ್ರಾಮಾಣಿಕಾಙ್ಗೀಕಾರಸ್ಯ ಅನುಚಿತತ್ವಾದಿತ್ಯಾಶಯವಾನಾಹ 'ನಹಿ' ಇತಿ ।**

ಯಾರು ಭೇದವನ್ನು ಒಪ್ಪಿ ಅದು ಧರ್ಮಿಯ ಸ್ವರೂಪ ಎನ್ನುವ ವಿಷಯದಲ್ಲಿ ಪ್ರಮಾಣದ ಜಿಜ್ಞಾಸೆಯನ್ನು ಮಾಡುವರೊ ಅವರನ್ನು ಉದ್ದೇಶಿಸಿ ಹೇಳುತ್ತಾರೆ **'ಯದಿ'** ಎಂದು. ಇಲ್ಲೂ ಸಹ ಸಂಶಯಾದಿ ಸಂದರ್ಭವನ್ನು ವ್ಯಾವೃತ್ತಿಗೊಳಿಸಲು **'ಪ್ರಾಯಃ'** ಎಂದು ಹೇಳಿರುವರು. ಭೇದವು ಧರ್ಮಿಯ ಸ್ವರೂಪವಾಗಿದ್ದಲ್ಲಿ ಅದರ (ಧರ್ಮಿಯ) ಪ್ರತಿಭಾಸವಾದಾಗಲೇ (ಭೇದದ ಪ್ರತಿಭಾಸವು) ಯುಕ್ತವಾಗುವುದು. ಒಂದು ವೇಳೆ ಧರ್ಮಿಯ ಸ್ವರೂಪದಿಂದ, ಭೇದವು ಅತ್ಯಂತ ಭಿನ್ನವೇ ಆಗಿದ್ದಲ್ಲಿ ಪಟದ ಪ್ರತೀತಿಯಲ್ಲಿ ಘಟದಂತೆ (ಘಟವು ತೋರದೇ ಇರುವಂತೆ) ಅದರ (ಧರ್ಮಿಯ) ಎಲ್ಲದರಿಂದ ವ್ಯಾವೃತ್ತಿಯು ತೋರದೇ ಇರಬೇಕಾದೀತು, (ಧರ್ಮಿಯಲ್ಲಿರುವ ಇತರಪ್ರತಿಯೋಗಿಕ ಭೇದದ ಅರಿವು ಪ್ರಾಪ್ತವಾಗಲು ಬೇರೇ ಯಾವುದೇ) ಕಾರಣವು ಇಲ್ಲದಿರುವುದರಿಂದ[1]. ಇದರಿಂದ ಏನು? ಆದುದರಿಂದ ಉತ್ತರಿಸುತ್ತಾರೆ **'ಅಜ್ಞಾತೇ ಚ'** ಎಂದು. ತನ್ನ ಅರಿವು (ತನಗೇ) ಪ್ರಾಪ್ತವಾದಾಗ ಆತನಿಗೆ (ತನ್ನಿಂದ ಇತರವಾದ) ಘಟಾದಿ ಎಲ್ಲ ಪದಾರ್ಥಗಳಿಂದ ಭೇದದ ಅರಿವು ಇಲ್ಲ ಎಂತಾದಲ್ಲಿ, ತನ್ನ ವಿಷಯದಲ್ಲಿ ಪ್ರಾಪ್ತವಾದ (ಆ ಅರಿವಿನಲ್ಲಿ ಪ್ರತಿಭಾಸವಾಗುತ್ತಿರುವುದು) 'ನಾನೋ ಅಥವಾ ಘಟವೋ' ಎಂಬ ಸಂದೇಹ ಅಥವಾ 'ಘಟವೇ ನಾನು' ಎಂಬ ವಿರುದ್ಧಜ್ಞಾನವು ಪ್ರಾಪ್ತವಾಗಬೇಕಾದೀತು, ಸಮಾನವಾದ ಧರ್ಮಗಳು ಇರುವುದರಿಂದ,

1. 'ಅಯಂ ಪಟಃ' ಎನ್ನುವ ಅರಿವು ಬಂದಾಗ ಘಟಾದಿ ಇತರ ಯಾವುದೇ ಪದಾರ್ಥಗಳ ಅರಿವು ಬರುವುದಿಲ್ಲ. ಅಂದರೆ ಪಟದಿಂದ ಅತ್ಯಂತ ಭಿನ್ನವಾದುದರಿಂದ ಘಟಾದಿ ಪದಾರ್ಥಗಳ ಅರಿವು ಆಗ ಪ್ರಾಪ್ತವಾಗುವುದಿಲ್ಲ. ಭೇದವು ಪಟದಿಂದ ಅತ್ಯಂತ ಭಿನ್ನವಾದಲ್ಲಿ ಘಟಾದಿಗಳಂತೆ ಭೇದವೂ ತೋರದೇ ಇರಬೇಕಾದೀತು. ಆದರೆ 'ಪಟವು ಘಟಾದಿ ಪದಾರ್ಥಗಳಿಂದ ಭಿನ್ನ' ಎಂಬ ಭೇದದ ಅರಿವೂ, ಪಟದ ಅರಿವಿಗೆ ಕಾರಣವಾದ ಸಾಮಗ್ರಿಗಳಿಂದಲೇ ಪಟದ ಅರಿವು ಪ್ರಾಪ್ತವಾಗುವಾಗಲೇ ಪ್ರಾಪ್ತವಾಗುವುದು ಎಲ್ಲರ ಅನುಭವದಲ್ಲಿದೆ. ಪಟದಿಂದ ಭಿನ್ನವಾದ ಘಟಾದಿಗಳ ಅರಿವು ಬರುವುದಿಲ್ಲ, ಆದರೆ 'ಪಟವು ಇತರ ಎಲ್ಲ ಪದಾರ್ಥಗಳಿಂದ ವ್ಯಾವೃತ್ತ-ಭಿನ್ನ' ಎಂಬ ಅರಿವು ಪ್ರಾಪ್ತವಾಗುವುದು ಇದರಿಂದ ಈ ವ್ಯಾವೃತ್ತಿಯು-ಭೇದವು ಪಟದಿಂದ ಅಭಿನ್ನವೇ ಆಗಿರಬೇಕು ಎಂದು ಭಾವ.

ಪ್ರತಿಬಂಧಕವಾದ ವ್ಯಾವೃತ್ತಿಯ ಅರಿವು ಇಲ್ಲದಿರುವುದರಿಂದ[1]. ಸಂದೇಹಾದಿಗಳು ಇರಲಿ ಎಂದೆನ್ನಲಾಗದು. ಅಪ್ರಾಮಾಣಿಕವಾದದ್ದನ್ನು ಒಪ್ಪುವುದು ಅನುಚಿತವಾಗಿರುವುದರಿಂದ ಎಂದು ಹೇಳುತ್ತಾರೆ 'ನ ಹಿ' ಎಂದು.

**ಅನುಭವದಲ್ಲಿರುವ ಭೇದವು ಧರ್ಮಿಯ ಸ್ವರೂಪ**

**ಇದಮುಕ್ತಂ ಭವತಿ- ಅಸ್ತಿ ತಾವದ್ ಭೇದಃ, ತಸ್ಯ ಚ ದ್ವಯ್ಯೇವ ಗತಿಃ । ಧರ್ಮಿಸ್ವರೂಪತ್ವಂ ವಾ ತತೋ ಭಿನ್ನತ್ವಂ ವೇತಿ । ತತ್ರ ಭೇದಪಕ್ಷಸ್ಯ ಸರ್ವತ್ರ ಸಂಶಯಾದಿಪ್ರಸಙ್ಗೇನಾನುಪಪನ್ನತ್ವಾತ್ ಪರಿಶೇಷಾತ್ ಸ್ವರೂಪತ್ವಮೇವ ಸಿದ್ಧ್ಯತಿ । ನಚ ವಾಚ್ಯಂ 'ಧರ್ಮಿಪ್ರತೀತಾವಪ್ರತೀತೋಽಪಿ ಭೇದಃ ಪಶ್ಚಾತ್ ಪ್ರತ್ಯೇಷ್ಯತೇ, ಸ ಚ ಪ್ರಸಕ್ತಮಪಿ ಸಂಶಯಾದಿಕಂ ನಿರೋತ್ಸ್ಯತಿ' ಇತಿ ಪಶ್ಚಾದ್ಧಿ 'ಭೇದೋಽಸ್ಯಾಸ್ಮಾತ್' ಇತಿ ಪ್ರತ್ಯೇತವ್ಯಃ । ನಚ ಪ್ರಾಗ್ಭೇದಾನವಗತೌ ಅಖಣ್ಡೇ ವಸ್ತುನಿ 'ಅಸ್ಯ ಅಸ್ಮಾತ್' ಇತಿ ವಿಭಾಗೇನಾನುವಾದೋ ಘಟತೇ । ಅತೋ ಧರ್ಮಿಪ್ರತೀತಾವೇವ ಭೇದೋ ನ ಪ್ರತೀಯತೇ ಚೇತ್, ನ ಪ್ರತೀಯೇತೈವ ಕದಾಽಪಿ, ಇತಿ ಸಂಶಯಾದಿಪ್ರಸಙ್ಗೋ ದುರ್ವಾರ ಏವ ।**

---

1. ಭೇದವು ಧರ್ಮಿಯ ಸ್ವರೂಪವಲ್ಲ ಮತ್ತು ಧರ್ಮಿಯ ಅರಿವು ಉಂಟಾದಾಗ ಭೇದದ ಅರಿವು ಪ್ರಾಪ್ತವಾಗುವುದಿಲ್ಲ ಎಂದು ವಾದಿಸಿದಲ್ಲಿ- ಧರ್ಮಿಯ ಪ್ರಾಪ್ತಿಯಾಗಿ ಅದರಲ್ಲಿನ ವಿಶೇಷಧರ್ಮದ ಅರಿವಾಗದಿದ್ದಲ್ಲಿ 'ಇದು ಸ್ಥಾಣುವೋ ಪುರುಷನೋ' ಎಂಬ ಸಂದೇಹವು ಪ್ರಾಪ್ತವಾಗುವುದು ವಿದಿತವಾಗಿದೆ. ಅದರಂತೆ ಆತ್ಮನ ಅರಿವು ಪ್ರಾಪ್ತವಾದಾಗ 'ನಾನೋ ಅಥವಾ ಘಟವೋ' ಎಂದು ಸಂದೇಹವು ಪ್ರಾಪ್ತವಾಗಬೇಕಾದೀತು. ಧರ್ಮಿಯಾದ ಆತ್ಮನು ಪ್ರಾಪ್ತನಾಗಿರುವನು, ಭೇದವು ಆತ್ಮನಿಂದ ಭಿನ್ನ ಎಂತಾದಲ್ಲಿ, ಇತರ ವ್ಯಾವೃತ್ತಿಯ ಅರಿವಿಗೆ ಕಾರಣವಿಲ್ಲ. ಪ್ರಮೇಯತ್ವೇನ ಸಾಮಾನ್ಯ ಧರ್ಮದ ಅರಿವು ಇದೆ. ಹಾಗಾಗಿ ಈ ತರಹದ ಸಂದೇಹವು ಪ್ರಾಪ್ತವಾಗಬೇಕಾದೀತು. ಅಥವಾ ಶುಕ್ತಿಯನ್ನು ಕಂಡಾಗ ಧರ್ಮಿಯ ಅರಿವಾಗದೇ ಕೇವಲ ಸಾಮಾನ್ಯಧರ್ಮದ ಹೊಳಪಿನ ಅರಿವಾದಾಗ 'ಇದಂ ರಜತಂ' ಎಂಬ ಮಿಥ್ಯಾಜ್ಞಾನವು ಪ್ರಾಪ್ತವಾಗುವಂತೆ, ಆತ್ಮದ ಅರಿವು ಬಂದಾಗ 'ಘಟೋಽಹಂ' ಎಂಬ ಮಿಥ್ಯಾಭೂತವಾದ ಅರಿವು ಪ್ರಾಪ್ತವಾಗಲಿ. ಸಂದೇಹ ಮತ್ತು ಮಿಥ್ಯಾಜ್ಞಾನದ ಪ್ರಾಪ್ತಿಗೆ ಕಾರಣವಾದ ಸಾಮಗ್ರಿಗಳು ಇವೆ, ಪ್ರತಿಬಂಧಕವಾದ ಭೇದದ ಅರಿವು ಇಲ್ಲದಿರುವುದರಿಂದ. ಈ ರೀತಿಯ ಪ್ರಶ್ನೆಗೆ ಭೇದವು ಧರ್ಮಿಯ ಸ್ವರೂಪವಲ್ಲ ಎನ್ನುವ ವಾದಿಗಳು ಏನು ಉತ್ತರವನ್ನು ಹೇಳುವರು? ಎಂದು ಭಾವ.

**ಅಥಾಪಾತಜಾಯಾಂ ನಿರ್ವಿಕಲ್ಪಿಕಾಯಾಂ ಸಂವಿದಿ ಭೇದಸ್ಯ ಭೇದಿನೋಶ್ಚ ಯುಗಪದಙ್ಗುಲಿತ್ರಯವದವಭಾಸಾತ್ ನ ಸಂಶಯಾದ್ಯನವಕಾಶ ಇತಿ ಚೇನ್ನ । ತಸ್ಯ ಭೇದಸ್ಯೈತದೀಯತಯಾಽನವಗತಸ್ಯೈತದ್ವಿಷಯಸಂಶಯಾದಿ-ಪ್ರತಿಬನ್ಧಕತ್ವಾನುಪಪತ್ತೇಃ । ಅನ್ಯಥಾ ಸರ್ವತ್ರ ಸಂಶಯಾದ್ಯನುದಯ-ಪ್ರಸಙ್ಗಾದಿತಿ ।**

ಇಷ್ಟು ಹೇಳಿದಂತಾಗುವುದು– ಭೇದವಂತೂ ಇದೆ, ಅದಕ್ಕೆ (ಭೇದಕ್ಕೆ) ಎರಡೇ ವಿಧದಲ್ಲಿ ವ್ಯವಸ್ಥೆ. ಧರ್ಮಿಯ ಸ್ವರೂಪ ಅಥವಾ ಅದರಿಂದ (ಧರ್ಮಿಯಿಂದ) ಭಿನ್ನ ಎಂದು. ಅವುಗಳಲ್ಲಿ ಭೇದಪಕ್ಷವನ್ನು ಅಂಗೀಕರಿಸಿದಲ್ಲಿ, ಎಲ್ಲ ಸಂದರ್ಭದಲ್ಲೂ ಸಂಶಯಾದಿಗಳೇ ಪ್ರಾಪ್ತವಾಗುವ ಪ್ರಸಂಗವು ಇರುವುದರಿಂದ (ಭೇದಪಕ್ಷವು ಸರಿಯಾಗದು, ಆದುದರಿಂದ) ಉಳಿದ (ಭೇದವು ಧರ್ಮಿಯ ಸ್ವರೂಪ ಎನ್ನುವ) ಸ್ವರೂಪಪಕ್ಷವೇ ಸಿದ್ಧವಾಗುವುದು[1]. ಧರ್ಮಿಯು ಮಾತ್ರ ಪ್ರತೀತವಾದರೂ ಅಪ್ರತೀತವಾದ ಭೇದವು ನಂತರದಲ್ಲಿ ತೋರುವುದು, ಅದು (ನಂತರದಲ್ಲಿ ತೋರುವ ಭೇದವು) ಪ್ರಸಕ್ತವಾದ ಸಂದೇಹಾದಿಗಳನ್ನು ತಡೆಯುವುದು, ನಂತರದಲ್ಲಿ 'ಅದರಿಂದ ಇದಕ್ಕೆ ಭೇದವು' ಎಂದು ತಿಳಿಯುವುದು ಎಂದು ಹೇಳುವುದು ತರವಲ್ಲ, ಮೊದಲು ಭೇದದ ಅರಿವಿಲ್ಲದ ಅಖಂಡವಸ್ತುವಿನಲ್ಲಿ 'ಇದರಲ್ಲಿ, ಇದರಿಂದ' ಎಂಬ ವಿಭಾಗದ ಅನುವಾದವೇ ಯುಕ್ತವಾಗದು. ಆದುದರಿಂದ ಧರ್ಮಿಯು ಪ್ರತೀತವಾದಾಗಲೇ ಭೇದವು ಪ್ರತೀತವಾಗಲಿಲ್ಲ ಎಂದಾದಲ್ಲಿ (ಆ ಭೇದವು ಎಂದೂ) ಪ್ರತೀತವೇ ಆಗಲಾರದು, ಯಾವಾಗಲೂ ಸಂಶಯಾದಿಗಳು (ಪ್ರಾಪ್ತವಾಗಲಿ) ಎನ್ನುವುದು ಅನಿವಾರ್ಯವೇ (ಆಯಿತು). ಹೀಗಾಗದಲ್ಲಿ, ಪ್ರಪ್ರಥಮ ಸನ್ನಿಕರ್ಷದಿಂದ ಪ್ರಾಪ್ತವಾದ ನಿರ್ವಿಕಲ್ಪಿಕಜ್ಞಾನದಲ್ಲಿ ಭೇದ ಮತ್ತು ಧರ್ಮಿಯು ಒಟ್ಟಿಗೆ ಮೂರು ಬೆರಳುಗಳಂತೆ ತೋರುವುದರಿಂದ ಸಂದೇಹಾದಿಗಳಿಗೆ ಅವಕಾಶ ಇಲ್ಲ ಎಂದೂ ಹೇಳಲಾಗದು. 'ಈ ಪದಾರ್ಥಕ್ಕೆ ಸಂಬಂಧಿಸಿದ ಭೇದ' ಎಂದು ತೋರದಿದ್ದಲ್ಲಿ

---

1. 'ಅಯಂ ಘಟಃ' ಎಂಬ ಜ್ಞಾನವು ಪ್ರಾಪ್ತವಾದ ಸಂದರ್ಭದಲ್ಲಿ ಧರ್ಮಿಯಿಂದ ಭಿನ್ನವಾದ ಭೇದದ ಅರಿವು ಇಲ್ಲದೇ, ಅರಿವು ಪ್ರಾಪ್ತವಾದ ಎಲ್ಲ ಸಂದರ್ಭದಲ್ಲೂ ಸಂಶಯಜ್ಞಾನವೋ ವಿಪರ್ಯಯಜ್ಞಾನವೋ ಪ್ರಾಪ್ತವಾಗಬೇಕಾದೀತು ಎಂದು ಭಾವ.

ಆ ಪದಾರ್ಥಕ್ಕೆ ಸಂಬಂಧಿಸಿದ ಸಂದೇಹಕ್ಕೆ ಪ್ರತಿಬಂಧಿಯಾಗಲಾರದು[1]. ಹಾಗಾಗದಪಕ್ಷದಲ್ಲಿ ಎಲ್ಲಿಯೂ ಸಂದೇಹಾದಿಗಳು ಬಾರದೇ ಇರಬೇಕಾದೀತು[2].

**ಧರ್ಮಿಯ ಅನುಭವದೊಡನೆ ಭೇದದ ಅನುಭವವೂ ಇದೆ**

**ಜ್ಞಾತ್ವೈವ ಪ್ರಾಯಃ ಸರ್ವತೋ ವೈಲಕ್ಷಣ್ಯಂ ಕಸ್ಮಿಂಶ್ಚಿದೇವ ಸದೃಶೇ ಸಂಶಯಂ ಕರೋತಿ । ನಹ್ಯಾತ್ಮನಿ 'ಅಹಂ ದೇವದತ್ತೋ ನವಾ' ಇತಿ ಕಸ್ಯಚಿತ್ ಸಂಶಯೋ ಭವತಿ ।**

(ಧರ್ಮಿಯ ಅರಿವಾದಾಗ) ಪ್ರಾಯಕವಾಗಿ ಎಲ್ಲ (ಇತರ ಪದಾರ್ಥಪ್ರತಿಯೋಗಿಕ) ಭೇದವು ತಿಳಿದೇ ಇರುವುದು, ಸದೃಶವಾದ ಕೆಲವು ಪದಾರ್ಥಗಳಲ್ಲಿ ಮಾತ್ರ ಸಂದೇಹವು ಪ್ರಾಪ್ತವಾಗುವುದು. 'ನಾನು ದೇವದತ್ತನೋ ಅಥವಾ ಅಲ್ಲವೋ (ಘಟವೋ)' ಎಂದು ಯಾರಿಗೂ ಸಂದೇಹವು ಬಾರದು.

**ನನು, ಯದಿ ಭೇದೋ ಧರ್ಮಿಸ್ವರೂಪಂ ಸ್ಯಾತ್ ತರ್ಹಿ ತತ್ಪ್ರತೀತಾವೇವ ಪ್ರತೀಯೇತ । ನಚೈವಮ್, ತಥಾ ಸತಿ ಸಂಶಯಾದ್ಯಭಾವಪ್ರಸಙ್ಗಾತ್ । ಅಸ್ತಿ ಚ ಸಂಶಯಾದಿಕಂ ಪ್ರಮಾಣಸಿದ್ಧಮಿತಿ ನ ಧರ್ಮಿಪ್ರತೀತೌ ಭೇದಪ್ರತೀತಿಃ। ತತ್ಕಥಂ ತಸ್ಯ ತತ್ಸ್ವರೂಪತ್ವಮ್? ಇತ್ಯತ ಆಹ 'ಜ್ಞಾತ್ವೈವ' ಇತಿ ।**

**ಅಯಮಭಿಪ್ರಾಯಃ- ಏಕ ಏವ ಖಲು ಏಕಸ್ಯ ವಸ್ತುನೋ ಭೇದೋऽ-**

---

1. 'ಸ್ಥಾಣುರ್ವಾ ಪುರುಷೋವಾ' ಎನ್ನುವ ಸಂದೇಹವು ಪ್ರಾಪ್ತವಾದಾಗ, ಈ ಸಂದೇಹವು ನಿವೃತ್ತವಾಗಬೇಕಾದಲ್ಲಿ, ಪ್ರಕೃತದಲ್ಲಿ ಪ್ರತಿಭಾಸಮಾನವಾದ ಧರ್ಮಿಯಲ್ಲಿ ಸ್ಥಾಣುತ್ವ ಅಥವಾ ಪುರುಷತ್ವದ ಅರಿವು ಬೇಕೇ ಹೊರತು, ಕೇವಲ ಸಾಮಾನ್ಯವಾದ ಸ್ಥಾಣು-ಪುರುಷರಲ್ಲಿನ ಭೇದದ ಅರಿವಾಗಲಿ, ಪ್ರಸಕ್ತ ಧರ್ಮಿಯಲ್ಲಿ ತೋರಿದ ಇತರ ಪ್ರತಿಯೋಗಿಕ ಭೇದದ ಅರಿವಾಗಲಿ ಪ್ರಯೋಜಕವಲ್ಲ. ಈಗಾಗಲೆ ಸ್ಥಾಣುರ್ವಾ ಪುರುಷೋ ವಾ ಎಂಬ ಸಂದೇಹವಿರುವ ವ್ಯಕ್ತಿಗೆ ಸ್ಥಾಣು ಪುರುಷರ ಭೇದದ ಅರಿವು ಮತ್ತು ಘಟಾದಿ ಇತರ ಪದಾರ್ಥಗಳಿಂದ ಪುರೋವರ್ತಿಯಾದ ವಸ್ತುವು ಭಿನ್ನ ಎಂಬ ಅರಿವು ಇದೆ ಎಂದು ಭಾವ.
2. 'ಯಾವುದೋ ಭೇದದ ಅರಿವಿನಿಂದ ಮತ್ತಾವುದೋ ಸಂದೇಹಾದಿಗಳಿಗೆ ಎಡೆಯಿಲ್ಲ' ಎಂದು ಒಪ್ಪಿದಲ್ಲಿ ಜನಸಾಮಾನ್ಯರಲ್ಲಿ ಯಾವುದಾದರೂ ಭೇದದ ಅರಿವು ಇರುವುದರಿಂದ 'ಸಂದೇಹಾದಿಗಳೇ ಎಂದೂ ಎಲ್ಲೂ ಇಲ್ಲ' ಎಂದಾಗಬೇಕಾದೀತು ಎಂದು ಭಾವ.

ನೇಕತ್ವೇ ಪ್ರಮಾಣಾಭಾವಾತ್ । ಸ ಚ ವಸ್ತುಪ್ರತೀತೌ ಪ್ರತೀಯತ ಏವ ಕಿನ್ತು ತಸ್ಯ ಘಟಪ್ರತಿಯೋಗಿಕತ್ವಂ ಪಟಪ್ರತಿಯೋಗಿಕತ್ವಂ ಇತ್ಯಾದಯೋಽನನ್ತಾ ಧರ್ಮಾಃ । ತತ್ರ ಭೇದನಿಷ್ಠೋ ಯತ್ಪ್ರತಿಯೋಗಿಕತ್ವರೂಪೋ ಧರ್ಮಃ ಸಾದೃಶ್ಯಾದಿವಶಾನ್ನ ಪ್ರತೀಯತೇ ತತ್ರ ಸಂಶಯಾದಿಕಮುತ್ಪದ್ಯತೇ, ನ ತು ತತ್ರಾಪಿ ಭೇದಸ್ಯಾಪ್ರತೀತಿಃ । ಅತಃ ಸಂಶಯಾದೇಃ ಅನ್ಯಥೋಪಪತ್ತೇರ್ನ ತದರ್ಥಂ ಧರ್ಮಿಪ್ರತೀತೌ ಭೇದಾಪ್ರತೀತಿರಙ್ಗೀಕಾರ್ಯಾ, ಯಯಾ ಭೇದಸ್ಯಾಸ್ವರೂಪತ್ವಂ ಭವೇದಿತಿ ।

ಸಂಶಯಾದಿಸ್ಥಲೇಽಪಿ 'ಸರ್ವತೋ ಭೇದಃ ಪ್ರತೀಯತ ಏವ' ಇತ್ಯುಕ್ತಂ ತತ್ಕುತಃ? ಇತಿ ಚೇನ್ನ । ಭೇದಸ್ಯ ಸರ್ವಥಾಽಪ್ರತೀತಾವಾತ್ಮನಿ ಪ್ರತೀಯ-ಮಾನಃ 'ಅಹಂ ಕಿಂ ದೇವದತ್ತೋಽಥವಾ ಘಟ' ಇತ್ಯಾದಿಸಂಶಯೋ 'ಘಟ ಏವ' ಇತಿ ವಿಪರ್ಯಯೋ ವಾ ಸ್ಯಾತ್, ನೈವಮಸ್ತೀತ್ಯಾಹ 'ನ ಹಿ' ಇತಿ । 'ನ ವಾ' ಇತ್ಯಸ್ಯ 'ಘಟೋ ವಾ' ಇತ್ಯರ್ಥಃ ।

ಸರಿ ಹಾಗದಲ್ಲಿ, ಒಂದು ವೇಳೆ ಭೇದವು ಧರ್ಮಿಯ ಸ್ವರೂಪವೇ ಆಗಿದ್ದಲ್ಲಿ ಅದರ (ಧರ್ಮಿಯ) ಪ್ರತೀತಿಯಾದಾಗಲೇ (ಭೇದವೂ) ತೋರಬೇಕಾದೀತು. ಹಾಗಿಲ್ಲ, ಹಾಗೇ ಆಗಿದ್ದಲ್ಲಿ ಸಂದೇಹಾದಿಗಳೇ ಇಲ್ಲದೇ ಹೋಗಬೇಕಾದೀತು. ಸಂದೇಹಾದಿಗಳಾದರೋ ಪ್ರಮಾಣಸಿದ್ಧವಾಗಿವೆ, ಆದುದರಿಂದ ಧರ್ಮಿಯು ಪ್ರತೀತಿಯಾದರೂ ಭೇದದ ಪ್ರತೀತಿಯು ಇಲ್ಲ[1]. ಆದುದರಿಂದ ಹೇಗೆ ಅದಕ್ಕೆ (ಭೇದಕ್ಕೆ) ಅದರ (ಧರ್ಮಿಯ) ಸ್ವರೂಪತ್ವವು? ಎಂದು. ಆದುದರಿಂದ ಉತ್ತರಿಸುವರು 'ಜ್ಞಾತ್ವೈವ' ಎಂದು.

ಇದು ಅಭಿಪ್ರಾಯ- ಒಂದು ವಸ್ತುವಿನಲ್ಲಿಯ ಭೇದವು ಒಂದೇ, (ಅ)

---

1. ಸ್ಥಾಣುವನ್ನು ಕಂಡಾಗ 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂದೇಹಜ್ಞಾನವಿರುವುದು ಎಲ್ಲರ ಅನುಭವದಲ್ಲಿದೆ. ಅಂದರೆ ಸ್ಥಾಣು ಮತ್ತು ಪುರುಷರಲ್ಲಿನ ಭೇದದ ಅರಿವು ಆಗಿಲ್ಲ ಎನ್ನುವುದನ್ನು ಈ ಸಂದೇಹವು ನಿಶ್ಚಯಗೊಳಿಸುವುದು. ಹಾಗಾದಲ್ಲಿ ಧರ್ಮಿಯಾದ ಸ್ಥಾಣುವು ತೋರಿದರೂ ಅದರಲ್ಲಿನ ಪುರುಷಪ್ರತಿಯೋಗಿಕ ಭೇದವು ತೋರದೇ ಇರುವುದರಿಂದ ಧರ್ಮಿಯಾದ ಸ್ಥಾಣು ಮತ್ತು ಅದರಲ್ಲಿರುವ ಪುರುಷಪ್ರತಿಯೋಗಿಕಭೇದ ಇವೆರಡಕ್ಕೆ ಭೇದವಿದೆ ಎಂದು ಒಪ್ಪಲೇ ಬೇಕು ಎಂದು ಪ್ರಚ್ಛಕನ ಅಭಿಮತ.

ಭೇದವು ಅನೇಕ ಎನ್ನಲು ಪ್ರಮಾಣವಿಲ್ಲದಿರುವುದರಿಂದ. ಅದಾದರೋ (ಆ ಭೇದವಾದರೋ) ವಸ್ತುವು ಪ್ರತೀತವಾದಾಗ ತೋರೇ ತೋರುವುದು, ಆದರೆ ಅದಕ್ಕೆ (ಭೇದಕ್ಕೆ) ಘಟಪ್ರತಿಯೋಗಿಕತ್ವ ಪಟಪ್ರತಿಯೋಗಿಕತ್ವ ಎಂದು ಅನೇಕ ಧರ್ಮಗಳು (ಇವೆ). ಅಲ್ಲಿ (ಸಂಶಯಾದಿ ಸ್ಥಳದಲ್ಲಿ) ಭೇದದಲ್ಲಿರುವ ಯಾವ ಪ್ರತಿಯೋಗಿಕತ್ವ ರೂಪವಾದ ಧರ್ಮವು, ಸಾದೃಶ್ಯಾದಿಗಳ ಪ್ರಭಾವದಿಂದ ತೋರುವುದಿಲ್ಲವೋ, ಅಲ್ಲಿ ( ಆ ವಿಷಯದಲ್ಲಿ) ಸಂಶಯಾದಿಗಳು ಪ್ರಾಪ್ತ-ವಾಗುವುದು. ಅಲ್ಲೂ ಸಹ ಭೇದದ (ಸರ್ವಥಾ) ಪ್ರತೀತಿಯು ಇಲ್ಲ ಎಂದಿಲ್ಲ[1]. ಆದುದರಿಂದ ಸಂಶಯಾದಿಗಳು ಬೇರೇ ಕಾರಣದಿಂದ ಉಪಪನ್ನವಾಗುವುದ-ರಿಂದ ಅದಕ್ಕಾಗಿ (ಸಂಶಯದ ನಿರ್ವಹಣೆಗಾಗಿ) ಧರ್ಮಿಯ ಪ್ರತೀತಿಯಾದಾಗ ಭೇದದ ಅಪ್ರತೀತಿಯನ್ನು ಒಪ್ಪುವ ಅಗತ್ಯವಿಲ್ಲ, ಇದರಿಂದ (ಧರ್ಮಿಯ ಪ್ರತೀತಿಯು ಆಗಿ ಭೇದದ ಪ್ರತೀತಿಯು ಆಗದೇ ಇರುವುದರಿಂದ) ಭೇದಕ್ಕೆ (ಧರ್ಮಿಯ) ಅಸ್ವರೂಪತೆಯು ಪ್ರಾಪ್ತವಾಗುತ್ತಿತ್ತು[2].

ಸಂಶಯಾದಿ ಸ್ಥಲದಲ್ಲಿಯೂ ಸಹ 'ಎಲ್ಲದರಿಂದಲೂ ಭೇದವೂ ಪ್ರತೀಯ-ಮಾನವೇ ಆಗಿದೆ' ಎಂದು ಹೇಳಲಾಯಿತು, ಅದು ಏಕೆ? ಎಂದೆನ್ನಲಾಗದು, ಸರ್ವಥಾ ಭೇದವು ತೋರಿಲ್ಲ ಎಂದಾದಲ್ಲಿ ('ದೇವದತ್ತೋಽಹಂ' ಎಂದು ದೇವದತ್ತನಿಗೆ ಅರಿವು ಇದ್ದಾಗ )ನನ್ನಲ್ಲಿ ತೋರುತ್ತಿರುವುದು 'ನಾನೋ ಅಥವಾ ಘಟವೋ' ಎಂಬಿತ್ಯಾದಿ ಸಂದೇಹವೋ ಅಥವಾ 'ಘಟವೇ (ನಾನು)' ಎಂಬ ವಿಪರ್ಯಯವೋ ತೋರಬೇಕಾಗೀತು, (ಆದರೆ ಅನುಭವವು) ಹಾಗಿಲ್ಲ ಎಂದು ಹೇಳುತ್ತಿರುವರು 'ನಹಿ' ಎಂದು. 'ನ ವಾ' ಎನುವುದಕ್ಕೆ 'ಘಟೋ ವಾ' ಎಂದು ಅರ್ಥ.

**'ಇದು ಅಸಾಧಾರಣ ಧರ್ಮ' ಎಂಬ ಅರಿವು ಭೇದಜ್ಞಾನದ ಫಲ**

**ಸಾಮಾನ್ಯತಃ ಸರ್ವವೈಲಕ್ಷ್ಯಣ್ಯೇ ಜ್ಞಾತ ಏವ ಘಟತ್ವಾದಿಜ್ಞಾನಮ್ ।**

---

1. ಸ್ಥಾಣುರ್ವಾ ಪುರುಷೋ ವಾ ಎನ್ನುವ ಸ್ಥಳದಲ್ಲೂ ಸಹ ಪುರುಷನ ಹೊರತಾಗಿ ಇನ್ನುಳಿದ ಎಲ್ಲ ಪದಾರ್ಥಪ್ರತಿಯೋಗಿಕಭೇದದ ಅರಿವು ಇರುವುದರಿಂದ ಎಂದು ಭಾವ.

2. ಪ್ರಕೃತದಲ್ಲಿ ಧರ್ಮಿಯು ತೋರಿದಾಗ ಭೇದವೂ ತೋರುತ್ತಿರುವುದರಿಂದ ಭೇದಕ್ಕೆ ಧರ್ಮಿಯ ಸ್ವರೂಪತ್ವವನ್ನು ಒಪ್ಪಲು ಯಾವಬಾಧಕವೂ ಇಲ್ಲ ಎಂದು ಭಾವ.

ಸಾಮಾನ್ಯವಾಗಿ (ಧರ್ಮಿಯು) ಎಲ್ಲದರಿಂದ ವಿಲಕ್ಷಣ ಎಂದು ತಿಳಿದಲ್ಲಿ, ಘಟತ್ವಾದಿಗಳು (ಘಟಾದಿ ಪದಾರ್ಥಗಳ) ಅಸಾಧಾರಣ ಧರ್ಮ ಎಂಬ ಅರಿವು ಪ್ರಾಪ್ತವಾಗುವುದು.

**ನನು, ಘಟಾದೌ ಘಟತ್ವಾದ್ಯಸಾಧಾರಣಧರ್ಮಂ ದೃಷ್ಟವತಃ ತಮ್ ಆತ್ಮನ್ಯಪಶ್ಯತಃ ಸಂಶಯಾದ್ಯನುತ್ಪತ್ತೇರ್ನ ತದರ್ಥಂ ಸರ್ವತೋ ವ್ಯಾವೃತ್ತಿಪ್ರತೀತಿಃ ಕಲ್ಪನೀಯಾ । ಕಿಞ್ಚ ಸರ್ವಾಪ್ರತೀತೌ ಸರ್ವತೋ ವ್ಯಾವೃತ್ತೇಃ ಪ್ರತ್ಯೇತುಮಶಕ್ಯತ್ವಾತ್, ಸರ್ವಪ್ರತೀತೌ ಸರ್ವೇಷಾಂ ಸರ್ವಜ್ಞತಾ ಚಾಪದ್ಯತ? ಇತ್ಯತ ಆಹ 'ಸಾಮಾನ್ಯತಃ' ಇತಿ । ಘಟತ್ವಾದಿಜ್ಞಾನಂ 'ಅಸಾಧಾರಣತಯಾ' ಇತಿ ಶೇಷಃ । ಘಟತ್ವಾದ್ಯ-ಸಾಧಾರಣಧರ್ಮಜ್ಞಾನೇನ ಸಂಶಯಾದ್ಯನುತ್ಪತ್ತಿಮಭಿಲಷತಾಽಪಿ ಪ್ರಥಮಂ ಸರ್ವವ್ಯಾವೃತ್ತಿಜ್ಞಾನಮ್ ಏಷ್ಟವ್ಯಮೇವ । ತೇನ ವಿನಾ ಘಟತ್ವಾದೇರಸಾಧಾರಣತಯಾ ಜ್ಞಾನಾಸಮ್ಭವಾತ್ । ನಹಿ ಧರ್ಮಿಣಾಮ್ ಅವಿವಿಕ್ತತ್ವೇ ಧರ್ಮಸ್ಯಾಸಾಧಾರಣ್ಯಂ ಭವತಿ । ನಚ ಸರ್ವಜ್ಞಾತಾಪಾತೋ ದೋಷಃ । ಸಾಮಾನ್ಯತಃ ಸರ್ವವ್ಯಾವೃತ್ತಿಜ್ಞಾನಸ್ಯೋಚ್ಯಮಾನತ್ವಾತ್, ಸಾಮಾನ್ಯತಃ ಸರ್ವಜ್ಞಾನಸ್ಯ ಚ ಪ್ರಾಣಭೃನ್ಮಾತ್ರವೃತ್ತಿತ್ವಾತ್ । 'ನ ಚ ಸರ್ವಾತ್ಮಕಮ್ ಇದಂ ಕಿನ್ತು ಸ್ವಯಮೇವಾ' ಇತಿ ಧರ್ಮಿಸ್ವರೂಪೇಣ ಪ್ರತೀಯಮಾನಸ್ಯ ಭೇದಸ್ಯ ಸಾಮಾನ್ಯತಃ ಸರ್ವಪ್ರತಿಯೋಗಿಕತ್ವಂ, ಸ್ಮರ್ಯಮಾಣಕತಿಪಯವಿಶೇಷಪ್ರತಿಯೋಗಿಕತ್ವಂ ಹ್ಯನುಭೂಯತೇ । ತದೇವಂ ಭೇದಸ್ಯ ಧರ್ಮಿಪ್ರತೀತಾವೇವ ಪ್ರತೀತಿಸಂಭವಾದ್ ಯುಕ್ತಂ ತತ್ಸ್ವರೂಪತ್ವಮ್ ।**

ಸರಿ, ಘಟಾದಿಗಳಲ್ಲಿ ಘಟತ್ವವೇ ಮುಂತಾದ ಅಸಾಧಾರಣ ಧರ್ಮಗಳನ್ನು ಕಂಡಿರುವುದರಿಂದ ಅದನ್ನು (ಘಟತ್ವಾದಿ ಅಸಾಧಾರಣಧರ್ಮವನ್ನು) ತನ್ನಲ್ಲಿ ಕಾಣದಿರುವುದರಿಂದ (ಅಹಂ ವಾ ಘಟೋ ವಾ ಎಂಬ) ಸಂಶಯಾದಿಗಳಿಗೆ ಅವಕಾಶವಿಲ್ಲದಿರಲು, ಅದಕ್ಕಾಗಿ (ಆತ್ಮನಲ್ಲಿ 'ಅಹಂ ವಾ ಘಟೋ ವಾ' ಎಂಬ ಸಂದೇಹದ ನಿವೃತ್ತಿಗಾಗಿ) ಎಲ್ಲದರಿಂದ ವ್ಯಾವೃತ್ತಿಯ ಅರಿವನ್ನು ಕಲ್ಪಿಸುವ ಅಗತ್ಯವಿಲ್ಲ. ಮತ್ತೂ ಸಹ ಎಲ್ಲವೂ ತೋರದೇ ಎಲ್ಲದರ ವ್ಯಾವೃತ್ತಿಯ ಅರಿವು

ಅಶಕ್ಯವಾದುದರಿಂದ. ಎಲ್ಲವೂ ಪ್ರತೀತವಾಗಿದೆ ಎಂದಾದಲ್ಲಿ ಎಲ್ಲರಿಗೂ ಸರ್ವಜ್ಞತ್ವವನ್ನು ಒಪ್ಪಬೇಕಾದೀತು? ಎಂದು, ಆದುದರಿಂದ ಹೇಳುತ್ತಾರೆ **'ಸಾಮಾನ್ಯತಃ'** ಎಂದು. **'ಘಟತ್ವಾದಿಜ್ಞಾನಂ'** (ಎಂಬುವದರ ನಂತರ) 'ಅಸಾಧಾರಣತಾಯಾ' ಎಂದು ಶೇಷವನ್ನು ಪೂರಣಮಾಡಿಕೊಳ್ಳುವುದು[1]. ಘಟತ್ವಾದಿ ಅಸಾಧಾರಣ ಧರ್ಮದ ಅರಿವಿನಿಂದ ಸಂಶಯಾದಿಗಳ ಅಪ್ರಾಪ್ತಿಯನ್ನು ಒಪ್ಪಿರುವವರೂ ಸಹ ಆ ಮೊದಲು ಸರ್ವ ವ್ಯಾವೃತ್ತಿಯ ಅರಿವು ಅಪೇಕ್ಷಿತವೇ ಆಗಿದೆ (ಎಂದು ಒಪ್ಪಲೇ ಬೇಕು). ಅದಿಲ್ಲದೇ (ಸರ್ವವ್ಯಾವೃತ್ತಿಯ ಅರಿವಿಲ್ಲದೆ) 'ಘಟತ್ವಾದಿಗಳು ಅಸಾಧಾರಣ ಧರ್ಮಗಳು' ಎಂಬ ಅರಿವು ಅಸಂಭಾವಿತವಾದುದರಿಂದ. ಧರ್ಮಿಗಳು (ಇತರ ಎಲ್ಲ ಪದಾರ್ಥಗಳಿಂದ) ವ್ಯಾವೃತ್ತವಾಗಿ ಅರಿವಿಗೆ ಬಾರದೆ (ಆ ಆ ಧರ್ಮಿಗಳಲ್ಲಿನ) ಧರ್ಮಗಳಿಗೆ ಅಸಾಧಾರಣತ್ವವೇ ಪ್ರಾಪ್ತವಾಗಲಾರದು[2]. (ಎಲ್ಲರಿಗೂ ಸರ್ವಪದಾರ್ಥವ್ಯಾವೃತ್ತಿಯ ಅರಿವಿದೆ ಎಂದಾದಲ್ಲಿ ಎಲ್ಲರಲ್ಲಿಯೂ) ಸರ್ವಜ್ಞತ್ವವು ಪ್ರಾಪ್ತವಾಗಬೇಕಾದೀತು? ಎಂದು ಹೇಳಲಾಗದು[3]. ಸಾಮಾನ್ಯವಾಗಿ ಸರ್ವವ್ಯಾವೃತ್ತಿಯ ಅರಿವು (ಇದೆ ಎಂದು ಈ ಹಿಂದೆಯೇ) ಹೇಳಲಾಗಿರುವುದರಿಂದ. ಸಾಮಾನ್ಯತಃ ಸರ್ವಜ್ಞತ್ವವು (ಪ್ರಮೇಯತ್ವೇನ ಸಕಲ ಪದಾರ್ಥದ ಅರಿವು) ಪ್ರಾಣಿಸಾಮಾನ್ಯಗಳಲ್ಲಿ

---

1. ಈ ರೀತಿಯಾಗಿ ಶೇಷ ಪೂರಣಾನಂತರ ವಾಕ್ಯದ ಒಟ್ಟು ಭಾವವು- 'ಸಾಮಾನ್ಯವಾಗಿ ಸರ್ವವೈಲಕ್ಷಣ್ಯದ ಅರಿವು ಪ್ರಾಪ್ತವಾದರೇ, ಘಟತ್ವಾದಿಗಳು ಘಟಾದಿಗಳ ಅಸಾಧಾರಣ ಧರ್ಮ' ಎಂಬ ಅರಿವು ಪ್ರಾಪ್ತವಾಗುವುದು ಎಂದು ಭಾವ.

2. 'ಘಟವು ಪಟಾದಿ ಇತರ ಎಲ್ಲ ಪದಾರ್ಥಗಳಿಂದ ವ್ಯಾವೃತ್ತವಾದ ಪದಾರ್ಥ' ಎಂಬ ಅರಿವು ಇಲ್ಲದೇ ಅದರಲ್ಲಿನ 'ಘಟತ್ವರೂಪ ಧರ್ಮವು ಘಟದಲ್ಲಿ ಮಾತ್ರ ಇರುವ ಅಸಾಧಾರಣವಾದ ಧರ್ಮ' ಎಂಬ ಅರಿವು ಬರಲಾರದು ಎಂದು ಭಾವ.

3. ಘಟಗತವಾದ ಘಟತ್ವಧರ್ಮವು 'ಘಟದಲ್ಲಿನ ಅಸಾಧಾರಣ ಧರ್ಮ' ಎಂಬ ಅರಿವು ಪ್ರಾಪ್ತವಾಗಲು, ಆ ಮೊದಲೇ ಘಟವು 'ಇತರ ಎಲ್ಲ ಪದಾರ್ಥಗಳಿಂದ ಭಿನ್ನ' ಎಂಬ ಅರಿವು ಬೇಕು ಎಂದು ಪ್ರತಿಪಾದಿಸಿದಲ್ಲಿ ಎಲ್ಲರಿಗೂ ಇತರ ಎಲ್ಲ ಪದಾರ್ಥದ ಅರಿವು ಬೇಕಾಗಿ ಎಲ್ಲರೂ ಸರ್ವಜ್ಞರೇ ಆಗಬೇಕಾದೀತು ಎಂದು ಸಂದೇಹಿಸುವದು ತರವಲ್ಲ ಎಂದು ಭಾವ.

ಇರುವದರಿಂದ[1]. (ಯಾವುದೇ ಪದಾರ್ಥದ ಅರಿವು ಪ್ರಾಪ್ತವಾದಾಗ) 'ಇದು, ಸರ್ವವಸ್ತುಗಳ ಸ್ವರೂಪವಲ್ಲ ಮತ್ತೆ ಇದು ಬೇರೇಯೇ' ಎಂದು ಧರ್ಮಿಯ ಸ್ವರೂಪದೊಡನೆ ತೋರುವ ಭೇದವು ಸಾಮಾನ್ಯತಃ ಸರ್ವ (ಪದಾರ್ಥಗಳ) ಪ್ರತಿಯೋಗಿತ್ವವು, (ಆ ಕಾಲದಲ್ಲಿ) ಸ್ಮರಣೆಗೆ ಪ್ರಾಪ್ತವಾದ ಕೆಲವು ಪದಾರ್ಥಗಳ ಪ್ರತಿಯೋಗಿತ್ವದ (ವಿಶೇಷವಾದ) ಜ್ಞಾನವು ಅನುಭವದಲ್ಲಿದೆ. ಅದನ್ನೇ ಧರ್ಮಿಯು ತೋರಿದಾಗ ಭೇದವು ತೋರುವುದು ಸಂಭಾವಿತವಾದುದರಿಂದ (ಭೇದವು ಧರ್ಮಿಯ) ಸ್ವರೂಪ ಎಂದು ಹೇಳಲಾಗಿದೆ.

**ಅನುಭವದಂತೆ ವ್ಯವಹಾರ**

**ನನು ಭೇದಸ್ಯ ಕೇವಲಸ್ಯ ಧರ್ಮಿಸ್ವರೂಪತ್ವಮ್ ಉತ ಪ್ರತಿಯೋಗಿ-ಘಟಿತಸ್ಯ । ನಾऽದ್ಯಃ- ಕದಾಪಿ ಕೇವಲಸ್ಯ ತಸ್ಯಾಪ್ರತಿಭಾಸಾತ್ । ದ್ವಿತೀಯೇ ಪ್ರತಿಯೋಗಿನೋऽಪಿ ಧರ್ಮಿಸ್ವರೂಪತ್ವಾಪತ್ತ್ಯಾ ಸರ್ವಾದ್ವೈತಪ್ರಸಙ್ಗ ಇತಿ? ಮೈವಂ, ಪ್ರತಿಯೋಗಿನೋ ನಿರೂಪಕತ್ವೇನ ಬಹಿರಙ್ಗತ್ವಾತ್ । ಕುತ್ರ ಚ ಇದಂ ಉಪಲಬ್ಧಂ 'ಯೇನ ನಿರೂಪಿತಸ್ಯ ಯದ್ಭವತಿ ತತ್ತನ್ನಿರೂಪಕಸ್ಯಾಪಿ ಭವತಿ'? ಇತಿ । 'ಲಮ್ಬಕರ್ಣಮ್ ಆನಯ' ಇತ್ಯಾದೌ ಇತಿ ಚೇನ್ನ ।**

1. ಜನಸಾಮಾನ್ಯರಲ್ಲಿ ಸಾಮಾನ್ಯತಃ ಸರ್ವವಿಷಯಕ ಜ್ಞಾನವಿಲ್ಲ ಎಂದಾದಲ್ಲಿ 'ಯತ್ರಯತ್ರ ಧೂಮಃ ತತ್ರತತ್ರ ವಹ್ನಿಃ' ಇತ್ಯಾದಿ ವ್ಯಾಪ್ತಿಯ ಅರಿವೇ ಯಾರಿಗೂ ಇಲ್ಲ ಎಂದಾಗಬೇಕಾದೀತು. ಭೂತ-ವರ್ತಮಾನ-ಭವಿಷ್ಯತ್ ಕಾಲೀನ ದೇಶ-ವಿದೇಶಸ್ಥವಾದ ವಹ್ನಿ-ಧೂಮಗಳ ಅರಿವು ಇಲ್ಲ ಎಂದಾದಲ್ಲಿ ಈ ವ್ಯಾಪ್ತಿಯ ಅರಿವು ಬರಲಾರದು ತಾನೆ? ಮತ್ತು 'ಎಲ್ಲರಿಗೂ ಎಲ್ಲ ವಿಷಯಕ ಜ್ಞಾನವು ಇಲ್ಲ ' ಎನ್ನುವ ಪ್ರಕೃತದ ಆಪಾದನೆಯನ್ನು ನೀವು ಮಾಡದೇ ಇರಬೇಕಾದೀತು. ಎಲ್ಲ ವ್ಯಕ್ತಿಗಳ ಅರಿವು ಮತ್ತು ಅವರೆಲ್ಲರೂ ಅಸರ್ವಜ್ಞರೂ ಇತ್ಯಾದಿ ಅರಿವು ಇದ್ದಲ್ಲಿ ಮಾತ್ರ ಪ್ರಕೃತದ ಆಪಾದನೆಯನ್ನು ಮಾಡಲು ಅವಕಾಶ. ಇತ್ಯಾದಿ ಅನೇಕ ಲೋಕವ್ಯವಹಾರವನ್ನು ಒಪ್ಪದೇ ಇರಬೇಕಾದೀತು. ಪ್ರಾಣಸಾಮಾನ್ಯಕ್ಕೆ ಪಾದಾರ್ಥತ್ವೇನ ಸಕಲ ಪದಾರ್ಥಾನುಭವವು ಇದೆ ಎನ್ನುವುದು ಸಿದ್ಧ. ಆದುದರಿಂದಲೇ ಅನುವ್ಯಾಖ್ಯಾನದಲ್ಲಿ- 'ಸರ್ವಂ ಸಾಮಾನ್ಯತೋ ಯಸ್ಮಾತ್ ಸರ್ವೈರೇವಾನುಭೂಯತೇ । ತಸ್ಮಾದ್ವ್ಯಾವೃತ್ತತಯಾ ಸರ್ವೈಃ ಸರ್ವಸ್ಮಾದ್ ಅನುಭೂಯತೇ ॥'- ಸಾಮಾನ್ಯತಃ ಎಲ್ಲರಿಗೂ ಎಲ್ಲ ಪದಾರ್ಥಗಳ ಅನುಭವವು ಇರುವದರಿಂದಲೇ ಎಲ್ಲರೂ ಎಲ್ಲ ಪದಾರ್ಥಗಳಿಂದ ವ್ಯಾವೃತ್ತವಾಗಿರುವದನ್ನು ಅನುಭವದಲ್ಲಿ ಹೊಂದಿರುವರು ಎಂದು ಉಪದೇಶಿಸಿರುವದನ್ನು ಇಲ್ಲಿ ಸ್ಮರಿಸಿಕೊಂಡಿರುವರು ಎಂದು ಭಾವ.

**'ಚಿತ್ರಗುಮಾನಯ' ಇತ್ಯಾದೌ ಕಿಂ ತದಭಾವೋಽಪಿ ನೋಪಲಬ್ಧಃ ? ತತಃ ಸ್ವದೃಷ್ಟಿಪಕ್ಷಪಾತಮ್ ಅಪಹಾಯ ಲೌಕಿಕೀಂ ದೃಷ್ಟಿಮಾಶ್ರಿತ್ಯ ಭೇದಃ ಕಾಂ ರೀತಿಮ್ ಅವಲಮ್ಬತಾಮ್? ಇತಿ ವಿಚಾರೇ, ಯದಿ ಪ್ರತೀತ್ಯನುಸರಣಂ ತದಾ ಚಿತ್ರಗುನ್ಯಾಯೋ ಭವತಿ । ಪ್ರತೀತ್ಯಕ್ರಮೇ ತು ಆಪಾದನಮಶಕ್ಯ-ಮಿತಿ ।**

ಸರಿ, ಕೇವಲ ಭೇದವು ಧರ್ಮಿಯ ಸ್ವರೂಪವೋ ಅಥವಾ ಪ್ರತಿಯೋಗಿ-ಯಿಂದ ಯುಕ್ತವಾದದ್ದೋ. ಮೊದಲ ಪಕ್ಷವು ಸರಿಯಾಗದು- ಎಂದೂ ಕೇವಲ ಭೇದದ ಪ್ರತಿಭಾಸವು ಇಲ್ಲದಿರುವುದರಿಂದ[1]. ಎರಡನೇ ಪಕ್ಷದಲ್ಲಿ (ಪ್ರತಿಯೋಗಿಯಿಂದ ಯುಯಕ್ತವಾದ ಭೇದವು ಧರ್ಮಿಯಸ್ವರೂಪ ಎನ್ನುವ ಪಕ್ಷದಲ್ಲಿ) ಪ್ರತಿಯೋಗಿಯೂ ಧರ್ಮಿಯ ಸ್ವರೂಪವಾಗಬೇಕಾಗುವುದರಿಂದ ಸರ್ವಪದಾರ್ಥಗಳೂ ಒಂದೇ ಎಂದಾಗಾಬೇಕಾದೀತು? ಇದು ಹಾಗಲ್ಲ, ಪ್ರತಿಯೋಗಿಯು (ಭೇದದ) ನಿರೂಪಕವಾಗಿ (ಅದು ಧರ್ಮಿಯಿಂದ) ಬಹಿಃಪದಾರ್ಥವಾಗಿರುವುದರಿಂದ. 'ನಿರೂಪಿತವಾದದ್ದಕ್ಕೆ ಏನೆಲ್ಲ (ಅನ್ವಯ ಗಳು) ಉಂಟೊ ಅದೆಲ್ಲವೂ ನಿರೂಪಕಕ್ಕೂ ಪ್ರಾಪ್ತವಾಗುವುದು' ಎಂಬುವುದು ಎಲ್ಲಿ ಕಂಡಿದೆ? 'ಲಂಬಕರ್ಣನನ್ನು ಕರೆದು ತನ್ನಿ' ಇತ್ಯಾದಿ ಸ್ಥಳದಲ್ಲಿ, ಎನ್ನುವುದು ತರವಲ್ಲ[2]. 'ಚಿತ್ರಗುಮಾನಯ' ಎನ್ನುವಲ್ಲಿ ಅದರ ಅಭಾವವೂ ಕಂಡಿಲ್ಲವೇ[3]?

1. ಭೇದದ ಪ್ರತೀತಿಯು 'ಪಟಾತ್ ಭಿನ್ನಃ, ಘಟಾತ್ ಭಿನ್ನಃ' ಇತ್ಯಾದಿಯಾಗಿಯೇ ಇರುವುದೇ ಹೊರತು ಕೇವಲ 'ಭೇದಃ' ಎಂಬ ಅರಿವು ಅಸಂಭಾವಿತವಾದುದರಿಂದ ಎಂದು ಭಾವ.

2. 'ಲಂಬಕರ್ಣನನ್ನು ಕರೆದು ತನ್ನಿ' ಎಂದು ಹೇಳಿದಾಗ ಲಂಬಕರ್ಣವಿಶಿಷ್ಟನಾದ ವ್ಯಕ್ತಿಯನ್ನೇ ಕರೆದು ತರುವರು. ಆ ವ್ಯಕ್ತಿಯು ಲಂಬವಾದ ಕರ್ಣದಿಂದ ನಿರೂಪಿತನಾಗಿರುವನು. ನಿರೂಪಕವಾದ ಕಿವಿಯನ್ನು ಬಿಟ್ಟು ಕೇವಲ ವ್ಯಕ್ತಿಯನ್ನು ತರುವುದು ಸಾಧ್ಯವೇ? ಹಾಗಾಗಿ ನಿರೂಪಿತಕ್ಕೆ ಏನಲ್ಲ ಅನ್ವಯಿಸುವುದೋ ಅದೆಲ್ಲವೂ ನಿರೂಪಕಕ್ಕೂ ಅನ್ವಯಿಸುವುದು. ಪ್ರಕೃತ ಪ್ರತಿಯೋಗಿಯಿಂದ ನಿರೂಪಿತವಾದ ಭೇದವು ಧರ್ಮಿಯ ಸ್ವರೂಪ ಎಂದಾದಲ್ಲಿ, ನಿರೂಪ್ಯವಾದ ಪ್ರತಿಯೋಗಿಯೂ ಧರ್ಮಿಯ ಸ್ವರೂಪವಾಗಬೇಕಾದೀತು. ಆಗ 'ಜಗದಲ್ಲಿ ಒಂದೇ ಪದಾರ್ಥವಿದೆ' ಎಂದು ಹೇಳಬೇಕಾದೀತು ಎನ್ನುವುದು ತರವಲ್ಲ.

3. 'ಬಣ್ಣಬಣ್ಣದ ಹಸುಗಳ ಮಾಲಕನನ್ನು ಕರೆದು ತನ್ನಿ' ಎಂದಾಗ ಹಸುಗಳನ್ನು ತರದೇ ಕೇವಲ ಹಸುವಿನ ಮಾಲಕನನ್ನು ಕರೆದು ತರುವರು. ಇಲ್ಲಿ ನಿರೂಪಕವಾದ ಬಣ್ಣದ ಹಸುವಿಗೆ ಆನಯನ ಕ್ರಿಯೆಯಲ್ಲಿ ಅನ್ವಯವು ಕಂಡಿಲ್ಲ ಎಂದು ಭಾವ.

ಆದುದರಿಂದ ತನ್ನ ಅನಿಸಿಕೆಯಲ್ಲಿನ ಆಗ್ರಹವನ್ನು ಬಿಟ್ಟು, ಸಾಮಾನ್ಯ ರೀತಿಯನ್ನು ಆಶ್ರಯಿಸಿದಲ್ಲಿ ಭೇದವು ಯಾವ ಪರಿಯನ್ನು ಆಧರಿಸಿದೆ ಎಂದು ವಿಚಾರಮಾಡಿದಲ್ಲಿ, ಆಗ 'ಚಿತ್ರಗು' ನ್ಯಾಯವನ್ನು ಅನುಸರಿಲಾಗಿದೆ ಎಂದು ತಿಳಿಯುವುದು. ಪ್ರತೀತಿಯನ್ನು ಅತಿಕ್ರಮಿಸಿದಲ್ಲಿ ಆಪಾದಿಸಲೂ ಆಗದು[1].

**'ಭೇದ' ಅಂದರೆ ಅನ್ಯೋನ್ಯಾಭಾವ**

**ಅತೋ ನಾನ್ಯೋನ್ಯಾಶ್ರಯತಾ ।**

ಆದುದರಿಂದ (ಯಾವ ವಿಧದ ಬಾಧಕವೂ ಇಲ್ಲದಿರುವುದರಿಂದ, ಸಾಧಕಪ್ರಮಾಣವು ಇರುವುದರಿಂದ ಭೇದದ ದರ್ಶನದಲ್ಲಿ) ಅನ್ಯೋನ್ಯಾಶ್ರಯತ್ವವು ಇಲ್ಲ.

**ನನು, ವಿದಾರಣಾತ್ಮನೋ ಭೇದಸ್ಯ ಪಟಸ್ವರೂಪತ್ವೇ ತಸ್ಯಾಪಿ ವಿದಾರಣಂ ಸ್ಯಾತ್ । ತಥಾ ತದವಯವಾನಾಮಪೀತಿ ಸರ್ವಶೂನ್ಯತಾಪತ್ತಿಃ? ಇತಿ । ಮೈವಂ, ನ ಹಿ ಭೇದೋ ವಿದಾರಕಃ ಕಿನ್ತು ವಿದಾರಣಮ್ । ವಿದಾರಕತ್ವೇಽಪಿ ಪ್ರತಿಯೋಗಿನೋ ಧರ್ಮಿಣಂ ವಿದಾರಯೇತ್, ನ ತು ಸ್ವತ ಏವ । ಪ್ರತಿಯೋಗಿನಿರೂಪ್ಯತ್ವಂ ಚ ಸ್ವರೂಪಸ್ಯಾಪಿ ಭೇದಸ್ಯೋಪಪಾದಿತಮ್ । ಅಙ್ಗೀಕೃತ್ಯಚೇದಮುಕ್ತಮ್ । ವಸ್ತುತಸ್ತು ನ ಭೇದೋ ವಿದಾರಣಾತ್ಮಾ ಕಿನ್ತು ಅನ್ಯೋನ್ಯಾಭಾವ ಏವೇತಿ ।**

**ತಥಾಪ್ಯನೇಕತ್ವೈಕಾರ್ಥಸಮವಾಯಿನೋ ಭೇದಸ್ಯ ಪಟಸ್ವರೂಪತ್ವೇ ಪಟಸ್ಯಾಪ್ಯನೇಕತ್ವಂ ಸ್ಯಾತ್ । ತಥಾ ತದವಯವಾನಾಮಪೀತಿ ತದ್ವಿರುದ್ಧಮ್ ಏಕತ್ವಂ ಕುತ್ರಾಪಿ ನ ಸ್ಯಾತ್ । ಏಕತ್ವಾಭಾವೇಽನೇಕತ್ವಮಪಿ ನ ಭವೇತ್ । ತಥಾಚ 'ಸಙ್ಖ್ಯಾರಹಿತಸ್ಯ ದ್ರವ್ಯಸ್ಯ ಶೂನ್ಯತ್ವಾಪತ್ತಿಃ'? ಇತಿ । ಮೈವಂ- ಏವಂ ಹಿ ಪಟೋಽಪ್ಯನೇಕತ್ವಂ ಸ್ಯಾನ್ನ ತ್ವನೇಕಃ । ಅನೇಕತ್ವೇಽಪಿ ಕುತೋ**

1. ಆಪಾದನೆಯನ್ನು ಮಾಡಬೇಕಾದಲ್ಲಿ ಆಪಾದ್ಯಕ್ಕೂ ಆಪಾದಕಕ್ಕೂ ವ್ಯಾಪ್ತಿಯು ಅವಶ್ಯಕ. ಈ ವ್ಯಾಪ್ತಿಯನ್ನು ನಿರ್ಣಯಿಸಲು ಪ್ರತೀತಿಯನ್ನು ಆದರಿಸಬೇಕು. ಪ್ರತೀತಿಯನ್ನು ಆದರಿಸದ ಪಕ್ಷದಲ್ಲಿ ''ಲಂಬಕರ್ಣಮ್ ಆನಯ' ಎನ್ನುವ ಪ್ರತೀತಿಯಂತೆ' ಎಂದು ಪರವಾದಿಗಳು ಆಪಾದಿಸುತ್ತಿರುವುದರಿಂದ ಪ್ರತೀತಿಯನ್ನು ಆದರಿಸುವುದಿಲ್ಲ ಎಂದು ಹೇಳಲು ಆಗದು ಎಂದು ಭಾವ.

**ನೈಕತ್ವಮ್ ? 'ಸ್ವಸ್ಮಿನ್ನೇಕೋऽಪ್ಯನ್ಯೇನ ಸಹಿತೋऽನೇಕಃ' ಇತಿ ವಿರೋಧಾ-ಭಾವಾತ್ । ಅನೇಕತ್ವಬಲೇನೈಕತ್ವಾಭಾವಮುಕ್ತ್ವಾ ಪುನಸ್ತೇನಾನೇಕತ್ವಾಭಾವಂ ವದತಃ ಕುತೋ ನ ಪೂರ್ವೋತ್ತರವಿರೋಧಃ? 'ನಹ್ಯನ್ಯತ್ರ ಕ್ವಾಪ್ಯಸ್ಮದ್-ರೀತಿರಸ್ತಿ' ಇತ್ಯುಕ್ತಂ, ಯೇನ 'ಪರರೀತ್ಯಾ ಪರಸ್ಯಾऽಪಾದನಮ್' ಇತಿ ನಿಸ್ತಾರಃ । ಏವಂ ಬಾಧಕಾಭಾವಾತ್ ಸಾಧಕಸದ್ಭಾವಾಚ್ಚ ಭೇದಸ್ಯ ಧರ್ಮಿಸ್ವರೂಪತ್ವಾನ್ನ ತತ್ಪ್ರತೀತಾವನ್ಯೋನ್ಯಾಶ್ರಯತ್ವಮ್ ಇತ್ಯುಪಸಂಹರತಿ 'ಅತಃ' ಇತಿ ।**

ಸರಿ, ವಿದಾರಣಾತ್ಮಕವಾದ ಭೇದವು ಪಟದ ಸ್ವರೂಪ ಎಂದಾದಲ್ಲಿ ಅದೂ(ಪಟವೂ) ವಿದಾರಣವಾಗಬೇಕಾದೀತು. ಹಾಗೆಯೇ ಅದರ ಅವಯವಗಳೂ ವಿದಾರಣವಾಗಿ ಎಲ್ಲವೂ ಶೂನ್ಯವಾಗಬೇಕಾದೀತು. ಹಾಗಲ್ಲ, ಭೇದವು ವಿದಾರಕವಲ್ಲ ಮತ್ತೆ ವಿದಾರಣ. ವಿದಾರಕವಾದರೂ, ಪ್ರತಿಯೋಗಿಯಿಂದ ಧರ್ಮಿಯನ್ನು ವಿಭಾಗಗೊಳಿಸುವುದೇ ಹೊರತು ತನ್ನನ್ನೇ ಅಲ್ಲ (ತನ್ನನ್ನೇ ತಾನು ವಿಭಾಗಗೊಳಿಸಿಕೊಳ್ಳಲಾರದು)[1]. ಭೇದವು (ಧರ್ಮಿಯ)

---

1. 'ಭಿದಿರ್-ವಿದಾರಣೇ' ಎನ್ನುವ ಧಾತುವಿನಿಂದ ನಿಷ್ಪನ್ನವಾದ ಶಬ್ದವಿದು. ವಿದಾರಣಕ್ರಿಯೆಗೆ ಕರಣ ಎಂಬ ಅರ್ಥವನ್ನು ವಿವಕ್ಷಿಸಿದಲ್ಲಿ 'ಭಿದ್ಯತೇ ಅನೇನ' ಎಂದು ವಿದಾರಕ-ವಿಭಜಕ ಎಂಬ ಅರ್ಥವು ಪ್ರಾಪ್ತವಾಗುವುದು. ಆಗ ಭೇದವು ಎಲ್ಲಿ ಇದೆಯೋ ಅಲ್ಲಿ ವಿಭಜನೆಯುಂಟಾಗಬೇಕು. ಹಾಗಾಗಿ ಪಟ, ಅದರ ಅವಯವ ಎಲ್ಲದರಲ್ಲೂ ಭೇದವು ಇರುವುದರಿಂದ ವಿಭಕ್ತವಾಗಿ ಸರ್ವ ಶೂನ್ಯತಾ ಭಾವವು ಉಂಟಾಗಬೇಕಾದೀತು ಎಂದು ಪೃಚ್ಛಕನ ಭಾವ. ಹಾಗಾಗಿ ಕರಣಾರ್ಥವನ್ನು ವಿವಕ್ಷಿಸದೇ ಭಾವಾರ್ಥವನ್ನು ವಿವಕ್ಷಿಸಲಾಗಿದೆ ಎಂದು ಉತ್ತರಿಸಲಾಯಿತು. ಆಗ ವಿದಾರಣ-ವಿಭಾಗ ಅಂದರೆ ಗುಣವಾಚಕವಾಗುವುದು ದ್ವೈಧೀಭಾವ ಎಂಬ ಅರ್ಥವು ಪ್ರಾಪ್ತವಾಗುವುದು. 'ವಿದಾರಣಾರ್ಥೋ ಧಾತುಶ್ಚ ವಿಭಾಗಗುಣವಾಚಕಃ' ಎಂದು ಅನುವ್ಯಾ.2.2.ವೈಶೇ.148.ದಲ್ಲಿ ಉಪದೇಶಿಸಿರುವರು. ಹಾಗಾಗಿ ಭೇದವು ಪಟದ ಸ್ವರೂಪವಾದುದರಿಂದ ಪಟವು ಮತ್ತೊಂದು ಪದಾರ್ಥದಿಂದ ವಿಭಕ್ತವಾಗುವುದೇ ಹೊರತು ತನ್ನನ್ನೇ (ಪಟವನ್ನೇ) ವಿಭಜನೆಗೊಳಿಸಿಕೊಳ್ಳುವುದಿಲ್ಲ. ಆದುದರಿಂದ ಸರ್ವಶೂನ್ಯತ್ವದ ಭೀತಿಯಿಲ್ಲ. ಅಥವಾ ಕರಣಾರ್ಥವನ್ನೇ ಅವಲಂಬಿಸಿದರೂ ವಿಭಜಕ ಎಂದಾದರೂ ಕೊಡಲಿಯು ತನ್ನನೇ ತಾನು ವಿಭಾಗಗೊಳಿಸಿಗೊಳ್ಳುವದಿಲ್ಲ, ಮತ್ತೆ ಕೊಡಲಿಯ ಸಂಪರ್ಕವು ಯಾವ ಪದಾರ್ಥಕ್ಕೆ ಉಂಟಾಗುವುದೋ ಆ ಪದಾರ್ಥದಲ್ಲಿ

ಪುಟ 581ರಲ್ಲಿ........

ಸ್ವರೂಪವಾದರೂ ಪ್ರತಿಯೋಗಿಯಿಂದ ನಿರೂಪ್ಯ ಎಂದು (ಈ ಹಿಂದೆಯೇ) ನಿರೂಪಿಸಿಯಾಗಿದೆ[1]. ಇದನ್ನು (ಈ ಮೇಲಿನ ವಾದವನ್ನು ಪರವಾದಿಗಳ ಅಭಿಪ್ರಾಯವನ್ನು) ಒಪ್ಪಿಕೊಂಡು ಮಂಡಿಸಲಾಗಿದೆ. ವಸ್ತುತಃ ಭೇದವು ವಿದಾರಣ ಸ್ವರೂಪವಲ್ಲ, ಮತ್ತೆ ಅನ್ಯೋನ್ಯಾಭಾವವೇ (ಆಗಿದೆ)[2].

---

...... ಪುಟ 580 ರಿಂದ
ವಿಭಜನೆಯು ಉಂಟಾಗುವುದು. ಹಾಗಾಗಿ ಧರ್ಮಿಯನ್ನು ಪ್ರತಿಯೋಗಿಯಿಂದ ವಿಭಕ್ತ-ವನ್ನಾಗಿಸುವುದು. ಇದನ್ನು 'ಭೇದಸ್ಯ ಚ ಸ್ವರೂಪತ್ವೇ ಯೋ ವದನ್ತಿ ಚ ಶೂನ್ಯತಾಮ್ । ಅದ್ಭುತಾಸ್ತೇ ಯತೋಽನ್ಯಸ್ಯ ಪ್ರತಿಯೋಗಿತ್ವಮಿಷ್ಯತೇ । ಪ್ರತಿಯೋಗಿನೋ ಹಿ ಭೇದೋಽಯಂ ನ ತು ಸ್ವಸ್ಮಾತ್ ಕಥಞ್ಚನ ॥' ಅನುವ್ಯಾ.2.2.ವೈಶೇ.146,147.ರಲ್ಲಿ, ಭೇದವು ಧರ್ಮಿಯ ಸ್ವರೂಪವಾದಲ್ಲಿ ಧರ್ಮಿಯು ಶೂನ್ಯವಾಗಬೇಕು ಎಂದು ಆಪಾದಿಸುವವರು ಅದ್ಭುತ ಮೇಧಾವಿಗಳು, ಏಕೆಂದರೆ ಮತ್ತೊಂದು ಪದಾರ್ಥಕ್ಕೆ ಪ್ರತಿಯೋಗಿತ್ವವನ್ನು ಹೊಂದಿಸುವುದು, ಆ ಪ್ರತಿಯೋಗಿಯಿಂದ ಧರ್ಮಿಗೆ ವಿಭಾಗವನ್ನು ಉಂಟುಮಾಡುವುದು, ಹೊರತಾಗಿ ತನ್ನಿಂದ ತನಗೇ ಭೇದವನ್ನು-ವಿಭಾಗವನ್ನು ಮಾಡಿಕೊಳ್ಳಲಾರದು ತಾನೆ? ಎಂದು ಭಾವ.

1. ಭೇದ ಶಬ್ದಕ್ಕೆ ವಿದಾರಕ ಎಂಬ ಅರ್ಥವನ್ನು ಒಪ್ಪಿ, ಅದು ಧರ್ಮಿಯನ್ನು ಪ್ರತಿಯೋಗಿ-ಯಿಂದ ವಿಭಜನೆ ಗೊಳಿಸುವುದು ಎಂದು ಹೇಳಲಾಯಿತು. ಆದರೆ ವಿಭಜಕವಾದ ಕೊಡಲಿ ಕತ್ತರಿ ಮುಂತಾದವು ಯಾವ ವಸ್ತುವಿನ ಸಂಪರ್ಕವನ್ನು ಹೊಂದುವುದೋ ಅದನ್ನು ವಿಭಜಿಸುವುದು ಕಂಡಿದೆ. ಪ್ರಕೃತ ಧರ್ಮಿಯನ್ನು ಪ್ರತಿಯೋಗಿಯಿಂದ ವಿಭಜಿಸಬೇಕಾದಲ್ಲಿ ಪ್ರತಿಯೋಗಿಗೂ ಭೇದಕ್ಕೂ ಸಂಪರ್ಕಬೇಕಲ್ಲವೇ? ಭೇದವು ಧರ್ಮಿಯ ಸ್ವರೂಪ ಎಂದಾದಲ್ಲಿ ಪ್ರತಿಯೋಗಿಯಿಂದ ಸಂಪರ್ಕವಿಲ್ಲದ ಪ್ರಯುಕ್ತ ಹೇಗೆ ವಿಭಜನೆಗೊಳಿಸುವುದು? ಎನ್ನುವ ಸಂದೇಹಕ್ಕೆ ಉತ್ತರಿಸುವರು. ಭೇದಕ್ಕೂ ಪ್ರತಿಯೋಗಿಗೂ ನಿರೂಪ್ಯ-ನಿರೂಪಕಭಾವ ಸಂಬಂಧವಿದೆ ಎಂದು.

2. 'ಭಿದಿರ್- ವಿದಾರಣೇ' ಎಂದು ಶಾಸ್ತ್ರದಲ್ಲಿ ವಿದಾರಣಾರ್ಥದಲ್ಲಿ ಭೇದ ಶಬ್ದದ ಪ್ರಯೋಗವು ಕಂಡಿದೆಯೇ ಹೊರತಾಗಿ ಅನ್ಯೋನ್ಯಾಭಾವ ಎನ್ನುವ ಅರ್ಥದಲ್ಲಿ ಕಂಡಿಲ್ಲ ಎನ್ನಲಾಗದು. 'ಪ್ರಯೋಗತೋಽನುಗನ್ತವ್ಯಾ ಅನೇಕಾರ್ಥಾ ಹಿ ಧಾತವಃ' ಎನ್ನುವ ಪ್ರಮಾಣಾನುಸಾರ ಪ್ರಯೋಗಗಳಿಂದ ಅರ್ಥವನ್ನು ನಿರ್ಣಯಿಸಬೇಕು ಕೇವಲ ನಿಘಂಟಿನಿಂದಲ್ಲ. 'ಘಟೋ ಭಿನ್ನಃ' ಎಂದು ವಿದಾರಣಾರ್ಥದಲ್ಲಿ ಹೇಗೆ ಪ್ರಯೋಗವು ಇದೆಯೋ, ಹಾಗೆಯೇ 'ಪಟಾತ್ ಘಟೋ ಭಿನ್ನಃ' ಎಂದೂ ಪ್ರಯೋಗವಿದೆ. ಈ ಎರಡನೆಯ ಪ್ರಯೋಗದಲ್ಲಿ ಭೇದ ಎನ್ನುವ ಅರ್ಥವು ಪ್ರಸಿದ್ಧವಾಗಿದೆ. ಅನುವ್ಯಾ.2.2.ವೈಶೇ.149.- 'ಅವಿದಾರಣೇಽಪಿ ಹ್ಯಾಸ್ಯಸ್ಯ ಭಿನ್ನಾವೋಷ್ಠೌ ತು ತಸ್ಯ ಚ' ಮುಖದಲ್ಲಿ ಒಂದೊಕ್ಕೊಂದು ಸೇರಿರುವ ಆ ತುಟಿಗಳನ್ನು ಭಿನ್ನವಾದ ಎರಡು ತುಟಿಗಳು ಎಂದೇ ವ್ಯವಹರಿಸುವರು. ಎನ್ನುವದನ್ನು ಉದಾಹರಣೆಯನ್ನಾಗಿ ನೀಡಲಾಗಿದೆ ಎಂದು ಭಾವ.

ಹಾಗಾದರೂ[1] ಅನೇಕತ್ವದೊಡನೆ ಒಂದೇ ದ್ರವ್ಯದಲ್ಲಿ ಸಾಮಾನಾಧಿಕರಣ್ಯ-ವನ್ನು (ಅವಿನಾಭಾವ ಸಂಬಂಧವನ್ನು) ಹೊಂದಿರುವ ಭೇದವು ಪಟದ ಸ್ವರೂಪವಾದಲ್ಲಿ ಪಟವೂ ಅನೇಕತ್ವವನ್ನು ಹೊಂದಬೇಕಾದೀತು[2]. ಹಾಗೆಯೇ ಅದರ ಅವಯವಗಳೂ ಸಹ, ಅದಕ್ಕೆ (ಅನೇಕತ್ವಕ್ಕೆ) ವಿರುದ್ಧವಾದ ಏಕತ್ವವು ಎಲ್ಲೂ ಇಲ್ಲ ಎಂದಾದೀತು. ಏಕತ್ವವೇ ಇಲ್ಲ ಎಂದಾದಲ್ಲಿ ಅನೇಕತ್ವವೂ ಇಲ್ಲವಾಗುವುದು. ಹಾಗಾಗಿ ಸಂಖ್ಯಾರಹಿತವಾದ ದ್ರವ್ಯವು ಶೂನ್ಯವೇ ಆಗಬೇಕಾದೀತು. ಹಾಗಲ್ಲ- ಹಾಗಾದಲ್ಲಿ (ಅನೇಕತ್ವದಿಂದ ಅವಿನಾಭಾವ-ಸಂಬಂಧವನ್ನು ಹೊಂದಿರುವ ಭೇದದ ಸ್ವರೂಪವು ಪಟವು ಆಗಿರುವುದರಿಂದ) ಪಟವೂ ಸಹ ಅನೇಕತ್ವವನ್ನು ಹೊಂದಿರಬೇಕೇ ಹೊರತು, ಪಟವೇ ಅನೇಕವಾಗಬೇಕಿಲ್ಲ[3]. (ಪಟದಲ್ಲಿ) ಅನೇಕತ್ವವು ಇದ್ದರೆ, ಏಕತ್ವವು ಹೇಗೆ? 'ತನ್ನಿಂದ ತಾನು ಒಂದೇ ಆದರೂ ಮತ್ತೊಂದು ವಸ್ತುವಿನಿಂದ ಕೂಡಿದಾಗ ಅನೇಕವಾಗುವುದು' ಎಂದು (ಏಕತ್ವ ಮತ್ತು ಅನೇಕತ್ವಗಳಿಗೆ ಏಕತ್ರದಲ್ಲಿ ಅಸ್ತಿತ್ವಕ್ಕೆ) ವಿರೋಧವು ಇಲ್ಲದಿರುವುದರಿಂದ[4]. ಅನೇಕತ್ವದ ಬಲದಿಂದ ('ಪಟದಲ್ಲಿ ಅನೇಕತ್ವವು ಇರುವುದರಿಂದ' ಎನ್ನುವ ತರ್ಕದ ಬಲದಿಂದ) ಏಕತ್ವಾಭಾವವನ್ನು

---

1. ಭೇದ ಶಬ್ದಕ್ಕೆ ವಿದಾರಣ ಎಂದು ಅರ್ಥವನ್ನು ವಿವಕ್ಷಿಸದೇ ಅನ್ಯೋನ್ಯಾಭಾವ ಎಂಬ ಅರ್ಥವನ್ನೇ ಒಪ್ಪಿದರೂ ಬಾಧಕಾಂತರ ಉಂಟು ಎಂದು ಸಂದೇಹಿಸಿ, ಉತ್ತರಿಸುತ್ತಾರೆ.

2. ಎಲ್ಲಿ ಅನೇಕತ್ವವೋ ಅಲ್ಲಿ ಭೇದ ಇರುವುದು. ಎಲ್ಲಿ ಭೇದವೋ ಅಲ್ಲಿ ಅನೇಕತ್ವ. ಹಾಗಾಗಿ ಭೇದಕ್ಕೂ ಅನೇಕತ್ವಕ್ಕೂ ಬಿಟ್ಟಿರಲಾರದ ಸಂಬಂಧವಿದೆ ಎಂದು ತಿಳಿಯುವುದು. ಪ್ರಕೃತ ಪಟದಲ್ಲಿ ಭೇದವಿದೆ, ಆ ಭೇದವಾದರೋ ಪಟದ ಸ್ವರೂಪ, ಹಾಗಾದಲ್ಲಿ 'ಒಂದು ಪಟ' ಎಂದು ವ್ಯವಹಾರಕ್ಕೆ ವಿಷಯವಾಗದೇ ಪಟವು ಅನೇಕ ಎಂದು ವ್ಯವಹರಿಸಬೇಕಾದೀತೆಂದು ಭಾವ.

3. ಯಾವುದು ಅನೇಕತ್ವರೂಪ ಧರ್ಮವನ್ನು ಹೊಂದಿದೆಯೋ ಅದು ಅನೇಕ ಪದಾರ್ಥಗಳನ್ನು ಹೊಂದಿರುವುದು. ಅನೇಕತ್ವವು ಇದ್ದಲ್ಲೇ ಭೇದವು ಇರುವುದು, ಭೇದವು ಇದ್ದಲ್ಲಿ ಅನೇಕತ್ವವು ಇದ್ದೇ ಇರುವುದು. ಆದುದರಿಂದ 'ಭೇದ ಮತ್ತು ಅನೇಕತ್ವವು ಅಭಿನ್ನ' ಎಂದು ಔಪಚಾರಿಕವಾಗಿ ವ್ಯವಹರಿಸಲಾಗುವುದು. ಅಂತಹ ಭೇದವು ಪಟದ ಸ್ವರೂಪವಾದುದರಿಂದ ಪಟದಲ್ಲಿ ಅನೇಕತ್ವವನ್ನು ಒಪ್ಪಬೇಕೇ ಹೊರತಾಗಿ, ಪಟವೇ ಅನೇಕವಾಗಲಿ ಎಂದು ಆಪಾದಿಸುವದಲ್ಲ. ಕಾಡಿನಲ್ಲಿ ಅನೇಕ ವೃಕ್ಷಗಳು ಇವೆ, ಅಂದರೆ ಅನೇಕತ್ವವು ಕಾಡಿನಲ್ಲಿದೆ. ಆದುದರಿಂದ ವೃಕ್ಷಗಳು ಅನೇಕವಾಗಿವೆ ಹೊರತು ಕಾಡು ಅನೇಕವಲ್ಲ ಎಂದು ಭಾವ.

4. ವಿವಕ್ಷಾಭೇದದಿಂದ ಪಟವನ್ನು ಒಂದು ಎಂದೂ ಅನೇಕ ಎಂದೂ ವ್ಯವಹರಿಸಬಹುದು ಎಂದುಭಾವ.

ಹೇಳಿ ಪುನಃ ಅನೇಕತ್ವದ ಅಭಾವವನ್ನು ಹೇಳುವವಗೆ ಪೂರ್ವೋತ್ತರವಿರೋಧವು ಏಕೆ ಇಲ್ಲ. ಪರರ (ವಾದದ) ಸರಣಿಯಂತೆ ಪರರಿಗೆ ಆಪಾದಿಸಲಾಗುವುದು (ಎನ್ನುವುದು ತರವಲ್ಲ), ಇಲ್ಲಿ ಯಾವುದೂ ನಾವು ಉಪಪಾದಿಸಿದ ರೀತಿಯಲ್ಲಿಲ್ಲ, ಇದರಿಂದ (ನಾವು ಒಪ್ಪಿದ ರೀತಿಯಲ್ಲಿ ಆಪಾದಿಸಿದ್ದರೆ) 'ಪರರ ರೀತಿಯಿಂದಲೇ ಪರರಿಗೆ ಆಪಾದನೆ' ಎಂಬುವುದು ಯುಕ್ತವಾಗುತ್ತಿತ್ತು, ಎಂದು ಪರಿಹರಿಸುವುದು[1]. ಈ ರೀತಿಯಾಗಿ (ಭೇದವು ತೋರಲು) ಬಾಧಕವು ಇಲ್ಲದಿರುವುದರಿಂದ, ಸಾಧಕವು ಇರುವುದರಿಂದಲೂ, ಭೇದವು ಧರ್ಮಿಯ

---

1. ಪ್ರಕೃತವಾದದ ವಿವರ– 'ಅನೇಕತ್ವದಿಂದ ಅಭಿನ್ನವಾದ ಭೇದವು ಪಟದ ಸ್ವರೂಪ ಎಂದು ಒಪ್ಪಿದಲ್ಲಿ, ಏಕತ್ವವು ಪಟಾದಿಗಳಲ್ಲಿ ಇಲ್ಲ ಎಂದಾಗುವುದು. ಏಕತ್ವವೇ ಇಲ್ಲ ಎಂದಾದಲ್ಲಿ ಅನೇಕತ್ವವೂ ಇಲ್ಲದಾಗಬೇಕಾದೀತು' ಎಂದು ಅದ್ವೈತವಾದಿಗಳು ಆಪಾದನೆಯನ್ನು ಮಾಡಿದರು. ಅದಕ್ಕೆ ತತ್ವವಾದಿಗಳು ಆಕ್ಷೇಪಿಸಿದರು– 'ಅನೇಕತ್ವವನ್ನು ಮೊದಲು ಒಪ್ಪಿ, ಅದರ ಬಲದಿಂದ ಏಕತ್ವವು ಯಾವ ಪದಾರ್ಥಗಳಲ್ಲೂ ಇಲ್ಲವೆಂದಾದೀತು, ಏಕತ್ವವು ಇಲ್ಲದ ಪಕ್ಷದಲ್ಲಿ ಅನೇಕತ್ವವು ಇಲ್ಲ' ಎಂಬುದಾಗಿ ಹೇಳುವುದು ತರವಲ್ಲ 'ಪೂರ್ವೋತ್ತರವಿರೋಧವು ಇರುವುದರಿಂದ' ಎಂದು. ಆದರೆ ತತ್ವವಾದಿಗಳ ಈ ಉತ್ತರವು ಸರಿಯಾಗದು– ಆಪಾದನೆಯು ಪ್ರತಿವಾದಿಗಳು ಒಪ್ಪಿರುವ ರೀತಿಯನ್ನು ಅನುಸರಿಸಿಯೇ ಮಾಡಲಾಗುವುದು. ಉದಾ– 'ನೀನು ಕಳ್ಳನಾಗದಿದ್ದಲ್ಲಿ ಅಲ್ಲಿಗೆ ಏಕೆ ಹೋದೆ? ಅಲ್ಲಿಗೆ ಹೋದದ್ದರಿಂದ ನೀನು ಕಳ್ಳ' ಎಂದು ಲೋಕವ್ಯವಹಾರವು ಇದೆ. ಆಗ ಆಪಾದಿತನು 'ಮೊದಲು ನೀವು ನನ್ನನ್ನು ಕಳ್ಳನಲ್ಲ ಎಂದು ಒಪ್ಪಿ, ಪುನಃ ನನ್ನನ್ನು 'ಕಳ್ಳ' ಎಂದು ಹೇಳುವುದು ಪೂರ್ವೋತ್ತರ ವಿರೋಧ ಎಂದು ಹೇಳುವುದು ತರವೇ? ಹಾಗೆಯೇ ಪ್ರಕೃತದಲ್ಲೂ ಅನೇಕತ್ವದಿಂದ ಅಭಿನ್ನವಾದ ಭೇದದ ಸ್ವರೂಪವಾಗಿವೆ ಪಟಾದಿಗಳು ಎಂದು ಒಪ್ಪಿದ್ದರಿಂದ ಪಟಾದಿಗಳಲ್ಲಿ ಅನೇಕತ್ವವನ್ನು ಒಪ್ಪಿದಂತಾಯಿತು. ಹಾಗಾಗಿ ಏಕತ್ವವು ಪಟಾದಿಗಳಲ್ಲಿ ಇರಲು ಶಕ್ಯವಿಲ್ಲ, ಏಕತ್ವವು ಇಲ್ಲದೇ ಹೋದಲ್ಲಿ ಅನೇಕತ್ವವೂ ಸಿದ್ಧಿಸದು ಎಂದು ಆಪಾದಿಸಲಾಗಿದೆ. ಆದುದರಿಂದ 'ಪೂರ್ವೋತ್ತರ ವಿರೋಧ ಎಂದು ಹೇಳುವುದು ತರವಲ್ಲ' ಎಂದು ಅದ್ವೈತವಾದಿಗಳು ತತ್ವವಾದಿಗಳಿಗೆ ಪ್ರತ್ಯುತ್ತರಿಸುವುದು ಯೋಗ್ಯವಾಗಿಲ್ಲ. ಇಲ್ಲಿ ಆಪಾದಿಲಾದ ಯಾವ ವಿಷಯವನ್ನೂ ತತ್ವವಾದಿಗಳು ಒಪ್ಪದಿರುವುದರಿಂದ. ತತ್ವವಾದವು ಹೀಗಿದೆ– 'ಭೇದವು ಎರಡು ಪದಾರ್ಥಗಳಲ್ಲಿರುವ ಒಂದು ಧರ್ಮವಲ್ಲ, ಕೇವಲ ಧರ್ಮಿಯಲ್ಲಿ ಮಾತ್ರ ಇರುವ ಧರ್ಮ, ಆದರೆ ಆ ಧರ್ಮವು ಪ್ರತಿಯೋಗಿಯಿಂದ ನಿರೂಪಿತವಾಗುವುದು ಎಂದು. ಮತ್ತೂ ಸಹ 'ಅನೇಕತ್ವದೊಡನೆ ಭೇದಕ್ಕೆ ಅವಿನಾಭಾವ ಸಂಬಂಧವಿದೆ' ಎಂದು ಒಪ್ಪಿರುವದಿಲ್ಲ, ಆದುದರಿಂದ ಅದ್ವೈತಿಗಳು ಆಪಾದಿಸಿರುವ ಯಾವ ಪ್ರಮೇಯವನ್ನೂ ತತ್ವವಾದಿಗಳು ಒಪ್ಪಿಲ್ಲ ಎಂದು ಭಾವ.

ಸ್ವರೂಪವಾದುದರಿಂದ ಅದರ (ಭೇದದ) ಪ್ರತೀತಿಯಲ್ಲಿ ಅನ್ಯೋನ್ಯಾ-ಶ್ರಯತ್ವವು ಇಲ್ಲ ಎಂದು (ವಾದವನ್ನು ) ಉಪಸಂಹರಿಸುತ್ತಾರೆ '**ಅತಃ**' ಎಂದು.

**ಧರ್ಮಿ-ಪ್ರತಿಯೋಗಿಗಳ ಅರಿವು ಸಮೂಹಾಲಂಬನಜ್ಞಾನದಂತೆ**

**ನ ಚ ಯುಗಪಜ್ಜ್ಞಾನಾನುತ್ಪತ್ತಿದೋಷಃ । ಯಥಾ ಯುಗಪದೇವ ದೀಪಸಹಸ್ರದರ್ಶನೇ ಸಾಮಾನ್ಯತಃ ಸರ್ವೇ ಜ್ಞಾಯನ್ತ ಏವ, ತಥಾ ಸ್ಯಾತ್ ।**

'ಒಮ್ಮೆಯೇ (ಧರ್ಮಿಯ ಮತ್ತು ಪ್ರತಿಯೋಗಿಗಳ ) ಜ್ಞಾನದ ಉತ್ಪತ್ತಿಯು (ಎಲ್ಲೂ ಕಾಣದು ಎಂಬ) ದೋಷ' ಎನ್ನುವುದು ತರವಲ್ಲ. ಹೇಗೆ ಒಮ್ಮೆಯೇ ಸಾವಿರ ದೀಪಗಳ ದರ್ಶನವಾದಾಗ ಸಾಮಾನ್ಯವಾಗಿ ಎಲ್ಲವೂ (ದೀಪಗಳು) ಅರಿವಿಗೆ ಪ್ರಾಪ್ತವಾಗುವುದೋ (ಪ್ರಕೃತದಲ್ಲೂ) ಹಾಗೆ ಪ್ರಾಪ್ತವಾಗುವುದು.

'ಪಟಃ ಪ್ರತೀಯಮಾನಃ ಸರ್ವವ್ಯಾವೃತ್ತತಯೈವ ಪ್ರತೀಯತ' ಇತ್ಯುಕ್ತಮ್, ತದಯುಕ್ತಮ್ । ಪ್ರತಿಯೋಗಿಭೂತಸ್ಯ ಸರ್ವಸ್ಯ, ಧರ್ಮಿಣಶ್ಚ ಪಟಸ್ಯ ಯುಗಪಜ್ಜ್ಞಾನಪ್ರಸಙ್ಗಾತ್ । ಯದ್ಯಪಿ ಜ್ಞಾನಾನಾಂ ವಧ್ಯಘಾತುಕ-ಭಾವೇನ ಯೌಗಪದ್ಯಮಸ್ತಿ । ತಥಾಪಿ ಯುಗಪದುತ್ಪತ್ತಿಸ್ತು ನಾಸ್ತಿ । ಮನಸೋಽಣುತ್ವೇನ ಯುಗಪದನೇಕೇಂದ್ರಿಯಸನ್ನಿಕರ್ಷಾಭಾವಾತ್ । ಏಕೇಂದ್ರಿಯವಿಷಯೇಽಪಿ ಸಜಾತೀಯಾತ್ಮಗುಣಾನಾಂ ಯುಗಪದು-ತ್ಪತ್ತ್ಯದರ್ಶನಾದ್? ಇತ್ಯಾಶಙ್ಕ್ಯಾಽಹ '**ನ ಚ**' ಇತಿ । ಕುತೋ ನ? ಇತ್ಯತ ಆಹ '**ಯಥಾ**' ಇತಿ । ದೃಶ್ಯತೇಽನೇನೇತಿ **ದರ್ಶನಂ**- ಚಕ್ಷುಸ್ಸನ್ನಿಕರ್ಷಃ । ತಥಾ ಸ್ಯಾತ್ ಪ್ರಕೃತ ಇತಿ ಶೇಷಃ । ಯದ್ಯಪಿ ಯುಗಪದನೇಕಜ್ಞಾನೋತ್ಪತ್ತಿರ್ನಾಸ್ತಿ, ತಥಾಪಿ 'ಸಮುದಾಯಾಲಮ್ಬನಸ್ಯೈಕಸ್ಯ ಜ್ಞಾನಸ್ಯೋತ್ಪತ್ತೌ ನ ಕಾಚಿದ್ ಅನುಪಪತ್ತಿಃ' ಇತಿ ಭಾವಃ ।

'ತೋರಿದ ಪಟವು ಎಲ್ಲದರಿಂದ ವ್ಯಾವೃತ್ತವಾಗಿಯೇ ತೋರುವುದು' ಎಂದು ಹೇಳಲಾಗಿದೆ, ಅದು ಸರಿಯಲ್ಲ. ಪ್ರತಿಯೋಗಿಯಾದ ಎಲ್ಲದರ (ಎಲ್ಲ ಪದಾರ್ಥಗಳ), ಮತ್ತು ಧರ್ಮಿಯಾದ ಪಟದ ಅರಿವು ಏಕಕಾಲದಲ್ಲಿ ಪ್ರಾಪ್ತವಾಗಬೇಕಾದೀತು. ವಸ್ತುತಃ ಜ್ಞಾನಗಳಿಗೆ ವಧ್ಯ-ಘಾತಕಭಾವವು ಇರುವುದರಿಂದ ಒಂದೇ ದೇಶದಲ್ಲಿ ಅಸ್ತಿತ್ವವು ಇದೆ. ಆದರೂ ಏಕಕಾಲದಲ್ಲಿ

ಉತ್ಪತ್ತಿಯು ಇಲ್ಲ[1]. ಮನವು ಅಣುವಾದುದರಿಂದ ಏಕಕಾಲದಲ್ಲಿ ಅನೇಕ ಇಂದ್ರಿಯಗಳಿಂದ ಸಂಬಂಧವನ್ನು ಹೊಂದದೇ ಇರುವುದರಿಂದ[2]. (ಧರ್ಮಿ-ಯಾದ ಪಟ ಮತ್ತು ಅದರ ಪ್ರತಿಯೋಗಿಗಳು) ಒಂದೇ ಇಂದ್ರಿಯದ ವಿಷಯವಾದರೂ ಸಜಾತೀಯ ಆತ್ಮಗುಣಗಳಿಗೆ (ಎರಡು ಜ್ಞಾನಗಳಿಗೆ) ಏಕಕಾಲದಲ್ಲಿ ಉತ್ಪತ್ತಿಯು (ಎಲ್ಲೂ) ಕಾಣದೇ ಇರುವುದರಿಂದ ಎಂದು ಸಂದೇಹಿಸಿ[3], ಉತ್ತರಿಸುತ್ತಾರೆ 'ನ ಚ ' ಎಂದು. ಏಕೆ ಇಲ್ಲ? (ಯುಗಪದ್

1. ಭೇದದ ಅರಿವು ಪ್ರಾಪ್ತವಾಗಲು, ಪ್ರತಿಯೋಗಿಭೂತವಾದ ಎಲ್ಲ ಪದಾರ್ಥಗಳ ಮತ್ತು ಅನುಯೋಗಿಯ ಅರಿವು ಅವಶ್ಯಕ. ಆದರೆ ಏಕದೇಶದಲ್ಲಿ ಒಂದಕ್ಕಿಂತ ಹೆಚ್ಚಿನ ಅರಿವು ಅಶಕ್ಯ ಎಂಬ ಬಾಧಕವನ್ನು ಪ್ರಸ್ತಾಪಿಸಲಾಗಿದೆ. ಆದರೆ ಶಾಸ್ತ್ರದಲ್ಲಿ 'ಎರಡನೆಯ ಅರಿವನ್ನು ಪೂರ್ವದ ಅರಿವಿನ ನಾಶಕ' ಎಂದು ಒಪ್ಪಲಾಗಿದೆ. ಈ ವಧ್ಯ-ಘಾತಕಭಾವವು ಆ ಅರಿವುಗಳಿಗೆ ಸಂಪನ್ನವಾಗಬೇಕಾದಲ್ಲಿ ಆ ಅರಿವುಗಳು ಏಕಕಾಲದಲ್ಲಿ ಒಂದೆಡೆ ಇದೆ ಎಂದು ಒಪ್ಪಲೇ ಬೇಕು. 'ನ ಜಾತ ಏಕೋ ಅನ್ಯಂ ಹನ್ತಿ, ನಾಪ್ಯನ್ಯಾಧಾರಃ'- ಒಂದು ಪದಾರ್ಥವು ಉತ್ಪನ್ನವಾಗದೆ ಇದ್ದಲ್ಲಿ ಹಾಗೆಯೇ ಬೇರೆಡೆಯಲ್ಲಿ ಇದ್ದಲ್ಲಿ ಮತ್ತೊಂದನ್ನು ಸಂಹರಿಸಲಾರದು. ಎಂಬ ನಿಯಮವು ಇರುವುದರಿಂದ, ವಧ್ಯ-ಘಾತಕಗಳಾದ ಅರಿವುಗಳನ್ನು ಏಕಕಾಲದಲ್ಲಿ ಒಂದೆಡೆ ಇವೆ ಎಂದು ಒಪ್ಪಬೇಕು. ಹಾಗಾಗಿ 'ಯುಗಪಜ್ಜ್ಞಾನಾನುಪಪತ್ತಿಃ' ಎಂಬ ಆಪಾದನೆಯು ಅನಿಷ್ಟಕಾರಕವಲ್ಲ ಎಂಬ ಸಂದೇಹವನ್ನು ಮನದಲ್ಲಿರಿಸಿಕೊಂಡು ಉತ್ತರಿಸುವರು- ಏಕದೇಶದಲ್ಲಿ ಅನೇಕಜ್ಞಾನಗಳು ಇದ್ದರೂ ಏಕಕಾಲದಲ್ಲಿ ಅನೇಕ ಜ್ಞಾನಗಳ ಉತ್ಪತ್ತಿಯು ಇಲ್ಲ, ಹಾಗಾಗಿ ಏಕಕಾಲದಲ್ಲಿ ಉತ್ಪನ್ನವಾಗಲಿ ಎಂಬುದು ಆಪಾದನೆಯ ಭಾವ ಎಂದು.

2. ಅರಿವಿನ ಪ್ರಾಪ್ತಿಯ ಕಾರಣಗಳಲ್ಲಿ ಮನ-ಇಂದ್ರಿಯ ಸನ್ನಿಕರ್ಷವೂ ಒಂದು. ಆ ಮನವು ಅಣುವಾದುದರಿಂದ ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚಿನ ಇಂದ್ರಿಯಗಳೊಡನೆ ಸಂಬಂಧವನ್ನು ಹೊಂದಲು ಅಶಕ್ಯ, ಹಾಗಾಗಿ ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚಿನ ಅರಿವು ಅಶಕ್ಯ ಎಂದು ಭಾವ.

3. ಮನವು ಅಣುವಾದುದರಿಂದ ಒಂದಕ್ಕಿಂತ ಹೆಚ್ಚಿನ ಇಂದ್ರಿಯಗಳಿಂದ ಸಂಪರ್ಕವನ್ನು ಹೊಂದದಿದ್ದರೂ, ಒಂದೇ ಇಂದ್ರಿಯದಿಂದ ಅನೇಕ ಪದಾರ್ಥವಿಷಯಕ ಅರಿವು ಏಕಕಾಲದಲ್ಲಿ ಪ್ರಾಪ್ತವಾಗಬಹುದಲ್ಲವೆ? ಹಾಗಾಗಿ ಧರ್ಮಿ ಮತ್ತು ಪ್ರತಿಯೋಗಿಗಳ ಅರಿವು ಏಕಕಾಲದಲ್ಲಿ ಪ್ರಾಪ್ತವಾಗಬಹುದು ಎನ್ನುವ ಉತ್ತರವೂ ಸರಿಯಾಗದು ಎಂಬ ಪೂರ್ವಪಕ್ಷವನ್ನು ಸ್ಫುಟೀಕರಿಸುತ್ತಿರುವರು. ಇಲ್ಲಿ 'ಆತ್ಮಗುಣಾನಾಂ' ಎಂದರೆ ಆತ್ಮನ ಗುಣಗಳು ಎಂದು ಅರ್ಥವಲ್ಲ. ಆತ್ಮನ ಅಧೀನವಾದ ಮನೋನಿಷ್ಠವಾದ ಗುಣಗಳು ಎಂದು ಅರ್ಥ. ಪ್ರಕೃತ ಅಂತಃಕರಣದಲ್ಲಿ ಉತ್ಪನ್ನವಾಗುವ ಧರ್ಮಿ ಮತ್ತು ಪ್ರತಿಯೋಗಿ ಎಂಬ ವಿಭಿನ್ನ ಜ್ಞಾನಗಳ ಉತ್ಪತ್ತಿಯು ಏಕಕಾಲದಲ್ಲಿ ಅಸಂಭವ. ಒಂದೇ ಕ್ಷಣದಲ್ಲಿ ಮನದಲ್ಲಿ ಎರಡು ಜ್ಞಾನವು ಉತ್ಪನ್ನವಾಗುವುದಿಲ್ಲ ಎಂಬುವುದು ಶಾಸ್ತ್ರದ ನಿಯಮ ಎಂದು ಭಾವ.

ಉತ್ಪತ್ತಿಯು ಏಕೆ ದೋಷವಲ್ಲ) ಆದುದರಿಂದ ಉತ್ತರಿಸುತ್ತಾರೆ 'ಯಥಾ' ಎಂದು. ದೃಶ್ಯತೇಽನೇನ ಇತಿ **ದರ್ಶನಂ**- ಚಕ್ಷುಸ್ಸನ್ನಿಕರ್ಷವು[1]. ತಥಾ ಸ್ಯಾತ್ ನಂತರದಲ್ಲಿ 'ಪ್ರಕೃತೇ' ಎಂದು ಶೇಷಪೂರಣ ಮಾಡಿಕೊಳ್ಳುವುದು. ವಸ್ತುತಃ ಏಕಕಾಲದಲ್ಲಿ ಅನೇಕ ಜ್ಞಾನಗಳಿಗೆ ಉತ್ಪತ್ತಿ ಇಲ್ಲ, ಆದರೂ ಸಮೂಹಾಲಂಬನಾತ್ಮಕವಾದ (ಅನೇಕವಸ್ತುವಿಷಯಕ) ಏಕ ಜ್ಞಾನದ ಉತ್ಪತ್ತಿಗೆ ಯಾವುದೇ ಅನುಪಪತ್ತಿಯು ಇಲ್ಲ ಎಂದು ಭಾವ.

**ಶಿಷ್ಯಾಶಂಕಾ ಮತ್ತು ಪರಿಹಾರ**

**ನನು, ಸರ್ವಮಿತಿ ಸಾಮಾನ್ಯತೋ ಯತ್ಸರ್ವವಿಷಯಕಂ ಜ್ಞಾನಂ ತತ್ ಸಾಕ್ಷಿರೂಪಮ್ । ತಸ್ಮಿನ್ ಸರ್ವದಾ ಸತ್ಯೇವ, ಪಟಾದಿಜ್ಞಾನಾನಿ ಮನೋ-ವೃತ್ತಿರೂಪಾಣಿ ಜಾಯನ್ತೇ । ತತ್ಕಥಮೇತಾವಾಕ್ಷೇಪಪರಿಹಾರೌ? ಸತ್ಯಮ್, ತಥಾಪಿ ವಿಶೇಷತೋ ವ್ಯಾವೃತ್ತಿಪ್ರತೀತೌ ಘಟಪಟಜ್ಞಾನೋತ್ಪತ್ತಿಯೌಗಪದ್ಯಂ ಪ್ರಸಜ್ಯತ ಏವ । ತತ್ರ ಧರ್ಮಿಣಃ ಪ್ರತಿಯೋಗಿನಾಂ ಚ ಪುರೋಽವಸ್ಥಿತತ್ವೇ ಯುಗಪದಿಂದ್ರಿಯಸನ್ನಿಕರ್ಷೇ ಚ ಸತಿ ಸಮುದಾಯಾವಲಮ್ಬನೈಕ-ಜ್ಞಾನೋತ್ಪತ್ತಿರುಕ್ತಾ । ಧರ್ಮಿಪ್ರತಿಯೋಗಿನೋಃ ಅನ್ಯತರಸ್ಯೈವ ಸನ್ನಿಧಾನೇ ತು ಸಂಸ್ಕಾರಸಹಕೃತೇಂದ್ರಿಯಸನ್ನಿಕರ್ಷೇಣ ಏಕಜ್ಞಾನೋತ್ಪತ್ತಿರಿತ್ಯಾದಿ ಬೋಧ್ಯವ್ಯಮ್ ।**

ಸರಿ, 'ಸರ್ವಂ' ಎಂದು ಸಾಮಾನ್ಯವಾಗಿ ಎಲ್ಲ (ಪದಾರ್ಥ)ವಿಷಯಕವಾದ ಯಾವ ಅರಿವು ಅದು ಸಾಕ್ಷಿಸ್ವರೂಪವಾದುದು (ಸಾಕ್ಷೀಂದ್ರಿಯದಿಂದ ಗೃಹೀತ-ವಾದುದು). ( ಆ ಅರಿವು) ಅದರಲ್ಲಿ (ಸಾಕ್ಷಿಯಲ್ಲಿ) ಯಾವಾಗಲೂ ಇರುತ್ತದೆ, ಮನೋವೃತ್ತಿಯಾದ ಪಟಾದಿಗಳ ಅರಿವು ಉತ್ಪನ್ನವಾಗುವಂಥವು. ಆದುದರಿಂದ ಈ ಆಕ್ಷೇಪವಾಗಲಿ, ಪರಿಹಾರವಾಗಲಿ ಹೇಗೆ (ಸಮಂಜಸ ವಾಗುವವು)[2]? (ಈ

1. ಮೂಲದಲ್ಲಿನ 'ದರ್ಶನ' ಎಂಬ ಶಬ್ದಕ್ಕೆ ಪ್ರಸಿದ್ಧವಾದ 'ಜ್ಞಾನ' ಎಂದು ಅರ್ಥೈಸಿದಲ್ಲಿ, ಮುಂದಿನ 'ಜ್ಞಾಯನ್ತೇ' ಎನ್ನುವ ಶಬ್ದವು ವ್ಯರ್ಥವಾಗುವುದು, ಆದುದರಿಂದ ದರ್ಶನ ಶಬ್ದಕ್ಕೆ ಪ್ರಸಿದ್ಧ ಅರ್ಥವನ್ನು ವಿವಕ್ಷಿಸದೆ, ಕರಣಾರ್ಥಕ ಅನ ಪ್ರತ್ಯಯವಿದು, ಹಾಗಾಗಿ 'ಇಂದ್ರಿಯ ಸನ್ನಿಕರ್ಷ' ಎಂದು ಪರ್ಯವಸಿತಾರ್ಥವು ಪ್ರಾಪ್ತವಾಗುವುದು ಎಂದು ಭಾವ.

2. ಪ್ರಕೃತ ಉಪನ್ಯಾಸದಲ್ಲಿ ಭೇದದ ಅರಿವಿಗೆ ಧರ್ಮಿ ಮತ್ತು ಅದರ ಪ್ರತಿಯೋಗಿಯಾದ ಸಮಸ್ತ ಪದಾರ್ಥಗಳ ಅರಿವು ಏಕಕಾಲದಲ್ಲಿ ಅವಶ್ಯಕ ಅದು ಹೇಗೆ ಪ್ರಾಪ್ತವಾಗುವುದು?

ಪುಟ 587ರಲ್ಲಿ........

ಪ್ರಶ್ನೆಯು) ಸರಿಯಾದದ್ದು, ಆದರೂ ವಿಶೇಷವಾಗಿ ವ್ಯಾವೃತ್ತಿಯು ಪ್ರತೀತ-ವಾದ ಸಂದರ್ಭದಲ್ಲಿ ಘಟ-ಪಟಗಳ ಅರಿವು ಏಕಕಾಲದಲ್ಲಿ ಉತ್ಪನ್ನವಾಗಲಿ ಎಂದು ಆಪಾದನೆಯು ಪ್ರಾಪ್ತವಾಗುವುದು. ಇಂತಹ ಸಂದರ್ಭದಲ್ಲಿ ಮಾತ್ರ (ಈ ಪರಿಹಾರ)[1]. (ಭೇದದ ಅರಿವನ್ನು ಹೊಂದಿದ ವ್ಯಕ್ತಿಯ) ಮುಂದೆ ಧರ್ಮಿ ಮತ್ತು ಪ್ರತಿಯೋಗಿಗಳು ಇದ್ದಲ್ಲಿ, ಇಂದ್ರಿಯ ಸನ್ನಿಕರ್ಷಕ್ಕೆ ಸಿಲುಕಿದಲ್ಲಿ, ಇಂತಹ ಸಂದರ್ಭದಲ್ಲಿ ಸಮೂಹಾಲಂಬನಾತ್ಮಕವಾದ ಒಂದೇ ಅರಿವಿನ ಉತ್ಪತ್ತಿಯನ್ನು ತಿಳಿಸಲಾಗಿದೆ. ಧರ್ಮಿ ಅಥವಾ ಪ್ರತಿಯೋಗಿಗಳಲ್ಲಿ ಯಾವುದಾದರೂ ಒಂದು ಸನ್ನಿಹಿತವಾದಲ್ಲಿ (ಈ ಹಿಂದಿನ ಅನುಭವದಿಂದ ಜನ್ಯವಾದ) ಸಂಸ್ಕಾರದಿಂದ ಸಹಕೃತವಾದ ಇಂದ್ರಿಯದಿಂದ ಒಂದೇ ಅರಿವು ಉತ್ಪನ್ನವಾಗುವುದು ಈ ಮುಂತಾದವುಗಳನ್ನು (ಪ್ರಕ್ರಿಯೆಗಳನ್ನು) ತಿಳಿಯುವುದು[2].

---

...... ಪುಟ 586 ರಿಂದ

ಎಂದು ಪ್ರಶ್ನೆ, ಸಮೂಹಾಲಂಬನದ ಅರಿವಾದುದರಿಂದ ಏಕಕಾಲದಲ್ಲಿ ಪ್ರಾಪ್ತವಾಗಲು ಯಾವ ವಿಧವಾದ ಅಡಚಣೆಯು ಇಲ್ಲ ಎಂದು ಉತ್ತರ. ಇವೆರಡೂ ಸಮಂಜಸವಲ್ಲ ಎಂದು ಶಿಷ್ಯನ ಸಂದೇಹ- 'ಅಯಂ ಪಟಃ' ಎಂಬ ಅರಿವು ಪ್ರಾಪ್ತವಾದಾಗ ಈ ಪಟವು ಇತರ ಸರ್ವಪದಾರ್ಥಗಳಿಂದ ಭಿನ್ನ ಎಂಬ ಅರಿವೂ ಪ್ರಾಪ್ತವಾಗಿರುತ್ತದೆ. ಇಲ್ಲಿ 'ಸರ್ವಂ' ಎನ್ನುವ ಪ್ರತಿಯೋಗಿ-ಜ್ಞಾನವು ನಿತ್ಯವಾದ ಸಾಕ್ಷಿಸ್ವರೂಪವಾದದ್ದು, ಜನ್ಯವಾದುದಲ್ಲ. ಧರ್ಮಿಯಾದ ಪಟಾದಿಗಳ ಅರಿವು ಅಂತಃಕರಣಜನ್ಯವಾದುದು. ಒಟ್ಟಿನಲ್ಲಿ ಧರ್ಮಿಯ ಸ್ವರೂಪಭೂತವಾದ ಭೇದವು ಇಂದ್ರಿಯಗೋಚರವಾದಾಗ, ಪ್ರತಿಯೋಗಿಭೂತವಾದ ಸರ್ವಪದಾರ್ಥದ ಅರಿವು ಸಾಕ್ಷೀಂದ್ರಿಯದಿಂದ ಪ್ರಾಪ್ತವಾಗುವುದರಿಂದ ಯುಗಪದುತ್ಪತ್ತಿಯ ಪ್ರಸಕ್ತಿಯೇ ಇಲ್ಲ, ಹಾಗಾಗಿ ಯುಗದುತ್ಪತ್ತಿಯು ಹೇಗೆ? ಎನ್ನುವ ಸಂದೇಹಕ್ಕಾಗಲೀ, ಸಮೂಹಾಲಂಬನ ಜ್ಞಾನವಾದುದರಿಂದ ಉತ್ಪತ್ತಿಗೆ ಪ್ರತಿಬಂಧಕವಿಲ್ಲ ಎನ್ನುವ ಪರಿಹಾರವಾಗಲೀ ಸಮಂಜಸವಾದುದಲ್ಲ ಎಂಬುವುದು ಈ ಪ್ರಶ್ನೆಯ ಭಾವ.

1. 'ಸರ್ವಸ್ಮಾತ್ ಘಟೋ ಭಿನ್ನಃ' ಇತ್ಯಾದಿ ಸ್ಥಳದಲ್ಲಿ ಶಿಷ್ಯನು ಅಭಿಮತಿಸಿದಂತೆ ಸಂದೇಹ ಪರಿಹಾರಗಳ ಪ್ರಸಕ್ತಿಯು ಇಲ್ಲ. ಎಲ್ಲಿ ವಿಶೇಷವಾಗಿ ಭೇದದ ಅರಿವು ಪ್ರಾಪ್ತವಾಗುವುದೋ, ಅಂದರೆ 'ಪಟಾತ್ ಘಟೋ ಭಿದ್ಯತೇ' ಎಂಬಿತ್ಯಾದಿ ವಿಶೇಷಸಂದರ್ಭದಲ್ಲಿ ಧರ್ಮಿ ಮತ್ತು ಪ್ರತಿಯೋಗಿಗಳ ಅರಿವು ಏಕಕಾಲದಲ್ಲಿ ಉತ್ಪನ್ನವಾಗಿರುವುದೋ ಅಂತಹ ಸಂದರ್ಭದಲ್ಲಿ, ಅಂದರೆ ಪ್ರತಿಯೋಗಿಯ ಮತ್ತು ಅನುಯೋಗಿಯ ಅರಿವು ಇಂದ್ರಿಯಜನ್ಯವಾದಾಗ, ಆ ಭೇದದ ಅರಿವಿನ ನಿರ್ವಹಣೆಯ ಬಗ್ಗೆ ಈ ಪ್ರಶ್ನೆ-ಪರಿಹಾರಗಳು ಎಂದು ಭಾವ.

2. ಕೆಲವು ಸಂದರ್ಭದಲ್ಲಿ ಇಂದ್ರಿಯದ ಸನ್ನಿಕರ್ಷವಿಲ್ಲದೇ ಕೆಲವು ಪದಾರ್ಥದ ಅರಿವು ಪ್ರಾಪ್ತವಾಗುವುದು ಅನುಭವದಲ್ಲಿದೆ. ಆಗ ಅಂತಹ ಅರಿವನ್ನು ಜ್ಞಾನಲಕ್ಷಣಾಪ್ರತ್ಯಾಸತ್ತಿಯಿಂದ ವಸ್ತುವು ನೇರ ಸನ್ನಿಕರ್ಷವನ್ನು ಹೊಂದುವುದು ಎಂದು ಶಾಸ್ತ್ರದಲ್ಲಿ ತಿಳಿಸಲಾಗಿದೆ. ಪ್ರಕೃತದಲ್ಲೂ ಹಾಗೆ ಎಂದು ಭಾವ.

**ವಿಶೇಷವು ಸರ್ವವಾದಿಗಳಿಂದ ಒಪ್ಪಿತವಾಗಿದೆ**

**ಏಕಸ್ಮಿನ್ನೇವ ವಸ್ತುನಿ ವಿಶೇಷಸ್ತೈರಪ್ಯಙ್ಗೀಕೃತ ಏವ । 'ನೇತಿ ನೇತಿ' ಇತ್ಯತ್ರ ಸರ್ವವೈಲಕ್ಷಣ್ಯಾಙ್ಗೀಕಾರಾತ್ । ವಿಶೇಷಾನಙ್ಗೀಕಾರೇ ಚ ಪುನರುಕ್ತೇಃ ।**

(ಧರ್ಮಿ ಮತ್ತು ಭೇದವು) ಒಂದೇ ವಸ್ತು, ಆದರೂ ಅದರಲ್ಲಿ ವಿಶೇಷವಿದೆ ಎನ್ನುವುದನ್ನು ಅವರೂ (ಅದ್ವೈತವಾದಿಗಳೂ) ಸಹ ಒಪ್ಪಿರುವರು. 'ನೇತಿ ನೇತಿ' ಎಂದು (ಬ್ರಹ್ಮನಲ್ಲಿ) ಸರ್ವವೈಲಕ್ಷಣ್ಯವನ್ನು ಒಪ್ಪಿರುವದರಿಂದ. ವಿಶೇಷವನ್ನು ಒಪ್ಪದ ಪಕ್ಷದಲ್ಲಿ (ನೇತಿನೇತಿ ಎನ್ನುವ ವಾಕ್ಯಕ್ಕೆ) ಪುನರುಕ್ತಿಯು ಪ್ರಾಪ್ತವಾದೀತು.

ನನು, ಭೇದಸ್ಯ ಪಟಸ್ವರೂಪತ್ವೇ 'ಪಟ ಏವಾಸ್ತಿ ನ ಭೇದಃ' ಇತಿ ವಾ 'ಭೇದ ಏವಾಸ್ತಿ ನ ಪಟಃ' ಇತಿ ವಾ ಪಟಭೇದಶಬ್ದೌ ಪರ್ಯಾಯಾವಿತಿ ವಾಽಽಪದ್ಯೇತ । ಮೈವಮ್- ವಿದ್ಯಮಾನಯೋರೇವ ಪಟ-ಭೇದಯೋಃ ಸವಿಶೇಷಾಭೇದಸ್ವೀಕಾರಾತ್ । ತತ್ರಾಭೇದೇನಾऽನ್ಯೋನ್ಯಾಶ್ರಯಾದಿ-ಪರಿಹಾರೋ ಭವಿಷ್ಯತಿ । ವಿಶೇಷೇಣ ಚಾನ್ಯತರಮಾತ್ರಾವಶೇಷಾದಿಕಂ ನ ಭವಿಷ್ಯತಿ । ವಿಶೇಷಸ್ಯ ಭೇದಪ್ರತಿನಿಧಿತ್ವಾತ್ । 'ಅಭಿನ್ನೇ ವಸ್ತುನಿ ಪುನರ್ವಿಶೇಷೋಽಸ್ತಿ' ಇತ್ಯೇತದಪ್ರಸಿದ್ಧಂ ಕಥಮಙ್ಗೀಕ್ರಿಯತೇ? ಇತ್ಯತ ಆಹ 'ಏಕಸ್ಮಿನ್ನೇವ' ಇತಿ । **ತೈಃ**- ಸರ್ವಾಭೇದವಾದಿಭಿಃ ಅಪಿ । ಕಿಮುತ ಪದಾರ್ಥಾನ್ ವ್ಯವಸ್ಥಾಪಯದ್ಭಿರನ್ಯೈಃ । **ಅಙ್ಗೀಕೃತಃ**- ಅಙ್ಗೀಕೃತಪ್ರಾಯಃ, ತದವಿನಾಭೂತಸ್ಯಾರ್ಥಸ್ಯಾಙ್ಗೀಕೃತತ್ವಾತ್ । ತತ್ಕಥಂ? ಇತ್ಯತ ಆಹ 'ನೇತಿ' ಇತಿ । 'ಸ ಏಷ ನೇತಿ ನೇತ್ಯಾತ್ಮಾ' ಇತ್ಯತ್ರ ವಾಕ್ಯೇ ಪ್ರತಿಪಾದ್ಯತಯಾ ಬ್ರಹ್ಮಣಃ ಸರ್ವವೈಲಕ್ಷಣ್ಯಾಙ್ಗೀಕಾರಾತ್ । ತಾವತಾ ಚ ಕಿಂ ಪ್ರಕೃತೇ? ಇತ್ಯತ ಆಹ 'ವಿಶೇಷ..' ಇತಿ ।

ಸರಿ, ಭೇದವು ಪಟದ (ಧರ್ಮಿಯ) ಸ್ವರೂಪವಾದಲ್ಲಿ ಪಟವು ಮಾತ್ರವಿದೆ ಭೇದವಿಲ್ಲ ಎಂದಾಗಲೀ, ಅಥವಾ ಭೇದವು ಮಾತ್ರವಿದೆ ಪಟವು ಇಲ್ಲ ಎಂದಾಗಲೀ, ಅಥವಾ ಪಟ-ಭೇದಶಬ್ದಗಳು ಏಕಾರ್ಥಕ ಶಬ್ದಗಳು ಎಂದಾಗಲೀ ಆಗಬೇಕಾದೀತು. ಹಾಗಿಲ್ಲ, (ಪ್ರತ್ಯೇಕವಾಗಿಯೇ) ಅಸ್ತಿತ್ವವನ್ನು ಹೊಂದಿರುವ

ಪಟ-ಭೇದಗಳಿಗೆ ಸವಿಶೇಷಾಭೇದವನ್ನು ಒಪ್ಪಿರುವುದರಿಂದ[1]. ಅವುಗಳಲ್ಲಿ ಅಭೇದವೂ ಇರುವುದರಿಂದ ಅನ್ಯೋನ್ಯಾಶ್ರಯತ್ವಾದಿಗಳು (ದೋಷಗಳು) ಪರಿಹೃತವಾಗುವವು[2]. ಮತ್ತು (ಧರ್ಮಿ- ಭೇದಗಳಲ್ಲಿ) ವಿಶೇಷವು ಇರುವುದರಿಂದ ಅನ್ಯತರ ಮಾತ್ರ (ಪಟ ಅಥವಾ ಭೇದಗಳಲ್ಲಿ ಯಾವುದಾದರೂ ಒಂದು ಮಾತ್ರ) ಉಳಿಯಬೇಕಾದೀತು ಎನ್ನುವ ಸಂದೇಹವು ಉಳಿಯದು[3]. ವಿಶೇಷವು ಭೇದದ ಪ್ರತಿನಿಧಿಯಾದುದರಿಂದ[4]. 'ನಿರ್ಭಿನ್ನವಾದ ವಸ್ತುವಿನಲ್ಲಿ ಪುನಃ ವಿಶೇಷವಿದೆ, ಎನ್ನುವುದು ಅಪ್ರಸಿದ್ಧ (ಆದುದರಿಂದ) ಹೇಗೆ ಒಪ್ಪಲಾಗುವುದು[5]? ಆದುದರಿಂದ ಉತ್ತರಿಸುತ್ತಾರೆ 'ಏಕಸ್ಮಿನ್ನೇವ' ಎಂದು. ತೈಃ-

---

1. ಪಟ-ಭೇದಗಳು ಘಟ-ಕಲಶದಂತೆ ಅತ್ಯಂತಾಭಿನ್ನವಾದಪದಾರ್ಥಗಳಲ್ಲ. ಹಾಗೆಯೇ ಘಟ-ಪಟದಂತೆ ಅತ್ಯಂತ ವಿಭಿನ್ನ ಪದಾರ್ಥಗಳೂ ಅಲ್ಲ ಎಂದು ಭಾವ.

2. ಈ ಹಿಂದೆ ತಿಳಿಸಿದಂತೆ ಧರ್ಮಿ ಮತ್ತು ಪ್ರತಿಯೋಗಿಗಳ ಅರಿವಿಗೆ ಭೇದದ ಅರಿವು ಅಗತ್ಯ, ಭೇದದ ಅರಿವಿಗೆ ಧರ್ಮಿ-ಪ್ರತಿಯೋಗಿಗಳ ಅರಿವು ಅಗತ್ಯ ಆದುದರಿಂದ ಅನ್ಯೋನ್ಯಾಶ್ರಯ ಎಂಬ ಸಂದೇಹವನ್ನು ನಿರಾಕರಿಸಲು ಭೇದವು ಧರ್ಮಿಯ ಸ್ವರೂಪ ಎನ್ನುವುದು ಸಹಕಾರಿ. 'ಅನ್ಯೋನ್ಯಾಶ್ರಯಾದಿ' ಎನ್ನುವಲ್ಲಿನ 'ಆದಿ' ಶಬ್ದವು ಭೇದಪ್ರತೀತಿಯ ಪರಂಪರೆಯನ್ನು ಒಪ್ಪಬೇಕು ಆದುದರಿಂದ ಅನವಸ್ಥಾ ಈ ಮುಂತಾದ ಸಂದೇಹಗಳಿಗೂ ಉತ್ತರಿಸಿದಂತಾಯಿತು ಎಂದು ಭಾವ.

3. ಧರ್ಮಿ ಮತ್ತು ಭೇದಗಳಲ್ಲಿ ಸವಿಶೇಷಾಭೇದವನ್ನು ಒಪ್ಪಲಾಗಿರುವುದರಿಂದ ಪಟಮಾತ್ರ ತೋರಲಿ, ಭೇದಮಾತ್ರ ತೋರಲಿ ಎನ್ನುವ ಸಂದೇಹಗಳಿಗೆ ಅವಕಾಶವಿಲ್ಲ. ಹಾಗೆಯೇ ಇಲ್ಲಿರುವ ಆದಿ ಶಬ್ದದಿಂದ ಪಟ ಮತ್ತು ಭೇದಗಳು ಪರ್ಯಾಯಶಬ್ದಗಳಾಗಲಿ ಎನ್ನುವ ಸಂದೇಹಕ್ಕೂ ಉತ್ತರಿಸಿದಂತಾಯಿತು ಎಂದು ಭಾವ.

4. ಭೇದವು ಇಲ್ಲದಿದ್ದರೂ ಅದರ ಪ್ರತಿನಿಧಿಯಾದ ಈ ವಿಶೇಷವು ಭೇದದ ನಿಮಿತ್ತವಾದ ಎಲ್ಲ ಕಾರ್ಯವನ್ನು ನಿರ್ವಹಿಸುತ್ತದೆ. ಯಾಗದಲ್ಲಿ ವ್ರೀಹಿಯನ್ನು ಹೋಮಕ್ಕೆ ಬಳಸಬೇಕು ಎಂದಿದೆ. ಅದು ಇಲ್ಲದ ಸಂದರ್ಭದಲ್ಲಿ ಅದರ ಪ್ರತಿನಿಧಿಯಾದ ನೀವಾರವನ್ನು ಬಳಸುವರು, ಅದರಂತೆ ಈ ವಿಶೇಷವೂ ಸಹ. ಅವಯವ ಅವಯವಿಗಳಿಗೆ ಅಭೇದವಿದೆ. ಆದರೂ 'ಘಟದ ಅವಯವ' ಎಂದು, 'ಕಪಾಲದಲ್ಲಿ ಘಟವು ಇದೆ' ಎಂದು ಇತ್ಯಾದಿ ಭೇದ ನಿಮಿತ್ತವಾದ ಅನೇಕ ವ್ಯವಹಾರಗಳನ್ನು ನಿಭಾಯಿಸುವುದು ಈ ವಿಶೇಷ ಎನ್ನುವ ಧರ್ಮ ಎಂದು ಭಾವ.

5. ಅದ್ವೈತವಾದಿಗಳು ' ಈ ವಿಶ್ವದಲ್ಲಿ ಬ್ರಹ್ಮ ಎನ್ನುವ ವಸ್ತುವು ಒಂದೇ ಇರುವುದು ' ಎಂದು ವಾದಿಸುವವರು. ಹಾಗಾಗಿ ವಿಶೇಷವನ್ನು ಅವರು ಒಪ್ಪಿರುವುದಿಲ್ಲ. ತನ್ನಿಮಿತ್ತವಾಗಿ ಅವರ ರೀತಿಯಲ್ಲಿ ಈ ಸಂದೇಹ ಎಂದು ಭಾವ

ಸರ್ವಾಭೇದವಾದಿಗಳಿಂದಲೂ ಸಹ[1]. ಮತ್ತೇನು ಪದಾರ್ಥಗಳನ್ನು ವ್ಯವಸ್ಥೆಗೊಳಿಸುವವರಿಂದ[2]. **ಅಙ್ಗೀಕೃತಃ**- ಒಪ್ಪಿದಂತೆ. ಅದನ್ನು (ವಿಶೇಷವನ್ನು) ಬಿಟ್ಟಿರಲಾಗದ ವಸ್ತುಗಳನ್ನು ಒಪ್ಪಿರುವದರಿಂದ[3]. ಅದು (ಅದ್ವೈತವಾದಿಗಳು ವಿಶೇಷವನ್ನು ಒಪ್ಪಿದ್ದಾರೆ ಎನ್ನುವುದು) ಹೇಗೆ? ಆದುದರಿಂದ ಹೇಳುತ್ತಾರೆ **'ನೇತಿ'** ಎಂದು. 'ಸ ಏಷ ನೇತಿ ನೇತ್ಯಾತ್ಮಾ...' ಎನ್ನುವ ವಾಕ್ಯದಲ್ಲಿ ಬ್ರಹ್ಮನಿಗೆ ಎಲ್ಲದರಿಂದ ವೈಲಕ್ಷಣ್ಯವನ್ನು ಪ್ರತಿಪಾದಿಸಲಾಗಿದೆ ಎಂದು ಒಪ್ಪಿರುವುದರಿಂದ. ಆದ್ದರಿಂದ ( ಬ್ರಹ್ಮನನ್ನು ಸರ್ವವಿಲಕ್ಷಣ ಎಂದು ಪ್ರತಿಪಾದಿಸಿದ್ದರಿಂದ) ಪ್ರಕೃತಕ್ಕೆ ಏನು? ಆದುದರಿಂದ ಹೇಳುತ್ತಾರೆ **'ವಿಶೇಷ..'** ಎಂದು.

#### ಅದ್ವೈತಿಗಳೂ ವಿಶೇಷವನ್ನು ಒಪ್ಪಬೇಕು

ಇದಮುಕ್ತಂ ಭವತಿ- 'ಇದಂ ತಾವದ್ವಾಕ್ಯಂ ಪದಸಮನ್ವಯಬಲೇನ ಬ್ರಹ್ಮಣಃ ಸರ್ವಪದಾರ್ಥವ್ಯಾವೃತ್ತಿಪ್ರತಿಪಾದಕಮ್' ಇತಿ ಪರೇಣಾಪಿ **ಅಙ್ಗೀಕೃತಮ್ । ತತ್ರಾತ್ಮಶಬ್ದಾರ್ಥಸ್ಯ ವಾಕ್ಯದ್ವಯಪ್ರತಿಪಾದಿತಯೋಃ ವ್ಯಾವೃತ್ತ್ಯೋಶ್ಚ ನ ತಾವದ್ಭೇದೋ ಭೇದಾಭೇದೋ ವಾಽಙ್ಗೀಕರ್ತುಂ ಶಕ್ಯೌ । ಅಖಣ್ಡಾರ್ಥಾಙ್ಗೀಕಾರವಿರೋಧಾತ್ । ತತ್ರಾತ್ಯನ್ತಾಭೇದೇ ವಿಶೇಷಸ್ಯ ಚಾನಙ್ಗೀಕಾರೇ ಪದಾನಾಂ ಪುನರುಕ್ತಿಪ್ರಸಙ್ಗೇನಾನಾಮ್ನಾನಂ ಪ್ರಸಜ್ಯೇತ । ಅತೋ 'ನೇಹ ನಾನಾಽಸ್ತಿ ಕಿಞ್ಚನ' ಇತ್ಯಾದಿವಾಕ್ಯವಿರೋಧಪರಿಹಾರಾಯ ಅತ್ಯನ್ತಾಭೇದ ಇವ ಪೌನರುಕ್ತ್ಯಾದಿಪ್ರಸಙ್ಗಪರಿಹಾರಾಯ ವಿಶೇಷೋಽಪಿ**

1. 'ವಿಶ್ವದಲ್ಲಿ ಇರುವುದು ಬ್ರಹ್ಮ ಎನ್ನುವ ಒಂದೇ ವಸ್ತು' ಎಂದು ವಾದಿಸುವ ಅದ್ವೈತವಾದಿಗಳಿಂದಲೂ ಅವಶ್ಯವಾಗಿ ಈ ವಿಶೇಷವನ್ನು ಒಪ್ಪಲೇಬೇಕು, ಭೇದವನ್ನು ಪ್ರತಿಪಾದಿಸುವ ಇತರ ವಾದಿಗಳು ಮಾತ್ರವಲ್ಲ' ಎನ್ನುವುದು ಮೂಲದಲ್ಲಿನ 'ಏವ' ಶಬ್ದದ ಅರ್ಥವನ್ನು ವಿವರಿಸುವ ಟೀಕಾದಲ್ಲಿರುವ 'ಅಪಿ' ಶಬ್ದದ ಭಾವ.

2. ಅನೇಕವಿಧವಾದ ದ್ರವ್ಯ ಗುಣ ಕರ್ಮಾದಿ ಪದಾರ್ಥಗಳನ್ನು ಒಪ್ಪುವ ನೈಯಾಯಿಕಾದಿ ವಾದಿಗಳು ಒಪ್ಪಲೇ ಬೇಕು ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ ಎನ್ನುವುದು ಕೈಮುತ್ಯದ ಭಾವ.

3. ವಸ್ತುತಃ ತತ್ವವಾದಿಗಳ ಹೊರತಾಗಿ ಯಾವ ಶಾಸ್ತ್ರಕಾರರೂ ಕಂಠತಃ 'ವಿಶೇಷ ಎಂಬ ಪದಾರ್ಥವು ಇದೆ' ಎಂದು ಹೇಳಿಲ್ಲ. ಆದರೂ ಅವರು ಪ್ರತಿಪಾದಿಸಿದ ಬೇರೇಬೇರೇ ಪ್ರಮೇಯಗಳನ್ನು ಸಮರ್ಥಿಸಲು ಇದನ್ನು ಒಪ್ಪಲೇ ಬೇಕು. ಇದನ್ನು ಒಪ್ಪದೇ ಹೋದಲ್ಲಿ ಅವರ ವಾದಗಳು ನಿಲ್ಲಲಾರವು ಆದುದರಿಂದ ಒಪ್ಪಿದಂತೆ ಎಂದು ತಿಳಿಸಲಾಗಿದೆ ಎಂದು ಭಾವ.

ಅಙ್ಗೀಕಾರ್ಯ ಏವ । ನನು, ಏವಮಾದಿಪದಜಾತಂ ನ ವಚನವೃತ್ತ್ಯಾಽಽತ್ಮನಿ ಪ್ರವರ್ತತೇ, ಕಿನ್ತು ಲಕ್ಷಣಯಾ । ತತ್ರ ವಚನವೃತ್ತ್ಯಾ ಪ್ರತಿಪಾದ್ಯಯೋಃ ವ್ಯಾವೃತ್ತ್ಯೋರ್ಭೇದಸದ್ಭಾವಾನ್ನ ಪೌನರುಕ್ತ್ಯಮ್ । ಲಕ್ಷ್ಯಾರ್ಥ-ಭೇದಾಭಾವಾನ್ನಾಖಣ್ಡಾರ್ಥತಾಹಾನಿರಿತಿ । ಮೈವಂ, ಲಕ್ಷ್ಯಾರ್ಥೇ ವಿಶೇಷಾಭಾವೇ ಪುನರ್ವೈಯರ್ಥ್ಯಾಪರಿಹಾರಾತ್ । ನಾನಾವಿಧಾರೋಪ-ಪರಿಹಾರಸ್ಯ ಪ್ರಯೋಜನತ್ವಾನ್ನ ವೈಯರ್ಥ್ಯಮಿತಿ ಚೇನ್ನ । ಪ್ರತಿಪಾದ್ಯವಿಶೇಷಾಭಾವೇ ತತ್ಪರಿಹಾರಸ್ಯಾಪ್ಯನುಪಪತ್ತೇರಿತಿ ।

ಇಷ್ಟು ತಿಳಿಸಿದಂತಾಯಿತು– ಈ ವಾಕ್ಯವಾದರೋ ('ಸ ಏಷ ನೇತಿ ನೇತ್ಯಾತ್ಮಾ' ಎನ್ನುವ ವಾಕ್ಯವಾದರೋ) ಪದಸಮನ್ವಯದ ಬಲದಿಂದ, ಬ್ರಹ್ಮನಿಗೆ ಸರ್ವಪದಾರ್ಥಗಳಿಂದ ವ್ಯಾವೃತ್ತಿಯನ್ನು (ಭೇದವನ್ನು) ತಿಳಿಸುತ್ತದೆ ಎಂದು ಪರರಿಂದಲೂ ಒಪ್ಪಲಾಗಿದೆ[1]. ಇಲ್ಲಿ (ವಾಕ್ಯದಲ್ಲಿ) ಆತ್ಮ ಶಬ್ದದಿಂದ ಬೋಧಿತ-

1. ಸಮನ್ವಯವು ಎರಡು ವಿಧದಲ್ಲಿದೆ. ಪದಸಮನ್ವಯ ಮತ್ತು ವಾಕ್ಯ ಸಮನ್ವಯ ಎಂದು. ಶಕ್ತಿವೃತ್ತಿ ಲಕ್ಷಣಾವೃತ್ತಿ ಎಂದು ಎರಡು ವಿಧದಲ್ಲಿ ಪದಸಮನ್ವಯವನ್ನು ಶಾಸ್ತ್ರದಲ್ಲಿ ತಿಳಿಸಲಾಗಿದೆ. ಉದಾ- ಇಂದಿರಾ ಶಬ್ದವು ಲಕ್ಷ್ಮೀದೇವಿಯನ್ನು ತಿಳಿಸುತ್ತದೆ. 'ಇಂದಿರಾ ಲೋಕಮಾತಾ ಮಾ ರಮಾ ಮಂಗಲದೇವತಾ' ಎನ್ನುವ ಕೋಶದಿಂದ ಇದು ತಿಳಿಯುವುದು. ಹಾಗೆ ವೃದ್ಧೋಪದೇಶ ಮುಂತಾದವುಗಳಿಂದ 'ಇಂತಹ ಪದವು ಇಂತಹ ಪದಾರ್ಥದಲ್ಲಿ ಶಕ್ತ ಅಥವಾ ರೂಢ' ಎಂದು ತಿಳಿಯುವುದು. ಇನ್ನು ಕೆಲವು ಪದವು ರೂಢವಾಗಿ ಒಂದು ಪದಾರ್ಥವನ್ನು ಬೋಧಿಸಿದರೂ ಮತ್ತೊಂದು ಪದಾರ್ಥವನ್ನು ತಾತ್ಪರ್ಯದಿಂದ ಬೋಧಿಸುತ್ತದೆ. ಉದಾ- 'ಗಂಗಾಯಾಂ ಘೋಷಃ' ಎನ್ನುವುದು. 'ಗಂಗಾ' ಶಬ್ದವು ಪ್ರವಾಹದಲ್ಲಿ ರೂಢವಾಗಿದ್ದರೂ ತೀರ ಎನ್ನುವ ಪದಾರ್ಥವನ್ನು ತಾತ್ಪರ್ಯಾರ್ಥದಿಂದ ಬೋಧಿಸುತ್ತದೆ. ಹೀಗೆ ರೂಢ ಮತ್ತು ಲಕ್ಷಣಾ ವೃತ್ತಿಗಳಿಂದ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯಗೊಳಿಸುವ ವಿಧಿಯನ್ನು ಪದಸಮನ್ವಯವಿಧಿ ಎಂದು ತಿಳಿಯುವುದು. ಇದಲ್ಲದೇ ವಾಕ್ಯ ಸಮನ್ವಯವಿಧಿ ಎನ್ನುವುದು ಮತ್ತೊಂದು ಬಗೆ. ರೂಢಿಲಕ್ಷಣಾಗಳಿಂದ ಶಬ್ದಗಳು ಬೇರೇ ಬೇರೇ ಪದಾರ್ಥಗಳನ್ನು ಬೋಧಿಸಿದರೂ ಇಂತಹ ಪದ ಸಮೂಹದಿಂದ ಬೋಧಿತವಾಗುವ ಪದಾರ್ಥವು ಬೇರೆಯೇ ಆಗಿರುತ್ತದೆ ಇದನ್ನು ವಾಕ್ಯಸಮನ್ವಯ ಎಂದು ತಿಳಿಸಿರುವರು. ಉದಾ- 'ದಶರಥನ ಸೂನು ದಶಕಂಠಸಂಹಾರಕನು' ಎನ್ನುವುದು. ಈ ವಾಕ್ಯದಲ್ಲಿನ ಶಬ್ದಗಳು ರೂಢಿಯಿಂದ ಬೇರೇ ಬೇರೇ ಪದಾರ್ಥಗಳನ್ನು ಬೋಧಿಸಿದರೂ ಒಟ್ಟು ವಾಕ್ಯವು ರಾಮಚಂದ್ರನನ್ನು ಬೋಧಿಸುವುದು ಏಂದು ಶಾಸ್ತ್ರ ಪರ್ಯಾಲೋಚನೆಯಿಂದ ತಿಳಿಯುವುದು. ಪ್ರಕೃತದಲ್ಲಿ ಪದಸಮನ್ವಯ ಕ್ರಮದಲ್ಲಿ ಅರ್ಥೈಸಲಾಗಿದೆ ಎಂದು ಭಾವ.

ವಾದ ಪದಾರ್ಥಕ್ಕೂ, (ನೇತಿ ನೇತಿ ಎಂಬ) ಎರಡು ವಾಕ್ಯಗಳಿಂದ ಪ್ರತಿಪಾದಿತ-ಗಳಾದ ವಿಭಜಿತಪದಾರ್ಥಗಳಿಗೂ ಭೇದವನ್ನಾಗಲಿ, ಭೇದಾಭೇದವನ್ನಾಗಲಿ ಒಪ್ಪಲು ಶಕ್ಯವಿಲ್ಲ. ಅಖಂಡಾರ್ಥವನ್ನು ಒಪ್ಪಿರುವದಕ್ಕೆ ವಿರುದ್ಧವಾಗು-ವುದರಿಂದ[1]. ಅಲ್ಲಿ (ಭೇದನಿಷೇಧಕವಾಕ್ಯದಲ್ಲಿ ಪ್ರತಿಪಾದಿತವಾದ ಪದಾರ್ಥಗಳಿಗೆ) ಅತ್ಯಂತಾಭೇದವನ್ನೇ ಒಪ್ಪಿದಲ್ಲಿ ವಿಶೇಷವನ್ನು ಒಪ್ಪದೇ ಇದ್ದಲ್ಲಿ, ಪದಗಳಿಗೆ ಪೌನರುಕ್ತಿಯ ಪ್ರಸಂಗವಿರುವುದರಿಂದ (ವೇದವಾಕ್ಯಕ್ಕೆ) ಅವೇದತ್ವವನ್ನು ಒಪ್ಪಬೇಕಾದೀತು[2]. ಆದುದರಿಂದ 'ನೇಹ ನಾನಾಽಸ್ತಿ ಕಿಞ್ಚನ' ಇತ್ಯಾದಿ (ಅಖಂಡಾರ್ಥಬೋಧಕ) ವಾಕ್ಯಗಳ ವಿರೋಧದ ಪರಿಹಾರಕ್ಕಾಗಿ (ನೇತಿ ನೇತಿ' ಎನ್ನುವ ವಾಕ್ಯದಿಂದ ಬೋಧಿತವಾದ ಪದಾರ್ಥಗಳಲ್ಲಿ) ಅತ್ಯಂತಾಭೇದವನ್ನು ಒಪ್ಪಿದಂತೆ, ಪೌನರುಕ್ತ್ಯಾದಿಗಳ (ದೋಷಗಳ) ಆಪತ್ತಿಯ ಪರಿಹಾರಕ್ಕಾಗಿ ವಿಶೇಷವನ್ನೂ ಒಪ್ಪಬೇಕು[3]. ಸರಿ, ಈ (ನೇತಿ ನೇತಿ..) ಮುಂತಾದ

---

1. 'ಆತ್ಮಾ- ಶುದ್ಧಬ್ರಹ್ಮನು ನೇತಿ- ಮೂರ್ತವಾದ ಪೃಥಿವ್ಯಾದಿಗಳಲ್ಲ, ನೇತಿ-ಅಮೂರ್ತವಾದ ಗಗನಾದಿಗಳಲ್ಲ' ಎಂದು ಪ್ರಸಕ್ತವಾದ ವಾಕ್ಯವನ್ನು ಅರ್ಥೈಸಲಾಗಿದೆ. 'ಬ್ರಹ್ಮನು ಮೂರ್ತನಲ್ಲ, ಅಮೂರ್ತನಲ್ಲ' ಎಂದು ಹೇಳಿದಲ್ಲಿ, ಅಂದರೆ ಬ್ರಹ್ಮನಲ್ಲಿ ಮೂರ್ತಾಮೂರ್ತಭೇದವಿದೆ ಎಂದು ಒಪ್ಪಿದಲ್ಲಿ ಬ್ರಹ್ಮನ ಅಖಂಡತ್ವಕ್ಕೆ ಭಂಗವು ಪ್ರಾಪ್ತವಾಗುವುದು ಎಂದು ಭಾವ.

2. ನೇತಿ, ನೇತಿ ಮತ್ತು ಆತ್ಮಾ ಈ ಮೂರು ಪದಗಳು ಕೇವಲ ಬ್ರಹ್ಮ ಬ್ರಹ್ಮ ಎಂದು ಬೋಧಿಸಿದಲ್ಲಿ, ಅರ್ಥದಲ್ಲಿ ಯಾವುದೇ ವಿಶೇಷವಿಲ್ಲ ಎಂದಾದಲ್ಲಿ , ವಾಕ್ಯಗತ ಶಬ್ದಗಳಿಗೆ ಪುನರುಕ್ತಿರೂಪ ದೋಷವು ಪ್ರಾಪ್ತವಾಗುವುದು. ಇಂತಹ ದೋಷಗಳು ವೇದವಾಕ್ಯಕ್ಕೆ ಯುಕ್ತವಾಗಲಾರದು ಎಂದು ಭಾವ.

3. 'ನೇಹ ನಾನಾಽಸ್ತಿ ಕಿಞ್ಚನ' ಎಂದು ಒಂದು ವೇದವಾಕ್ಯವು ಇದೆ. ಅದು ಬ್ರಹ್ಮನನ್ನು ಅಖಂಡ ಎಂದು ಸಾರುವುದು. ಪ್ರಕೃತವಾದ 'ನೇತಿ ನೇತಿ' ಎನ್ನುವ ವಾಕ್ಯದಿಂದ ಬೋಧಿತವಾದ ಪದಾರ್ಥಗಳಿಂದ ಬ್ರಹ್ಮನಿಗೆ ಭೇದವನ್ನೋ ಭೇದಾಭೇದವನ್ನೋ ಒಪ್ಪಿದಲ್ಲಿ 'ನೇಹ ನಾನಾಽಸ್ತಿ' ಎನ್ನುವ ವಾಕ್ಯದ ವಿರೋಧವು ಪ್ರಾಪ್ತವಾಗುವುದು. ತನ್ನಿಮಿತ್ತವಾಗಿ ಪ್ರಸಕ್ತವಾದ ವಾಕ್ಯವನ್ನು 'ನೇಹ ನಾನಾ' ವಾಕ್ಯದಿಂದ ವಿರೋಧಬಾರದಂತೆ ವ್ಯಾಖ್ಯಾನಿಸಲಾಗುವುದು ಎಂದು ವಾದಿಸುವದಾದಲ್ಲಿ, 'ನೇತಿ ನೇತಿ' ಎನ್ನುವ ವಾಕ್ಯದಲ್ಲಿನ ಶಬ್ದಗಳಿಂದ ಪ್ರತಿಪಾದಿತವಾದ ಪದಾರ್ಥಗಳಲ್ಲಿ ಅತ್ಯಂತಾಭೇದವಿದ್ದಲ್ಲಿ ಆ ಶಬ್ದಗಳಿಗೆ ಪೌನರುಕ್ತಿರೂಪ ದೋಷ ಮತ್ತು ಪರ್ಯಾಯತ್ವರೂಪ ದೋಷಗಳು ಪ್ರಾಪ್ತವಾಗುವವು. ಅದರ ಪರಿಹಾರಕ್ಕಾಗಿ ವಿಶೇಷವನ್ನೂ ಒಪ್ಪಬೇಕು. ಹಾಗೆಯೇ ಪ್ರಕೃತದಲ್ಲಿಯೂ ಭೇದವು ಧರ್ಮಿಯ ಸ್ವರೂಪವಾದರೂ ಅವುಗಳಲ್ಲಿ ವಿಶೇಷವನ್ನು ಒಪ್ಪಿರುವದರಿಂದ, ಪಟ ಮತ್ತು ಭೇದ ಶಬ್ದಗಳಿಗೆ ಪರ್ಯಾಯತ್ವಾದಿ ದೋಷಗಳು ಇಲ್ಲ ಎಂದು ಭಾವ.

ಪದಸಮೂಹವು ವಚನವೃತ್ತಿಯಿಂದ (ಶಕ್ತಿವೃತ್ತಿಯಿಂದ) ಆತ್ಮನನ್ನು ಪ್ರತಿಪಾದಿಸುವುದಿಲ್ಲ, ಮತ್ತೆ ಹೇಗೆಂದರೆ ಲಕ್ಷಣಾವೃತ್ತಿಯಿಂದ. ಅಲ್ಲಿ (ನಿಷೇಧಕ ವಾಕ್ಯದಲ್ಲಿ) ಪ್ರತಿಪಾದ್ಯವಾದ ವ್ಯಾವೃತ್ತಿಗಳಲ್ಲಿ (ಮೂರ್ತಾಮೂರ್ತಗಳಲ್ಲಿ) ಭೇದವು ಇರುವುದರಿಂದ ಪೌನರುಕ್ತಿಯು ಬಾರದು. ಲಕ್ಷ್ಯಾರ್ಥದಲ್ಲಿ ಭೇದವಿಲ್ಲದ ಪ್ರಯುಕ್ತ ಅಖಂಡಾರ್ಥತ್ವಕ್ಕೆ ಹಾನಿಯಿಲ್ಲ[1]. ಇದು ಹಾಗಲ್ಲ, ಲಕ್ಷ್ಯಾರ್ಥದಲ್ಲಿ ವಿಶೇಷವಿಲ್ಲ ಎಂದಾದಲ್ಲಿ ಪುನಃ ವೈಯರ್ಥ್ಯವು ಅಪರಿಹಾರ್ಯ[2]. ನಾನಾವಿಧವಿರೋಧಗಳ ಪರಿಹಾರವು ಪ್ರಯೋಜನವಾಗಿರುವುದರಿಂದ ವ್ಯರ್ಥತೆಯು ಇಲ್ಲ ಎಂದೆನ್ನಲಾಗದು[3]. ಪ್ರತಿಪಾದ್ಯದಲ್ಲಿ ವಿಶೇಷವಿಲ್ಲ ಎಂದಾದಲ್ಲಿ ಆ ಪರಿಹಾರವೂ ಸರಿಯಾಗದಿರುವುದರಿಂದ[4].

---

1. 'ನೇತಿ ನೇತಿ' ಮೂರ್ತಪದಾರ್ಥದಿಂದ ಮತ್ತು ಅಮೂರ್ತಪದಾರ್ಥದಿಂದ ಭಿನ್ನ ಎಂದು ಅರ್ಥೈಸಲಾಗಿದೆ. ಇಲ್ಲಿನ ಶಬ್ದಗಳು ರೂಢಿಯಿಂದ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ, ಲಕ್ಷಣಾವೃತ್ತಿಯಿಂದ ಬೋಧಿಸುವುದು. ದಶಕಂಠವೈರಿ, ದಾಶರಥಿ ಮುಂತಾದ ಶಬ್ದಗಳು ಲಕ್ಷಣಾವೃತ್ತಿಯಿಂದ 'ರಾಮ' ಎಂಬ ವ್ಯಕ್ತಿಯನ್ನೇ ಪ್ರತಿಪಾದಿಸಿದರೂ, ಆ ಶಬ್ದಗಳ ವಾಚ್ಯಾರ್ಥವು ಬೇರೇಯೇ ಆದುದರಿಂದ, ಆವಿಶೇಷಣಗಳಿಗೆ ಪರ್ಯಾಯತ್ವವಾಗಲೀ ವ್ಯರ್ಥತೆಯಾಗಲೀ ಹೇಗೆ ಇಲ್ಲವೋ ಹಾಗೆ ಪ್ರಕೃತದಲ್ಲೂ ಮೂರ್ತಪದಾರ್ಥಗಳಿಂದ ಭಿನ್ನ, ಅಮೂರ್ತಪದಾರ್ಥಗಳಿಂದ ಭಿನ್ನ ಎನ್ನುವ ಪದಗಳಿಗೆ ಪೌನರುಕ್ತಿಯಾಗಲೀ, ವ್ಯರ್ಥತೆಯಾಗಲೀ ಇಲ್ಲ ಎಂದು ಭಾವ.

2. ದಾಶರಥಿ, ದಶಕಂಠವೈರಿ ಇತ್ಯಾದಿ ವಿಶೇಷಣಗಳು ಪ್ರತಿಪಾದಿತನಾದ ರಾಮ ಎಂಬ ವ್ಯಕ್ತಿಯಲ್ಲಿ ದಶರಥಸೂನುತ್ವ ಮತ್ತು ದಶಕಂಠವೈರಿತಾ ರೂಪ ಕಿಂಚಿತ್ ವೈಶಿಷ್ಟ್ಯವನ್ನು ತಿಳಿಸುವುದರಿಂದ ಆ ವಿಶೇಷಣಗಳಿಗೆ ವ್ಯರ್ಥತೆಯು ಇಲ್ಲ. ಪ್ರಕೃತದಲ್ಲಿ ಆಗಮೋಕ್ತ ವಿಶೇಷಣಗಳು ಬ್ರಹ್ಮನಲ್ಲಿ ಯಾವ ವಿಶೇಷವನ್ನೂ ಪ್ರತಿಪಾದಿಸಲಿಲ್ಲ ಎಂದಾದಲ್ಲಿ ವೈಯರ್ಥ್ಯವು ಅಪರಿಹೃತ ಎಂದು ಭಾವ.

3. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಎಂಬಿತ್ಯಾದಿ ಬ್ರಹ್ಮಪ್ರತಿಪಾದಕವಾಕ್ಯಗಳು ಇವೆ. ಇವು ಬ್ರಹ್ಮನಲ್ಲಿ ಸತ್ಯತ್ವಾದಿ ಗುಣಗಳನ್ನು ಪ್ರತಿಪಾದಿಸುವುದಿಲ್ಲ, ಮತ್ತೆ ಮಿಥ್ಯಾತ್ವಾರೋಪ, ಅಜ್ಞಾನಾರೋಪ ಮುಂತಾದ ನಾನಾ ಆರೋಪಗಳನ್ನು ಪರಿಹರಿಸುವುದರಿಂದ ಈ ಎಲ್ಲ ಶಬ್ದಗಳಿಗೆ ಸಾರ್ಥಕತೆಯನ್ನು ಹೇಳಲಾಗಿದೆ ಎಂದು ವಾದಿಸುವುದು ತರವಲ್ಲ ಎಂದು ಭಾವ.

4. ಪ್ರಕೃತ 'ನೇತಿ ನೇತಿ' ಎನ್ನುವ ವೇದವು ಬ್ರಹ್ಮನನ್ನು ಮೂರ್ತಗಳಿಂದ ವ್ಯಾವೃತ್ತ, ಅಮೂರ್ತಗಳಿಂದ ವ್ಯಾವೃತ್ತ' ಎಂದು ಬೋಧಿಸುವುದು ಎಂದು ಹೇಳಬೇಕು. ಆದರೆ ......ನ

ಪುಟ 594ರಲ್ಲಿ........

**ಭೇದಗಳಲ್ಲೂ ಪರಸ್ಪರ ಸವಿಶೇಷಾಭೇದವಿದೆ**

**ನ ಚ ಘಟಾದ್ವೈಲಕ್ಷಣ್ಯಮೇವ ಪಟಾದ್ವೈಲಕ್ಷಣ್ಯಮ್, ಅನುಭವವಿರೋಧಾತ್ ।**

(ಕಟದಲ್ಲಿರುವ) ಘಟಭೇದವೇ ಪಟಭೇದವಲ್ಲ, ಅನುಭವದ ವಿರೋಧವು ಇರುವುದರಿಂದ.

**ನ ಕೇವಲಂ ವ್ಯಾವೃತ್ತಿದ್ವಯಸ್ಯ ನಿರ್ವಿಶೇಷಾಭೇದೇ ಪೌನರುಕ್ತ್ಯಾದಿ-ದೋಷಃ । ಕಿಂ ತರ್ಹೀತ್ಯತೋ ದೋಷಾನ್ತರಂ ಪ್ರತಿಜಾನೀತೇ 'ನ ಚ' ಇತಿ । ಇತಶ್ಚ ನ ವ್ಯಾವೃತ್ತಿದ್ವಯಸ್ಯ ನಿರ್ವಿಶೇಷಾಭೇದ ಇತ್ಯರ್ಥಃ । ಕುತೋ ನ? ಇತ್ಯತ ಆಹ 'ಅನುಭವ..' ಇತಿ । ವಿರೋಧಪ್ರಕಟನಾರ್ಥಂ, ಅನುಭವೇನ ಹ್ಯೇಕಾರ್ಥವಿಶೇಷತ್ವೇನ ಪ್ರತೀಯಮಾನಂ ವ್ಯಾವೃತ್ತಿ-ದ್ವಯಮ್ ಅಭಿನ್ನಮಪಿ ಸಾತಿಶಯಂ ಪ್ರತೀಯತೇ 'ನ ತು ತನ್ಮಾತ್ರಮ್' ಇತಿ । ಯದ್ಯಪಿ ಸತ್ಯಜ್ಞಾನಾದಿವಾಕ್ಯಮಪ್ಯತ್ರೋದಾಹರ್ತುಂ ಶಕ್ಯಂ ತಥಾಪಿ 'ಭೇದಸ್ಯ ಸವಿಶೇಷಾಭೇದಪ್ರತಿಪಾದನಂ ಪ್ರಸ್ತುತಮ್' ಇತಿ ತಥಾವಿಧಮೇವ ವಾಕ್ಯಮುದಾಹೃತಮ್ । ಕ್ವಾಪಿ ಭೇದಾನುಭ್ಯುಪಗತೌ ಏತದ್ವಾಕ್ಯ-ವಿರೋಧಶ್ಚಾನೇನಸೂಚಿತೋ ಭವತಿ ।**

'ವ್ಯಾವೃತ್ತಿದ್ವಯಗಳಿಗೆ (ಬ್ರಹ್ಮನಿಂದ) ನಿರ್ವಿಶೇಷಾಭೇದವನ್ನು ಒಪ್ಪಿದಲ್ಲಿ ಪೌನರುಕ್ತ್ಯಾದಿ ದೋಷ' ಎಂದು ಇಷ್ಟು ಮಾತ್ರವಲ್ಲ, ಮತ್ತೇನು? ಮತ್ತೂ ದೋಷಾಂತರವನ್ನೂ ತಿಳಿಸುತ್ತಾರೆ 'ನ ಚ' ಎನ್ನುವುದರಿಂದ. ಮತ್ತೂ ಸಹ ವ್ಯಾವೃತ್ತಿದ್ವಯಗಳಿಗೂ(ಪರಸ್ಪರ) ನಿರ್ವಿಶೇಷಾಭೇದವಿಲ್ಲ ಎಂದು ಅರ್ಥ[1]. ಏಕೆ

...... ಪುಟ 593 ರಿಂದ

ವ್ಯಾವೃತ್ಯಾ ಪ್ರಯೋಜನಮ್ । ವ್ಯಾವೃತ್ತಸ್ಯಾವಿಶೇಷತ್ವೇ ....... । ಎಂದು ಅನುವ್ಯಾ 1.1.107.ರಲ್ಲಿ ತಿಳಿಸಿರುವಂತೆ, ಲಕ್ಷಣಯಾ ಪ್ರತಿಪಾದಿತನಾದ ಅಖಂಡ ಬ್ರಹ್ಮನಲ್ಲಿ ಮೂರ್ತವ್ಯಾವೃತ್ತತ್ವ ಅಮೂರ್ತವ್ಯಾವೃತ್ತತ್ವ ರೂಪ ಧರ್ಮಗಳು ಇಲ್ಲ ಎಂದಾದಲ್ಲಿ, ಮೂರ್ತಾಮೂರ್ತಗಳ ಅಭೇದದ ಆರೋಪವು ಪರಿಹೃತವಾಗುವದಿಲ್ಲ ಎಂದು ಭಾವ.

1. 'ಮೂರ್ತಾಮೂರ್ತವ್ಯಾವೃತ್ತತ್ವಕ್ಕೂ ಬ್ರಹ್ಮನಿಗೂ ನಿರ್ವಿಶೇಷಾಭೇದವಿಲ್ಲ' ಎಂದಷ್ಟೇ ಅಲ್ಲ ಮತ್ತೆ ಮೂರ್ತವ್ಯಾವೃತ್ತತ್ವಕ್ಕೂ ಅಮೂರ್ತವ್ಯಾವೃತ್ತತ್ವಕ್ಕೂ ಪರಸ್ಪರ ನಿರ್ವಿಶೇಷಾಭೇದವಿಲ್ಲ' ಎಂದು ಭಾವ.

ಇಲ್ಲ? ಆದುದರಿಂದ ಉತ್ತರಿಸುತ್ತಾರೆ '**ಅನುಭವ..**' ಎಂದು. (ಭೇದದ್ವಯ ಗಳಲ್ಲಿನ) ವಿರೋಧವನ್ನು-ಭೇದವನ್ನು ಪ್ರಕಟೀಕರಿಸಲು, ಒಂದೇ ಪದಾರ್ಥದ ವಿಶೇಷಣವಾಗಿ ಪ್ರತೀಯಮಾನವಾದ ವ್ಯಾವೃತ್ತಿದ್ವಯಗಳು (ಕಟವು ಘಟದಿಂದ ಭಿನ್ನ, ಪಟದಿಂದಭಿನ್ನ ಎಂಬ ವ್ಯಾವೃತ್ತಿದ್ವಯಗಳು) ಅಭಿನ್ನ ವಾದರೂ ಕೇವಲ ಅಷ್ಟನ್ನೇ ತಿಳಿಸದೇ ಕಿಂಚಿತ್ ವೈಶಿಷ್ಟ್ಯವನ್ನು ಅನುಭವವು ತಿಳಿಸುತ್ತವೆ[1]. ವಸ್ತುತಃ (ಪ್ರಕೃತವಾದದಲ್ಲಿ) 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಇತ್ಯಾದಿ ವಾಕ್ಯವನ್ನು ಉದಾಹರಿಸಲು ಅವಕಾಶವಿದ್ದರೂ ಭೇದದಲ್ಲಿ ಸವಿಶೇಷಾಭೇದವನ್ನು ಪ್ರತಿಪಾದಿಸುವ ಸಂದರ್ಭವಾದುದರಿಂದ ಆ ವಿಧವಾದ ವಾಕ್ಯವನ್ನೇ ಉದಾಹರಿಸಲಾಗಿದೆ. ಎಲ್ಲೂ ಭೇದವನ್ನು ಒಪ್ಪದ ಪಕ್ಷದಲ್ಲಿ ಈ ವಾಕ್ಯದ ('ನೇತಿ ನೇತಿ..' ಎನ್ನುವ ವಾಕ್ಯದ) ವಿರೋಧವನ್ನೂ ಸಹ ಇದರಿಂದ (ಈ ವಾಕ್ಯವನ್ನು ಉದಾಹರಿಸಿದ್ದರಿಂದ) ಸೂಚಿಸಿದಂತಾಯಿತು[2].

---

1.'ನಿಮ್ಮ ಎರಡನೆಯ ಪುತ್ರ ಹಿರಿಯ ಪುತ್ರನಂತೆಯೂ ಅಲ್ಲ, ಕಿರಿಯ ಪುತ್ರನಂತೆಯೂ ಅಲ್ಲ' ಎಂದು ಲೋಕದಲ್ಲಿ ರೂಢಿಯಲ್ಲಿರುವ ಮಾತು. ನಡುವಿನ ಪುತ್ರನಿಗೆ ವಿಶೇಷಣವಾಗಿ ತೋರುವ ವ್ಯಾವೃತ್ತಿದ್ವಯವು ಅಭಿನ್ನವೇ ಆಗಿವೆ. ಒಂದು ಧರ್ಮಿಯಲ್ಲಿ ಅನುಯೋಗಿತಾ ಸಂಬಂಧದಿಂದ ಇರುವ ಭೇದವು ಒಂದೇ, ಆದರೆ ಆ ಭೇದದ ಧರ್ಮಗಳು-ಪ್ರತಿಯೋಗಿತ್ವಗಳು ಅನೇಕ ಎಂದು ತಿಳಿಸಲಾಗಿದೆ. ಆದುದರಿಂದ ಆ ಭೇದದ ಧರ್ಮದಲ್ಲಿ ಭೇದವು ಇರುವುದರಿಂದ ಕಿಂಚಿತ್ ವೈಶಿಷ್ಟ್ಯವನ್ನು ಈ ಭೇದ್ಗಗಳು ತಿಳಿಸುತ್ತವೆ. ಹಿರಿಯನಂತ ಸೌಮ್ಯನಲ್ಲ, ಕಿರಿಯನಂತೆ ಬುದ್ಧಿವಂತನಲ್ಲ ಎಂದು ಈ ವ್ಯಾವೃತ್ತಿಗಳು ತಿಳಿಸಿರುವುದರಿಂದ, ಅವುಗಳಲ್ಲಿ ನಿರ್ವಿಶೇಷಾಭೇದ ವಿಲ್ಲ ಎನ್ನುವುದು ಎಲ್ಲರ ಅನುಭವದಲ್ಲಿದೆ. ಹಾಗೆಯೇ ಪ್ರಕೃತ ವೇದವಾಕ್ಯದಲ್ಲಿನ 'ನೇತಿ ನೇತಿ' ಎನ್ನುವ ವ್ಯಾವೃತ್ತಿದ್ವಯಗಳು ಅಂದರೆ ಮೂರ್ತವ್ಯಾವೃತ್ತತ್ವ ಮತ್ತು ಅಮೂರ್ತ-ವ್ಯಾವೃತ್ತತ್ವವು ಕಿಂಚಿತ್ ವೈಶಿಷ್ಟ್ಯವನ್ನು ಹೊಂದಿರಲೇ ಬೇಕು ಎಂದು ಭಾವ.

2. 'ಸರ್ವಾಭೇದವಾದಿಗಳಾದ ಅದ್ವೈತಿಗಳೂ ವಿಶೇಷವನ್ನು ಒಪ್ಪಬೇಕು' ಎನ್ನುವ ವಾದವನ್ನು ಧೃಢೀಕರಿಸಲು 'ನೇತಿ ನೇತಿ..' ವಾಕ್ಯವನ್ನು ಪ್ರಕೃತದಲ್ಲಿ ಉದಾಹರಿಸಲಾಗಿದೆ. ವಿಶೇಷವನ್ನು ಸಮರ್ಥಿಸಲು ಇದೇ ವಾಕ್ಯವನ್ನು ಏಕೆ ಉದಾಹರಿಸಬೇಕು? 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಇತ್ಯಾದಿವಾಕ್ಯಗಳನ್ನೂ ಉದಾಹರಿಸಬಹುದಲ್ಲವೆ? ಇದೇ ವಾಕ್ಯದ ಉದ್ಧರಣದ ಔಚಿತ್ಯವೇನು? ಎರಡು ವಿಧದ ಸಮಾಧಾನವಿದೆ. 1)- ಪ್ರಕೃತೋಪನ್ಯಾಸವು ಕೇವಲ ವಿಶೇಷವನ್ನು ಸಮರ್ಥಿಸಲು ಪ್ರವೃತ್ತವಾದದ್ದಲ್ಲ. ಧರ್ಮಿಗೂ ಧರ್ಮಿಯ ಸ್ವರೂಪವಾದ ಭೇದಕ್ಕೂ ಸವಿಶೇಷಾಭೇದವಿದೆ ಎನ್ನುವದನ್ನು ಸಮರ್ಥಿಸಲು. ಹಾಗಾಗಿ ಪ್ರತಿವಾದಿಗಳು ಒಪ್ಪಿರುವ

ಪುಟ 596ರಲ್ಲಿ........

**ಅನುಭವದಲ್ಲಿರುವ ಭೇದವನ್ನು ನಿರಾಕರಿಸಲಾಗದು**

ಕಿಞ್ಚಾತ್ರ ಕಥಮ್ ಆಪಾದನಮ್? ಯದಿ ಭೇದೋ ದೃಶ್ಯೇತ ತದಾಽನ್ಯೋನ್ಯಾಶ್ರಯತ್ವಂ ಸ್ಯಾದ್ ಇತಿ ಚೇನ್ನ । ಭೇದದರ್ಶನಸ್ಯ ಸಮ್ಮತತ್ವೇನ ವಿಪರ್ಯಯಾಪರ್ಯವಸಾನಾತ್ । ದರ್ಶನಮಾತ್ರಸದ್ಭಾವೇಽಪಿ ತಸ್ಯ ಪ್ರಮಾತ್ವಂ ನಿರಾಕ್ರಿಯತ ಇತಿ ಚೇನ್ನ । ಅನ್ಯೋನ್ಯಾಶ್ರಯತ್ವಸ್ಯ ಪ್ರಮಾತ್ವಾಪ್ರತಿಬನ್ಧಕತ್ವಾತ್ । ಏತೇನ ದರ್ಶನಸ್ಯ ವಾಸ್ತವತ್ವಂ ನಿರಾಕ್ರಿಯತ ಇತ್ಯಪಿ ಪರಾಸ್ತಮ್ । ಕಿಞ್ಚಾನ್ಯೋನ್ಯಾಶ್ರಯದುಷ್ಟಸ್ಯ ವ್ಯಾವಹಾರಿಕಸತ್ತ್ವಮಪಿ ಕುತಃ? ನ ಹಿ 'ಮೃದ್ ಅವಾಸ್ತವೀ, ಇತ್ಯೇತಾವತಾ ಯಸ್ಯ ಘಟಸ್ಯ ಕಾರಣಂ ತತ ಏವೋತ್ಪನ್ನಾ' ಇತ್ಯೇತತ್ ಪರಸ್ಯಾಪಿ ಮನೋಗತಂ ಭವಿಷ್ಯತಿ । 'ಅಥ ಯದಿ ಧರ್ಮಾದಿಪ್ರತೀತಿಮಪೇಕ್ಷ್ಯ ಭೇದಃ ಪ್ರತೀಯತೇ, ತದಾ ಅನ್ಯೋನ್ಯಾಶ್ರಯತ್ವಂ ಸ್ಯಾದ್' ಇತ್ಯಾಪಾದ್ಯತೇ, ತದಾ ಧರ್ಮಾದಿಪ್ರತೀತ್ಯಪೇಕ್ಷೈವ ನಿವರ್ತತೇ ಭೇದದರ್ಶನಸ್ಯ ಕಿಮಾಯಾತಾಮ್? ಪ್ರಕಾರಾನ್ತರಾಭಾವಾತ್ ತನ್ನಿವೃತ್ತಿರಿತಿ ಚೇನ್ನ, ದರ್ಶನಮಾತ್ರಸ್ಯಾಙ್ಗೀಕೃತತ್ವೇನ ನಿವರ್ತಯಿತುಮಶಕ್ಯತ್ವಾತ್ । ಪ್ರಮಾತ್ವಾದಿನಿವರ್ತನೇ ಅನ್ಯೋನ್ಯಾಶ್ರಯತ್ವಾದೇಃ ಸಾಮರ್ಥ್ಯಾಭಾವಸ್ಯೋಕ್ತತ್ವಾತ್ ।

ಇಲ್ಲಿ (ಭೇದದರ್ಶನದ ವಿಷಯದಲ್ಲಿ) ಆಪಾದನಕ್ರಮವು ಹೇಗೆ? 'ಒಂದು ವೇಳೆ ಭೇದವು ಅರಿವಿಗೆ ಬಂದಲ್ಲಿ, ಆಗ ಅನ್ಯೋನ್ಯಾಶ್ರಯತ್ವವು ಪ್ರಾಪ್ತವಾದೀತು' ಎಂದು (ಆಪಾದಿಸುವುದು) ತರವಲ್ಲ. ಭೇದದರ್ಶನವು (ಪರವಾದಿಗಳಿಗೂ) ಸಮ್ಮತವಾದುದರಿಂದ ವಿರುದ್ಧದಲ್ಲಿ ಪರ್ಯವಸಾನವನ್ನು

---

...... ಪುಟ 595 ರಿಂದ

ವಾಕ್ಯವೇ 'ಭೇದಗಳಲ್ಲಿ ಪರಸ್ಪರ ಭೇದವನ್ನು ತಿಳಿಸುವದು' ಎಂದು ಉದಾಹರಿಸಿರುವುದು ಹೆಚ್ಚುಉಚಿತ. 2)– 'ವಿಶ್ವದಲ್ಲಿ ಭೇದವೇ ಇಲ್ಲ' ಎಂದು ಅವರು ವಾದಿಸುವರು. ಆ ವಾದವನ್ನೂ ಖಂಡಿಸಿದಂತಾಯಿತು, ಈ ವಾಕ್ಯವನ್ನು ಉದಾಹರಿಸಿದ್ದರಿಂದ. 'ನೇತಿ ನೇತಿ' ಎನ್ನುವ ವೇದವಾಕ್ಯವು ಬ್ರಹ್ಮನಿಗೆ ಮೂರ್ತದ್ರವ್ಯದಿಂದ ಭೇದವನ್ನು, ಅಮೂರ್ತದ್ರವ್ಯದಿಂದ ಭೇದವನ್ನು ತಿಳಿಸುತ್ತಿದೆ ಎಂದು ಒಪ್ಪಿ, ಎಲ್ಲೂ ಭೇದವೇ ಇಲ್ಲವೆಂದು ವಾದಿಸಿದಲ್ಲಿ ಸ್ವವ್ಯಾಹತಿಯು ಪ್ರಾಪ್ತವಾಗುವುದು ಎಂದು ಭಾವ.

ಮಾಡಲು ಅಶಕ್ಯವಾದುದರಿಂದ[1]. (ಭೇದದ) ದರ್ಶನವು ಇದ್ದರೂ ಅದಕ್ಕೆ ಪ್ರಮಾತ್ವವನ್ನು ನಿರಾಕರಿಸಲಾಗುವುದು ಎಂದು ಹೇಳುವುದು ತರವಲ್ಲ. ಅನ್ಯೋನ್ಯಾಶ್ರಯತ್ವಕ್ಕೆ ಪ್ರಮಾತ್ವವನ್ನು ಕುರಿತು ಪ್ರತಿಬಂಧಕ ಎಂದು ಒಪ್ಪದಿರುವುದರಿಂದ[2]. ಇದರಿಂದ (ಆಪಾದ್ಯ ಆಪಾದಕಗಳಲ್ಲಿ ವ್ಯಾಪ್ತಿಯು ಇಲ್ಲ ಎಂದು ಹೇಳಿದ್ದರಿಂದ) '(ಭೇದದ) ದರ್ಶನಕ್ಕೆ ವಾಸ್ತವತೆಯನ್ನು ನಿರಾಕರಿಸಲಾಗುವುದು' ಎಂಬುವವಾದವನ್ನು ನಿರಾಕರಿಸಿದಂತಾಯಿತು. ಮತ್ತೂ ಸಹ ಅನ್ಯೋನ್ಯಾಶ್ರಯತ್ವರೂಪ ದೋಷದಿಂದ ದುಷ್ಟವಾದುದಕ್ಕೆ ವ್ಯಾವಹಾರಿಕ ಸತ್ಯತ್ವವನ್ನಾದರೂ ಹೇಗೆ ಒಪ್ಪಲಾಗುವುದು[3]? 'ಮೃತ್ ಅವಾಸ್ತವ

---

1. ಪ್ರಕೃತ ವಾದದ ಕ್ರಮವು ಹೀಗಿದೆ- 'ಭೇದದ ಅರಿವು ಇದೆ' ಎಂದು ಒಪ್ಪಿದಲ್ಲಿ, ಅನ್ಯೋನ್ಯಾಶ್ರಯತ್ವವು ಪ್ರಾಪ್ತವಾಗುವುದು. ಅನ್ಯೋನ್ಯಾಶ್ರಯತ್ವವನ್ನು ಒಪ್ಪುವುದು ತರವಲ್ಲ, ಆದುದರಿಂದ 'ಭೇದದ ದರ್ಶನವೇ ಇಲ್ಲ' ಎಂದು ಆಪಾದಿಸಬೇಕು. ಆದರೆ ಹೀಗೆ ಆಪಾದಿಸಲು ಅವಕಾಶವಿಲ್ಲ- 'ಪ್ರತ್ಯಕ್ಷಾದಿಗಳು ಜ್ಞಾನಸಾಧನಗಳು' ಎಂದು ಒಪ್ಪಿದಲ್ಲಿ ಭೇದವನ್ನು ಒಪ್ಪಲೇ ಬೇಕು. ಇಂದ್ರಿಯ-ವಿಷಯ ಅವುಗಳಲ್ಲಿನ ಸನ್ನಿಕರ್ಷ, ಹೇತು ಸಾಧ್ಯ ಅವುಗಳಲ್ಲಿನ ವ್ಯಾಪ್ತಿ ಈ ಮುಂತಾದವುಗಳು ಭೇದದ ಆಧಾರದಲ್ಲಿ ನಿರ್ವಹಣೆಗೊಳ್ಳುವ ವ್ಯವಹಾರಗಳು. ಅಭಿನ್ನ ವಸ್ತುವಿನಲ್ಲಿ ಸನ್ನಿಕರ್ಷವು ಅಶಕ್ಯ. ಹಾಗೇ ಅಭಿನ್ನವಸ್ತುವಿಗೆ ವ್ಯಾಪ್ತಿಯೂ ಅಸಿದ್ಧ. ಈ ಎಲ್ಲ ವ್ಯವಹಾರದ ನಿರ್ವಹಣೆಗಾಗಿ ಭೇದವನ್ನೂ ಎಲ್ಲ ವಾದಿಗಳು ಒಪ್ಪಲೇಬೇಕು. ಹಾಗಾಗಿ 'ಭೇದವನ್ನು ಒಪ್ಪಿದಲ್ಲಿ' ಎಂಬ ಆಪಾದನೆಯೇ ತರವಲ್ಲ ಎಂದು ಭಾವ.

2. ಶುಕ್ತಿಯಲ್ಲಿ ರಜತವು ಕಂಡರೂ ದೋಷಜನ್ಯವಾದುದರಿಂದ ರಜತವನ್ನು ನಿರಾಕರಿಸುವಂತೆ, ಭೇದದರ್ಶನದಲ್ಲಿ ಅನ್ಯೋನ್ಯಾಶ್ರಯತ್ವರೂಪ ದೋಷವು ಇರುವುದರಿಂದ 'ಕಂಡ ಭೇದವು ಯಥಾರ್ಥವಾಗಲಾರದು' ಎಂದು ಆಪಾದನೆಯನ್ನು ಮಾಡಬೇಕು. ಆದರೆ ಅನ್ಯೋನ್ಯಾ-ಶ್ರಯತ್ವವು ಭೇದಪ್ರತೀತಿಗೆ ಪ್ರತಿಬಂಧಕವಾಗಬಹುದೇ ಹೊರತು, ಪ್ರಾಪ್ತವಾದ ಅರಿವಿನ ಪ್ರಾಮಾಣ್ಯಕ್ಕೆ ಪ್ರತಿಬಂಧಕವಾಗಲಾರದು. ವೃಕ್ಷಾಂಕುರಗಳಲ್ಲಿ ಅನ್ಯೋನ್ಯಾಶ್ರಯತ್ವವು ಇದೆ. ಆದರೂ ಅದು ಪ್ರಮಿತ. ಆದುದರಿಂದ ಅನ್ಯೋನ್ಯಾಶ್ರಯತ್ವಕ್ಕೂ ಪ್ರಾಮಾಣ್ಯಾಭಾವಕ್ಕೂ ವ್ಯಾಪ್ತಿಯು ಕಂಡಿಲ್ಲ ಎಂದು ಭಾವ.

3. ಭೇದದ ಅರಿವಂತೂ ಲೋಕದಲ್ಲಿದೆ. ಆದರೆ ಚರ್ಚಿಸಲು ಅನ್ಯೋನ್ಯಾಶ್ರಯತ್ವದೋಷವು ಇದೆ. ಹಾಗಾಗಿ ತೋರಿದ ಭೇದಕ್ಕೆ ವ್ಯಾವಹಾರಿಕ ಸತ್ಯತ್ವವನ್ನು ಒಪ್ಪುವ ಎಂದು ಹೇಳಲು ಶಕ್ಯವಿಲ್ಲ. ಕಾರಣ- ಭ್ರಮೆಗೆ ಕಾರಣವಾದ ಸಾಮಗ್ರಿಯಿಂದ ವ್ಯಾವಹಾರಿಕಸತ್ವವನ್ನು ಹೊಂದಿದ ಪದಾರ್ಥದ ಅರಿವೂ ಶಕ್ಯವಿಲ್ಲ. ಪ್ರಾತಿಭಾಸಿಕಸತ್ವವನ್ನು ಹೊಂದಿದ ರಜತದ ಅರಿವಿಗೆ ಕಾರಣವಾದ ದುಷ್ಟಸಾಮಗ್ರಿಯು ವ್ಯಾವಹಾರಿಕಸತ್ತಾದ ಶುಕ್ತಿಯ ಅರಿವಿಗೆ ಕಾರಣ-ವಾಗಲಾರದು. ಆದುದರಿಂದ ಅನ್ಯೋನ್ಯಾಶ್ರಯತ್ವವು ವ್ಯಾವಹಾರಿಕ ಭೇದದ ಅರಿವಿಗೂ ಪ್ರತಿಬಂಧಕವಾಗಬೇಕು ಎಂದು ಭಾವ.

(ವ್ಯಾವಹಾರಿಕ ಸತ್‌ನ್ನು ಹೊಂದಿದೆ)' ಎಂದ ಮಾತ್ರಕ್ಕೆ 'ಯಾವದು ಘಟಕ್ಕೆ ಕಾರಣವಾಗಿದೆಯೋ ಅದು(ಆ ಮೃತ್) ಅದರಿಂದಲೇ ( ಆ ಘಟದಿಂದಲೇ) ಉತ್ಪನ್ನವಾಗಿದೆ' ಎನ್ನುವ ಪರರ ಮನೋಭೀಷ್ಟವು ಸಿದ್ಧಿಸದು[1]. 'ಒಂದು ವೇಳೆ ಭೇದದ ಪ್ರತೀತಿಯು ಧರ್ಮಿ ಮುಂತಾದವುಗಳ ಪ್ರತೀತಿಯನ್ನು ಬಯಸಿದಲ್ಲಿ ಆಗ ಅನ್ಯೋನ್ಯಾಶ್ರಯತ್ವ ಪ್ರಾಪ್ತವಾಗುವುದು' ಎಂದು ಆಪಾದಿಸಿದಲ್ಲಿ, ಆಗ ಧರ್ಮಿ ಮುಂತಾದವುಗಳ ಪ್ರತೀತಿಯ ಅಗತ್ಯತೆಯನ್ನೇ ನಿರಾಕರಿಸಲಾಗುವುದು ಭೇದದ ಪ್ರತೀತಿಗೆ ಏನು (ಪ್ರತಿಬಂಧಕ)[2]? ಬೇರೇ ಮಾರ್ಗಗಳು ಇಲ್ಲದಿರು-ವುದರಿಂದ 'ಅದರ (ಭೇದದ ಪ್ರತೀತಿಯ) ನಿವೃತ್ತಿ' ಎಂದೆನ್ನಲಾಗದು[3]. (ಭೇದದ) ಪ್ರತೀತಿಯನ್ನು ಅಂಗೀಕರಿಸಲಾಗಿರುವುದರಿಂದ (ಭೇದದ ದರ್ಶನವನ್ನು) ನಿರಾಕರಿಸುವುದು ಅಶಕ್ಯ. (ಇನ್ನು) ಅನ್ಯೋನ್ಯಾಶ್ರಯತ್ವಾದಿ-ಗಳಿಗೆ ಪ್ರಮಾತ್ವವನ್ನು ನಿರಾಕರಿಸುವ ಸಾಮರ್ಥ್ಯವಿಲ್ಲ ಎಂದು (ಈ ಹಿಂದೆಯೇ) ತಿಳಿಸಲಾಗಿರುವುದರಿಂದ (ಭೇದದ ಪ್ರಮಾತ್ವದ ನಿರಾಕರಣವು ಅಶಕ್ಯ).

---

1. 'ಮೃತ್ ಘಟಕ್ಕೆ ಕಾರಣ, ಆ ಘಟವೇ ಮೃತ್‌ಗೆ ಕಾರಣ' ಎಂದು ಯಾರಾದರೂ ಅನ್ಯೋನ್ಯಾಶ್ರಯತ್ವವನ್ನು ಆಪಾದಿಸಿದಲ್ಲಿ 'ಮೃತ್ ಅವಾಸ್ತವ' ಎಂದು ಉತ್ತರಿಸುವುದರಿಂದ ಅನ್ಯೋನ್ಯಾಶ್ರಯತ್ವದೋಷವನ್ನು ಪರಿಹರಿಸಲಾದೀತೇ? ಇಲ್ಲ. ಹಾಗೆಯೇ ಪ್ರಕೃತದಲ್ಲೂ ಸಹ ಭೇದದ ವಿಷಯದಲ್ಲಿ ಅನ್ಯೋನ್ಯಾಶ್ರಯತ್ವದೋಷವಿರುವುದರಿಂದ ಅದು ವಾಸ್ತವವಲ್ಲ ಕೇವಲ ಪ್ರಾತಿಭಾಸಿಕ ಎಂಬ ಉತ್ತರವು ಸಮರ್ಪಕವಾಗಲಾರದು ಎಂದು ಭಾವ. 2 . 'ಇಂದ್ರಿಯಕ್ಕೂ ಪದಾರ್ಥಕ್ಕೂ ಸನ್ನಿಕರ್ಷವಿಲ್ಲದ ಪಕ್ಷದಲ್ಲಿ ಪದಾರ್ಥದ ಅರಿವು ಪ್ರಾಪ್ತವಾಗದು' ಎಂಬ ನಿಯಮವು ಇದೆ. ದೂರದಲ್ಲಿರುವ ಪದಾರ್ಥವನ್ನು ಗ್ರಹಿಸುವ ಚಕ್ಷುರಿಂದ್ರಿಯದ ಗೋಲಕದ ಬಳಿ ಪದಾರ್ಥಗಳು ಬಾರದು. ಆದುದರಿಂದ 'ಚಕ್ಷುರಿಂದ್ರಿಯದಿಂದ ಅರಿವೇ ಪ್ರಾಪ್ತವಾಗದು' ಎಂದು ಹೇಳಲು ಆಗುವುದೆ? ಇಲ್ಲ. ಆದುದರಿಂದ ಬೇರೇ ಇಂದ್ರಿಯಗಳಲ್ಲಿ ಇಲ್ಲದ ಹೊಸ ಸಾಮರ್ಥ್ಯವನ್ನು ಚಕ್ಷುರಿಂದ್ರಿಯಕ್ಕೆ ಒಪ್ಪಿ, ಚಕ್ಷುರಿಂದ್ರಿಯವೇ ಪದಾರ್ಥದ ಬಳಿ ಸಾಗುವುದು ಎಂದು ಒಪ್ಪಲಾಗಿದೆ. ಹಾಗೆ ಪ್ರಕೃತದಲ್ಲೂ 'ಭೇದದ ಅರಿವಿದೆ' ಎಂಬುದು ಅನುಭವದಲ್ಲಿದೆ. ಆದುದರಿಂದ 'ಧರ್ಮಿ- ಧರ್ಮಗಳ ಅರಿವನ್ನು ಬಯಸದೇ ಭೇದ ಅರಿವು ಪ್ರಾಪ್ತವಾಗುವುದು' ಎಂದು ಕಲ್ಪಿಸಬೇಕೇ ಹೊರತು ಅನುಭವದಲ್ಲಿರುವ ಭೇದದ ಅರಿವನ್ನು ನಿರಾಕರಿಸಲಾಗದು ಎಂದು ಭಾವ. 3. ಧರ್ಮಿ ಪ್ರತಿಯೋಗಿ ಮುಂತಾದವುಗಳ ಪ್ರತೀತಿಯಿಲ್ಲದೇ ಭೇದದ ಪ್ರತೀತಿಗೆ ಬೇರೇ ಉಪಾಯಗಳು ಇಲ್ಲ. ಹಾಗಾಗಿ ಅನ್ಯೋನ್ಯಾಶ್ರಯ ದೋಷ ಅನಿವಾರ್ಯ, ತನ್ನಿಮಿತ್ತವಾಗಿ ಭೇದಪ್ರತೀತಿಯನ್ನೇ ನಿರಾಕರಿಸಲಾಗುವುದು ಎಂದು ಹೇಳುವುದು ತರವಲ್ಲ ಎಂದು ಭಾವ.

**ಅನುಭವದ ವಿರುದ್ಧವಾಗಿ ವಾದಿಸುವುದು ತರವಲ್ಲ**

**ತಸ್ಮಾದ್ ಭೇದದರ್ಶನಂ ಯುಕ್ತಮೇವ ।**

ಆದುದರಿಂದ ಭೇದದ ಅರಿವು ಯುಕ್ತವೇ ಆಗಿದೆ.

**ಕಿಞ್ಚ ಸ್ಪಷ್ಟದೃಷ್ಟಂ ಭೇದದರ್ಶನಂ ಪ್ರಕಾರಾನ್ತರಂ ಕಲ್ಪಯಿಷ್ಯತಿ, ಅಸ್ಮಿನ್ನೇವ ವಾ ಪ್ರಕಾರೇ ಕಮಪ್ಯವಾನ್ತರವಿಶೇಷಂ, ಸ್ವಯಂ ತು ನ ನಿವರ್ತತೇ । 'ನ ಹಿ ಸ್ಪಷ್ಟದೃಷ್ಟೋಽಙ್ಕುರಃ ಪರಿಚಿತತರಬೀಜಾಸಮ್ಭವಮಾತ್ರೇಣ ಸ್ವಯಂ ನಿವರ್ತತೇ । ಕಿನ್ತು ಬೀಜಾನ್ತರಂ ವಾ ಪರಿಚಿತೇಷ್ವೇವ ಜಾತ್ಯಾದಿವಿಶೇಷಂ ವಾ ಕಲ್ಪಯತೀತಿ ಲೋಕೇ ದೃಷ್ಟಮ್' ಇತ್ಯಾಶಯವಾನ್ ಉಪಸಂಹರತಿ 'ತಸ್ಮಾತ್' ಇತಿ । 'ಪ್ರತ್ಯಕ್ಷೇಣ' ಇತಿ ಶೇಷಃ । ಏವಮನುಮಾನಾದಿನಾಽಪಿ ಸ್ವವಿಷಯೇ ಭೇದಪ್ರತೀತಿಃ ವಕ್ಷ್ಯಮಾಣನ್ಯಾಯೇನ ದ್ರಷ್ಟವ್ಯಾ । ನನು ವ್ಯಾಪ್ಯವ್ಯಾಪಕಾದಿಭೇದಪ್ರತೀತ್ಯಪೇಕ್ಷಮ್ ಅನುಮಾನಾದಿಕಂ ಕಥಂ ಭೇದೇ ಪ್ರಮಾಣಂ ಭವಿಷ್ಯತಿ? ಇತಿ ಚೇತ್, ತತ್ಕಿಂ ಭೇದಪ್ರತೀತಿಮಾತ್ರಂ ಪರೋ ನಾಙ್ಗೀಕರೋತಿ ? ತಥಾ ಸತಿ ತಸ್ಯಾಪ್ಯನುಮಾನಾದಿವ್ಯವಹಾರೋ ನ ಸ್ಯಾತ್ । ಪ್ರಮಾತ್ವನಿವೃತ್ತಿಕಾರಣಸ್ಯ ಚ ಬಾಧಕಪ್ರತ್ಯಯಸ್ಯ ನಿರಾಸೋಽನುಪದಮೇವ ಕರಿಷ್ಯತೇ ।**

ಮತ್ತು ಸಹ ಸ್ಫುಟವಾಗಿ ಅನುಭವದಲ್ಲಿರುವ ಭೇದದ ಪ್ರತ್ಯಕ್ಷವು, ಬೇರೇ ಪ್ರಕಾರವನ್ನು ಕಲ್ಪಿಸಲಾಗುವುದು, ಅಥವಾ ಇರುವ ಪ್ರಕಾರದಲ್ಲಿಯೇ ಬೇರೇನಾದರೂ ಅವಾಂತರ ವಿಶೇಷವನ್ನು (ಕಲ್ಪಿಸಲಾಗುವುದು)[1]. ತಾನಂತೂ

1. ನ್ಯಾಯಶಾಸ್ತ್ರದಲ್ಲಿ ದ್ರವ್ಯಗಳೆರಡು ಸೇರಿದಾಗ ಉಂಟಾದ ಸಂಬಂಧವನ್ನು ಸಂಯೋಗ ಎಂದು ಕರೆದರು. ವಸ್ತುವಿಗೂ ಅದರಲ್ಲಿನ ವರ್ಣ ಮುಂತಾದ ಗುಣಗಳಿಗೂ ಇರುವ ಸಂಬಂಧವು ಸಂಯೋಗಕ್ಕಿಂತ ವಿಭಿನ್ನವಾಗಿರುವುದರಿಂದ ಸಮವಾಯ ಎಂದು ಹೊಸ ಸಂಬಂಧವನ್ನು ಕಲ್ಪಿಸಿದರು, ಹೊರತಾಗಿ , ವಸ್ತುವಿಗೂ ವಸ್ತುವಿನಲ್ಲಿನ ಗುಣಕ್ಕೂ ಸಂಯೋಗ ಸಂಬಂಧವು ಸೂಕ್ತವಾಗದು ಆದುದರಿಂದ ವಸ್ತುವಿನಲ್ಲಿ ಗುಣಗಳೇ ಇಲ್ಲ ಎಂದು ಹೇಳಲಾಗುವುದೆ? ಹಾಗೆಯೇ ಪ್ರಕೃತದಲ್ಲಿ ಕಂಡ ಭೇದವನ್ನು ಇಲ್ಲ ಎಂದು ಹೇಳಲಾಗದು. ಪ್ರಕೃತ ಒಪ್ಪಿರುವ ವ್ಯವಸ್ಥೆಯಲ್ಲಿ ಸಮಸ್ಯೆಗಳು ಕಂಡಲ್ಲಿ ಅನುಭವಾನುಸಾರವಾಗಿ ಭೇದದ ದರ್ಶನಕ್ಕೆ ಉಪಾಯಾಂತರಗಳನ್ನು ಕಲ್ಪಿಸಬೇಕೇ ಹೊರತು ಅನುಭವದಿಂದ ಪ್ರಾಪ್ತವಾದ ಭೇದವನ್ನೇ ಇಲ್ಲ ಎಂದು ಹೇಳುವುದು ತರವಲ್ಲ ಎಂದು ಭಾವ.

(ಅನುಭವಕ್ಕೆ ಪ್ರಾಪ್ತವಾದ ಭೇದವಂತೂ) ನಿವೃತ್ತವಾಗದು. ಸ್ಫುಟವಾಗಿ ಕಂಡ ಮೊಳಕೆಯು (ನಮಗೆ) ಪರಿಚಿತವಾದ ಬೀಜಗಳಿಂದ ಅನುತ್ಪನ್ನ ಎಂದ ಮಾತ್ರಕ್ಕೆ ತಾನೇ (ಮೊಳಕೆಯೇ) ನಿವೃತ್ತವಾಗದು. ಮತ್ತೆ ಬೇರೇ ಬೀಜವನ್ನೋ ಅಥವಾ ಪರಿಚಿತವಾದವುಗಳಲ್ಲೇ ಗುಣವಿಶೇಷವನ್ನೋ ಕಲ್ಪಿಸುವುದು ಲೋಕದಲ್ಲಿ ಕಂಡಿದೆ ಎಂಬ ಆಶಯವನ್ನು ಇಟ್ಟುಕೊಂಡು (ಪ್ರಸಕ್ತ ವಾದವನ್ನು) ಪರಿಸಮಾಪನ ಗೊಳಿಸುವರು '**ತಸ್ಮಾತ್**' ಎನ್ನುವುದರಿಂದ. 'ಪ್ರತ್ಯಕ್ಷ' ಎಂದು ಶೇಷಪೂರಣವನ್ನು ಮಾಡಿಕೊಳ್ಳುವುದು. ಈ ರೀತಿಯಾಗಿ ಅನುಮಾನಾದಿಗಳಿಂದಲೂ ತನ್ನ ವಿಷಯದಲ್ಲಿ ಭೇದದ ಪ್ರತೀತಿಯನ್ನು (ಆಶ್ರಯಿಸಲಾಗಿದೆ ಎನ್ನುವದನ್ನು) ಮುಂದೆ ತಿಳಿಸುವ ಯುಕ್ತಿಯಿಂದ ತಿಳಿಯುವುದು.[1] ಸರಿ, ವ್ಯಾಪ್ಯ-ವ್ಯಾಪಕ ಮುಂತಾದ ಭೇದದ ಪ್ರತೀತಿಯನ್ನು ಆಶ್ರಯಿಸಿರುವ ಅನುಮಾನಾದಿಗಳು ಭೇದದ ವಿಷಯದಲ್ಲಿ ಹೇಗೆ ಪ್ರಮಾಣವಾಗುವುದು ಎಂದಲ್ಲಿ, ಏನು ಭೇದದ ಪ್ರತೀತಿಯನ್ನೇ ಪರನು ನಿರಾಕರಿಸುವನೊ? ಹಾಗಾದಲ್ಲಿ (ಭೇದದ ಪ್ರತೀತಿಯನ್ನೇ ಒಪ್ಪದ ಪಕ್ಷದಲ್ಲಿ) ಆತನೂ ಸಹ ಅನುಮಾನಾದಿಗಳಿಂದ ವ್ಯವಹರಿಸದೇ ಇರಬೇಕಾದೀತು. (ತೋರಿದ ಭೇದದ ಅರಿವಿನ) ಪ್ರಮಾತ್ವದ ನಿವೃತ್ತಿಗೆ ಕಾರಣವಾದ ಬಾಧಕಪ್ರತ್ಯಯದ ನಿರಾಸವನ್ನು, (ಭೇದವು ಮಿಥ್ಯಾ ಚಂದ್ರಭೇದದಂತೆ ಎನ್ನುವ ಅನುಮಾನವನ್ನು) ಶೀಘ್ರದಲ್ಲಿಯೇ ನಿರಾಕರಿಸಲಾಗುವುದು.

### ಜಗವೇ ಮಿಥ್ಯೆಯಾದಾಗ ಭೇದವು ಹೇಗೆ ಸತ್ಯವಾದೀತು?

**ನನು ಚ, ವಿವಾದಪದಂ ಮಿಥ್ಯಾ, ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್ । ಅಯಂ ಪಟಃ ಏತತ್ ತನ್ತುನಿಷ್ಠಾತ್ಯನ್ತಾಭಾವ-ಪ್ರತಿಯೋಗೀ, ಪಟತ್ವಾತ್ ಪಟಾನ್ತರವತ್ । ವಿಪಕ್ಷೇ ದೃಕ್‌ಸಮ್ಬನ್ಧಾನುಪ-ಪತ್ತ್ಯಾ ದೃಶ್ಯತ್ವಾಭಾವಪ್ರಸಙ್ಗೋ ಬಾಧಕಃ । ತಥಾ ಚ ಪ್ರಪಞ್ಚಸ್ಯೈವ**

1. ಅನುಮಾನವು ಪಕ್ಷ-ಸಾಧ್ಯ-ಲಿಂಗ ರೂಪದಲ್ಲಿದೆ, ಆಗಮವು ಪದ-ಪದಾರ್ಥಗಳ ಸಂಸರ್ಗರೂಪದಲ್ಲಿದೆ. ಹೀಗೆ ಭೇದವನ್ನು ಅನುಸರಿಸಿಯೇ ಪ್ರವೃತ್ತವಾದ ಅನುಮಾನ-ದಿಂದಲೋ ಆಗಮದಿಂದಲೋ ಭೇದವನ್ನು ನಿರಾಕರಿಸಲು ಯತ್ನಿಸಿದಲ್ಲಿ ಅವುಗಳೇ ನಷ್ಟವಾಗಬೇಕಾದೀತು. ಅನುಮಾನದಲ್ಲಿ ತನ್ನ ವಿಷಯ- ಸಾಧ್ಯ-ಸಾಧನಾದಿಗಳು, ಆಗಮದಲ್ಲಿ ತನ್ನ ವಿಷಯ- ಪದ-ಪದಾರ್ಥಗಳ ಸಂಸರ್ಗ ಎಂದು ಭಾವ.

ಮಿಥ್ಯಾತ್ವಾತ್ ಕಥಂ ಭೇದಃ ಸತ್ಯಃ ಸ್ಯಾತ್? ಕಿಞ್ಚ ವಿಮತೋ ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್ । ವಿವಾದಪದಂ ಭೇದಸಂವೇದನಂ ಭ್ರಾನ್ತಿಃ ಭೇದಸಂವೇದನತ್ವಾತ್ ಚಂದ್ರಭೇದಸಂವೇದನವತ್ । ವಿಮತಂ ತಾತ್ವಿಕಸ್ವಾನ್ತರ್ಭೇದಹೀನಂ ಮತತ್ವಾತ್ ಗಗನವತ್ । ವಿಮತಾ ಆತ್ಮಾನೋ ದೇವದತ್ತಾನ್ನ ಭಿದ್ಯನ್ತೇ ಆತ್ಮತ್ವಾತ್ ದೇವದತ್ತವತ್ । ವಿಮತಾನಿ ಶರೀರಾಣಿ ದೇವದತ್ತಸ್ಯೈವ ಭೋಗಾಯತನಾನಿ ಶರೀರತ್ವಾತ್ ಸಮ್ಮತದೇವದತ್ತ-ಶರೀರವತ್ । ಏವಂ, ವಿಮತಾನೀಂದ್ರಿಯಾಣಿ ಪ್ರತ್ಯೇಕಂ ಸಮುದಿತಾನಿ ಚ ಪಕ್ಷೀಕೃತ್ಯ ಪ್ರಯೋಕ್ತವ್ಯಮ್ । ತಥಾ, ಜೀವಾಃ ಪರಮಾತ್ಮನಃ ತತ್ವತೋ ನ ಭಿದ್ಯನ್ತೇ ಆತ್ಮತ್ವಾತ್ ಪರಮಾತ್ಮವತ್ । ವಿಪಕ್ಷೇ ಕಲ್ಪನಾಗೌರವಪ್ರಸಙ್ಗೋ ಬಾಧಕಃ । ತದೇವಂ ಭೇದಸ್ಯ ಭೇದಿನಶ್ಚ ಸರ್ವಸ್ಯಾಪಿ ಪ್ರಪಞ್ಚಸ್ಯ ಮಿಥ್ಯಾತ್ವಾತ್ ಕುತೋ ವಿಷ್ಣೋಃ ಸರ್ವೋತ್ತಮತ್ವಂ, ಕುತಶ್ಚ ತತ್ರ ಸರ್ವಾಗಮಾನಾಂ ಮಹಾತಾತ್ಪರ್ಯಮಿತಿ?

ಸರಿ ಆದರೆ, ವಿವಾದಕ್ಕೆ ಎಡೆಯಾದ (ಈ ಜಗವು) ಮಿಥ್ಯೆಯಾಗಿದೆ ದೃಶ್ಯವಾದುದರಿಂದ, ಜಡವಾದುದರಿಂದ, ಪರಿಮಿತಪರಿಮಾಣವನ್ನು ಹೊಂದಿರುವುದರಿಂದ ಶುಕ್ತಿರಜತದಂತೆ[1]. ಈ ಪಟವು ಈ ನೂಲಿನಲ್ಲಿನಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ ಪಟತ್ವವನ್ನು ಹೊಂದಿರುವುದರಿಂದ ಬೇರೆ ಪಟದಂತೆ. ಹೀಗಾಗದ ಪಕ್ಷದಲ್ಲಿ ( ಈ ಜಗವು ಮಿಥ್ಯೆಯಾಗದ ಪಕ್ಷದಲ್ಲಿ) ದೃಕ್ (ಮತ್ತು ದೃಶ್ಯಗಳಿಗೆ) ಸಂಬಂಧವು ಅನುಪಪನ್ನವಾದುದರಿಂದ (ಪ್ರಮಾಣಪ್ರಮಿತವಾದ) ದೃಶ್ಯತ್ವವೇ ಇಲ್ಲದಿರುವ ಬಾಧಕಪ್ರಸಂಗವು (ಪ್ರಾಪ್ತವಾಗುವುದರಿಂದ)[2]. ಹಾಗಾಗಿ ಪ್ರಪಂಚವೇ ಮಿಥ್ಯೆಯಾದುದರಿಂದ

1. ಮಿಥ್ಯಾಭೂತವಾದ ಶುಕ್ತಿರಜತದಲ್ಲಿ ದೃಶ್ಯತ್ವಾದಿಗಳು ಇವೆ, ಆದರಂತೆ ಸತ್ಯವೋ ಮಿಥ್ಯವೋ ಎಂದು ವಿವಾದಕ್ಕೆ ವಿಷಯವಾದ ಈ ಜಗದಲ್ಲೂ ದೃಶ್ಯತ್ವಾದಿಗಳು ಇರುವುದರಿಂದ ಮಿಥ್ಯೆಯಗಲಿ ಎಂದು ಈ ಅನುಮಾನಗಳು ಬೋಧಿಸುತ್ತವೆ ಎಂದು ಭಾವ.

2. ಅದ್ವೈತವಾದಿಗಳ ಅಭಿಮತದಂತೆ 'ದೃಕ್-ಜ್ಞಾನವು' ಚೈತನ್ಯರೂಪವಾದದ್ದು. ಅವರು ಜಡವಾದ ಯಾವ ಜ್ಞಾನವನ್ನು ಒಪ್ಪಿರುವದಿಲ್ಲ. ಜ್ಞಾನಕ್ಕೂ ಜ್ಞಾನಕ್ಕೆ ವಿಷಯವಾದ ಪದಾರ್ಥಗಳಿಗೂ ಸಂಬಂಧವನ್ನು ಹೇಳಬೇಕು. ಪ್ರಸಿದ್ಧವಾದ ಸಂಯೋಗಾದಿ ಸಂಬಂಧವನ್ನು

ಪುಟ 602ರಲ್ಲಿ........

ಆದರ ಧರ್ಮಭೂತವಾದ ಭೇದವು ಸತ್ಯವಾಗುವುದು ಹೇಗೇ[1]? ಮತ್ತೂ ಸಹ, ವಿವಾದಕ್ಕೆ ಎಡೆಯಾದ ಭೇದವು ಮಿಥ್ಯೆಯಾಗಿದೆ ಭೇದತ್ವವನ್ನು ಹೊಂದಿರುವುದರಿಂದ ಚಂದ್ರಭೇದದಂತೆ. ವಿವಾದಕ್ಕೆ ಎಡೆಯಾದ ಭೇದದ ಅರಿವು ಭ್ರಾಂತವಾದದ್ದು ಭೇದದ ಅರಿವಾದುದರಿಂದ ಚಂದ್ರಭೇದದ ಅರಿವಿನಂತೆ. ವಿವಾದಕ್ಕೆ ಎಡೆಯಾದ (ಪ್ರಪಂಚವು) ತಾತ್ತ್ವಿಕವಾಗಿ ತನ್ನಲ್ಲಿ ಭೇದವನ್ನು ಹೊಂದಿರುವದಿಲ್ಲ (ಘಟ-ಪಟಾದಿ ಪದಾರ್ಥಗಳಲ್ಲಿ ಪರಸ್ಪರ ಭೇದವಿಲ್ಲ ಎಂದು ಭಾವ.) ಅರಿವಿಗೆ ವಿಷಯವಾಗಿರುವುದರಿಂದ ಆಕಾಶದಂತೆ. ವಿವಾದಕ್ಕೆ ಎಡೆಯಾದ ಆತ್ಮರು ದೇವದತ್ತನಿಂದ ಭಿನ್ನರಲ್ಲ ಆತ್ಮತ್ವವನ್ನು ಹೊಂದಿರುವುದರಿಂದ ದೇವದತ್ತನಂತೆ. ವಿವಾದಕ್ಕೆ ಎಡೆಯಾದ ಶರೀರಗಳು ದೇವದತ್ತನ ಭೋಗಕ್ಕೆ ತಾಣವಾಗಿವೆ ಶರೀರವಾಗಿರುವುದರಿಂದ ಸಂಮತವಾದ

...... ಪುಟ 601 ರಿಂದ

ಒಪ್ಪಲು ಆಗದು. ಕಾರಣ- ದೃಕ್ ಅಂದರೆ ಚೇತನ, ಆತನು ಅಸಂಗ. ಹಾಗಾಗಿ ದೃಕ್-ದೃಶ್ಯಗಳಿಗೆ ಅಧ್ಯಸ್ತ ಎಂಬ ಸಂಬಂಧವನ್ನು ಒಪ್ಪಬೇಕೇ ಹೊರತು ತಾತ್ತ್ವಿಕ ಸಂಬಂಧವನ್ನು ಒಪ್ಪಲಾಗದು. ಅಧ್ಯಸ್ತವಾದಲ್ಲಿ ಸತ್ಯವಾಗಲು ಶಕ್ಯವಿಲ್ಲ. ರಜತವು ಶುಕ್ತಿಯಲ್ಲಿ ಅಧ್ಯಸ್ತ, ಆದುದರಿಂದ ರಜತವು ಮಿಥ್ಯೆ. ಪ್ರಕೃತ ಜ್ಞಾನಕ್ಕೂ ವಿಷಯಕ್ಕೂ ಇರುವ ಸಂಬಂಧ ಅಧ್ಯಸ್ಥ. ಹಾಗಾಗಿ ಈ ಎಲ್ಲ ವಸ್ತುಗಳು ಮಿಥ್ಯೆ. ಆದುದರಿಂದ ಮೇಲೆ ತಿಳಿಸಿದ ಅನುಮಾನಗಳಿಗೆ ವಿಪರ್ಯಯ ಪರ್ಯವಸಾನ ಮಾಡಲಾಗದು. ಅಂದರೆ ದೃಶ್ಯತ್ವಾದಿಗಳು (ಹೇತುಗಳು) ಇರಲಿ ಸಾಧ್ಯವಾದ ಮಿಥ್ಯಾತ್ವವು ಇಲ್ಲದಿರಲಿ ಎಂದು ಹೇಳಲು ಶಕ್ಯವಿಲ್ಲ ಮಿಥ್ಯಾತ್ವವನ್ನು ಒಪ್ಪದ ಪಕ್ಷದಲ್ಲಿ ಅನುಭವದಲ್ಲಿರುವ ದೃಶ್ಯತ್ವಾದಿಗಳೇ ಈ ಪ್ರಪಂಚಕ್ಕೆ ಇಲ್ಲದೇ ಹೋಗಬೇಕಾದೀತು ಎನ್ನುವ ಬಾಧಕದ ಪ್ರಸಂಗವು ಒದಗುವುದು ಎಂದು ಭಾವ.

1. ಮೇಲೆ ಹೇಳಲಾದ ಅನುಮಾನಗಳಲ್ಲಿನ ದೃಶ್ಯತ್ವಾತ್, ಜಡತ್ವಾತ್ ಮತ್ತು ಪರಿಚ್ಛಿನ್ನತ್ವಾತ್ ಎಂಬ ಮೂರು ಹೇತುಗಳು ನೇರವಾಗಿ ಸಮಸ್ತ ಪ್ರಪಂಚಕ್ಕೆ ಮಿಥ್ಯಾತ್ವದ ಸಾಧಕಗಳು. ಪಟತ್ವಾತ್ ಎನ್ನುವ ಹೇತುವು ನೇರವಾಗಿ ಪಟದ ಮಿಥ್ಯಾತ್ವದ ಸಾಧಕವಲ್ಲ ಮತ್ತು ಸಹ ಪ್ರಪಂಚಮಿಥ್ಯಾತ್ವಸಾಧಕವಲ್ಲ. ಆದರೂ ಬಳಸು ಹಾದಿಯಿಂದ ಮಿಥ್ಯಾತ್ವವನ್ನು ಸಾಧಿಸುವುದು. ಯಾವುದೇ ಒಂದು ವಸ್ತುವು ತನ್ನ ಅಸ್ತಿತ್ವವನ್ನು ಹೊಂದಿರುವುದು ತನ್ನ ಕಾರಣೀಭೂತವಾದ ಸಾಮುಗ್ರಿಗಳಲ್ಲಿ ಮಾತ್ರ, ಅಂದರೆ ಪಟವು ಇರುವುದಾದಲ್ಲಿ ತನಗೆ ಕಾರಣವಾದ ತಂತುವಿನಲ್ಲಿ ಮಾತ್ರ, ಅಲ್ಲಿಯೂ ಸಹ ಅದರ ಅತ್ಯಂತಾಭಾವವೇ ಇದೆ ಎಂದಾದಲ್ಲಿ, ಆ ವಸ್ತುವು ಇನ್ನೆಲ್ಲೂ ಇರಲು ಸಾಧ್ಯವಿಲ್ಲ ಹಾಗಾಗಿ ಅದರ ಮಿಥ್ಯಾತ್ವವು ಸಿದ್ಧವಾಗುವುದು. ಇದರಂತೆ ಪ್ರತಿಯೊಂದು ವಸ್ತುವಿನ ಮಿಥ್ಯಾತ್ವವನ್ನು ಸಾಧಿಸುವುದರಿಂದ ಪ್ರಪಂಚಮಿಥ್ಯಾತ್ವವನ್ನು ಸಾಧಿಸಲಾಗುವುದು ಎಂದು ಭಾವ.

ದೇವದತ್ತನ ಶರೀರದಂತೆ. ಇದೇ ರೀತಿಯಲ್ಲಿ, ವಿವಾದಕ್ಕೆ ಎಡೆಯಾದ ಇಂದ್ರಿಯಗಳನ್ನು ಪ್ರತ್ಯೇಕವಾಗಿಯೋ ಒಟ್ಟಾಗಿಯೋ ಪಕ್ಷೀಕರಿಸಿ ಪ್ರಯೋಗಿಸಬೇಕು[1]. ಹಾಗೆಯೇ, ಜೀವರು ಪರಮಾತ್ಮನಿಂದ ತಾತ್ವಿಕವಾಗಿ ಭಿನ್ನರಲ್ಲ ಆತ್ಮರಾದುದರಿಂದ ಪರಮಾತ್ಮನಂತೆ. ಹಾಗೆ ಒಪ್ಪದಪಕ್ಷದಲ್ಲಿ ಕಲ್ಪನಾಗೌರವ ಪ್ರಸಂಗರೂಪ ಬಾಧಕವು ಇರುವುದರಿಂದ[2]. ಹೀಗಿರುವುದರಿಂದ ಭೇದಕ್ಕೆ ಮತ್ತು ಭೇದವನ್ನು ಹೊಂದಿರುವ ಎಲ್ಲ ಪ್ರಪಂಚಕ್ಕೆ ಮಿಥ್ಯಾತ್ವವೇ ಇರುವುದರಿಂದ ವಿಷ್ಣುವಿಗೆ ಸರ್ವೋತ್ತಮತ್ವವು ಹೇಗೆ? ಅಲ್ಲಿ (ವಿಷ್ಣು-ಸರ್ವೋತ್ತಮತ್ವದಲ್ಲಿ) ಸರ್ವ ಆಗಮಗಳಿಗೆ ಮಹಾತಾತ್ಪರ್ಯವು ಎಲ್ಲಿಂದ? ಎಂದು[3].

**-: ಭೇದಪ್ರತೀತಿಯಲ್ಲಿನ ತೊಡಕಿನ ಪರಿಹಾರವು ಸಮಾಪ್ತ :-**

## ॥ ಪ್ರತ್ಯಕ್ಷಪ್ರಾಬಲ್ಯವಾದ ॥

ಎಲ್ಲರಿಗೆ ಹತ್ತಿರವಾದ, ಅತ್ಯಂತ ನಂಬಿಕೆ ಪಾತ್ರವಾದ ಮಾನ ಪ್ರತ್ಯಕ್ಷ. ಇಂತಹ ಪ್ರತ್ಯಕ್ಷದ ಈಯತ್ತೆ ಏನು? ಎನ್ನುವುದರ ವಿಶ್ಲೇಷಣೆಯು ಇಲ್ಲಿದೆ. ಅರಣ್ಯದ ಸಿಂಹದಂತೆ ಪ್ರತ್ಯಕ್ಷ ಎನ್ನುತ್ತಾರೆ ಆಚಾರ್ಯರು. ಪ್ರತ್ಯಕ್ಷಕ್ಕೆ ನಿಲುಕುವ ವಿಷಯದಲ್ಲಿ ಪರಮಾಧಿಕಾರ ಪ್ರತ್ಯಕ್ಷದ್ದೇ, ಅದಕ್ಕೆ ವಿರುದ್ಧವಾದದು ಯಾವುದೂ ಪ್ರಮಾಣವಾಗಲಾರದು ಎನ್ನುತ್ತಾರೆ 'ಆಗಮವನ್ನು ಪ್ರಮಾಣ' ಎಂದು ಬೋಧಿಸುವ ಆಚಾರ್ಯರು. ಪ್ರತ್ಯಕ್ಷವನ್ನು ಅಲ್ಲಗಳೆಯುವುದು ಹಗಲು ದರೋಡೆಗೆ ಸಮ ಎಂದು ಛೇಡಿಸುತ್ತಾರೆ ಅನ್ಯವಾದಿಗಳನ್ನು.

1. ವಿವಾದಕ್ಕೆ ಎಡೆಯಾದ ಈ ಎಲ್ಲ ಇಂದ್ರಿಯಗಳು ದೇವದತ್ತನ ಭೋಗಕ್ಕೆ ಕಾರಣವಾಗಿವೆ ಇಂದ್ರಿಯಗಳಾದುದರಿಂದ ದೇವದತ್ತನ ಇಂದ್ರಿಯಗಳಂತೆ ಎಂದು ಒಟ್ಟಾಗಿ ಪಕ್ಷೀಕರಿಸುವುದು, ದೇವದತ್ತನ ಇಂದ್ರಿಯಗಳು ಯಜ್ಞದತ್ತನ ಅರಿವಿಗೆ ಕಾರಣವಾಗಿವೆ ಇಂದ್ರಿಯಗಳಾಗಿರು-ವುದರಿಂದ ಯಜ್ಞದತ್ತನ ಇಂದ್ರಿಯಗಳಂತೆ ಎನ್ನುವುದು ಪೃಥಕ್ ಪಕ್ಷೀಕರಣ ಎಂದು ತಿಳಿಯುವುದು. ಹೀಗೆ ಅನುಮಾನಾಂತರಗಳನ್ನು ಊಹಿಸಬೇಕು ಎಂದು ಭಾವ.

2. ಜೀವರಲ್ಲಿ ತಾತ್ವಿಕ ಭೇದವನ್ನು ಒಪ್ಪಿದಲ್ಲಿ ಅನೇಕ ಜೀವರನ್ನು ಕಲ್ಪಿಸಬೇಕು ಇತ್ಯಾದಿ ಕಲ್ಪನಾಗೌರವ ದೋಷವು ಪ್ರಾಪ್ತವಾಗುವುದು ಎಂದು ಭಾವ.

3. ಇಲ್ಲಿ ಪ್ರಸ್ತಾಪಿಸಲಾದ ಎಲ್ಲ ಅನುಮಾನಗಳನ್ನೂ ಪ್ರತ್ಯೇಕವಾಗಿ ಪ್ರಥಮಪರಿಚ್ಛೇದದ ಕೊನೆಯ ಭಾಗದಲ್ಲಿನ 'ಗ್ರನ್ಥಬಹುತ್ವಂ ಸ್ಯಾದಿತ್ಯೇವೋಪರಮ್ಯತೇ' ಎನ್ನುವ ಮೂಲದ ವ್ಯಾಖ್ಯಾನದ ಸಂದರ್ಭದಲ್ಲಿ ವಿಮರ್ಶಿಸಲಾಗಿದೆ.

ಪ್ರಮಾಣಪ್ರಮಿತವಾದದ್ದು ಅನುಮಾನದಿಂದ ಬಾಧಿತ ವಾಗಲಾರದು

**ಯಚ್ಚ ಪ್ರಮಾಣದೃಷ್ಟಾನಾಮಪಿ ಪದಾರ್ಥಾನಾಂ ಮಿಥ್ಯಾತ್ವಕಲ್ಪನಂ ತಚ್ಚ ಪ್ರಮಾಣವಿರುದ್ಧತ್ವಾದೇವ ಪ್ರಕಾಶತಸ್ಕರತ್ವಮ್ । ನ ಹಿ ಪ್ರಮಾಣದೃಷ್ಟಸ್ಯ ತರ್ಕಬಾಧ್ಯತ್ವಂ, ಪ್ರತ್ಯಕ್ಷಾದಿವಿರುದ್ಧಾನಾಂ ತರ್ಕಾಭಾಸತ್ವನಿಯಮಾತ್ ।**

ಪ್ರಮಾಣದಿಂದ ಪ್ರಮಿತವಾದ ಪದಾರ್ಥಗಳಿಗೆ ಮತ್ತು ಅದರಲ್ಲಿನ ಭೇದಕ್ಕೆ ಅನುಮಾನದಿಂದ ಮಿಥ್ಯಾತ್ವವನ್ನು ಕಲ್ಪಿಸುವುದು ಪ್ರಮಾಣವಿರುದ್ಧ-ವಾಗುವುದರಿಂದ ಹಗಲು ದರೋಡೆಗೆ ಸಮ. ಪ್ರಮಾಣಪ್ರಮಿತವಾದುದಕೆ ಅನುಮಾನದಿಂದ ಬಾಧವು ಸಲ್ಲದು, ಪ್ರತ್ಯಕ್ಷಾದಿ (ಪ್ರಮಾಣದಿಂದ) ವಿರುದ್ಧವಾದ ಅನುಮಾನವೇ (ಪ್ರಮಾಣದ)ಆಭಾಸ ಎನ್ನುವುದು ಶಾಸ್ತ್ರದ ನಿಯಮವಾದುದರಿಂದ.

ಅತ್ರೋಚ್ಯತೇ- ಕಿಂ ವಿಯದಾದಿಪದಾರ್ಥಾಸ್ತದ್ಭೇದಶ್ಚ ಪ್ರತ್ಯಕ್ಷಾದಿ-ಪ್ರಮಾಣಸಿದ್ಧಾ ಇತ್ಯಙ್ಗೀಕ್ರಿಯತೇ ನ ವಾ? ನೇತಿ ಪಕ್ಷೇಽನುಮಾನಾನಾಮ್ ಆಶ್ರಯಾಸಿದ್ಧಿಃ ಸ್ಯಾತ್ । ಯದಿ ಪ್ರತ್ಯಕ್ಷಾದಿಪ್ರಮಾಣದೃಷ್ಟಪದಾರ್ಥ-ಪಕ್ಷೀಕಾರೇಣ ಏವಮನುಮೀಯತೇ? ತತ್ರಾಽಽಹ '**ಯಚ್ಚ**' ಇತಿ । 'ನ ಕೇವಲಂ ಜೀವಬ್ರಹ್ಮಣೋರೇಕತ್ವೇ ಸರ್ವಾಗಮಾನಾಂ ಮಹಾತಾತ್ಪರ್ಯ-ಕಲ್ಪನಮ್' ಇತಿ ಚಶಬ್ದಃ । ಪದಾರ್ಥಾನಾಂ ತದ್ಭೇದಸ್ಯ ಚ, ಕಲ್ಪನಮನು-ಮಾನೈಃ । **ಪ್ರಮಾಣವಿರುದ್ಧತ್ವಾತ್**- ಧರ್ಮಿಗ್ರಾಹಕತಯಾ ಪ್ರಬಲೈಃ ಪ್ರಮಾಣೈಃ ಬಾಧಿತತ್ವೇನ ಅನುಮಾನಾನಾಂ ಕಾಲಾತ್ಯಯಾಪದಿಷ್ಟತ್ವಾತ್ । ಧರ್ಮಿಗ್ರಾಹಕಾಣಿ ಹಿ ಪ್ರತ್ಯಕ್ಷಾದೀನಿ ಪದಾರ್ಥಾನ್ ತದ್ಭೇದಂ ಚ ಸತ್ಯತಯಾ ವಿಷಯೀ ಕುರ್ವನ್ತಿ । **ಪ್ರಕಾಶತಸ್ಕರತ್ವಂ**- ಪ್ರಕಾಶೇ ತಸ್ಕರತ್ವಮಿವ । ನನು ಅನುಮಾನೈರೇವ ಪ್ರತ್ಯಕ್ಷಾದೀನಾಂ ಬಾಧೋ ಭವಿಷ್ಯತಿ? ಇತ್ಯತ ಆಹ 'ನ ಹಿ' ಇತಿ । ಕುತೋ ನ? ಇತ್ಯತ ಆಹ 'ಪ್ರತ್ಯಕ್ಷಾದಿ...' ಇತಿ ।

ಇಲ್ಲಿ ಹೇಳಲಾಗುವುದು- ವಿಯದಾದಿ ಪದಾರ್ಥಗಳು ಮತ್ತು ಅದರಲ್ಲಿನ ಭೇದವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿವೆ ಎಂದು ಒಪ್ಪಲಾಗಿದೆಯೋ

ಅಥವಾ ಇಲ್ಲವೋ? ಇಲ್ಲ ಎನ್ನುವ ಪಕ್ಷದಲ್ಲಿ, (ಮಿಥ್ಯಾತ್ವವನ್ನು ಸಾಧಿಸಲು ಉಕ್ತವಾದ) ಅನುಮಾನಗಳಿಗೆ ಆಶ್ರಯಾಸಿದ್ಧಿಯು (ದೋಷವು) ಬಂದೀತು[1]. ಒಂದು ವೇಳೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಪದಾರ್ಥಗಳನ್ನು ಪಕ್ಷೀಕರಿಸಿಯೇ (ಅಂದರೆ ಮೇಲೆ ವಿಕಲ್ಪಿಸಲಾದ ಮೊದಲ ಪಕ್ಷವನ್ನು ಒಪ್ಪಿಕೊಂಡು) ಅನುಮಾನಿಸುವುದಾದಲ್ಲಿ ಆಗ ಹೇಳಲಾಗುವುದು **'ಯಚ್ಚ'** ಎಂದು. 'ಜೀವಬ್ರಹ್ಮರಿಗೆ ಏಕತ್ವವನ್ನು ತಿಳಿಸುವುದರಲ್ಲಿ ಎಲ್ಲ ಆಗಮಗಳಿಗೆ ಮಹಾತಾತ್ಪರ್ಯ' ಎಂದು ಹೇಳುವುದರಿಂದ ಮಾತ್ರವಲ್ಲದೆ ಎನ್ನುವದನ್ನು **'ಚ'** ಶಬ್ದವು ತಿಳಿಸುತ್ತದೆ[2]. ಪದಾರ್ಥಗಳ ಮತು ಅದರ ಭೇದದ, ಕಲ್ಪನೆಯು ಅನುಮಾನಗಳಿಂದ[3]. **ಪ್ರಮಾಣವಿರುದ್ಧತ್ವಾತ್-** (ಮಾಯಾವಾದಿಗಳಿಂದ ಉದ್ಧೃತವಾದ ಅನುಮಾನಗಳು) ಧರ್ಮಿಗ್ರಾಹಕತ್ವೇನ ಪ್ರಬಲವಾಗಿರುವ ಪ್ರಮಾಣಗಳಿಂದ ಬಾಧಿತವಾಗಿರುವುದರಿಂದ, ಅನುಮಾನಗಳಿಗೆ ಕಾಲಾತ್ಯಯಾಪದಿಷ್ಟತ್ವವು ಇರುವುದರಿಂದ[4]. ( ಮಾಯಾವಾದಿಗಳ

---

1. ವಿವಾದಕ್ಕೆ ವಿಷಯವಾಗಿರುವ ಘಟ-ಪಟ ಮುಂತಾದ ಪ್ರಪಂಚವನ್ನು ಪಕ್ಷೀಕರಿಸಿ ಅನುಮಾನಗಳನ್ನು ಹೇಳಲಾಗಿದೆ. ಈ ಪಕ್ಷವು ಪ್ರಮಾಣಪ್ರಮಿತವಾಗಿಲ್ಲ ಎಂದು ಒಪ್ಪಿದಲ್ಲಿ ಮೇಲಿನ ಅನುಮಾನಗಳಿಗೆ ಪಕ್ಷವೇ ಸಿದ್ಧಿಸದೇ ಆಶ್ರಯಾಸಿದ್ಧಿ ಎಂಬ ದೋಷವು ಪ್ರಾಪ್ತವಾಗುವುದು ಎಂದು ಭಾವ.

2. ಮೂಲದಲ್ಲಿ 'ಯಚ್ಚ, ತಚ್ಚ' ಎಂದು ಸಮುಚ್ಚಯಾರ್ಥಕ ಎರಡು ಚಕಾರಗಳು ಇವೆ. ಸಮುಚಿತವಾದದ್ದು ಯಾವುದು ಎಂದು ಝಟಿತಿ ತಿಳಿಯುವದಿಲ್ಲ, ಅದನ್ನು ಸ್ಫುಟ-ಗೊಳಿಸಿರುವರು 'ನ ಕೇವಲಂ' ಎನ್ನುವುದರಿಂದ. ಮಾಯಾವಾದಿಗಳಿಗೆ ಪ್ರಕಾಶತಸ್ಕರತ್ವವು 'ಸಕಲಾಗಮಗಳಿಗೆ ಜೀವೇಶ್ವರರ ಅಭೇದದಲ್ಲಿಯೇ ಮಹಾತಾತ್ಪರ್ಯ' ಎಂದು ಹೇಳುವುದರಿಂದ ಮಾತ್ರವಲ್ಲದೆ, 'ಪ್ರಮಾಣದೃಷ್ಟವಾದ ಪದಾರ್ಥಗಳು ಮತ್ತು ಭೇದವು ಮಿಥ್ಯಾ' ಎಂದು ಹೇಳುವುದರಿಂದಲೂ ಪ್ರಾಪ್ತವಾಗುವುದು ಎಂದು ಭಾವ.

3. ಮೂಲದಲ್ಲಿನ 'ಪದರ್ಥಾನಾಂ' ಎನ್ನುವ ಶಬ್ದವು ಅವುಗಳಲ್ಲಿನ ಭೇದವನ್ನೂ ಉಪಲಕ್ಷಿಸುತ್ತದೆ ಎಂದು ಸೂಚಿಸಿರುವರು. ಹಾಗೆಯೇ ಮೂಲದಲ್ಲಿನ 'ಕಲ್ಪನಂ' ಎಂಬುವುದು ಅನುಮಾನದಿಂದ ಕಲ್ಪಿಸಲಾಗುವುದು ಎಂದು ಅರ್ಥೈಸಬೇಕು ಎಂದು ಸೂಚಿಸಿರುವರು. ಒಟ್ಟಿನಲ್ಲಿ ಮೂಲವಾಕ್ಯದ ಅರ್ಥವು- 'ಪದಾರ್ಥಗಳಿಗೂ ಅದರಲ್ಲಿನ ಭೇದಕ್ಕೂ ಮಿಥ್ಯಾತ್ವವನ್ನು ಅನುಮಾನದಿಂದ ಕಲ್ಪಿಸಿರುವುದು......' ಎಂದು ಭಾವ.

4. ಮೂಲದಲ್ಲಿನ ಪ್ರಮಾಣವಿರುದ್ಧತ್ವಾತ್ ಎನ್ನುವಲ್ಲಿನ 'ವಿರುದ್ಧ' ಎನ್ನುವ ಶಬ್ದಕ್ಕೆ 'ಪ್ರಮಾಣಬಾಧಿತ' ಎಂದು ಅರ್ಥೈಸಲಾಗಿದೆ ಎಂಬುವುದನ್ನು ಗಮನಿಸುವುದು.

ಅನುಮಾನಗಳು ಧರ್ಮಿಗ್ರಾಹಕವಾದ ಪ್ರತ್ಯಕ್ಷದಿಂದ ವಿರುದ್ಧ ವಾಗಿರುವುದು ಹೇಗೆ ಎನ್ನುವದನ್ನು ತಿಳಿಸುವುರು) ಧರ್ಮಿಗ್ರಾಹಕವಾದ ಪ್ರತ್ಯಕ್ಷಾದಿ-ಗಳಾದರೋ ಪದಾರ್ಥಗಳನ್ನು ಮತ್ತು ಅದರಲ್ಲಿನ ಭೇದವನ್ನೂ ಸತ್ಯವೆಂದೇ ಗ್ರಹಿಸುವುದು. ಪ್ರಕಾಶತಸ್ಕರತ್ವಂ- ಹಗಲಿನಲ್ಲಿ ಕದ್ದಂತೆ[1]. ಸರಿ, ಅನುಮಾನ ಗಳಿಂದಲೇ ಪ್ರತ್ಯಕ್ಷಾದಿಗಳಿಗೆ ಬಾಧವನ್ನು ಹೇಳಬಹುದಲ್ಲವೆ? ಆದುದರಿಂದ ಉತ್ತರಿಸುತ್ತಾರೆ 'ನ ಹಿ' ಎಂದು. ಏಕೆ ಇಲ್ಲ? ಆದುದರಿಂದ ಉತ್ತರಿಸುತ್ತಾರೆ 'ಪ್ರತ್ಯಕ್ಷಾದಿ..' ಎಂದು.

**ಪ್ರತ್ಯಕ್ಷವು ಅನುಮಾನವನ್ನು ಲೆಕ್ಕಿಸದು**

ಭವೇದನುಮಾನಾನಾಂ ಪ್ರತ್ಯಕ್ಷಾದಿವಿಷಯಬಾಧಕತ್ವಂ ಯದಿ ಪ್ರಾಮಾಣ್ಯಂ ಸ್ಥಿತಂ ಸ್ಯಾತ್ । ನ ಚೈವಂ, ಪ್ರತ್ಯಕ್ಷಾದಿವಿರುದ್ಧಾನಾಂ ತೇಷಾಮಪ್ರಮಾಣತ್ವಾತ್ । ತಥಾ ಚ 'ಪ್ರತ್ಯಕ್ಷಾದೀನಾಮಪ್ರಾಮಾಣ್ಯೇ ಅಬಾಧಿತವಿಷಯತ್ವರೂಪಸಮುತ್ತ್ವಾಽನುಮಾನಾನಾಂ ಪ್ರಾಮಾಣ್ಯಂ, ತಸ್ಮಿಂಶ್ಚ ಸಿದ್ಧೇ ತದ್ವಿರುದ್ಧೇನ ಪ್ರತ್ಯಕ್ಷಾದೀನಾಮಪ್ರಾಮಾಣ್ಯಮ್' ಇತಿ, ಇತರೇತರಾಶ್ರಯತ್ವಂ ಸ್ಯಾತ್ । ನಚೈವಂ 'ಪ್ರತ್ಯಕ್ಷಾದಿಪ್ರಾಮಾಣ್ಯೇಽಪಿ ಇತರೇತರಾಶ್ರಯತ್ವಂ ಸಮಾನಮ್' ಇತಿ ವಾಚ್ಯಮ್ । ಪ್ರತ್ಯಕ್ಷಾದೀನಾಂ ಧರ್ಮಿಗ್ರಾಹಕತ್ವೇನ ಪ್ರಬಲಾನಾಂ ದುರ್ಬಲಾನುಮಾನವಿರೋಧ-ಪರಿಹಾರಮನಪೇಕ್ಷ್ಯೈವ ಪ್ರಾಮಾಣ್ಯಸ್ಯ ಸ್ಥಿತತ್ವಾತ್ । 'ನ ಹಿ ಹರಿಣಶಾವಾಭವಮಪೇಕ್ಷ್ಯ ಪಞ್ಚಾನನೋ ವನಮವಗಾಹತೇ, ಇತಿ ।

ಒಂದು ವೇಳೆ ಅನುಮಾನಾದಿಗಳಿಗೆ ಪ್ರಾಮಾಣ್ಯವು ಸಿದ್ಧವಾಗಿದ್ದಲ್ಲಿ, ಪ್ರತ್ಯಕ್ಷಾದಿಬಾಧಕತ್ವವು (ಅನುಮಾನಕ್ಕೆ) ಸಿದ್ಧವಾಗುತ್ತಿತ್ತು. ಹಾಗಿಲ್ಲ, ಪ್ರತ್ಯಕ್ಷಾದಿಗಳ ವಿರುದ್ಧವಾದ ಅವುಗಳಿಗೆ (ಅನುಮಾನಗಳಿಗೆ) ಅಪ್ರಾಮಾಣ್ಯವು ಇರುವುದರಿಂದ. ಒಟ್ಟಿನಲ್ಲಿ, 'ಪ್ರತ್ಯಕ್ಷಾದಿಗಳು ಅಪ್ರಮಾಣ ಎಂದು ಸಿದ್ಧವಾದಲ್ಲಿ, ಅನುಮಾನಗಳಿಗೆ 'ಅಬಾಧಿತ' ಎಂಬ ಮಹಿಮೆಯಿಂದ ಪ್ರಾಮಾಣ್ಯವು, ಅದು (ಅನುಮಾನವು ಪ್ರಮಾಣ ಎಂದು) ಸಿದ್ಧವಾದಲ್ಲಿ ಅದರ

---

1. 'ಬೆಳಕಿನ ಕಳ್ಳತನ' ಎಂದು ಅರ್ಥವಲ್ಲ 'ಹಗಲಿನಲ್ಲಿ ಕಳ್ಳತನ' ಎಂದು ಮೂಲವನ್ನು ಸ್ಫುಟೀಕರಿಸಲಾಗಿದೆ.

(ಅನುಮಾನದ) ವಿರೋಧದಿಂದ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯ' ಎಂದು ಅನ್ಯೋನ್ಯಾಶ್ರಯ ದೋಷವು ಪ್ರಾಪ್ತವಾದೀತು. ಅನ್ಯೋನ್ಯಾಶ್ರಯತ್ವ-ದೋಷವು ಪ್ರತ್ಯಕ್ಷಾದಿ ಪ್ರಾಮಾಣ್ಯದಲ್ಲೂ ಸಮಾನ ಎಂದು ಹೇಳಲಾಗದು[1]. ಧರ್ಮಿಗ್ರಾಹಕತ್ವೇನ ಪ್ರಬಲವಾದ ಪ್ರತ್ಯಕ್ಷಾದಿಗಳಿಗೆ, ದುರ್ಬಲವಾದ ಅನುಮಾನದ ವಿರೋಧವನ್ನು ಪರಿಗಣಿಸದೆ ಪ್ರಾಮಾಣ್ಯವು ಸ್ಥಿತವಾಗುವುದರಿಂದ. 'ಜಿಂಕೆಯ ಮರಿಯ ಇಲ್ಲದಿರುವಿಕೆಯನ್ನು ಗಮನಿಸಿ, ಸಿಂಹವು ಕಾಡಿನಲ್ಲಡಿ ಇಡುವದಿಲ್ಲ' ಎಂದು[2].

#### ಪ್ರತ್ಯಕ್ಷವು ಪ್ರಬಲಪ್ರತ್ಯಕ್ಷದಿಂದ ಮಾತ್ರ ಬಾಧಕವಾಗುವುದು

**ಶುಕ್ತ್ಯಾದೇ ರಜತತ್ವಾದಿಪ್ರತೀತೇರಪಿ ಬಲವತ್ಪ್ರತ್ಯಕ್ಷವಿರುದ್ಧತ್ವಾದೇವ ಭ್ರಮತ್ವಂ ನ ತರ್ಕಮಾತ್ರಾತ್ ।**

ಶುಕ್ತಿ ಮುಂತಾದವುಗಳಲ್ಲಿ ರಜತತ್ವ ಪ್ರತೀತಿಮುಂತಾದವುಗಳಿಗೂ ಸಹ ಪ್ರಬಲ ಪ್ರತ್ಯಕ್ಷಾಂತರದ ವಿರುದ್ಧವಾದುದರಿಂದಲೇ ಭ್ರಮತ್ವವನ್ನು (ಒಪ್ಪಲಾಗುವುದು), ಕೇವಲ ಅನುಮಾನದ ವಿರೋಧದಿಂದಲ್ಲ.

**ಯದ್ಯನುಮಾನಸ್ಯ ನ ಪ್ರತ್ಯಕ್ಷಾದಿಬಾಧ್ಯತ್ವಂ ಕಥಂ ತರ್ಹಿ ಶುಕ್ತ್ಯಾದೇ ರಜತತ್ವಾದಿಪ್ರತೀತೇಃ ಪ್ರತ್ಯಕ್ಷರೂಪಾಯಾ ದಾಹಚ್ಛೇದಾದ್ಯನುಮಾನಬಾಧಿತ-ತ್ವೇನ ಭ್ರಮತ್ವಂ ಕಲ್ಪ್ಯತೇ? ಅನ್ಯಥಾಽಬಾಧಿತತ್ವೇನ ತಸ್ಯಾ ಭ್ರಮತ್ವಂ ನ ಸ್ಯಾದ್? ಇತ್ಯತ ಆಹ 'ಶುಕ್ತ್ಯಾದೇಃ' ಇತಿ । ಪರೀಕ್ಷಾದಿಸಹಕೃತತಯಾ ಬಲವತಾ 'ನೇದಂ ರಜತಂ, ಕಿಂತು ಶುಕ್ತಿಕೈವ' ಇತಿ 'ಪ್ರತ್ಯಕ್ಷೇಣ ಬಾಧಿತ-ತ್ವಾದೇವ' ಇತ್ಯರ್ಥಃ । 'ನ ತರ್ಕಮಾತ್ರಾತ್' ಇತಿ ವದತಾಽನುಮಾನಮಪಿ**

---

1. ಹೇಗೆ 'ಅನುಮಾನದ ಪ್ರಾಮಾಣ್ಯವು ಮೊದಲು ಸಿದ್ಧವಾದಲ್ಲಿ, ಪ್ರತ್ಯಕ್ಷದ ವಿರೋಧವು ಬಾಧಕವಲ್ಲ, ಪ್ರತ್ಯಕ್ಷದ ವಿರೋಧವಿಲ್ಲದ ಪಕ್ಷದಲ್ಲಿ ಅನುಮಾನಕ್ಕೆ ಪ್ರಾಮಾಣ್ಯ' ಎಂದು ಅನ್ಯೋನ್ಯಾಶ್ರಯತ್ವವನ್ನು ಹೇಳಲಾಗಿದೆಯೋ ಅದೇರೀತಿಯಲ್ಲಿ ಪ್ರತ್ಯಕ್ಷದ ವಿಷಯದಲ್ಲಿಯೂ ಹೇಳಬಹುದಾಗಿದೆ. ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ಸಿದ್ಧವಾದಲ್ಲಿ ಅನುಮಾನವನ್ನು ಬಾಧಿಸಬಹುದು, ಅನುಮಾನದ ಬಾಧವಿಲ್ಲದ ಪಕ್ಷದಲ್ಲಿ ಪ್ರತ್ಯಕ್ಷದ ಪ್ರಾಮಾಣ್ಯ ಎಂದು ಪೃಚ್ಛಕನ ಭಾವ.
2. ಉಪಜೀವ್ಯವಾದ ಪ್ರತ್ಯಕ್ಷವು ಸಿಂಹದಂತೆ ಪ್ರಬಲ ಎಂದು ಭಾವ.

**ತತ್ರ ಪ್ರತ್ಯಕ್ಷಸ್ಯ ಸಾಹಾಯ್ಯಮಾಚರನ್ನ ನಿವಾರ್ಯತ ಇತಿ ಸೂಚಿತಮ್ । ಏವಮನ್ಯತ್ರಾಪಿ ಪ್ರತ್ಯಕ್ಷಾದೇಃ ಪ್ರಬಲಪ್ರತ್ಯಕ್ಷಾದಿಬಾಧಿತತ್ವೇನೈವ ಭ್ರಮತ್ವಂ ವ್ಯುತ್ಪಾದ್ಯ ಕೇವಲಾನುಮಾನಬಾಧ್ಯತ್ವಾಭಾವನಿಯಮಃ ಸಮರ್ಥನೀಯಃ ।**

ಒಂದು ವೇಳೆ ಪ್ರತ್ಯಕ್ಷಾದಿಗಳ ಬಾಧಕತ್ವವು ಅನುಮಾನಕ್ಕೆ ಇಲ್ಲ ಎಂದಾದಲ್ಲಿ, ರಜತತ್ವೇನ ಪ್ರತೀತಮಾನವಾದ ಪ್ರತ್ಯಕ್ಷರೂಪವಾದ ಶುಕ್ತ್ಯಾದಿಗಳು ದಾಹ-ಚ್ಛೇದ ಮುಂತಾದ ಅನುಮಾನದಿಂದ ಬಾಧಿತವಾದುದರಿಂದ ಭ್ರಮತ್ವವನ್ನು ಹೇಗೆ ಕಲ್ಪಿಸಲಾಗುವುದು[1]? ಹಾಗಾಗದ ಪಕ್ಷದಲ್ಲಿ ('ಇದಂ ರಜತಂ' ಎನ್ನುವ ಪ್ರತ್ಯಕ್ಷಜನ್ಯಜ್ಞಾನವು ಅನುಮಾನದಿಂದ ಬಾಧಿತವಾಗಿಲ್ಲ ಎಂದಾದಲ್ಲಿ) ಅಬಾಧಿತವಾಗುವುದರಿಂದ ಅದಕ್ಕೆ (ಇದಂ ರಜತಂ ಎನ್ನುವ ಪ್ರತ್ಯಕ್ಷಜನ್ಯಜ್ಞಾನಕ್ಕೆ) ಭ್ರಮತ್ವವೇ ಇಲ್ಲದಾಗಬೇಕಾದೀತು? ಎಂದು, ಆದುದರಿಂದ ಉತ್ತರಿಸುತ್ತಾರೆ '**ಶುಕ್ತ್ಯಾದೇಃ**' ಎಂದು. ಪರೀಕ್ಷಾದಿಗಳಿಂದ ಸಹಕೃತವಾದ ಪ್ರಬಲಪ್ರತ್ಯಕ್ಷಾತ್ಮಕವಾದ 'ಇದು ರಜತವಲ್ಲ, ಮತ್ತೆ ಶುಕ್ತಿಯೇ' ಎಂಬ ಅರಿವಿನಿಂದ ('ಇದಂ ರಜತಂ' ಎನ್ನುವ ಪ್ರತ್ಯಕ್ಷಾತ್ಮಕವಾದ ಅರಿವು) ಬಾಧಿತವಾಗುವುದರಿಂದ ಎಂದು ಭಾವ. 'ಕೇವಲ ತರ್ಕವಲ್ಲ' ಎಂದು ಹೇಳಿರುವುದರಿಂದ ಅನುಮಾನವು ಅಲ್ಲಿ ಪ್ರತ್ಯಕ್ಷಕ್ಕೆ ಸಾಹ್ಯವನ್ನು ಮಾಡಿರುವುದನ್ನು ಅಲ್ಲಗಳೆಯುತ್ತಿಲ್ಲ ಎನುವುದನ್ನು ಸೂಚಿಸಲಾಗಿದೆ[2]. ಇದೇ

1. ಶುಕ್ತಿಯನ್ನು ಕಂಡು 'ಇದಂ ರಜತಂ' ಎಂದು ಪ್ರತ್ಯಕ್ಷದಿಂದ ಅರಿವು ಪ್ರಾಪ್ತವಾದಾಗ, ಶುಕ್ತಿಯನ್ನು ದಹಿಸುವದರಿಂದಲೊ, ಕುಟ್ಟುವುದರಿಂದಲೊ ಪರೀಕ್ಷಿಸಲಾಗುವುದು. ಈ ಪರೀಕ್ಷೆಯಿಂದ ತಿಳಿಯುವುದು 'ಇದು ಬೆಳ್ಳಿಯಲ್ಲ ಶುಕ್ತಿ' ಎಂದು. ಈ ಅನುಮಾನಾತ್ಮಕ ಪ್ರಕ್ರಿಯೆಯಿಂದ ಪ್ರತ್ಯಕ್ಷಕ್ಕೆ ಬಾಧಕವನ್ನು ಒಪ್ಪಿರುವುದು ಲೋಕಸಮ್ಮತವಾಗಿದೆ. ಆದರೆ ಪ್ರಕೃತದಲ್ಲಿ 'ಪ್ರತ್ಯಕ್ಷಕ್ಕೆ ಅನುಮಾನದಿಂದ ಬಾಧವು ಇಲ್ಲ' ಎಂದು ಹೇಳಲಾಗಿದೆ ಇದು ಹೇಗೆ ತರವಾಗುವುದು? ಎಂದು ಪೂರ್ವಪಕ್ಷಿಯ ಹೃದಯ.

2. ಮೂಲದಲ್ಲಿ 'ನ ತರ್ಕಮಾತ್ರಾತ್' ಎಂದು ತಿಳಿಸಲಾಗಿದೆ. ಕೇವಲ ತರ್ಕವು 'ಇದಂ ರಜತಂ' ಎನ್ನುವ ಪ್ರತ್ಯಕ್ಷಾತ್ಮಕವಾದ ಅರಿವನ್ನು ನಿರಾಕರಿಸುತ್ತಿಲ್ಲ, ತರ್ಕದ ಸಹಾಯವನ್ನು ಹೊಂದಿದ ಮತ್ತೊಂದು ಪ್ರತ್ಯಕ್ಷಾತ್ಮಕವಾದ ಅರಿವೇ ಇದಂರಜತಂ ಎನ್ನುವ ಅರಿವನ್ನು ನಿರಾಕರಿಸಿತು ಎಂದು ತಿಳಿಸಲಾಗಿದೆ. ಎರಡು ಪ್ರತ್ಯಕ್ಷಾತ್ಮಕಗಳಾದ ಜ್ಞಾನಗಳು ಸಮಬಲಗಳಾದವು ಅವುಗಳಲ್ಲಿ ಬಾಧ್ಯ-ಬಾಧಕತ್ವವು ಹೇಗೆ? ಎನ್ನುವ ಸಂದೇಹಕ್ಕೆ ಎಡೆಯಿಲ್ಲ, ತರ್ಕದ ಸಂವಾದವಿರುವುದರಿಂದ ಎರಡನೆಯ ಅರಿವು ಪ್ರಬಲ ಎಂದು ಸೂಚಿಸಲಾಯಿತು ಎಂದು ಭಾವ.

ರೀತಿಯಲ್ಲಿ ಬೇರೆಡೆಯಲ್ಲೂ ಸಹ ಪ್ರತ್ಯಕ್ಷಾದಿಗಳು ಪ್ರಬಲವಾದ (ಮತ್ತೊಂದು) ಪ್ರತ್ಯಕ್ಷಾದಿಗಳಿಂದಲೇ ಬಾಧಿತ ಎಂದು (ಪೂರ್ವದ ಪ್ರತ್ಯಕ್ಷಕ್ಕೆ) ಭ್ರಮತ್ವವನ್ನು ವ್ಯವಸ್ಥೆಗೊಳಿಸಿ, (ಪ್ರತ್ಯಕ್ಷಕ್ಕೆ) ಕೇವಲಾನುಮಾನಬಾಧ್ಯತ್ವವು ಇಲ್ಲ ಎಂದು ಸಮರ್ಥಿಸುವುದು[1].

**ಕೇವಲಾನುಮಾನವು ಪ್ರತ್ಯಕ್ಷವನ್ನು ಬಾಧಿಸಲಾರದು**

**ತರ್ಕಮಾತ್ರತಃ ಪ್ರತ್ಯಕ್ಷಬಾಧನೇ ಭೂತಚತುಷ್ಟಯಸ್ಯಾಬಾದೇಃ ಪೃಥಿವೀತ್ವಾದೃಷ್ಟೇಃ ಪೃಥಿವ್ಯಾ ಅಪಿ ಪೃಥಿವೀತ್ವಂ ನ ಸ್ಯಾತ್ ।**

ಕೇವಲ ಅನುಮಾನವು ಪ್ರತ್ಯಕ್ಷಕ್ಕೆ ಬಾಧಕವಾದಲ್ಲಿ ಅಬಾದಿ ಭೂತಚತುಷ್ಟಯಗಳಲ್ಲಿ ಕಾಣದ ಪೃಥಿವೀತ್ವವು ಪೃಥಿವಿಯಲ್ಲಿಯೂ (ಪಾರ್ಥಿವ ಪದಾರ್ಥಗಳಲ್ಲಿಯೂ ಸಹ- ಘಟಾದಿಗಳಲ್ಲಿ) ಇಲ್ಲದಾದೀತು.

**ನನು, ಅನುಮಾನಮಪ್ಯನುಕೂಲತರ್ಕಸನಾಥಂ ವ್ಯಾಪ್ತಿಪಕ್ಷಧರ್ಮತಾವತ್ತ್ವೇನ ನಿರವಕಾಶತ್ವಾತ್ ಪ್ರತ್ಯಕ್ಷಮಿವ ಬಲವತ್ಪ್ರತ್ಯಕ್ಷಸ್ಯ ಬಾಧಕಂ ಭವತು ವಿರೋಧಾಭಾವಾತ್ । 'ಕಿಮನೇನ ಸರ್ವತ್ರ ಪ್ರಬಲಪ್ರತ್ಯಕ್ಷಾದ್ಯನ್ವೇಷಣವ್ಯಸನೇನ' ಇತಿ ಚೇತ್ ತರ್ಹಿ ಕಾಲಾತ್ಯಯಾಪದಿಷ್ಟಮಾತ್ರಲೋಪಪ್ರಸಙ್ಗಃ**

1. 'ನೀಲಂ ನಭಃ' ಎಂಬ ಅರಿವು ಇದೆ. ಈ ಅರಿವು 'ನಭಃ ನ ನೀಲಂ ವಿಭುತ್ವಾತ್' ಎನ್ನುವ ಅನುಮಾನದಿಂದ ಬಾಧಿತವಾಗಿದೆ. ಹಾಗೆಯೇ 'ಚಂದ್ರಃ ಪ್ರದೇಶಮಾತ್ರಃ' ಎಂಬ ಅರಿವು ಇದೆ. 'ಅಷ್ಟಾಶೀತಿಸಹಸ್ರಾಣಿ ವಿಸ್ತೀರ್ಣೋ ಯೋಜನಾನಿ ತು' ಎನ್ನುವ ಪುರಾಣ ವಚನದಿಂದ ಬಾಧಿತವಾಗಿದೆ. ಆದುದರಿಂದ 'ನ ಹಿ ಪ್ರಮಾಣಾದೃಷ್ಟಸ್ಯ ತರ್ಕಬಾಧ್ಯತ್ವಂ' ಎನ್ನುವ ಹೇಳಿಕೆಗೆ ಅಪವಾದವು ಕಂಡಿದೆಯಲ್ಲವೆ? ಎಂದು ಸಂದೇಹಿಸುವಂತಿಲ್ಲ. ಅಲ್ಲೂ ಸಹ ಪ್ರತ್ಯಕ್ಷದಿಂದಲೇ ಬಾಧವನ್ನು ಹೇಳಲಾಗುವುದು. ಸಾಕ್ಷಿಯು ಅವ್ಯಾಕೃತಾಕಾಶವನ್ನು ಗ್ರಹಿಸುವುದು. ಈ ಅನುಮಾನಸಹಕೃತವಾದ ಸಾಕ್ಷಿಯು, ನೀಲವರ್ಣರಹಿತವಾಗಿಯೇ ಅವ್ಯಾಕೃತಾಕಾಶವನ್ನು ಗ್ರಹಿಸಿರುವುದು. ಇದರ ವಿರೋಧವೇ 'ನೀಲಂ ನಭಃ' ಎನ್ನುವ ಪ್ರತ್ಯಕ್ಷಕ್ಕೆ ಬಾಧಕ. ಹಾಗೆಯೇ 'ಪ್ರದೇಶಮಾತ್ರಃ ಚಂದ್ರ' ಎನ್ನುವ ಪ್ರತ್ಯಕ್ಷವು ದೂರಸ್ಥ ದೋಷಯುಕ್ತವಾಗಿರುವುದರಿಂದ ದುರ್ಬಲ. ಸಾಕ್ಷಿಯೇ ಆ ಚಂದ್ರನ ಅವಯವಾದಿಗಳ ಪರಿಮಾಣವನ್ನು ಗ್ರಹಿಸುವುದು. ಹಾಗಾಗಿ ಇಲ್ಲಿಯೂ ಸಹ ಪ್ರತ್ಯಕ್ಷದಿಂದಲೇ ಬಾಧವನ್ನು ಊಹಿಸಬಹುದಾಗಿದೆ. ಪ್ರತ್ಯಕ್ಷಕ್ಕೆ ವಿಷಯವಾದ ವಸ್ತುಗಳು ಸದೃಶವಾಗಿದ್ದಲ್ಲಿ, ದೂರಸ್ಥಿತವಾದಲ್ಲಿ ಅಂತಹ ವಸ್ತುವನ್ನು ಗ್ರಹಿಸುವ ಪ್ರತ್ಯಕ್ಷವು ದುಷ್ಟ ಎಂದು ನಿರ್ಣಯಿಸಲಾಗಿದೆ, ಆದುದರಿಂದ ಮೇಲೆ ಉದಾಹರಿಸಲಾದ ಪ್ರತ್ಯಕ್ಷಗಳು ಪ್ರತ್ಯಕ್ಷಾಂತರದಿಂದಲೇ ಬಾಧಿತ ಎಂದು ಭಾವ.

**ಸ್ಯಾತ್ । ಸರ್ವತ್ರೈವಮನುಮಾನಪ್ರಾಬಲ್ಯಸ್ಯ ವ್ಯುತ್ಪಾದಯಿತುಂ ಶಕ್ಯತ್ವಾತ್ ಇತ್ಯಾಶಯವಾನಾಹ 'ತರ್ಕಮಾತ್ರತಃ' ಇತಿ । 'ಭೂತಚತುಷ್ಟಯಸ್ಯಾಬಾದೇಃ ಪೃಥಿವೀತ್ವಾದೃಷ್ಟೇಃ' ಇತ್ಯನೇನ ಬಾಹ್ಯೇಂದ್ರಿಯಗ್ರಾಹ್ಯಗುಣವತ್ವಲಕ್ಷಣಸ್ಯ ಭೂತತ್ವಸ್ಯ ಅಪೃಥಿವೀತ್ವೇನ ವ್ಯಾಪ್ತಿಂ ಸಾಧಯತಿ । ಪಕ್ಷಧರ್ಮತಾ ತು ಸ್ಪಷ್ಟೈವ । ಪೃಥಿವ್ಯಾ ಅಪಿ- ಗನ್ಧವತೋ ದ್ರವ್ಯಸ್ಯಾಪಿ । ಪೃಥಿವೀತ್ವಂ ಜಾತಿವಿಶೇಷಃ । 'ಗನ್ಧವದ್ ದ್ರವ್ಯಂ ಪೃಥಿವೀ ನ ಭವತಿ, ಭೂತತ್ವಾದ್ ಅಬಾದಿವದ್' ಇತ್ಯಾದ್ಯನುಮಾನೇನ ಪೃಥಿವೀತ್ವಾದಿಗ್ರಾಹಕಪ್ರತ್ಯಕ್ಷಸ್ಯ ಬಾಧಃ ಸ್ಯಾತ್ । ಅಸ್ಯಾಪ್ಯನುಮಾನಸ್ಯ ವ್ಯಭಿಚಾರಾದರ್ಶನಾದಿನಾ ವ್ಯಾಪ್ತ್ಯಾದಿ-ಮತ್ವಾದ್ ಇತಿ ।**

ಸರಿ, ಅನುಕೂಲತರ್ಕದಿಂದ ಯುಕ್ತವಾದ ಅನುಮಾನವೂ ಸಹ ವ್ಯಾಪ್ತಿ-ಪಕ್ಷಧರ್ಮತಾವನ್ನು ಹೊಂದಿರುವುದರಿಂದ ನಿರವಕಾಶವಾಗಿ ಇರುವುದರಿಂದ ಪ್ರತ್ಯಕ್ಷದಂತೆ ಪ್ರಬಲವಾಗಿದೆ, (ಇಂತಹ ಅನುಮಾನವು) ಪ್ರತ್ಯಕ್ಷಕ್ಕೆ ಬಾಧಕವಾಗಲಿ, (ಯಾವುದೇ) ವಿರೋಧವಿಲ್ಲದಿರುವುದರಿಂದ. ಎಲ್ಲೆಡೆಯೂ 'ಪ್ರಬಲ ಪ್ರತ್ಯಕ್ಷ ಮುಂತಾದವುಗಳ ಅನ್ವೇಷಣ' ಎಂಬ ಈ ವ್ಯಸನದಿಂದೇನು? ಎಂದಲ್ಲಿ ಬಾಧವೇ (ಎಂಬ ದೋಷವೇ) ವಿಲೋಪವಾಗುವ ಪ್ರಸಂಗವು ಒದಗೀತು. ಎಲ್ಲೆಡೆಯೂ ಸಹ ಈ ರೀತಿಯಾಗಿ ಅನುಮಾನಕ್ಕೆ ಪ್ರಾಬಲ್ಯವನ್ನು ಸಾಧಿಸುವ ಅವಕಾಶವಿರುವುದರಿಂದ ಎಂಬ ಅಭಿಪ್ರಾಯ ದಿಂದ ಹೇಳುತ್ತಾರೆ 'ತರ್ಕಮಾತ್ರತಃ' ಎಂದು[1]. 'ಭೂತಚತುಷ್ಟಯಸ್ಯಾಬಾದೇಃ ಪೃಥಿವೀತ್ವಾದೃಷ್ಟೇಃ' ಎನ್ನುವುದರಿಂದ ಬಾಹ್ಯೇಂದ್ರಿಯಗ್ರಾಹ್ಯತ್ವರೂಪ ಗುಣವನ್ನು ಹೊಂದಿರುವ ಭೂತತ್ವಕ್ಕೆ ಪೃಥಿವೀಭಿನ್ನ ಪದಾರ್ಥಗಳಿಂದ

---

1. 'ಇದಂ ರಜತಂ' ಎನ್ನುವದು ಪ್ರತ್ಯಕ್ಷಜನ್ಯವಾದ ಭ್ರಮಾತ್ಮಕ ಅರಿವು. ಈ ಅರಿವು 'ನೇದಂ ರಜತಂ ಅಲೋಹತ್ವಾತ್' ಎಂಬಿತ್ಯಾದಿ ಅನುಮಾನದಿಂದಲೂ ಬಾಧಿತವಾಗಬಹುದು, 'ನೇದಂ ರಜತಂ ಇಯಂ ಶುಕ್ತಿರೇವ' ಎಂಬ ಪ್ರತ್ಯಕ್ಷದಿಂದಲೇ ಬಾಧಿತ ಎಂದು ಆಗ್ರಹಿಸುವುದು ತರವಲ್ಲ. ಪ್ರತ್ಯಕ್ಷದಿಂದ ಬಾಧಿತ ಎಂದು ಪ್ರಸಿದ್ಧವಾದ 'ಹ್ರದಃ ವಹ್ನಿಮಾನ್...' ಎನ್ನುವ ಅನುಮಾನವೂ ಸಹ ಅನುಮಾನದಿಂದಲೇ ಬಾಧಿತ ಎಂದು ಹೇಳಲು ಅವಕಾಶವಿದೆ. 'ಹ್ರದಃ ನ ವಹ್ನಿಮಾನ್ ಜಲಾತ್' ಎಂದು. ಈ ಅನುಮಾನವೂ ಸಹ ವ್ಯಾಪ್ತಿ-ಪಕ್ಷಧರ್ಮತಾ ಮುಂತದವುಗಳನ್ನು ಹೊಂದಿದ್ದು ಪ್ರಬಲವಾಗಿದೆ. ಹಾಗಾದಲ್ಲಿ ಕಾಲಾತ್ಯಯಾಪದಿಷ್ಟ- ಪ್ರತ್ಯಕ್ಷಬಾಧ ಎನ್ನುವ ದೋಷಕ್ಕೆ ಎಲ್ಲೂ ಅವಕಾಶವೇ ಇಲ್ಲದ ಪ್ರಸಂಗವು ಒದಗುವುದು ಎಂದು ಭಾವ.

ವ್ಯಾಪ್ತಿಯನ್ನು ಸಾಧಿಸಲಾಗುವುದು[1]. ಪಕ್ಷಧರ್ಮತಾವು ಸ್ಫುಟವಾಗಿಯೇ ತೋರುವುದು. **ಪೃಥಿವ್ಯಾ ಅಪಿ**- ಗಂಧವನ್ನು ಹೊಂದಿರುವ ದ್ರವ್ಯಕ್ಕೂ ಸಹ[2]. ಪೃಥಿವೀತ್ವ ಎನ್ನುವುದು ಜಾತಿ ವಿಶೇಷ[3]. (ಈ ಎಲ್ಲ ಪರಿಷ್ಕಾರದ ನಂತರ ಸಿದ್ಧವಾಗುವ ಅನುಮಾನದ ಆಕಾರವನ್ನು ತಿಳಿಸುವರು) 'ಗನ್ಧವದ್‌ದ್ರವ್ಯಂ ಪೃಥಿವೀ ನ ಭವತಿ ಭೂತತ್ವಾತ್' ಎಂಬ ಅನುಮಾನದಿಂದ ಪೃಥಿವೀತ್ವಾದಿ-ಗ್ರಾಹಕ ಪ್ರತ್ಯಕ್ಷಕ್ಕೆ ಬಾಧವು ಉಂಟಾದೀತು. ಈ ಅನುಮಾನಕ್ಕೂ ಸಹ ವ್ಯಭಿಚಾರವು ಇಲ್ಲದಿರುವುದರಿಂದ ಎಂದು[4].

---

1. ಪ್ರಕೃತ ಮೂಲದಲ್ಲಿ ಸೂಚಿತವಾದ ಅನುಮಾನದ ಆಕಾರವು- 'ಪೃಥಿವೀ ಪೃಥಿವೀ ನ ಭವತಿ, ಭೂತತ್ವಾತ್ ಜಲಾದಿವತ್' ಎಂದು. ಈ ಅನುಮಾನದಿಂದ ಪೃಥಿವಿಯಲ್ಲಿ ಪೃಥಿವೀತ್ವಾಭಾವವನ್ನು ಸಾಧಿಸಬಹುದು. ಭೂತಗಳಾದ ಜಲಾದಿಗಳಲ್ಲಿ ಭೂತತ್ವವು ಇದೆ ಆದರೆ ಪೃಥಿವೀತ್ವವು ಇಲ್ಲ, ಹಾಗೆಯೇ ಪೃಥಿವಿಯಲ್ಲಿಯೂ ಸಹ ಭೂತತ್ವವು ಇರುವುದರಿಂದ ಪೃಥಿವೀತ್ವವು ಇಲ್ಲದಾಗಲಿ ಎಂದು. ಕೇವಲ ತರ್ಕವು ಪ್ರತ್ಯಕ್ಷವನ್ನು ಬಾಧಿಸುವದಾದಲ್ಲಿ ಈ ಅನುಮಾನದಿಂದ ಪ್ರತ್ಯಕ್ಷಸಿದ್ಧವಾದ ಪೃಥಿವಿಯನ್ನು ಪೃಥಿವಿಯೇ ಅಲ್ಲ ಎಂದು ಸಾಧಿಸಬಹುದು ಎಂದು ಭಾವ.

2. 'ಪೃಥಿವೀ ಪೃಥಿವೀ ನ ಭವತಿ, ಭೂತತ್ವಾತ್ ಜಲಾದಿವತ್' ಎಂದು ಪ್ರಕೃತಾನುಮಾನ. ಹೇತುವನ್ನು ಪರಿಷ್ಕರಿಸಿ ವ್ಯಾಪ್ತಿ-ಪಕ್ಷಧರ್ಮತಾ ಮುಂತಾದವುಗಳನ್ನು ದೃಢೀಕರಿಸಲಾದರೂ ಈ ಅನುಮಾನವು ದುಷ್ಟ- 'ಪೃಥಿವೀ ಪೃಥಿವೀ ನ' ಎನ್ನುವ ಪ್ರತಿಜ್ಞೆಯೇ ವಿರುದ್ಧವಾಗಿರುವುದರಿಂದ ಎಂಬ ಸಂದೇಹವನ್ನು ಪರಿಹರಿಸುವರು. ಪ್ರಕೃತದಲ್ಲಿ ಗನ್ಧವದ್‌ದ್ರವ್ಯ-ವಿಶೇಷವನ್ನು ಪೃಥಿವೀ ಎಂದು ವಿವಕ್ಷಿಸಲಾಗುವುದು. ಆಗ ಪ್ರತಿಜ್ಞಾವಾಕ್ಯವು- 'ಗನ್ಧವದ್-ದ್ರವ್ಯವಿಶೇಷಃ ಪೃಥಿವೀ ನ' ಎಂದಾಗುವುದು. ಆಗ ಪ್ರತಿಜ್ಞಾತ ಪದಗಳಲ್ಲಿ ನೇರವಾಗಿ ವಿರೋಧವಿಲ್ಲ ಎಂದು ಭಾವ.

3. 'ಗನ್ಧವದ್‌ದ್ರವ್ಯವಿಶೇಷಃ ಪೃಥಿವೀ ನ' ಎಂದು ಪ್ರತಿಜ್ಞಾವಾಕ್ಯವನ್ನು ಪರಿಷ್ಕರಿಸಿದರೂ ಪದಾರ್ಥಗಳಲ್ಲಿನ ವಿರೋಧವು ಪರಿಹೃತವಾಗುವುದಿಲ್ಲ. ಪೃಥಿವೀ ಅಂದರೆ ಗನ್ಧವದ್-ದ್ರವ್ಯವಿಶೇಷ ಎಂದು ವಿವಕ್ಷಿಸಲಾಗಿದೆ. ಆಗ ಪ್ರತಿಜ್ಞಾವಾಕ್ಯವು 'ಗನ್ಧವದ್‌ದ್ರವ್ಯವಿಶೇಷಃ ಗನ್ಧವದ್‌ದ್ರವ್ಯವಿಶೇಷಃ ನ' ಎಂದಾಗುವುದು. ಪುನಃ ಪ್ರತಿಜ್ಞಾಪದಗಳಲ್ಲಿ ವಿರೋಧವು ಪ್ರಾಪ್ತವಾಗುವುದು, ಎಂಬ ಸಂದೇಹಕ್ಕೆ ಎಡೆ ಇಲ್ಲದಂತೆ ಸಾಧ್ಯಾಂಶವನ್ನು ವ್ಯಾಖ್ಯಾನಿಸುವರು ಪೃಥಿವೀತ್ವ ಎನ್ನುವುದು ಒಂದು ಜಾತಿವಿಶೇಷ ಎಂದು ಭಾವ.

4. ಕೇವಲ ಪ್ರಬಲವಾದ ಅನುಮಾನವು ಪ್ರತ್ಯಕ್ಷವನ್ನು ಬಾಧಿಸಬಹುದು ಎಂದು ಒಪ್ಪಿದಲ್ಲಿ 'ಗನ್ಧವದ್‌ದ್ರವ್ಯಂ ಪೃಥಿವೀ ನ ಭವತಿ ಭೂತತ್ವಾತ್' ಎಂಬ ಅನುಮಾನವು ಸಾಧ್ಯ-ಹೇತುಗಳಿಗೆ ಸಾಹಚರ್ಯ ಮುಂತಾದವುಗಳಿಂದ ಪ್ರಬಲವಾಗಿದೆ, ಹಾಗಾಗಿ ಈ ಅನುಮಾನವು 'ಇಯಂ ಪೃಥವೀ' ಎನ್ನುವ ಪ್ರತ್ಯಕ್ಷವನ್ನು ಬಾಧಿಸುವ ಪ್ರಸಂಗವು ಒದಗುವುದು ಎಂದು ಭಾವ.

**ಭೇದನಿರಾಸಕಾನುಮಾನಗಳು ಅನುಮಾಭಾಸವಾಗಿವೆ**

**ಅತೋ ನ ತರ್ಕಮಾತ್ರತ ಏವ ದೃಷ್ಟಸ್ಯ ಭ್ರಾನ್ತಿತ್ವಂ ಕಲ್ಪ್ಯಮ್ । ಅತಃ ಸರ್ವಭೇದನಿರಾಸತರ್ಕಸ್ಯ ಸರ್ವಶ್ರುತಿಸ್ಮೃತಿಪ್ರತ್ಯಕ್ಷಾನುಮಾನವಿರುದ್ಧ-ತ್ವಾತ್ ನಿತರಾಮಾಭಾಸತ್ವಮ್ ।**

ಆದುದರಿಂದ (ಪ್ರಮಾಣಪ್ರಮಿತವಾದದ್ದನ್ನು ನಿರಾಕರಿಸುವ ಪ್ರಸಂಗವು ಪ್ರಾಪ್ತವಾಗುವುದರಿಂದ) ಕೇವಲ ಅನುಮಾನದಿಂದ ಪ್ರತ್ಯಕ್ಷಪ್ರಮಿತವಾದುದಕೆ ಭ್ರಾಂತಿತ್ವವನ್ನು ಕಲ್ಪಿಸುವುದು ತರವಲ್ಲ. ಆದುದರಿಂದ (ಪ್ರತ್ಯಕ್ಷವು ಅಬಾಧಿತವಾದುದರಿಂದ) ಸರ್ವಭೇದನಿರಾಸಕಾನುಮಾನವು ಎಲ್ಲ ಶ್ರುತಿ-ಸ್ಮೃತಿ-ಪ್ರತ್ಯಕ್ಷಗಳಿಂದ ವಿರುದ್ಧವಾದದು ಆದುದರಿಂದ ನಿಃಶಂಕಿತವಾಗಿ ಆಭಾಸತ್ವವು (ಆ ಭೇದಾಭಾವಸಾಧಕಾನುಮಾನಗಳಿಗೆ)

ವಿಷಮೋಽಯಮುಪನ್ಯಾಸಃ- ಪೃಥಿವೀತ್ವಾಭಾವೋ ಹ್ಯನೇನ ಗನ್ಧವತೋ ದ್ರವ್ಯಸ್ಯ ಸಾಧ್ಯತೇ । ಅಭಾವಶ್ಚ ಪ್ರತಿಯೋಗಿಜ್ಞಾನಾಧೀನಜ್ಞಾನಃ । ತಸ್ಮಾದೇವಮನುಮಿಮಾನೇನ ಪೃಥಿವೀತ್ವಂ ಜ್ಞಾತವ್ಯಮ್, ಅನ್ಯಥಾ ಅಪ್ರಸಿದ್ಧವಿಶೇಷಣತ್ವಾಪತ್ತೇಃ । ತಚ್ಚ ಗನ್ಧವತಿ ದ್ರವ್ಯ ಏವ ಪ್ರತ್ಯಕ್ಷೇಣ ಜ್ಞಾತವ್ಯಮಿತಿ ಉಪಜೀವ್ಯತ್ವೇನ ಪ್ರಬಲಸ್ಯ ಪ್ರತ್ಯಕ್ಷಸ್ಯ ನಾನುಮಾನಂ ಬಾಧಕಮ್ । ಅನ್ಯಥಾ ಸ್ವಸ್ಯೈವೋದಯಾಭಾವಪ್ರಸಙ್ಗಾತ್ । ಕಿನ್ತು ಪ್ರತ್ಯಕ್ಷಬಲೇನ ಗನ್ಧವತೋ ದ್ರವ್ಯಸ್ಯ ಪೃಥಿವೀತ್ವಸ್ಥಿತೌ ತತ್ರೈವ ಭಗ್ನವ್ಯಾಪ್ತಿಕಮ್ ಅನುಮಾನಮೇವಾಪ್ರಮಾಣಮ್ । ಯಥಾ ತೇಜೋಽವಯವಿನಃ ಅನುಷ್ಣತ್ವಸಾಧಕಂ ಕೃತಕತ್ವಾನುಮಾನಮ್ । ತತ್ರಾಪಿ ಹ್ಯನುಷ್ಣತ್ವಪ್ರತಿಯೋಗ್ಯುಷ್ಣತ್ವಸ್ಯ ತೇಜೋಽವಯವಿನಿ ಪ್ರತ್ಯಕ್ಷೇಣ ಜ್ಞಾತತ್ವಾತ್ । ನ ಚ ಪ್ರಕೃತೇ ತಥಾಽಸ್ತಿ । ಮೈವಮ್, ಯೇನ ವಿನಾ ಯಸ್ಯೋದಯೋ ನಾಸ್ತಿ ತತ್ ತಸ್ಯೋಪಜೀವ್ಯಮ್ । ತಚ್ಚ ನ ಸಾಧ್ಯಧರ್ಮಪ್ರತಿಯೋಗಿಗ್ರಾಹಕಮೇವೇತಿ ನಿಯಮಃ । ಕಿನ್ತು ಧರ್ಮಿ-ಸಾಧ್ಯಲಿಙ್ಗವ್ಯಾಪ್ತ್ಯಾದಿಗ್ರಾಹಕಮಪಿ । ತದ್ವಿರೋಧಶ್ಚಾಸ್ತಿ ಪ್ರಕೃತ ಇತಿ ಕಥಮನುಮಾನಂ ಪ್ರತ್ಯಕ್ಷಸ್ಯ ಬಾಧಕಂ ಭವೇದ್? ಇತ್ಯಾಶಯವಾನುಕ್ತಾತಿ-ಪ್ರಸಙ್ಗಸ್ಯ ವಿಪರ್ಯಯಪರ್ಯವಸಾನಮಾಹ 'ಅತ' ಇತಿ । ದೃಷ್ಟಸ್ಯ ಇತಿ

**ಭಾವೇ ಕ್ತಃ 'ಪ್ರತ್ಯಕ್ಷಸ್ಯ' ಇತ್ಯರ್ಥಃ । ಅಥವಾ ಭ್ರಾನ್ತಿತ್ವಂ ಭ್ರಾನ್ತಿ-ಕಲ್ಪಿತತ್ವಮ್ । ಯದಾ ತು ಪ್ರತ್ಯಕ್ಷವಿರುದ್ಧತ್ವಾದೇವಾನುಮಾನಸ್ಯಾ-ಪ್ರಾಮಾಣ್ಯಂ, ತದಾ ಕಿಮು ವಾಚ್ಯಂ ಸರ್ವಪ್ರಮಾಣವಿರುದ್ಧತ್ವಾದಿತಿ ಕಾಲಾತ್ಯಯಾಪದಿಷ್ಟತ್ವಂ? ಉಕ್ತಮ್ ಉಪಸಂಹರತಿ 'ಅತ' ಇತಿ । ಶಙ್ಕಾऽನಾಸ್ಪದತ್ವಂ ನಿತರಾಮಿತ್ಯರ್ಥಃ ।**

ಈ ('ಪೃಥಿವ್ಯಾ ಅಪಿ ಪೃಥಿವೀ ನ ಸ್ಯಾತ್' ಇತ್ಯಾದಿ) ಉಪನ್ಯಾಸವು ವಿಷಮವಾಗಿದೆ- ಇದರಿಂದ (ಭೂತತ್ವಾತ್ ಎಂಬ ಹೇತುವಿನಿಂದ) ಗನ್ಧವದ್-ದ್ರವ್ಯದಲ್ಲಿ ಪೃಥಿವೀತ್ವಾಭಾವವನ್ನು ಸಾಧಿಸಲಾಗುವುದು. ಅಭಾವವಾದರೋ ಪ್ರತಿಯೋಗಿಯ ಅರಿವಿನ ಅಧೀನ ಜ್ಞಾನವಾಗಿದೆ. ಆದುದರಿಂದ ಈ ರೀತಿಯಾಗಿ ಅನುಮಾನವನ್ನು ಹೇಳುವುದರಿಂದ ಪೃಥಿವೀತ್ವವನ್ನು ತಿಳಿದಿರಬೇಕು, ಅನ್ಯಥಾ (ಪೃಥಿವೀತ್ವದ ಅರಿವಿಲ್ಲದೇ ಹೊದಲ್ಲಿ) ಅಪ್ರಸಿದ್ಧವಿಶೇಷಣತ್ವದ ಪ್ರಸಂಗ[1]. ಅದಾದರೋ (ಪೃಥಿವೀತ್ವವಾದರೋ) ಗಂಧವದ್‌ದ್ರವ್ಯದಲ್ಲೇ ಪ್ರತ್ಯಕ್ಷದಿಂದ ತಿಳಿಯಬೇಕು, ಹಾಗಾಗಿ ('ಪೃಥಿವೀ ನ' ಎಂಬ ಅನುಮಾನಕ್ಕೆ ಈ ಪ್ರತ್ಯಕ್ಷವು) ಉಪಜೀವ್ಯವಾದುದರಿಂದ ಪ್ರಬಲವಾದ ಪ್ರತ್ಯಕ್ಷಕ್ಕೆ ಈ ಅನುಮಾನವು ಬಾಧಕವಾಗಲಾರದು. ಹಾಗಾಗದ ಪಕ್ಷದಲ್ಲಿ (ಪ್ರತ್ಯಕ್ಷವೇ ಅನುಮಾನದಿಂದ ಬಾಧಗೊಂಡ ಪಕ್ಷದಲ್ಲಿ) ತನ್ನ (ಅನುಮಾನದ) ಉತ್ಪತ್ತಿಯಾಗದೇ ಹೋದೀತು[2]. ಮತ್ತೆ ಪ್ರತ್ಯಕ್ಷದ ಸಹಕಾರದಿಂದ ಗಂಧವದ್‌ದ್ರವ್ಯದಲ್ಲಿ ಪೃಥಿವೀತ್ವವು ಇರಲಾಗಿ ಅಲ್ಲೇ (ಗಂಧವದ್‌ದ್ರವ್ಯದಲ್ಲಿ- ಪಕ್ಷದಲ್ಲಿಯೇ) ವ್ಯಾಪ್ತಿಯು ಭಗ್ನವಾಗಲಾಗಿ ಅನುಮಾನವೇ ಅಪ್ರಮಾಣವಾಗುವುದು. ಅಗ್ನಿಯಲ್ಲಿ ಉಷ್ಣತ್ವಾಭಾವವನ್ನು ಸಾಧಿಸುವ ಕೃತಕತ್ವಾನುಮಾನದಂತೆ. ಅಲ್ಲೂ ಸಹ (ಅನುಷ್ಣತ್ವ ಸಾಧಕಾನುಮಾನದಲ್ಲೂ ಸಹ) ಅನುಷ್ಣತ್ವದ ಪ್ರತಿಯೋಗಿಯಾದ ಉಷ್ಣತ್ವವು,

---

1. ಗಂಧವದ್‌ದ್ರವ್ಯಂ ಪೃಥಿವೀ ನ ಭವತಿ ಭೂತತ್ವಾತ್ ಎಂದು ಅನುಮಾನ. ಈ ಅನುಮಾನದಲ್ಲಿ 'ಪೃಥಿವೀ ನ ಭವತಿ' ಎನ್ನುವದು ಸಾಧ್ಯ. ಪ್ರತಿಯೋಗಿಯಾದ ಪೃಥಿವಿಯ ಅರಿವಿಲ್ಲದೆ ಪೃಥಿವಿಯ ಭೇದದ ಅರಿವಾಗದು. ಹಾಗಾಗಿ ಈ ಅನುಮಾನವನ್ನು ಪ್ರಯೋಗಿಸುವ ಮುನ್ನ ಪೃಥಿವೀತ್ವದ ಅರಿವಿಲ್ಲ ಎಂದು ಒಪ್ಪಿದಲ್ಲಿ ಸಾಧ್ಯವು ಅಪ್ರಸಿದ್ಧವಾಗುವುದು ಎಂದು ಭಾವ.
2. 'ಪೃಥಿವೀ ನ ಭವತಿ' ಎನ್ನುವ ಸಾಧ್ಯಾಂಶದ ಅರಿವೇ ಇಲ್ಲದಿರುವುದರಿಂದ ಎಂದು ಭಾವ.

ತೇಜೋರೂಪವಾದ ವಸ್ತುವಿನಲ್ಲಿ ಪ್ರತ್ಯಕ್ಷದಿಂದಲೇ ಜ್ಞಾತವಾದುದರಿಂದ[1]. ಪ್ರಕೃತದಲ್ಲಿ (ದೃಶ್ಯತ್ವ, ಪಟತ್ವ, ಭೇದತ್ವ ಆತ್ಮತ್ವ ಶರೀರತ್ವ ಮುಂತಾದ ಅನುಮಾನಗಳಲ್ಲಿ) ಹಾಗಿಲ್ಲ[2]. ಇದು ಹಾಗಲ್ಲ, ಯಾವುದು ಇಲ್ಲದೇ ಯಾವುದರ ಉತ್ಪತ್ತಿಯೇ ಆಗುವದಿಲ್ಲವೋ ಅದು ಉಪಜೀವ್ಯ[3]. ಇದಾದರೋ (ಈ ಉಪಜೀವ್ಯತ್ವವಾದರೋ, ಅನುಮಾನದಲ್ಲಿ ಘಟಕವಾದ) ಸಾಧ್ಯರೂಪ ಧರ್ಮದ, ಪ್ರತಿಯೋಗಿಯ ಗ್ರಾಹಕವಾದರೆ ಮಾತ್ರ ಎಂದು ನಿಯಮವಿಲ್ಲ. ಮತ್ತೆ ಧರ್ಮಿ (ಪಕ್ಷ), ಸಾಧ್ಯ, ಹೇತು, ವ್ಯಾಪ್ತಿ ಮುಂತಾದ (ಅನುಮಾನದ ಅವಯವಗಳ) ಗ್ರಾಹಕಕ್ಕೂ ಸಹ (ಉಪಜೀವ್ಯತ್ವವು ಇದೆ). ಆ ವಿರೋಧವು ಪ್ರಕೃತದಲ್ಲಿ (ದೃಶ್ಯತ್ವಾದಿ ಅನುಮಾನಗಳಿಗೆ) ಇದೆ[4], ಅನುಮಾನವು ಪ್ರತ್ಯಕ್ಷಕ್ಕೆ ಹೇಗೆ ಬಾಧಕವಾದೀತು? ಎಂಬ ಅಭಿಪ್ರಾಯದಿಂದ, ಹೇಳಿದ ಅತಿಪ್ರಸಂಗಕ್ಕೆ

---

1. 'ತೇಜೋರೂಪಾವಯವಿನಃ ಅನುಷ್ಣಾಃ ಕೃತಕತ್ವಾತ್ ಘಟವತ್' ಎಂಬ ಅನುಮಾನದಲ್ಲಿ ಸಾಧ್ಯವಾದ ಅನುಷ್ಣತ್ವದ ಅರಿವಾಗಬೇಕಾದಲ್ಲಿ, ಅದರ ಪ್ರತಿಯೋಗಿಯಾದ ಉಷ್ಣತ್ವದ ಅರಿವು ಆ ಮೊದಲು ಅಗತ್ಯವಾಗಿದೆ. ಎಲ್ಲಿ ಉಷ್ಣತ್ವಾಭಾವವನ್ನು ಸಾಧಿಸಲಾಗುವುದೋ ಅಲ್ಲಿಯೇ-ಪಕ್ಷದಲ್ಲಿಯೇ ಆ ಮೊದಲು ಉಷ್ಣತ್ವದ ಅರಿವಾಗಿರುವುದರಿಂದ ಅನುಷ್ಣತ್ವಾನುಮಾನವು ಅಪ್ರಮಾಣವಾಗಿದೆ ಎಂದು ಶಾಸ್ತ್ರದಲ್ಲಿ ತಿಳಿಸಲಾಗಿದೆ. ಈ ಅನುಮಾನದಂತೆ ಪ್ರಸಕ್ತವಾದ 'ಪೃಥವೀ ನ' ಎಂಬ ಅನುಮಾನವು ಅಪ್ರಾಮಾಣ್ಯವನ್ನು ಹೊಂದುವುದು ಎಂದು ಭಾವ.

2. 'ಅಗ್ನಿರನುಷ್ಣಃ' ಅಥವಾ 'ಗನ್ಧವದ್‌ದ್ರವ್ಯಂ ಪೃಥಿವೀ ನ' ಈ ಮುಂತಾದ ಅನುಮಾನಗಳಲ್ಲಿ ಸಾಧ್ಯಗಳಾದ ಉಷ್ಣತ್ವಾಭಾವದ ಮತ್ತು ಪೃಥಿವೀಭೇದದ ಅರಿವಿಗಾಗಿ ಪ್ರತಿಯೋಗಿಯ ಅರಿವು ಅಗತ್ಯ. ಅದಾದರೋ ಪಕ್ಷದಲ್ಲೇ ಆಗುವುದು, ಹಾಗಾಗಿ ಈ ಅನುಮಾನಗಳಿಗೆ ಉಪಜೀವ್ಯಪ್ರಮಾಣದ ವಿರೋಧವಿದೆ. ಇದರಂತೆ ದೃಶ್ಯತ್ವಾದಿ ಅನುಮಾನಗಳಿಗೆ ಉಪಜೀವ್ಯಪ್ರಮಾಣದ ವಿರೋಧವು ಇಲ್ಲ ಎಂದು ಭಾವ.

3. ವಿಶ್ವಮಿಥ್ಯಾತ್ವವನ್ನು ಸಾಧಿಸುವ ಈ ದೃಶ್ಯತ್ವಾದಿ ಅನುಮಾನಗಳೂ ಉಪಜೀವ್ಯಮಾನದಿಂದ ವಿರುದ್ಧವಾಗಿವೆ. ವಿಶ್ವದಲ್ಲಿ ಸೇರಿದ ಪುಣ್ಯ-ಪಾಪ ಮುಂತಾದ ಅತೀಂದ್ರಿಯ ಪದಾರ್ಥಗಳ ಅರಿವು ನಮಗೆ ವೇದದಿಂದಲೇ ಪ್ರಾಪ್ತವಾಗುವುದು. ಇಂತಹ ಅತೀಂದ್ರಿಯವಸ್ತುಗಳನ್ನು ಉದ್ದೇಶಿಸಿ ಪ್ರವೃತ್ತವಾದ ಅನುಮಾನಾದಿಗಳಿಗೆ ವೇದವೇ ಉಪಜೀವ್ಯ ಎಂದು ಭಾವ.

4. 'ವಿಮತಾಃ ಜೀವಾಃ ಪರಮಾತ್ಮನಃ ಅಭಿನ್ನಾಃ ಚೇತನತ್ವಾತ್' ಈ ಮುಂತಾದ ಅನುಮಾನಗಳಲ್ಲಿ ಪಕ್ಷನಾದ ಜೀವಿಯ ಅರಿವು ಸಾಕ್ಷಿಯಿಂದಲೇ ಆಗಬೇಕು. ಆ ಸಾಕ್ಷಿಯಾದರೋ ಜೀವಿಯನ್ನು ಅಲ್ಪಜ್ಞತ್ವಾದಿ ಗುಣವಿಶಿಷ್ಟ ಎಂದೇ ಗ್ರಹಿಸಿರುತ್ತದೆ. ಹಾಗಾಗಿ 'ಪರಮಾತ್ಮನಿಂದ ಅಭಿನ್ನ' ಎನ್ನುವುದು ಧರ್ಮಿಗ್ರಾಹಕಸಾಕ್ಷಿಪ್ರತ್ಯಕ್ಷಕ್ಕೆ ವಿರುದ್ಧವಾಗಿದೆ ಎಂದು ಭಾವ.

ವಿಪರ್ಯಯದಲ್ಲಿ ಪರ್ಯವಸಾನವನ್ನು ಹೇಳುತ್ತಾರೆ 'ಅತಃ' ಎಂದು. ದೃಷ್ಟಸ್ಯ ಎನ್ನುವದು ಭಾವಾರ್ಥಕ 'ಕ್ತ' ಪ್ರತ್ಯಯವನ್ನು ಹೊಂದಿದೆ 'ಪ್ರತ್ಯಕ್ಷ' ಎಂದು ಅರ್ಥ[1]. ಅಥವಾ ಭ್ರಾನ್ತಿತ್ವಂ- ಭ್ರಾಂತಿಕಲ್ಪಿತತ್ವ (ಎಂದು ಅರ್ಥ)[2]. ಯಾವಾಗ ಕೇವಲ ಪ್ರತ್ಯಕ್ಷವಿರುದ್ಧವಾದುದರಿಂದಲೇ ಅನುಮಾನಕ್ಕೆ ಅಪ್ರಾಮಾಣ್ಯ ಎಂದಾದಲ್ಲಿ, ಇನ್ನು ಸರ್ವಪ್ರಮಾಣವಿರುದ್ಧವಾದುದರಿಂದ ಪ್ರಮಾಣಬಾಧ ಎಂದು ಹೇಳಬೇಕೆ? ಎಂದು ಉಪಸಂಹಾರವನ್ನು ಮಾಡುತ್ತಾರೆ **'ಅತಃ'** ಎಂದು. **'ನಿತರಾಂ'** ಎನ್ನುವದಕ್ಕೆ 'ಶಂಕೆಗೆ ಆಸ್ಪದವಿಲ್ಲದೆ' ಎಂದು ಅರ್ಥ.

### ಭೇದಾಭಾವಾದಿಸಾಧಕಾನುಮಗಳಿಗೆ ಸಂವಾದವಿಲ್ಲ

**ನನ್ವಸ್ತ್ಯತ್ರ ವ್ಯವಸ್ಥಾ । ಶುಷ್ಕತರ್ಕಮಾತ್ರಮುಪಜೀವ್ಯೇನ ಬಾಧ್ಯತೇ । ಪ್ರಮಾಣಾನುಕೂಲಸ್ತು ಅನುಮಾನಮೇವೋಪಜೀವ್ಯಂ ಬಾಧತೇ । ತತ್ರ ಪ್ರಸಕ್ತಿಹೇತುತ್ವೇನೋಪಜೀವ್ಯಸ್ಯ ಪ್ರಾಮಾಣ್ಯಾನಪೇಕ್ಷಣಾತ್ । ಪ್ರತೀತಿ-ಮಾತ್ರೇಣ ಚಾಶ್ರಯತ್ವೋಪಪತ್ತೇಃ । ಪ್ರಕೃತಂ ಚಾನುಮಾನಜಾತಮ್ ಆಗಮಾನುಕೂಲಮಿತಿ । ಮೈವಂ, ತತ್ವಮಸೀತ್ಯಾದ್ಯಾಗಮಾನಾಂ ಐಕ್ಯಪರತ್ವಸ್ಯ ನಿರಾಕೃತತ್ವಾತ್ ।**

ಸರಿ, ಇಲ್ಲಿ (ಉಪಜೀವ್ಯ-ಉಪಜೀವಕಗಳಲ್ಲಿ ಬಾಧ್ಯ-ಬಾಧಕತ್ವದ ವಿಷಯದಲ್ಲಿ ಈ ರೀತಿಯಲ್ಲಿ) ವ್ಯವಸ್ಥೆಯು ಇದೆ. ಶುಷ್ಕತರ್ಕವು (ಸಂವಾದ ರಹಿತವಾದ ಅನುಮಾನವು) ಮಾತ್ರ ಉಪಜೀವ್ಯದಿಂದ ಬಾಧಿತವಾಗುವುದು. (ಇತರ) ಪ್ರಮಾಣಗಳ ಸಂವಾದದಿಂದ ಯುಕ್ತವಾದ ಅನುಮಾನವಾದರೋ ಉಪಜೀವ್ಯವನ್ನೇ ಬಾಧಿಸುವುದು. ಅಲ್ಲಿ (ಉಪಜೀವಕ ಪ್ರಮಾಣಕ್ಕೆ ವಿಷಯದ)

---

1. ಮೂಲದಲ್ಲಿ 'ದೃಷ್ಟಸ್ಯ ಭ್ರಾಂತಿತ್ವಮ್' ಎಂದಿದೆ. ಭ್ರಾಂತಿತ್ವವು ಜ್ಞಾನದ ಧರ್ಮ. ದೃಷ್ಟಸ್ಯ- ಪರಿದೃಶ್ಯಮಾನವಾದ ಪದಾರ್ಥದ ಎಂದು ಅರ್ಥ. ಈ ಪದಗಳು ನಿರನ್ವಯವಾಗಿವೆ, ತನ್ನಿಮಿತ್ತವಾಗಿ ದೃಷ್ಟಸ್ಯ ಎನ್ನುವ ಪದದಲ್ಲಿ ಘಟಕವಾದ 'ಕ್ತ' ಪ್ರತ್ಯಯವು ಭಾವಾರ್ಥದಲ್ಲಿದೆ ಎಂದು ತಿಳಿಸಿದರು. ದೃಷ್ಟಸ್ಯ- ಪ್ರತ್ಯಕ್ಷಾತ್ಮಕಜ್ಞಾನಸ್ಯ ಎಂದು ಅರ್ಥವು ಪ್ರಾಪ್ತವಾಗಲಾಗಿ ಅನ್ವಯವು ಸಮಂಜಸವಾಗುವುದು ಎಂದು ಭಾವ.

2. ಭ್ರಾಂತಿತ್ವ ಶಬ್ದಕ್ಕೆ ಭ್ರಾಂತಿಕಲ್ಪಿತತ್ವ ಎಂದು ಅರ್ಥಸಿದ್ದರಿಂದ, 'ದೃಷ್ಟಸ್ಯ' ಎನ್ನುವ ಶಬ್ದವು ಕರ್ಮಾರ್ಥಕ 'ಕ್ತ'ಪ್ರತ್ಯಯಾಂತ ಶಬ್ದ ಎಂದೇ ಭಾವಿಸಿ 'ಪರಿದೃಶ್ಯಮಾನವಾದ ಪದಾರ್ಥದ' ಎನ್ನುವ ಪ್ರಸಿದ್ಧ ಅರ್ಥವನ್ನೇ ಪರಿಗ್ರಹಿಸಬಹುದು ಎಂದು ಭಾವ.

ಪ್ರಸಕ್ತಿಗೆ (ಮಾತ್ರ) ಕಾರಣವಾಗಿರುವುದರಿಂದ ಉಪಜೀವ್ಯಕ್ಕೆ ಪ್ರಾಮಾಣ್ಯದ ಅಪೇಕ್ಷೆಯಿರುವದಿಲ್ಲ. (ಪ್ರಮಾಣಭೂತವಲ್ಲದ್ದು ಹೇಗೆ ಉಪಜೀವ್ಯವಾ-ಗುವುದು? ಎಂದು ಸಂದೇಹಿಸಿ ಉತ್ತರಿಸುವರು. ಉಪಜೀವಕಕ್ಕೆ ವಿಷಯದ) ಪ್ರತೀತಿಯ ಮಾತ್ರದಿಂದಲೇ (ಪ್ರತ್ಯಕ್ಷಾದಿಗಳಿಗೆ) ಆಶ್ರಯತ್ವವು ಉಪಪನ್ನ-ವಾಗುವುದು. ಪ್ರಕೃತದಲ್ಲಿನ ಅನುಮಾನಗಳಾದರೋ (ದೃಶ್ಯತ್ವಾದಿ ಅನುಮಾನಗಳು, ತತ್ತ್ವಮಸಿ, ನೇಹ ನಾನಾಸ್ತಿ ಕಿಞ್ಚನ, ಮುಂತಾದ) ಆಗಮಗಳ ಸಂವಾದವನ್ನು ಹೊಂದಿವೆ ಎಂದು. ಇದು ಸರಿಯಲ್ಲ, 'ತತ್ತ್ವಮಸಿ' ಈ ಮುಂತಾದ ಆಗಮಗಳು ಐಕ್ಯಪರ ಎನ್ನುವುದನ್ನು ನಿರಾಕರಿಸಿರುವುದರಿಂದ[1].

-: ಪ್ರತ್ಯಕ್ಷಪ್ರಾಬಲ್ಯವಾದವು ಸಮಾಪ್ತ :-

## ॥ ಅದ್ವೈತಿಗಳ ಅನಿರ್ವಚನೀಯವು ಅಪ್ರಮಿತ ॥

ಈ ವಿಶ್ವವು ಸದಸದ್ವಿಲಕ್ಷಣವು ಎಂದು ಅದ್ವೈತಿಗಳು ವಾದಿಸುವರು. ಇದಕ್ಕೆ ಪ್ರಾಮಾಣವು ಅರ್ಥಾಪತ್ತಿ ಎಂದು ತಿಳಿಸಿರುತ್ತಾರೆ. ಆದರೆ ಅಸದ್ವೈಲಕ್ಷಣ್ಯವನ್ನು ಯಾವ ಪ್ರಮಾಣವೂ ತಿಳಿಸಲಾರದು ಎನ್ನುತ್ತಾರೆ ಆಚಾರ್ಯರು. ಆಚಾರ್ಯರ ಹೊತಾಗಿ ಮತ್ತಾರೂ ಅಸತ್ತಿಗೆ ಭಾನವನ್ನು ಒಪ್ಪಿಲ್ಲ. ಈ ಜಗವು ಅಸದ್ವಿಲಕ್ಷಣ ಎಂದು ತಿಳಿಯಬೇಕಾದಲ್ಲಿ ಪ್ರತಿಯೋಗಿಯಾದ ಅಸತ್ತಿಗೆ ಭಾನವನ್ನು ಒಪ್ಪಬೇಕಲ್ಲವೇ? ಇದೊಂದು ಉತ್ತರಿಸಲಾಗದ ಪ್ರಶ್ನೆ. ಅಸತ್ತು ಭಾನವಾಗುವುದು ಎಂದಲ್ಲಿ ಈ ಜಗವು ಅಸತ್ತೇ ಆಗಿರಬಹುದು, ಭಾನವಿಲ್ಲ ಎಂದಲ್ಲಿ ಅನಿರ್ವಚನೀಯಕ್ಕೆ ಪ್ರಮಾಣವಿಲ್ಲ ಎಂದಾಗುವುದು. ಇಂತಹ ಮೂಲಭೂತ ಸಂದೇಹಕ್ಕೆ ಪರವಾದದಲ್ಲಿ ಉತ್ತರವಿಲ್ಲ ಎಂದು ತಿಳಿಸಿರುತ್ತಾರೆ.

---

1. ಪ್ರಮಾಣಸಂವಾದವನ್ನು ಹೊಂದಿರುವ ಅನುಮಾನವು ಉಪಜೀವ್ಯವನ್ನೇ ನಿರಾಕರಿಸುವುದು, ದೃಶ್ಯತ್ವಾದ್ಯನುಮಾನಗಳಿಗೆ ತತ್ತ್ವಮಸಿ ಮುಂತಾದ ಆಗಮಗಳ ಸಂವಾದವಿದೆ ಆದುದರಿಂದ ಉಪಜೀವ್ಯವಾದ ಪ್ರತ್ಯಕ್ಷವನ್ನೇ ಬಾಧಿಸುತ್ತದೆ ಎಂದು ಹೇಳಲಾಗದು. 'ತತ್ತ್ವಮಸಿ ಮುಂತಾದ ಆಗಮಗಳಿಗೆ ಜೀವೇಶ್ವರೈಕ್ಯದಲ್ಲಿ ತಾತ್ಪರ್ಯವಿಲ್ಲ' ಎಂದು ಈ ಹಿಂದೆಯೇ ತಿಳಿಸಲಾಗಿದೆ. ದೃಶ್ಯತ್ವಾದಿ ಅನುಮಾನಗಳು ಸಂವಾದಪ್ರಮಾಣವನ್ನು ಹೊಂದಿರದ ಪ್ರಯುಕ್ತ, ಕೇವಲ ಶುಷ್ಕತರ್ಕ. ಶುಷ್ಕತರ್ಕವು ಉಪಜೀವ್ಯವನ್ನು ಬಾಧಿಸಲಾರದು ಎಂದು ನೀವೇ ತಿಳಿಸಿರುವಿರಿ ಎಂದು ಭಾವ.

**ಸದಸದ್ವೈಲಕ್ಷಣ್ಯವು ಪ್ರಮಿತವಲ್ಲ**

**ನ ಚ ಪರಮಾರ್ಥತೋ ಭೇದಾಭಾವೋ ವ್ಯಾವಹಾರಿಕಃ ಸೋಽಸ್ತೀತಿ ವಾಚ್ಯಮ್ । ಸದಸದ್ವೈಲಕ್ಷಣ್ಯೇ ಪ್ರಮಾಣಾಭಾವಾತ್ ।**

ಪಾರಮಾರ್ಥಿಕವಾಗಿ ಭೇದವು ಇಲ್ಲ, (ಇನ್ನು ಅನುಮಾನದಿಂದ ಪ್ರತ್ಯಕ್ಷದಿಂದ ಗೃಹೀತವಾದ) ಅದು (ಆ ಭೇದವು) ವ್ಯಾವಹಾರಿಕವಾಗಿದೆ ಎಂದು ಹೇಳುವುದು ತರವಲ್ಲ. ಸದಸದ್ವೈಲಕ್ಷಣ್ಯದಲ್ಲಿ (ವ್ಯಾವಹಾರಿಕಸತ್‌ನಲ್ಲಿ) ಪ್ರಮಾಣವು ಇಲ್ಲದಿರುವುದರಿಂದ.

ನನ್ವಸ್ತು ಪ್ರತ್ಯಕ್ಷಾದಿಕಮುಪಜೀವ್ಯಮ್ । ತಥಾಽಪಿ ನೋಕ್ತಾನುಮಾನಜಾತಸ್ಯಾಪ್ರಾಮಾಣ್ಯಂ, ಭಿನ್ನವಿಷಯತ್ವೇನ ವಿರೋಧಾಭಾವಾತ್ । ಭೇದಪ್ರಪಞ್ಚಸ್ಯ ಹಿ ಪಾರಮಾರ್ಥಿಕಂ ಸತ್ವಮಸ್ಮಾಭಿರ್ನಾಙ್ಗೀಕ್ರಿಯತೇ, ವ್ಯಾವಹಾರಿಕಂ ತ್ವಙ್ಗೀಕ್ರಿಯತ ಏವ । ತತ್ರ 'ಉಕ್ತಾನುಮಾನಜಾತಂ ಭೇದಪ್ರಪಞ್ಚಸ್ಯ ವ್ಯಾವಹಾರಿಕೀಂ ಸತ್ತಾಮನುಪಮೃದ್ಯ ಪಾರಮಾರ್ಥಿಕಸತ್ತಾಪ್ರತಿಷೇಧಪರಮ್ । ಪ್ರತ್ಯಕ್ಷಾದಿಕಂ ತು ವ್ಯಾವಹಾರಿಕೀಂ ಸತ್ತಾಂ ಗೋಚರಯತಿ' ಇತಿ । ಅಪೃಥಿವೀತ್ವಾದ್ಯನುಮಾನಂ ಪ್ರತ್ಯಕ್ಷಂ ಚೋಭಯಮಪಿ 'ಅಪಾರಮಾರ್ಥವಿಷಯಮ್' ಇತಿ ಯುಕ್ತಸ್ತತ್ರ ಬಾಧ್ಯಬಾಧಕಭಾವ ಇತ್ಯಭಿಪ್ರಾಯೇಣಾಽಽಶಙ್ಕ್ಯ ಪ್ರತಿಷೇಧತಿ 'ನ ಚ' ಇತಿ । **ಭೇದಾಭಾವಃ** 'ಸೋಽನುಮಾನಸಾಧ್ಯಃ' ಇತಿ ಶೇಷಃ । **ಸಃ**- ಭೇದಃ **ಅಸ್ತಿ** 'ಪ್ರತ್ಯಕ್ಷಾದೇಃ ವಿಷಯಃ' ಇತಿ ಶೇಷಃ । ಕುತೋ ನ ವಾಚ್ಯಮ್? ಇತಿ ಚೇತ್, ಪ್ರತ್ಯಕ್ಷಾದೇರಪಿ ಭೇದಪ್ರಪಞ್ಚಸ್ಯ ಪರಮಾರ್ಥಸತ್ವವಿಷಯತ್ವಾತ್ ।

ತದಪಿ ಕುತಃ? ಇತಿ ಚೇತ್ ಪರಿಶೇಷಾತ್- ಭೇದಪ್ರಪಞ್ಚಂ ಗೋಚರಯತೋ ಹಿ ಪ್ರತ್ಯಕ್ಷಾದೇಃ ಪರಮಾರ್ಥಸನ್ ವಾಽಸೌ ವಿಷಯೋ ಭವೇತ್, ಅಸನ್ವಾ ಸದಸದ್ವಿಲಕ್ಷಣಾನಿರ್ವಚನೀಯೋ ವಾ । ತತ್ರಾನಿರ್ವಚನೀಯಾಸತ್‌ಪಕ್ಷಯೋಃ ಪ್ರತಿಷೇಧೇ ಪರಮಾರ್ಥಸದ್ವಿಷಯತ್ವಮೇವ ಪರಿಶೇಕ್ಷ್ಯತಿ ಇತ್ಯಾಶಯವಾನ್ ಸದಸದ್ವೈಲಕ್ಷಣ್ಯಾನುಪಪತ್ತೌ ತಾವದ್ಧೇತುಮಾಹ '**ಸದಸತ್**' ಇತಿ । 'ಭೇದಪ್ರಪಞ್ಚಸ್ಯ' ಇತಿ ಶೇಷಃ । ಸದಸದ್ವೈಲಕ್ಷಣ್ಯಂ ನಾಮ ಸತ್ವೇನಾಸತ್ವೇನ ಚ ರಹಿತತ್ವಮ್ ।

**ದೃಶ್ಯತ್ವಾದಿಹೇತುಭಿಃ ವಿಯದಾದಿಪ್ರಪಞ್ಚಸ್ಯ ಸದಸದ್ವೈಲಕ್ಷಣ್ಯಸಾಧನಾತ್ ಕಥಂ ತತ್ರ ಪ್ರಮಾಣಾಭಾವ? ಇತಿ ಚೇನ್ನ, ದೃಷ್ಟಾನ್ತಾಭಾವೇನ ವ್ಯಾಪ್ತ್ಯಸಿದ್ಧೇಃ । ಶುಕ್ತಿರಜತಾದಿಕಂ ದೃಷ್ಟಾನ್ತ ಇತಿ ಚೇನ್ನ । ಕುತಃ? ಇತ್ಯತ ಆಹ 'ಸದಸದ್ವೈಲಕ್ಷಣ್ಯೇ' ಇತಿ । 'ಶುಕ್ತಿರಜತಾದೇಃ' ಇತಿ ಶೇಷಃ ।**

ಸರಿ, ಪ್ರತ್ಯಕ್ಷಾದಿಗಳು ಉಪಜೀವ್ಯ ಎನ್ನುವುದು ಇರಲಿ. ಆದರೂ ಉಕ್ತವಾದ ಅನುಮಾನಸಮೂಹಕ್ಕೆ (ದೃಶ್ಯತ್ವಾದಿ ಅನುಮಾನಗಳಿಗೆ ಉಪಜೀವ್ಯವಾದ ಪ್ರತ್ಯಕ್ಷಾದಿಗಳ ವಿರೋಧವು ಇದ್ದರೂ) ಅಪ್ರಾಮಾಣ್ಯವು ಇಲ್ಲ, ಭಿನ್ನವಿಷಯವಾದುದರಿಂದ ವಿರೋಧವಿಲ್ಲ. (ಪ್ರತ್ಯಕ್ಷಕ್ಕೂ ದೃಶ್ಯತ್ವಾದಿ ಅನುಮಾನಕ್ಕೂ ವಿರೋಧವಿಲ್ಲ ಎನ್ನುವುದನ್ನು ಸ್ಫುಟಗೊಳಿಸುವರು) ಭೇದಪ್ರಪಂಚಕ್ಕಾದರೋ ಪಾರಮಾರ್ಥಿಕವಾದ ಸತ್ವವನ್ನು ನಾವು ಒಪ್ಪಿರುವುದಿಲ್ಲ, ಆದರೆ ವ್ಯಾವಹಾರಿಕ(ಸತ್ವವನ್ನು)ವನ್ನು ಒಪ್ಪಲಾಗಿದೆ. ಅಲ್ಲಿ (ಪ್ರಸಕ್ತವಾದವುಗಳಲ್ಲಿ) ಅನುಮಾನಗಳು ಭೇದಪ್ರಪಂಚಕ್ಕೆ ವ್ಯಾವಹಾರಿಕ ಸತ್ತಾವನ್ನು ನಿರಾಕರಿಸದೆ, ಪಾರಮಾರ್ಥಿಕಸತ್ತಾವನ್ನು ಮಾತ್ರ ನಿಷೇಧಿಸುತ್ತದೆ. ಪ್ರತ್ಯಕ್ಷಾದಿಗಳಾದರೋ ವ್ಯಾವಹರಿಕ ಸತ್ತಾವನ್ನು ತಿಳಿಸುತ್ತದೆ. (ಹಿಂದೆ ತಿಳಿಸಿದ) ಅಪೃಥಿವೀತ್ವಾತ್ ಮುಂತಾದ ಅನುಮಾನವು, (ಪೃಥಿವಿಯನ್ನು ಸಾಕ್ಷಾತ್ಕರಿಸುವ) ಪ್ರತ್ಯಕ್ಷ ಎರಡೂ ಸಹ ಅಪಾರಮಾರ್ಥಿಕವಿಷಯಕಗಳು ಎಂದು, ಅಲ್ಲಿ ಬಾಧ್ಯ-ಬಾಧಕತ್ವವು ಯುಕ್ತ ಎಂಬ ಅಭಿಪ್ರಾಯದಿಂದ ಶಂಕಿಸಿ ನಿಷೇಧಿಸುತ್ತಾರೆ '**ನ ಚ**' ಎಂದು. '**ಭೇದಾಭಾವಃ**' (ಎನ್ನುವದಕ್ಕೆ ವಿಶೇಷಣವಾಗಿ) 'ಸೋಽನುಮಾನಸಾಧ್ಯಃ' ಎಂದು ಶೇಷಪೂರಣಮಾಡಿಕೊಳ್ಳುವುದು. **ಸಃ-ಭೇದಃ ಅಸ್ತಿ**, (ಭೇದಃ ಎನ್ನುವದಕ್ಕೆ ವಿಶೇಷಣವಾಗಿ) 'ಪ್ರತ್ಯಕ್ಷವಿಷಯಃ' ಎಂದು ಶೇಷಪೂರಣಮಾಡಿಕೊಳ್ಳುವುದು[1]. ಏಕೆ ಹೇಳಬಾರದು? ಎಂದಲ್ಲಿ, ಪ್ರತ್ಯಕ್ಷಾದಿಗಳು ಭೇದಾತ್ಮಕ ಪ್ರಪಂಚಕ್ಕೆ ಪರಮಾರ್ಥಸತ್ವವನ್ನು ತಿಳಿಸುತ್ತಿರುವುರದರಿಂದ.

1. ಒಟ್ಟಿನಲ್ಲಿ ಮೂಲದ ಅರ್ಥವು- ಅನುಮಾನವೇದ್ಯವಾದ ಭೇದಾಭಾವವು ಪಾರಮಾರ್ಥಿಕವಾದದ್ದು, ಆ ಪ್ರತ್ಯಕ್ಷಕ್ಕೆ ವಿಷಯವಾದ (ಪ್ರಪಂಚದಲ್ಲಿ ತೋರುತ್ತಿರುವ) ಭೇದವೂ ವ್ಯಾವಹಾರಿಕವಾದದ್ದು. ಆದುದರಿಂದ ಅನುಮಾನ ಮತ್ತು ಪ್ರತ್ಯಕ್ಷವು ಭಿನ್ನವಿಷಯಕಗಳಾಗಿವೆ, ಪರಸ್ಪರ ವಿರೋಧವಿಲ್ಲ ಎಂದು ಹೇಳಬಾರದು ಎಂದು.

ಅದಾದರೂ (ಪ್ರತ್ಯಕ್ಷಾದಿಗಳು ಪ್ರಪಂಚಕ್ಕೆ ಪರಮಾರ್ಥಸತ್ತ್ವವನ್ನು ತಿಳಿಸುತ್ತವೆ ಎನ್ನುವುದು) ಏತರಿಂದ (ತಿಳಿಯಲಾಗುವುದು)? ಎಂದಲ್ಲಿ ಪರಿಶೇಷದಿಂದ (ತಿಳಿಯುವುದು). ಭೇದಪ್ರಪಂಚವನ್ನು ಗ್ರಹಿಸುತ್ತಿರುವ ಪ್ರತ್ಯಕ್ಷಾದಿಗಳಿಗೆ, ಈ ಪ್ರಪಂಚವು ಪರಮಾರ್ಥಸತ್‌ಆಗಿ, ಅಥವಾ ಅಸತ್‌ಆಗಿ, ಅಥವಾ ಸದಸದ್ವಿಲಕ್ಷಣವಾಗಿಯೋ ವಿಷಯವಾಗಬೇಕು. ಅವುಗಳಲ್ಲಿ (ಈ ಮೂರು ಪಕ್ಷಗಳಲ್ಲಿ) ಅನಿರ್ವಚನೀಯ,ಅಸತ್ ಪಕ್ಷಗಳನ್ನು ನಿಷೇಧಿಸಲಾಗಿ, ಪರಿಶಿಷ್ಟವಾದ ಪರಮಾರ್ಥಸತ್ತನ್ನೇ ವಿಷಯೀಕರಿಸುವುದು ಎಂಬ ಅಭಿಪ್ರಾಯದಿಂದ, ಸದಸದ್ವೈಲಕ್ಷಣ್ಯ ಪಕ್ಷದ ಅನುಪಪತ್ತಿಗೆ ಕಾರಣವನ್ನು ತಿಳಿಸುತ್ತಾರೆ **'ಸದಸದ್..'** ಎಂದು. 'ಭೇದಪ್ರಪಞ್ಚಸ್ಯ' ಎಂದು ಶೇಷಪೂರಣ ಮಾಡಿಕೊಳ್ಳುವುದು. ಸದಸದ್ವೈಲಕ್ಷಣ್ಯ ಎಂದರೆ ಸತ್‌ಆಗಿ ಯಾಗಲಿ, ಅಸತ್‌ಆಗಿ ಯಾಗಲಿ ಇಲ್ಲದಿರುವಿಕೆ ಎಂದು. ವಿಯದಾದಿ ಪ್ರಪಂಚಕ್ಕೆ ದೃಶ್ಯತ್ವಾದಿ ಹೇತು-ಗಳಿಂದ ಸದಸದ್ವೈಲಕ್ಷಣ್ಯವನ್ನು ಸಾಧಿಸುವುದರಿಂದ ಅಲ್ಲಿ (ಸದಸದ್ವೈಲಕ್ಷಣ್ಯದ ವಿಷಯದಲ್ಲಿ) ಏಕೆ ಪ್ರಮಾಣ ಇಲ್ಲ (ಎನ್ನುವಿರಿ)? ಅನ್ನುವುದು ತರವಲ್ಲ, (ದೃಶ್ಯತ್ವಾದಿ ಅನುಮಾನಗಳಿಗೆ) ದೃಷ್ಟಾನ್ತವೇ ಇಲ್ಲದಿರುವುದರಿಂದ ವ್ಯಾಪ್ಯತ್ವಾಸಿದ್ಧಿ ರೂಪ ದೋಷವು ಇರುವುದರಿಂದ. ಶುಕ್ತಿರಜತಾದಿಗಳು ಉದಾಹರಣೆ ಎಂದು ಹೇಳುವುದು ತರವಲ್ಲ, ಏಕೆ? ಎಂದರೆ ತಿಳಿಸುತ್ತಾರೆ **'ಸದಸದ್ವೈಲಕ್ಷ್ಯಣ್ಯೇ'** ಎಂದು. 'ಶುಕ್ತಿರಜತಾದೇಃ' ಎಂದು ಶೇಷಪೂರಣ ಮಾಡಿಕೊಳ್ಳುವುದು[1].

**ಸದಸದ್ವೈಲಕ್ಷ್ಯಣ್ಯದ ವಿಷಯದಲ್ಲಿ ಅರ್ಥಾಪತ್ತಿಯು ಮಾನವಾಗಲಾರದು**

**ಅಸತಃ ಖ್ಯಾತ್ಯಯೋಗಾದಿತಿ ವದತಃ ಖ್ಯಾತಿರಭೂನ್ನ ವಾ । ಯದಿ ನಾಭೂತ್ ನ ತತ್ಖ್ಯಾತಿನಿರಾಕರಣಮ್ । ಯದ್ಯಭೂತ್ ತಥಾಽಪಿ ।**

1. 'ಸದಸದ್ವೈಲಕ್ಷ್ಯಣ್ಯೇ ಪ್ರಮಾಣಾಭಾವಾತ್' ಎನ್ನುವ ವಾಕ್ಯವನ್ನು ಎರಡು ವಿಧದಲ್ಲಿ ವ್ಯಾಖ್ಯಾನಿಸಲಾಗಿದೆ. 'ಭೇದಪ್ರಪಞ್ಚಸ್ಯ' ಮತ್ತು 'ಶುಕ್ತಿರಜತಾದೇಃ' ಎಂದು ಶೇಷಗಳನ್ನು ಪೂರಣಮಾಡಿಕೊಳ್ಳುವದರಿಂದ. ಅ- 'ಭೇದಾತ್ಮಕ ಪ್ರಪಂಚವು ಸದಸದ್ವಿಲಕ್ಷಣ ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ' ಎಂದು. ಆ- 'ದೃಶ್ಯತ್ವಾದಿ ಅನುಮಾನಗಳಿಗೆ ದೃಷ್ಟಾಂತವಿಲ್ಲದಿರುವದರಿಂದ ವ್ಯಾಪ್ಯತ್ವಾಸಿದ್ಧ. ಶುಕ್ತಿರಜತವೇ ದೃಷ್ಟಾಂತವಾಗಿರುವಾಗ ದೃಶ್ಯತ್ವಾದಿ ಅನುಮಾನವು ವ್ಯಾಪ್ಯತ್ವಾಸಿದ್ಧವು ಹೇಗೆ? ಉತ್ತರಿಸುತ್ತಾರೆ- 'ಶುಕ್ತಿರಜತಾದಿಗಳು ಸದಸದ್ವಿಲಕ್ಷಣವೆನ್ನುವ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲದಿರುವುದರಿಂದ' ಎಂದು ಭಾವ.

'ಅಸತ್ತಿಗೆ ಖ್ಯಾತಿಯು ಇಲ್ಲ' ಎಂದು ಹೇಳುವ ವ್ಯಕ್ತಿಗೆ (ಅಸತ್ತಿನ) ಖ್ಯಾತಿಯು ಇದೆಯೋ ಇಲ್ಲವೋ? ಒಂದು ವೇಳೆ ಇಲ್ಲ ಎಂದಾದಲ್ಲಿ ಅದರ (ಅಸತ್ತಿನ) ಖ್ಯಾತಿಯ ನಿರಾಕರಣವು ಸಲ್ಲದು (ಅಪ್ರಸಕ್ತವಾದದ್ದನ್ನು ನಿರಾಕರಿಸಲಾಗದು). ಒಂದು ವೇಳೆ ಇದೆ ಎಂದಾದಲ್ಲಿ, ಹಾಗಾದರೂ ಸಹ (ನಿರಾಕರಿಸಲಾಗದು, ಪ್ರಮಾಣಪ್ರಮಿತವಾದದ್ದರಿಂದ).

ನನು, ಅಸ್ತ್ಯರ್ಥಾಪತ್ತಿರತ್ರ ಪ್ರಮಾಣಂ । ತಥಾಹಿ- ನ ತಾವತ್ ಶುಕ್ತಿರಜತಾದಿಕಮತ್ಯನ್ತಾಸತ್, ಅಸತಃ ಖ್ಯಾತ್ಯಯೋಗಾತ್, ಅಸ್ಯ ಚ ಖ್ಯಾಯಮಾನತ್ವಾತ್ । ನಾಪಿ ಪರಮಾರ್ಥಸತ್, ಸತೋ ಬಾಧಾಯೋಗಾತ್ ಅಸ್ಯ ಚ ಬಾಧ್ಯಮಾನತ್ವಾತ್ । ಅತಃ 'ಖ್ಯಾತಿ-ಬಾಧಾನ್ಯಥಾಽನುಪಪತ್ತ್ಯಾ ಸದಸದ್ವಿಲಕ್ಷಣಂ ಶುಕ್ತಿರಜತಾದಿಕಮ್' ಇತಿ ಚೇನ್ನ । ಅತ್ಯನ್ತಾಸತ್ವೇನೈವ ಉಪಪತ್ತೇಃ । ನನ್ವಸತಃ ಖ್ಯಾತ್ಯಯೋಗಾತ್ ಖ್ಯಾಯಮಾನಮಿದಂ ನಾಸದ್ ಇತ್ಯುಕ್ತಮಿತ್ಯತೋಽಸತಃ ಖ್ಯಾತಿಮುಪಪಾದಯಿತುಂ ಪೃಚ್ಛತಿ **'ಅಸತಃ'** ಇತಿ । **ಇತಿ ವದತಃ**- 'ಇತ್ಯಸತಃ ಖ್ಯಾತಿಂ ಪ್ರತಿಷೇಧತಃ ಪರಸ್ಯ' ಇತ್ಯರ್ಥಃ। ಖ್ಯಾತ್ಯಭಾವಪಕ್ಷಸ್ಯ ಪರೇಣಾಙ್ಗೀಕೃತತ್ವಾತ್ ತಮೇವಾಽದೌ ನಿರಾಕರೋತಿ **'ಯದಿ ನ'** ಇತಿ । ಯದ್ಯಸತ್, ಪರೇಣ ಕದಾಽಪಿ ನ ಪ್ರತೀತಂ ತದಾ ತಸ್ಯ ಅಸತ್‌ಖ್ಯಾತಿನಿಷೇಧೋ ನ ಯುಜ್ಯತೇ । ಅಸದ್ವಿಶಿಷ್ಟಾ ಖಲು ಖ್ಯಾತಿರ್ನಿರಾಕ್ರಿಯತೇ ? ನ ಚ ವಿಶೇಷಣಾಪ್ರತೀತೌ ವಿಶಿಷ್ಟಪ್ರತೀತಿರಸ್ತಿ । ನ ಚಾಪ್ರತೀತಸ್ಯ ಪ್ರತಿಷೇಧೋ ಯುಜ್ಯತೇ । ಅತಃ ಪರಕೀಯಪ್ರತಿಷೇಧಾ-ನುಪಪತ್ತ್ಯೈವಾಸತಃ ಖ್ಯಾತಿಃ ಸಿಧ್ಯತೀತಿ । ಆದ್ಯಂ ದೂಷಯತಿ **'ಯದಿ'** ಇತಿ । ಅಭೂದಸತಃ ಖ್ಯಾತಿಃ । ತಥಾಽಪಿ ನ ತತ್‌ಖ್ಯಾತಿನಿರಾಕರಣಂ ಯುಜ್ಯತೇ ಸ್ವಕ್ರಿಯಾವಿರೋಧಾತ್ । ತಥಾ ಚ ಅಸತಃ ಖ್ಯಾತಿರನಿವಾರ್ಯಾ ।

ಸರಿ ಅರ್ಥಾಪತ್ತಿಯು ಇಲ್ಲಿ (ಸದಸದ್ವಿಲಕ್ಷಣದಲ್ಲಿ) ಪ್ರಮಾಣವಾಗಿದೆ. ಹೀಗಿದೆ- ಒಟ್ಟಿನಲ್ಲಿ ಶುಕ್ತಿರಜಾದಿಗಳು ಅತ್ಯಂತಾಸತ್ ಅಲ್ಲ, ಅಸತ್ತಿಗೆ ಖ್ಯಾತಿಯು (ಜ್ಞಾನವಿಷಯತ್ವವು) ಇಲ್ಲದಿರುವುದರಿಂದ, ಸತ್ತಿಗೆ ಬಾಧವು ಇಲ್ಲದಿರುವುದರಿಂದ, ಪರಮಾರ್ಥತಃ ಸತ್ಯವೂ ಆಗದು. ಇದಾದರೋ (ಶುಕ್ತಿರಜತವಾದರೋ) ಬಾಧಿತವಾಗಿರುವುದರಿಂದ. ಆದುದರಿಂದ

ಖ್ಯಾತಿ-ಬಾಧಗಳು ಅದಿಲ್ಲದೆ (ಸದಸದ್ವಿಲಕ್ಷಣತ್ವವನ್ನು ಒಪ್ಪದೆ) ಸುಸಂಬದ್ಧವಾಗುವದಿಲ್ಲವಾದುದರಿಂದ ಶುಕ್ತಿರಜತತ್ವಾದಿಗಳಲ್ಲಿ ಸದಸದ್ವಿಲಕ್ಷಣತ್ವವು (ಸಿದ್ಧವಾಗುವುದು) ಎಂದು ಹೇಳಲಾಗದು. ಅತ್ಯಂತಾಸತ್ತನ್ನು (ಒಪ್ಪುವುದರಿಂದಲೇ) ಸುಸಂಬದ್ಧವಾಗುವುದರಿಂದ. ಸರಿ, ಅಸತ್ತಿಗೆ ಖ್ಯಾತಿಯುು ಅಯುಕ್ತವಾಗಿದೆ, ಖ್ಯಾತವಾದ ಇದನ್ನು (ಶುಕ್ತಿರಜತವನ್ನು) ಅಸತ್ ಎನ್ನುವುದು ಅಯುಕ್ತ ಎಂದು ಹೇಳಲಾಗಿದೆ? ಆದುದರಿಂದ ಅಸತ್ತಿಗೆ ಖ್ಯಾತಿಯನ್ನು ಉಪಪಾದಿಸಲು (ಪರವಾದಿಗಳನ್ನು) ಪ್ರಶ್ನಿಸುತ್ತಾರೆ **'ಅಸತಃ'** ಎಂದು. **ಇತಿ ವದತಃ**- 'ಈ ರೀತಿಯಲ್ಲಿ ಅಸತ್ತಿಗೆ ಖ್ಯಾತಿಯನ್ನು ನಿಷೇಧಿಸುತ್ತಿರುವ ಪರವಾದಿಗೆ' ಎಂದು ಅರ್ಥ. ಖ್ಯಾತಿಯು ಇಲ್ಲ ಎನ್ನುವ (ಎರಡನೆಯ) ಪಕ್ಷವನ್ನೇ ಪರರಿಂದ ಒಪ್ಪಲಾಗಿರುವುದರಿಂದ ಅದನ್ನೇ (ಆ ಪಕ್ಷವನ್ನೇ) ಮೊದಲು ನಿರಾಕರಿಸುತ್ತಾರೆ **'ಯದಿ ನ'** ಎಂದು. ಒಂದು ವೇಳೆ ಅಸತ್ತು ಪರವಾದಿಗೆ ಎಂದೂ ಖ್ಯಾತವಾಗಿಲ್ಲ ಎಂದಾದಲ್ಲಿ, ಆಗ ಅಸತ್ತಿನ ಖ್ಯಾತಿಯ ನಿಷೇಧವು ಯುಕ್ತವಾಗದು. ಅಸದ್ವಿಶಿಷ್ಟವಾದ (ವಸ್ತುವಿನ) ಖ್ಯಾತಿಯನ್ನು ತಾನೆ ನಿರಾಕರಿಸಲಾಗಿದೆ?[1]. ವಿಶೇಷಣದ ಪ್ರತೀತಿಯು ಇಲ್ಲದೇ ವಿಶಿಷ್ಟದ ಪ್ರತೀತಿಯು ಇರಲಾಗದು[2]. ಅಪ್ರತೀತವಾದುದರ ಪ್ರತಿಷೇಧವು ಯುಕ್ತವಾಗದು. ಆದುದರಿಂದ ಪರರ ಪ್ರತಿಷೇಧವು ಯುಕ್ತವಾಗಬೇಕಾದಲ್ಲಿ ಅಸತ್ತಿನ ಖ್ಯಾತಿಯು ಸಿದ್ಧವಾಗುವುದು ಎಂದು. ಮೊದಲ ಪಕ್ಷವನ್ನು (ಅಸತ್ತಿಗೆ ಖ್ಯಾತಿಯು ಇದೆ ಎನ್ನುವ ಪಕ್ಷವನ್ನು) ನಿರಾಕರಿಸುತ್ತಾರೆ **'ಯದಿ'** ಎಂದು. ಅಸತ್ತಿಗೆ ಖ್ಯಾತಿಯು ಇದೆ ಎಂದಾದಲ್ಲಿ, ಹಾಗಾದರೂ ಸಹ ಅದರ ಖ್ಯಾತಿಯ

1. ನೇರವಾಗಿ ಅಸತ್ತನ್ನು ನಿಷೇಧಿಸುತ್ತಿಲ್ಲ, ಮತ್ತೇನು? 'ಅಸತ್ತಿನಿಂದ ಯುಕ್ತವಾದ ವಸ್ತುವಿನ ಪ್ರತೀತಿಯು ಇಲ್ಲ' ಎಂದು ನಿಷೇಧಿಸಲಾಗುವುದು. ಅಂದರೆ ಶಶವಿಷಾಣವು ಸಾಕ್ಷಾತ್ ಆಗಿ ತೋರದು, ವ್ಯಾವರ್ತಕಕ್ಕೆ ವಿಶೇಷಣವಾಗಿ ಅಂದರೆ 'ಶಶವಿಷಾಣವು ತೋರದು' ಎಂಬ ಅರಿವಿನಲ್ಲಿ ವಿಶೇಷಣವಾಗಿ ಮಾತ್ರ ಅಸತ್ತು ತೋರುತ್ತಿದೆ ಎಂದೂ ಹೇಳುವುದು ತರವಲ್ಲ ಎಂಬ ಭಾವ.

2. ದಂಡಿ ಎಂಬ ವಿಶಿಷ್ಟದ ಅರಿವು, ಅದಕ್ಕೆ ವಿಶೇಷಣವಾದ ದಂಡದ ಅರಿವಿಲ್ಲದೆ ಬಾರದು. ಹಾಗೆ ಪ್ರಕೃತದಲ್ಲಿ 'ಅಸತ್ತಾದ ವಸ್ತುವಿನ ಪ್ರತೀತಿಯು ಇಲ್ಲ' ಎಂಬ ಅರಿವು, ವಿಶೇಷಣವಾದ ಅಸತ್ತಿನ ಅರಿವಿಲ್ಲದೇ ಶಕ್ಯವಿಲ್ಲ ಎಂದು ಭಾವ.

ನಿರಾಕರಣವು ಯುಕ್ತವಾಗದು, ಸ್ವಕ್ರಿಯಾ ವಿರೋಧವು ಪ್ರಾಪ್ತವಾಗು-ವುದರಿಂದ[1]. ಹಾಗಾಗಿ ಅಸತ್ತಿಗೆ ಖ್ಯಾತಿಯು ಅನಿವಾರ್ಯ.

**'ಅಸತ್ತಿಗೆ ಖ್ಯಾತಿಯನ್ನು ಒಪ್ಪಬೇಕು' ಎನ್ನುವದನ್ನು ಯುಕ್ತ್ಯಂತರದಿಂದ**

**ನ ಚಾಸತೋ ವೈಲಕ್ಷಣ್ಯಂ ತತ್ಪ್ರತೀತಿಂ ವಿನಾ ಜ್ಞಾಯತೇ । ನ ಚ ಶುಕ್ತೇ ರಜತತ್ವಂ ಸದಸದ್ವಿಲಕ್ಷಣಮ್ 'ಅಸದೇವರಜತಂ ಪ್ರತ್ಯಭಾತ್' ಇತ್ಯನುಭವಾತ್ ।**

ಅದರ (ಅಸತ್ತಿನ) ಪ್ರತೀತಿಯಿಲ್ಲದೆ ಅಸತ್‌ನಿಂದ ಭೇದವು ತಿಳಿಯದು. ಶುಕ್ತಿಯಲ್ಲಿ (ತೋರಿದ) ರಜತಕ್ಕೆ ಸದಸದ್ವಿಲಕ್ಷಣತ್ವವನ್ನು (ಅನುಮಾನದಿಂದ ಕಲ್ಪಿಸಲು) ಶಕ್ಯವಿಲ್ಲ. 'ಅಸತ್ತಾದ ರಜತವೇ ತೋರಿತು' ಎಂದು ಅನುಭವವು ಇರುವುದರಿಂದ.

ಇತೋಽಪ್ಯಸತಃ ಖ್ಯಾತಿರಙ್ಗೀಕಾರ್ಯೇತ್ಯಾಹ 'ನ ಚ ' ಇತಿ । ಶುಕ್ತಿರಜತಾದೇರಸತೋ ವೈಲಕ್ಷಣ್ಯಂ ಖಲ್ವರ್ಥಾಪತ್ತ್ಯಾ ಜ್ಞಾತವ್ಯಮ್? ನ ಚ ತದಸತ್ಪ್ರತೀತಿಂ ವಿನಾ ಜ್ಞಾತುಂ ಶಕ್ಯತೇ । ವೈಲಕ್ಷಣ್ಯಂ ಹಿ ವ್ಯಾವೃತ್ತಿಃ । ಸಾ ಚ ಪ್ರತಿಯೋಗಿಜ್ಞಾನಾಧೀನೇತಿ ಕಥಂ ತದಪ್ರತೀತೌ ಪ್ರತೀಯೇತ? ಅತೋಽರ್ಥಾಪತ್ತೇಃ ಫಲೇನ ವಿರೋಧಃ ಸ್ಯಾತ್ । ತಥಾ ಚಾಸತ್ವೇನ ಉಪಪತ್ತೇಃ, 'ನಾರ್ಥಾಪತ್ತ್ಯಾ ಶುಕ್ತಿರಜತಾದೇಃ ಅನಿರ್ವಾಚ್ಯತಾಸಿದ್ಧಿಃ' ಇತಿ ।

ಮತ್ತೂ ಸಹ ಅಸತ್ತಿಗೆ ಖ್ಯಾತಿಯನ್ನು ಒಪ್ಪಬೇಕು ಎಂದು ತಿಳಿಸುತ್ತಾರೆ 'ನ ಚ' ಎಂದು. ಶುಕ್ತಿರಜತಾದಿಗಳಿಗೆ ಅಸತ್ತಿನಿಂದ ವೈಲಕ್ಷಣ್ಯವು ಅರ್ಥಾಪತ್ತಿಯಿಂದ (ರೂಪ ಪ್ರಮಾಣದಿಂದ) ತಿಳಿಯುವುದು ತಾನೇ? ಅದಾದರೋ (ಅಸದ್ವೈಲಕ್ಷಣ್ಯವಾದರೋ) ಅಸತ್ತಿನ ಪ್ರತೀತಿಯ ಹೊರತಾಗಿ ತಿಳಿಯಲು ಶಕ್ಯವಿಲ್ಲ. ವೈಲಕ್ಷಣ್ಯ ಅಂದರೆ ವ್ಯಾವೃತ್ತಿ. ಅದಾದರೋ (ವೈಲಕ್ಷಣ್ಯದ ಅರಿವಾದರೋ) ಪ್ರತಿಯೋಗಿಯ ಅರಿವಿನ ಅಧೀನ ಎಂದು, ಅದು (ಅಸತ್ತು) ತೋರದೆ ಹೇಗೆ ತೋರೀತು? ಆದುದರಿಂದ ಅರ್ಥಾಪತ್ತಿಗೆ ಫಲದ ವಿರೋಧವು

1. 'ಅಸತ್ತಿಗೆ ಖ್ಯಾತಿಯು ಇದೆ' ಎಂದು ಒಪ್ಪಿಕೊಂಡು 'ಅಸತ್ತಿಗೆ ಖ್ಯಾತಿಯು ಇಲ್ಲ' ಎಂದು ಹೇಳುವುದು ಸ್ವವಚನಕ್ರಿಯಾಕ್ಕೆ ವಿರುದ್ಧವಾಗಿದೆ ಎಂದು ಭಾವ.

ಪ್ರಾಪ್ತವಾದೀತು[1]. ಹಾಗಾಗಿ (ಶುಕ್ತಿರಜತವು) ಅಸತ್ ಎಂದು ಒಪ್ಪಿದರೂ ಉಪಪನ್ನವಾಗುವುದರಿಂದ, 'ಅರ್ಥಾಪತ್ತಿಯಿಂದ ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವು ಸಿದ್ಧವಾಗುವದಿಲ್ಲ' ಎಂದು[2].

**ತಥಾऽಪಿ 'ಶುಕ್ತಿರಜತಾದಿಕಮನಿರ್ವಚನೀಯಂ, ಬಾಧ್ಯತ್ವಾದ್ ವ್ಯತಿರೇಕೇಣ ಆತ್ಮವತ್' ಇತ್ಯನುಮಾನೇನ ತತ್ಸಿದ್ಧಿರ್ಭವಿಷ್ಯತಿ? ಇತ್ಯತ ಆಹ 'ನ ಚ ಶುಕ್ತೇಃ' ಇತಿ । 'ಅನುಮಾನೇನ ಕಲ್ಪನೀಯಮ್' ಇತಿ ಶೇಷಃ । ಅತ್ಯನ್ತಾಸತೋ ರಜತತ್ವಸ್ಯ ಶುಕ್ತಿಕಾಯಾಮ್ 'ಅತ್ಯನ್ತಾಸನ್ನೇವ ಸಂಸರ್ಗೋ ವಾ, ರಜತಸ್ಯೈವ ತಾದಾತ್ಮ್ಯಂ ವಾ ಭ್ರಾನ್ತಿವಿಷಯಃ' ಇತಿ ಜ್ಞಾಪಯಿತುಂ ಕ್ವಚಿದ್ ಭಾವನಿರ್ದೇಶಃ ಕ್ವಚಿದ್ ದ್ರವ್ಯನಿರ್ದೇಶಃ । ಕುತೋ ನ? ಇತಿ ಚೇದ್ ಬಾಧಕಪ್ರತ್ಯಯೇನಾತ್ಯನ್ತಾಸತ್ವಸ್ಯೈವಾವಧಾರಣೇನ ಕಾಲಾತೀತತ್ವಾತ್ ಇತ್ಯಾಹ 'ಅಸದೇವ' ಇತಿ । ಬಾಧಕಪ್ರತ್ಯಯಸ್ಯ ವಸ್ತುವ್ಯವಸ್ಥಾಪಕತ್ವೇನ ಪ್ರಾಬಲ್ಯಂ ನಿಶ್ಚಿತಮೇವ ।**

ಆದರೂ 'ಶುಕ್ತಿರಜತಾದಿಕಂ ಅನಿರ್ವಚನೀಯಂ ಬಾಧ್ಯತ್ವಾತ್ ವ್ಯತಿರೇಕೇಣಾತ್ಮವತ್' ಎನ್ನುವ ಅನುಮಾನದಿಂದ ಅದು (ಅನಿರ್ವಚನೀಯತ್ವವು) ಸಿದ್ಧವಾಗುವುದು ಎಂದು ಹೇಳಿದಲ್ಲಿ ಉತ್ತರಿಸುವರು 'ನ ಚ ಶುಕ್ತೇಃ' ಎಂದು. 'ಅನುಮಾನೇನ ನ ಕಲ್ಪನೀಯಮ್' ಎಂದು

---

1. 'ಸಚ್ಚೇತ್ ನ ಬಾಧ್ಯೇತ, ಅಸಚ್ಚೇತ್ ನಪ್ರತೀಯೇತ' ಎಂಬ ಅರ್ಥಾಪತ್ತಿಯು ಸದಸದ್ವೈಲಕ್ಷಣ್ಯಕ್ಕೆ ಮಾನ ಎಂದು ಅದ್ವೈತವಾದಿಗಳ ಅಭಿಮತ. ಆದರೆ, ಪ್ರಕೃತ ಅರ್ಥಾಪತ್ತಿರೂಪ ಈ ಪ್ರಮಾಣಕ್ಕೆ ಸದ್ವೈಲಕ್ಷಣ್ಯತ್ವ ಮತ್ತು ಅಸದ್ವೈಲಕ್ಷಣ್ಯತ್ವದ ಜ್ಞಾನವೇ ಫಲ. ಈ ಫಲದಲ್ಲಿ ಘಟಕವಾದ ಅಸದ್ವೈಲಕ್ಷಣ್ಯತ್ವದ ಅರಿವಿಗಾಗಿ ಪ್ರತಿಯೋಗಿಯಾದ ಅಸತ್ತಿನ ಅರಿವು ಅವಶ್ಯವಾಗಿದೆ. ಹಾಗಾಗಿ ಅರ್ಥಾಪತ್ತಿಯ ಫಲದ ಪ್ರಾಪ್ತಿಗಾಗಿ ಅಸತ್ತಿಗೆ ಖ್ಯಾತಿಯನ್ನು ಒಪ್ಪಬೇಕು. ಅಸತ್‌ಖ್ಯಾತಿಯನ್ನು ಒಪ್ಪಿದಲ್ಲಿ ಅರ್ಥಾಪತ್ತಿಯಲ್ಲಿ ಘಟಕವಾದ ಅಸಚ್ಚೇನ್ನಪ್ರತೀಯೇತ ಎನ್ನುವದರ ವಿರೋಧವು ಪ್ರಾಪ್ತವಾದೀತು. ಒಟ್ಟಿನಲ್ಲಿ ಅಸದ್ವೈಲಕ್ಷಣ್ಯದ ಖ್ಯಾತಿಯು ಅಸತ್ತಿನ ಖ್ಯಾತಿಯನ್ನೇ ಅಪೇಕ್ಷಿಸುವುದು ಎಂದು ಭಾವ.

2. ಪ್ರಕೃತ ಅರ್ಥಾಪತ್ತಿಯ ಘಟಕಗಳಲ್ಲಿ ಎರಡನೆಯದಾದ ಅಸಚ್ಚೇನ್ನ ಪ್ರತೀಯೇತ ಎನ್ನುವುದು ಯುಕ್ತವಾಗದು. ಅಸತ್ತಾದರೂ ಪ್ರತೀತಿಗೆ ಯಾವ ಬಾಧಕವೂ ಇಲ್ಲದಿರುವುದರಿಂದ ಎಂದು ಭಾವ.

ಶೇಷಪೂರಣ ಮಾಡಿಕೊಳ್ಳುವುದು. ಅತ್ಯಂತ ಅಸತ್ತಾದ ರಜತತತ್ತ್ವಕ್ಕೆ ಶುಕ್ತಿಯಲ್ಲಿ ಅತ್ಯಂತ ಅಸತ್ತಾದ ಸಂಸರ್ಗವನ್ನೋ ಅಥವಾ (ಅತ್ಯಂತಾಸತ್ತಾದ) ರಜತದ ತಾದಾತ್ಮ್ಯವನ್ನೋ ಭ್ರಾಂತಿಗೆ ವಿಷಯ ಎಂದು ತಿಳಿಸಲು ಕೆಲವು ಸಂದರ್ಭದಲ್ಲಿ ಧರ್ಮಿಯ ನಿರ್ದೇಶ, ಕೆಲವು ಸಂದರ್ಭದಲ್ಲಿ ಧರ್ಮದ ನಿರ್ದೇಶವನ್ನು (ಮೂಲದಲ್ಲಿ) ಮಾಡಲಾಗಿದೆ[1]. ಏಕೆ ಅಲ್ಲ ಎಂದಲ್ಲಿ ('ಅಸದೇವ ರಜತಂ ಪ್ರತ್ಯಭಾತ್' ಎಂಬ) ಬಾಧಕ ಪ್ರತ್ಯಯದಿಂದ (ರಜತಕ್ಕಾಗಲಿ ರಜತತತ್ತ್ವಕ್ಕಾಗಲಿ) ಅತ್ಯಂತ ಅಸತ್ತೇ ನಿರ್ಧಾರಿತವಾಗಿರುವುದರಿಂದ (ಅನಿರ್ವಚನೀಯತ್ವವನ್ನು ಸಾಧಿಸುವ ಅನುಮಾನವು) ಬಾಧಿತವಾಗುವುದು ಎಂದು ಹೇಳುತ್ತಾರೆ **'ಅಸದೇವ'** ಎಂದು. (ಅನಿರ್ವಚನೀಯತ್ವವನ್ನು ಸಾಧಿಸುವ ಅನುಮಾನ-ದಿಂದಲೇ 'ಅಸದೇವ ರಜತಂ ಪ್ರತ್ಯಭಾತ್' ಎಂಬ ಬಾಧಕ ಜ್ಞಾನಕ್ಕೇ ಬಾಧವು ಪ್ರಾಪ್ತವಾಗಲಿ ಎಂದು ಹೇಳಲಾಗದು.) ವಸ್ತುವನ್ನು ವ್ಯವಸ್ಥೆಗೊಳಿಸುವುದರಿಂದ ಬಾಧಕಪ್ರತ್ಯಯದ ಪ್ರಾಬಲ್ಯವು ನಿಶ್ಚಿತವೇ ಆಗಿದೆ[2].

**ಅನ್ಯಥಾ ಪ್ರತೀತವಾದರೆ ಭ್ರಾಂತಿ-**

**ನ ಚ ಪ್ರತೀತತ್ವಾದಸತ್ತ್ವಾಭಾವಃ । 'ಅಸತಃ ಸತ್ವಪ್ರತೀತಿಃ, ಸತೋಽಸತ್ವಪ್ರತಿತಿಃ' ಇತ್ಯನ್ಯಥಾಪ್ರತೀತೇರೇವ ಭ್ರಾನ್ತಿತ್ವಾತ್ ।**

(ಶುಕ್ತಿರಜತವು ಸತ್ವೇನ) ಪ್ರತೀತವಾದುದರಿಂದ (ಶುಕ್ತಿರಜಾದಿಗಳಿಗೆ) ಅಸತ್ವವು ಇಲ್ಲ ಎಂದೆನ್ನುವುದು ತರವಲ್ಲ. 'ಅಸತ್ತಿಗೆ ಸತ್ವೇನ ಪ್ರತೀತಿ, ಸತ್ತಿಗೆ

---

1. ಮೂಲದಲ್ಲಿ ಎರಡು ತರಹದ ವಚನಗಳು ಇವೆ. 'ಶುಕ್ತಿರಜತಾದೇಃ ಸದಸದ್ವೈಲಕ್ಷಣ್ಯೇ ಪ್ರಮಾಣಾಭಾವಾತ್' ಎಂದು ಮತ್ತು 'ನ ಚ ಶುಕ್ತೇ ರಜತತ್ವಂ ಸದಸದ್ವಿಲಕ್ಷಣಮ್' ಎಂದು. ಒಂದು ಸಂದರ್ಭದಲ್ಲಿ 'ರಜತಾದೇಃ' ಎಂದು ಧರ್ಮಿಯನ್ನು, ಮತ್ತೊಂದು ಸಂದರ್ಭದಲ್ಲಿ 'ರಜತತ್ವಂ' ಎಂದು ಧರ್ಮವನ್ನು ನಿರ್ದೇಶಿಸಲಾಗಿದೆ. ಇದರ ಉದ್ದೇಶ- ಭ್ರಾಂತಿಯು ಎರಡು ತರಹದಲ್ಲಿ ಇರಬಹುದು. ಅಸತ್ತಾದ ರಜತತತ್ವಸಂಸರ್ಗದ ಆರೋಪ ಅಥವಾ ಅಸತ್ತಾದ ರಜತತಾದಾತ್ಮ್ಯದ ಆರೋಪ ಎಂದು. ಆದುದರಿಂದ ಎರಡೂ ವಿಧವಾದ ಭ್ರಾಂತಿಗಳನ್ನು ಪರಿಗ್ರಹಿಸಲು ಧರ್ಮಿ ಮತ್ತು ಧರ್ಮಗಳನ್ನು ನಿರ್ದೇಶಿಸಿರುವರು ಎಂದು ಭಾವ.
2. ವಿಶೇಷದರ್ಶನದಿಂದ, ಯುಕ್ತಿಯಿಂದ ಸಹಕೃತವಾದ ಬಾಧಕಜ್ಞಾನವು, ಅನುಮಾನಾದಿಗಳಿಂದ ಪ್ರಬಲ ಎಂದು ಭಾವ.

ಅಸತ್ವೇನ ಪ್ರತೀತಿಯೇ' (ಹೀಗೆ ಅನ್ಯಥಾ ಪ್ರತೀತಿಯೇ) ಭ್ರಾಂತಿಯಾದುದರಿಂದ.

**ನನು, ಅಯಂ ಬಾಧಕಪ್ರತ್ಯಯಃ ಸತ್ತ್ವಾಭಾವವಿಷಯಃ, ಶುಕ್ತಿರಜತಾದೇಃ ಪ್ರತೀತತ್ವಾದ್ ಅಸತ್ತ್ವಾಭಾವಾತ್ । ನ ಚ 'ಅಸತೋಽಪಿ ಪ್ರತೀತಿಃ ಉಪಪಾದಿತಾ' ಇತಿ ವಾಚ್ಯಮ್, ಅಸತೋಽಸತ್ವೇನ ಪ್ರತೀತಾವಪಿ ಸತ್ವೇನ ಪ್ರತೀತ್ಯಭಾವಾತ್, ಅಸ್ಯ ಚ ಸತ್ವೇನ ಪ್ರತೀತತ್ವಾತ್ । ಏತೇನಾರ್ಥಾಪತ್ತಿರಪಿ ಸಮರ್ಥಿತಾ ಭವತಿ, ಪ್ರತೀತಿಮಾತ್ರಸದ್ಭಾವೇನ ಪ್ರತಿಷೇಧಾದ್ಯುಪಪತ್ತೇಃ । ಸತ್ವೇನ ಪ್ರತೀತೇಶ್ಚ ಅರ್ಥಾಪತ್ತಿಶರೀರೇಽಪ್ರವೇಶಾದಿತ್ಯತ ಆಹ 'ನ ಚ' ಇತಿ । ಪ್ರತೀತತ್ವಾತ್ 'ಸತ್ವೇನ' ಇತಿ ಶೇಷಃ । ಅಸತ್ತ್ವಾಭಾವಃ ಶುಕ್ತಿ-ರಜತಾದೇಃ । ಕುತೋ ನ? ಇತಿ ಚೇತ್, ಕಿಮಸತಃ ಸತ್ವೇನ ಪ್ರತೀತಿರಭ್ರಾನ್ತೌ ನಾಸ್ತಿ ಉತ ಭ್ರಾನ್ತಾವಪಿ ವಾ । ನಾಽದ್ಯಃ, ಪ್ರಕೃತಾನುಪಯೋಗಾತ್ । ದ್ವಿತೀಯೇ ಭ್ರಾನ್ತ್ಯಭಾವಪ್ರಸಙ್ಗಃ । ಕುತಃ? ಇತ್ಯತ ಆಹ 'ಅಸತ' ಇತಿ । 'ಅಸತೋ ರಜತಾದೇಃ ಸತ್ವೇನ ಪ್ರತೀತಿಃ, ಸತಶ್ಚ ಶುಕ್ತ್ಯಾದೇರಸತ್ವೇನ ಪ್ರತೀತಿಃ' ಇತ್ಯೇವಂರೂಪಾನ್ಯಥಾಪ್ರತೀತೇರೇವ ಭ್ರಾನ್ತಿತ್ವಾತ್ ।**

ಸರಿ, ('ಅಸದೇವ ರಜತಂ ಪ್ರತ್ಯಭಾತ್' ಎನ್ನುವ) ಈ ಬಾಧಕ ಪ್ರತ್ಯಯವು ಸತ್ತ್ವಾಭಾವವನ್ನು ವಿಷಯೀಕರಿಸುತ್ತದೆ. ಪ್ರತೀತವಾದುದರಿಂದ ಶುಕ್ತಿರಜತಾದಿಗಳಿಗೆ ಅಸತ್ವವು ಇಲ್ಲ, ಆದುದರಿಂದ (ಈ ಬಾಧಕ ಪ್ರತ್ಯಯವು ಅಸತ್ತನ್ನು ವಿಷಯೀಕರಿಸುತ್ತಿಲ್ಲ)[1]. ಅಸತ್ತಿಗೂ ಪ್ರತೀತಿಯುಂಟು ಎಂದು

1. 'ಅಸದೇವ ರಜತಂ ಪ್ರತ್ಯಭಾತ್' ಎಂದು ಬಾಧಕ ಪ್ರತ್ಯಯ. ಈ ಅರಿವಿನಲ್ಲಿ ನೇರವಾಗಿ ರಜತವು ಅಸತ್ ಎಂದು ತಿಳಿಸುತ್ತಿದೆ. ಆದರೂ ಈ ಅರಿವು ಸತ್ವಾಭಾವವನ್ನು ವಿಷಯೀಕರಿಸುತ್ತದೆ ಎಂದು ಅದ್ವೈತವಾದಿಗಳು ಪ್ರತಿಪಾದಿಸುತ್ತಿರುವರು. ಅದಕ್ಕೆ ಕಾರಣ 'ಅಸತ್ತು ಅರಿವಿಗೆ ವಿಷಯವಾಗುವದಿಲ್ಲ' ಎನ್ನುವುದು ಅವರ ಸಿದ್ಧಾಂತ. ಆದುದರಿಂದ ಈ ಮೇಲೆ ತಿಳಿಸಿದ ವಾಕ್ಯಕ್ಕೆ ಅವರು ಅರ್ಥಾಂತರಿಸುವರು. 'ಅಸದೇವ ರಜತಂ' ಎಂದರೆ 'ಸತ್ವವನ್ನು ಹೊಂದಿರದ ರಜತ' ಎಂದು. ಸತ್ವರಾಹಿತ್ಯವನ್ನು ಅರಿವು ಗ್ರಹಿಸಿದರೂ, ಅಸತ್ತನ್ನು ಗ್ರಹಿಸಲಾರದು ಎನ್ನುವದು ಅವರ ಮತದ ಪ್ರಕ್ರಿಯೆ. 'ತೋರಿದ ರಜತವು ಸತ್ ಅಲ್ಲ' ಎನ್ನುವ ಅರಿವಿಗೂ 'ತೋರಿದ ರಜತವು ಅಸತ್' ಎನ್ನುವ ಅರಿವುಗಳಲ್ಲಿ ವ್ಯತ್ಯಾಸವಿದೆ ಎನ್ನುವದನ್ನು ವಾಚಕರು ಗಮನಿಸುವುದು.

ಪ್ರತಿಪಾದಿಸಲಾಗಿದೆ ಎಂದು ಹೇಳುವುದು ತರವಲ್ಲ. ಅಸತ್ತು ಅಸತ್ವೇನ ಪ್ರತೀತವಾದರೂ ಸತ್ವೇನ ಪ್ರತೀತವಾಗಲಾರದು. ಇಲ್ಲಾದರೋ ಸತ್ವೇನ ಪ್ರತೀತವಾಗಿದೆ[1]. ಇದರಿಂದ (ಅಸತ್ತಿಗೆ ಅಸತ್ವೇನ ಪ್ರತೀತಿಯಿದೆ, ಸತ್ವೇನ ಪ್ರತೀತಿಯು ಇಲ್ಲ ಎಂದು ಹೇಳಿದ್ದರಿಂದ) ಅರ್ಥಾಪತ್ತಿಯನ್ನು ಸಮರ್ಥಿಸಿದಂತಾಯಿತು. ಕೇವಲ ಪ್ರತೀತಿಯಿಂದ ನಿಷೇಧವು ಉಪಪನ್ನವಾಗುವುದರಿಂದ. ಸತ್ವೇನ ಪ್ರತೀತಿಯು ಅರ್ಥಾಪತ್ತಿಯಲ್ಲಿ ಘಟಕವಾಗಿಲ್ಲದಿರುವುದರಿಂದ ಎಂದು[2], ಆದುದರಿಂದ ಉತ್ತರಿಸುತ್ತಾರೆ '**ನ ಚ**' ಎಂದು. '**ಪ್ರತೀತತ್ವಾತ್**' (ಎನ್ನುವ ಮೂಲವಾಕ್ಯದ ಅನಂತರದಲ್ಲಿ) 'ಸತ್ವೇನ' ಎಂದು ಶೇಷಪೂರಣ ಮಾಡಿಕೊಳ್ಳುವುದು. '**ಅಸತ್ವಾಭಾವಃ**' (ಇದರ ನಂತರದಲ್ಲಿ) 'ಶುಕ್ತಿರಜತಾದೇಃ' (ಎಂದು ಶೇಷಪೂರಣ ಮಾಡಿಕೊಳ್ಳುವುದು). ಏಕೆ ಇಲ್ಲ? ಎಂದಲ್ಲಿ ('ಅಸತ್ತಿಗೆ ಸತ್ವೇನ ಪ್ರತೀತಿಯು ಇಲ್ಲ ಎನ್ನುವ ಪರರ

---

1. 'ಶಶವಿಷಾಣಂ ಅಸತ್' ಎಂದು ಪ್ರತೀತಿಯು ಇರಬಹುದು, ಆದರೆ 'ಶಶವಿಷಾಣಂ ಅಸ್ತಿ' ಎಂದು ಪ್ರತೀತಿಯು ಬಾರದು. ಪ್ರಕೃತ 'ಇದಂ ರಜತಂ' ಎನ್ನುವ ಅರಿವಿನಲ್ಲಿ 'ರಜತಂ ಅಸ್ತಿ' ಎಂದು ಪ್ರತಿಭಾಸಮಾನವಾಗುತ್ತಿದೆ, ಆದುದರಿಂದ 'ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಬಾಧಕಪ್ರತ್ಯಯವು ರಜತದಲ್ಲಿ ಸತ್ವದ ರಾಹಿತ್ಯವು ತಿಳಿಸುತ್ತಿದೆ ಎಂದು ಅರ್ಥೈಸಬೇಕು, ಎಂಬುವುದು ಮಾಯಾವಾದಿಗಳ ಅಭಿಮತ.

2. ಅಸತ್ತಾದಲ್ಲಿ ತೋರಬಾರದು, ಸತ್ತಾದಲ್ಲಿ ಬಾಧಿತವಾಗಬಾರದು. ಶುಕ್ತಿರಜತವು ತೋರುತ್ತದೆ ಮತ್ತು ಬಾಧಿತವೂ ಆಗಿದೆ ಆದುದರಿಂದ ಮೂರನೆಯ ಅವಸ್ಥೆ ಸದಸದ್ವಿಲಕ್ಷಣತ್ವವನ್ನು ಹೊಂದಿದೆ ಎಂದು ಅರ್ಥಾಪತ್ತಿಯಿಂದ ಸಾಧಿಸಲಾಗಿತ್ತು. ಸದಸದ್ವಿಲಕ್ಷಣತ್ವದ ಅರಿವಾಗಬೇಕಾದಲ್ಲಿ, ಅದರ ಘಟಕವಾದ ಅಸದ್ವಿಲಕ್ಷಣತ್ವದ ಅರಿವು ಬೇಕು. ಅಸದ್ವಿಲಕ್ಷಣತ್ವದ ಅರಿವಾಗಬೇಕಾದಲ್ಲಿ ಪ್ರತಿಯೋಗಿಯಾದ ಅಸತ್ತಿನ ಅರಿವು ಅವಶ್ಯಕ, ಆದರೆ ಅಸತ್ತು ತೋರುವದಿಲ್ಲ ಎಂದು ಒಪ್ಪಲಾಗಿದೆ. ಹಾಗಾಗಿ (ಅರ್ಥಾಪತ್ತಿರೂಪ ಪ್ರಮಾಣದ) ಫಲದ ವಿರೋಧವು ಇರುವುದರಿಂದ ಅರ್ಥಾಪತ್ತಿಯು ಅನಿರ್ವಚನೀಯತ್ವವನ್ನು ಸಾಧಿಸಲಾರದು ಎಂದು ಈ ಹಿಂದೆ ಉಪಪಾದಿಸಲಾಗಿತ್ತು. ಪ್ರಕೃತದ ಉಪಪಾದನೆಯಿಂದ ಅರ್ಥಾಪತ್ತಿಗೆ ಫಲದ ವಿರೋಧವಿಲ್ಲ. ಅಸತ್ ಅಸತ್ವೇನ ಪ್ರತೀಯಮಾನವಾಗಬಹುದು ಎಂದು ಒಪ್ಪಲಾಗಿದೆ, ಹೀಗೆ ಪ್ರತೀಯಮಾನವಾದ ಅಸತ್ತು ನಿಷೇಧಕ್ಕೆ ವಿಷಯವೂ ಆಗಬಹುದು. 'ಅಸತ್ತಾದಲ್ಲಿ ತೋರಬಾರದು' ಎಂಬ ಅರ್ಥಾಪತ್ತಿಯ ಘಟಕವು 'ಅಸತ್ತು ಸತ್ವೇನ ತೋರಬಾರದು' ಎಂದು ವಿವಕ್ಷಿಸಲಾಗಿದೇ ಹೊರತು 'ಅಸತ್ ಅಸತ್ವೇನ ತೋರಬಾರದು' ಎಂದು ಪ್ರತಿಪಾದಿಸಲಾಗಿಲ್ಲ. ಹಾಗಾಗಿ ಫಲದ ವಿರೋಧವಿಲ್ಲ ಎಂದು ಅವರ ವಾದದ ಒಟ್ಟು ಭಾವ.

ಅಭಿಮತವು ಸರಿಯಾದುದಲ್ಲ' ಎಂದು ಸ್ಫುಟೀಕರಿಸಲು ಪರರನ್ನು ಪ್ರಶ್ನಿಸುತ್ತಾರೆ-) 'ಅಸತ್ತಿಗೆ ಸತ್ತ್ವೇನ ಪ್ರತೀತಿಯು' ಅಭ್ರಾಂತಿಯಲ್ಲಿ (ಯಥಾರ್ಥವಾದ ಅರಿವಿನಲ್ಲಿ) ಇಲ್ಲವೋ ಅಥವಾ ಭ್ರಾಂತಿಯಲ್ಲಿ ಇಲ್ಲವೋ? ಮೊದಲ ಪಕ್ಷವು ಸರಿಯಾಗದು, ಪ್ರಕೃತಕ್ಕೆ ನಿರುಪಯುಕ್ತವಾದುದರಿಂದ[1]. ಎರಡನೆಯಪಕ್ಷದಲ್ಲಿ (ಭ್ರಾಂತಿಯಲ್ಲಿ ಅಸತ್ತು ಸತ್ತ್ವೇನ ತೋರುವದಿಲ್ಲ ಎನ್ನುವ ಪಕ್ಷದಲ್ಲಿ) ಭ್ರಾಂತಿ ಜ್ಞಾನವೇ ಇಲ್ಲವಾಗಬೇಕಾದೀತು. ಏಕೆ ಎಂದರೆ ಉತ್ತರಿಸುತ್ತಾರೆ '**ಅಸತಃ**' ಎಂದು. 'ಅಸತ್ತಾದ ರಜತಾದಿಗಳು ಸತ್ತ್ವೇನ ತೋರುವುದು, ಸತ್ತಾದ ಶುಕ್ತ್ಯಾದಿಗಳು ಅಸತ್ತ್ವೇನ ತೋರುವುದು' ಈ ರೀತಿಯಾಗಿ ವಿರುದ್ಧವಾಗಿ ತೋರುವ ಅರಿವೇ ಭ್ರಾಂತಿಯಾದುದರಿಂದ.

**ಅಸತ್ತಿಗೆ ಖ್ಯಾತಿಯು ಇಲ್ಲ ಎನ್ನುವ ತಾರ್ಕಿಕರ ಮತ್ತು ಬೌದ್ಧರ ನಿರಾಕರಣೆ**

'ಅನ್ಯಥಾಪ್ರತೀತೇರೇವ ಭ್ರಾನ್ತಿತ್ವಾದ್' ಇತ್ಯೇತಾವತ್ಯೇವೋಕ್ತೇ, ನಾಸತಃ ಸತ್ತ್ವೇನ ಪ್ರತೀತಿಃ ಸಿಧ್ಯತಿ। ಅನ್ಯಥಾಖ್ಯಾತಿವಾದಿಭಿರಪಿ ಅಸತಃ ಸತ್ತ್ವೇನ ಪ್ರತೀತೇರನಙ್ಗೀಕೃತತ್ವಾತ್ । ಅತಃ '**ಅಸತಃ..**' ಇತ್ಯಾದ್ಯನ್ಯಥಾಖ್ಯಾತಿ-ವ್ಯಾಖ್ಯಾನಂ ಕೃತಮ್ । ಯದ್ಯಸದ್ ಅಸತ್ತ್ವೇನ, ಸಚ್ಚ ಸತ್ತ್ವೇನೈವ ಪ್ರತೀಯತೇ ತದಾ ಕಾ ನಾಮ ಭ್ರಾನ್ತಿಃ? 'ಸತಃ ಸದನ್ತರಾತ್ಮತಾಪ್ರತೀತಿಃ ಭ್ರಾನ್ತಿಃ' ಇತಿ ಚೇತ್, ಕಿಂ ಸತಃ ಸದನ್ತರಾತ್ಮತಾ ಸತೀ ಉತಾಸತೀ? ನಾದ್ಯಃ, ಭ್ರಾನ್ತಿತ್ವಾಭಾವ-ಪ್ರಸಙ್ಗಾತ್ । ದ್ವಿತೀಯೇ ಸಾ ಕಿಮಸತ್ತ್ವೇನ ಪ್ರತೀಯತೇ ಕಿಂ ವಾ ಸತ್ತ್ವೇನ? ಆದ್ಯೇ ಪುನರ್ಭ್ರಾನ್ತಿತ್ವಾನುಪಪತ್ತಿರೇವ । ದ್ವಿತೀಯೇ ಕಥಮಸತಃ ಸತ್ತ್ವೇನ ಪ್ರತೀತ್ಯಭಾವಃ? 'ಅಸತೋ ಧರ್ಮಸ್ಯ ಸತ್ತ್ವೇನ ಪ್ರತೀತಿರಸ್ತಿ ನ ತು ಧರ್ಮಿಣ' ಇತಿ ತು ನಿಯಾಮಕಶೂನ್ಯಮ್ ।

ಅತ್ರ ಪ್ರತೀತಸ್ಯ ರಜತಸ್ಯಾನ್ಯತ್ರ ಸತ್ವಕಲ್ಪನಂ ಚ ಪ್ರಮಾಣವಿಕಲಮ್ । ವಿಜ್ಞಾನವಾದಿನಾಪಿ 'ಆನ್ತರಸ್ಯ ಬಾಹ್ಯತ್ವಮತ್ಯನ್ತಾಸದೇವ ಸತ್ತ್ವೇನ ಪ್ರತೀಯತೇ' ಇತ್ಯಙ್ಗೀಕರ್ತವ್ಯಮೇವ । ಅತೋಽನ್ಯಥಾ ಭ್ರಾನ್ತಿತ್ವಾನುಪ-

1. ಪ್ರಕೃತ ಭ್ರಾಂತಿಯಲ್ಲಿ ತೋರಿದ ಪದಾರ್ಥವು ಸತ್ತ್ವೇನ ತೋರುವುದೋ ಅಸತ್ತ್ವೇನ ತೋರುವುದೋ ಸದಸದ್ವಿಲಕ್ಷಣತ್ವೇನ ತೋರುವುದೋ ಎನ್ನುವ ವಾದವು ಪ್ರಸಕ್ತವಾಗಿದೆ. 'ಯಥಾರ್ಥಜ್ಞಾನದಲ್ಲಿ ಅಸತ್ತು ಸತ್ತ್ವೇನ ತೋರದು' ಎನ್ನುವ ಮಾತು ಪ್ರಕೃತಕ್ಕೆ ಅಸಂಗತ ಎಂದು ಭಾವ.

**ಪತ್ತೇಃ ತಲ್ಲೋಭಾದವಶ್ಯಮಸತಃ ಸತ್ತ್ವೇನ ಪ್ರತೀತೇರಙ್ಗೀಕಾರ್ಯತ್ವೇನ, ನ ಬಾಧಕಪ್ರತ್ಯಯಸ್ಯ ವಿಷಯಾನ್ತರಂ ಕಲ್ಪ್ಯಮ್ । ನಾಪ್ಯರ್ಥಾಪತ್ತೇಃ ಸಮರ್ಥನಮ್ ।**

'ಅನ್ಯಥಾಪ್ರತೀತಿಯೇ ಭ್ರಾಂತಿ' ಆದುದರಿಂದ ಅಷ್ಟೇ ತಿಳಿಸಿದಲ್ಲಿ 'ಅಸತ್ತಿಗೆ ಸತ್ತ್ವೇನ ಪ್ರತೀತಿಯು ಉಂಟು' ಎನ್ನುವದು ಸಿದ್ಧವಾಗುತ್ತಿರಲಿಲ್ಲ. ಅನ್ಯಥಾಖ್ಯಾತಿವಾದಿಗಳಿಂದಲೂ ಸಹ (ಪದಾರ್ಥವು ಪದಾರ್ಥಾಂತರವಾಗಿ ತೋರುವುದು ಎಂದು ವಾದಿಸುವ ತಾರ್ಕಿಕರಿಂದಲೂ ಸಹ) ಅಸತ್ತಿಗೆ ಸತ್ತ್ವೇನ ಭಾನವನ್ನು ಒಪ್ಪದಿರುವುದರಿಂದ. ಆದುದರಿಂದ ಅನ್ಯಥಾಖ್ಯಾತಿಯ ಸ್ವರೂಪವನ್ನು '**ಅಸತಃ ಸತ್ವಪ್ರತೀತಿಃ......**' ಎಂದು ತಿಳಿಸಲಾಗಿದೆ[1]. ಒಂದುವೇಳೆ 'ಅಸತ್ತು ಅಸತ್ತ್ವೇನ, ಸತ್ತು ಸತ್ತ್ವೇನ' ಪ್ರತೀತವಾದಲ್ಲಿ ಆಗ ಭ್ರಾಂತಿ ಹೇಗಾದೀತು? 'ಸತ್ತೇ ಸತ್‌ಪದಾರ್ಥಾಂತರವಾಗಿ ತೋರುವುದು ಭ್ರಾಂತಿ' ಎಂದು ಅಭಿಮತಿಸಿದಲ್ಲಿ[2] (ಭ್ರಾಂತಿಯಲ್ಲಿ ತೋರಿದ) ಸತ್ತಿಗೆ ಸದಂತರತ್ವವು ಸತ್ತೋ ಅಥವಾ ಅಸತ್ತೋ? ಮೊದಲ ಪಕ್ಷವು ಸರಿಯಾಗದು (ಆ ಅರಿವಿಗೆ) ಭ್ರಾಂತಿತ್ವವೇ ಇಲ್ಲದೇ ಹೋಗಬೇಕಾದಿತು[3]. ಎರಡನೇ ಪಕ್ಷದಲ್ಲಿ (ಸತ್ತಿಗೆ ಸದಂತರಾತ್ಮತೆಯು ಅಸತ್ತು ಎನ್ನುವ ಪಕ್ಷದಲ್ಲಿ) ಅದು (ಸದಂತರಾತ್ಮತೆಯು)

---

1. 'ಅಸತ್ತಿಗೆ ಪ್ರತೀತಿಯು ಇಲ್ಲ' ಎನ್ನುವುದು ಕೇವಲ ಅದ್ವೈತಿಗಳು ಮಾತ್ರವಲ್ಲದೆ ತಾರ್ಕಿಕರೂ ಮುಂತಾದವರೂ ಅಭಿಮತಿಸಿರುವರು. ಆ ಎಲ್ಲ ವಾದಿಗಳಿಗೂ ಉತ್ತರಿಸುವ ಬಾಧ್ಯತೆಯು ಇರುವುದರಿಂದ ಆಚಾರ್ಯರು ಭ್ರಾಂತಿಯು ಎರಡೂ ವಿಧದಲ್ಲಿರಬಹುದು- 'ಅಸತ್ತು ಸತ್ತಾಗಿ ತೋರಬಹುದು, ಸತ್ತು ಅಸತ್ತಾಗಿಯೂ ತೋರಬಹುದು' ಎಂಬುವದಾಗಿ ತಿಳಿಸಿರುವರು. 'ಅನ್ಯಥಾ ಪ್ರತೀತಿಃ ಭ್ರಾಂತಿಃ' ಎಂದಿಷ್ಟೇ ಭ್ರಾಂತಿಯ ಲಕ್ಷಣವನ್ನು ತಿಳಿಸಿದಲ್ಲಿ ನಮಗೆ ಅಭೀಷ್ಟವಾದ 'ಅಸತ್ತಿಗೆ ಭಾನವಿದೆ' ಎಂದು ತಿಳಿಸಿದಂತಾಗುತ್ತಿರಲಿಲ್ಲ ಎಂದು ಭಾವ.

2. ಸತ್ತಾದ ಶುಕ್ತಿಯು ಸದಂತರವಾಗಿ ರಜತವಾಗಿ ತೋರುವುದು ಭ್ರಾಂತಿ ಎಂದು ಅಭಿಮತಿಸಿದರೆ ಎಂದು ಭಾವ.

3. ಸತ್ತಾದ ಶುಕ್ತಿಯು ಸದಂತರವಾಗಿ-ರಜತತ್ವೇನ ಭ್ರಾಂತಿಯಲ್ಲಿ ತೋರುವುದು. ಶುಕ್ತಿಯು ರಜತತ್ವೇನ ತೋರಿರುವುದು ಯಥಾರ್ಥವಾದದ್ದೇ ಎಂದು ಒಪ್ಪಿದಲ್ಲಿ, ಇಂತಹ ಅರಿವನ್ನು ಭ್ರಾಂತಿ ಎಂದು ವ್ಯವಹರಿಸಲು ಶಕ್ಯವಿಲ್ಲ. ಮೃತ್ ಘಟವಾಗಿ ಪರಿಣತಿಯನ್ನು ಹೊಂದಿದನಂತರದಲ್ಲಿ, ಘಟತ್ವೇನ ತೋರುವುದು. ಇದನ್ನು ಭ್ರಾಂತಿ ಎಂದು ಕರೆಯಲಾಗದು. ಇದ್ದದ್ದು ಇದ್ದಂತೆ ಪ್ರತಿಭಾಸಮಾನವಾದಲ್ಲಿ ಅಂತಹ ಅರಿವನ್ನು ಭ್ರಾಂತಿ ಎಂದು ಶಾಸ್ತ್ರಜ್ಞರು ವ್ಯವಹರಿಸುವುದಿಲ್ಲ ಎಂದು ಭಾವ.

ಅಸತ್ತಾಗಿ ತೋರುವುದೋ ಸತ್ತಾಗಿ ತೋರುವುದೋ? ಮೊದಲ ಪಕ್ಷದಲ್ಲಿ (ಸತ್ತಿಗೆ ಸದಂತರಾತ್ಮತೆಯು ಅಸತ್ತಾಗಿ ತೋರುವುದು ಎಂಬ ಪಕ್ಷವನ್ನು ಒಪ್ಪಿದಲ್ಲಿ) ಪುನಃ (ಆ ಅರಿವಿಗೆ) ಭ್ರಾಂತಿತ್ವವು ಅನುಪಪತ್ತಿಯೇ (ಪ್ರಾಪ್ತವಾಯಿತು)[1]. ಎರಡನೆಯ ಪಕ್ಷದಲ್ಲಿ( 'ಸತ್ತಿಗೆ ಸದಂತರಾತ್ಮತೆಯು ಸತ್' ಎಂದೇ ತೋರುವುದು ಎಂದು ಒಪ್ಪಿದಲ್ಲಿ) ಅಸತ್ತಿಗೆ ಸತ್ವೇನ ಪ್ರತೀತಿಯು ಇಲ್ಲ ಎನ್ನುವುದು ಹೇಗೆ (ಸಮಂಜಸ ವಾದೀತು)[2]? ಅಸತ್ತಿನ ಧರ್ಮಕ್ಕೆ ಸತ್ವೇನ ಪ್ರತೀತಿಯು ಇದೆ ಹೊರತಾಗಿ (ಅಸದ್‌ರೂಪ) ಧರ್ಮಿಗೆ ಇಲ್ಲ ಎನ್ನುವದು ನಿಯಮಬಾಹಿರವಾದದ್ದು[3].

ಇಲ್ಲಿ (ಶುಕ್ತಿಯಲ್ಲಿ) ತೋರಿದ ರಜತಕ್ಕೆ ಮತ್ತೊಂದೆಡೆ (ಅಂಗಡಿಯಲ್ಲಿ) ಸತ್ವವನ್ನು ಕಲ್ಪಿಸುವುದು ಪ್ರಮಾಣವಿರುದ್ಧವಾದುದು[4]. ವಿಜ್ಞಾನವಾದಿಗಳೂ ಸಹ

1. 'ಸತ್ತಿಗೆ ಸದಂತರಾತ್ಮತೆಯು-ಶುಕ್ತಿಗೆ ರಜತಾತ್ಮತೆಯು ಅಸತ್ತು' ಎಂದು ತೋರಿದಲ್ಲಿ ಇದ್ದದ್ದು ಇದ್ದಂತೆ ತೋರಿತು ಎಂದು ಒಪ್ಪಿದಂತಾಗುವುದು. ಇದನ್ನು ಭ್ರಾಂತಿಜ್ಞಾನ ಎಂದು ವ್ಯವಹರಿಸಲಾಗದು ಎಂದು ಭಾವ.

2. ಸತ್ತಿಗೆ ಸದಂತರಾತ್ಮತೆಯು 'ಅಸತ್' ಎಂದು ಒಪ್ಪಿಕೊಳ್ಳಲಾಗಿದೆ. ಇಂತಹ ಅಸತ್ತು ತೋರುವುದು ಎಂದು ಪ್ರತಿಪಾದಿಸಿದಲ್ಲಿ 'ಅಸತ್ತಿಗೆ ಸತ್ವೇನ ಪ್ರತೀತಿಯು ಇಲ್ಲ' ಎನ್ನುವ ಮಾತು ಸಮಂಜಸವಲ್ಲ ಎಂದು ಭಾವ.

3. 'ಸತ್ತಿನಲ್ಲಿ ಸದಂತರತ್ವ ಎನ್ನುವುದು ಅಸತ್, ಅಂದರೆ 'ಸದಂತರತ್ವ' ಎನ್ನುವುದು ಧರ್ಮ ಧರ್ಮಿಯಲ್ಲ. ಅಸತ್ತಾದ ಧರ್ಮಿಗೆ ಪ್ರತೀತಿಯು ಇಲ್ಲ ಎನ್ನುವುದು ನಮ್ಮ ವಾದ, ಧರ್ಮವು ತೋರಿದಲ್ಲಿ ನಮ್ಮ ವಾದಕ್ಕೆ ಭಂಗವಿಲ್ಲ' ಎಂದು ಹೇಳುವುದು ತರವಲ್ಲ. ಅಸತ್ತಾದ ಧರ್ಮಿಗೆ ಭಾನವಿಲ್ಲ ಅಸತ್ತಾದ ಧರ್ಮಕ್ಕೆ ಭಾನ ಇರಬಹುದು ಇಂತಹ ನಿಯಮಬಾಹಿರ ವಾದವು ದೃಢವಾಗಲಾರದು ಎಂದು ಭಾವ.

4. ಅಸತ್ತಿಗೆ ಪ್ರತೀತಿಯು ಇಲ್ಲ ಎಂದು ವಾದಿಸುವ ನೈಯಾಯಿಕರು ತಮ್ಮ ವಾದವನ್ನು ಈ ರೀತಿಯಲ್ಲಿ ಮಂಡಿಸುವರು- 'ಇದಂ ರಜತಂ' ಎಂಬ ಭ್ರಾಂತಿಜ್ಞಾನವು ಇದೆ. ಆದರೆ ಇಲ್ಲಿ 'ರಜತಂ' ಎಂದು ಭಾಸವಾದದ್ದು ಅಸತ್ತಾದ ರಜತವಲ್ಲ, ಪ್ರತ್ಯುತ ತಾನು ಈ ಹಿಂದೆ ಅಂಗಡಿಯಲ್ಲಿ ಕಂಡಿದ್ದು ಸತ್ತಾದದ್ದು ಇಲ್ಲಿ ಪ್ರತೀತವಾಗಿದೆ. ಹಾಗಾದಲ್ಲಿ ಈ ಅರಿವು ಅಯಥಾರ್ಥ ಎಂದು ಏಕೆ ವ್ಯವಹರಿಸಬೇಕು? ಅಂಗಡಿಯಲ್ಲಿ ಸತ್ತಾದ ರಜತವು, ಪ್ರಕೃತ ಶುಕ್ತಿಯಲ್ಲಿ ಸಂಬದ್ಧವಾಗಿ ತೋರುತ್ತಿದೆ. 'ರಜತವು ಇಲ್ಲಿ ಸಂಬದ್ಧವಾಗಿದೆ' ಎಂಬ ಈ ಅಂಶ ಮಾತ್ರ ಅಸತ್, ಆದುದರಿಂದ ಇದು ಭ್ರಾಂತಿ. ಸಂಬಂಧ ಎನ್ನುವುದು ಧರ್ಮ ಅದು ಅಸತ್. ಧರ್ಮಿಯಾದ ರಜತವು ಸತ್, ಹಾಗಾಗಿ ಅಸತ್ತಿಗೆ ಪ್ರತೀತಿಯು ಇಲ್ಲ ಎಂದು. ಆದರೆ

ಪುಟ 630ರಲ್ಲಿ........

ಅಂತರವಾದ (ಪದಾರ್ಥಕ್ಕೆ) ಬಾಹ್ಯತ್ವವು ಅತ್ಯಂತ ಅಸತ್ ಅದು ಸತ್ತಾಗಿ ತೋರುತ್ತದೆ ಎಂದು ಒಪ್ಪಲೇ ಬೇಕು[1]. ಇದರಿಂದ ವಿಭಿನ್ನವಾಗಿ (ಭ್ರಾಂತಿಯಲ್ಲಿ ಅಸತ್ತಿಗೆ ಸತ್ವೇನ ಪ್ರತೀತಿಯ ಅಂಗೀಕಾರದ ಹೊರತಾಗಿ) ಭ್ರಾಂತಿತ್ವವು ಅನುಪಪನ್ನವಾದುದರಿಂದ, ಅದರ (ಭ್ರಾಂತಿಯ) ಲೋಭದಿಂದ (ಲೋಕ ವ್ಯವಹಾರದಲ್ಲಿ ಭ್ರಮಾಜ್ಞಾನವಿದೆ ಎಂಬ ವ್ಯವಹಾರವನ್ನು ನಿರ್ವಹಿಸುವ ಸಲುವಾಗಿ) ಅವಶ್ಯವಾಗಿ ಅಸತ್ತಿಗೆ ಸತ್ವೇನ ಪ್ರತೀತಿಯನ್ನು ಒಪ್ಪಲೇ ಬೇಕು, ಆದ್ದರಿಂದ ಬಾಧಕಪ್ರತ್ಯಯಕ್ಕೆ (ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಬಾಧಕ ಪ್ರತ್ಯಯಕ್ಕೆ) ವಿಷಯಾಂತರವನ್ನು (ಸತ್ತ್ವಾಭಾವವು ಈ ಬಾಧಕಪ್ರತ್ಯಯಕ್ಕೆ ವಿಷಯವೆಂದು) ಕಲ್ಪಿಸಬಾರದು. ಅರ್ಥಾಪತ್ತಿಯ (ಸಚ್ಚೇನ್ನ ಬಾಧ್ಯೇತ, ಅಸಚ್ಚೇನ್ನ ಪ್ರತೀಯೇತ' ಎನ್ನುವ ಅರ್ಥಾಪತ್ತಿಯ) ಸಮರ್ಥನವೂ ಸಲ್ಲದು ಎಂದು[2].

---

...... ಪುಟ 629 ರಿಂದ

'ಶುಕ್ತಿಯಲ್ಲಿ ತೋರಿದ ರಜತವು ಅಂಗಡಿಯಲ್ಲಿ ಇದೆ. ಎಂದು ವಾದಿಸುವುದು ಪ್ರಮಾಣವಿರುದ್ಧವಾದ ಸಂಗತಿ. ಈ ಭ್ರಾಂತಿಗೆ ಬಾಧಕಪ್ರತ್ಯಯವು ಪ್ರಾಪ್ತವಾದಾಗ, ತಾನು ಈ ಹಿಂದೆ ಅನುಭವಿಸಿದ ರಜತದ ಸ್ಮರಣೆಯು ಈಗ ಪ್ರಾಪ್ತವಾಗಿದೆ, ಪ್ರಕೃತದಲ್ಲಿ ತೋರುತ್ತಿರುವ ರಜತ ಮತ್ತು ಅಂಗಡಿಯಲ್ಲಿ ಈ ಹಿಂದೆ ನಾ ಕಂಡಿದ್ದ ರಜತವೂ ಬೇರೇ' ಎಂಬ ಅನುಭವವು ಪ್ರಾಪ್ತವಾಗಬೇಕಿತ್ತು, ಆದರೆ ಅಂತಹ ಅನುಭವವೂ ಎಲ್ಲೂ ಕಂಡಿಲ್ಲ. 'ನೇದಂ ರಜತಂ' ಎಂದಿಷ್ಟೇ ಎಲ್ಲರ ಅನುಭವದಲ್ಲಿದೆ. ಈ ಮುಂತಾದ ಇನ್ನೂ ಅನೇಕ ಅನುಪಪತ್ತಿಗಳು ಇರುವುದರಿಂದ ಇದು ಪ್ರಮಾಣವಿರುದ್ಧವಾದ ಸಂಗತಿ ಎಂದು ಭಾವ.

1. ಬೌದ್ಧರು 'ಇದಂ ರಜತಂ' ಎಂದು ತೋರುತ್ತಿರುವ ರಜತವು ವಿಜ್ಞಾನಾತ್ಮಕ. ಅಂದರೆ- ಅರಿವಿದ್ದಾಗ ಮಾತ್ರ ಈ ರಜತವು ಇರುವುದು. ಜ್ಞಾನದಿಂದ ವ್ಯತಿರಿಕ್ತವಾದ ಅಸ್ತಿತ್ವವು ಈ ಪದಾರ್ಥಕ್ಕೆ ಇಲ್ಲ ಎನ್ನುವುದು ಅವರ ಅಭಿಮತ. ಆದರೆ ಅರಿವು ಅಂತಃಕರಣದ ಧರ್ಮ. ಆದರೆ ಅರಿವಿನಲ್ಲಿ ತೋರುವ ಈ ಪದಾರ್ಥದಲ್ಲಿ ಬಾಹ್ಯತ್ವ ರೂಪ ಧರ್ಮವು ತೋರುತ್ತಿದೆ. ಸುಖ-ದುಃಖಗಳಲ್ಲಿ ತೋರುತ್ತಿರುವಂತೆ ಅಂತಃಸ್ಥತ್ವವು ತೋರುತ್ತಿಲ್ಲ. ಈ ಬಾಹ್ಯತ್ವವು ಅತ್ಯಂತಾಸತ್, ಆದುದರಿಂದ ಅಸತ್ತಿಗೆ ಪ್ರತೀತಿಯನ್ನು ಬೌದ್ಧರೂ ಅಂಗೀಕರಿಸಬೇಕೆಂದು ಭಾವ.

2. ತತ್ತ್ವವಾದಿಗಳು ಶಂಕಿಸಿದ್ದರು 'ಅಸತ್ತಿನ ಪ್ರತೀತಿಯಿಲ್ಲದೇ ಅದರ ಭೇದದ ಅರಿವು ಆಗಲಾರದು. ಅನಿರ್ವಚನೀಯತ್ವದಲ್ಲಿ ಅಸದ್ವಿಲಕ್ಷಣತ್ವವು ಘಟಿತವಾಗಿದೆ. ಹಾಗಾಗಿ ಅರ್ಥಾಪತ್ತಿಯಿಂದ ಅನಿರ್ವಚನೀಯತ್ವವು ಸಿದ್ಧವಾಗಲಾರದು' ಎಂದು. ಅಸತ್ತಿಗೆ ಸತ್ವೇನ

ಪುಟ 631ರಲ್ಲಿ........

**ಅದ್ವೈತಿಗಳೂ ಅಸತ್ತಿಗೆ ಪ್ರತೀತಿಯನ್ನು ಒಪ್ಪಲೇ ಬೇಕು**

**ನ ಚ ಅಸತೋ ಭ್ರಾನ್ತಾವಪಿ ಪ್ರತೀತಿರ್ನಾಸ್ತೀತಿ ವಾಚ್ಯಮ್। ಅನಿರ್ವಚನೀಯಪರಮಾರ್ಥತ್ವಸ್ಯಾಸತ ಏವ ದೃಷ್ಟ್ಯಙ್ಗೀಕಾತ್ ।**

'ಭ್ರಾಂತಿಯಲ್ಲೂ ಅಸತ್ತಿಗೆ (ಸತ್ವೇನ) ಪ್ರತೀತಿಯು ಇಲ್ಲ' ಎಂದು ಹೇಳುವುದು ತರವಲ್ಲ. ಪ್ರಾತಿಭಾಸಿಕವಾದ ರಜತದಲ್ಲಿ ತೋರಿದ ವ್ಯಾವಹಾರಿಕಸತ್ತು ಅಸತ್ತೇ ಆಗಿದೆ, ಅದಕ್ಕೆ ಪ್ರತೀತಿಯನ್ನು ಒಪ್ಪಿರುವುದರಿಂದ.

ಭವೇದಯಂ ದೋಷೋಽನ್ಯೇಷಾಂ 'ಯದ್ ಅಸತಃ ಸತ್ವೇನಾಪ್ರತೀತೌ ಭ್ರಾನ್ತ್ಯಭಾವಪ್ರಸಙ್ಗಃ' ಇತಿ । ಮಮ ತು 'ಅನಿರ್ವಚನೀಯಾರ್ಥಾವಭಾಸೋ ಭ್ರಮಃ' ಇತ್ಯಙ್ಗೀಕೃತತ್ವಾದ್ 'ಅಸತೋ ಭ್ರಾನ್ತಾವಪಿ ಪ್ರತೀತಿರ್ನಾಸ್ತಿ' ಇತ್ಯಙ್ಗೀಕೃತೇಽಪಿ ನ ಕಶ್ಚಿದ್ದೋಷ ಇತ್ಯಾಶಙ್ಕ್ಯ ಪ್ರತಿಷೇಧತಿ **'ನ ಚ'** ಇತಿ । **ಪ್ರತೀತಿಃ** 'ಸತ್ವೇನ' ಇತಿ ಶೇಷಃ । ಕುತೋ ನ ವಾಚ್ಯಮ್? ಇತಿ ಚೇತ್ 'ರಜತಮ್ ಅನಿರ್ವಚನೀಯಮ್' ಇತಿ ಪಕ್ಷೇಽಪಿ ತತ್ಕಿಮ್ ಅನಿರ್ವಚನೀಯತಯಾ ಪ್ರತೀಯತೇ, ಉತಾಸತ್ವೇನ, ಅಥ ಸತ್ವೇನ? ನ ಪ್ರಥಮದ್ವಿತೀಯೌ, ತಥಾ ಪ್ರತೀತ್ಯನುಪಲಮ್ಭಾತ್ । ಪ್ರವೃತ್ತ್ಯಭಾವಪ್ರಸಙ್ಗಾಚ್ಚ । ನ ಹಿ ಅಸತ್ಪ್ರಾತಿಭಾಸಿಕಂ ವಾ ಕದಾಚಿದ್ ಅನೇನ ಅರ್ಥಕ್ರಿಯಾಸೂಪಯುಜ್ಯಮಾನಂ ದೃಷ್ಟಂ ಯೇನಾಸತ್ವಾದಿಕಂ ಪ್ರತೀತ್ಯಾಪಿ ಪ್ರವರ್ತೇತ । ತಸ್ಮಾತ್ 'ಸತ್ವೇನೈವ ಪ್ರತೀಯತೇ' ಇತ್ಯಙ್ಗೀಕಾರ್ಯಮ್ । ತಥಾ ಚ ಪ್ರತೀತಿಪ್ರವೃತ್ತೀ ಯುಜ್ಯೇತೇ । ನ ಚ 'ರಜತಪ್ರತೀತಿಮಾತ್ರಾತ್ ಪ್ರವೃತ್ತಿಃ' ಇತಿ ವಾಚ್ಯಮ್, ಅನುಭವವಿರೋಧಾತ್ । ವಿಧಿ-ನಿಷೇಧಾವವಧೂಯ ಪ್ರತ್ಯಯಾಯೋಗಾಚ್ಚ ।

---

...... ಪುಟ 630 ರಿಂದ
ಖ್ಯಾತಿಯಿಲ್ಲದಿದ್ದರೂ, ಅಂದರೆ– 'ಶಶವಿಷಾಣಂ ಅಸ್ತಿ' ಎಂಬ ಖ್ಯಾತಿಯು ಇಲ್ಲದಿದ್ದರೂ, ಅಸತ್ತಿಗೆ ಸತ್ವಾಭಾವತ್ವೇನ ಖ್ಯಾತಿಯು 'ಶಶವಿಷಾಣಂ ನಾಸ್ತಿ' ಎಂಬ ಖ್ಯಾತಿಯು ಇದೆ ಎಂದು ಅವರು ಒಪ್ಪಿರುವದರಿಂದ ಅರ್ಥಾಪತ್ತಿಯು ಅನಿರ್ವಚನೀಯವನ್ನು ಸಾಧಿಸಬಹುದು ಎಂದು ಅದ್ವೈತವಾದಿಗಳು ಉತ್ತರಿಸಿದ್ದರು, ಪ್ರಕೃತ ಅದೂ ಸರಿಯಾಗದು ಎನ್ನುತ್ತಾರೆ, ಅಸತ್ತಿಗೆ ಸತ್ವಾಭಾವತ್ವೇನ ಖ್ಯಾತಿಯು ಇದೆ ಎಂದು ಒಪ್ಪಿದರೂ ಅಸತ್ತಿಗೆ ಖ್ಯಾತಿಯನ್ನು ಒಪ್ಪಲೇ ಬೇಕು ಎಂದು ಭಾವ.

'ಅಸತ್ತಿಗೆ ಸತ್ತ್ವೇನ ಪ್ರತೀತಿಯು ಇಲ್ಲ ಎಂದಾದಲ್ಲಿ ಭ್ರಾಂತಿಯೇ ಇಲ್ಲವಾದೀತು' ಎನ್ನುವ ಆಪತ್ತಿಯು ಬೇರೇ ವಾದಿಗಳಿಗೆ (ತಾರ್ಕಿಕಾದಿಗಳಿಗೆ) ಅನ್ವಯವಾಗಬಹುದು. ನಾವಾದರೋ (ಅದ್ವೈತವಾದಿಗಳಾದರೋ) ಭ್ರಮದಲ್ಲಿ ಅನಿರ್ವಚನೀಯವಾದ ಪದಾರ್ಥದ ಅವಭಾಸವು (ಇದೆ) ಎಂದು ಅಂಗೀಕರಿಸಿರುವುದರಿಂದ, 'ಭ್ರಾಂತಿಯಲ್ಲೂ ಸಹ ಅಸತ್ತಿಗೆ ಅವಭಾಸವು ಇಲ್ಲ' ಎಂದು ಒಪ್ಪಿದರೆ ಯಾವ ದೋಷವೂ ಇಲ್ಲ ಎಂದು ಸಂದೇಹಿಸಿ, ಉತ್ತರಿಸುತ್ತಾರೆ 'ನ ಚ' ಎಂದು. ಪ್ರತೀತಿಃ (ಈ ಶಬ್ದದ ಅನಂತರದಲ್ಲಿ) 'ಸತ್ತ್ವೇನ' ಎಂದು ಶೇಷಪೂರಣಮಾಡಿಕೊಳ್ಳುವುದು. ಏಕೆ ಹೇಳಬಾರದು? ಎಂದಲ್ಲಿ, (ಶುಕ್ತಿಯಲ್ಲಿ ತೋರಿದ) ರಜತವು ಅನಿರ್ವಚನೀಯ ಎನ್ನುವದಾದಲ್ಲಿ, ಅದು (ಆ ರಜತವು) ಅನಿರ್ವಚನೀಯತ್ವೇನ ತೋರುವುದೋ, ಅಥವಾ ಅಸತ್ತ್ವೇನ ತೋರುವುದೋ ಅಥವಾ ಸತ್ತ್ವೇನ ತೋರುವುದೋ? ಮೊದಲ ಮತ್ತು ಎರಡನೆಯ ಪಕ್ಷಗಳಾಗವು, ಆ ರೀತಿಯಲ್ಲಿ ಪ್ರತೀತಿಯು ಇಲ್ಲದಿರುವುದರಿಂದ[1]. ಮತ್ತೂ ಸಹ ಪ್ರವೃತ್ತಿಯು ಇಲ್ಲದೇ ಹೋಗಬೇಕಾದೀತು. ಅಸತ್ತಿಗಾಗಲಿ, ಪ್ರಾತಿಭಾಸಿಕಸತ್ತಾಕ್ಕಾಗಲಿ ಎಲ್ಲೂ ವ್ಯವಹಾರದಲ್ಲಿ (ಪ್ರವೃತ್ತ್ಯಾದಿಗಳಿಗೆ) ಪ್ರಯೋಜಕವಾಗಿರುವುದನ್ನು ಆತನು ಅನುಭವಿಸಿಲ್ಲ, ಕಂಡಿದ್ದಲ್ಲಿ ಅಸತ್ತ್ವಾದಿಗಳನ್ನು ಉದ್ದೇಶಿಸಿಯೂ ಪ್ರವೃತ್ತಿಯು ಉಂಟಾದೀತು[2]. ಆದುದರಿಂದ ('ಇದಂ ರಜತಂ' ಎಂಬ ಅರಿವು ಇದ್ದಾಗ ಪ್ರವೃತ್ತನಾದುದರಿಂದ) (ರಜತವು) ಸತ್ತ್ವೇನ ಪ್ರತೀತವಾಗಿದೆ ಎಂದೇ ಒಪ್ಪಬೇಕು. ಹಾಗಾದಲ್ಲಿ ಮಾತ್ರ ಪ್ರತೀತಿ ಮತ್ತು ಪ್ರವೃತ್ತಿಗಳು ಸಮಂಜಸವಾಗುವವು. ಕೇವಲ ರಜತದ ಪ್ರತೀತಿಯು ಪ್ರವೃತ್ತಿಗೆ ಕಾರಣ ಎಂದು ಹೇಳುವುದು

1. 'ಇದಂ ರಜತಂ' ಎನ್ನುವ ಅರಿವಿನಲ್ಲಿ 'ರಜತವು ಸತ್' ಎಂದು ತೋರುವುದೇ ಹೊರತು, ಅನಿರ್ವಚನೀಯ ಎಂದಾಗಲೀ, ಅಸತ್ ಎಂದಾಗಲೀ ತೋರುತ್ತಿಲ್ಲ ಎನ್ನುವುದು ಎಲ್ಲರ ಅನುಭವದಲ್ಲಿದೆ ಎಂದು ಭಾವ.

2. 'ಇದಂ ಜಲಂ' ಎಂದು ಜಲಜ್ಞಾನವು ಬಂದಾಗ, ಜಲವು ಸತ್ ಎಂಬ ಅರಿವು ಇರುವುದರಿಂದ ಜಲಾರ್ಥಿಯು ಅಲ್ಲಿ ಪ್ರವೃತ್ತನಾಗುವನು. ಆದರಂತೆ 'ಇದಂ ರಜತಂ' ಎಂದು ಅರಿವು ಬಂದಾಗ ರಜತವು ಸತ್ ಎಂಬ ಅರಿವು ಇರುವುದರಿಂದಲೇ ರಜತಾರ್ಥಿಯು ಆ ಶುಕ್ತಿಯನ್ನು ಉದ್ದೇಶಿಸಿ ಪ್ರವೃತ್ತನಾಗುವನು. ಹೀಗೇ ಎಲ್ಲೆಡೆ ಪ್ರವೃತ್ತಿಗೆ ಸತ್ತ್ವೇನ ಪ್ರತೀತಿಯು ಕಾರಣವಾಗಿ ಕಂಡಿದೆಯೇ ಹೊರತು ಅನಿರ್ವಚನೀಯತ್ವೇನ ಅಥವಾ ಅಸತ್ತ್ವೇನ ಪ್ರತೀತಿಯು ಕಾರಣವಾಗಿ ಕಂಡಿಲ್ಲ ಎಂದು ಭಾವ.

ತರವಲ್ಲ[1]. ಅನುಭವಕ್ಕೆ ವಿರುದ್ಧವಾಗಿರುವುದರಿಂದ[2]. ವಿಧಿ-ನಿಷೇಧಗಳ ಹೊರತಾಗಿ (ಮೂರನೇ ರೀತಿಯಲ್ಲಿ) ಅರಿವೇ ಅಯುಕ್ತವಾಗಿರುವುದರಿಂದ[3].

**ತತ್ ಸತ್ವಂ ಸದ್-ಅಸದ್-ಅನಿರ್ವಚನೀಯಂ ವಾ । ನಾದ್ಯಃ, ಅನಿರ್ವಚನೀಯತಾವಿರೋಧಾತ್ । ನ ಹಿ 'ಯಸ್ಯ ಸತ್ವಂ ಸತ್, ತದನಿರ್ವಾಚ್ಯಮ್' ಇತಿ ಭವತಿ । ತಸ್ಮಾತ್ ದ್ವಿತೀಯೋಽಙ್ಗೀಕಾರ್ಯಃ । ತತಃ ಕಿಮ್? ಇತ್ಯತ ಆಹ 'ಅನಿರ್ವಚನೀಯ..' ಇತಿ । ಅನಿರ್ವಚನೀಯಸ್ಯ-ಪ್ರಾತಿಭಾಸಿಕಸ್ಯ ರಜತಸ್ಯ ಯತ್ ಪರಮಾರ್ಥತ್ವಂ- ವ್ಯಾವಹಾರಿಕಸತ್ವಂ ತಸ್ಯಾಸತ ಏವ ಸತ್ವೇನ ದೃಷ್ಟ್ಯಙ್ಗೀಕಾರಾತ್, ನ 'ಅಸತೋ ಭ್ರಾನ್ತಾವಪಿ ಸತ್ವೇನ ಪ್ರತೀತಿರ್ನಾಸ್ತಿ' ಇತಿ ವಾಚ್ಯಮ್, ಇತಿ ।**

ಆ ಸತ್ವವು (ಶುಕ್ತಿರಜತದಲ್ಲಿ ತೋರಿದ ಸತ್ವವು) ಸತ್ತೋ, ಅಸತ್ತೋ ಅಥವಾ ಅನಿರ್ವಚನೀಯವೋ? ಮೊದಲ ಪಕ್ಷವು ಸರಿಯಾಗದು, ಅನಿರ್ವಚನೀಯತ್ವದ ವಿರೋಧವು ಇರುವುದರಿಂದ. ಯಾವ (ಪದಾರ್ಥದಲ್ಲಿರುವ) ಸತ್ವವು ಸತ್ತಾಗಿರುವುದೋ ಅದು ಅನಿರ್ವಾಚ್ಯವಾಗ-ಲಾರದು[4]. ಆದುದರಿಂದ ಎರಡನೆಯ ಪಕ್ಷವನ್ನು (ರಜತದಲ್ಲಿ ತೋರಿರುವ ಸತ್ವವು ಅಸತ್ ಎಂಬ ಪಕ್ಷವನ್ನು) ಅಂಗೀಕರಿಸಬೇಕು. (ಒಪ್ಪಿದಲ್ಲಿ) ಏನಾಯಿತು?

---

1. ರಜತದಲ್ಲಿ ಸತ್ವವಾಗಲೀ, ಅಸತ್ವವಾಗಲೀ ಅನಿರ್ವಚನೀಯತ್ವವಾಗಲೀ ಭಾನವಾಗುವುದಿಲ್ಲ, ಕೇವಲ ರಜತತ್ವೇನ ಭಾನವಾಗುವುದು ಎಂದು. ಆದರೆ ಕೇವಲ ರಜತತ್ವೇನ ರಜತದ ಪ್ರತೀತಿಯು ಪ್ರವೃತ್ತಿಗೆ ಕಾರಣವಾಗುವುದು ಎಂದು ಹೇಳುವುದು ತರವಾಗಲಾರದು ಎಂದು ಭಾವ.

2. ರಜತಾರ್ಥಿಯು ಶುಕ್ತಿರಜತವನ್ನುದ್ದೇಶಿಸಿ ಪ್ರವೃತ್ತನಾಗುವನು. ಪ್ರವೃತ್ತನಾದನಿವಗೆ 'ಸದಿದಂ ರಜತಂ ಎಂದೇ, ಪ್ರತೀತಿಯು ಇದೆ' ಎಂದು ಎಲ್ಲರ ಅನುಭವ ಎಂದು ಭಾವ.

3. ಯಾರಿಗೇ ಆಗಲಿ ಯಾವುದೇ ವಿಷಯಕವಾದ ಅರಿವಾಗಲಿ 'ಇದಮಸ್ತಿ' ಅಥವಾ 'ಇದಂ ನಾಸ್ತಿ' ಎಂದು ವಿಧ್ಯಾತ್ಮಕ ಅಥವಾ ನಿಷೇಧಾತ್ಮಕವಾಗಿ ಅರಿವು ಇರುವುದೇ ಹೊರತು ಮೂರನೇ ರೀತಿಯಲ್ಲಿ ಪ್ರತೀತವಾಗಿರದು ಎಂದು ಭಾವ.

4. ಹೇಗೆ ಬ್ರಹ್ಮನಲ್ಲಿರುವ ಸತ್ವವು ಸತ್ ಆಗಿರುವುದರಿಂದ ಆ ಸತ್ತಿಗೆ ಅನಿರ್ವಾಚ್ಯತ್ವವು ಇಲ್ಲವೋ ಹಾಗೆಯೇ ಪ್ರಕೃತದಲ್ಲಿ ರಜತದಲ್ಲಿ ತೋರಿದ ಸತ್ ಸತ್ತಾದಲ್ಲಿ ಅನಿರ್ವಾಚ್ಯತ್ವವನ್ನು ಒಪ್ಪಲಾಗದು ಎಂದು ಭಾವ.

ಆದುದರಿಂದ ಉತ್ತರಿಸುತ್ತಾರೆ 'ಅನಿರ್ವಚನೀಯ..' ಎಂದು. **ಅನಿರ್ವಚನೀಯಸ್ಯ**- ಪ್ರಾತಿಭಾಸಿಕವಾದ ರಜತದ, ಯಾವ **ಪರಮಾರ್ಥತ್ವಂ**- ವ್ಯಾವಹಾರಿಕಸತ್ವವು, ಅದು ಅಸತ್ತಾದದ್ದು,(ಅದಕ್ಕೆ) ಸತ್ತಾಗಿ ಪ್ರತೀತಿಯನ್ನು ಅಂಗೀಕರಿಸಿರುವುದರಿಂದ '**ಅಸತ್ತಿಗೆ ಭ್ರಾಂತಿಯಲ್ಲಿಯೂ ಸತ್ತ್ವೇನ ಪ್ರತೀತಿಯು** ಇಲ್ಲ' ಎಂದು ಹೇಳುವುದು ತರವಲ್ಲ ಎಂದು[1].

**ಶುಕ್ತಿರಜತದಲ್ಲಿ ತೋರಿದ ವ್ಯಾವಹಾರಿಕಸತ್ ಅನಿರ್ವಚನೀಯವಾಗದು**

**ನ ಚ ತದಪ್ಯನಿರ್ವಾಚ್ಯಮ್, ಅನವಸ್ಥಿತೇಃ । ಪ್ರಥಮಾನಿರ್ವಾಚನೀಯಾಸಿಧ್ಯಾ ಸರ್ವಾನಿರ್ವಚನೀಯಾಸಿದ್ಧಿರಿತಿ ಮೂಲಕ್ಷತಿಃ ।**

ಶುಕ್ತಿರಜತದಲ್ಲಿ ತೋರಿದ ವ್ಯಾವಹಾರಿಕಸತ್ತಿಗೂ ಅನಿರ್ವಾಚ್ಯತ್ವವನ್ನು (ಪ್ರಾತಿಭಾಸಿಕತ್ವವನ್ನು) ಒಪ್ಪುವುದು ತರವಲ್ಲ, ಅನವಸ್ಥಾದೋಷವು ಪ್ರಾಪ್ತವಾಗುವುದರಿಂದ[2]. (ಬೀಜಾಂಕುರದ ಪರಂಪರೆಯಂತೆ ಅನಿರ್ವಚನೀಯಗಳ

---

1. ಶುಕ್ತಿರಜತವು ಪ್ರಾತಿಭಾಸಿಕ ಸತ್ವವನ್ನು ಹೊಂದಿದೆ ಎಂದು ಪರವಾದಿಗಳು ಒಪ್ಪಿರುವರು. ಆದರೆ 'ಇದಂ ರಜತಂ' ಎಂಬ ಅರಿವು ಬಂದಾಗ ರಜತಾರ್ಥಿಯು ರಜತಕ್ಕಾಗಿ ಪ್ರವೃತ್ತನಾಗುವುದರಿಂದ, ಪ್ರವೃತ್ತಿಗೆ ಕಾರಣವಾದ ವ್ಯಾವಹಾರಿಕ ಸತ್ತು ಪ್ರತಿಭಾಸಮಾನವಾಗಿದೆ ಎಂದು ಒಪ್ಪಬೇಕು. ಆದರೆ ಅಲ್ಲಿ ತೋರುತ್ತಿರುವ ವ್ಯಾವಹಾರಿಕಸತ್ ಅಸತ್ತಾಗಿದೆ. ಹೀಗಾಗಿ ಭ್ರಾಂತಿಯಲ್ಲಿಯೂ ಅಸತ್ತಿಗೆ- ಅಸತ್ತಾದ ವ್ಯಾವಹಾರಿಕಸತ್ವಕ್ಕೆ ಪ್ರತೀತಿಯು ಇರುವುದರಿಂದ ಅಸತ್ತಿಗೆ ಪ್ರತೀತಿಯು ಇಲ್ಲ ಎನ್ನುವ ವಾದವು ವಿರುದ್ಧವಾಗುವುದು ಎಂದು ಭಾವ.

2. ಇಲ್ಲಿ ಗಮನಿಸಬೇಕಾದ ವಿಷಯ- ಶುಕ್ತಿಯನ್ನು ಕಂಡು 'ಇದಂ ರಜತಂ' ಎಂಬ ಭ್ರಮಾತ್ಮಕವಾದ ಅರಿವು ಪ್ರಾಪ್ತವಾಗುವುದು. ಈ ಅರಿವಿನಲ್ಲಿ ತೋರುವ ರಜತವು ಪ್ರಾತಿಭಾಸಿಕವಾದದ್ದು. ನಾವು ವ್ಯವಹರಿಸುವ ಜಗವು ವ್ಯಾವಹಾರಿಕ ಸತ್ತನ್ನು ಹೊಂದಿದೆ. ಈ ಎರಡೂ ಸತ್ತುಗಳನ್ನು ಅನಿರ್ವಚನೀಯ ಎಂದು ವ್ಯವಹರಿಸುವರು. ಬ್ರಹ್ಮನಲ್ಲಿ ಇರುವ ಸತ್ ಪಾರಮಾರ್ಥಿಕ ಸತ್. ಹೀಗೆ ಮೂರುವಿಧವಾದ ಸತ್ತನ್ನು ಅದ್ವೈತವಾದಿಗಳು ಒಪ್ಪಿರುವರು. ಇವುಗಳಲ್ಲಿ ಪ್ರಾತಿಭಾಸಿಕ ಸತ್ ಮತ್ತು ವ್ಯಾವಹಾರಿಕ ಸತ್ ಪ್ರತ್ಯಕ್ಷಕ್ಕೆ ವಿಷಯವಾಗುವವು. ಆದರೆ ಪ್ರವೃತ್ತಿ ಮುಂತಾದ ವ್ಯವಹಾರಕ್ಕೆ ವಿಷಯವಾಗುವುದು ವ್ಯಾವಹಾರಿಕಸತ್ ಮಾತ್ರ, ಇದನ್ನು ಅರ್ಥಕ್ರಿಯಾಕಾರಿ ಎನ್ನುವರು. ಶುಕ್ತಿಯನ್ನು ಕಂಡು 'ಇದಂ ರಜತಂ' ಎಂದು ಭ್ರಾಂತನಾದ ವ್ಯಕ್ತಿಗೆ ಬೆಳ್ಳಿಯು ತೋರಬಹುದು. ಆದರೆ ಆ ಬೆಳ್ಳಿಯಲ್ಲಿ ಪ್ರವೃತ್ತನಾಗಬೇಕಾದಲ್ಲಿ ಬೆಳ್ಳಿಯಲ್ಲಿ ವ್ಯಾವಹಾರಿಕಸತ್ ತೋರಬೇಕು. ಅಂದರೆ

ಪುಟ 635ರಲ್ಲಿ........

ಪರಂಪರೆಯನ್ನು ಒಪ್ಪಿದಲ್ಲಿ ದೋಷವೇನು?) ಮೊದಲ ಅನಿರ್ವಚನೀಯವು ಸಿದ್ಧವಾಗದೇ (ಮುಂದಿನ) ಯಾವ ಅನಿರ್ವಚನೀಯದ ಕಲ್ಪನೆಯೂ ಸಿದ್ಧವಾಗದು ಎಂದು ಮೂಲಕ್ಕೇ (ಮೊದಲ ಅನಿರ್ವಚನೀಯಕ್ಕೆ) ಕ್ಷತಿ.

**ನನು ರಜತಸ್ಯಾಪಿ ಪ್ರಾತಿಭಾಸಿಕಂ ಸತ್ವಮಸ್ತ್ಯೇವ । ಮೈವಂ, ವ್ಯಾವಹಾರಿಕತ್ವಾಪ್ರತೀತೌ ಪ್ರವೃತ್ತ್ಯಭಾವಸ್ಯ ಉಕ್ತತ್ವಾತ್ । ಸತ್ಯಂ, ಪ್ರಾತಿಭಾಸಿಕಂ ರಜತಂ ವ್ಯಾವಹಾರಿಕತಯಾ ಪ್ರತೀಯತ ಇತಿ । ತಥಾಽಪಿ ನ ಸಾ ಸತೀ ನಾಪ್ಯಸತೀ, ಕಿನ್ತು ಶುಕ್ತಿಕೇದನ್ತಾಸಂಸರ್ಗವತ್ ತದ್ ವ್ಯಾವಹಾರಿಕತಾಸಂಸರ್ಗಸ್ಯಾಪ್ಯನಿರ್ವಾಚ್ಯಸ್ಯಾಽರೋಪಿತಸ್ಯ ಪ್ರತಿಭಾಸಃ । ತತೋ 'ನ ಅಸತಃ ಸತ್ವೇನ ಪ್ರತೀತ್ಯಙ್ಗೀಕಾರಃ' ಇತಿ ತೃತೀಯಂ ಪಕ್ಷಂ ನಿರಾಕರೋತಿ 'ನ ಚ' ಇತಿ । ನ ಕೇವಲಂ ರಜತಂ ಅಪಿ ತು ಪ್ರಾತಿಭಾಸಕಸ್ಯ ರಜತಸ್ಯ ಯದ್ ವ್ಯಾವಹಾರಿಕಂ ಸತ್ವಂ ಪ್ರತೀಯತೇ ತದಪ್ಯನಿರ್ವಾಚ್ಯಂ, 'ಶುಕ್ತಿಕಾಗತಮೇವ ವ್ಯಾವಹಾರಿಕಂ ಸತ್ವಂ ರಜತೇ ಸಮಾರೋಪಿತಮ್' ಇತಿ ಚ ನೇತ್ಯರ್ಥಃ ಕುತಃ? ಇತ್ಯತ ಆಹ 'ಅನವಸ್ಥಿತೇಃ' ಇತಿ ।**

ಸರಿ, ರಜತಕ್ಕೂ ಸಹ ಪ್ರಾತಿಭಾಸಿಕ ಸತ್ವವು ಇದೆ (ಆದುದರಿಂದ ಭ್ರಾಂತಿಯಲ್ಲಿ ಅತ್ಯಂತ ಅಸತ್ತಿಗೆ ಭಾನವಿಲ್ಲ). ಇದು ಸರಿಯಾಗದು,

...... ಪುಟ 634 ರಿಂದ

ಶುಕ್ತಿರಜತದಲ್ಲಿ ವ್ಯಾವಹಾರಿಕಸತ್ ತೋರಿದೆ ಎಂದು ಒಪ್ಪಬೇಕು. ವಸ್ತುತಃ ಶುಕ್ತಿರಜತದಲ್ಲಿರುವ ಸತ್ ಪ್ರಾತಿಭಾಸಿಕ, ಅಂದರೆ ಅಸತ್ತಾದ ವ್ಯಾವಹಾರಿಕಸತ್ ತೋರಿತು ಎಂದು ಒಪ್ಪಬೇಕು. ಆದರೆ ಭ್ರಾಂತಿಯಲ್ಲೂ ಅಸತ್ತಿಗೆ ಭಾನವಿಲ್ಲ ಎಂಬುವುದು ಅವರ ಅಭಿಮತಿ. ಅಸತ್ತಿಗೆ ಭಾನವಿಲ್ಲ, ಅಸತ್ತಾದ ವ್ಯಾವಹಾರಿಕಸತ್ ತೋರದೇ ಶುಕ್ತಿರಜತದಲ್ಲಿ ಪ್ರವೃತ್ತಿಯು ಇಲ್ಲ. ಆದಕ್ಕಾಗಿ ಶುಕ್ತಿಯಲ್ಲಿ ತೋರಿದ ರಜತವು ಹೇಗೆ ಪ್ರಾತಿಭಾಸಿಕವೊ, ಹಾಗೆ ರಜತದಲ್ಲಿ ತೋರಿದ ವ್ಯಾವಹಾರಿಕಸತ್ ಸಹ ಪ್ರಾತಿಭಾಸಿಕ ಎಂದು ಪ್ರತಿಪಾದಿಸಬೇಕು. ತೋರಿದ ವ್ಯಾವಹಾರಿಕ ಸತ್ ಪುನಃ ಪ್ರಾತಿಭಾಸಿಕ ಎಂದು ತೋರಿದರೆ ಪ್ರವೃತ್ತಿಯು ತರವಾಗದು, ಹಾಗಾಗಿ ಶುಕ್ತಿರಜತದಲ್ಲಿ ತೋರಿದ ಪ್ರಾತಿಭಾಸಿಕ ಸತ್ತಿನಲ್ಲಿ ಆರೋಪಿಸಿದ ವ್ಯಾವಹಾರಿಕಸತ್ ಪ್ರಾತಿಭಾಸಿಕ ಎಂದು ತೋರದೇ, ವ್ಯಾವಹಾರಿಕಸತ್ ಎಂದೇ ತೋರುತ್ತದೆ ಎಂದು ಪ್ರತಿಪಾದಿಸಬೇಕು. ಪುನಃ ಹಿಂದಿನ ಆಪತ್ತಿಯು ಪ್ರಾಪ್ತವಾಗಲು ಪ್ರಾತಿಭಾಸಿಕಸತ್ ಮತ್ತು ವ್ಯಾವಹಾರಿಕಸತ್ ಇವುಗಳ ಪರಂಪರೆಯನ್ನು ಒಪ್ಪಬೇಕು. ಹೀಗೆ ಅನವಸ್ಥಾ ದೋಷವು ಪ್ರಾಪ್ತವಾಗುವುದು ಎಂಬ ಭಾವ.

(ಶುಕ್ತಿರಜತದಲ್ಲಿ) ವ್ಯಾವಹಾರಿಕತ್ವವು ತೋರದಿದ್ದಲ್ಲಿ ಪ್ರವೃತ್ತಿಯು ಇಲ್ಲದಾದೀತು ಎಂದು ಹೇಳಿರುವುದರಿಂದ. ಸರಿ, ಪ್ರಾತಿಭಾಸಿಕವಾದ ರಜತವು ವ್ಯಾವಹಾರಿಕವಾಗಿ (ವ್ಯಾವಹಾರಿಕಸತ್ವಯುಕ್ತವಾಗಿ) ತೋರುವುದು ಎಂದು. ಹಾಗಾದರೂ ಸಹ ಅದು (ತೋರಿದ ಸತ್ವವು) ಸತ್ವಯುಕ್ತವೆಂದಾಗಲೀ, ಅಸತ್ವಯುಕ್ತವೆಂದಾಗಲೀ ಅಲ್ಲ. ಮತ್ತೆ (ಇದಂ ರಜತಂ ಎನ್ನುವ ಅರಿವಿನಲ್ಲಿ) ಶುಕ್ತಿ ಮತ್ತು ಇದಂ ಪದಾರ್ಥದಲ್ಲಿನ ಸಂಬಂಧದಂತೆ, ಆರೋಪಿತವಾದ ಅನಿರ್ವಾಚ್ಯಭೂತವಾದ ಆ ವ್ಯಾವಹಾರಿಕತ್ವದ ಸಂಬಂಧದ ಪ್ರತಿಭಾಸವು (ಆಗುತ್ತದೆ)[1]. ಆದುದರಿಂದ ಅಸತ್ತಿಗೆ ಸತ್ವೇನ ಪ್ರತೀತಿಯನ್ನು ಒಪ್ಪಿರುವುದಿಲ್ಲ ಎಂಬ ಮೂರನೆಯ ಪಕ್ಷವನ್ನು ನಿರಾಕರಿಸುವರು 'ನ ಚ' ಎಂದು. 'ಕೇವಲ ರಜತವಲ್ಲ, ಪ್ರಾತಿಭಾಸಿಕವಾದ ರಜತದಲ್ಲಿ ತೋರುವ ವ್ಯಾವಹಾರಿಕತ್ವವೂ ಅನಿರ್ವಚನೀಯ, ಶುಕ್ತಿಯಲ್ಲಿನ ವ್ಯಾವಹಾರಿಕಸತ್ವವೇ ರಜತದಲ್ಲಿ ಆರೋಪಿಸಲಾಗಿದೆ' ಎಂದೆನ್ನುವುದು ಸರಿಯಲ್ಲ ಎಂದು ಅರ್ಥ. ಏಕೆ ಸರಿಯಲ್ಲ? ಆದುದರಿಂದ ಉತ್ತರಿಸುತ್ತಾರೆ 'ಅನವಸ್ಥಿತೇಃ' ಎಂದು.

**'ಶುಕ್ತಿಕಾಗತಮೇವ ವ್ಯಾವಹಾರಿಕಂ ಸತ್ವಂ ರಜತೇ ಸಮಾರೋಪಿತಮ್ ಅನಿರ್ವಚನೀಯಮ್' ಇತಿ ಕೋಽರ್ಥಃ । ಕಿಂ ವ್ಯಾವಹಾರಿಕಂ, ಉತ ಪ್ರಾತಿಭಾಸಿಕಮ್? ಇತಿ. ನಾದ್ಯಃ- ಅನಙ್ಗೀಕಾರಾತ್ । ಅಙ್ಗೀಕಾರೇ ವಾ ರಜತಸ್ಯಾಪಿ ವ್ಯಾವಹಾರಿಕತಾಪಾತಾತ್ । ದ್ವಿತೀಯೇಽಪಿ ಕಿಂ ಪ್ರಾತಿಭಾಸಿಕತಯೈವ ಪ್ರತೀಯತೇ ಉತ ವ್ಯಾವಹಾರಿಕತಯಾ? ನಾದ್ಯಃ-**

1. 'ಇದಂ ರಜತಂ' ಎಂಬ ಅರಿವು ಇದೆ. ಈ ಅರಿವಿನಲ್ಲಿ ತೋರಿದ ರಜತದಲ್ಲಿ, ಪ್ರಾತಿಭಾಸಿಕ ಸತ್ತನ್ನು ಒಪ್ಪಲಾಗಿದೆ. ಆದರೆ ಈ ಸತ್ತು ಪ್ರಾತ್ತಿಭಾಸಿಕತ್ವೇನ ತೋರಿದಲ್ಲಿ ರಜತಾರ್ಥಿಯು ಪ್ರವೃತ್ತನಾಗಲಾರ, ಹಾಗಾಗಿ ಆ ಪ್ರಾತಿಭಾಸಿಕಸತ್ತು ವ್ಯಾವಹಾರಿಕಸತ್ತಾಗಿ ತೋರುತ್ತದೆ ಎಂದು ಒಪ್ಪಬೇಕು, ಹಾಗಾದಲ್ಲಿ ಇಲ್ಲದ ವ್ಯಾವಹಾರಿಕಸತ್ತು ತೋರಿತು ಎಂದು ಒಪ್ಪಿದಂತಾಗಲಿಲ್ಲವೆ? ಇಲ್ಲ, ಇದಂ ರಜತಂ ಎನ್ನುವ ಅರಿವಿನಲ್ಲಿ ರಜತ ಮತ್ತು ಇದಮ್ ಪದಾರ್ಥಕ್ಕೂ ಇರುವ ಸಂಬಂಧವು ಸತ್ ಅಲ್ಲ, ಅಸತ್ ಅಲ್ಲ, ಅನಿರ್ವಚನೀಯವಾಗಿದೆ. ಹಾಗೆಯೇ ತೋರಿದ ರಜತದಲ್ಲಿ ವ್ಯಾವಹಾರಿಕತ್ವವು ಆರೋಪಿತವಾಗಿದೆ. ಈ ರಜತಕ್ಕೂ ಅದರಲ್ಲಿ ಆರೋಪಿಸಿದ ವ್ಯಾವಹಾರಿಕತ್ವದ ಸಂಸರ್ಗವು ಸಹ ಅನಿರ್ವಚನೀಯವಾಗಿದೆ. ಆ ಅನಿರ್ವಚನೀಯವಾದದ್ದು ಪ್ರತಿಭಾಸಮಾನವಾಗುವುದು. ಹಾಗಾಗಿ ಅಸತ್ತು ಭ್ರಾಂತಿಯಲ್ಲೂ ಪ್ರತಿಭಾಸಮಾನವಾಗ-ಲಾರದು ಎಂದು ಭಾವ.

ಪ್ರವೃತ್ತ್ಯಭಾವಪ್ರಸಙ್ಗಾತ್ । ನ ಹಿ ಪ್ರಾತಿಭಾಸಿಕಮರ್ಥಕ್ರಿಯಾಸೂಪಯುಕ್ತಂ ಕ್ವಚಿದನೇನೋಪಲಬ್ಧಂ, ಯತಸ್ತಥಾತ್ವಂ ಪ್ರತೀತ್ಯಾಪಿ ಪ್ರವರ್ತೇತ । ದ್ವಿತೀಯೇ ತದ್‌ವ್ಯಾವಹಾರಿಕತಾ ಕಿಂ ಸತೀ ಉತಾಸತೀ? ನಾದ್ಯಃ, ಪ್ರಾತಿಭಾಸಿಕತ್ವಾನುಪಪತ್ತೇಃ । ದ್ವಿತೀಯೇ ಅಸತೋಽಪಿ ಸತ್ವೇನ ಪ್ರತೀತಿಪ್ರಸಙ್ಗಃ ।

'(ಇದಂ ರಜತಂ ಎಂಬ ಅರಿವಿನಲ್ಲಿ ಅಧಿಷ್ಠಾನವಾದ) ಶುಕ್ತಿಯಲ್ಲಿರುವ ವ್ಯಾವಹಾರಿಕಸತ್ವವೇ (ಪ್ರಾತಿಭಾಸಿಕವಾದ) ರಜತದಲ್ಲಿ ಆರೋಪಿಸಲಾಗಿದೆ, ಈ ಆರೋಪಿತವಾದ ಸತ್ ಅನಿರ್ವಚನೀಯವೇ' ಎನ್ನುವದಕ್ಕೆ ಏನು ಅರ್ಥ. (ಆರೋಪಿತವಾದ ಸತ್ವವು) ವ್ಯಾವಹಾರಿಕವೆಂದೋ ಅಥವಾ ಪ್ರಾತಿಭಾಸಿಕವೆಂದೋ? ಮೊದಲ ಪಕ್ಷವು (ರಜತದಲ್ಲಿ ತೋರಿದ ಸತ್ವವನ್ನು ವ್ಯಾವಹಾರಿಕ ಎಂಬುವುದು) ಸರಿಯಾಗದು, (ರಜತವು ವ್ಯಾವಹಾರಿಕ ಎಂದು) ಒಪ್ಪದಿರುವದರಿಂದ. ಅಥವಾ ಒಪ್ಪಿದಲ್ಲಿ (ತೋರಿದ) ರಜತವೂ ವ್ಯಾವಹಾರಿಕವಾಗಬೇಕಾದೀತು. ಎರಡನೆಯ ಪಕ್ಷದಲ್ಲೂ ( ರಜತದಲ್ಲಿ ತೋರಿದ ಸತ್ವವು ಪ್ರಾತಿಭಾಸಿಕ ಎಂಬುವ ಪಕ್ಷದಲ್ಲಿ ಆ ಸತ್ವವು) ಪ್ರಾತಿಭಾಸಿಕತ್ವೇನ ತೋರುವುದೋ ಅಥವಾ ವ್ಯಾವಹಾರಿಕತ್ವೇನ ತೋರುವುದೋ? ಮೊದಲ ಪಕ್ಷವು ಸರಿಯಾಗದು, (ತೋರಿದ ರಜತವು ಪ್ರಾತಿಭಾಸಿಕ ಎಂಬ ಅರಿವು ಇದ್ದಾಗ ರಜತಾರ್ಥಿಗೆ) ಪ್ರವೃತ್ತಿಯು ಇಲ್ಲದಿರಬೇಕಾದೀತು. ಪ್ರಾತಿಭಾಸಿಕವಾದ ಪದಾರ್ಥಗಳು ಕೊಡುಕೊಳ್ಳುವ ವ್ಯವಹಾರದಲ್ಲಿ ಉಪಯುಕ್ತವಾಗಿರುವುದು ಆತನಿಗೆ ಎಲ್ಲೂ ಉಪಲಬ್ಧವಾಗಿಲ್ಲ, ಹಾಗಾಗಿದ್ದಲ್ಲಿ ಅಂತಹದರದಲ್ಲೂ ಪ್ರವೃತ್ತಿಯು ಸಂಗತವಾಗುತ್ತಿತ್ತು[1]. ಎರಡನೆಯ ಪಕ್ಷದಲ್ಲಿ, (ತೋರಿದ) ಆ ವ್ಯಾವಹಾರಿಕತ್ವವು ಸತ್ತಾದದ್ದೋ, ಅಸತ್ತಾದದ್ದೋ? ಮೊದಲ ಪಕ್ಷವು ಸರಿಯಾಗದು, ( ಆ ತೋರಿದ ವ್ಯಾವಹಾರಿಕತ್ವವು ಸತ್ತಾದಲ್ಲಿ ತೋರಿದ ರಜತಕ್ಕೆ) ಪ್ರಾತಿಭಾಸಿಕತ್ವವು ಅನುಪಪನ್ನವಾಗುವುದು. ಎರಡನೆಯ ಪಕ್ಷದಲ್ಲಿ (ರಜತದಲ್ಲಿ

---

1. ಕೊಡುಕೊಳ್ಳುವ ವ್ಯವಹಾರದಲ್ಲಿ ಪ್ರಾತಿಭಾಸಿಕವಾದ ಪದಾರ್ಥವೂ ಬಳಕೆಯಾಗಿದ್ದಲ್ಲಿ, ವ್ಯಕ್ತಿಗಳು ಪ್ರಾತಿಭಾಸಿಕಗಳೆಂದು ತಿಳಿದ ಪದಾರ್ಥಗಳಲ್ಲೂ ಪ್ರವೃತ್ತರಾಗುತ್ತಿದ್ದರು ಎಂದು ಭಾವ.

ಆರೋಪಿತವಾದ ಅಸದ್ಭೂತವಾದ ವ್ಯಾವಹಾರಿಕತ್ವವು ಸತ್ತ್ವೇನ ಪ್ರತೀತವಾದಲ್ಲಿ) ಅಸತ್ತಾದುದಕ್ಕೆ ಸತ್ತ್ವೇನ ಪ್ರತೀತಿಯನ್ನು ಒಪ್ಪುವ ಪ್ರಸಂಗವು (ಒದಗುವುದು).

**ಅಥ 'ಸಾ ವ್ಯಾವಹಾರಿಕತಾಽಪಿ ಅನಿರ್ವಚನೀಯೈವಾಽರೋಪಿತಾ' ಇತ್ಯುಚ್ಯತೇ, ತದಾಽನಿರ್ವಚನೀಯಮಿತಿ ಕೋಽರ್ಥಃ? ಇತ್ಯಾದೇರಾವೃತ್ತ್ಯಾ ಆರೋಪಪರಮ್ಪರಾಽಪರ್ಯವಸಾನಾನುಪಪತ್ತಿಃ ಸ್ಯಾತ್ । ಯತ್ರೈವ ಆರೋಪಪರ್ಯವಸಾನಂ ತತ್ರೈವ ಪ್ರವೃತ್ತ್ಯಭಾವೋ ವಾಽಸತೋಽಪಿ ಸತ್ತ್ವೇನ ಪ್ರತೀತಿರ್ವಾ ಪ್ರಸಜ್ಯೇತ । ನ ಚೇಯಮಪರ್ಯವಸಿತಾ ಪರಮ್ಪರಾ ಸಿದ್ಧವಿಷಯಾ ಯೇನ ಬೀಜಾಙ್ಕುರಪರಂಪರಾವದದೂಷಣಂ ಸ್ಯಾದ್ ಇತಿ । ನನು, ಮೂಲಕ್ಷತೇರಭಾವಾತ್ ನೇಯಮನವಸ್ಥಾ ದೂಷಣಮ್ ? ಇತಿ ಚೇತ್ । ಕೇಯಂ ಮೂಲಕ್ಷತಿರ್ನಾಮ, ಕಿಂ ಪರಂಪರಾಕಲ್ಪಕಾಭಾವೋ ವಾ ಅಥವಾ ಪ್ರಯೋಜನಪರಿಕ್ಷಯಃ? ಆದ್ಯಾ ತ್ವಸ್ತಿ ಪ್ರಕೃತ ಇತ್ಯಾಹ 'ಪ್ರಥಮಾ..' ಇತಿ । ಪ್ರಥಮಸ್ಯ ರಜತಸ್ಯ ಅನಿರ್ವಚನೀಯತ್ವೇ ಸಿದ್ಧೇ ಹಿ ತದುಪಪತ್ತ್ಯರ್ಥಮುತ್ತರೋತ್ತರಾನಿರ್ವಚನೀಯಾರೋಪಪರಮ್ಪರಾಕಲ್ಪನಂ ಸ್ಯಾತ್ । ನ ಚ ತದಸ್ತೀತಿ । ದ್ವಿತೀಯೇಽಪಿ ಏತದೇವೋತ್ತರಮ್ 'ಪ್ರಥಮಾ..' ಇತಿ । ಪೂರ್ವಪೂರ್ವಾರೋಪಾನುಪಪತ್ತೌ ಉತ್ತರೋತ್ತರಾರೋಪಾಭಾವ ಇತಿ ।**

ಮತ್ತೆ, ಆ ವ್ಯಾವಹಾರಿಕತ್ವವೂ ಸಹ ಅನಿರ್ವಚನೀಯವಾದದ್ದೇ ಆರೋಪಿತವಾಗಿದೆ ಎಂದು ಹೇಳುವೆವು, ಆಗಲೂ ಅನಿರ್ವಚನೀಯ ಎಂದರೆ ಏನು ಅರ್ಥ? ಈ (ಪ್ರಶ್ನೆ) ಮುಂತಾದವುಗಳೇ ಪುನಃ ಆವರ್ತನಗೊಳ್ಳುವುದು, ಆಗ ಆರೋಪ ಪರಂಪರೆಯ ಪರ್ಯವಸಾನವು ಇಲ್ಲದಿರುವುದರಿಂದ ಅನುಪಪತ್ತಿಯು ಉಂಟಾದೀತು[1]. (ಈ) ಆರೋಪದ ಪರಂಪರೆಗೆ ಎಲ್ಲಿ

1. 'ಇದಂ ರಜತಂ' ಎಂಬ ಅರಿವು ಇದೆ. ಶುಕ್ತಿಯಲ್ಲಿ ರಜತವು ತೋರುತ್ತಿದೆ. ಆ ರಜತದಲ್ಲಿ ವ್ಯಾವಹಾರಿಕತ್ವವೂ ತೋರುತ್ತಿದೆ. ಆ ರಜತದಲ್ಲಿ ತೋರಿದ ವ್ಯಾವಹಾರಿಕತ್ವಕ್ಕೆ ವ್ಯಾವಹಾರಿಕಸತ್ತನ್ನು ಒಪ್ಪಲಾಗುವುದೋ ಅಥವಾ ಪ್ರಾತಿಭಾಸಿಕಸತ್ತನ್ನು ಒಪ್ಪಲಾಗುವುದೋ ಎಂಬ ಪ್ರಶ್ನೆಯು ಪ್ರಾಪ್ತವಾಗುವುದು. ವ್ಯಾವಹಾರಿಕ ಎಂದು ಒಪ್ಪಿದಲ್ಲಿ ರಜತವು

ಪುಟ 639ರಲ್ಲಿ........

ಅವಸಾನವನ್ನು ಒಪ್ಪಲಾಗುವುದೋ ಅಲ್ಲಿಯೇ ಪ್ರವೃತ್ತಿಯು ಇಲ್ಲವಾಗುವುದು, ಅಥವಾ ಅಸತ್ತಿಗೆ ಸತ್ತ್ವೇನ ಪ್ರತಿಭಾಸವನ್ನಾದರೂ

---

...... ಪುಟ 638 ರಿಂದ

ವ್ಯಾವಹಾರಿಕಸತ್ತನ್ನು ಹೊಂದಿದೆ ಎಂದಾಗುವುದು, ಆದರೆ ರಜತವು ಪ್ರಾತಿಭಾಸಿಕಸತ್ತನ್ನು ಹೊಂದಿದೆ, ಹಾಗಾಗಿ ಪ್ರಾತಿಭಾಸಿಕಸತ್ತನ್ನು ಹೊಂದಿದೆ ಎಂದು ಉತ್ತರಿಸಬೇಕು. ಆದರೆ ಪ್ರವೃತ್ತ್ಯಾದಿಗಳನ್ನು ಹೊಂದಿಸಲು ವ್ಯಾವಹಾರಿಕಸತ್ತ್ವಯುಕ್ತವಾಗಿ ತೋರುತ್ತದೆ ಎಂದು ಹೇಳಬೇಕು. ಹಾಗೆ ಹೇಳಿದಲ್ಲಿ ಅಸತ್ತಾದ ವ್ಯಾವಹಾರಿಕಸತ್ತಿಗೆ ಪ್ರತಿಭಾಸವನ್ನು ಒಪ್ಪಿದಂತಾಗುವುದು. ಆದಕ್ಕಾಗಿ ಪುನಃ ತೋರಿದ ವ್ಯಾವಹಾರಿಕಸತ್ತು ಅನಿರ್ವಚನೀಯ ಎಂದು ಉತ್ತರಿಸಬೇಕು. ಪುನಃ ಹಿಂದಿನ ಈ ಪ್ರಶ್ನೆಗಳು ಆವರ್ತನಗೊಳ್ಳುವವು. ಪುನಃ ಅಲ್ಲಿ ತೋರಿದ ವ್ಯಾವಹಾರಿಕಸತ್ತೂ ಸಹ ಆರೋಪಿತ ಎಂದು ಉತ್ತರಿಸಬೇಕು. ಹೀಗೆ ಆರೋಪದ ಪರಂಪರೆಯು ಕೊನೆಗೊಳ್ಳದು ಎಂದು ಭಾವ. ಸಿದ್ಧಾಂತಿಗಳಿಗೆ ಈ ಸಮಸ್ಯೆಯು ಇಲ್ಲ- 'ಇದಂ ರಜತಂ' ಎಂಬ ಅರಿವಿನಲ್ಲಿ ತೋರಿದ ರಜತವು ಸತ್ತಾಗಿ ತೋರಿದೆ, ಎಂದು ಸಿದ್ಧಾಂತಿಗಳು ಒಪ್ಪಬೇಕು. ಇಲ್ಲದಿದ್ದಲ್ಲಿ ಪ್ರವೃತ್ತಿಯು ಸರಿಯಾಗದು. ಹಾಗಾದಲ್ಲಿ ರಜತದಲ್ಲಿ ತೋರಿದ ಸತ್ ಸತ್ತೋ ಅಥವಾ ಅಸತ್ತೋ? ಎಂಬ ಪ್ರಶ್ನೆಗೆ ಸಿದ್ಧಾಂತಿಗಳು ಉತ್ತರಿಸಬೇಕು. ರಜತದಲ್ಲಿ ತೋರಿದ ಸತ್ ಸತ್ತೇ ಆಗಿದೆ ಎಂದು ಉತ್ತರಿಸಿದಲ್ಲಿ ರಜತವು ಸತ್ಯವಾಗಬೇಕಾದೀತು. ರಜತದಲ್ಲಿ ತೋರಿದ ಸತ್ ಅಸತ್ತು ಎಂದು ಉತ್ತರಿಸಿದಲ್ಲಿ ಆ ಅಸತ್ತು ಸತ್ತ್ವೇನ ಪ್ರತೀತವಾಗುವುದೋ ಅಸತ್ತ್ವೇನ ಪ್ರತೀತವಾಗುವುದೋ? ಎಂಬ ಪ್ರಶ್ನೆಯನ್ನು ಎದುರಿಸಬೇಕಾಗುವುದು. ಒಟ್ಟಿನಲ್ಲಿ ಪರರು ಎದುರಿಸುವ ಪ್ರಶ್ನೆಯ ಪರಂಪರೆಯ ಭೀತಿ ತತ್ತ್ವವಾದಿಗಳಿಗೂ ಇದೆಯಲ್ಲವೇ? ಎಂದು ಸಂದೇಹಿಸಲಾಗದು. ರಜತದಲ್ಲಿ ತೋರಿದ ಸತ್ ಅಸತ್ತೇ ಆಗಿದೆ. ಆದರೆ ಅದು ಸತ್ತ್ವೇನ ತೋರುವುದು. ನಾವು ಅಸತ್ತಿಗೂ ಖ್ಯಾತಿಯನ್ನು ಒಪ್ಪಿರುವೆವು, ಮತ್ತು ಅಸತ್ತು ಸತ್ತಾಗಿ ತೋರಿದರೇ ಭ್ರಾಂತಿಯಾಗುವುದು. ಅಸತ್ತು ಅಸತ್ತಾಗಿ ತೋರಿದಲ್ಲಿ ಭ್ರಾಂತಿಯಾಗಲಾರದು ತಾನೆ? ಆದರೆ ಪರರು 'ಅಸತ್ತಿಗೆ ಖ್ಯಾತಿಯು ಭ್ರಾಂತಿಯಲ್ಲೂ ಇಲ್ಲ' ಎಂದು ಅಭಿಮತಿಸಿರುವುದರಿಂದ ಈ ಪ್ರಶ್ನೆಯ ಭಾರವು ಅವರಿಗೆ ಬಾಧಕ. ಮತ್ತು 'ಇದಂ ರಜತಂ' ಎಂಬ ವಿಧಿಪ್ರತ್ಯಯವು ರಜತವನ್ನು ಜೊತೆಯಲ್ಲಿ ರಜತದ ಸತ್ತ್ವವನ್ನು ವಿಷಯವನ್ನಾಗಿ ಹೊಂದಿದೆ. ಆ ಸತ್ತ್ವಕ್ಕೆ ಮತ್ತೊಂದು ಸತ್ತ್ವವು ಇಲ್ಲ. ಪರರು ಸತ್‌ನ್ನು ಪ್ರಾತಿಭಾಸಿಕಸತ್, ವ್ಯಾವಹಾರಿಕಸತ್ ಪಾರಮಾರ್ಥಿಕಸತ್ ಎಂದು ಅವಾಂತರ ಪ್ರಭೇದಗಳನ್ನು ಒಪ್ಪಿರುವದರಿಂದ, ಸತ್ ಯಾವುದು? ಎಂಬ ಪ್ರಶ್ನೆಯ ಭಾರವನ್ನು ಹೊರುವುದು ಅನಿವಾರ್ಯ ಎಂದು ಭಾವ.

ಒಪ್ಪಬೇಕು[1]. ಈ ಕಲ್ಪನಾ ಪರಂಪರೆಯು ಬೀಜಾಂಕುರದ ಪರಂಪರೆಯಂತೆ ಅವಸಾನವಿಲ್ಲದ್ದು (ಎಂದು ಹೇಳುವುದು ತರವಲ್ಲ), ಪ್ರಾಮಾಣಿಕ-ವಾದದ್ದಾದಲ್ಲಿ ಬೀಜಾಂಕುರದ ಪರಂಪರೆಯಂತೆ ( ಈ ಪರಂಪರೆಯೂ) ಅದೂಷ್ಯವಾಗುತ್ತಿತ್ತು[2]. ಸರಿ, ಮೂಲಕ್ಕೆ ಕ್ಷತಿಯು ಇಲ್ಲದಿರುವುದರಿಂದ ಈ ಅನವಸ್ಥಾಕ್ಕೆ ದೋಷವಿಲ್ಲ ಎಂದಲ್ಲಿ, ಈ ಮೂಲಕ್ಷತಿ ಎಂದರೇನು? ಪರಂಪರೆಯ ಕಲ್ಪಕದ ಅಭಾವವೋ? ಅಥವಾ ಪ್ರಯೋಜನದ ರಾಹಿತ್ಯವೊ? ಮೊದಲ ಪಕ್ಷವಾದಲ್ಲಿ (ಈ ದೋಷವು) ಪ್ರಕೃತದಲ್ಲಿದೆ ಎಂದು ತಿಳಿಸುವರು **'ಪ್ರಥಮ...'** ಎಂದು. ಮೊದಲು (ತೋರಿದ) ರಜತಕ್ಕೆ ಅನಿರ್ವಚನೀಯತ್ವವು ಸಿದ್ಧವಾದಲ್ಲಿ, ಇದರ ಯುಕ್ತತೆಗಾಗಿ ಉತ್ತರೋತ್ತರವಾಗಿ ಅನಿರ್ವಚನೀಯದ ಪರಂಪರೆ-ಯನ್ನು ಕಲ್ಪಿಸಬಹುದಿತ್ತು. ಪ್ರಕೃತದಲ್ಲಿ ಹಾಗಿಲ್ಲ. ಎರಡನೆಯ ಪಕ್ಷದಲ್ಲೂ ಇದೇ ಉತ್ತರ **'ಪ್ರಥಮ..'** ಎಂದು. ಮೊದಲ ಆರೋಪವು ಅನುಪಪನ್ನವಾದಲ್ಲಿ ಮುಂದಿನ ಮುಂದಿನ ಆರೋಪವು ಇಲ್ಲವಾಗುವುದು ಎಂದು[3].

---

1. ಆರೋಪಿತವಾದ ವ್ಯಾವಹಾರಿಕತ್ವವು ವ್ಯಾವಹಾರಿಕತ್ವೇನ ಪ್ರತಿಭಾಸಮಾನವಾಗುವುದೋ ಅಥವಾ ಪ್ರಾತಿಭಾಸಿಕತ್ವೇನ ಪ್ರತಿಭಾಸಮಾನವಾಗುವುದೋ ಎಂಬ ಪ್ರಶ್ನೆಗೆ ಉತ್ತರಿಸುತ್ತಾ ಆರೋಪಪರಂಪರೆಯನ್ನು ಕಲ್ಪಿಸಲಾಗಿದೆ. ಈ ಕಲ್ಪನಾಪರಂಪರೆಗೆ ಒಂದು ಸ್ಥಳದಲ್ಲಿ ಅವಸಾನ-ವನ್ನು ಒಪ್ಪಲೇ ಬೇಕು. ಎಲ್ಲಿ ಆರೋಪಪರಂಪರೆಗೆ ಅವಸಾನವನ್ನು ಒಪ್ಪಲಾಗುವುದೋ ಅಲ್ಲಿ ಪ್ರಾತಿಭಾಸಕತ್ವೇನ ತೋರುವದರಿಂದ ಅದು ಅರ್ಥಕ್ರಿಯಕಾರಿಯಲ್ಲವಾದುದರಿಂದ ಪ್ರವೃತ್ತಿಗೆ ಪ್ರತಿಬಂಧಕವಾಗುವುದು, ಹಾಗಾಗಿ 'ವ್ಯಾವಹಾರಿಕ' ಎಂದೇ ತೋರುತ್ತದೆ ಎಂದು ಒಪ್ಪಬೇಕು, ಒಪ್ಪಿದಲ್ಲಿ ಅಸತ್ತಿಗೆ ಸತ್ವೇನ ಪ್ರತೀತಿಯನ್ನು ಒಪ್ಪಿದಂತಾಗುವುದು ಒಟ್ಟಿನಲ್ಲಿ ವ್ಯವಹಾರದ ನಿರ್ವಹಣೆಗಾಗಿ ಅಸತ್ತಿಗೆ ಭಾನವನ್ನು ಒಪ್ಪಬೇಕು.

2. ಬೀಜ ಮತ್ತು ಅಂಕುರಗಳಲ್ಲಿ ಕಾರ್ಯ-ಕಾರಣಭಾವವು ಕಂಡಿದೆ. ಅದರಲ್ಲಿ ಯಾವುದು ಮೊದಲು ಎಂದು ಉತ್ತರಿಸಲು ಆಗದು, ಹಾಗಾಗಿ ಈ ಬೀಜಾಂಕುರದ ಪರಂಪರೆಗೆ ಅವಸಾನ-ವನ್ನು ಹೇಳಲಾಗಿಲ್ಲ ಆದರಂತೆ ಈ ಪರಂಪರೆಯನ್ನು ದೂಷಿಸುವುದು ಸಲ್ಲದು ಎಂದು ಮಾಯಾವಾದಿಗಳ ಅಭಿಪ್ರಾಯ. ಆದರೆ ಬೀಜಾಂಕುರದ ಪರಂಪರೆಯು ಪ್ರಮಾಣಪ್ರಮಿತ-ವಾಗಿದೆ, ಈ ವ್ಯಾವಹಾರಿಕತ್ವದ ಆರೋಪಕಲ್ಪನೆಯು ಮಾಯಾವಾದಿಗಳ ಕುಸೃಷ್ಟಿ ಎಂದು ಭಾವ.

3. 'ಮೂಲಕ್ಷಯಕರೀಂ ಪ್ರಾಹುರನವಸ್ಥಾಂ ಹಿ ದೂಷಣಮ್' ಎಂದು ಅನವಸ್ಥಾದೋಷದ ಲಕ್ಷಣವನ್ನು ತಿಳಿಸಿರುವರು. ಮುಂದಿನ ಮುಂದಿನ ಪರಂಪರೆಯನ್ನು ಕಲ್ಪಿಸಲು ಕಾರಣ

ಪುಟ 641ರಲ್ಲಿ........

'ಅನಿರ್ವಚನೀಯಮಿದಂ' ಎಂದು ಅರಿವು ಯಾರಿಗೂ ಇಲ್ಲ

**ಅನಿರ್ವಚನೀಯತ್ವೇ ರಜತಸ್ಯ 'ಅನಿರ್ವಚನೀಯಮಿದಂ ರಜತಮ್' ಇತಿ ಬಾಧಕಜ್ಞಾನಮುತ್ಪದ್ಯೇತ । ಮಿಥ್ಯಾಶಬ್ದಸ್ತ್ವಭಾವವಾಚೀ । ನ ಚ 'ಸದಸದ್ವೈಲಕ್ಷಣ್ಯಂ ನಾಮಾಸ್ತಿ' ಇತ್ಯತ್ರ ಕಿಞ್ಚಿನ್ಮಾನಮ್ ।**

ಅನು- (ಶುಕ್ತಿಯಲ್ಲಿ ತೋರಿದ) ರಜತಕ್ಕೆ ಅನಿರ್ವಚನೀಯತ್ವವು ಇದ್ದಲ್ಲಿ 'ಈ ರಜತವು ಅನಿರ್ವಚನೀಯ' ಎಂದು (ಸ್ಫುಟವಾಗಿ) ಬಾಧಕಜ್ಞಾನವು ಪ್ರಾಪ್ತವಾಗಬೇಕಿತ್ತು. ('ಇದಂ ಮಿಥ್ಯಾ' ಎಂದು ಬಾಧಕಜ್ಞಾನವಿದೆಯಲ್ಲ? ಮಿಥ್ಯಾ ಅಂದರೆ ಅನಿರ್ವಚನೀಯಾ ಎಂದೇ ಅರ್ಥ ಎನ್ನುವುದು ತರವಲ್ಲ) ಮಿಥ್ಯಾಶಬ್ದವು ಅಸತ್ತನ್ನು ಹೇಳುತ್ತದೆ. ಸದಸದ್ವಿಲಕ್ಷಣವಾದ ಅನಿರ್ವಚನೀಯ-ವಾದ ವಸ್ತುವು ಇದೆ ಎನ್ನಲು ಯಾವ ಪ್ರಮಾಣವೂ ಇಲ್ಲ. (ಸದಸದ್ವಿಲಕ್ಷಣ ವಾದ ವಸ್ತುವು ಇದ್ದಲ್ಲಿ, ಆ ವಸ್ತುವು ಮಿಥ್ಯಾ ಶಬ್ದದಿಂದ ವಾಚ್ಯವಾಗಿದೆ ಎಂದು ಕಲ್ಪಿಸಬಹುದಿತ್ತು.)

**ತದೇವಮ್ 'ಅಸತಃ ಸತ್ತ್ವೇನ ಖ್ಯಾತ್ಯುಪಪತ್ತೇಃ, ನ ತದ್ಬಲೇನ ಬಾಧಕಪ್ರತ್ಯಯೋಽನ್ಯಥಯಿತವ್ಯಃ' ಇತ್ಯುಕ್ತಮ್ । ಇತಶ್ಚೈವಮಿತ್ಯಾಹ 'ಅನಿರ್ವಚನೀಯತ್ವೇ ಚ ' ಇತಿ । ಯದಿ 'ಅನಿರ್ವಚನೀಯಮಿದಂ**

---

...... ಪುಟ 640 ರಿಂದ

ವಾದದ್ದನ್ನು 'ಮೂಲ' ಎನ್ನುವರು. ಬೀಜವು ಅಂಕುರಕ್ಕೆ ಕಾರಣ, ಹಾಗೆಯೇ ಅಂಕುರವು ಬೀಜಕ್ಕೆ ಕಾರಣ. ಬೀಜವಿಲ್ಲದೇ ಅಂಕುರವು ಸಿಗದು, ಅಂಕುರವಿಲ್ಲದೇ ಬೀಜವು ಸಿಗದು. ಹಾಗಾಗಿ ಬೀಜ ಮತ್ತು ಅಂಕುರಗಳ ಪರಂಪರೆಯನ್ನು ಕಲ್ಪಿಸಲಾಗುವುದು. ಬೀಜಾಂಕುರದ ಪರಂಪರೆಯಕಲ್ಪನೆಯನ್ನು ಒಪ್ಪದೇ ಹೋದಲ್ಲಿ ಪ್ರಮಾಣಪ್ರಮಿತವಾದ ಬೀಜಕ್ಕೆ ಅಂಕುರವು ಕಾರಣ ಎಂಬ ಸಿದ್ಧಾಂತದ ಮೂಲದ ಕ್ಷತಿಯು ಉಂಟಾಗುವುದು. ಅಥವಾ ಮೂಲ ಅಂದರೆ ಪ್ರಯೋಜನ. ಕಾರ್ಯ-ಕಾರಣ ವೆಂದು ಸಿದ್ಧವಾದ ಬೀಜಾಂಕುರದಲ್ಲಿ ಪರಂಪರೆಯ ಕಲ್ಪನೆಯು, ಬೀಜಾಂಕುರಗಳಲ್ಲಿ ಪ್ರಮಾಣಸಿದ್ಧವಾದ ಕಾರ್ಯಕಾರಣಭಾವದ ನಿರ್ವಹಣೆ ಎಂಬ ಪ್ರಯೋಜನವು ಇದೆ, ಹಾಗಾಗಿ ಪರಂಪರೆಯನ್ನು ಒಪ್ಪದ ಪಕ್ಷದಲ್ಲಿ ಮೂಲದ-ಪ್ರಯೋಜನದ ಕ್ಷತಿಯು ಉಂಟಾಗುವುದು. ಪ್ರಕೃತದಲ್ಲಿ ಅನಿರ್ವಚನೀಯತ್ವವೇ ಸಿದ್ಧವಾಗಿಲ್ಲ ಆದುದರಿಂದ ಪರಂಪರೆಯ ಕಲ್ಪನೆಗೆ ಕಾರಣವೇ ಇಲ್ಲ ಮತ್ತು ಪರಂಪರೆಯಕಲ್ಪನೆಯಿಂದ ಯಾವ ಪ್ರಯೋಜನವೂ ಇಲ್ಲದಿರುವುದರಿಂದಲೂ ಸಹ ಮೂಲಕ್ಷತಿಯು ಇಲ್ಲ ಎಂದು ಭಾವ.

ರಜತಂ'ಇತಿ ಸ್ಫುಟಂ ಬಾಧಕಜ್ಞಾನಮುತ್ಪದ್ಯೇತ ತದಾ 'ಅಸದೇವ ಪ್ರತ್ಯಭಾತ್' ಇತ್ಯನುಭವಸ್ಯ ವಿಷಯಾನ್ತರಕಲ್ಪನಂ ಯುಕ್ತಂ ಸ್ಯಾತ್ । ನ ಚೈವಮಸ್ತೀತಿ ಭಾವಃ । ನನು ಭ್ರಾನ್ತೇರುತ್ಥಿತಸ್ತಾವನ್ 'ಮಿಥ್ಯೈವ ರಜತಂ ಪ್ರತ್ಯಭಾತ್' ಇತ್ಯನುವದತಿ । ಮಿಥ್ಯಾಶಬ್ದೋಽನಿರ್ವಚನೀಯವಾಚೀ । ತೇನಾನುಮೀಯತೇ 'ರಜತಸ್ಯಾನಿರ್ವಚನೀಯತಾನೇನಾನುಭೂತಾ' ಇತಿ । ತತ್ಕಥಮುಚ್ಯತೇಽನಿರ್ವಚನೀಯತಾವಿಷಯಂ ಬಾಧಕಜ್ಞಾನಂ ನೋತ್ಪದ್ಯತ ಇತಿ? ತತ್ರಾಹ '**ಮಿಥ್ಯಾ**' ಇತಿ । ಅಭಾವಪ್ರತಿಯೋಗಿ ಅಸದ್ '**ಅಭಾವಃ**' ಇತಿ ಅತ್ರೋಚ್ಯತೇ, 'ನ ಭವತೀತಿ- **ಅಭಾವ**' ಇತಿ ವಾ । 'ಅತ್ರ ಮಿಥ್ಯಾಶಬ್ದಸ್ತು ನಾನಿರ್ವಚನೀಯವಾಚೀ' ಇತಿ ವಕ್ತವ್ಯಮ್, ತತೋ ನಿರರ್ಥಕಃ ಸ್ಯಾತ್? ಇತ್ಯತಃ '**ಅಭಾವವಾಚೀ**' ಇತ್ಯುಕ್ತಮ್ । ಕುತೋ ನಾನಿರ್ವಚನೀಯವಾಚೀ? ಇತ್ಯತ ಆಹ '**ನ ಚ**' ಇತಿ । ಸದಸದ್ವಿಲಕ್ಷಣೇ ವಸ್ತುನಿ ಪ್ರಮಾಣಸಿದ್ಧೇ, ಪಶ್ಚಾತ್ ಕಥಞ್ಚಿತ್ ತದ್ವಾಚಿತ್ವಂ ಸಮ್ಭವತಿ, ನಚೈತದಸ್ತಿ । ಪ್ರಮಾಣಸ್ಯೈವ ಇದಾನೀಂ ವಿಚಾರ್ಯಮಾಣತ್ವಾತ್ । ನ ಚ ತದ್ಬಲಾದ್ ಏವ ಸರ್ವಂ ಕಲ್ಪ್ಯಮ್ । ತಸ್ಯಾಸದ್ವಾಚಿತ್ವೇನ ಅನ್ಯಥಾಸಿದ್ಧತ್ವಾತ್ ।

ಈ ರೀತಿಯಾಗಿ 'ಅಸತ್ತಿಗೆ ಸತ್ವೇನ ಖ್ಯಾತಿಯು ಉಪಪನ್ನವಾದುದರಿಂದ, ಅದರ ಬಲದಿಂದ ('ಅಸತ್ತು ಭ್ರಾಂತಿಯಲ್ಲೂ ಖ್ಯಾತವಾಗುವುದಿಲ್ಲ' ಎಂಬ ವಾದದ ಬಲದಿಂದ) 'ಬಾಧಕ ಜ್ಞಾನವನ್ನು ಬೇರೇರೀತಿಯಲ್ಲಿ ಅರ್ಥೈಸಲಾಗದು' ಎಂದು ತಿಳಿಸಿದ್ದಾಯಿತು. ಇನ್ನೂ ಈ ರೀತಿಯಿಂದಲೂ (ಶುಕ್ತಿರಜತಕ್ಕೆ ಅನಿರ್ವಚನೀಯತ್ವವನ್ನು ಒಪ್ಪಲಾಗದು) ಎಂದು ತಿಳಿಸುವರು '**ಅನಿರ್ವಚನೀಯತ್ವೇ**' ಎಂದು. 'ಅನಿರ್ವಚನೀಯಮಿದಂ ರಜತಮ್' ಎಂದು ಸ್ಫುಟವಾಗಿ ಬಾಧಕಜ್ಞಾನವು ಬರಬೇಕಿತ್ತು, ಆಗ 'ಅಸದೇವ ರಜತಂ ಪ್ರತ್ಯಭಾತ್' ಎಂಬ (ಬಾಧಕದ) ಅನುಭವಕ್ಕೆ ವಿಷಯಾಂತರವನ್ನು ಕಲ್ಪಿಸುವುದು ಯುಕ್ತವಾಗುತ್ತಿತ್ತು. ಹಾಗೇನು (ಪ್ರಕೃತದಲ್ಲಿ) ಇಲ್ಲ ಎಂದು ಭಾವ[1]. ಸರಿ,

1. 'ಇದಂ ರಜತಂ' ಎಂದು ಭ್ರಾಂತಿಜ್ಞಾನವು ಬಂದನಂತರದಲ್ಲಿ 'ಅಸದೇವ ರಜತಂ ಪ್ರತ್ಯಭಾತ್' ಎಂದು ಬಾಧಕಜ್ಞಾನವು ಪ್ರಾಪ್ತವಾಗುವುದು ಎಂದು ಎಲ್ಲರೂ ಒಪ್ಪಿರುವರು. 'ಅಸದೇವ ರಜತಂ ಪ್ರತ್ಯಭಾತ್' ಎಂದರೆ 'ಅಸತ್ತಾದ ರಜತವು ತೋರಿತು' ಎಂದು ಅರ್ಥೈಸದೆ,

ಪುಟ 643ರಲ್ಲಿ........

ಭ್ರಾಂತಿಯಿಂದ ಎಚ್ಚರಗೊಂಡವನು 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನುವಾದಿಸುವವನು. (ಈ) 'ಮಿಥ್ಯಾ'ಶಬ್ದವು ಅನಿರ್ವಚನೀಯವನ್ನು ಹೇಳುತ್ತದೆ. ಇದರಿಂದ ಊಹಿಸುತ್ತೇವೆ- 'ರಜತಕ್ಕೆ ಅನಿರ್ವಚನೀಯತ್ವವನ್ನು ಈತನಿಂದ ಅನುಭವಿಸಲಾಗಿದೆ' ಎಂದು. ಆದುದರಿಂದ 'ಅನಿರ್ವಚನೀಯತ್ವ ವನ್ನು ವಿಷಯವನ್ನಾಗಿ ಹೊಂದಿರುವ ಬಾಧಕಜ್ಞಾನವು ಉತ್ಪನ್ನವಾಗಿಲ್ಲ' ಎಂದು ಹೇಗೆ ಹೇಳುವಿರಿ? ಇಲ್ಲಿ ಉತ್ತರಿಸುವರು 'ಮಿಥ್ಯಾ' ಎಂದು. ಇಲ್ಲಿನ ಅಭಾವ ಎಂಬ ಶಬ್ದವು ಅತ್ಯಂತಾಭಾವದ ಪ್ರತಿಯೋಗಿಯಾದ ಅಸತ್ತನ್ನು ತಿಳಿಸುತ್ತದೆ[1]. ಅಥವಾ ನ ಭವತಿ ಇತಿ- ಅಭಾವಃ (ಅಸತ್) ಎಂದು. ಇಲ್ಲಿ 'ಮಿಥ್ಯಾ' ಶಬ್ದವು ಅನಿರ್ವಚನೀಯವನ್ನು ಹೇಳುತ್ತಿಲ್ಲ ಎಂದು ಹೇಳಬೇಕು. ಇದರಿಂದ (ಮಿಥ್ಯಾಶಬ್ದವು ಅನಿರ್ವಚನೀಯ ಎಂಬ ಅರ್ಥವನ್ನು ಹೊಂದಿಲ್ಲವಾದುದರಿಂದ) ಮಿಥ್ಯಾಶಬ್ದವು ನಿರರ್ಥಕವೇ? ಆದುದರಿಂದ (ಉತ್ತರಿಸುವುರು-) 'ಮಿಥ್ಯಾಶಬ್ದವು ಅಭಾವವನ್ನು (ಅಸತ್‌ನ್ನು) ಹೇಳುತ್ತದೆ' ಎಂದು ತಿಳಿಸಿರುವರು. (ಮಿಥ್ಯಾಶಬ್ದವು) ಅನಿರ್ವಚನೀಯದ ವಾಚಿಯು ಏಕಲ್ಲ? ಆದುದರಿಂದ ಉತ್ತರಿಸುವರು'ನ ಚ' ಎಂದು. ಸದಸದ್ವಿಲಕ್ಷಣಭೂತ ವಾದ ಪದಾರ್ಥವು ಪ್ರಮಾಣಸಿದ್ಧವಾಗಿದ್ದಲ್ಲಿ ಅನಂತರದಲ್ಲಿ ಹೇಗಾದರೂ ಅದರ (ಅನಿರ್ವಚನೀಯದ) ವಾಚಿತ್ವವು (ಮಿಥ್ಯಾಶಬ್ದಕ್ಕೆ) ಸಂಭಾವಿತ

---

...... ಪುಟ 642 ರಿಂದ

'ಸತ್ತ್ವಾಭಾವವು ರಜತದಲ್ಲಿ ಭಾಸವಾಗುವುದು' ಎಂದು ಪರವಾದಿಗಳು ಅರ್ಥೈಸುವರು. ಇದಕ್ಕೆ ಕಾರಣ- 'ಅಸತ್ತಿಗೆ ಭ್ರಾಂತಿಯಲ್ಲೂ ಖ್ಯಾತಿಯು ಇಲ್ಲ' ಎಂಬ ವಿಶ್ವಾಸದಿಂದ. ಆದರೆ 'ಅಸತ್ತಿಗೆ ಖ್ಯಾತಿಯು ಇದೆ' ಎಂದು ಸಾಧಿಸಿರುವುದರಿಂದ ಮತ್ತು 'ಅನಿರ್ವಚನೀಯಮೇವ ರಜತಂ ಪ್ರತ್ಯಭಾತ್' ಎಂದು ಸ್ಫುಟವಾದ ಬಾಧಕಜ್ಞಾನವೂ ಇಲ್ಲದಿರುವುದರಿಂದಲೂ ಬಾಧಕಜ್ಞಾನಕ್ಕೆ ಅರ್ಥಾಂತರವನ್ನು ಮಾಡುವುದು ತರವಲ್ಲ ಎಂದು ಭಾವ.

1. ಮೂಲದಲ್ಲಿ 'ಮಿಥ್ಯಾಶಬ್ದಃ ಅಭಾವವಾಚಿ' ಎಂದಿದೆ. ಅಂದರೆ ಮಿಥ್ಯಾ ಮತ್ತು ಅಭಾವ ಈ ಎರಡೂ ಪರ್ಯಾಯ ಶಬ್ದಗಳು ಎಂದು ಪ್ರತಿಭಾಸಮಾನವಾಗುವುದು. ಆದರೆ 'ರಜತಂ ಮಿಥ್ಯಾ' ಎಂಬ ಪ್ರಯೋಗವು ಇದೆ ಹೊರತಾಗಿ 'ರಜತಂ ಅಭಾವಃ' ಎಂದು ಪ್ರಯೋಗವು ಇಲ್ಲ. ಆದುದರಿಂದ ಆಚಾರ್ಯರ ಮಾತಿನ ಭಾವವೇನು? ಎಂಬ ಸಂದೇಹವನ್ನು ಇಲ್ಲಿ ಪರಿಹರಿಸಲಾಗಿದೆ. ಇಲ್ಲಿರುವ ಅಭಾವ ಶಬ್ದಕ್ಕೆ ಲಕ್ಷಣಯಾ 'ಅತ್ಯಂತಾಭಾವಪ್ರತಿಯೋಗಿ' ಎಂದು ಅರ್ಥ ಎಂದು ಭಾವ.

ವಾಗುವುದು[1]. ಇದು ಹಾಗಲ್ಲ. (ಅನಿರ್ವಚನೀಯದ ವಿಷಯದಲ್ಲಿನ) ಪ್ರಮಾಣದ ಚಿಂತನೆಯು ಪ್ರಸಕ್ತವಾಗಿರುವುದರಿಂದ. ಆ ಬಲದಿಂದಲೇ ಈ ಎಲ್ಲವನ್ನೂ ಕಲ್ಪಿಸಲಾಗುವುದು ಎಂದೆನ್ನಲಾಗದು[2]. ಅದಕ್ಕೆ (ಮಿಥ್ಯಾಶಬ್ದಕ್ಕೆ) ಅಸದ್ವಾಚಿತ್ವವನ್ನು (ಒಪ್ಪುವ ಅವಕಾಶವು ಇರಲಾಗಿ) ಅನ್ಯಾಥಾಸಿದ್ಧ-ವಾಗಿರುವುದರಿಂದ (ರಜತಂ ಮಿಥ್ಯಾ ಅಂದರೆ ರಜತವು ಅತ್ಯಂತಾಭಾವ ಪ್ರತಿಯೋಗಿ ಎಂದು ವ್ಯವಹಾರಸಿದ್ಧವಾದ ಅರ್ಥವನ್ನು ಹೇಳಲು ಅವಕಾಶವಿರುವಾಗ ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ಎಂದು ಊಹಿಸಲು ಶಕ್ಯವಿಲ್ಲ ಎಂದು ಭಾವ.).

**ಅನಿರ್ವಚನೀಯವನ್ನು ಯಾವುದೇ ಅನುಮಾನದಿಂದ ಸಾಧಿಸಲಾಗದು**

**ಅನುಭವವಿರೋಧಶ್ಚ ತತ್ಪಕ್ಷೇ । ಸದಸತೋರ್ದ್ವಯೋರೇವ ಸರ್ವೈಃ ಅನುಭೂಯಮಾನತ್ವಾತ್ ।**

ಆ ಪಕ್ಷದಲ್ಲಿ (ಶುಕ್ತಿರಜತವನ್ನು ಅನಿರ್ವಚನೀಯ ಎಂದು ಒಪ್ಪಿದಲ್ಲಿ) ಅನುಭವದ ವಿರೋಧವೂ ಸಹ. ಸತ್, ಅಸತ್ ಈ ಎರಡೇ ಎಲ್ಲರಿಂದ ಅನುಭವಕ್ಕೆ ವಿಷಯವಾಗಿರುವುದರಿಂದ.

ಏವಮನುಮಾನಸ್ಯ ಕಾಲಾತ್ಯಯಾಪದಿಷ್ಟತಾಮಭಿಧಾಯ, ದೂಷಣಾನ್ತರಂ ಚಾಹ **'ಅನುಭವ..'** ಇತಿ । ಶುಕ್ತಿರಜತಾದೇಃ ಅನಿರ್ವಚನೀಯತಾಸಾಧನೇ ಅನುಭವವಿರೋಧಶ್ಚ । ಅನುಭೂತಾರ್ಥ-ವಿಪರೀತಪ್ರತಿಪಾದಕತಮಪ್ರಸಿದ್ಧವಿಶೇಷಣತಾ ಚೇತಿ ಯಾವತ್। ಕಥಂ? ಇತ್ಯತ ಆಹ **'ಸದಸತೋಃ'** ಇತಿ । ನನು 'ಸತ್ತ್ವಾಸತ್ತ್ವೇ ಏಕಧರ್ಮಿ-

---

1. ನಿಗಮ-ನಿಘಂಟುಗಳಲ್ಲಿ ಎಲ್ಲೂ ಮಿಥ್ಯಾ ಶಬ್ದಕ್ಕೆ ಅನಿರ್ವಚನೀಯ ಎಂಬ ಅರ್ಥವನ್ನು ತಿಳಿಸದಿದ್ದರೂ, ಹೇಗಾದರೂ ಅನಿರ್ವಚನೀಯ ಎಂಬ ಅರ್ಥವನ್ನು ಮಿಥ್ಯಾಶಬ್ದಕ್ಕೆ ಊಹಿಸಬಹುದಿತ್ತು, ಆದರೆ ಸದಸದ್ವಿಲಕ್ಷಣಭೂತವಾದ ಪದಾರ್ಥವೇ ಅಪ್ರಮಿತ ಎಂದು ಭಾವ.

2. ಭ್ರಾಂತನಾದ ವ್ಯಕ್ತಿಯು ''ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನೂದಿಸುವನು, ಈ ಅನುವಾದದ ಬಲದಿಂದ ಸದಸದ್ವಿಲಕ್ಷಣವಾದ ವಸ್ತುವು ಇದೆ, ಮಿಥ್ಯಾ ಶಬ್ದವು ಸದಸದ್ವಿಲಕ್ಷಣದ ವಾಚಿ ಈ ಮುಂತಾದವುಗಳನ್ನು ಕಲ್ಪಿಸುವೆವು' ಎಂದು ಹೇಳುವುದು ತರವಲ್ಲ ಎಂದು ಭಾವ.

**ನಿಷ್ಠಾತ್ಯನ್ತಾಭಾವಪ್ರತಿಯೋಗಿನೀ ಧರ್ಮತ್ವಾತ್ ರೂಪರಸವದ್' ಇತಿ ಸಾಮಾನ್ಯತೋಽನುಮಾನೇನ, ಅನಿರ್ವಚನೀಯತ್ವೇ ಸಿದ್ಧೇ, ತಸ್ಯ ಕೇವಲವ್ಯತಿರೇಕ್ಯನುಮಾನೇನ ಶುಕ್ತಿರಜತಾದಿನಿಷ್ಠತಾ ಮಾತ್ರಂ ಸಾಧ್ಯತೇ । ಅತೋ ನಾಪ್ರಸಿದ್ಧವಿಶೇಷಣತೇತಿ ಚೇನ್ನ । ಅವಿರುದ್ಧತ್ವಸ್ಯೋಪಾಧಿತ್ವಾತ್ । ನ ಚ ಗೋತ್ವಾಶ್ವತ್ವಾದೌ ಸಾಧ್ಯಾವ್ಯಾಪಕತಾ, ಪ್ರತಿಷೇಧ್ಯಪ್ರತಿಷೇಧಾತ್ಮಕಸ್ಯ ವಿರೋಧಸ್ಯ ವಿವಕ್ಷಿತತ್ವಾತ್ । ಪ್ರತಿಜ್ಞಾಪದವ್ಯಾಘಾತೋ ವಾಽನೇನ ವಾಕ್ಯೇನ ಸೂಚ್ಯತ ಇತಿ ।**

ಈ ರೀತಿಯಾಗಿ ('ಶುಕ್ತಿರಜತಂ ಸದಸದ್ವಿಲಕ್ಷಣಂ ಅಸದೇವರಜತಂ ಪ್ರತ್ಯಭಾತ್' ಇತ್ಯನುಭವಾತ್ ಎಂಬ) ಅನುಮಾನಕ್ಕೆ ಪ್ರಮಾಣಬಾಧವನ್ನು ಹೇಳಿ, ದೂಷಣಾಂತರವನ್ನು ತಿಳಿಸುತ್ತಾರೆ **'ಅನುಭವ..'** ಎಂದು. ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವನ್ನು ಸಾಧಿಸಿದಲ್ಲಿ ಅನುಭವ-ವಿರೋಧವೂ (ಪ್ರಾಪ್ತವಾಗುವುದು). ಅನುಭೂತವಾದ ವಿಷಯದಿಂದ ವಿಪರೀತವಾಗಿ ಪ್ರತಿಪಾದಿಸುವುದನ್ನೇ 'ಅಪ್ರಸಿದ್ಧವಿಶೇಷಣ' ಎನ್ನುವರು ತಾನೆ? ಇದು (ಅನುಭವವು ಇಲ್ಲ ಎನ್ನುವುದು) ಹೇಗೆ? ಎಂದಲ್ಲಿ, ಆದುದರಿಂದ ಉತ್ತರಿಸುತ್ತಾರೆ **'ಸದಸತೋಃ'** ಎಂದು. ಆದರೆ, ಸತ್ವಾಸತ್ವಗಳು ಒಂದೇ ಧರ್ಮಿಯಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಗಳು ಧರ್ಮವಾದು-ದರಿಂದ, ರೂಪ-ರಸಗಳಂತೆ ಎಂದು[1], ಎಂದು ಸಾಮಾನ್ಯತಃ ಅನಿರ್ವಚನೀಯತ್ವವು ಸಿದ್ಧವಾಗಲು, ಕೇವಲವ್ಯತಿರೇಕೀ ಅನುಮಾನದಿಂದ[2]

1. ಧರ್ಮಗಳಾದ ರೂಪ-ರಸಗಳು ಒಂದೆಡೆಯಲ್ಲಿ-ವಾಯುವಿನಲ್ಲಿ ಇರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಗಳಾಗಿವೆ. ಅಂದರೆ ಇವೆರಡರ ಅಭಾವವು ವಾಯುವಿನಲ್ಲಿ ಇದೆ. ಹಾಗೆಯೇ ಧರ್ಮಗಳಾದ ಸದಸತ್ತುಗಳ ಅಭಾವವೂ ಸಹ ಒಂದೆಡೆ ಇರಬಹುದು. ಸತ್ವಾಸತ್ವಾಭಾವವು ಒಂದೆಡೆ ಇದೆ ಎಂದಾದಲ್ಲಿ ಅದನ್ನೇ ಅನಿರ್ವಚನೀಯ ಎಂದು ತಿಳಿಯುವುದು ಎಂದು ಭಾವ. ವಸ್ತುತಃ ಬ್ರಹ್ಮನಲ್ಲಿ ಎಲ್ಲ ಧರ್ಮಗಳ ಅಭಾವವಿದ್ದರೂ ಬ್ರಹ್ಮನು ಅನಿರ್ವಚನೀಯನಲ್ಲ. ಆದುದರಿಂದ ಅತ್ಯಂತಾಭಾವಪ್ರತಿಯೋಗಿತ್ವಾತ್ ಎಂಬ ಹೇತುವು ವ್ಯಭಿಚರಿತವಾಯಿತು? ಅದಕ್ಕಾಗಿ ಪ್ರಕೃತದಲ್ಲಿ ಏಕಧರ್ಮಿನಿಷ್ಠಾತ್ಯನ್ತಾಭಾವಪ್ರತಿಯೋಗಿ ಎಂದು ವಿವಕ್ಷಿಸಲಾಗಿದೆ. ಬ್ರಹ್ಮನಾದರೋ ಧರ್ಮಿಯೇ ಅಲ್ಲ ಎಂದು ಭಾವ.

1. 'ಶುಕ್ತಿರಜತಾದಿಕಂ ಅನಿರ್ವಚನೀಯಂ ಬಾಧ್ಯತ್ವಾತ್ ವ್ಯತಿರೇಕೇಣಾತ್ಮವತ್' ಎಂಬ ಅನುಮಾನದಿಂದ.

ಶುಕ್ತಿರಜತಾದಿಗಳಲ್ಲಿ ಅದರ (ಅನಿರ್ವಚನೀಯದ) ಅಸ್ತಿತ್ವವನ್ನು ಮಾತ್ರ ಸಾಧಿಸಲಾಗುವುದು[1]. ಆದುದರಿಂದ ಅಪ್ರಸಿದ್ಧವಿಶೇಷಣವಿಲ್ಲ ಎಂದು ಹೇಳುವುದು ತರವಲ್ಲ. ಅವಿರುದ್ಧತ್ವ ಎನ್ನುವದು (ಈ ಅನುಮಾನಕ್ಕೆ) ಉಪಾಧಿ ಇರುವುದರಿಂದ[2]. ಗೋತ್ವ-ಅಶ್ವತ್ವಾದಿಗಳಲ್ಲಿ ಸಾಧ್ಯಾವ್ಯಾಪಕತ್ವವೇ (ಇದೆ) ಎಂದೇ ಹೇಳಲಾಗದು[3], ಪ್ರತಿಷೇಧ್ಯ - ಪ್ರತಿಷೇಧಾತ್ಮಕ-ವಾದ ವಿರೋಧವನ್ನು ಪ್ರಕೃತದಲ್ಲಿ ವಿವಕ್ಷಿಸಲಾಗಿದೆ[4]. ಅಥವಾ

1. ಅನಿರ್ವಚನೀಯವನ್ನೇ ನೇರವಾಗಿ ಸಾಧಿಸುವದಾದ ಪಕ್ಷದಲ್ಲಿ ಅಪ್ರಸಿದ್ಧವಿಶೇಷಣತ್ವರೂಪ ದೋಷವನ್ನು ಹೇಳುವ ಪ್ರಸಂಗವಿತ್ತು. ಈಗ ಅನಿರ್ವಚನೀಯರೂಪ ಧರ್ಮವನ್ನು 'ಸತ್ತ್ವಾಸ್ತ್ವೇ ಏಕಧರ್ಮನಿಷ್ಠಾನ್ಯನ್ತಾಭಾವಪ್ರತಿಯೋಗಿನೀ ..' ಎಂಬ ಅನುಮಾನದಿಂದ ಸಾಮಾನ್ಯತಃ ಸಾಧಿಸಿ, ಅದರ ಸಂಬಂಧವನ್ನು ಮಾತ್ರ ಶುಕ್ತಿರಜತಾದಿಗಳಲ್ಲಿ ಸಾಧಿಸಲಾಗುವುದು, ಆದುದರಿಂದ ಅಪ್ರಸಿದ್ಧವಿಶೇಷಣ ಎಂಬ ದೋಷವು ಇಲ್ಲ ಎಂದು ಪರವಾದಿಗಳ ಭಾವ.

2. 'ಸತ್ತ್ವಾಸತ್ತ್ವಗಳು ಒಂದೇ ಧರ್ಮಿಯಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಗಳು ಧರ್ಮವಾದುದರಿಂದ, ರೂಪ-ರಸಗಳಂತೆ ಎಂಬ ಅನುಮಾನಕ್ಕೆ ಅವಿರುದ್ಧತ್ವವು ಉಪಾಧಿ. ಅಂದರೆ ರೂಪ-ರಸಗಳು ವಾಯುನಿಷ್ಠ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಲು, ಅವುಗಳಲ್ಲಿರುವ ಧರ್ಮತ್ವವು ಕಾರಣವಲ್ಲ, ಅವಿರುದ್ಧತ್ವವು ಕಾರಣ. ಸತ್ತ್ವಾಸತ್ತ್ವಗಳಲ್ಲಾದರೋ ವಿರುದ್ಧತ್ವವೇ ಇದೆ. ಬೆಳಕು ಕತ್ತಲೆಗಳ ಅಭಾವವು ಹೇಗೆ ಒಂದೆಡೆ ಇರಲು ಶಕ್ಯವಿಲ್ಲವೋ ಹಾಗೆ, ಸತ್ತ್ವಾಸತ್ತ್ವಗಳಲ್ಲಿಯೂ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವವು ಪ್ರಾಪ್ತಿಯಾಗಲಾರದು ಎಂದು ಭಾವ.

3. ಪ್ರಕೃತಾನುಮಾನದಲ್ಲಿ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವವು ಸಾಧ್ಯವಾಗಿದೆ. ಗೋತ್ವ-ಅಶ್ವತ್ವಗಳ ಅತ್ಯಂತಾಭಾವವು ಏಕಧರ್ಮಿಯಾದ ಮಹಿಷದಲ್ಲಿದೆ. ತನ್ನಿಮಿತ್ತವಾಗಿ ಗೋತ್ವ-ಅಶ್ವತ್ವಗಳಿಗೆ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವರೂಪ ಸಾಧ್ಯರೊಡನೆ ವ್ಯಾಪಕತ್ವವು ಪ್ರಾಪ್ತವಾಯಿತು ಅವುಗಳಲ್ಲಾದರೋ ಉಪಾಧಿಯಾದ ಅವಿರುದ್ಧತ್ವವು ಇಲ್ಲ, ಅವು ಪರಸ್ಪರ ವಿರುದ್ಧವೇ ಆಗಿದೆ. ಒಟ್ಟಿನಲ್ಲಿ 'ಸಾಧ್ಯವ್ಯಾಪಕತ್ವೇ ಸತಿ ಸಾಧನಾವ್ಯಾಪಕತ್ವ' ರೂಪ ಉಪಾಧಿಯ ಲಕ್ಷಣವು ಅವಿರುದ್ಧತ್ವರೂಪ ಉಪಾಧಿಯಲ್ಲಿ ಸಮನ್ವಿತವಾಗದು ಎಂದು ಶಂಕಿಸ ಬಾರದು ಭಾವ.

4. ವಿರೋಧವು ಅನೇಕ ಬಗೆಯಲ್ಲಿದೆ. ಸಹಾವಸ್ಥಾನ, ವಧ್ಯ-ಘಾತಕಭಾವ, ಪ್ರತಿಷೇಧ್ಯ-ಪ್ರತಿಷೇಧಾತ್ಮಕ ಎಂದು. ಗೋತ್ವ-ಅಶ್ವತ್ವಗಳಲ್ಲಿ ಸಹಾವಸ್ಥಾನ ವಿರೋಧವಿದೆ. ಗೋ-ವ್ಯಾಘ್ರಗಳಲ್ಲಿ ವಧ್ಯಘಾತುಕಭಾವ ವಿರೋಧವಿದೆ. ಜ್ಞಾನ-ಅಜ್ಞಾನಗಳಲ್ಲಿ ಪ್ರತಿಷೇಧ್ಯ-ಪ್ರತಿಷೇಧಕ ಭಾವ ವಿರೋಧವಿದೆ. ಪ್ರಕೃತ ವಿವಕ್ಷಿತವಾದ ವಿರೋಧವು ಪ್ರತಿಷೇಧ್ಯ-ಪ್ರತಿಷೇಧಾತ್ಮಕ

ಪುಟ 647ರಲ್ಲಿ........

ಪ್ರತಿಜ್ಞಾಪದಗಳಿಗೆ ವ್ಯಾಘಾತತ್ವವನ್ನು ಈ ವಾಕ್ಯದಿಂದ ಸೂಚಿಸಿ-ದಂತಾಯಿತು[1].

**ಬ್ರಹ್ಮನು ಅದ್ವಿತೀಯನಾಗಲಾರ**

**ಅತೋಽನಿರ್ವಚನೀಯಾಭಾವಾದಸತಃ ಪ್ರತೀತ್ಯನಙ್ಗೀಕಾರಾತ್, ಪ್ರತೀಯಮಾನತ್ವಾಚ್ಚ ಭೇದಸ್ಯ ಸತ್ವಪ್ರಾಪ್ತೇರ್ನಾದ್ವಿತೀಯತ್ವಂ ಯುಜ್ಯತೇ ।**

ಸತ್ವಾಸತ್ವಗಳ ಅಭಾವವು ಒಂದೆಡೆ ಇರಲು ಆಗದು ಈ ಮುಂತದವುಗಳನ್ನು ಉಪಪಾದಿಸಿದ್ದರಿಂದ, ಭೇದಕ್ಕೆ ಅನಿರ್ವಚನೀಯತ್ವವು ಇಲ್ಲದಿರುವುದರಿಂದ, (ಪರರು) ಅಸತ್ತಿಗೆ ಭಾನವನ್ನು ಒಪ್ಪದಿರುವುದರಿಂದ, ಭೇದವಾದರೋ ತೋರುತ್ತಿರುವುದರಿಂದ, (ಭೇದಕ್ಕೆ ಅಸತ್ಯತ್ವವೂ ಅನುಪಪನ್ನವಾದುದರಿಂದ, ಕೊನೆಯದಾಗಿ) ಭೇದಕ್ಕೆ ಸತ್ವವು ಪ್ರಾಪ್ತವಾಯಿತು, ಆದುದರಿಂದ (ಸತ್ಯವಾದ ವಸ್ತುವು ಇನ್ನೊಂದು ಇರುವುದರಿಂದ ಬ್ರಹ್ಮನಿಗೆ) ಅದ್ವಿತೀಯತ್ವವು ಯುಕ್ತವಾಗದು.

**ಏವಂ ಪ್ರತ್ಯಕ್ಷಾದೇರ್ವಿಷಯಸ್ಯ ಭೇದಪ್ರಪಞ್ಚಸ್ಯಾನಿರ್ವಚನೀಯತಾಂ ಪ್ರತಿಷೇಧ್ಯೋಪಸಂಹರನ್ನಸತ್ವಮಪಿ ಪ್ರತಿಕ್ಷಿಪನ್ ಪರಿಶೇಷಸಿದ್ಧಮರ್ಥಂ**

---

...... ಪುಟ 646 ರಿಂದ
ವಿರೋಧ. ಅದು ಗೋತ್ವ-ಅಶ್ವತ್ವಗಳಲ್ಲಿ ಇಲ್ಲ. ಯಾವ ಧರ್ಮಗಳಲ್ಲಿ ಪ್ರತಿಷೇಧ್ಯ-ಪ್ರತಿಷೇಧಾತ್ಮಕ ವಿರೋಧವಿದೆಯೋ ಅಲ್ಲಿ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವವು ಇಲ್ಲ. ಪ್ರಕೃತ ಸತ್ವ-ಅಸತ್ವಗಳಲ್ಲಿ ಪ್ರತಿಷೇಧ್ಯ-ಪ್ರತಿಷೇಧಾತ್ಮಕ ವಿರೋಧವು ಇರುವುದರಿಂದ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವವು ಇಲ್ಲ. ಆದುದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ಇದೆ ಎಂದು ಭಾವ.

1. 'ಸತ್ವಾಸತ್ವೇ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿ' ಎನ್ನುವುದು ಪ್ರಕೃತಾನುಮಾನದ ಪ್ರತಿಜ್ಞಾವಾಕ್ಯ. ಜಗದಲ್ಲಿನ ಪದಾರ್ಥಗಳ ಅನುಭವವಾದರೋ ಸತ್ವಾಧಿಕರಣ ಅಥವಾ ಅಸತ್ವಾಧಿಕರಣ ಎಂದು ಎರಡೇ ವಿಧದಲ್ಲಿ ಇದೆ, ಹೊರತಾಗಿ ಉಭಯಾಭಾವಕ್ಕೆ ಅಧಿಕರಣವಾದ ಪದಾರ್ಥದ ಅನುಭವವು ಇಲ್ಲ. ಹಾಗಾಗಿ ಪ್ರತಿಜ್ಞಾವಾಕ್ಯಕ್ಕೆ ಅನುಭವದ ವಿರೋಧ ಎಂದು ಭಾವ.

ದರ್ಶಯನ್ ಪ್ರಕೃತಮನುಸರನ್ನುಪಸಂಹರತಿ **'ಅತ'** ಇತಿ । **'ಅನಿರ್ವಚನೀಯಾ'** ಇತಿ ಭಾವಪ್ರಧಾನೋ ನಿರ್ದೇಶಃ । **'ಭೇದಸ್ಯ'** ಇತಿ ವಕ್ಷ್ಯಮಾಣಮತ್ರಾಪಿ ಸಮ್ಬಧ್ಯತೇ । **'ಅಸತಃ'** ಇತ್ಯಾದಿಕಮ್ ಅಸತ್ವ-ನಿರಾಕರಣಮ್ । **ಅನಙ್ಗೀಕಾರಾತ್** 'ಪರೇಣ' ಇತಿ ಶೇಷಃ । **'ಭೇದಸ್ಯ'** ಇತ್ಯತಃ ಪರಂ 'ಅಸತ್ವಸ್ಯಾಪ್ಯನುಪಪತ್ತೇಃ' ಇತಿ ಪೂರಣೀಯಮ್ । **ಸತ್ತ್ವಪ್ರಾಪ್ತೇಃ**- ಪರಿಶೇಷೇಣ ಪಾರಮಾರ್ಥಿಕತ್ವಸಿದ್ಧೇಃ । **'ಭೇದಸ್ಯ'** ಇತಿ ವರ್ತತೇ । **ನಾದ್ವಿತೀಯತ್ವಂ ಯುಜ್ಯತೇ** ಏವಂ ಪ್ರತ್ಯಕ್ಷಾದೀನಾಮಪಿ ಪರಮಾರ್ಥವಿಷಯತ್ವೇನಾನುಮಾನಬಾಧಕತ್ವೋಪಪತ್ತೇಃ 'ಅನುಮಾನೈಃ ಭೇದಾಭಾವಸಾಧನಂ ನ ಯುಜ್ಯತೇ' ಇತ್ಯರ್ಥಃ ।

ಈ ರೀತಿಯಾಗಿ ಪ್ರತ್ಯಕ್ಷಾದಿಗಳಿಗೆ ವಿಷಯವಾದ ಭೇದಪ್ರಪಂಚಕ್ಕೆ ಅನಿರ್ವಚನೀಯತ್ವವನ್ನು ನಿಷೇಧಿಸಿ (ಪ್ರಸಕ್ತವಾದವನ್ನು) ಉಪಸಂಹರಿಸುತ್ತಾ, (ಪ್ರಪಂಚಕ್ಕೆ) ಅಸತ್ವವನ್ನೂ ಸಹ ನಿಷೇಧಿಸುತ್ತಾ, ಕೊನೆಯದಾಗಿ ಸಿದ್ಧವಾದ ವಿಷಯವನ್ನು (ಪ್ರಪಂಚಕ್ಕೆ ಸತ್ಯತ್ವವನ್ನು) ತಿಳಿಸುತ್ತಾ ಪ್ರಸಕ್ತವಾದವನ್ನು ಅನುಸರಿಸುತ್ತಾ ಉಪಸಂಹರಿಸುತ್ತಾರೆ **'ಅತಃ'** ಎಂದು. (ಮೂಲದಲ್ಲಿನ) 'ಅನಿರ್ವಚನೀಯಾ' ಎನ್ನುವುದು ಭಾವಪ್ರಧಾನವಾಗಿ ನಿರ್ದೇಶಿಸಲಾಗಿದೆ. (ಮೂಲದಲ್ಲಿ) ಮುಂದಿರುವ **'ಭೇದಸ್ಯ'** ಎನ್ನುವುದನ್ನು ಇಲ್ಲಿಯೂ ಅನ್ವಯಿಸಿಕೊಳ್ಳುವುದು. **'ಅಸತಃ'** ಎನ್ನುವುದು ('ಅಸತಃ ಪ್ರತೀತ್ಯಙ್ಗೀ-ಕಾರಾತ್' ಎನ್ನುವ ಮೂಲದ ವಾಕ್ಯವು ಈ ಪ್ರತ್ಯಕ್ಷದೃಷ್ಟವಾದ ಭೇದಪ್ರಪಂಚಕ್ಕೆ) ಅಸತ್ಯತ್ವವನ್ನು ನಿರಾಕರಿಸುವುದು. **'ಅನಂಗೀಕಾರಾತ್'** ಎನ್ನುವದರ ಜೊತೆಗೆ 'ಪರೇಣ' ಎಂದು ಶೇಷಪೂರಣಮಾಡಿಕೊಳ್ಳುವುದು. **'ಭೇದಸ್ಯ'** ಎನ್ನುವುದರ ಮುಂದೆ **'ಅಸತ್ವಸ್ಯಾಪ್ಯನುಪಪತ್ತೇಃ'** ಎಂದು ಶೇಷಪೂರಣ ಮಾಡಿಕೊಳ್ಳುವುದು. **ಸತ್ವಪ್ರಾಪ್ತೇಃ**- ಪರಿಶೇಷದಿಂದ ಪಾರಮಾರ್ಥಿಕವಾದ ಸತ್ವವೇ ಸಿದ್ಧವಾಗುವುದ-ರಿಂದ. **'ಭೇದಸ್ಯ'** ಎನ್ನುವುದನ್ನು ಇಲ್ಲಿಯೂ ಅನ್ವಯಿಸಿಕೊಳ್ಳುವುದು. **ನಾದ್ವಿತೀಯತ್ವಂ ಯುಜ್ಯತೇ** -'ಬ್ರಹ್ಮ ಓರ್ವನೇ ಸತ್ಯ' ಎನ್ನುವುದು ಸರಿಯಾಗದು. ಈ ರೀತಿಯಾಗಿ ಪ್ರತ್ಯಕ್ಷಾದಿಗಳಿಗೆ ಪರಮಾರ್ಥವಾದುದೇ ವಿಷಯವಾದುದರಿಂದ (ಪ್ರತ್ಯಕ್ಷಾದಿಗಳಿಂದ) ಅನುಮಾನಕ್ಕೆ (ಭೇದಮಿಥ್ಯಾತ್ವ-

ಸಾಧಕಾನುಮಾನಕ್ಕೆ) ಬಾಧಕತ್ವವು ಉಪಪನ್ನವಾಗುವುದರಿಂದ 'ಅನುಮಾನ-ಗಳಿಂದ ಭೇದಾಭಾವದ ಸಾಧನೆಯು ಯುಕ್ತವಾಗದು' ಎಂದು ಭಾವ.

**-: ಅನಿರ್ವಚನೀಯಾಪ್ರಮಿತತ್ವ ಸಾಧನೆಯು ಸಮಾಪ್ತ :-**

## ॥ ಪ್ರಮಾಣಪ್ರಮಿತವಾದ ಭೇದವನ್ನು ಅಲ್ಲಗಳೆಯುವುದು ತರವಲ್ಲ ॥

**ಬೌದ್ಧರಂತೆ ಮಾಯಾವಾದಿಗಳೂ ಅವೇದವಾದಿಗಳಾಗಬೇಕಾದೀತು**

**ಕಥಂ ಚ ಶ್ರುತಿಸಿದ್ಧೋ ಜೀವಪರಮಾತ್ಮಭೇದೋ ನಿರಾಕ್ರಿಯತೇ? ಮಿಥ್ಯಾವಾದಿತ್ವೇ ಚ ಶ್ರುತೇಃ, ಕಥಮೈಕ್ಯಸ್ಯ ಸತ್ಯತ್ವಮ್? ಕಥಂ ಚೈವಂ ವಾದಿನಾಂ ವೇದವಾದಿತ್ವಮ್? ವೇದೋಕ್ತಸ್ಯ ಮಿಥ್ಯಾತ್ವಾಙ್ಗೀಕಾರಾದೇವ ಹ್ಯವೇದವಾದಿತ್ವಂ ಬೌದ್ಧಾದೀನಾಮಪಿ ।**

ಶ್ರುತಿಸಿದ್ಧವಾದ ಜೀವ-ಪರಮಾತ್ಮರ ಭೇದವನ್ನು ಹೇಗೆ ನಿರಾಕರಿಸಲಾಗುವುದು? ಶ್ರುತಿಯು ಮಿಥ್ಯಾವನ್ನು ಹೇಳಿದಲ್ಲಿ, (ಅದೇ ವೇದದಿಂದ ಉಕ್ತವಾದ ಜೀವ-ಬ್ರಹ್ಮರ) ಐಕ್ಯಕ್ಕೆ ಸತ್ಯತ್ವವು ಹೇಗೆ? ಈ ರೀತಿಯಾಗಿ ವಾದಿಸುವವರಿಗೆ ವೇದವಾದಿತ್ವವು ಹೇಗೆ ಯುಕ್ತವಾದೀತು? ಬೌದ್ಧರೇ ಮುಂತಾದವರಿಗಾದರೋ ವೇದೋಕ್ತವಾದುದಕೆ ಮಿಥ್ಯಾತ್ವವನ್ನು ಒಪ್ಪಿದ್ದರಿಂದಲೇ ಅವೇದವಾದಿತ್ವವು ಪ್ರಾಪ್ತವಾಗಿರುವುದು.

'ಯದ್ಯೇವಂ ಪ್ರತ್ಯಕ್ಷಾನುಮಾನಸಿದ್ಧಭೇದಬಾಧನಮಪ್ಯನುಮಾನೈಃ ನ ಶಕ್ಯಂ, ಕಿಮು ವಾಚ್ಯಂ ತದಾಽಪೌರುಷೇಯತ್ವೇನಾನಾಶಙ್ಕಿತದೋಷತಯಾ ಶ್ರುತ್ಯಾ ಸಿದ್ಧಸ್ಯ ಜೀವಪರಮಾತ್ಮಭೇದಸ್ಯ' ಇತ್ಯಾಶಯವಾನ್ ಆಹ '**ಕಥಂ ಚ**' ಇತಿ । 'ಭೇದಶ್ರುತೀನಾಮತತ್ತ್ವಾವೇದಕತ್ವಾದ್ ಯುಕ್ತಂ ತದ್‌ಬಾಧನಮ್' ಇತಿ ಚೇನ್ನ । ಪರಿಶೇಷಪ್ರಮಾಣೇನ ನಿರಾಕೃತತ್ವಾತ್ । ಅಧಿಕಂ ಚ ದೋಷಮಾಹ '**ಮಿಥ್ಯಾವಾದಿತ್ವೇ ಚ**' ಇತಿ । 'ಜೀವೇಶ್ವರೈಕ್ಯಮಪಿ ಹಿ ಶ್ರುತಿಸಿದ್ಧಮ್' ಇತ್ಯೇವ ಪರೇಣಾಙ್ಗೀಕ್ರಿಯತೇ । ತತ್ರ ಭೇದಶ್ರುತೇಃ ಮಿಥ್ಯಾವಾದಿತ್ವೇ ಶ್ರುತಿತ್ವಾವಿಶೇಷಾದೈಕ್ಯಶ್ರುತೇರಪಿ ತಥಾತ್ವಪ್ರಾಪ್ತೇಃ ಕಥಂ ತತ್ಪ್ರತಿಪಾದಿತಸ್ಯೈಕ್ಯಸ್ಯ ಸತ್ಯತ್ವಮಙ್ಗೀಕ್ರಿಯತೇ? । ಬಾಧಕಾನಾಮತ್ರಾಪಿ ಸತ್ತ್ವಾತ್ । ದೋಷಾನ್ತರಮಪ್ಯಾಹ- '**ಕಥಂಚೈವಮ್**' ಇತಿ । ಏವಂ

**ವಾದಿನಾಂ- ವೇದೋಕ್ತಸ್ಯಾಪಿ ಮಿಥ್ಯಾತ್ವಮಙ್ಗೀಕುರ್ವತಾಂ । ವೇದೋಕ್ತಸ್ಯ ಮಿಥ್ಯಾತ್ವಾಙ್ಗೀಕರೇಽಪಿ ಕುತೋ ನ ವೇದವಾದಿತ್ವಂ? ಇತ್ಯತೋ ವ್ಯಾಪ್ತಿಂ ದರ್ಶಯತಿ 'ವೇದೋಕ್ತಸ್ಯ' ಇತಿ ।**

ಈ ರೀತಿಯಾಗಿ, ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾದ ಭೇದವನ್ನೇ ಅನುಮಾನವು ಬಾಧಿಸಲಾರದೋ, ಇನ್ನೇನು ಹೇಳುವುದು ಅಪೌರುಷೇಯವೆಂದು ದೋಷದ ಆಂಶಂಕೆಗೇ ಆಸ್ಪದವಿಲ್ಲದ ವೇದದಿಂದ ಸಿದ್ಧವಾದ ಜೀವ-ಪರಮಾತ್ಮರ ಭೇದದ (ನಿರಾಕರಣೆಯು ಶಕ್ಯವಿಲ್ಲ ) ಎಂಬ ಅಭಿಪ್ರಾಯದಿಂದ ತಿಳಿಸುತ್ತಾರೆ **'ಕಥಂ ಚ'** ಎಂದು. ಭೇದಶ್ರುತಿಗಳಿಗೆ ಅತತ್ವಾವೇದಕತ್ವವು ಇರುವುದರಿಂದ ಅವುಗಳಿಗೆ (ಭೇದಶ್ರುತಿಗಳಿಗೆ) ಬಾಧವು (ಉಂಟು) ಎನ್ನುವುದು ತರವಲ್ಲ, ಪರಿಶೇಷಪ್ರಮಾಣದಿಂದ ನಿರಾಕರಿಸಿರುವುದರಿಂದ[1]. ಹೆಚ್ಚಿನ ದೋಷಗಳನ್ನು ತಿಳಿಸಲು ಹೇಳುತ್ತಾರೆ **'ಮಿಥ್ಯಾವಾದಿತ್ವೇ'** ಎಂದು. ಜೀವೇಶ್ವರರ ಐಕ್ಯವಾದರೋ ಶ್ರುತಿಸಿದ್ಧ ಎಂದೇ ಪರರಿಂದ ಒಪ್ಪಲಾಗಿದೆ. ಅವುಗಳಲ್ಲಿ (ಶ್ರುತಿಗಳಲ್ಲಿ) ಭೇದಶ್ರುತಿಗೆ ಮಿಥ್ಯಾವಾದಿತ್ವವನ್ನು ಒಪ್ಪಿದಲ್ಲಿ, ಐಕ್ಯಶ್ರುತಿಯಲ್ಲೂ ಶ್ರುತಿತ್ವವು ಇರುವುದರಿಂದ ಅದೇ (ಅತತ್ವಾವೇದಕತ್ವವೇ) ಪ್ರಾಪ್ತವಾಗುವುದರಿಂದ, ಅದರಿಂದ (ಐಕ್ಯಶ್ರುತಿಯಿಂದ) ಪ್ರತಿಪಾದಿತವಾದ ಐಕ್ಯಕ್ಕೆ ಸತ್ಯತ್ವವನ್ನು ಹೇಗೆ ಒಪ್ಪಲಾಗುವುದು? ಬಾಧಕಗಳು ಇಲ್ಲೂ(ಐಕ್ಯದ ವಿಷಯದಲ್ಲೂ) ಇರುವುದರಿಂದ[2]. ದೋಷಾಂತರವನ್ನೂ ತಿಳಿಸುತ್ತಾರೆ **'ಕಥಂ ಚೈವಂ'** ಎಂದು. **ಏವಂ ವಾದಿನಾಂ-**

---

1. 'ಭೇದಕ್ಕೆ ಅನಿರ್ವಚನೀಯತ್ವವೂ ಸಲ್ಲದು, ಅಸತ್ವವೂ ಇಲ್ಲ ಎಂದು ಸಾಧಿಸಿ, ಪರಿಶೇಷವಾಗಿ ಸತ್ಯತ್ವವೇ ಪ್ರಾಪ್ತವಾಗುವುದು' ಎಂದು ಸಾಧಿಸಿದ್ದರಿಂದ, 'ಭೇದಬೋಧಕವಾಕ್ಯಗಳು ಅತತ್ವಾವೇದಕಗಳಲ್ಲ' ಎಂದು ಭೇದದ ಬಗ್ಗೆ ಇರುವ ಎಲ್ಲ ವಿಧವಾದ ಶಂಕೆಗಳನ್ನು ನಿರಾಕರಿಸಿರುವುದರಿಂದ ಎಂದು ಭಾವ.

2. ಭೇದಪ್ರತಿಪಾದಕವಾದ ವಾಕ್ಯಗಳಿಗೆ ಅತತ್ವಾವೇದಕತ್ವವನ್ನು ತಿಳಿಸಲು ಕಾರಣ, ಭೇದಜ್ಞಾನವು ಪ್ರಾಪ್ತವಾಗಲು ಅನವಸ್ಥಾದಿ ದೋಷಗಳು ಇರುವುದರಿಂದ ಎಂದು ಹೇಳುವದಾದಲ್ಲಿ, ಜೀವೇಶ್ವರಿಗೆ ಐಕ್ಯವನ್ನು ತಿಳಿಸುವ ವಾಕ್ಯಕ್ಕೂ ಸರ್ವಜ್ಞತ್ವ-ಅಲ್ಪಜ್ಞತ್ವಗಳು ಬಾಧಕವಾಗಿರುವುದರಿಂದ, ಭೇದದ ಅರಿವಿನಂತೆ ಐಕ್ಯದ ಅರಿವಿನಲ್ಲೂ ಅನವಸ್ಥಾದಿ ದೋಷಗಳು ಇರುವುದರಿಂದ ಇವೂ ಸಹ ಅತತ್ವಾವೇದಕಗಳಾಗಲಿ. ಎರಡೂ ವಾಕ್ಯಗಳಲ್ಲೂ ಶ್ರುತಿತ್ವವು ಸಾಮಾನ್ಯವಾಗಿದೆ ಎಂದು ಭಾವ.

ವೇದೋಕ್ತವಾದದ್ದನ್ನೂ ಮಿಥ್ಯಾ ಎಂದು ವಾದಿಸುವವರಿಗೆ. ವೇದೋಕ್ತವಾದುದಕೆ ಮಿಥ್ಯಾತ್ವವನ್ನು ಒಪ್ಪಿದರೂ ಸಹ ಏಕೆ ವೇದವಾದಿತ್ವವು ಸಲ್ಲದು? ಆದುದರಿಂದ (ವೇದೋಕ್ತವಾದುದಕ್ಕೆ ಮಿಥ್ಯಾತ್ವವನ್ನು ಒಪ್ಪಿರುವುದಕ್ಕೂ ಅವೇದವಾದಿತ್ವಕ್ಕೂ ಇರುವ) ವ್ಯಾಪ್ತಿಯನ್ನು ತಿಳಿಸುತ್ತಾರೆ 'ವೇದೋಕ್ತಸ್ಯ' ಎಂದು.

**ವೇದವು ತಾನು ಉಪದೇಶಿಸಿದ್ದನ್ನೇ ನಿರಾಕರಿಸುವುದೆ?**

**ನನು, ವೇದೋಕ್ತಸ್ಯ ಮಿಥ್ಯಾತಾಙ್ಗೀಕಾರಾದಧಿಕಮವೇದವಾದಿತ್ವಂ ನಾಸ್ತಿ । ತತ್ಕಥಂ ವ್ಯಾಪ್ಯವ್ಯಾಪಕಭಾವಾದಿಕಂ? ಇತಿಚೇನ್ನ । ವ್ಯವಹಾರಸ್ಯಾತ್ರ ವಿವಕ್ಷಿತತ್ವಾತ್ । 'ಏಮತೋ ವೈದಿಕತ್ವೇನ ನ ವ್ಯವಹರ್ತವ್ಯಃ ಅವೈದಿಕತ್ವೇನ ವ್ಯವಹರ್ತವ್ಯೋ ವಾ ವೇದೋಕ್ತಸ್ಯ ಮಿಥ್ಯಾತ್ವಾಙ್ಗೀಕಾರಿತ್ವಾತ್ ಬೌದ್ಧಾದಿ-ವತ್' ಇತಿ । ನನು, ಮಯಾ ವೇದೈಕದೇಶಸ್ಯ ತತ್ತ್ವಾವೇದಕತ್ವಮಙ್ಗೀಕ್ರಿಯತ ಇತಿ ಚೇನ್ನ । ಬೌದ್ಧಾದೀನಾಮಪಿ ತತ್ಸಾಮ್ಯಾತ್ । ನ ಹಿ ತೇಽಪಿ ವೇದೋಕ್ತಂ ಸ್ವದರ್ಶನಾನುಗುಣಮಪಿ ಮಿಥ್ಯೇತ್ಯಾಹುಃ । ನ ವಯಂ ಬೌದ್ಧಾದಿವತ್ ವೇದಸ್ಯಾಽಪ್ರಾಮಾಣ್ಯಂ ಬ್ರೂಮಃ । ಕಿನ್ತು 'ಮನ್ದಾಧಿಕಾರಿಣಃ ಪ್ರತಿ ವೇದೋ ಭೇದಾಶ್ರಯಂ ಕರ್ಮಾದಿಕಂ ಪ್ರತಿಪಾದಯತಿ' ಇತಿ ವದಾಮಃ? ಇತಿ ಚೇತ್ । ಸತ್ಯಮ್, ತಥಾಽಪಿ ಉಚ್ಯಮಾನಸ್ಯ ಮಿಥ್ಯಾತಾಙ್ಗೀಕಾರಾತ್ ಕಿಮನೇನ ವಲ್ಗಿತೇನ? 'ಐಕ್ಯಜ್ಞಾನಸ್ಯ ಮಿಥ್ಯಾಭೂತಮಪಿ ಕರ್ಮಾದಿಕಂ ಅಙ್ಗಂ' ಇತಿ ಚೇನ್ನ । ಭೇದವಾಸನಾಪರಿಪಾಕಸ್ಯ ತದ್ವಿರೋಧಿತ್ವೇನಾಙ್ಗತ್ವಾನು-ಪಪತ್ತೇಃ । ಅನುವಾದಪರೋಽಸೌ ವೇದಭಾಗ ಇತಿ ಚೇನ್ನ । ಅನುವಾದೇ ಪ್ರಯೋಜನಾಭಾವಾತ್ । 'ನೇಹ ನಾನಾ' ಇತಿ ಪ್ರತಿಷೇಧಾರ್ಥಮಿತಿ ಚೇನ್ನ । ಸ್ವರ್ಗಾಪೂರ್ವಾದೀನಾಂ ವೇದಮನ್ತರೇಣ ಪ್ರಾಪ್ತ್ಯಭಾವಾತ್ । ವೇದಪ್ರಾಪ್ತಪ್ರತಿಷೇಧೇ ಪುನರಪ್ರಾಮಾಣ್ಯತಾದವಸ್ಥ್ಯಾತ್ ।**

ಆದರೆ, ವೇದೋಕ್ತವಾದುದಕೆ ಮಿಥ್ಯಾತ್ವವನ್ನು ಒಪ್ಪುವುದರಿಂದ ವಿಶೇಷವಾದ ಅವೇದವಾದಿತ್ವವು ಇಲ್ಲ. (ವೇದೋಕ್ತವಾದುದಕ್ಕೆ ಮಿಥ್ಯಾತ್ವವನ್ನು ಅಂಗೀಕರಿಸುವುದಕ್ಕೂ ಅವೇದವಾದಿತ್ವಕ್ಕೂ) ವ್ಯಾಪ್ಯ-ವ್ಯಾಪಕಭಾವಾದಿಗಳು ಹೇಗೆ? ಎಂದು ಹೇಳುವುದು ತರವಲ್ಲ. ಇಲ್ಲಿ ಕೇವಲ ವ್ಯವಹಾರವನ್ನು

ವಿವಕ್ಷಿಸಲಾಗಿರುವುದರಿಂದ[1]. ವಿಮತಿಗೆ ವಿಷಯರಾದ ಈ ವಾದಿಗಳು ವೈದಿಕರು ಎಂಬ ವ್ಯವಹಾರಕ್ಕೆ ಯೋಗ್ಯರಲ್ಲ, ಅಥವಾ ಅವೈದಿಕರು ಎಂಬ ವ್ಯವಹಾರಕ್ಕೆ ಯೋಗ್ಯರು ವೇದೋಕ್ತವಾದುದನ್ನು ಮಿಥ್ಯಾ ಎಂದು ವಾದಿಸುವುದರಿಂದ ಬೌದ್ಧರಂತೆ ಎಂಬ (ಅನುಮಾನವು ಸಿದ್ಧವಾಗುವುದು). ಆದರೆ, ವೇದದ ಒಂದು ಭಾಗವನ್ನು ತತ್ತ್ವಾವೇದಕ ಎಂದು ನಾವು (ಮಾಯಾವಾದಿಗಳು) ಒಪ್ಪಿರುವೆವು (ಆದುದರಿಂದ ನಮ್ಮನ್ನು ಬೌದ್ಧರಂತೆ ಎಂದು ಹೇಳುವುದು ಯುಕ್ತವಲ್ಲ) ಎನ್ನುವುದು ತರವಲ್ಲ. ಬೌದ್ಧರಲ್ಲೂ ಅದು ಸಾಮ್ಯವಾದುದರಿಂದ. ವೇದಪ್ರತಿಪಾದ್ಯವಾದದ್ದು ತಮ್ಮ ಶಾಸ್ತ್ರಕ್ಕೆ ಅನುಗುಣವಾದದ್ದನ್ನು ಅವರೂ ಸಹ ಮಿಥ್ಯಾ ಎಂದು ಹೇಳಲಾರರು[2]. ಬೌದ್ಧರಂತೆ ನಾವು (ಮಾಯಾವಾದಿಗಳು) ವೇದಕ್ಕೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳುವದಿಲ್ಲ. ಮತ್ತೆ 'ಮಂದಾಧಿ ಕಾರಿಗಳನ್ನು ಉದ್ದೇಶಿಸಿ ವೇದವು ಭೇದಾಶ್ರಿತವಾದ ಕರ್ಮಾದಿಗಳನ್ನು ಪ್ರತಿಪಾದಿಸುತ್ತದೆ' ಎಂದು ಹೇಳುವೆವು ಎಂದಲ್ಲಿ[3], ನಿಜ- ಹಾಗಾದರೂ (ವೇದವು) ಹೇಳುವದನ್ನು ಮಿಥ್ಯೆ ಎಂದು ಒಪ್ಪಿರುವುದರಿಂದ ಈ ತೋರಿಕೆಯ ಮಾತಿನಿಂದ ಏನು ಪ್ರಯೋಜನ? ಕರ್ಮಾದಿಗಳು ಮಿಥ್ಯೆಯಾದರೂ ಐಕ್ಯಜ್ಞಾನಕ್ಕೆ ಅಂಗ ಎನ್ನುವುದು ತರವಲ್ಲ. ಭೇದವಾಸನಾ ಪರಿಪಾಕವು ಅದರ (ಐಕ್ಯಜ್ಞಾನಕ್ಕೆ) ವಿರೋಧಿಯಾದುದರಿಂದ (ಅದರ) ಅಂಗತ್ವವು

---

1. ಮಾಯಾವಾದೀ ಅವೇದವಾದೀ ಭವಿತುಮರ್ಹತಿ ವೇದೋಕ್ತಸ್ಯ ಮಿಥ್ಯಾತ್ವಾಙ್ಗೀಕಾರಾತ್' ಎಂದು ಅನುಮಾನವನ್ನು ಹೇಳಿದಲ್ಲಿ, ಸಾಧ್ಯ ಮತ್ತು ಹೇತುಗಳು ಒಂದೇ ಆಗುವವು, ತನ್ನಿಮಿತ್ತವಾಗಿ ಸಾಧ್ಯಾವಿಶಿಷ್ಟತಾ ರೂಪ ದೋಷವು ಪ್ರಾಪ್ತವಾಗಲಾಗಿ, ಅಭಿನ್ನವಾದ ಸಾಧ್ಯ-ಹೇತುಗಳಿಗೆ ವ್ಯಾಪ್ಯ-ವ್ಯಾಪಕಭಾವವು ಸಿದ್ಧವಾಗಲಾರದು ಎಂದು ಪ್ರಶ್ನಿಸಿದಲ್ಲಿ, ಇಲ್ಲಿ 'ಅವೇದವಾದಿತ್ವೇನ ವ್ಯವಹಾರವಿಷಯತ್ವಂ' ಎಂಬ ಸಾಧ್ಯವು ವಿವಕ್ಷಿತವಾಗಿದೆ. ಆದುದರಿಂದ ಸಾಧ್ಯಾವಿಶಿಷ್ಟತ್ವವು ಇಲ್ಲ ಎಂದು ಭಾವ.

2. ಆಕಾಶಾದಿಗಳಿಗೆ ನಿತ್ಯತ್ವವನ್ನು ಅವರೂ ಒಪ್ಪಿರುವರು ಎಂದು ಭಾವ.

3. ಭೇದಾಶ್ರಿತವಾದ ಕರ್ಮಗಳನ್ನು ಬೋಧಿಸುವ ವೇದಭಾಗಕ್ಕೂ ಸಹ ಮುಖ್ಯಾರ್ಥವಾದ ಐಕ್ಯದಲ್ಲೇ ತಾತ್ಪರ್ಯವು ಇರುವುದರಿಂದ ಆ ಭಾಗಕ್ಕೂ ಪ್ರಾಮಾಣ್ಯವನ್ನು ಒಪ್ಪಿರುವೆವು ಆದುದರಿಂದ ಬೌದ್ಧರಂತೆ ವೇದಕ್ಕೆ ಸರ್ವಥಾ ಅಪ್ರಾಮಾಣ್ಯವನ್ನು ತಿಳಿಸುವ ವಾದಿಗಳು ನಾವು ಅಲ್ಲ ಎಂದು ಭಾವ.

ಯುಕ್ತವಾಗದು[1]. ಈ (ಕರ್ಮಪರವಾದ) ವೇದಭಾಗವು ಅನುವಾದಕವಾಗಿದೆ ಎನ್ನುವುದು ತರವಲ್ಲ. ಅನುವಾದದಿಂದ (ಯಾವುದೇ) ಪ್ರಯೋಜನವು ಇಲ್ಲದಿರುವುದರಿಂದ. 'ನೇಹ ನಾನಾ' ಎಂದು ಪ್ರತಿಷೇಧಿಸುವ ಸಲುವಾಗಿ ಎನ್ನುವುದು ತರವಲ್ಲ. ಸ್ವರ್ಗ, ಅಪೂರ್ವ ಮುಂತಾದವುಗಳು ವೇದದ ಹೊರತಾಗಿ (ಬೇರೇ ಪ್ರಮಾಣಗಳಿಂದ) ಪ್ರಾಪ್ತಿಯು ಇಲ್ಲದಿರುವುದರಿಂದ. ವೇದದಿಂದಲೇ ಪ್ರಾಪ್ತವಾದುದನ್ನು (ವೇದವೇ) ನಿಷೇಧಿಸಿದಲ್ಲಿ ಪುನಃ ಅಪ್ರಾಮಾಣ್ಯವು ತಪ್ಪದು[2].

**ಅತೋ ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ ।**

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ವಿಷ್ಣುತತ್ತ್ವವಿನಿರ್ಣಯೇ ಪೂರ್ವಾರ್ಧಃ ಸಮಾಪ್ತಃ ॥**

ಆದುದರಿಂದ ವಿಷ್ಣುವಿನ ಸರ್ವೋತ್ತಮತ್ವದಲ್ಲೇ ಎಲ್ಲ ಆಗಮಗಳಿಗೆ ಮಹಾತಾತ್ಪರ್ಯವು (ಸಿದ್ಧವಾಯಿತು).

---

1. ಭೇದಾಶ್ರಯವಾದ ಕರ್ಮಗಳು ಐಕ್ಯದ ಅರಿವಿಗೆ ವಿರೋಧಿಯಾಗಿದೆ. ಭೇದಸಂಸ್ಕಾರದ ದಾರ್ಢ್ಯಕ್ಕೆ ಕಾರಣವಾಗಿದೆ. ಐಕ್ಯದ ಅರಿವಿಗೆ ಅದು ಉಪಕಾರಕವಲ್ಲ. ತನ್ನಿಮಿತ್ತವಾಗಿ ಅದು ಅಂಗವಾಗಲಾರದು ಎಂದು ಭಾವ.

2. 'ನೇಹ ನಾನಾ..' ಎಂಬ ಶ್ರುತಿಯು 'ಬ್ರಹ್ಮನಲ್ಲಿ ಆರೋಪಿತವಾದ ನಾನಾವಿಧವಾದ ಕರ್ಮ ಮತ್ತು ಈ ಘಟಪಟಾದಿ ಜಗತ್ತು ಯಾವುದೂ ಇಲ್ಲ' ಎಂದು ನಿಷೇಧಿಸುತ್ತದೆ. ನಿಷೇಧಿಸಲು ಪ್ರಸಕ್ತವಾಗಿರಬೇಕು, ನಿಷೇಧ್ಯವಾದುದನ್ನು ಪ್ರಸ್ಥಾಪಿಸಲು ಕರ್ಮಪರವಾದ ಈ ವೇದಭಾಗಗಳು ಪ್ರವೃತ್ತವಾಗಿದೆ. ಹಾಗಾಗಿ ಕರ್ಮಪ್ರತಿಪಾದಕವಾದ ಆ ವೇದಭಾಗಕ್ಕೆ ಸ್ವಾರ್ಥದಲ್ಲಿ ಭೇದಾಶ್ರಯವಾದ ಕರ್ಮದ ಪ್ರತಿಪಾದನದಲ್ಲಿ ತಾತ್ಪರ್ಯವಿಲ್ಲ ಎಂದು ಮಾಯಾವಾದಿಗಳು ಅಭಿಮತಿಸುತ್ತಾರೆ. ಆದರೆ ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಇತರ ಪದಾರ್ಥಗಳನ್ನು ಮಾತ್ರ ವೇದವು ನಿಷೇಧಿಸಿದಲ್ಲಿ ಈ ಅಭಿಪ್ರಾಯವು ಸಂಗತವಾಗುತ್ತಿತ್ತು, ಆದರೆ ವೇದದಿಂದ ಮಾತ್ರ ವೇದ್ಯವಾಗುವ ಸ್ವರ್ಗ, ಅಪೂರ್ವ ಈ ಮುಂತಾದ ಪದಾರ್ಥಗಳನ್ನೂ ಸಹ ಈ ವೇದಭಾಗವು ನಿಷೇಧಿಸುತ್ತಿದೆ ಎಂದು ಮಾಯಾವಾದಿಗಳು ಅಭಿಮತಿಸುವರು. ಹಾಗಾಗಿ ವೇದವು ತಾನೇ ತಿಳಿಸಿದ್ದನ್ನು ವೇದವೇ ನಿಷೇಧಿಸಿದಲ್ಲಿ ಅಂತಹ ವೇದವಾಕ್ಯಗಳಿಗೆ ಪ್ರಾಮಾಣ್ಯವನ್ನು ಹೇಗೆ ಒಪ್ಪುವುದು? ಎಂದು ಭಾವ.

ಕಿಞ್ಚ ತತ್ವಸ್ಯಾವೇದ್ಯತ್ವೇನ ನೈಕದೇಶಸ್ಯಾಪಿ ತತ್ತ್ವಾವೇದಕತ್ವಮಙ್ಗೀಕರ್ತುಂ ಶಕ್ಯತೇ । ತಥಾಽಪಿ ಪ್ರಯೋಜನಹೇತುತ್ವಮಸ್ತೀತಿ ಚೇನ್ನ । ಪ್ರಯೋಜನ-ವತ್ವಸ್ಯ ಪ್ರಾಮಾಣ್ಯಪದಾರ್ಥತ್ವಾಭಾವಾತ್ । ಅನ್ಯಥಾ ಮಣಿಪ್ರಭಾವಿಷಯ-ಮಣಿವಿಭ್ರಮಸ್ಯಾಪಿ ಪ್ರಾಮಾಣ್ಯಪ್ರಸಙ್ಗಾತ್ । 'ಲೋಕಸಿದ್ಧಾರ್ಥಾ-ಙ್ಗೀಕಾರೇಣ ತತ್ವವಿಚಾರೋ ಹಿ ಪರೀಕ್ಷಕಾಣಾಮುಚಿತೋ ನ ತು ಸ್ವಸಙ್ಕೇತೇನ' ಇತಿ । ಏವಂ ಬಾಧಕಪರಿಹಾರೇಣ ಯತ್ಸಿದ್ಧಂ ತದ್ ಉಪಸಂಹರತಿ 'ಅತ' ಇತಿ । 'ಸಿದ್ಧಮ್' ಇತಿ ವಾಕ್ಯಶೇಷಃ ।

**ಶ್ರೀವಿಷ್ಣುತತ್ತ್ವವಿನಿರ್ಣಯಸ್ಯ ಶ್ರೀಜಯತೀರ್ಥಕೃತಾಯಾಃ ಟೀಕಾಯಾಃ ಪೂರ್ವಾರ್ಧಃ ಸಮಾಪ್ತಃ ॥**

ಮತ್ತೂ ಸಹ, ತತ್ವವು (ಬ್ರಹ್ಮನು) ಅವೇದ್ಯವಾದುದರಿಂದ (ವೇದದ) ಒಂದು ಭಾಗಕ್ಕೂ ಸಹ ತತ್ತ್ವಾವೇದಕತ್ವವನ್ನು ಒಪ್ಪಲು ಆಗದು[1]. ಆದರೂ ಸಹ ಪ್ರಯೋಜನಕ್ಕೆ ಕಾರಣವಾದುದರಿಂದ (ಪ್ರಾಮಾಣ್ಯವು) ಇದೆ ಎನ್ನುವುದು ತರವಲ್ಲ[2]. ಪ್ರಾಮಾಣ್ಯ ಅಂದರೆ ಪ್ರಯೋಜನವನ್ನು ಹೊಂದಿದ್ದು ಎಂದು (ಯಾವ ಶಾಸ್ತ್ರಕಾರರೂ) ಅರ್ಥೈಸದೇ ಇರುವುದರಿಂದ. ಹಾಗಾಗದ ಪಕ್ಷದಲ್ಲಿ

1. ವೇದದಲ್ಲಿ ಎರಡು ಭಾಗ. ಒಂದು ಭಾಗ ಕರ್ಮಾದಿಗಳನ್ನು ತಿಳಿಸುವುದು, ಮತ್ತೊಂದು ಭಾಗವು ಬ್ರಹ್ಮನನ್ನು ತಿಳಿಸುವುದು. ಅದರಲ್ಲಿ 'ಕರ್ಮಾದಿಗಳನ್ನು ತಿಳಿಸುವ ಭಾಗವು ಅತತ್ತ್ವಾವೇದಕ, ಬ್ರಹ್ಮನನ್ನು ತಿಳಿಸುವ ಉಪನಿಷತ್‌ಭಾಗವು ತತ್ತ್ವಾವೇದಕ' ಎಂದು ಮಾಯಾವಾದಿಗಳ ಅಭಿಮತಿ. ಆದರೆ ತತ್ವವೆಂದು ಅಭಿಮತನಾದ ಬ್ರಹ್ಮನು ಅವಾಚ್ಯ, ಅಶಬ್ದ, ಅಜ್ಞೇಯನಾದುದರಿಂದ, ' ಬ್ರಹ್ಮನು ಆ ವೇದದಿಂದಲೂ ಅವೇದ್ಯ' ಇತ್ಯಾದಿಯಾಗಿ ಮಾಯಾಶಾಸ್ತ್ರದಲ್ಲಿ ಉಕ್ತವಾಗಿದೆ. ತನ್ನಿಮಿತ್ತವಾಗಿ ಮತ್ತೊಂದು ಭಾಗವೂ ಸಹ ತತ್ವವನ್ನು ಆವೇದನ ಮಾಡಲಾರದು. ಒಟ್ಟಿನಲ್ಲಿ ಸಮಗ್ರ ವೇದವೂ ಅತತ್ತ್ವಾವೇದಕವಾಯಿತು ಎಂದು ಭಾವ.

2. ವೇದದ ಒಂದು ಭಾಗವು ಬ್ರಹ್ಮವಿಷಯಕ ಜ್ಞಾನಕ್ಕೆ ಕಾರಣವಾಗದಿದ್ದರೂ, ಬ್ರಹ್ಮಾವರಕ ಅಜ್ಞಾನದ ನಿವಾರಕವಾಗಿದೆ. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ, ಎನ್ನುವ ವೇದಭಾಗವು ಬ್ರಹ್ಮನನ್ನು 'ಸತ್ಯತ್ವಾದಿ ಗುಣವಿಶಿಷ್ಟ' ಎಂದು ಬೋಧಿಸದಿದ್ದರೂ, 'ಬ್ರಹ್ಮನು ಅಸತ್ತಲ್ಲ, ಬ್ರಹ್ಮನಲ್ಲಿ ಅಜ್ಞಾನವಿಲ್ಲ, ಬ್ರಹ್ಮನಿಗೆ ನಾಶವಿಲ್ಲ' ಇತ್ಯಾದಿಯಾಗಿ ಬ್ರಹ್ಮವಿಷಯಕವಾದ ಅಜ್ಞಾನವನ್ನು ನಿವೃತ್ತಿಗೊಳಿಸುವುದು. ಒಟ್ಟಿನಲ್ಲಿ ಈ ವಾಕ್ಯಗಳಿಂದ ಲಾಭವಿದೆ, ತನ್ನಿಮಿತ್ತವಾಗಿ ಪ್ರಾಮಾಣ್ಯವನ್ನು ಒಪ್ಪಲಾಗುವುದು ಎಂದು ವಾದಿಸುವುದು ತರವಲ್ಲ ಎಂದು ಭಾವ.

(ಪ್ರಾಮಾಣ್ಯ ಶಬ್ದಕ್ಕೆ ಪ್ರಯೋಜನವತ್ವಂ ಎಂದು ಅರ್ಥೈಸುವದಾದ ಪಕ್ಷದಲ್ಲಿ) ಮಣಿಪ್ರಭಾ ವಿಷಯಕವಾದ ಮಣಿಯ ಭ್ರಾಂತಿಗೂ ಪ್ರಾಮಾಣ್ಯವನ್ನು ಒಪ್ಪಬೇಕಾಗೀತು[1]. ಲೋಕದಲ್ಲಿ ಸಿದ್ಧವಾದ ಅರ್ಥವನ್ನು ಒಪ್ಪಿಕೊಂಡು, ತತ್ವವಿಚಾರವು ಪರೀಕ್ಷಕರಿಗೆ ಉಚಿತವಾಗಿದೆಯೇ ಹೊರತು, ನಮ್ಮ ನಮ್ಮ ಸಂಕೇತದಿಂದಲ್ಲ ಎಂದು[2]. ಈ ರೀತಿಯಾಗಿ ಬಾಧಕಪರಿಹಾರದಿಂದ ಯಾವುದು ಸಿದ್ಧವಾಯಿತೋ ಅದನ್ನು ಉಪಸಂಹರಿಸುತ್ತಾರೆ 'ಅತಃ' ಎಂದು. 'ಸಿದ್ಧಂ' ಎಂದು ಶೇಷಪೂರಣ ಮಾಡಿಕೊಳ್ಳುವುದು[3].

**-: ಪ್ರಮಾಣಪ್ರಮಿತವಾದ ಭೇದವನ್ನು ಅಲ್ಲಗಳೆಯಲಾಗದು :-।**

**ಶ್ರೀವಿಷ್ಣುತತ್ವವಿನಿರ್ಣಯದ ಕನ್ನಡಾನುವಾದದಲ್ಲಿ ಪೂರ್ವಾರ್ಧವು ಸಮಾಪ್ತವಾಯಿತು.**

---

1. ಮಣಿಯ ಪ್ರಭೆಯನ್ನೋ ಪ್ರತಿಬಿಂಬವನ್ನೋ ಕಂಡ ವ್ಯಕ್ತಿಗೆ 'ಇಯಂ ಮಣಿಃ' ಎಂಬ ಭ್ರಾಂತಿಯು ಪ್ರಾಪ್ತವಾದಾಗ, ಮಣಿಗಾಗಿ ಪ್ರವೃತ್ತನಾಗುವನು. ಪ್ರವೃತ್ತನಾದ ವ್ಯಕ್ತಿಗೆ ಮಣಿಯ ಪ್ರಾಪ್ತಿಯೂ ಆಗುವುದು. ಪ್ರಭೆ ಅಥವಾ ಪ್ರತಿಬಿಂಬವು ಇದ್ದಲ್ಲಿ ನಿಜವಾದ ಮಣಿಯು ಇರಬೇಕು ತಾನೆ ? ಪ್ರಯೋಜನವಿರುವುದರಿಂದ 'ಇಯಂ ಮಣಿಃ' ಎಂಬ ಭ್ರಮಾತ್ಮಕ ಅರಿವನ್ನೂ ಸಹ ಪ್ರಮಾಣ ಎಂದು ವ್ಯವಹರಿಸಬೇಕಾದೀತು. ಹಾಗೆಯೇ ಸಹಜ-ವಾಗಿ ಪ್ರಾಪ್ತವಾದ ತೃಣಾದಿ ಉಪೇಕ್ಷಿತ ಪದಾರ್ಥಗಳ ಅರಿವಿನಿಂದ ಯಾವ ಪ್ರಯೋಜನವೂ ಕಂಡಿಲ್ಲ. ಅಂತಹ ಸಹಜ ಅರಿವೆಲ್ಲವೂ ಅಪ್ರಮಾಣವೆಂದು ಒಪ್ಪಬೇಕಾಗೀತು ಎನ್ನುವದನ್ನೂ 'ತೃಣಾದಿದರ್ಶನೇ ಕಿಞ್ಚ ಫಲವತ್ವಂ ನಿಗದ್ಯತೇ' (ಅನುವ್ಯಾ.2.1.27.) ಎಂದು ತಿಳಿಸಿದ್ದನ್ನೂ ಊಹಿಸಿಕೊಳ್ಳಬೇಕು ಎಂದು ಭಾವ.

2. ಶಾಸ್ತ್ರದಲ್ಲಿನ ವ್ಯವಹಾರವೂ ಲೋಕಸಂಮತವಾದ ರೀತಿಯಿಂದ ಇರಬೇಕೇ ಹೊರತು, ನಾವು ಯಾವುದೋ ಒಂದು ಶಬ್ದಕ್ಕೆ ಏನೋ ಒಂದು ಸಂಕೇತವನ್ನು ಮಾಡಿಕೊಂಡು ವ್ಯವಹರಿಸುವುದು ತರವಲ್ಲ. 'ಯಥಾರ್ಥಂ- ಪ್ರಮಾಣಂ' ಎನ್ನುವುದು ಲೋಕವ್ಯವಹಾರ, ಅದನ್ನು ಬಿಟ್ಟು 'ಪ್ರಯೋಜನವತ್ವಂ- ಪ್ರಮಾಣಂ' ಎಂದು ವ್ಯವಹರಿಸುವುದು ತರವಲ್ಲ ಎಂದು ಭಾವ.

3. 'ಸಮತೀತಕ್ಷರಾಕ್ಷರಂ' ಎಂದು ಆಚಾರ್ಯರು ತಿಳಿಸಿರುವರು. ಈ ಸರ್ವೋತ್ತಮತ್ವದ ಅರಿವು, ಭೇದದ ಅರಿವಿನ ನೆರವಿನಿಂದ ಪ್ರಾಪ್ತವಾಗುವುದು. ಆದರೆ ಭೇದದ ಅರಿವೇ ದುಸ್ತರ ಎಂದು ಮಾಯಾವಾದಿಗಳು ಸಂದೇಹಿಸಿದ್ದರೂ. ಈಗ ಆ ಎಲ್ಲ ವಿಧವಾದ:ಬಾಧಕಗಳನ್ನು ನಿವಾರಿಸಿದ್ದರಿಂದ 'ವೇದಕ್ಕೆ ವಿಷ್ಣುಸರ್ವೋತ್ತಮತ್ವದಲ್ಲಿ ಮಹಾತಾತ್ಪರ್ಯವು ಇದೆ' ಎನ್ನುವ ವಿಷಯವು ಸಿದ್ಧವಾಯಿತು ಎಂದು ಭಾವ.

# ಪರಿಶಿಷ್ಟ

## ವಿಷ್ಣುತತ್ವವಿನಿರ್ಣಯದಲ್ಲಿ ಉದಾಹರಿಸಲಾದ ವೇದವಚನಗಳು

# ವಿಷ್ಣುತತ್ವವಿನಿರ್ಣಯದಲ್ಲಿ ಉದಾಹರಿಸಲಾದ ಸ್ಮೃತಿವಚನಗಳು

# ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿ ಉದಾಹರಿಸಲಾದ ವೇದವಾಕ್ಯಗಳು

★ ★ ★

## ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿ ಉದಾಹರಿಸಲಾದ ಶ್ರೀಮದ್ಬ್ರಹ್ಮಸೂತ್ರ



## ವಿಷ್ಣುತತ್ತ್ವವಿನಿರ್ಣಯಟೀಕಾ ಗ್ರಂಥದಲ್ಲಿ ಉದಾಹರಿಸಲಾದ ಪುರಾಣೇತಿಹಾಸವಚನಗಳು



## ಶ್ರೀಮದಾಚಾರ್ಯವಾಕ್ಯಗಳು



## ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿ ಉದಾಹರಿಸಲಾದ ಅನ್ಯಶಾಸ್ತ್ರೀಯ ವಚನಗಳು

★★★

## ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿ ಉದಾಹರಿಸಲಾದ ವ್ಯಾಕರಣಶಾಸ್ತ್ರೀಯ ಪ್ರಮಾಣವಚನಗಳು

★★★

## ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿ ಉದಾಹರಿಸಲಾದ ನ್ಯಾಯಗಳು

1) ಕುರುಪಾಂಡವನ್ಯಾಯ- ಪದಾರ್ಥಗ್ರಾಹಕವಾದ ವ್ಯಾಪಕಧರ್ಮವಾಚಕ ಮತ್ತು ವ್ಯಾಪ್ಯಧರ್ಮವಾಚಕ ಎರಡೂ ಶಬ್ದಗಳು ಏಕಸ್ಥಳದಲ್ಲಿ ಉಕ್ತವಾಗಿದ್ದರೆ, ವ್ಯಾಪಕಧರ್ಮವಾಚಕ ಶಬ್ದಕ್ಕೆ ಅರ್ಥದಲ್ಲಿ ಸಂಕೋಚವನ್ನು ಮಾಡುವುದು. ವ್ಯಾಪ್ಯಧರ್ಮಬೋಧಕಶಬ್ದದಿಂದ ವಾಚ್ಯವಾದ ಪಾದಾರ್ಥಗಳನ್ನು ಹೊರತು ಪಡಿಸಿ ಇತರ ಪದಾರ್ಥಬೋಧಕ ಎಂದು ಅರ್ಥೈಸುವುದು. ಪಾಂಡವರೂ ಕೌರವರೇ, ಆದರೂ ಪಾಂಡವರನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ. ಇಂತಹ ಸಂದರ್ಭದಲ್ಲಿ ಕೌರವ ಶಬ್ದಕ್ಕೆ ಪಾಂಡವೇತರ ಕೌರವರು ಎಂದು ಅರ್ಥೈಸಬೇಕು. ಈ ನಿಯಮವನ್ನೇ ಬ್ರಾಹ್ಮಣಪಾರಿವ್ರಾಜಕನ್ಯಾಯ ಎಂದೂ ವ್ಯವಹರಿಸಲಾಗುವುದು. 26

2) ಬ್ರಾಹ್ಮಣಪಾರಿವ್ರಾಜಕನ್ಯಾಯ- ಬ್ರಾಹ್ಮಣತ್ವವು ವ್ಯಾಪಕಧರ್ಮ, ಪಾರಿವ್ರಾಜಕತ್ವವು ವ್ಯಾಪ್ಯಧರ್ಮ. ಪ್ರಕೃತ ಬ್ರಾಹ್ಮಣಶಬ್ದಕ್ಕೆ ಪರಿವ್ರಾಜಕೇತರ ಬ್ರಾಹ್ಮಣ ಎಂದು ಅರ್ಥ.

3) ಅಸಾಧಾರಣ್ಯೇನ ವ್ಯಪದೇಶಾ ಭವನ್ತಿ। ಸರ್ವಸಾಧಾರಣ ಗುಣವನ್ನು ತಿಳಿಸುವ ಶಬ್ದಗಳು ವಿಶೇಷಸಂದರ್ಭದಲ್ಲಿ ವಿಶಿಷ್ಟಾರ್ಥಕಗಳಾಗಿರುವವು. ಉದಾ- ಆಗಮಗಳನ್ನು 'ವೇದ' ಎಂದು ವ್ಯವಹರಿಸಲಾಗುವುದು. ವೇದ ಎಂಬುವುದು ತಿಳಿದಿದ್ದು ಜ್ಞಾನಕ್ಕೆ ವಿಷಯವಾದದ್ದು ಎಂಬ ಅರ್ಥದಲ್ಲಿದೆ. ಎಲ್ಲ ಶಬ್ದಗಳೂ ತಿಳಿದಿದ್ದೇ ಆದರೂ ಆಗಮವನ್ನು ಮಾತ್ರ ವೇದ ಎಂದು

ವ್ಯವಹರಿಸಿದ್ದರಿಂದ ವಿಶಿಷ್ಟ ಅರ್ಥವನ್ನು ತಿಳಿಸುತ್ತದೆ. ಆಗಮೇತರ ಶಬ್ದಗಳು ನಿರ್ಮಿತವಾದದ್ದು, ಆಗಮವು ಮಾತ್ರ ಕೇವಲ ಕೇವಲ ತಿಳಿದಿದ್ದು, ನಿರ್ಮಿಸಿದ್ದಲ್ಲ ಎಂದು ಅಸಾಧಾರಣಾರ್ಥವನ್ನು ತಿಳಿಸುವುದು. 29+266

4) ಉಭಯತಃ ಪಾಶಾ ರಜ್ಜುಃ- ಹಗ್ಗದ ಕುಣಿಕೆಯಲ್ಲಿ ಸಿಲುಕಿದ ವ್ಯಕ್ತಿಯು ಎಡಕ್ಕೆ ಜಗ್ಗಿದರೂ ಬಲಕ್ಕೆ ಜಗ್ಗಿದಿರೂ ಕುಣಿಕೆಯ ಗಂಟು ಬಿಗಿಯಾಗುವುದು. ಹಾಗೆ ವಾದ ಒಂದನ್ನು ಮಂಡಿಸುವ ಸಂದರ್ಭದಲ್ಲಿ ವಿಷಯ ಒಂದನ್ನು ಒಪ್ಪಿದರೂ ನಿರಾಕರಿಸಿದರೂ ವಾದಿಯ ಅಭೀಷ್ಟಕ್ಕೆ ಧಕ್ಕೆಯಾದಾಗ ಹೀಗೆ ಹೇಳಲಾಗುವುದು. 496

5) ಲಮ್ಬಕರ್ಣಮಾನಯನ್ಯಾಯ- ವಿಶಿಷ್ಟಕ್ಕೆ ವಿಧಿಸಿದ ನಿಯಮಗಳೆಲ್ಲವೂ ವಿಶೇಷಣಕ್ಕೂ ಅನ್ವಯಿಸಿದಲ್ಲಿ ಈ ನ್ಯಾಯವನ್ನು ಬಳಸಲಾಗುವುದು. ಓರ್ವವ್ಯಕ್ತಿಯ ಕಿವಿಯು ಉದ್ದವಾಗಿದೆ. ಆ ವ್ಯಕ್ತಿಯು ಬಂದಲ್ಲಿ ಆತನ ಕಿವಿಯೂ ಆತನೊಡನೆ ಬರುವುದು. ಇದಕ್ಕೆ ವಿರುದ್ಧವಾದುದು ಚಿತ್ರಗುನ್ಯಾಯ. 578

6) ಚಿತ್ರಗುನ್ಯಾಯ- ವಿಶೇಷ್ಯಕ್ಕೆ ವಿಧಿಸಿದ ನಿಯಮವು ವಿಶೇಷಣಕ್ಕೆ ಅನ್ವಯವಾಗದಿರುವುದು. 'ಬಣ್ಣದ ಹಸುಗಳನ್ನು ಹೊಂದಿದ ವ್ಯಕ್ತಿಯನ್ನು ಕರೆದು ತನ್ನಿ' ಎಂದಲ್ಲಿ ಆತನೊಡನೆ ಆತನ ಹಸುಗಳನ್ನು ಕರೆದು ತರುವುದಿಲ್ಲ. ಲಂಬಕರ್ಣನ್ಯಾಯಕ್ಕೆ ವಿರುದ್ಧವಾದುದು ಈ ನ್ಯಾಯ. 578

7) ಸಿಂಹಾವಲೋಕನನ್ಯಾಯ- ಒಂದೆಡೆ ಹೇಳಿದ ಯುಕ್ತಿಯನ್ನು ಮತ್ತೊಂದಡೆಯಲ್ಲಿ ಅನ್ವಯಿಸುವ ಬಗೆಯನ್ನು ಈ ನ್ಯಾಯದಿಂದ ವ್ಯವಹರಿಸಲಾಗುವುದು. ಸಿಂಹವು ತಾನು ಇರುವ ಸ್ಥಳದಲ್ಲಿರುವ ಪ್ರಾಣಿಗಳನ್ನೂ ಹೆದರಿಸುವುದು, ತಾನು ನೋಡುತ್ತಿರುವ ಸ್ಥಳದಲ್ಲಿರುವ ಪ್ರಾಣಿಗಳನ್ನೂ ಹೆದರಿಸುವುದು. ಹಾಗೆ ಈ ಯುಕ್ತಿಯೂ ಎಂಬ ಭಾವದಲ್ಲಿ ಹೀಗೆ ವ್ಯವಹರಿಸಲಾಗುವುದು. ಸಿಂಹವು ಅರಣ್ಯದಲ್ಲಿ ಸ್ವಲ್ಪದೂರ ಸಾಗಿ ಪುನಃ ಹಿಂದೆ ಒಮ್ಮೆ ದಿಟ್ಟಿಸುವುದು ಎಂದು ಶಾಸ್ತ್ರವು ತಿಳಿಸುವುದು. ಹಾಗೆ ಪ್ರತಿವಾದಿಯ ವಾದಗಳನ್ನು ನಿರಾಕರಿಸುತ್ತಾ ಸಾಗಿದ ವಾದವು ಮತ್ತೊಮ್ಮೆ ಹಿಂದೆ ಪ್ರಸಕ್ತವಾದ ವಾದವನ್ನು ಕಟಾಕ್ಷೀಕರಿಸುವ ಬಗೆಯನ್ನೂ ಈ ನ್ಯಾಯದಂತೆ ಎಂದು ತಿಳಿಯುವುದು.

## ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿ ಉದಾಹರಿಸಲಾದ ಶಬ್ದನಿರ್ವಚನಗಳ ಸಂಗ್ರಹ

| ಪ್ರಮಾಣವಾಕ್ಯ | ಪುಟಸಂಖ್ಯಾ |
|---|---|
| ಅನುಪಪದ್ಯಮಾನಸ್ಯಾರ್ಥಸ್ಯ ದರ್ಶನಾತ್ ಪ್ರಾಪ್ತಿಃ, ತದುಪಪಾದಕಾರ್ಥಾಂತರಪ್ರಮಿತಿಃ-ಅರ್ಥಾಪತ್ತಿಃ। | 456 |
| ಅನುಸೃತ್ಯಮಾನಮ್- ಅನುಮಾನಮ್। | 490 |
| ಅಕ್ಷಂ ಪ್ರತಿ ಸ್ಥಿತಂ- ಪ್ರತ್ಯಕ್ಷಮ್। | 486 |

★ ★ ★

## ವಿಷ್ಣುತತ್ತ್ವವಿನಿರ್ಣಯಟೀಕಾದಲ್ಲಿಯ ಸೂಕ್ತಿವಚನಗಳು

| ಪ್ರಮಾಣವಾಕ್ಯ | ಪುಟಸಂಖ್ಯಾ |
|---|---|

★★★

## ಪಾರಿಭಾಷಿಕ ಶಬ್ದಗಳು

**ಅಂಗ-** ಉಪಕಾರಕ ಎನ್ನುವ ಭಾವದಲ್ಲಿದೆ. 'ವ್ಯಾಪ್ತಿಯು ಅನುಮಾಂಗ' ಇತ್ಯಾದಿ ಪ್ರಯೋಗಗಳನ್ನು ಗಮನಿಸುವುದು.

**ಅಂಗುಲ್ಯವಷ್ಟಂಭ-** ಬೆರಳನ್ನು ಒತ್ತುವುದು, ಕಣ್ಣಿನ ಸಮೀಪದಲ್ಲಿ ಬೆರಳನ್ನು ಒತ್ತಿ ವೀಕ್ಷಿಸುವುದು. ಆಗ ಇರುವ ಒಂದೇ ವಸ್ತುವು ಎರಡಾಗಿ ತೋರುವುದು. ಭ್ರಮೆಗೆ ಕಾರಣವಾಗುವುದು.

**ಅಜಹಲ್ಲಕ್ಷಣಾ-** ಲಕ್ಷಣಾವೃತ್ತಿಯಲ್ಲಿನ ಒಂದು ಬಗೆ. 'ಹಸುವಿನಿಂದ ಬೆಳೆಯನ್ನು ಸಂರಕ್ಷಿಸು' ಎಂದಾಗ ಹಸು ಎನ್ನುವ ಪದವು ಕೇವಲ ಹಸುವನ್ನಲ್ಲದೇ ಎಮ್ಮೆ, ಜಿಂಕೆ, ಪಕ್ಷಿ ಮುಂತಾದ , ಬೆಳೆಯನ್ನು ನಾಶಗೊಳಿಸುವ ಎಲ್ಲ ಪ್ರಾಣಿಗಳನ್ನೂ ಸೂಚಿಸುವುದು. ಈ ಸೂಚಕಪದವು ತನ್ನ ವಾಚ್ಯವನ್ನು ಬಿಡದೆ ಅನ್ಯವಸ್ತುಗಳನ್ನೂ ಸೂಚಿಸುವುದು. ಇಂತಹ ಸಂದರ್ಭಗಳಲ್ಲಿ ಈ ವೃತ್ತಿವಿಶೇಷವನ್ನು ಅನುಸರಿಸಲಾಗುವುದು. ಇದನ್ನು ಅಜಹಲ್ಲಕ್ಷಣಾವೃತ್ತಿ ಎಂದು ತಿಳಿಯುವುದು.

**ಅಣು-** ಅತಿಸಣ್ಣವಸ್ತು. ಅದರ ಅವಯವಗಳನ್ನು ಪೃಥಕ್ಕರಿಸಲು ಅಶಕ್ಯ. ಇದನ್ನೇ ಪರಮಾಣು ಎಂದೂ ವ್ಯವಹರಿಸುವರು. ಕಣ್ಣಿಗೆ ಕಾಣಬಹುದಾದ ಅತಿಸಣ್ಣ ಧೂಳಿನ ಕಣದ ಆರನೇ ಒಂದು ಭಾಗದಷ್ಟು ಪರಿಮಾಣವನ್ನು ಹೊಂದಿರುವ ಪದಾರ್ಥ ಎಂದು ಸಾಮಾನ್ಯ ಕಲ್ಪನೆ.

**ಅತಿದೇಶ-** ಒಂದೆಡೆ ನಿರ್ದೇಶಿಸಿದ ವಿಷಯವನ್ನು ಮತ್ತೊಂದಡೆ ಬಳಸುವ ಬಗೆಯನ್ನು ಈ ಹೆಸರಿನಿಂದ ವ್ಯವಹರಿಸುವರು.

**ಅತಿಪ್ರಸಂಗಃ -** ಕಥಾದಲ್ಲಿ (ವಾದದಲ್ಲಿ) ಅಪ್ರಾಮಾಣಿಕವಾದದ್ದನ್ನು ಒಪ್ಪಿದಲ್ಲಿ, ಪ್ರಾಮಾಣಿಕವಾದದ್ದನ್ನು ಪರಿತ್ಯಜಿಸಿದಲ್ಲಿ 'ಅತಿಪ್ರಸಂಗ' ಎನ್ನುವ ದೋಷವನ್ನು ಹೇಳುವರು. 'ನಿಯಮವನ್ನು ಮೀರುವದು' ಎಂಬ ಭಾವದಲ್ಲಿದೆ.

**ಅತಿವ್ಯಾಪ್ತಿ-** ಲಕ್ಷಣದ ದೋಷ. ಲಕ್ಷಣವು ಲಕ್ಷ್ಯವನ್ನು ಅತಿಕ್ರಮಿಸಿ ಇರುವಿಕೆ. 'ಕೊಂಬಿರುವಪ್ರಾಣಿ ಹಸು' ಎಂದು ತಿಳಿಸಿದಲ್ಲಿ ಎಮ್ಮೆಯಲ್ಲೂ ಕೊಂಬು ಇರುವುದರಿಂದ, ಈ ಲಕ್ಷಣವು ಅತಿವ್ಯಾಪ್ತ. ಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಇದೆ ಇತ್ಯಾದಿಯಾದ ವ್ಯವಹಾರಗಳನ್ನು ಕಾಣಬಹುದು.

**ಅತೀಂದ್ರಿಯ-** ಬಾಹ್ಯೇದ್ರಿಯಗಳಿಗೆ ಅಗೋಚರ.

**ಅತ್ಯಂತಾಭಾವ-** 'ಇಲ್ಲ' ಎಂಬ ಅನುಭವಕ್ಕೆ ಗೋಚರವಾಗುವ ಪದಾರ್ಥ. ವಾಯುವಿನಲ್ಲಿ ರೂಪದ ಅತ್ಯಂತಾಭಾವವು ಇದೆ. ಶುಕ್ತಿಯಲ್ಲಿ ರಜತಾತ್ಯಂತಾಭಾವವು ಇದೆ. ಇತ್ಯಾದಿ ವ್ಯವಹಾರಗಳನ್ನು ಗಮನಿಸುವುದು.

**ಅತ್ಯಂತಾಯೋಗವ್ಯವಚ್ಛೇದಕ-** ವಿಶೇಷ್ಯದಲ್ಲಿ ವಿಶೇಷಣದ ಅತ್ಯಂತಾಯೋಗ- ಅಭಾವವನ್ನು ವ್ಯವಚ್ಛೇದ- ವ್ಯಾವೃತ್ತಿಗೊಳಿಸುವುದು. ಅವಧಾರಣಾರ್ಥಕ ಏವಕಾರವು ಕ್ರಿಯಾವಾಚಕ ಪದದೊಡನೆ ಪ್ರಯುಕ್ತವಾದಾಗ ಅತ್ಯಂತಾಯೋಗವ್ಯವಚ್ಛೇದಾರ್ಥಕವಾಗಿರುವುದು. 'ಭುವಿ ಸೌಮ್ಯಪುರುಷಾಃ ಸನ್ತ್ಯೇವ' - ಭೂಮಿಯಲ್ಲಿ ಸಜ್ಜನರು ಇದ್ದೇ ಇದ್ದಾರೆ. ಭೂಮಿಯಲ್ಲಿ ಸಜ್ಜನರ ಅಭಾವವನ್ನು ನಿವೃತ್ತಿಗೊಳಿಸುವುದು. ದುಷ್ಟರು ಇರಬಹುದು, 'ಸಜ್ಜನರೂ ಇಲ್ಲವೇ ಇಲ್ಲ' ಎಂದೆನ್ನಲಾಗದು ಎಂದು ಭಾವ. (ಇದೇ ಏವಕಾರವು ವಿಶೇಷ್ಯವಾಚಕ ಮತ್ತು ವಿಶೇಷಣವಾಚಕ ಪದದೊಡನೆ ಪ್ರಯುಕ್ತವಾದಾಗ ಕ್ರಮವಾಗಿ ಅನ್ಯಯೋಗವ್ಯವಚ್ಛೇದಕಾರ್ಥಕವಾಗಿ, ಅಯೋಗ- ವ್ಯವಚ್ಛೇದಕಾರ್ಥಕವಾಗಿಯೂ ಇರುವುದು. ವಿವರಕ್ಕೆ 'ಅನ್ಯಯೋಗವ್ಯವಚ್ಛೇದಕ' ಮತ್ತು 'ಅಯೋಗವ್ಯವಚ್ಛೇದಕ'ಗಳನ್ನು ನೋಡಿ.)

**ಅರ್ಥಕ್ರಿಯಾಕಾರೀ-** ಪ್ರಯೋಜನಕರವಾದದ್ದು. ಸತ್ಯವಾದದ್ದು ವ್ಯವಹಾರಕ್ಕೆ ವಿಷಯವಾಗುವುದು ಎಂದು ಭಾವ.

**ಅರ್ಥವಾದ-** ಒಂದು ಕರ್ಮದಲ್ಲಿ ತ್ವರೆಯನ್ನು ಹೆಚ್ಚಿಸಲು, ಆಲಸ್ಯವನ್ನು ದೂರೀಕರಿಸಲು ಅಥವಾ ವಿಮುಖರಾಗಲು ಕಾರಣವಾದ ಸ್ತುತಿಸುವ ನಿಂದಿಸುವ ವಾಕ್ಯಗಳನ್ನು ಅರ್ಥವಾದ ವಾಕ್ಯ ಎಂದು ಕರೆಯುವರು.

**ಅರ್ಥಾಂತರತಾ-** ವಾದಿಯು ಸಾಧನವೊಂದರಿಂದ ತನ್ನ ಅಭೀಷ್ಟವಾದ ಸಾಧ್ಯವನ್ನು ಸಾಧಿಸುವನು, ಆದರೆ ಆ ಸಾಧನವು ವಾದಿಯ ಅಭೀಷ್ಟವನ್ನು ಸಾಧಿಸದೆ ಪಕ್ಷದಲ್ಲಿ ಪರ್ಯವಸಾನಗೊಂಡಲ್ಲಿ 'ಅರ್ಥಾನ್ತರತಾ' ಎನ್ನುವರು ಉದಾ- ಯಾಜ್ಞೀಯವಹ್ನಿಮಾನ್ ಎಂದು ಸಾಧಿಸಲು ಧೂಮಾತ್ ಎಂದು ಹೇತುವನ್ನು ಹೇಳಿದಲ್ಲಿ, ವಾದಿಯ ಅಭೀಷ್ಟವಾದ ಯಾಜ್ಞೀಯವಹ್ನಿಯನ್ನು ಸಾಧಿಸದೇ ಕೇವಲ ವಹ್ನಿಯನ್ನು ಮಾತ್ರ ಸಾಧಿಸುವುದರಿಂದಲೂ ಧೂಮವು ಪರ್ವತದಲ್ಲಿ ಇರಬಹುದು- ಪರ್ಯವಸಾನಗೊಳ್ಳುವುದು. ಇಂತಹ ವಾದದ

ಸಂದರ್ಭವನ್ನು ಅರ್ಥಾಂತರತಾ ಎಂಬ ದೋಷದಿಂದ ಯುಕ್ತವಾದದ್ದು ಎಂದು ಕರೆಯಲಾಗುವುದು.

**ಅರ್ಥಾಪತ್ತಿ-** ಅನುಮಾನವಿಶೇಷವನ್ನು ಅರ್ಥಾಪತ್ತಿ ಎಂದು ಕರೆಯುತ್ತಾರೆ. ಕೆಲವು ಶಾಸ್ತ್ರಕಾರರು ಇದನ್ನು ಪೃಥಕ್‌ಪ್ರಮಾಣ ಎಂದು ಪರಿಗಣಿಸುವರು. 'ಅರ್ಥತಃ ಪ್ರಾಪ್ತಿಯನ್ನು' ಅರ್ಥಾಪತ್ತಿ ಎಂದು ನಿರ್ವಚಿಸಿರುವರು. ಕೆಳಭಾಗದಲ್ಲಿ ನದಿಯಲ್ಲಿ ಪ್ರವಾಹವು ಇದೆ, ಆದರೆ ಮೇಲ್ಭಾಗದಲ್ಲಿ ಮಳೆಯು ಬದ್ದಿಲ್ಲ, ಆಗ 'ಅಣೆಕಟ್ಟಿನಿಂದ ನೀರನ್ನು ಬಿಡಲಾಗಿದೆ' ಎಂದು ನಿಶ್ಚಯಿಸುವರು, ಇದನ್ನು ಅರ್ಥತಃ ಪ್ರಾಪ್ತವಾದ ಅರ್ಥ ಎಂದು ತಿಳಿಯುವುದು.

**ಅಧಿಕರಣ-** ವಸ್ತುವಿಗೆ ಆಶ್ರಯೀಭೂತವಾದದ್ದು. ಸಪ್ತಮೀವಿಭಕ್ತಿಯಿಂದ ಸೂಚಿತವಾಗುವುದು. 'ಭೂತಲದಲ್ಲಿ' ಘಟವಿದೆ ಇತ್ಯಾದಿವ್ಯವಹಾರಗಳನ್ನು ಗಮನಿಸುವುದು. ಅವಾಂತರಪ್ರಕರಣ ಎಂಬ ಅರ್ಥದಲ್ಲೂ ಪ್ರಯೋಗವಿದೆ. ಉದಾ- ಆಕಾಶಾಧಿಕರಣ ಇತ್ಯಾದಿಗಳು. ಅನುಮಾನದಲ್ಲಿ ಪ್ರಥಮಾವಿಭಕ್ತ್ಯಂತವಾಗಿಯೇ ಅಧಿಕರಣವನ್ನು (ಪಕ್ಷವನ್ನು) ನಿರ್ದೇಶಿಸುವರು. ಉದಾ. ಪರ್ವತಃ ವಹ್ನಿಮಾನ್, ಇತ್ಯಾದಿ.

**ಅಧಿಕಾರೀ-** ಶಾಸ್ತ್ರದ ಅಧ್ಯಯನದಿಂದ ಪ್ರಾಪ್ತವಾಗುವ ಫಲವನ್ನು ಹೊಂದಲು ಯೋಗ್ಯನಾದವನು, ಅಲ್ಲಿ ತಿಳಿಸಲಾದ ನಿಯಮಗಳಿಗೆ ಬದ್ಧನಾದವನನ್ನು 'ಅಧಿಕಾರಿ' ಎಂದು ತಿಳಿಯುವುದು.

**ಅಧಿಕೋಕ್ತಿ-** ಬೋಧಿಸಲು ಅಗತ್ಯವಾದವುಗಳಿಗಿಂತಲೂ ಹೆಚ್ಚಿನ ಪದಗಳನ್ನೋ ವಾಕ್ಯವನ್ನೋ ಬಳಸಿದಲ್ಲಿ ಅಧಿಕ್ಯ ಅಥವಾ ಅಧಿಕೋಕ್ತಿ ಎಂದು ತಿಳಿಯುವುದು.

**ಅಧಿಷ್ಠಾನ-** ಪದಾರ್ಥಕ್ಕೆ ಆಶ್ರಯವಾದದ್ದನ್ನು ಅಧಿಷ್ಠಾನ ಎಂದು ತಿಳಿಯುವುದು. 'ಇದಂ ರಜತಮ್' ಎಂಬ ಭ್ರಮಾಜ್ಞಾನದಲ್ಲಿ 'ಇದಂ' ಶಬ್ದದಿಂದ ನಿರ್ದಿಷ್ಟವಾದ ಶುಕ್ತಿಯನ್ನು ಭ್ರಮೆಗೆ ಅಧಿಷ್ಠಾನ ಎಂದು ಕರೆಯುತ್ತಾರೆ.

**ಅಧ್ಯವಸಾಯ-** ನಿಶ್ಚಯ

**ಅಧ್ಯಸ್ಥ-** ಆರೋಪಿತ- ಭ್ರಾಂತಿ ಜ್ಞಾನದಲ್ಲಿ ಆರೋಪಿತವಾದ ಪದಾರ್ಥವನ್ನು ಅಧ್ಯಸ್ತ ಎಂದು ತಿಳಿಯುವುದು. 'ಶುಕ್ತಿಯಲ್ಲಿ ರಜತವು ಅಧ್ಯಸ್ತವಾಗಿದೆ ಅಥವಾ ಆರೋಪಿತವಾಗಿದೆ' ಎನ್ನುವರು.

ಅನುವ್ಯವಸಾಯ- ಅರಿವಿನ ಅರಿವನ್ನು ಹೀಗೆ ಕರೆಯುತ್ತಾರೆ. ಉದಾ- 'ಘಟಜ್ಞಾನವಾನ್ ಅಹಮ್' 'ಘಟಂ ಜಾನಾಮಿ' 'ಸುಖಮನುಭವಾಮಿ' ಇತ್ಯಾದಿ ಜ್ಞಾನವಿಶೇಷಗಳನ್ನು ಅನುವ್ಯವಸಾಯ ಎಂದು ತಿಳಿಯುವುದು.

**ಅನುಮಿತಿ-** ಅನುಮಾನದಿಂದ ಪ್ರಾಪ್ತವಾಗುವ ಅರಿವನ್ನು 'ಅನುಮಿತಿ' ಎನ್ನುವರು. ಈ ಅನುಮಿತಿಯು ಹೇತು ಮತ್ತು ಸಾಧ್ಯಗಳ ಸಾಹಚರ್ಯದ ಅರಿವು (ವ್ಯಾಪ್ತಿಜ್ಞಾನ), ಹೇತುವಿನ

ಅರಿವು, ಹೇತುವು ಪಕ್ಷದಲ್ಲಿ ಇದೆ ಎಂಬ ಅರಿವು ಈ ಮುಂತಾವುಗಳ ಅರಿವಿದ್ದಲ್ಲಿ ಮಾತ್ರ ಪ್ರಾಪ್ತವಾಗುವುದು.

**ಅನ್ಯತರವ್ಯಭಿಚಾರಿ**- ನೋಡಿ ಅನೈಕಾಂತಿಕ.

**ಅನ್ಯಥಾಸಿದ್ಧ**- ವಾದಿಯು ಕಾರ್ಯ ಒಂದಕ್ಕೆ ಕಾರಣವಿದು ಎಂದು ಹೇಳುವನು, ಆದರೆ ಕಾರ್ಯವು ಉಕ್ತವಾದ ಕಾರಣದಿಂದಲೇ ಸಿದ್ಧವಾಗದಿದ್ದಲ್ಲಿ ಅನ್ಯಥಾಸಿದ್ಧ ಎನ್ನುವರು. ಉದಾ- ಘಟಕ್ಕೆ ಕತ್ತೆಯನ್ನು ಕಾರಣ ಎನ್ನುವುದು. ಮಣ್ಣನ್ನು ತರಲು ಕತ್ತೆಯು ಕಾರಣವಾಗಿರಬಹುದು, ಆದರೆ ಕತ್ತೆಯಿಂದಲೇ ಮೃದಾನಯನವು ಆಗಬೇಕಿಂದಿಲ್ಲ, ಬೇರೇ ಉಪಾಯಗಳಿಂದಲೂ ಮೃದಾನಯನದ ಅವಕಾಶಗಳು ಇವೆ. ಮಣ್ಣಿಲ್ಲದೇ ಘಟವು ಹೇಗೆ ಸಿದ್ಧವೇ ಆಗಲಾರದೋ ಹಾಗೆ ಕತ್ತೆಯು ಇಲ್ಲದೇ ಮೃದಾನಯನವೇ ಇಲ್ಲ ಎಂದಿಲ್ಲ. ಹಾಗಾಗಿ 'ಘಟಕ್ಕೆ ರಾಸಭವು ಕಾರಣ' ಎನ್ನುವುದು 'ಅನ್ಯಥಾಸಿದ್ಧ ' ಎಂದು ಭಾವ. ಹಾಗೆಯೇ ಕುಲಾಲನ ತಂದೆಯು ಘಟಕ್ಕೆ ಅನ್ಯಥಾಸಿದ್ಧ.

**ಅನ್ಯಥಾಖ್ಯಾತಿ**- ಅಯಥಾರ್ಥಾನುಭವ. ವಸ್ತುವಿನ ನಿಜಸ್ವರೂಪದ ವಿರುದ್ಧವಾಗಿ ಭಾನವಾಗುವಿಕೆ. ಶುಕ್ತಿಯು ರಜತಾತ್ಮನಾ ಕಾಣುವುದು, ಶಂಖವು ಹಳದಿಯಾಗಿ ಕಾಣುವುದು.

**ಅನನ್ಯಥಾಸಿದ್ಧ**- ಕಾರ್ಯ ಒಂದರ ನಿಯತ ಪೂರ್ವವರ್ತಿಯಾದ ಪದಾರ್ಥ.'ಈ ಕಾರ್ಯವನ್ನು ಉದ್ದೇಶಿಸಿ ಇದು ಅನನ್ಯಥಾಸಿದ್ಧವಾಗಿದೆ' ಎನ್ನುವರು. ಉದಾ. ಕುಲಾಲನು ಘಟಕ್ಕೆ ಅನನ್ಯಥಾಸಿದ್ಧ.

**ಅನಭ್ಯಾಸದಶಾ**- ಹೊಸಪರಿಯ ಅವಸ್ಥೆ.

**ಅನವಸ್ಥಾ**- ಬೀಜದ ಪ್ರಾಪ್ತಿಗೆ ವೃಕ್ಷದ ಅಗತ್ಯವಿದೆ, ವೃಕ್ಷದ ಉತ್ಪತ್ತಿಗೆ ಬೀಜದ ಅವಶ್ಯಕತೆಯು ಇದೆ. ಹಾಗಾಗಿ ವೃಕ್ಷಗಳ ಪರಂಪರೆಯನ್ನು ಹಾಗೆಯೇ ಬೀಜಗಳ ಪರಂಪರೆಯನ್ನು ಕಲ್ಪಿಸಲಾಗುವುದು.

**ಅವಿನಾಭಾವ**- ಬಿಟ್ಟಿರದಿರುವಿಕೆ. ಧೂಮವು ವಹ್ನಿಯನ್ನು ಬಿಟ್ಟಿರಲಾರದು. ಧೂಮ ಮತ್ತು ವಹ್ನಿಯ ಸಂಬಂಧವನ್ನು ಅವಿನಾಭಾವಸಂಬಂಧ ಎನ್ನುವರು.

**ಆಪ್ತ**- ವಿವಕ್ಷಿತ ತತ್ವಜ್ಞಾನ ಮತ್ತು ಇಂದ್ರಿಯ ಪಾಟವವನ್ನು ಹೊಂದಿರುವವನು, ಮೋಸಮಾಡುವ ಭಾವನೆಯು ಇಲ್ಲದಿರುವುದು ಈ ಮುಂತಾದ ಗುಣಗಳನ್ನು ಹೊಂದಿದವನು.

**ಅನಾಪ್ತ**- ಆಪ್ತನ ವಿರುದ್ಧಗುಣಗಳನ್ನು ಹೊಂದಿದವ.

**ಅನಿರ್ವಚನೀಯ**- ಸತ್ ಎಂದು, ಅಸತ್ ಎಂದು ನಿರ್ದೇಶಿಸಲು ಆಗದೇ ಇರುವುದು. ಇದು ಅದ್ವೈತವಾದಿಗಳ ಕಲ್ಪನೆ.

**ಅನಿಷ್ಟಪ್ರಸಂಗ-** ಪ್ರಮಾಣಪ್ರಮಿತವಾದ ವಸ್ತುವನ್ನು ಒಪ್ಪದಿರುವ ಅಥವಾ ಅಪ್ರಮಿತವಾದ ವಸ್ತುವನ್ನು ಒಪ್ಪುವ ಸಂದರ್ಭವನ್ನು 'ಅನಿಷ್ಟಪ್ರಸಂಗ' ಎನ್ನುವರು.

**ಸ್ವಾರ್ಥೇತರಾನ್ವಯಾಭಿಧಾನ-** ಶಬ್ದಗಳೆಲ್ಲವೂ ತನ್ನ ವಿಷಯವನ್ನು ಮತ್ತು ಜೊತೆಯಲ್ಲಿ ಯೋಗ್ಯವಾದ ಇನ್ನೊಂದು ಪದಾರ್ಥದೊಡನೆಯಿರುವ ತನ್ನ ಸಂಬಂಧವನ್ನು ತಿಳಿಸುವುದು. ಉದಾ- 'ಘಟಂ ಆನಯ' ಎನ್ನುವಲ್ಲಿ 'ಘಟಂ' ಎನ್ನುವ ಶಬ್ದವು ಘಟತ್ವವನ್ನು ಹೊಂದಿದ ಪದಾರ್ಥವನ್ನು ಮತ್ತು ಈ ಪದಾರ್ಥಕ್ಕೆ ಮುಂದಿನ ಯೋಗ್ಯವಾದ ಶಬ್ದದೊಡನೆ ಅಂದರೆ 'ಆನಯ' ಎನ್ನುವ ಶಬ್ದದೊಡನೆ ಇರುವ ಸಂಬಂಧವನ್ನೂ , ಅಂದರೆ ಆನಯನಕ್ರಿಯೆಗೆ ಕರ್ಮವಾಗಿದೆ ಎನ್ನುವದನ್ನೂ ತಿಳಿಸುತ್ತದೆ. ಹಾಗೆಯೇ 'ಆನಯ' ಎನ್ನುವ ಶಬ್ದವು ಆನಯನಕ್ರಿಯೆಯನ್ನು , ಈ ಕ್ರಿಯೆಯು ಯಾವ ಪದಾರ್ಥಕ್ಕೆ ಸಂಬಂಧಿಸಿದೆ ಎನ್ನುವದನ್ನೂ ತಿಳಿಸುತ್ತದೆ.

**ಅನ್ವಿತಾಭಿಧಾನ-** ಶಬ್ದವು ಯೋಗ್ಯವಾದದ್ದನ್ನು ಬೋಧಿಸುವುದು.

**ಅನುಕೂಲತರ್ಕ-** ಉಕ್ತವಾದ ಅನುಮಾನಕ್ಕೆ ಅನುಕೂಲವಾದ ತರ್ಕವನ್ನೇ ಅನುಕೂಲತರ್ಕ ಎನ್ನುವರು. 'ಸಾಧ್ಯವು ಇಲ್ಲ ಎಂದಾದಲ್ಲಿ ಕಾಣುವ ಹೇತುವೂ ಇಲ್ಲದಾಗಲಿ' ಎಂದು ಆಪಾದಿಸುವದು ಅನುಕೂಲ ತರ್ಕದ ಸ್ವರೂಪ. 'ಪರ್ವತಃ ವಹ್ನಿಮಾನ್ ಧೂಮಾತ್' ಎನ್ನುವ ಅನುಮಾನದಲ್ಲಿ 'ಧೂಮವು ಪರ್ವತದಲ್ಲಿ ಇರಲಿ, ವಹ್ನಿಯು ಇಲ್ಲದಿರಲಿ' ಎಂದು ಹೇತುವು ಅಪ್ರಯೋಜಕ ಎಂಬ ಶಂಕೆಯು ಪ್ರಾಪ್ತವಾದಲ್ಲಿ, 'ಒಂದು ವೇಳೆ ವಹ್ನಿಯು ಇಲ್ಲ ಎಂದಾದಲ್ಲಿ, ವಹ್ನಿಯ ಕಾರ್ಯವಾದ ಕಣ್ಣಿಗೆ ಗೋಚರಿಸುತ್ತಿರುವ ಧೂಮವೇ ಇಲ್ಲದಾಗಬೇಕಾದೀತು' ಎಂದು ಪ್ರತಿಯಾಗಿ ಆರೋಪಿಸುವದನ್ನು ಅನುಕೂಲತರ್ಕಕ್ಕೆ ಉದಾಹರಣೆಯನ್ನಾಗಿ ಶಾಸ್ತ್ರದಲ್ಲಿ ತಿಳಿಸಿರುತ್ತಾರೆ.

**ಅನುಕ್ತಸಮುಚ್ಚಾಯಕ-** ಕಂಠತಃ ತಿಳಿಸದ ಕೆಲವು ವಸ್ತುಗಳನ್ನು ಸೂಚನೆಯಿಂದ ಸಂಗ್ರಹಿಸಲಾಗುವುದು, ಇಂತಹವುಗಳನ್ನು 'ಅನುಕ್ತಸಮುಚ್ಚಯ' ಎನ್ನುವರು. ಉದಾ. 'ಬೆಕ್ಕಿನಿಂದ ಹಾಲನ್ನು ಕಾಪಾಡು' ಎಂದು ಹಿರಿಯನು ಆದೇಶಿಸಿದಾಗ, ಇಲ್ಲಿ ಬೆಕ್ಕು ಎನ್ನುವ ಶಬ್ದವು ಕೇವಲ ಬೆಕ್ಕನ್ನು ಮಾತ್ರ ಸೂಚಿಸದೇ ಹಾಲನ್ನು ಅಪಹರಿಸುವ ಅನುಕ್ತವಾದ ನಾಯಿ ಮುಂತಾದ ಪ್ರಾಣಿಗಳನ್ನು ಸಂಗ್ರಹಿಸಲಾಗುವುದು. ಪ್ರಕೃತದಲ್ಲಿ 'ಬೆಕ್ಕು' ಎನ್ನುವ ಶಬ್ದವನ್ನು 'ಅನುಕ್ತಸಮುಚ್ಚಾಯಕ' ಎನ್ನುವರು.

**ಅನುಕ್ತಿ-** ಅಗತ್ಯವಾದದ್ದನ್ನು ತಿಳಿಸಲು ಅವಶ್ಯವಾದಷ್ಟು ಶಬ್ದಗಳನ್ನು ಹೇಳದ ವ್ಯಕ್ತಿಯು 'ಅನುಕ್ತಿ' ಎಂಬ ದೋಷಕ್ಕೆ ಗುರಿಯಾಗುವನು.

**ಅನುಕ್ತೋಪಾಲಂಭ-** ವಾದಿ-ಪ್ರತಿವಾದಿಗಳು ಹೇಳದ ಸಂಗತಿಯನ್ನು ವಾದಿಯೋ ಪ್ರತಿವಾದಿಯೋ 'ನಿನ್ನಿಂದ ಹೀಗೆ ಉಪಪಾದಿಸಲಾಗಿದೆ' ಎಂದು ಆರೋಪಿಸಿದಲ್ಲಿ 'ಅನುಕ್ತೋಪಾಲಂಭ' ಎಂಬ ದೋಷವು ಪ್ರಾಪ್ತವಾಗುವುದು.

**ಅನುಪಲಂಭಮಾನಮೂಲ-** ಪ್ರತಿಪಾದಿತ ವಿಷಯವು ಪ್ರಮಾಣಪ್ರಮಿತವಾಗದ ಸಂದರ್ಭದಲ್ಲಿ ಈ ದೋಷವನ್ನು ತಿಳಿಸಲಾಗುವುದು.

**ಅನುಪ್ರಮಾಣ-** ಅರಿವಿಗೆ ಸಲಕರಣೆಗಳಾದ ಪ್ರತ್ಯಕ್ಷ, ಅನುಮಾನ, ಆಗಮುಗಳನ್ನು ಅನುಪ್ರಮಾಣ ಎಂದು ತಿಳಿಯುವುದು.

**ಅನುಮಾ-** ಅನುಮಾನ- ಪ್ರತ್ಯಕ್ಷ ಮತ್ತು ಆಗಮುಗಳನ್ನು ಅನುಸರಿಸಿ ಅರಿವಿಗೆ ಕಾರಣವಾಗುವದನ್ನು ಅನುಮಾ ಎನ್ನುವರು. ದೋಷರಹಿತವಾದ ಲಿಂಗವನ್ನೂ ,ನಿಯಮೇನ ಸಹಚರಿತವಾದ ವಸ್ತುಗಳಲ್ಲಿ ಒಂದರ ಅಸ್ತಿತ್ವದಿಂದ ಮತ್ತೊಂದನ್ನು ಊಹಿಸುವುದು, ವ್ಯಾಪ್ಯವಾದ (ಅಲ್ಪದೇಶದಲ್ಲಿರುವ) ವಸ್ತುವು ವ್ಯಾಪಕವಾದ (ಅಧಿಕದೇಶದಲ್ಲಿರುವ) ವಸ್ತುವಿನ ಊಹೆಗೆ ಕಾರಣವಾಗುವದನ್ನು ಅನುಮಾ ಎನ್ನುವರು. ಉದಾ. ಧೂಮದ ಅರಿವು ವಹ್ನಿಯ ಅರಿವಿಗೆ ಕಾರಣವಾಗುವುದು.

**ಅನುಮೇಯ-** ಅನುಮಾನದಿಂದ ಊಹಿತವಾಗುವ ಸಾಧ್ಯವನ್ನು ಅನುಮೇಯ ಎಂದು ತಿಳಿಯುವುದು.

**ಅನುವೃತ್ತಿ-** ವಾಕ್ಯಾಂತರದಲ್ಲಿ ಹೇಳಿದ ಶಬ್ದವನ್ನು ಹಿಂದಿನ-ಮುಂದಿನ ವಾಕ್ಯಗಳಲ್ಲಿ ಅನ್ವಯಿಸಿಕೊಂಡಲ್ಲಿ ಅನುವೃತ್ತಿ ಎಂದು ತಿಳಿಯುವುದು.

**ಅನೇಕಜೀವವಾದ-** ನೋಡಿ 'ಏಕಜೀವವಾದ'.

ಅನೈಕಾಂತಿಕ- 'ವ್ಯಭಿಚಾರ' ಇದರ ಪರ್ಯಾಯಶಬ್ದ. ಈ ಅನೈಕಾಂತಿಕವು ನಾಲ್ಕುವಿಧದಲ್ಲಿದೆ. ಸಾಧಾರಣಾನೈಕಾಂತಿಕ, ವಿರುದ್ಧ, ಅಸಾಧಾರಣಾನೈಕಾಂತಿಕ, ಅನ್ಯತರಾನೈಕಾಂತಿಕ ಎಂದು. ಹೇತುವಿಗೆ ಸಾಧ್ಯದೊಡನೆ ಮತ್ತು ಸಾಧ್ಯಾಭಾವದೊಡನೆಯೂ ಸಂಬಂಧವು ಕಂಡಲ್ಲಿ ಸಾಧಾರಣಾನೈಕಾಂತಿಕ ಎಂದು ತಿಳಿಯುವುದು. 'ಪರ್ವತಃ ವಹ್ನಿಮಾನ್ ದ್ರವ್ಯತ್ವಾತ್' ಎನ್ನುವುದು ಉದಾಹರಣೆ. ಹೇತುವು ಸಾಧ್ಯದ ಅಭಾವವಿರುವಲ್ಲೇ ಕಂಡಲ್ಲಿ ವಿರುದ್ಧ ಎಂದು ಹೇಳುವರು. ಹ್ರದಃ ವಹ್ನಿಮಾನ್ ಜಲಾತ್' ಎನ್ನುವುದು ಉದಾಹರಣ. ಸಾಧ್ಯದೊಡನೆಯೂ ಸಾಧ್ಯಾಭಾವದೊಡನೆಯೂ ಸಂಬಂಧವಿಲ್ಲದಿರುವುದು ಅಸಾಧಾರಣಾನೈಕಾಂತಿಕ ಎಂದು ತಿಳಿಯುವುದು. '**ಜೀವಚ್ಛರೀರಂ ಸಾತ್ಮಕಮ್‌ಚೇತನತ್ವಾತ್**' ಎನ್ನುವುದು ಉದಾಹರಣ. ವಾದಿ ಅಥವಾ ಪ್ರತಿವಾದಿಯ ಯಾರೊಬ್ಬರ ಅಭಿಮತದಂತೆ ಹೇತುವು ವ್ಯಭಿಚರಿತವಾದರೆ ಅನ್ಯತರಾನೈಕಾಂತಿಕ. ಉದಾ- 'ಘಟಃ ಅನಿತ್ಯಃ ಸಾವಯವತ್ವಾತ್' ಎಂದು ನೈಯಾಯಿಕರು ಅನುಮಾನವನ್ನು ಪ್ರಯೋಗಿಸಿದಲ್ಲಿ ಜೈನರು ಆತ್ಮನಲ್ಲಿ ಹೇತುವು ವ್ಯಭಿಚರಿತ ಎನ್ನುವರು. ಜೈನರ

ಮತದಲ್ಲಿ ಆತ್ಮನು ಸಾವಯವ ಆದರೂ ನಿತ್ಯ ನೈಯಾಯಿಕರು ಸಾವಯವವಾದ ಯಾವ ವಸ್ತುಗಳನ್ನೂ ನಿತ್ಯ ಎಂದು ಒಪ್ಪಿಲ್ಲ. ಹಾಗಾಗಿ ಅನ್ಯತರಾನೈಕಾಂತಿಕ ಎಂದು ತಿಳಿಯುವುದು.

**ಅಂತಃಕರಣ–** ಮನಇಂದ್ರಿಯ.

**ಅನುಯೋಗಿ–** ಪ್ರತಿಯೋಗಿ ಅನುಯೋಗಿ ಈ ಎರಡು ಶಬ್ದಗಳಿಗೆ ಅವಿನಾಭಾವ ಸಂಬಂಧವಿದೆ. ಅಧಿಕರಣ ಎಂಬ ತಿರುಳಿನಲ್ಲಿ ಅನುಯೋಗಿ ಎಂಬ ಶಬ್ದವು ಇದೆ. ಪ್ರತಿಯೋಗಿ ಎನ್ನುವದು ವಿರೋಧಿ, ಅವಧಿ ಎಂಬ ತಿರುಳಿನಲ್ಲಿದೆ. ಅಭಾವ ಉಪಮಾನ ಮುಂತದ ಸಾಪೇಕ್ಷ ಪದಾರ್ಥಗಳ ಅರಿವಿನಲ್ಲಿ ಇದರ ಪ್ರಯೋಜನ. ಘಟದ ಅಭಾವವು ಭೂಮಿಯಲ್ಲಿದೆ. ಭೂಮಿಯು ಅಭಾವಕ್ಕೆ ಅನುಯೋಗಿ, ಘಟವು ಪ್ರತಿಯೋಗಿ. ಹುಲಿಯ ಮರಿಯು ಬೆಕ್ಕಿನಂತಿದೆ. ಈ ಉಪಮಾನದಲ್ಲಿ ಹುಲಿಯ ಮರಿಯು ಅನುಯೋಗಿ, ಬೆಕ್ಕು ಪ್ರತಿಯೋಗಿ. ಘಟದಿಂದ ಪಟವು ಭಿನ್ನವಾಗಿದೆ. ಇಲ್ಲಿ ಪಟವು ಅನುಯೋಗಿ, ಘಟವು ಪ್ರತಿಯೋಗಿ.

**ಅನ್ಯತರಾನೈಕಾಂತಿಕ–** ನೋಡಿ ಅನೈಕಾಂತಿಕ.

**ಅನ್ಯಯೋಗವ್ಯವಚ್ಛೇದ–** ವಿಶೇಷ್ಯದಿಂದ ಅನ್ಯ - ಭಿನ್ನವಾದ ವಸ್ತುಗಳಲ್ಲಿ, ಪ್ರಕೃತೋಕ್ತವಾದ ವಿಶೇಷಣದ ಯೋಗ- ಸಂಬಂಧವನ್ನು ವ್ಯವಚ್ಛೇದ- ವ್ಯಾವೃತ್ತಿಗೊಳಿಸುವುದು. ಅವಧಾರಣಾರ್ಥಕವಾದ ಏವಕಾರವು ವಿಶೇಷ್ಯವಾಚಕ ಪದದೊಡನೆ ಪ್ರಯುಕ್ತವಾದಾಗ ಅನ್ಯಯೋಗ- ವ್ಯವಚ್ಛೇದಾರ್ಥಕವಾಗಿರುವುದು. ಉದಾ- 'ಜೀವಾ ಏವ ತು ದುಃಖಿನಃ' - ಜೀವರೇ ದುಃಖಿಗಳು. ವಿಶೇಷ್ಯಭೂತರಾದ ಜೀವರಿಂದ ಭಿನ್ನರಾದ ಜಡ-ಈಶ್ವರರಲ್ಲಿ ಪ್ರಸಕ್ತವಿಶೇಷಣವಾದ ದುಃಖವು ಇಲ್ಲ ಎಂದು ಭಾವ. (ಇದೇ ಏವಕಾರವು ವಿಶೇಷಣವಾಚಕ ಮತ್ತು ಕ್ರಿಯಾವಾಚಕ ಪದದೊಡನೆ ಪ್ರಯುಕ್ತವಾದಾಗ ಕ್ರಮವಾಗಿ ಅಯೋಗವ್ಯವಚ್ಛೇದಕಾರ್ಥಕವಾಗಿಯೂ ಅತ್ಯಂತಾಯೋಗವ್ಯವಚ್ಛೇದಕಾರ್ಥಕವಾಗಿಯೂ ಇರುವುದು. ವಿವರಕ್ಕೆ 'ಅಯೋಗವ್ಯವಚ್ಛೇದಕ' ಮತ್ತು 'ಅತ್ಯಂತಾಯೋಗವ್ಯವಚ್ಛೇದಕ'ಗಳನ್ನು ನೋಡಿ.)

**ಅನ್ವಯವ್ಯಾಪ್ತಿ–** ಹೇತು ಸಾಧ್ಯಗಳಿಗೆ ವ್ಯಾಪ್ತಿಯನ್ನು ತಿಳಿಸುವುದು. ಹೆಚ್ಚಿನ ವಿವರಕ್ಕೆ 'ದೃಷ್ಟಾಂತ' ನೋಡಿ.

**ಅನ್ಯೋನ್ಯಾಭಾವ–** ಭೇದ.

**ಅನ್ಯೋನ್ಯಾಶ್ರಯ–** ವಸ್ತು ಒಂದರ ಉತ್ಪತ್ತಿ ಅಥವಾ ಜ್ಞಾನಗಳಿಗೆ ಕಾರಣವಾದ ವಸ್ತುವಿನ ಉತ್ಪತ್ತಿ-ಜ್ಞಾನಗಳಿಗೆ, ಆ ಉತ್ಪನ್ನವಾದ ವಸ್ತುವೇ ಕಾರಣ ಎಂದಾದಲ್ಲಿ ಅನ್ಯೋನ್ಯಾಶ್ರಯ ಎನ್ನುವರು. ಉದಾ. ಮರದ ಉತ್ಪತ್ತಿಗೆ ಕಾರಣವಾದ ಬೀಜಕ್ಕೆ ಮರವೇ ಕಾರಣ ಎಂದಾದಲ್ಲಿ.

**ಅನ್ವಯ–** ವಸ್ತು ಒಂದನ್ನು ಅನುಸರಿಸಿ ಮತ್ತೊಂದು ವಸ್ತುವಿನ ಇರುವಿಕೆ. ಉದಾ. ನೂಲನ್ನು ಅನುಸರಿಸಿ ಬಟ್ಟೆಯು ಇರುವುದು.

**ಅನ್ವಯವ್ಯಭಿಚಾರ-** ಕಾರಣವೆಂದು ಅಭಿಮತವಾದದ್ದು ಇದ್ದು, ಕಾರ್ಯವು ಇಲ್ಲದಿದ್ದಲ್ಲಿ ಅನ್ವಯವ್ಯಭಿಚಾರ. ಉದಾ. ಮಂಗಲಾಚರಣೆಯು ಕಂಡಿದ್ದರೂ ಗ್ರಂಥದ ಪರಿಸಮಾಪ್ತಿಯು ಕಾಣದಿದ್ದಲ್ಲಿ.

**ಅಪವಾದ-** ಸಹಜವಾದ ಶಕ್ತಿಯು ಕುಂಠಿತವಾದಲ್ಲಿ ಅಪವಾದ ಎನ್ನುವರು. ಸೂರ್ಯನು ಬೆಳಗುವುದು ಸಹಜ. ಪೂರ್ಣಗ್ರಹಣಕಾಲದಲ್ಲಿ ಬೆಳಗದಿರುವುದು ಅಪವಾದ.

**ಅಪರಿಚ್ಛಿನ್ನ-** ಪರಿಚ್ಛಿನ್ನ- ಎಲ್ಲೆಯನ್ನು ಹೊಂದಿರುವುದು, ಅದಿಲ್ಲದಿರುವುದು ಅಪರಿಚ್ಛಿನ್ನ. ಭಗವಂತನು ಅಪರಿಚ್ಛಿನ್ನ. ಘಟವು ಪರಿಚ್ಛಿನ್ನ.

**ಅಪ್ರತಿಸಂಖ್ಯಾನಿರೋಧ-** ನೋಡಿ ಪ್ರತಿಸಂಖ್ಯಾನಿರೋಧ.

**ಅಪೂರ್ವತಾ-** ಇತರಪ್ರಮಾಣಗಳಿಂದ ಉಪಲಬ್ಧವಾಗದ ವಿಷಯದ ಪ್ರತಿಪಾದಿಸುವಿಕೆಯನ್ನು ಅಪೂರ್ವತಾ ಎಂದು ತಿಳಿಯುವುದು.

**ಅಪ್ರಯೋಜಕತ್ವಶಂಕಾ-** ಹೇತುವು ಇರಲಿ, ಸಾಧ್ಯವು ಇಲ್ಲದಿರಲಿ ಎಂದು ಆಶಂಕಿಸುವದನ್ನು, ಅಪ್ರಯೋಜಕತಾ ಶಂಕಾ ಎನ್ನುವರು.

**ಅಪ್ರಸಕ್ತಪ್ರತಿಷೇಧ-** ವಾದಿಪ್ರತಿವಾದಿಗಳು ಉಪಸ್ಥಾಪಿಸದ ವಿಷಯವನ್ನು ವಾದಿಯೋ ಪ್ರತಿವಾದಿಯೋ ನಿಷೇಧಿಸಿದಲ್ಲಿ ಈ ದೋಷವನ್ನು ಹೊಂದುವರು.

**ಅಬುಭುತ್ಸಿತಗ್ರಾಹ್ಯ-** ಇಚ್ಛೆಯಿಲ್ಲದಿದ್ದರೂ ಅವಗಾಹನೆಗೆ ಪ್ರಾಪ್ತವಾಗುವುದನ್ನು ಅಬುಭುತ್ಸಿತಗ್ರಾಹ್ಯ ಎನ್ನುವರು. ಉದಾ. ಸುಖ, ದುಃಖ , ಜ್ಞಾನ ಮುಂತಾದ ಆಂತರಿಕ ಪದಾರ್ಥಗಳು ಅಬುಭುತ್ಸಿತಗ್ರಾಹ್ಯಗಳು ಎಂದು ತಿಳಿಯುವುದು.

**ಅಭಿಯುಕ್ತರು-** ಶಾಸ್ತ್ರಸಂಪನ್ನರು.

**ಅಭಿಸನ್ಧಿ-** ಅಭಿಪ್ರಾಯವಿಶೇಷ.

**ಅಭ್ಯಾಸ-** ಪುನರಾವರ್ತನ.

**ಅಭ್ಯುಪಗಮವಾದ-** ಅಭ್ಯುಪೇತ್ಯವಾದ- ತನ್ನ ಅಭಿಮತಿಗೆ ವಿರುದ್ಧ ವಾಗಿದ್ದರೂ ಪರವಾದಿಯನ್ನು ಮಣಿಸಲು, ಪರವಾದಿಯ ಅಭಿಮತಿಯನ್ನು ಒಪ್ಪಿ, ವಾದಿಸುವ ಪ್ರಕಾರವನ್ನು ಅಭ್ಯುಪಗಮವಾದ ಎನ್ನುವರು.

**ಅಮೂರ್ತ-** ಮೂರ್ತದಿಂದ ವಿಭಿನ್ನವಾದುದು. ಕ್ರಿಯಾರಹಿತದ್ರವ್ಯ. ಶರೀರವನ್ನು ಹೊಂದಿರದ ಪದಾರ್ಥ. ಆಕಾಶ, ಗುಣ ಮುಂತದವು ಅಮೂರ್ತಗಳು.

**ಅಯೋಗವ್ಯವಚ್ಛೇದಕ-** ವಿಶೇಷ್ಯದಲ್ಲಿ ಪ್ರಸಕ್ತವಾದ ಅಯೋಗ- ವಿಶೇಷಣದ ಅಭಾವವನ್ನು ವ್ಯವಚ್ಛೇದಕ- ವ್ಯಾವೃತ್ತಿಗೊಳಿಸುವುದು. ಅವಧಾರಣಾರ್ಥಕ ವಾದ ಏವಕಾರವು ವಿಶೇಷಣವಾಚಕ

ಪದದೊಡನೆ ಪ್ರಯುಕ್ತವಾದಾಗ ಅಯೋಗವ್ಯವಚ್ಛೇದಾರ್ಥಕವಾಗಿರುವುದು. ಉದಾ- 'ಹುಟ್ಟಿದವರೆಲ್ಲರಿಗೂ ಸಾವು ದಿಟ' (ಇದೇ ಏವಕಾರವು ವಿಶೇಷ್ಯವಾಚಕ ಮತ್ತು ಕ್ರಿಯಾವಾಚಕ ಪದದೊಡನೆ ಪ್ರಯುಕ್ತವಾದಾಗ ಕ್ರಮವಾಗಿ ಅನ್ಯಯೋಗವ್ಯವಚ್ಛೇದಕಾರ್ಥಕವಾಗಿಯೂ ಅತ್ಯಂತಾಯೋಗವ್ಯವಚ್ಛೇದಕಾರ್ಥಕವಾಗಿಯೂ ಇರುವುದು. ವಿವರಕ್ಕೆ 'ಅನ್ಯಯೋಗ-ವ್ಯವಚ್ಛೇದಕ' ಮತ್ತು 'ಅತ್ಯಂತಾಯೋಗವ್ಯವಚ್ಛೇದಕ'ಗಳನ್ನು ನೋಡಿ.)

**ಅವಧಾರಣ-** ನಿಶ್ಚಯ ಎಂಬ ಅರ್ಥದಲ್ಲಿದೆ. 'ಏವ' (ಅವ್ಯಯವು) ಶಬ್ದವು ಅವಧಾರಣಾರ್ಥದಲ್ಲಿದೆ. ಉದಾ- ಶಂಖಃ ಪಾಂಡುರ ಏವ- ಶಂಖಗಳೆಲ್ಲವೂ ಬಿಳಿಯಾಗಿಯೇ ಇವೆ.

**ಅವರ್ಜನೀಯಸನ್ನಿಧಿ-** ಬಿಡಲಾರದ ಸಾನ್ನಿಧ್ಯ. ಒಂದು ವಸ್ತುವಿನ ಉತ್ಪತ್ತಿ ಅಥವಾ ಅರಿವಿಗೆ ಅತ್ಯನಿವಾರ್ಯವಾದ ವಸ್ತುವಿನ ಅಸ್ತಿತ್ವವನ್ನು ಅವರ್ಜನೀಯಸನ್ನಿಧಿ ಎನ್ನುವರು. ಘಟಕ್ಕೆ ಕುಲಾಲನು ಅವರ್ಜನೀಯ.

**ಅವಾಂತರವಾಕ್ಯ-** ಮುಖ್ಯ ವಿಷಯದ ಅರಿವಿಗೆ ಸಹಾಯಕವಾದ ಇತರ ವಿಷಯಗಳನ್ನು ಪ್ರತಿಪಾದಿಸುವ ವಾಕ್ಯವನ್ನು 'ಅವಾಂತರವಾಕ್ಯ' ಎಂದು ತಿಳಿಯುವುದು.

**ಅವಿನಾಭಾವ-** ವ್ಯಾಪ್ತಿ, ಸಾಧ್ಯ- ಹೇತುಗಳ ಸಾಹಚರ್ಯದ ನಿಯಮ.

**ಅವಿಗೀತಶಿಷ್ಟಾಚಾರ-** ಶಾಸ್ತ್ರ ಸಂಪ್ರದಾಯಗಳನ್ನು ಬಲ್ಲವರ ಆಧ್ಯಾತ್ಮಿಕ- ವೈದಿಕಕ್ರಿಯೆಗಳು.

**ಅವಿದ್ಯಾ-** ಜೀವಿಯ ನಿಜಸ್ವರೂಪದ ಅರಿವಿಗೆ ಪ್ರತಿಬಂಧಕವಾದ ಅನಾದಿಯಾದ ಅಜ್ಞಾನ. ಜೀವಿಯ ಆವರಕ.

**ಅವ್ಯಯೀಭಾವ-** ಸಮಾಸವಿಶೇಷ.

**ಅವ್ಯವಹಿತವೃತ್ತಿ-** ನಿಯಮೇನ ನಿಕಟಪೂರ್ವಭಾವಿಯಾದದ್ದು.

**ಅವ್ಯಾಕೃತಾಕಾಶ-** ನಿತ್ಯವಾದ ಆಕಾಶ. ಭೂತಾಕಾಶದಿಂದ ಭಿನ್ನವಾದದ್ದು. ಇದನ್ನು ದಿಕ್ ಎಂದೂ ವ್ಯವಹರಿಸುವರು.

**ಅವ್ಯಾಪ್ಯವೃತ್ತಿ-** ಒಂದೇಸ್ಥಳದಲ್ಲಿ, ಅದೇ ಕಾಲದಲ್ಲಿ, ಒಂದು ಪದಾರ್ಥದ ಭಾವಾಭಾವಗಳು ಇದ್ದಲ್ಲಿ ಈ ರೀತಿಯಲ್ಲಿ ವ್ಯವಹರಿಸುವರು. ಉದಾ. ಕಪಿಯ ಸಂಯೋಗವು ಮರದ ತುದಿಯಲ್ಲಿದೆ, ಮರದ ಬುಡದಲ್ಲಿ ಅದರ ಅಭಾವವು ಇದೆ. ಕಪಿವೃಕ್ಷಸಂಯೋಗವನ್ನು ಅವ್ಯಾಪ್ಯವೃತ್ತಿ ಧರ್ಮ ಎನ್ನುವರು. ಆದೇ ವೃಕ್ಷತ್ವ ಎನ್ನುವ ಧರ್ಮವು ವೃಕ್ಷದ ಎಲ್ಲೆಡೆಯೂ ಇದೆ. ಆದುದರಿಂದ ವೃಕ್ಷತ್ವವು ವ್ಯಾಪ್ಯವೃತ್ತಿಧರ್ಮ.

**ಅಶ್ರುತಕಲ್ಪನ-** ನಿಗ್ರಹಸ್ಥಾನಗಳಲ್ಲಿ ಒಂದು. ಮೂಲಗ್ರಂಥದಲ್ಲಿ ಇಲ್ಲದವಿಷಯವನ್ನು ಪ್ರತಿಪಾದಿಸಿದಲ್ಲಿ ಈ ನಿಗ್ರಹಸ್ಥಾನಕ್ಕೆ ಗುರಿಯಾಗುವನು.

**ಅಸಂಭವ-** ಲಕ್ಷಣದೋಷಗಳಲ್ಲಿ ಒಂದು. ವಸ್ತು ಒಂದರ ಲಕ್ಷಣ ಎಂದು ಹೇಳಿದ ಧರ್ಮವು ಆ ಜಾತಿಯ ಯಾವುದೇ ವಸ್ತುವಿನಲ್ಲಿ ಇಲ್ಲದಿರುವಿಕೆ. ಉದಾ. 'ಹಸು- ಒಂದೇ ಗೊರಸಿನ ಪ್ರಾಣಿ' ಎನ್ನುವುದು.

**ಅಸಾಧಾರಣಾನೈಕಾಂತಿಕ-** ಹೇತುವಿನ ದೋಷಗಳಲ್ಲಿ ಒಂದು. ಹೇತುವು ಪಕ್ಷದಲ್ಲಿ ಮಾತ್ರ ವೃತ್ತಿಯಾಗಿರುವುದು.

**ಅಸಿದ್ಧಿ-** ಅನುಮಾನದ ದೋಷಗಳಲ್ಲಿ ಒಂದು. ಸಾಧ್ಯಾಸಿದ್ಧಿ- ಉಕ್ತಸ್ಥಳದಲ್ಲಿ ಸಾಧ್ಯವು ಅಸಿದ್ಧವಾಗಿರುವುದು. ಹೇತ್ವಸಿದ್ಧಿ, ಹೇತುವು ಪಕ್ಷದಲ್ಲಿ ಸಿದ್ಧಿಸದೇ ಇರುವುದು ಇತ್ಯಾದಿಗಳು ಉದಾಹರಣೆ ಎಂದು ತಿಳಿಯುವುದು.

**ಅಹಂಕಾರ-** 24 ತತ್ವಗಳಲ್ಲಿ ಒಂದು, ಅಂತಃಕರಣ.

**ಆಕೃತಿಗಣ-** ವ್ಯಾಕರಣಶಾಸ್ತ್ರದಲ್ಲಿ ಕೆಲವು ಶಬ್ದಗಳನ್ನು ಒಂದು ಗುಂಪಿನಲ್ಲಿ ಸಂಗ್ರಹಿಸಿರುತ್ತಾರೆ. ಸಂಗ್ರಹಿಸಿದ ಆ ಶಬ್ದಗಳಿಗೆ ವಿಶೇಷವಾದ ಪ್ರತ್ಯಯಾದಿಗಳ ವಿಧಾನವನ್ನು ಮಾಡಿರುತ್ತಾರೆ. ಇಂತಹ ಗಣಗಳಲ್ಲಿ 'ಆಕೃತಿಗಣ' ಎನ್ನುವುದು ಒಂದು.

**ಆಕಾಂಕ್ಷಾ-** ವಾಕ್ಯವೊಂದನ್ನು ಕೇಳಿದಾಗ ಶ್ರೋತೃವಿನಲ್ಲಿ ಪ್ರಶ್ನೆಯು ಉದ್ಭೂತವಾದಲ್ಲಿ ಅದನ್ನು ಆಕಾಂಕ್ಷಾ ಎಂದು ತಿಳಿಯುವುದು. 'ಅವನು ತಂದೆ' ಎಂದು ಕೇಳಿದೊಡನೆ ಯಾರ ತಂದೆ ಎಂದು ಆಕಾಂಕ್ಷೆಯು ಪ್ರಾಪ್ತವಾಗುವುದು.

**ಆಕಾಂಕ್ಷಾಕ್ರಮ-** ಕೇಳುಗನ ಸಂದೇಹದ ಅನುಸಾರ.

**ಆಕಾಂಕ್ಷಾಪೂರ್ತಿ-** ಕೇಳುಗನ ಸಂದೇಹಗಳನ್ನು ಪರಿಹರಿಸುವುದು.

**ಆಕ್ಷೇಪ-** ಮಂಡಿತವಾದ ವಾದವನ್ನು ಪ್ರಶ್ನಿಸುವುದು.

**ಆಗಮ-** ಪ್ರಮಾಕರಣಗಳಲ್ಲಿ ಒಂದು, 'ಆ- ಸಮಂತಾತ್ ಗಮಯತಿ' ನಿರ್ದುಷ್ಟವಾದ ವಾಕ್ಯವನ್ನು 'ಆಗಮ' ಎನ್ನುವರು. ಶಬ್ದದ ಮುಖಾಂತರ ಪರೋಕ್ಷಜ್ಞಾನಕ್ಕೆ ಕರಣವಾಗುವುದು.

ಶಾಬ್ದಬೋಧ- ಶಬ್ದದಿಂದ ಪ್ರಾಪ್ತವಾಗುವ ಜ್ಞಾನವನ್ನು ಶಾಬ್ದಬೋಧ ಎನ್ನುವರು. ಈ ಶಾಬ್ದಬೋಧವು ಪ್ರಾಪ್ತವಾಗಲು ಆ ಮೊದಲು ವಾಚ್ಯ-ವಾಚಕಭಾವ ಸಂಬಂಧದ ಅರಿವು ಅಗತ್ಯ. 'ಗೋ ಶಬ್ದವು ಸಾಸ್ನಾದಿಗಳನ್ನು ಹೊಂದಿರುವ ವಸ್ತುವಿಶೇಷವನ್ನು ತಿಳಿಸುತ್ತದೆ ಎಂಬ ಅರಿವು.

**ವಾಚ್ಯ-** ಪದಾರ್ಥ. ಈ ಶಬ್ದದಿಂದ, ಈ ಪಾದಾರ್ಥವು ವಾಚ್ಯ. ಘಟಶಬ್ದದಿಂದ ಘಟತ್ವವಿಶಿಷ್ಠವಾದದ್ದು ವಾಚ್ಯ. ಇತ್ಯಾದಿ ಸಂದರ್ಭಗಳನ್ನು ಗಮನಿಸುವುದು.

**ವಾಚಕ-** ಶಬ್ದವಿಶೇಷ. ಈ ಪದಾರ್ಥದ ವಾಚಕ ಈ ಶಬ್ದ ಇತ್ಯಾದಿ ವ್ಯವಹಾರಗಳನ್ನು ಗಮನಿಸುವುದು.

**ಆತ್ಮಾಶ್ರಯ**- ವಸ್ತುವೊಂದರ ಜ್ಞಾನಕ್ಕೋ ಉತ್ಪತ್ತಿಗೋ ಆ ವಸ್ತುವೇ ಕಾರಣವಾದಲ್ಲಿ ಆತ್ಮಾಶ್ರಯ ಎಂಬ ದೋಷ ಎಂದು ಶಾಸ್ತ್ರದಲ್ಲಿ ತಿಳಿಸಲಾಗಿದೆ.

**ಆಧಿಕ್ಯ** - ಅಗತ್ಯಕ್ಕಿಂತಲೂ ಹೆಚ್ಚಿನ ಉಪಪಾದನೆಯನ್ನು ಆಧಿಕ್ಯ ಎನ್ನುವ ದೋಷಯುಕ್ತ ಎಂದು ವ್ಯವಹರಿಸುವರು.

**ಆರೋಪಿತ**- ಭ್ರಮಾಜ್ಞಾನದಲ್ಲಿ ಪ್ರಕಾರತಯಾ ಭಾಸಮಾನವಾದದ್ದು. 'ಇದಂ ರಜತಂ' ಎನ್ನುವ ಭ್ರಮಾತ್ಮಕ ಅರಿವಿನಲ್ಲಿ ರಜತತ್ವಪ್ರಕಾರತಯಾ ಭಾನವಾದ ರಜತವು ಆರೋಪಿತ.

ಆಭಾಸ- ನಕಲಿ ಎಂಬ ತಿರುಳಿನಲ್ಲಿದೆ. ಹೇತ್ವಾಭಾಸ, ತರ್ಕಾಭಾಸ ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು.

**ಆಶ್ರಯಾಸಿದ್ಧಿ**- ಅನುಮಾನದ ದೊಷಗಳಲ್ಲಿ ಒಂದು. ಹೇತುವಿನ ಆಶ್ರಯವಾದ ಪಕ್ಷವು ಅಸಿದ್ಧವಾದಲ್ಲಿ ಈ ದೋಷವು ಪ್ರಾಪ್ತವಾಗುವುದು.

**ಆರ್ಹತರು**- ಜೈನರು

**ಆಹಿತಸಂದೇಹ**- ಸಂದೇಹಕ್ಕೆ ಅವಕಾಶವಿಲ್ಲದಿದ್ದರೂ ಸಂದೇಹಿಸುವಿಕೆ.

**ಆಹಿತಶಕ್ತಿ**- ವಸ್ತುವಿನ ಸಹಜಶಕ್ತಿಗಿಂತಲೂ ಹೆಚ್ಚಿನ ಶಕ್ತಿಯು ಸಂದರ್ಭಾಂತರದಲ್ಲಿ ಕಾಣುವುದು ಇದನ್ನು ಆಹಿತಶಕ್ತಿ ಎಂದು ತಿಳಿಯುವುದು.

**ಇತರೇತರಾಶ್ರಯ**- ಅನ್ಯೋನ್ಯಾಶ್ರಯ

**ಇತಿಕರ್ತವ್ಯತಾ**- 'ಕ್ರಮಯುಕ್ತಕರ್ತವ್ಯತಾ- ಇತಿಕರ್ತವ್ಯತಾ' ಎಂದು ವ್ಯವಹರಿಸುವರು. ಮುಖ್ಯವಾಗಿ ಸಾಧನಗಳ ಗುಣವಿಶೇಷವನ್ನು ಇತಿಕರ್ತವ್ಯತಾ ಎಂದು ವ್ಯವಹರಿಸಲಾಗುವುದು. ಇಂದ್ರಿಯಗಳಿಗೆ ತಮ್ಮ ತಮ್ಮ ವಿಷಯದೊಡನೆ ಸನ್ನಿಕೃಷ್ಟವಾಗುವುದೇ ಇತಿಕರ್ತವ್ಯತಾ, ಕೊಡಲಿಗೆ ಉದ್ಯಮನ-ನಿಪತನವೇ ಇತಿಕರ್ತವ್ಯತಾ, ಪರಮಾತ್ಮನಿಗೆ 'ಏನಂ ಮೋಚಯಾಮಿ' ಎಂಬ ಇಚ್ಛೆಯೇ ಇತಿಕರ್ತವ್ಯತಾ ಎಂದು ತಿಳಿಸಲಾಗಿದೆ.

**ಇತಿ ಯಾವತ್**- ಒಟ್ಟು ತಾತ್ಪರ್ಯ.

**ಉತ್ಸರ್ಗ**- ಸಾವಕಾಶ. 'ಹಿಂಸಿಸಬಾರದು' ಎನ್ನುವದು ಉತ್ಸರ್ಗನಿಯಮ. ಈ ನಿಯಮವು ಸಾವಕಾಶವಾದದ್ದು. ಯಜ್ಞದಲ್ಲಿ ಹಿಂಸೆಯು ವಿಹಿತವಾಗಿರುವುದರಿಂದ.

**ಉಪಚಾರ**- ಅಮುಖ್ಯಾರ್ಥ, ಅಪ್ರಧಾನವ್ಯವಹಾರ. ರಾಜನ ಪ್ರತಿನಿಧಿಯನ್ನು ರಾಜ ಎಂದು ವ್ಯವಹರಿಸುವುದು.

**ಉಪನಯ**- ಅನುಮಾನದ ಅಂಗವಾಕ್ಯಗಳಲ್ಲಿ ಒಂದು. 'ಸಾಧ್ಯದೊಡನೆ ಸಾಹಚರ್ಯವನ್ನು ಹೊಂದಿರುವ ಹೇತುವು ಪಕ್ಷದಲ್ಲಿದೆ' ಎನ್ನುವದನ್ನು ದೃಢಪಡಿಸುವ ವಚನವನ್ನು ಉಪನಯ

ಎನ್ನುವರು. ಉದಾ. 'ಮಹಾನಸದಂತೆ ಪರ್ವತವೂ ಧೂಮವನ್ನು ಹೊಂದಿದೆ.'

**ಉಪಲಕ್ಷಣ–** ಊಹಿಸುವುದು. 'ಹಸುವಿನಿಂದ ಪೈರನ್ನು ಕಾಪಾಡು' ಎಂಬ ಸಂದರ್ಭದಲ್ಲಿ ಹಸು ಎನ್ನುವದು ಎಮ್ಮೆ, ಕುರಿ, ಜಿಂಕೆ ಮುಂತಾದ ಪೈರನ್ನು ತಿನ್ನುವ ಎಲ್ಲ ಪ್ರಾಣಿಗಳನ್ನು ಉಪಲಕ್ಷಿಸುವುದು– ಊಹಿಸುವುದು.

**ಉಪಸಂಖ್ಯಾನ–** ಜೊತೆಯಲ್ಲಿ ಪರಿಗಣಿತ.

**ಉಪಪತ್ತಿ–** ನೋಡಿ ಹೇತು.

**ಉಪಮಾ–** ದೃಷ್ಟಾಂತ. ಕೆಲವು ವಾದಿಗಳ ಅಭಿಮತದಂತೆ ಜ್ಞಾನಕರಣಗಳಲ್ಲಿ ಒಂದು.

**ಉಪಸರ್ಗ–** ಮೂಲ ಶಬ್ದದೊಡನೆ ಮೊದಲು ಸೇರಿಸಿರುವ ಪ್ರತ್ಯಯವನ್ನು ಉಪಸರ್ಗ ಎನ್ನುವರು. ಉದಾ. ಪ್ರಭವತಿ– 'ಪ್ರ' ಎನ್ನುವುದು ಭೂಧಾತುವಿನ ಉಪಸರ್ಗ.

**ಉಪಹಿತ–** ಜೊತೆಯಲ್ಲಿರುವ ಎಂಬ ತಿರುಳಿನಲ್ಲಿದೆ. ಅಂತಃಕರಣೋಪಹಿತಚೈತನ್ಯ, ಅಜ್ಞಾನೋಪಹಿತಚೈತನ್ಯ, ಉಪಹಿತಭಾನ ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು.

**ಉಪಾದಾನ–** ವಸ್ತುವಿನ ಉತ್ಪತ್ತಿಗೆ ಕಾರಣವಾದ ಮೂಲದ್ರವ್ಯ. ಗಡಿಗೆಗೆ ಮಣ್ಣು ಉಪಾದಾನ.

**ಉಪಾಧಿ–** ನಿಮಿತ್ತ ಎಂಬ ಅರ್ಥದಲ್ಲಿ ಈ ಶಬ್ದವು ಇದೆ . ಶಾಸ್ತ್ರದಲ್ಲಿ ಸ್ವಲ್ಪ ವಿಶಿಷ್ಟಾರ್ಥದಲ್ಲಿ ಬಳಸುವರು. ಅನುಮಾನದ ದೋಷಗಳಲ್ಲಿ ಒಂದು. ವಾದದಲ್ಲಿ ತನಗೆ ಅಭಿಮತವಾದ ವಿಷಯವೊಂದನ್ನು ಸಾಧಿಸಲು ಹೇತುವೊಂದನ್ನು (ಕಾರಣವೊಂದನ್ನು) ವಾದಿಯು ಹೇಳಿದಾಗ, ಪ್ರತಿವಾದಿಯು ಆಕ್ಷೇಪಿಸುವನು 'ನೀವು ಕಾರಣವೆಂದು ಅಭಿಮತಿಸಿದ್ದು ಉಪಾಧಿಯಿಂದ ದುಷ್ಟವಾಗಿದೆ' ಎಂದು. ಇದರ ಅಭಿಪ್ರಾಯ– 'ನೀವು ಸಾಧ್ಯವನ್ನು ಸಾಧಿಸಲು ತಿಳಿಸಿದ ಕಾರಣವು ಸರಿಯಾದುದಲ್ಲ, ನಾನು ಹೇಳಿದ ಉಪಾಧಿಯೇ ಸಾಧ್ಯವನ್ನು ಸಾಧಿಸಲು ಸರಿಯಾದ ಕಾರಣ' ಎಂದು. ಈ ಉಪಾಧಿಯು ವಾದಿಯ ಅನುಮಾನಕ್ಕೆ ಪ್ರತಿಪಕ್ಷಾನುಮಾನವನ್ನೋ, ಹೇತುವಿಗೆ ವ್ಯಭಿಚಾರವನ್ನೋ ಸೂಚಿಸುವುದು. 'ಪರ್ವತೋ ಧೂಮವಾನ್ ವಹ್ನೇಃ' ಎಂದು ಓರ್ವನು ವಾದಿಸಲು 'ಈ ಅನುಮಾನಕ್ಕೆ ಆರ್ದ್ರೇಂಧನಸಂಯೋಗವು (ಹಸಿಕಟ್ಟಿಗೆಯ ಸಂಯೋಜನೆ) ಉಪಾಧಿ' ಎಂದು ಉತ್ತರಿಸುವನು. ಅಂದರೆ 'ಧೂಮದ ಅಸ್ತಿತ್ವಕ್ಕೆ ವಹ್ನಿಯ ಇರುವಿಕೆಯು ಕಾರಣವಲ್ಲ, ಆರ್ದ್ರೇಂಧನಸಂಯೋಗವು' ಎಂದು ಆತನ ಅಭಿಮತ. ಕಾದಕಬ್ಬಿಣದಲ್ಲಿ ವಹ್ನಿಯು ಇದೆ, ಆದರೆ ಅಲ್ಲಿ ಧೂಮವಿಲ್ಲ. ಅಂದರೆ ವಾದಿಯು ಹೇಳಿದ ಹೇತುವು-ವಹ್ನಿಯು ಇದೆ, ಆದರೆ ಸಾಧ್ಯವಾದ ಧೂಮವು ಇಲ್ಲ, ಆರ್ದ್ರೇಂಧನಸಂಯೋಗವೂ (ಉಪಾಧಿಯೂ) ಇಲ್ಲ. ಆದುದರಿಂದ ಉಪಾಧಿಗೆ ಸಾಧನದಿಂದ ಅವ್ಯಾಪಕತ್ವವು ಪ್ರಾಪ್ತವಾಯಿತು. ಆದರೆ ಚತ್ವರದಲ್ಲಿ ಆರ್ದ್ರೇಂಧನದ ಸಂಯೋಗವಿದೆ ಸಾಧ್ಯವಾದ ಧೂಮವೂ ಇದೆ. ಹಾಗಾಗಿ ಉಪಾಧಿಗೆ ಸಾಧ್ಯದಿಂದ ವ್ಯಾಪಕತ್ವವು ಪ್ರಾಪ್ತವಾಯಿತು. ಅನುಮಾನದಲ್ಲಿ ವ್ಯಾಪ್ಯವಾದ ವಸ್ತುವಿನಿಂದ ವ್ಯಾಪಕವಾದ ವಸ್ತುವನ್ನು ಊಹಿಸುವುದು ರೂಢಿ. ಪ್ರಕೃತ ಸಾಧ್ಯವಾದ ಧೂಮಕ್ಕೆ

ವ್ಯಾಪಕವಾದದ್ದು ಆರ್ದ್ರೇಂಧನಸಂಯೋಗವೇ ಹೊರತು, ವಹ್ನಿಯು ಅಲ್ಲ ಎನ್ನುವುದು ಪ್ರತಿವಾದಿಯ ಮತ. ಪ್ರಕೃತಾನುಮಾನಕ್ಕೆ ಪ್ರತಿಪಕ್ಷಾನುಮಾನವನ್ನು ಈ ಉಪಾಧಿಯ ಬಲದಿಂದ ಹೇಳಬಹುದು. 'ಪರ್ವತವು ಧೂಮವನ್ನು ಹೊಂದಿಲ್ಲ ಆರ್ದ್ರೇಂಧನಸಂಯೋಗವನ್ನು ಹೊಂದಿರದಪ್ರಯುಕ್ತ ಕಾದಕಬ್ಬಿಣದಂತೆ' ಎಂದು, ಅಥವಾ ಹೇತುವಾದ ವಹ್ನಿಯು ವ್ಯಭಿಚರಿತವಾಗಿದೆ ಎಂದೂ ಹೇಳಬಹುದು 'ಸಾಧ್ಯವಾದ ಧೂಮದಿಂದ ರಹಿತವಾದ ಕಾದಕಬ್ಬಿಣದಲ್ಲಿ ಹೇತುವಾದ ವಹ್ನಿಯು ಇದೆ ಆದುದರಿಂದ' ಎಂದು. (ಉಪಾಧಿಯು ಎರಡು ವಿಧ, ಶುದ್ಧಸಾಧ್ಯವ್ಯಾಪಕ ಮತ್ತು ಅವಚ್ಛಿನ್ನಸಾಧ್ಯವ್ಯಾಪಕ ಇತ್ಯಾದಿಯಾಗಿ ಉಪಾಧಿಯ ವಿಚಾರವು ಇನ್ನೂ ವಿಶದವಾಗಿದೆ. ಇದು ಕೇವಲ ಪ್ರಾಥಮಿಕ ಪ್ರವೇಶದ ದೃಷ್ಟಿಯಿಂದ ಇಲ್ಲಿ ಸಂಕ್ಷೇಪಿಸಿ ತಿಳಿಸಲಾಗಿದೆ.)

**ಉದಾಹರಣ-** ಸಾಧ್ಯಹೇತುಗಳಿಗೆ ವ್ಯಾಪ್ತಿಯನ್ನು ಮನವರಿಕೆಯಾಗುವಂತೆ ತಿಳಿಸುವ ಬಗೆಯನ್ನು ಉದಾಹರಣ ಎನ್ನುವರು. ಇದು ಎರಡು ಬಗೆ. ಎಲ್ಲಿಎಲ್ಲಿ ಧೂಮವಿದೆಯೋ ಅಲ್ಲೆಲ್ಲ ವಹ್ನಿಯು ಇರುವುದು, ಇದು ಸಾಧರ್ಮ್ಯ ಉದಾಹರಣ. ಎಲ್ಲೆಲ್ಲಿ ವಹ್ನಿಯ ಅಭಾವವು ಇರುವುದೋ ಅಲ್ಲೆಲ್ಲ ಧೂಮಾಭಾವವು ಇರುವುದು, ವೈಧರ್ಮ್ಯ ಉದಾಹರಣ. ವಿವರಕ್ಕೆ 'ದೃಷ್ಟಾಂತ' ನೋಡಿ.

ಏಕಜೀವವಾದ- ಓರ್ವನೇ ಜೀವನು ಅವಿದ್ಯೆ ಎಂಬ ಉಪಾಧಿಯಿಂದ ದೇವದತ್ತಾದಿ ನಾನಾ ಜೀವನಾಗಿ ತೋರುವನು ಎಂದು ವಾದಿಸುವ ಬಗೆ. ಅನಾದಿಕಾಲದಿಂದ ಅನೇಕಜೀವರು ಇರುವರು. ಅವರ ಅಂತಃಕರಣಗಳು ವಿಭಿನ್ನ ಎಂದು ಅದ್ವೈತವಾದದಲ್ಲಿ ಇನ್ನೊಂದು ಬಗೆ. ಈ ವಾದಗಳನ್ನು ಏಕಜೀವವಾದ ಮತ್ತು ಬಹುಜೀವವಾದ ಎಂದು ತಿಳಿಯುವುದು.

**ಏಕವಾಕ್ಯತಾ-** ಅನೇಕ ವಾಕ್ಯಗಳಿಗೆ ಪ್ರಧಾನ ವಿಷಯ, ಪ್ರಧಾನಪ್ರಯೋಜನ ಈ ಮುಂತಾದವುಗಳು ಒಂದೇ ಆಗಿರುವುದು.

**ಏಕದೇಶಾನ್ವಯ-** 'ದೇವದತ್ತಸ್ಯ ಗುರುಕುಲಮ್' ಎನ್ನುವಲ್ಲಿ 'ದೇವದತ್ತ' ಎನ್ನುವ ಶಬ್ದಕ್ಕೆ 'ಗುರುಕುಲ' ಎನ್ನುವಲ್ಲಿನ ಏಕದೇಶವಾದ 'ಗುರು' ಎನ್ನುವಲ್ಲಿ ಮಾತ್ರ ಅನ್ವಯ.

ಐಕ್ಯ- ಏಕ ಎನ್ನುವ ಶಬ್ದದ ಭಾವರೂಪ ಎಂಬ ಪ್ರಸಿದ್ಧಾರ್ಥದಲ್ಲೇ ಪ್ರಯೋಗವು ಇದ್ದರೂ, ಈ ಗ್ರಂಥದಲ್ಲಿ ಜೀವಬ್ರಹ್ಮೈಕ್ಯ ಎಂಬ ಅಭಿಪ್ರಾಯದಲ್ಲಿ ಹೆಚ್ಚಾಗಿ ಬಳಸಲಾಗಿದೆ.

**ಔತ್ಸರ್ಗಿಕ-** ಅಪವಾದದಿಂದ ಕೂಡಿರುವುದು. ಎಲ್ಲ ನಿಯಮಗಳು ಔತ್ಸರ್ಗಿಕವಾಗಿವೆ ಇತ್ಯಾದಿಪ್ರಯೋಗಗಳನ್ನು ಗಮನಿಸುವುದು.

**ಔಪಚಾರಿಕ-** ಅಮುಖ್ಯಾರ್ಥ.

**ಔಪಾಧಿಕ-** ಉಪಾಧಿ ಎನ್ನುವದರ ಭಾವ.

**ಕಥಾ**- ವಾದಿ-ಪ್ರತಿವಾದಿಗಳು ನಡೆಸುವ ಶಬ್ದವ್ಯವಹಾರವನ್ನು 'ಕಥಾ' ಎಂದು ಕರೆಯುತ್ತಾರೆ. ಜಲ್ಪ, ವಿತಂಡ ಮತ್ತು ವಾದ ಎಂದು ಕಥೆಯು ಮೂರು ವಿಧವಾಗಿದೆ.

**ಕರ್ಮಧಾರಯ**- ಸಮಾಸಗಳಲ್ಲಿ ಒಂದು.

**ಕಾರಣ**- ನೋಡಿ ಹೇತು.

**ಕೋಟಿ**- (ಸಂಖ್ಯಾವಾಚಕವಾಗದಿದ್ದಲ್ಲಿ) ಕಲ್ಪ ಎಂಬ ಅರ್ಥದಲ್ಲಿರುವುದು. ಉದಾ. 'ಸ್ಥಾಣುರ್ವಾ ಪುರುಷೋ ವಾ' ಎನ್ನುವ ಸಂದೇಹದಲ್ಲಿ ಎರಡು ಕೋಟಿಗಳು ತೋರುವುದು.

**ಕ್ರಮಪ್ರಾಪ್ತ**- ಸಹಜವಾಗಿ ಪ್ರಾಪ್ತವಾದದ್ದು.

**ಖ್ಯಾತಿ**- ಅರಿವು.

**ಗತಾರ್ಥತಾ**- ನಿಷ್ಪ್ರಯೋಜಕ.

**ಗುಣ**- ವಸ್ತುವಿನ ಧರ್ಮ- ಶುಕ್ಲವರ್ಣವು ಪಟದ ಧರ್ಮ, ಚೈತನ್ಯವು ಚೇತನನ ಗುಣ. ಅಪ್ರಧಾನ- ಗುಣಪ್ರಧಾನಭಾವ, ಲಕ್ಷಣಾವೃತ್ತಿಯು ಗೌಣೀವೃತ್ತಿ .

**ಜ್ಞಪ್ತಿ** - ಜ್ಞಾನ ಎಂಬುವದರ ಪರ್ಯಾಯ ಶಬ್ದ.

**ಚಕ್ರಕ**- ಮೂರು ವಸ್ತುಗಳು ಪರಸ್ಪರ ಒಂದು ಮತ್ತೊಂದರ ಉತ್ಪತ್ತಿಗೊ ಜ್ಞಾನಕ್ಕೋ ಕಾರಣವಾದಲ್ಲಿ ಚಕ್ರಕಾಪತ್ತಿ ಎಂಬ ದೋಷವು ಪ್ರಾಪ್ತವಾಗುವುದು.

**ಚಾರ್ವಾಕ**- ನಾಸ್ತಿಕವಾದಿ.

**ಚಿತ್**- ಜ್ಞಾನ, ಜೀವ. ಚಿತ್‌ಪ್ರಕಾಶ, ಚಿತ್‌ಸ್ವರೂಪ, ಚಿದ್ರೂಪ ಇತ್ಯಾದಿ ಪ್ರಯೋಗಗಳನ್ನು ಕಾಣಬಹುದಾಗಿದೆ.

**ಚೈತ್ಯವಂದನ**- ಬೌದ್ಧರ ಆಚರಣವಿಶೇಷ.

**ಛಲ**- ವಾದಿ-ಪ್ರತಿವಾದಿಗಳಲ್ಲಿ ಮಂಡಿತವಾದ ವಾಕ್ಯಗಳಿಗೆ ಅರ್ಥಾಂತರವನ್ನು ಕಲ್ಪಿಸಿ ಖಂಡಿಸುವ ಬಗೆ. 'ಗೋವಿನಲ್ಲಿ ವಿಷಾಣವಿದೆ' ಎಂದು ವಾದಿಯು 'ಗೋ' ಎಂಬ ಶಬ್ದಕ್ಕೆ 'ಹಸು' ಎಂಬ ಅರ್ಥವನ್ನು ವಿವಕ್ಷಿಸಿ ಹೇಳಿದಾಗ, ಗೋ ಎನ್ನುವದಕ್ಕೆ 'ಶಬ್ದ' ಎಂಬ ಅರ್ಥವನ್ನು ವಿವಕ್ಷಿಸಿ, 'ಅಮೂರ್ತವಾದ ಗೋವಿನಲ್ಲಿ ವಿಷಾಣವು ಅಸಂಭವ' ಎಂದು ಹೇಳಿದಲ್ಲಿ 'ಛಲ' ಎನ್ನುವರು.

**ಜಲ್ಪ**- ಕೀರ್ತಿ ಹಣಕ್ಕಾಗಿ ಈರ್ವರು ವಿದ್ವಾಂಸರು ನಡೆಸುವ ಶಬ್ದವ್ಯವಹಾರ. ನೋಡಿ ಕಥಾ.

**ಜಾತಿ**- ನಿಗ್ರಹಸ್ಥಾನಗಳಲ್ಲಿ ಒಂದು. 'ಅಸದುತ್ತರಮ್ ಜಾತಿಃ' ತಪ್ಪಾದ ಉತ್ತರವನ್ನು ಜಾತಿ ಎನ್ನುವರು. 'ಜನಕಸ್ಯ ಅತ್ಯಯಃ ಜಾತಿಃ'- ತನ್ನ ಉತ್ಪತ್ತಿಗೆ ಕಾರಣವಾದದ್ದನ್ನು ಅತಿಕ್ರಮಿಸುವುದು. ನ್ಯಾಯಮತದರೀತಿಯಲ್ಲಿ ಅನೇಕ ವಸ್ತುಗಳಲ್ಲಿ ಇರುವ ಒಂದು ಧರ್ಮ. ಘಟಗಳಲ್ಲಿರುವ ಧರ್ಮ ಘಟತ್ವ, ಇದನ್ನು ಒಂದು ಜಾತಿ ಎನ್ನುವರು.

**ಜಾತ್ಯುತ್ತರ**- ನಿಗ್ರಹಸ್ಥಾನದಲ್ಲಿ ಒಂದು. ಯಾವುದೋ ಧರ್ಮಕ್ಕೆ ಮತ್ತಾವುದೋ ಧರ್ಮದಿಂದ ವ್ಯಭಿಚಾರವು ಕಂಡಿರುವದರಿಂದ ಪ್ರಸಕ್ತವಾದ ಸಾಧ್ಯಹೇತುಗಳಿಗೆ ವ್ಯಭಿಚಾರವನ್ನು ಶಂಕಿಸುವುದು. ರೂಪವು ರಸದಿಂದ ವ್ಯಭಿಚರಿತವಾಗಿದೆ. ಕಲ್ಲಿನಲ್ಲಿ ರೂಪವಿದೆ, ರಸವಿಲ್ಲ. ಅದರಂತೆ ಧೂಮವೂ ವಹ್ನಿಯಿಂದ ವ್ಯಭಿಚರಿತವಾಗಿರಬಹುದು ಎಂದು ಶಂಕಿಸಿದಲ್ಲಿ ಜಾತ್ಯುತ್ತರ ಎಂಬ ದೋಷವನ್ನು ಹೊಂದುವನು. ಇದನ್ನೇ ವಿಕಲ್ಪಸಮಾ ಎಂದೂ ಕರೆಯುತ್ತಾರೆ.

**ಜಾತಿಬಾಧಕಗಳು**- ಇದುನ್ಯಾಯಶಾಸ್ತ್ರದ ಪರಿಕಲ್ಪನೆ- ಒಂದೇ ಧರ್ಮವು ಅನೇಕ ಪದಾರ್ಥಗಳಲ್ಲಿ ಸಮವಾಯ ಸಂಬಂಧದಿಂದ ಇದ್ದಲ್ಲಿ ಅಂತಹ ಧರ್ಮವನ್ನು ಜಾತಿ ಎಂದು ಹೆಸರಿಸಿರುವರು. ಎಲ್ಲ ಘಟಗಳಲ್ಲಿ 'ಘಟತ್ವ' ಎನ್ನುವ ಒಂದೇ ಧರ್ಮವು ಸಮವಾಯ ಸಂಬಂಧದಿಂದ ಇರುವುದು ಇದನ್ನು ಜಾತಿ ಎಂದು ತಿಳಿಯುವುದು. ಆದರೂ ಇಂತಹ ಕೆಲವು ಧರ್ಮಗಳನ್ನು ಜಾತಿ ಎಂದು ವ್ಯವಹರಿಸುವಂತಿಲ್ಲ, ಅದಕ್ಕೆ ಕಾರಣವಾದದನ್ನು 'ಜಾತಿಬಾಧಕ' ಎಂದು ಕರೆಯುವರು. ಉದಾ- ಕಲಶತ್ವ ಮತ್ತು ಘಟತ್ವ ಇವೆರಡು ಒಂದೇ ಧರ್ಮವಾಗಿದೆ. ಶಬ್ದವು ಮಾತ್ರ ಬೇರೆಯಾಗಿದೆ. ಎಲ್ಲ ಘಟಗಳಲ್ಲಿ 'ಕಲಶತ್ವ' ಎನ್ನುವ ಒಂದೇ ಧರ್ಮವು ಸಮವಾಯ ಸಂಬಂಧದಿಂದ ಇರುವುದು. ಆದರೂ ಇದನ್ನು ಜಾತಿ ಎಂದು ವ್ಯವಹರಿಸಬಾರದು. ಕಲಶತ್ವ ಮತ್ತು ಘಟತ್ವವು ವ್ಯಕ್ತಿತಃ ಅಭಿನ್ನವಾಗಿರುವದರಿಂದ. ಇದೇ ರೀತಿಯಲ್ಲಿ ಸಾಂಕರ್ಯ ಅನವಸ್ಥಾ ಮುಂತಾದವೂ ಸಹ ಜಾತಿಬಾಧಕಗಳನ್ನು ನ್ಯಾಯಶಾಸ್ತ್ರದಲ್ಲಿ ತಿಳಿಸಲಾಗಿದೆ.

**ಜ್ಯೋತಿಷ್ಟೋಮ**- ಒಂದು ಯಜ್ಞದ ಹೆಸರು.

**ತರ್ಕ**- ಊಹೆ. ಬ್ರಹ್ಮತರ್ಕ, ತರ್ಕಶಾಸ್ತ್ರ ಅನುಕೂಲತರ್ಕ, ಪ್ರತಿಕೂಲತರ್ಕ ಇತ್ಯಾದಿ ಪ್ರಯೋಗಗಳು ಹೇರಳವಾಗಿವೆ. ಪ್ರಮಾಣಾನುಗ್ರಾಹಕವಾದಲ್ಲಿ ಅನುಕೂಲತರ್ಕ ಎಂದು ಹೇಳುವರು. ಉಕ್ತಪ್ರಮಾಣವನ್ನು ಖಂಡಿಸಲು ಪ್ರತಿಕೂಲತರ್ಕವಿದೆ ಎಂದೂ ಹೇಳುವರು. ಅನುಮಾನ ಎರಡು ವಿಧ- ಸಾಧನಾನುಮಾನ ಮತ್ತು ದೂಷಣಾನುಮಾನ. ದೂಷಣಾನುಮಾನ ಎರಡು ಬಗೆ- ಪರಪಕ್ಷೋಕ್ತ ಹೇತುವು ದುಷ್ಟ ಎಂಬ ಜ್ಞಾನಕ್ಕೆ ಕಾರಣವಾದುದು ಮತ್ತು ಪರಪಕ್ಷೋಕ್ತ ಸಾಧ್ಯವು ದುಷ್ಟ ಎಂಬ ಅರಿವಿಗೆ ಕಾರಣವಾದುದು. ಈ ಎರಡನೆ ಬಗೆಯ ಅನುಮಾನವನ್ನು ತರ್ಕ ಎನ್ನುವರು. 'ವ್ಯಾಪ್ಯವನ್ನು ಒಪ್ಪಿದಲ್ಲಿ ಪ್ರಮಾಣಕ್ಕೆ ವಿರುದ್ಧವಾದ ವ್ಯಾಪಕವನ್ನು ಒಪ್ಪಬೇಕಾದೀತು' ಎಂದು ಆಪಾದಿಸುವ ಬಗೆಯನ್ನು ತರ್ಕ ಎನ್ನುವರು.

**ತರ್ಕಾವಸರ**- ತರ್ಕವನ್ನು ಹೇಳಲು ಅವಕಾಶವಿದೆ.

**ತತ್ಪುರುಷ**- ಸಮಾಸಗಳಲ್ಲಿ ಒಂದು.

**ತಥಾಹಿ**- ತಿಳಿಸಿದ ವಿಷಯದ ಧೃಢೀಕರಿಸಲಾಗುವುದು, ದೃಷ್ಟಾಂತ, ಪ್ರಸಿದ್ಧ, ಎಂಬ ತಿರುಳಿನಲ್ಲಿದೆ.

ತಾರ್ಕಿಕರು- ನ್ಯಾಯಶಾಸ್ತ್ರವನ್ನು ಅನುಸರಿಸುವರು. ತರ್ಕದಲ್ಲಿ ಹೆಚ್ಚಿನ ಒಲವನ್ನು ಹೊಂದಿರುವವರು.

**ತ್ರಿವೃತ್ಕರಣ-** ರಾಮಾನುಜೀಯರ ಪ್ರಕ್ರಿಯೆ. ಪೃಥಿವೀ, ಅಪ್, ಅಗ್ನಿಗಳ ಮಿಶ್ರಣದಿಂದ ಈ ಜಗವು ನಿರ್ಮಾಣಗೊಂಡಿದೆ ಎಂಬುವುದು ಈ ಪ್ರಮೇಯದ ಮುಖ್ಯ ಅಂಶ.

**ದರ್ಶನ-** ಶಾಸ್ತ್ರ.

**ದಲ-** ಹೇತು, ಸಾಧ್ಯ ಮುಂತಾದವುಗಳ ವಾಚಕ ಶಬ್ದಗಳಲ್ಲಿ ಘಟಿತವಾದ ವಿಶೇಷಣ-ವಿಶೇಷ್ಯಗಳನ್ನು ದಲ ಎಂದು ಕರೆಯುವರು.

**ದ್ವಂದ್ವ-** ಸಮಾಸಗಳಲ್ಲಿ ಒಂದು.

**ದೂಷಣಾನುಮಾನ-** ಪ್ರತಿವಾದಿಯ ಅನುಮಾನದಲ್ಲಿನ ಹೇತು ಅಥವಾ ಸಾಧ್ಯವನ್ನು ನಿರಾಕರಿಸುವ ಬಗೆ.

**ದೃಷ್ಟಾಂತ-** ಅನುಮಾನದ ಅಂಗವಾಕ್ಯಗಳಲ್ಲಿ ಒಂದು. ಸಾಧ್ಯ ಹೇತುಗಳ ವ್ಯಾಪ್ತಿಗ್ರಹಣಕ್ಕೆ ಸೂಕ್ತವಾದ ಸ್ಥಲವನ್ನು ದೃಷ್ಟಾಂತ ಎಂದು ತಿಳಿಯುವುದು. ಇದು ಎರಡು ವಿಧವಾಗಿರುವುದು. ಹೇತುವಿನ ಅಸ್ತಿತ್ವದಿಂದ ಸಾಧ್ಯದ ಅಸ್ತಿತ್ವವನ್ನು ಸೂಚಿಸುವುದು, ಅನ್ವಯದೃಷ್ಟಾಂತ ಎನ್ನುವರು. ಉದಾ. ಧೂಮಾನುಮಾನದಲ್ಲಿ ಮಹಾನಸವು ದೃಷ್ಟಾಂತ, ಮಹಾನಸದಲ್ಲಿ ಧೂಮವಿದೆ ವಹ್ನಿಯೂ ಇದೆ. ಇನ್ನೊಂದು ಸಾಧ್ಯಾಭಾವದಿಂದ ಹೇತ್ವಭಾವವನ್ನು ತಿಳಿಸುವುದು, ಇದನ್ನು ವ್ಯತಿರೇಕದೃಷ್ಟಾಂತ ಎನ್ನುವರು. ಉದಾ. ನೀರಿನ ಮಡುವಿನಲ್ಲಿ ಸಾಧ್ಯವಾದ ವಹ್ನಿಯು ಇಲ್ಲ, ಹೇತುವಾದ ಧೂಮವೂ ಇಲ್ಲ.

**ದೃಕ್-** ಜ್ಞಾನ.

**ದೃಷ್ಟಹಾನಿ-**ಪ್ರಮಿತವಾದುದನ್ನು ಒಪ್ಪದಿರುವುದು.

**ದಿಕ್-** 'ಇತಿ ದಿಕ್' 'ದಿಕ್‌ಪ್ರದರ್ಶನಾಯ' ಇತ್ಯಾದಿ ಪ್ರಯೋಗಗಳನ್ನು ಕಾಣಬಹುದಾಗಿದೆ. 'ಇದು ಹಾದಿ' 'ಈ ರೀತಿಯಲ್ಲಿ, ಪ್ರಸಕ್ತವಾದವನ್ನು ಮುಂದೆ ಸಾಗಿಸಬಹುದು' ಎಂಬ ಭಾವದಲ್ಲಿದೆ.

**ದೇವಯಾನ-** ಉತ್ತಮಗತಿಗೆ ಜೀವಿಯು ಸಾಗುವ ಅಂತರಿಕ್ಷಲೋಕದಲ್ಲಿನ ಮಾರ್ಗವಿಶೇಷ.

**ಧರ್ಮ-** ವಸ್ತುವಿನ ಗುಣ. ಆಶ್ರಯಿಸಿಕೊಂಡಿರುವ ಪದಾರ್ಥ. ನಾಲ್ಕುಪುರುಷಾರ್ಥಗಳಲ್ಲಿ ಒಂದು. ಶಾಸ್ತ್ರಗಳಲ್ಲಿ ಉಕ್ತವಾದ ಅದೃಷ್ಟ ಪದಾರ್ಥಗಳಲ್ಲಿ ಒಂದು.

**ಧರ್ಮಿಗ್ರಾಹಕ-** ವಸ್ತು ಒಂದರ ಅಸ್ತಿತ್ವ ಅಥವಾ ಜ್ಞಾನಕ್ಕೆ ಕಾರಣವಾದದ್ದು. ಆಗಮ ಮತ್ತು ಅನುಮಾನದ ಅರಿವಿಗೆ ಪ್ರತ್ಯಕ್ಷವು ಕಾರಣವಾಗಿದೆ. ಹಾಗಾಗಿ ಪ್ರತ್ಯಕ್ಷವು ಅನುಮಾನಾಗಮಗಳಿಗೆ ಧರ್ಮಿಗ್ರಾಹಕ ಎಂದು ತಿಳಿಯುವುದು.

**ಧಾರಾವಾಹಿಕಜ್ಞಾನ**- ಒಂದೇ ವಸ್ತುವಿನ ನಿರಂತರ ಅರಿವು.

**ನನು**- ಪ್ರಶ್ನಾರ್ಥಕ ಅವ್ಯಯ. 'ಸರಿ ಹಾಗಾದಲ್ಲಿ' ಎಂಬ ಭಾವದಲ್ಲಿದೆ.

**ನಿಗಮನ**- ಅನುಮಾನದ ಅಂಗವಾಕ್ಯಗಳಲ್ಲಿ ಒಂದು. ಅನುಮಾನದಲ್ಲಿ ಸಾಧಿಸಿದ ವಿಷಯವನ್ನು ಕ್ರೋಡೀಕರಿಸಿ ತಿಳಿಸುವದನ್ನು 'ನಿಗಮನ' ಎಂದು ಕರೆಯಲಾಗುವುದು. ಅದನ್ನು 'ತಸ್ಮಾತ್ ತಥಾ' ಎಂದು ಶಾಸ್ತ್ರದಲ್ಲಿ ಉಪದೇಶಿಸಿರುವರು. 'ವಹ್ನಿವ್ಯಾಪ್ಯವಾದ ಧೂಮವನ್ನು ಪರ್ವತವು ಹೊಂದಿರುವದರಿಂದ, ಪರ್ವತದಲ್ಲಿ ವಹ್ನಿಯು ಇದೆ' ಎನ್ನುವುದು ಈ ವಾಕ್ಯದ ಒಟ್ಟು ಅಭಿಪ್ರಾಯ.

**ನಿರ್ಗುಣಬ್ರಹ್ಮ**- ನೋಡಿ ಸಗುಣಬ್ರಹ್ಮ.

**ನಿಗ್ರಹಸ್ಥಾನ**- ವಾದಿ-ಪ್ರತಿವಾದಿಗಳು ಎಸಗಿದ ತಪ್ಪನ್ನು ತಿಳಿಸುವ ವಿಧಾನಕ್ಕೆ ನಿಗ್ರಹಸ್ಥಾನ ಎಂದು ಹೆಸರು.

**ಪದಸ್ಫೋಟ**- ನೋಡಿ ಸ್ಫೋಟ.

**ಪರಮಾಣು**- ನೋಡಿ ಅಣು.

**ಪರಾರ್ಥಾನುಮಾನ**- ಅನುಮಾನದಲ್ಲಿ ಎರಡು ವಿಧ- ಸ್ವಾರ್ಥಾನುಮಾನ ಪರಾರ್ಥಾನು-ಮಾನ ಎಂದು. ಮತ್ತೊಬ್ಬರಿಗೆ ವ್ಯಾಪ್ತ್ಯಾದಿಗಳ ಮುಖಾಂತರ ಅರಿವನ್ನು ಉಂಟುಮಾಡಲು ಬಳಸುವ ವಾಕ್ಯವಿಶೇಷವನ್ನು ಪರಾರ್ಥಾನುಮಾನ ಎನ್ನುವರು. ತನಗೇ ಹೇತ್ವಾದಿ ದರ್ಶನಾದಿ-ಗಳಿಂದ ವ್ಯಾಪ್ತಿಸ್ಮರಣಾದಿಗಳಿಂದ ಅರಿವು ಪ್ರಾಪ್ತವಾದಲ್ಲಿ ಸ್ವಾರ್ಥಾನುಮಾನ ಎನ್ನುವರು.

**ಪಂಚಸ್ಕಂಧ**- ಬೌದ್ಧರ ಪಾರಿಭಾಷಿಕ ಶಬ್ದ. ರೂಪ-ರಸ-ಗಂಧ-ಸಂಸ್ಕಾರ- ವಿಜ್ಞಾನ ಎಂದು ಐದು ಸ್ಕಂಧಗಳನ್ನು ಒಪ್ಪಿರುತ್ತಾರೆ.

**ಪರ್ಯನುಯೋಗ**- ಪ್ರಶ್ನೆ.

**ಪರಿಚ್ಛಿನ್ನ**- ನೋಡಿ ಅಪರಿಚ್ಛಿನ್ನ.

ಪರಿಶೇಷ- 'ಇರುವ ಮೂವರಲ್ಲಿ ಕದ್ದವರು ಇವರಿಬ್ಬರಲ್ಲ ಎಂದಾದಲ್ಲಿ ಕದ್ದವರು ಯಾರು?' ಎಂಬ ನುಡಿಯು ಬಳಕೆಯಲ್ಲಿದೆ. ಹೀಗೆ ಅನೇಕವಿಧದಲ್ಲಿ ಯುಕ್ತವಾಗುವ ಸಂಗತಿಯೊಂದು, ಬೇರೇ ವಿಧಗಳು ಲಾಗೂ ಆಗದಿದ್ದಲ್ಲಿ 'ಉಳಿದ ಆ ಒಂದು ವಿಧವೇ ಯುಕ್ತ' ಎಂದು ಹೇಳುವ ಬಗೆಯನ್ನು ಪರಿಶೇಷ ಎನ್ನುವರು. ಉದಾ- ಶಿಷ್ಟರು ಆಚರಿಸುವ ಗ್ರಂಥಾದಿಯಲ್ಲಿನ ಮಂಗಲಾಚರಣೆಗೆ ದೃಷ್ಟವಾದ ಅನ್ಯಫಲವಿಲ್ಲ, ಅದೃಷ್ಟವಾದ ಸ್ವರ್ಗಾದಿಗಳು ಫಲವಲ್ಲ ಎಂತಾದಲ್ಲಿ ಪರಿಶೇಷತಃ ಗ್ರಂಥಪರಿಸಮಾಪ್ತಿಯೇ ಫಲ. ಪರಿಶೇಷಪ್ರಮಾಣ, ಪರಿಶೇಷಾನುಮಾನ, ಪರಿಶೇಷಸಿದ್ಧ ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು.

**ಪರೀಕ್ಷಾ-** ವ್ಯವಹಾರದ ಅರ್ಥದಲ್ಲೇ ಬಳಸುವರು. ಪ್ರಮಾಣ ಒಂದರ ಪ್ರಾಮಾಣ್ಯದ ನಿಶ್ಚಾಯಕ ಪದ್ಧತಿಯನ್ನು ಪ್ರಮಾಣಪರೀಕ್ಷಾ ಎನ್ನುವರು. ಹೀಗೆಯೇ ವಸ್ತುಪರೀಕ್ಷಾ, ಪರೀಕ್ಷಾನವಸ್ಥಾ ಇತ್ಯಾದಿಗಳನ್ನು ತಿಳಿಯುವುದು.

**ಪಕ್ಷ-** ಅನುಮಾನದ ಅಂಗಗಳಲ್ಲಿ ಒಂದು. ಅಭೀಪ್ಸಿತ ವಿಷಯವನ್ನು ಎಲ್ಲಿ ಸಾಧಿಸಲಾಗುವುದೋ ಅದನ್ನು 'ಪಕ್ಷ' ಎಂದು ತಿಳಿಯುವುದು. ಉದಾ- ವಹ್ನಿಯನ್ನು ಪರ್ವತದಲ್ಲಿ, ಈಶ್ವರನಲ್ಲಿ ಸರ್ವಕರ್ತೃತ್ವವನ್ನು ಸಾಧಿಸಲಾಗುವುದು. ಆಗ ಪರ್ವತ ಮತ್ತು ಈಶ್ವರರನ್ನು ಪಕ್ಷ ಎಂದು ತಿಳಿಯುವುದು. ಅಥವಾ ವಿಕಲ್ಪವನ್ನೂ ಪಕ್ಷ ಎಂದು ವ್ಯವಹರಿಸಲಾಗುವುದು. ಆದ್ಯಪಕ್ಷೇ ತು, ಹಾಗೆಯೇ 'ಆ ರೀತಿಯಲ್ಲಿ' ಎಂಬ ತಿರುಳಿನಲ್ಲಿಯೂ ಇದೆ, ಮಾಯಿಪಕ್ಷೇ ತು ಇತ್ಯಾದಿಯಾಗಿ ಪ್ರಯೋಗಗಳನ್ನು ಕಾಣಬಹುದು.

**ಪಕ್ಷಧರ್ಮತಾ-** ಹೇತುವು ಪಕ್ಷದಲ್ಲಿ ಇರುವಿಕೆ.

**ಪಾರಮಾರ್ಥಿಕಸತ್-** ನೋಡಿ ಸತ್ತಾ.

**ಪಿಂಡೀಕೃತ್ಯ-** ವಿಷಯ ಒಂದನ್ನೂ ಸಮಗ್ರೀಕರಿಸಿ ತಿಳಿಸುವ ಬಗೆ.

**ಪಿತೃಯಾನ-** ಉತ್ತಮಗತಿಗೆ ಜೀವಿಯು ಸಾಗುವ ಅಂತರಿಕ್ಷಲೋಕದಲ್ಲಿನ ಮಾರ್ಗವಿಶೇಷ.

**ಪೀಲುಪಾಕ-** ನ್ಯಾಯಶಾಸ್ತ್ರದಲ್ಲಿನ ಪಾರಿಭಾಷಿಕ ಶಬ್ದ. ವಸ್ತು ಒಂದರ ಧರ್ಮವೊಂದರ ಬದಲಾವಣೆಯು ಆಗಬೇಕಾದಲ್ಲಿ ಆ ವಸ್ತುವಿನ ಕಾರಣೀಭೂತವಾದ ಪರಮಾಣುವಿನ ಪರ್ಯಂತ ಬದಲಾವಣೆಯಾಗುವುದು ಎಂದು, ಕೇವಲ ಧರ್ಮಿಯಲ್ಲಿಯೇ ನೇರವಾಗಿ ಬದಲಾಗದು ಎಂದು. ಈ ಬಗೆಯ ವಾದಗಳನ್ನು ಪೀಲುಪಾಕವಾದ ಎಂದು ಕರೆಯುವರು.

**ಪ್ರತಿಕೂಲತರ್ಕ-** ಪ್ರಸಕ್ತ ಅನುಮಾನಕ್ಕೆ ಪ್ರತಿಬಂಧಿಯಾಗಿ ತರ್ಕಿಸುವದನ್ನು ಪ್ರತಿಕೂಲರ್ಕ ಎನ್ನುವರು. ನೀರಿನ ಮೊಡವಿನಲ್ಲಿ ಹೊಗೆಯು ಇರುವದಾದಲ್ಲಿ ಬೆಂಕಿಯೂ ಇರಬೇಕಾದೀತು ಎಂದು ತರ್ಕಿಸುವಬಗೆಯನ್ನು 'ಪ್ರತಿಕೂಲತರ್ಕ' ಎನ್ನುವರು.

**ಪ್ರತಿಬನ್ದಿ-** ವಾದದಲ್ಲಿ ವಿಷಯ ಒಂದನ್ನು ಮಂಡಿಸಿದಾಗ, ಪ್ರತಿವಾದಿಯು- 'ಇದು ತರವಲ್ಲ, ಹೀಗೆ ವಾದಿಸಿದಲ್ಲಿ ಇದನ್ನು ಒಪ್ಪಬೇಕಾದೀತು' ಎಂದು ವಾದಿಸುವ ಬಗೆ. ಉದಾ- 'ಪರ್ವತದಲ್ಲಿ ವಹ್ನಿಯು ಇಲ್ಲ ಎಂದಾದಲ್ಲಿ ಧೂಮವು ಇಲ್ಲದೇ ಹೋದೀತು ಎಂದು ವಾದಿಸುವನು ಇದನ್ನು 'ಪ್ರತಿಬಂದಿ' ಎಂದು ತಿಳಿಯುವುದು.

**ಪ್ರತಿಯೋಗಿ-** ನೋಡಿ ಅನುಯೋಗಿ.

**ಪ್ರತ್ಯಯ-** 1)ಶಬ್ದಶಾಸ್ತ್ರದಲ್ಲಿ ಪ್ರತ್ಯಯ ಅಂದರೆ ಶಬ್ದದ ಪ್ರಕೃತಿಯೊಡನೆ ಸಂಯೋಜಿಸುವ ಪದ ವಿಶೇಷಗಳು. ಉದಾ- ಭವತಿ ಎನ್ನುವ ಶಬ್ದದಲ್ಲಿ 'ಭೂ' ಎನ್ನುವುದು ಪ್ರಕೃತಿ, 'ಅ' ಮತ್ತು 'ತಿ' ಎನ್ನುವದು ಪ್ರತ್ಯಯಗಳು ಎಂದು ತಿಳಿಯುವುದು.

2) ಅರ್ಥಶಾಸ್ತ್ರದಲ್ಲಿ ಪ್ರತ್ಯಯ ಎನ್ನುವ ಶಬ್ದವು 'ಅರಿವು' ಎಂಬ ತಿರುಳುನಲ್ಲಿದೆ. 'ಘಟಪ್ರತ್ಯಯೇನ' ಇತ್ಯಾದಿಗಳು ದೃಷ್ಟಾಂತ.

**ಪ್ರತ್ಯಭಿಜ್ಞಾ**- ಸ್ಮರಣೆ ಮತ್ತು ತತ್ಕಾಲದಲ್ಲಿ ಪ್ರಾಪ್ತವಾದ ಅರಿವಿನ ಮಿಶ್ರಣವನ್ನು ಹೀಗೆ ಕರೆಯುತ್ತಾರೆ. ಉದಾ- 'ಸೋಽಯಂ ದೇವದತ್ತಃ' ಇತ್ಯಾದಿಗಳು. ಈ ಅರಿವಿನಲ್ಲಿ ಎರಡು ಭಾಗಗಳಿವೆ. 'ಸಃ' (ಹಿಂದೆ ಅನುಭೂತನಾದ ವ್ಯಕ್ತಿ) ಎನ್ನುವದು ಸ್ಮರಣೆ, ' ಅಯಂ ದೇವದತ್ತಃ' ಎನ್ನುವುದು ಇಂದ್ರಿಯ ಸನ್ನಿಕರ್ಷದಿಂದ ಪ್ರಾಪ್ತವಾದ ಹೊಸ ಅರಿವು.

**ಪ್ರತ್ಯಕ್ಷ**- ಇಂದ್ರಿಯ ಮತ್ತು ಪದಾರ್ಥಗಳ ಸನ್ನಿಕರ್ಷದಿಂದ ಪ್ರಾಪ್ತವಾಗುವ ಅರಿವನ್ನು 'ಪ್ರತ್ಯಕ್ಷ' ಎನ್ನುವರು. ಈ ಪ್ರತ್ಯಕ್ಷಾತ್ಮ ಅರಿವು ಪ್ರಾಪ್ತವಾಗಲು ಮತ್ತೊಂದರ ಸಹಾಯವನ್ನು ಅಪೇಕ್ಷಿಸದು.

**ಪ್ರತಿಜ್ಞಾ**- ಹೇಳಿಕೆ. 'ನ ಹಿ ಪ್ರತಿಜ್ಞಾಮಾತ್ರೇಣ ವಸ್ತುಸಿದ್ಧಿರ್ಭವತಿ' ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು. ಸಾಧನೀಯವಾದ ವಸ್ತು ಮತ್ತು ಎಲ್ಲಿ ಸಾಧಿಸಲಾಗುವುದೋ ಆ ಸ್ಥಳ, ಆ ಎರಡನ್ನು ಪ್ರಚುರಪಡಿಸುವ ವಚನ. ಉದಾ. ಪರ್ವತೋ ಅಗ್ನಿಮಾನ್. 'ಪಕ್ಷವು ಸಾಧ್ಯದಿಂದ ಸಹಿತವಾಗಿದೆ' ಎಂದು ಹೇಳುವ ಬಗೆಯನ್ನು ಪ್ರತಿಜ್ಞಾ ಎನ್ನುವರು.

**ಪ್ರಧಾನ**- ಮುಖ್ಯ ಎಂಬ ತಿರುಳಿನಲ್ಲೇ ಇದೆ. 'ಅಭಾವಕ್ಕೆ ಪ್ರತಿಯೋಗಿಯೊಡನೆ ವಿರೋಧವಿದೆ, ಹಾಗೆಯೇ ಪ್ರಧಾನದೊಡನೆಯೂ ವಿರೋಧವಿದೆ' ಎಂದು ಪ್ರಯೋಗಿಸುವರು. ಇಲ್ಲಿ ಪ್ರಧಾನ ಎಂದರೆ ಪ್ರತಿಯೋಗಿಯಾದ ಅಸತ್ತಾದುದನ್ನು ವ್ಯವಹರಿಸುವ ಶಬ್ದದಿಂದಲೇ ವ್ಯವಹರಿಸುವ ಸತ್ ಪದಾರ್ಥ. ಆರೋಪಿತವಾದ ರಜತವು ಅಸತ್, ಪ್ರಧಾನವಾದ ಆಪಣಸ್ಥರಜತವು ಸತ್ ಎಂದು ಭಾವ.

**ಪ್ರತಿಸಂಖ್ಯಾನಿರೋಧ**- ಬೌದ್ಧಶಾಸ್ತ್ರದಲ್ಲಿನ ಪಾರಿಬಾಷಿಕ ಶಬ್ದ. ಅವರಲ್ಲಿ ನಾಶವು ಎರಡುವಿಧ. ಒಂದು ಬುದ್ಧಿಪೂರ್ವಿಕವಾಗಿ ಮತ್ತೊಂದ ಸಹಜವಾಗಿ. ದಂಡದಿಂದ ಘಟವು ನಷ್ಟವಾದಲ್ಲಿ ಅದನ್ನು ಪ್ರತಿಸಂಖ್ಯಾನಿರೋಧ ಎನ್ನುವರು. ಎಲ್ಲ ಪದಾರ್ಥಗಳೂ ಕ್ಷಣಿಕ, ಸಹಜವಾಗಿ ಪದಾರ್ಥಗಳು ಪ್ರತಿಕ್ಷಣದಲ್ಲೂ ನಾಶವನ್ನು ಹೊಂದುತ್ತವೆ ಎಂದು ಅವರು ಒಪ್ಪಿರುವರು. ಈ ನಾಶವನ್ನು ಅಪ್ರತಿಸಂಖ್ಯಾನಿರೋಧ ಎನ್ನುವರು.

**ಪ್ರಧ್ವಂಸ**- ಧ್ವಂಸ.

**ಪ್ರನಾಡಿಕಾ**- ವಿಷಯಮಂಡನೆಯ ವಿಧಾನ.

**ಪ್ರಾತಿಭಾಸಿಕಸತ್**- ನೋಡು ಸತ್ತಾ.

**ಪ್ರೌಢಿವಾದ**- ಶಿಷ್ಯರ ಜ್ಞಾನದ ವೃದ್ಧಿಗಾಗಿ ತಾನು ಒಪ್ಪಿದ ಸಿದ್ಧಾಂತಕ್ಕೆ ವಿರುದ್ಧವಾಗಿ ವಾದಿಸುವ ಬಗೆ.

**ಪ್ರತ್ಯಾಸತ್ತಿ**- ಸಂಬಂಧ. 'ಜ್ಞಾನಲಕ್ಷಣಪ್ರತ್ಯಾಸತ್ತಿ' ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು.

**ಪಿಂಡ**- ವಸ್ತು ವಿಶೇಷ, 'ಗೋಪಿಂಡ'.

**ಬಹುಜೀವವಾದ**- ನೋಡಿ 'ಏಕಜೀವವಾದ'.

**ಬಹುವ್ರೀಹಿ**- ಸಮಾಸಗಳಲ್ಲಿ ಒಂದು.

**ಬಾಧ**- ಪ್ರಬಲವಾದ ಪ್ರಮಾಣಾಂತರದಿಂದ ವಿರೋಧ. ವ್ಯತ್ಯಸ್ತವಾಗಿ ತಿಳಿದಿದ್ದನ್ನು ಸರಿಯಾಗಿ ತಿಳಿಯುವುದೇ ಬಾಧ.

**ಬ್ರಹ್ಮ**- ವೇದಾಂತದಲ್ಲಿ ಬಹುವಾಗಿ ಬಳಕೆಯಲ್ಲಿ ಇರುವ ಶಬ್ದ. ಜಗನ್ನಿಯಾಮಕನಾದ ವ್ಯಕ್ತಿಯನ್ನು ಈ ಶಬ್ದದಿಂದ ಗುರಿತಿಸಲಾಗಿದೆ. ನ್ಯಾಯಶಾಸ್ತ್ರಕಾರರ ಅಭಿಮತದಂತೆ ಎಂಟು ಗುಣಗಳಿಂದ ಕೂಡಿದವ, ಅದ್ವೈತಮತದಂತೆ ನಿರ್ಗುಣ, ತತ್ತ್ವವಾದಿಗಳು ಅನಂತಗುಣ ಪೂರ್ಣ ಎಂದು ಅಭಿಮತಿಸಲಾಗಿದೆ. ವೇದ, ಚತುರ್ಮುಖ ಇತ್ಯಾದಿ ಪ್ರತಿಪಾದಕವೂ ಆಗಿದೆ.

**ಭಾಗಾಸಿದ್ಧಿ**- ಅನುಮಾನದೋಷದಲ್ಲಿ ಒಂದು.

**ಮಹಾವಾಕ್ಯ**- ಪ್ರಧಾನವಿಷಯವನ್ನು ಬೋಧಿಸುವ ವಾಕ್ಯ.

**ಮೂರ್ತ**- ಕ್ರಿಯೆಯನ್ನು ಹೊಂದಿರುವ ದ್ರವ್ಯ. ಸ್ಥೂಲವಾದ ಶರೀರವನ್ನು ಹೊಂದಿರುವ ದ್ರವ್ಯ.

**ಯುಕ್ತಿ**- ನೋಡಿ ಹೇತು.

**ಯೋಗವೃತ್ತಿ**- ಶಬ್ದಗಳಿಗೆ ಅರ್ಥೈಸುವ ವಿಧಾನಗಳಲ್ಲಿ ಒಂದು ಬಗೆ. ಶಬ್ದಾವಯವದಿಂದ ತಿಳಿಯು ಅರ್ಥ. ಪಾಚಕ- ಪಾಕಕರ್ಮವನ್ನು ಮಾಡುವವ.

**ಯೋಗರೂಢ**- ಶಬ್ದಗಳಿಗೆ ಅರ್ಥೈಸುವ ವಿಧಾನಗಳಲ್ಲಿ ಒಂದು ಬಗೆ. ಅವಯವ ಶಕ್ತಿ ಮತ್ತು ರೂಢಿ ಎರಡರ ಬಲದಿಂದ ತಿಳಿಸುವಬಗೆ. 'ಪಂಕಜಮ್'- ಕೆಸರಿನಲ್ಲಿ ಹುಟ್ಟಿದ್ದು ಕಮಲಪುಷ್ಪ, ಆದರೆ ಕಪ್ಪೆ ಮುಂತಾದವುಗಳಲ್ಲಿ ಈ ಶಬ್ದದ ಬಳಕೆಯು ಇರುವದಿಲ್ಲ. ಕಮಲದಲ್ಲೇ ಈ ಶಬ್ದವು ರೂಢವಾಗಿದೆ.

**ರೂಢಲಕ್ಷಣಾ**- ಶಬ್ದಗಳಿಗೆ ಅರ್ಥೈಸುವ ವಿಧಾನಗಳಲ್ಲಿ ಒಂದು ಬಗೆ. ಅವಯಾವಾರ್ಥಕ್ಕೆ ಪ್ರಧಾನ್ಯವಿಲ್ಲ, ತೈಲ- ತಿಲ ಜನ್ಯವಾದದು. ಪಿಣ್ಯಾಕವನ್ನು-ಎಳ್ಳಿನಹಿಂಡಿಯನ್ನು ಈ ಶಬ್ದದಿಂದ ವ್ಯವಹರಿಸಲಾಗದು. ಆದರೆ ಎಲ್ಲ ವಿಧವಾದ ಸ್ನೇಹ ಪದಾರ್ಥಗಳನ್ನು ಈ ಶಬ್ದದಿಂದಲೇ ವ್ಯವಹರಿಸುವರು.

**ರೂಢಿ**- ಶಬ್ದಗಳಿಗೆ ಅರ್ಥೈಸುವ ವಿಧಾನಗಳಲ್ಲಿ ಒಂದು ಬಗೆ. ಶಬ್ದದ ಮುಖ್ಯಾರ್ಥ. ಸಮುದಾಯಶಕ್ತಿ, ಸಮಗ್ರಪದವು ವಸ್ತು ಒಂದನ್ನು ತಿಳಿಸುತ್ತದೆ. ಸಾರ್ವಜನೀನಕವ್ಯವಹಾರ. ಗೋ ಶಬ್ದಕ್ಕೆ ಗಂಗೇತೊಗಲನ್ನು ಹೊಂದಿದ ಪ್ರಾಣಿಯಲ್ಲಿ ರೂಢಿಯು ಇದೆ.

**ರೂಢೋಪಚಾರ-** ಕುಶಲ ಇತ್ಯಾದಿ ಪ್ರಯೋಗಗಳು ಉದಾಹೃತವಾಗಿವೆ. ವಸ್ತುತಃ 'ಕುಶವನ್ನು ತರುವ ವ್ಯಕ್ತಿಯನ್ನು- ಕುಶಲ' ಎಂದು ವ್ಯವಹರಿಸಬೇಕು, ಆದರೆ ಬುದ್ಧಿವಂತನನ್ನು ಈ ಶಬ್ದದಿಂದ ವ್ಯವಹರಿಸುವರು. ಇದನ್ನು ರೂಢೋಪಚಾರ ಎನ್ನುವರು.

**ಲಕ್ಷಣಾವೃತ್ತಿ-** ಶಬ್ದಗಳಿಗೆ ಅರ್ಥೈಸುವ ವಿಧಾನಗಳಲ್ಲಿ ಒಂದು ಬಗೆ. ಮುಖ್ಯಾರ್ಥಕ್ಕೆ ಬಾಧಕವಿದ್ದಲ್ಲಿ, ಅರ್ಥವಿಶೇಷವು ಪ್ರಸ್ತುವಾಗುವ ಸಂದರ್ಭದಲ್ಲಿ ಈ ವೃತ್ತಿಯನ್ನು ಆಶ್ರಯಿಸಲಾಗುವುದು. ಇದನ್ನು ಅಮುಖ್ಯವೃತ್ತಿ ಎನ್ನುವರು. 'ಗಂಗಾಯಾಂ ಘೋಷಃ' ಇಲ್ಲಿ ಗಂಗಾ ಶಬ್ದವನ್ನು ತೀರ ಎಂದು ಅರ್ಥೈಸಲಾಗುವುದು. ಗಂಗಾ ಶಬ್ದದ ಮುಖ್ಯಾರ್ಥವಾದ ಪ್ರವಾಹದಲ್ಲಿ, ಹಳ್ಳಿಯಿರಲು ಶಕ್ಯವಿಲ್ಲತಾನೆ? ಬಾಧಕವು ಇರುವುದರಿಂದ ಗಂಗಾಶಬ್ದವು ಪ್ರವಾಹವನ್ನು ತಿಳಿಸದೇ ತೀರವನ್ನು ತಿಳಿಸುವುದು.

**ಲಕ್ಷಿತಲಕ್ಷಣಾ-** ಶಬ್ದಗಳಿಗೆ ಅರ್ಥೈಸುವ ವಿಧಾನಗಳಲ್ಲಿ ಒಂದು ಬಗೆ. ಅವಯಶಕ್ತಿ ಮತ್ತು ಲಕ್ಷಣಾವೃತ್ತಿ ಎರಡನ್ನೂ ಆಶ್ರಯಿಸಿ ಅರ್ಥೈಸುವ ಬಗೆ. ದ್ವಿರೇಫಾ- ದುಂಬಿ. 'ಎರಡು ರೇಫಾಕ್ಷರಗಳನ್ನು ಹೊಂದಿದ' ಎಂದು ಈ ಶಬ್ದದ ಅವಯವಾರ್ಥ. ಭ್ರಮರ ಎಂಬ ಶಬ್ದವು ಎರಡು ರೇಫಾಕ್ಷರಗಳನ್ನು ಹೊಂದಿದೆ. ಪ್ರಕೃತ ಶಬ್ದದಿಂದ ಲಕ್ಷಿತವಾದದ್ದು ಭ್ರಮರ ಶಬ್ದ., ಅದರಿಂದ ರೂಢವಾದದ್ದು ದುಂಬಿ ಎಂದು ಭಾವ.

**ಲಕ್ಷಣಂ-** ವಸ್ತುವಿನ ಧರ್ಮವಿಶೇಷ. ಸಾಸ್ನಾದಿಗಳು ಗೋವಿನ ಲಕ್ಷಣ.ಶಾಸ್ತ್ರ ಎಂಬ ತಿರುಳಿನಲ್ಲೂ ಇದೆ. ವಿಂಶಲ್‌ಕ್ಷಣಕಂ ಶಾಸ್ತ್ರಮ್, ಇತ್ಯಾದಿ.

**ಲಕ್ಷ್ಯ-** ಯಾವ ವಸ್ತುವನ್ನು ತಿಳಿಸಲಾಗುವುದೋ ಅದನ್ನು ಈ ಶಬ್ದದಿಂದ ವ್ಯವಹರಿಸುವರು. ಲಕ್ಷಣದಿಂದ ಬೋಧ್ಯವಾದ ಪದಾರ್ಥ.

**ಲಿಂಗ-** ನೋಡಿ ಹೇತು.

**ಲೋಕಾಯತ-** ಲೋಕದಲ್ಲಿ ಎಲ್ಲಡೆ ಹರಡಿರುವ ಎಂಬ ತಿರುಳಿನಲ್ಲಿದೆ. ನಾಸ್ತಿಕರನ್ನು ಈ ಹೆಸರಿನಿಂದ ಕರೆಯುವರು.

**ವಾದ-** ಗುರು-ಶಿಷ್ಯರು, ಅಥವಾ ಜನಸಾಮನ್ಯರು ತಿಳಿದವರೊಡನೆ ತತ್ವದ ನಿರ್ಣಯಕ್ಕಾಗಿ ನಡೆಯುವ ಶಬ್ದವ್ಯವಹಾರ. ನೋಡಿ ಕಥಾ.

**ವಾಕ್ಯಸ್ಫೋಟ-** ನೋಡಿ ಸ್ಫೋಟ.

**ವಿತಂಡಾ-** ದುರ್ವಾದಿಯನ್ನು ನಿಗ್ರಹಿಸುವ ಸಂದರ್ಭದಲ್ಲಿ ನಡೆಸುವ ಪಂಡಿತರ ಶಬ್ದವ್ಯವಹಾರ. ಪರವಾದದ ಖಂಡನೆಯೇ ಪ್ರಧಾನ. ಸ್ವಮತದ ವಿವರಣೆಗೆ ಎಡೆಯಿಲ್ಲ. ನೋಡಿ ಕಥಾ .

**ವಿಕಲ್ಪಸಮಾ-** ನೋಡಿ ಜಾತ್ಯುತ್ತರ.

**ವ್ಯಭಿಚಾರ**- ನೋಡಿ ಅನೈಕಾಂತಿಕ.

**ವ್ಯತಿರೇಕವ್ಯಾಪ್ತಿ**- ಸಾಧ್ಯಾಭಾವಕ್ಕೂ ಹೇತ್ವಭಾವಕ್ಕೂ ವ್ಯಾಪ್ತಿಯನ್ನು ತಿಳಿಸುವುದು. ಹೆಚ್ಚಿನ ವಿವರಕ್ಕೆ 'ದೃಷ್ಟಾಂತ' ನೋಡಿ.

**ವ್ಯಾಪ್ತಿ**- ಅವಿನಾಭಾವ, ಎರಡು ವಸ್ತುಗಳ ವಿವಕ್ಷಿತ ಸ್ಥಳದಲ್ಲಿ ವಿವಕ್ಷಿತ ಕಾಲದಲ್ಲಿ ನ ಸಾಹಚರ್ಯ. ಧೂಮವು ಇರುವಲ್ಲಿ ವಹ್ನಿಯು ಇರುವುದು, ಇದು ಕಾರ್ಯಕಾರಣಭಾವ ನಿಮಿತ್ತವಾದ ಸಾಹಚರ್ಯ. ರಸವಿರುವಲ್ಲಿ ರೂಪ ಇರುವುದು, ರೂಪ ಇರುವಲ್ಲಿ ಎಲ್ಲಡೆಯೂ ರಸವಿರುವುದು ಎಂಬ ನಿಯಮವಿಲ್ಲ, ಕಲ್ಲಿನಲ್ಲಿ ರೂಪವಿದೆ ರಸವಿಲ್ಲ. ಆದರೆ ಹಣ್ಣಿನಲ್ಲಿ ರಸವಿದೆ ಅಲ್ಲಿ ರೂಪವು ಇದ್ದೇ ಇರುವುದು. ಇವುಗಳಿಗೆ ಕಾರ್ಯಕಾರಣಾದಿಭಾವವು ಇಲ್ಲದಿದ್ದರೂ ರಸವು ರೂಪವನ್ನು ಬಿಟ್ಟಿರಲಾರದು. ನಮ್ಮ ವ್ಯವಹಾರದಲ್ಲಿಯೂ ಸಹ 'ಊರಿಗೆ ಬಂದವಳು ನೀರಿಗೆ ಬರುವದಿಲ್ಲವೇ?' ಇತ್ಯಾದಿ. ಪದಾರ್ಥಗಳಲ್ಲಿ ಕಾಣುವ ಇಂತಹ ಅನೇಕವಿಧವಾದ ಸಾಹಚರ್ಯಗಳನ್ನು ಊಹಿಸಿಕೊಳ್ಳುವುದು. ಇದು ಎರಡು ವಿಧ. ವ್ಯತಿರೇಕವ್ಯಾಪ್ತಿ, ಅನ್ವಯವ್ಯಾಪ್ತಿ. ವಿವರಕ್ಕೆ 'ದೃಷ್ಟಾಂತ' ನೋಡಿ.

**ವಿಜಾತಿ**- ವಿರುದ್ಧಧರ್ಮವನ್ನು ಹೊಂದಿದ ಪದರ್ಥ. ಜಲವು ವಹ್ನಿಯಿಂದ ವಿಜಾತಿ. ಅನುಷ್ಣತ್ವ-ಉಷ್ಣತ್ವರೂಪ ವಿರುದ್ಧಗುಣಗಳನ್ನು ಹೊಂದಿದ ಪದಾರ್ಥ. ಜಲ ಮತ್ತು ಅಗ್ನಿಗಳು ದ್ರವ್ಯತ್ವೇನ ಸಜಾತೀಯ ಪದಾರ್ಥಗಳು, ಆದರೆ ಜಲತ್ವ-ವಹ್ನಿತ್ವ ಅಥವಾ ಅನುಷ್ಣತ್ವ-ಉಷ್ಣತ್ವ ಈ ಮುಂತಾದ ಧರ್ಮದ ವಿವಕ್ಷಾದಿಂದ ವಿಜಾತೀಯಗಳು.

**ವಿಜ್ಞಾನ**- ಜ್ಞಾನವಿಶೇಷ. ಬೌದ್ಧರಲ್ಲಿ ಕೆಲವರನ್ನು 'ವಿಜ್ಞಾನವಾದಿಗಳು' ಎಂದು ವ್ಯವಹೃತರಾಗುವರು. ಬ್ರಹ್ಮನನ್ನು 'ವಿಜ್ಞಾನಘನ' ಎಂದು ವೇದಾಂತಿಗಳು ಹೇಳುವರು.

**ವಿಜಾತೀಯಸಂವಾದ**- ನೋಡಿ ಸಂವಾದ.

**ವಿಪರ್ಯಯ**- ವಿರುದ್ಧಜ್ಞಾನ.

**ವಿಪ್ರತಿಪತ್ತಿ**- ವಿವಾದ.

**ವಿಪ್ರಲಂಭಕ**- ಮೋಸಗಾರ.

**ವಿಶೇಷ**- ಅಘಟಿತಘಟನಾಶಕ್ತಿ. ವಿರುದ್ಧಧರ್ಮಗಳನ್ನು ಏಕತ್ರ ಸಮಾವೇಶಗೊಳಿಸುವ ಶಕ್ತಿ, ಇದು ಎಲ್ಲ ಪಾದರ್ಥಗಳಲ್ಲಿ ಇರುವ ಧರ್ಮವಿಶೇಷ. ಶ್ರೀಮಧ್ವಾಚಾರ್ಯರು ಉಪದೇಶಿಸಿರುವ ತತ್ವಗಳಲ್ಲಿ ಒಂದು. ನಿತ್ಯಪದಾರ್ಥಗಳಲ್ಲಿರುವ ಧರ್ಮವಿಶೇಷ ಎಂದು ನೈಯಾಯಿಕರು

**ಶಾಬ್ದಬೋಧ**- ಶಬ್ದದಿಂದ ಪ್ರಾಪ್ತವಾಗುವ ಅರಿವನ್ನು 'ಶಾಬ್ದಬೋಧ' ಎನ್ನುವರು. ಶಾಬ್ದಬೋಧವು ಪ್ರಾಪ್ತವಾಗಲು ಆ ಮುನ್ನ ಶಬ್ದ ಮತ್ತು ಪದಾರ್ಥಗಳಲ್ಲಿರಬಹುದಾದ ವಾಚ್ಯ-ವಾಚಕಭಾವ ಸಂಬಂಧದ ಜ್ಞಾನವು ಬೇಕು.

**ವೃತ್ತಿ**- ಶಬ್ದದಿಂದ ಪ್ರಾಪ್ತವಾಗುವ ಅರಿವಿನ ಬಗೆ. ಶಕ್ತಿವೃತ್ತಿ ಲಕ್ಷಣಾವೃತ್ತಿ ಎಂದು ಎರಡು ಬಗೆ. ಮನೋಜನ್ಯಜ್ಞಾನವನ್ನು ವೃತ್ತಿಜ್ಞಾನ ಎನ್ನುವರು.

**ವ್ಯಂಜಕ**- ಪದಾರ್ಥಗಳ ಅರಿವಿಗೆ ಸಹಾಯಕವಾದದ್ದು. ಆಲೋಕವು ಘಟಾದಿ ಪದಾರ್ಥದ ವ್ಯಂಜಕ. ಧ್ವನಿಯು ವರ್ಣದ ವ್ಯಂಜಕ.

**ವ್ಯಭಿಚಾರ**- ನೋಡಿ ಅನೈಕಾಂತಿಕ.

**ವ್ಯಾಪ್ಯ**- ತನ್ನಿಂದ ವ್ಯಾಪಕವಾದ ಪದಾರ್ಥದ ವಿವಕ್ಷೆಯಿಂದ ಅಲ್ಪದೇಶದಲ್ಲಿರುವುದು. ಧೂಮವು ವಹ್ನಿಗೆ ವ್ಯಾಪ್ಯ. ವ್ಯಾಪಕವಾದ ವಹ್ನಿಯನ್ನು ಬಿಟ್ಟು ಧೂಮವು ಇರದು.

**ವ್ಯಾಪಕ**- ತನ್ನಿಂದ ವ್ಯಾಪ್ಯವಾದ ಪದಾರ್ಥದ ವಿವಕ್ಷೆಯಿಂಇದ ಅಧಿಕದೇಶದಲ್ಲಿರುವುದು. ವಹ್ನಿಯು ಧೂಮಕ್ಕೆ ವ್ಯಾಪಕ. ವ್ಯಾಪ್ಯವಾದ ಧೂಮವಿದ್ದಲ್ಲಿ ವಹ್ನಿ ಇದ್ದೇ ಇರುವುದು.

**ವ್ಯಾಪ್ಯವೃತ್ತಿ**- ತಾನು ಇರುವಲ್ಲಿ ತನ್ನ ಅಭಾವವು ಇಲ್ಲದಿರುವಿಕೆ. ಘಟದಲ್ಲಿ ಘಟತ್ವವು ವ್ಯಾಪ್ಯವಾಗಿದೆ. ಅದೇ ಕಪಿಸಂಯೋಗವು ವೃಕ್ಷದಲ್ಲಿ ಅವ್ಯಾಪ್ಯವಾಗಿದೆ.

**ವ್ಯುತ್ಪತ್ತಿ**- ಆ ಆ ವಿಷಯಕ್ಕೆ ಸಂಬಂಧಿಸಿದ ವ್ಯವಹಾರಜ್ಞಾನ. 'ಈ ವ್ಯಕ್ತಿಯು ವ್ಯುತ್ಪನ್ನ' ಇತ್ಯಾದಿ ವ್ಯವಹಾರಗಳನ್ನು ಕಾಣಬಹುದಾಗಿದೆ.

**ವ್ಯಾವಹಾರಿಕಸತ್**- ನೋಡಿ ಸತ್ತಾ.

**ಶಕ್ತಿ**- ಶಬ್ದವಿಶೇಷವು ವಸ್ತು ವಿಶೇಷವನ್ನು ತಿಳಿಸುವ ಬಗೆಯನ್ನು ಶಬ್ದಶಕ್ತಿ ಎಂದು ತಿಳಿಯುವುದು. ಉದಾ. ಈ ಶಬ್ದಕ್ಕೆ ಎಲ್ಲಿ ಶಕ್ತಿ?, ಗೋ ಶಬ್ದವು ಸಾಸ್ನಾದಿಗಳನ್ನು ಹೊಂದಿದ ದ್ರವ್ಯದಲ್ಲಿ ಶಕ್ತವಾಗಿದೆ. ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು.

**ಶೂನ್ಯವಾದಿ**- ಬೌದ್ಧಮತಾನುಯಾಯಿಗಳು.

**ಸಂಗತಿ**- ಸಮಂಜಸತೆ, ಶಾಸ್ತ್ರಸಂಗತಿ, ಅಧಿಕರಣಸಂಗತಿ, ಪಾದಸಂಗತಿ, ವಾಕ್ಯಸಂಗತಿ ಇತ್ಯಾದಿ ಪ್ರಯೋಗಗಳನ್ನು ಕಣಬಹುದು.

**ಸಂದಿಗ್ಧಾಸಿದ್ಧಿ**- ಅನುಮಾನದೋಷಗಳಲ್ಲಿ ಒಂದು. ಪಕ್ಷದಲ್ಲಿ ಸಾಧ್ಯದ ಅಸ್ತಿತ್ವದ ಸಂದೇಹವು ಪ್ರಾಪ್ತವಾದಲ್ಲಿ ಈ ದೋಷವನ್ನು ಹೇಳಲಾಗುವುದು.

**ಸಂಯೋಗ**- ಸಂಬಂಧ ವಿಶೇಷ. ದ್ರವ್ಯದ್ವಯಗಳಲ್ಲಿರು ಸಂಬಂಧ. ಉದಾ. ವೃಕ್ಷಕಪಿಸಂಯೋಗ.

**ಸಂವಾದ**- ಪ್ರಮಾಣಾಂತರದ ಅನುಮೋದನೆ. ಇದು ಎರಡು ವಿಧ. ಸಜಾತೀಯ ವಿಜಾತೀಯ ಎಂದು. 'ಇದು ಘಟ' ಎಂಬ ಅರಿವು ಪ್ರಾಪ್ತವಾದಾಗ, 'ಅಹುದು ಅಲ್ಲಿ ಘಟವಿದೆ' ಎಂದು ಮತ್ತೊಬ್ಬನು ಹೇಳಿದಲ್ಲಿ ಈ ವಚನವು ಸಜಾತೀಯ ಸಂವಾದ ಎನ್ನುವರು. 'ಇದು ಸರಿಯಾದ

ಮಾರ್ಗ' ಎಂದು ಓರ್ವನು ಹೇಳುವನು. ಆಗ ಹಿರಿಯರು ಒಬ್ಬರು ನುಡಿಯುವರು 'ಈ ವ್ಯಕ್ತಿಯು ಸತ್ಯಭಾಷಿ' ಎಂದು, ಇದು ವಿಜಾತೀಯ ಸಂವಾದ. ಸಜಾತೀಯ ಸಂವಾದದಲ್ಲಿ ಮೊದಲ ಅರಿವಿಗೆ ಯಾವುದು ವಿಷಯವೋ ಎರಡನೆಯ ಅರಿವಿಗೂ ಅದೇ ವಿಷಯವಾಗಿದೆ. ವಿಜಾತೀಯ ಸಂವಾದದಲ್ಲಿ ಮೊದಲ ಅರಿವಿನಲ್ಲಿ ವಿಷಯ ಮಾರ್ಗ, ಎರಡನೆಯ ಅರಿವಿನಲ್ಲಿ ವ್ಯಕ್ತಿಯ ಆಪ್ತತ್ವ. ವಿಷಯಗಳು ವಿಭಿನ್ನವಾಗಿವೆ ಎನ್ನುವದನ್ನು ಗಮನಿಸುವುದು.

**ಸಗುಣಬ್ರಹ್ಮ-** ಅದ್ವೈತವಾದಿಗಳ ಅಭಿಮತದಂತೆ ಎರಡು ವಿಧ ಬ್ರಹ್ಮರು. ಓರ್ವ ನಿರ್ಗುಣ, ಮತ್ತೋರ್ವ ಸಗುಣ. ನಿರ್ಗುಣಬ್ರಹ್ಮನು ಮುಖ್ಯಬ್ರಹ್ಮ, ಅಮುಖ್ಯನು ಸಗುಣ. ಸಕಲಜೀವರು, ರಾಮಕೃಷ್ಣಾದಿರೂಪಗಳು, ಈ ಮುಂತಾದವರೆಲ್ಲರೂ ಸಗುಣಬ್ರಹ್ಮ. ನಿರ್ಗುಣಬ್ರಹ್ಮನು ಅವೇದ್ಯ, ಅಶಬ್ದ, ಇತ್ಯಾದಿಯಾಗಿ ತಿಳಿಸಲಾಗಿದೆ.

**ಸಜಾತಿ-** ಒಂದೇ ತರಹದ ಗುಣಗಳನ್ನು ಹೊಂದಿದ ಪದಾರ್ಥಗಳು. ಘಟಕ್ಕೆ ಪಟಾದಿ ಪದಾರ್ಥಗಳು ಪಾರ್ಥಿವದ್ರವ್ಯತ್ವೇನ ಸಜಾತೀಯಗಳು. ಪೃಥ್ವಿಗೆ ಗಗನಾದಿಗಳು ಭೂತತ್ವೇನ ಸಜಾತೀಯಗಳು. ವಿವರಕ್ಕೆ 'ವಿಜಾತಿ' ನೋಡಿ,

**ಸಜಾತೀಯಸಂವಾದ-** ನೋಡಿ ಸಂವಾದ.

**ಸತ್ತಾ-** ವಸ್ತುವಿನ ಅಸ್ತಿತ್ವ. ದ್ವೈತಿಗಳಲ್ಲಿ ಸತ್ತಿನಲ್ಲಿ ವಿಭಾಗಗಳು ಇಲ್ಲ. ಎಲ್ಲ ಪದಾರ್ಥಗಳಲ್ಲಿ ಇರುವ ಸತ್ ಒಂದೇ ತರಹವಾಗಿದೆ. ಅದ್ವೈತವಾದಿಗಳು ಸತ್ತ್ರೈವಿಧ್ಯವನ್ನು ಒಪ್ಪಿರುವರು. ಪ್ರಾತಿಭಾಸಿಕಸತ್, ವ್ಯಾವಹಾರಿಕಸತ್ ಮತ್ತು ಪಾರಮಾರ್ಥಿಕಸತ್ ಎಂದು. ಹಗ್ಗವು ಹಾವಾಗಿ ಕಂಡಾಗ, ಆ ಹಗ್ಗವು ಪ್ರಾತಿಭಾಸಿಕಸತ್ತನ್ನು ಹೊಂದಿರುವುದು, ಈ ಜಗದಲ್ಲಿರುವುದು ವ್ಯಾವಹಾರಿಕಸತ್, ಶುದ್ಧಬ್ರಹ್ಮನು ಪಾರಮಾರ್ಥಿಕಸತ್.

**ಸಮಯ-** ಶಾಸ್ತ್ರ ಎಂಬ ತಿರುಳಿನಲ್ಲಿದೆ. ಬೌದ್ಧಸಮಯ ಇತ್ಯಾದಿಪ್ರಯೋಗಗಳನ್ನು ಕಾಣಬಹುದು. ಸಮಯ ಬಂಧ ಎಂದೂ ಪ್ರಯೋಗವಿದೆ. ಇಲ್ಲಿ ಸಮಯ ಎಂದರೆ ಕೆಲವು ನಿಯಮಗಳು ಎಂಬ ಭಾವ. ಪ್ರಸಿದ್ಧವಾದ ಅರ್ಥ ಕಾಲ ಎಂದು.

**ಸಮವಾಯ-** ನ್ಯಾಯಮತೀಯರು ಒಪ್ಪಿರುವ ಸಂಬಂಧವಿಶೇಷ. ಅವಯವ-ಅವಯವಿ-ಗಳಿಗೂ, ಗುಣ-ಗುಣಿಗಳಿಗೂ ಈ ಮುಂತಾದ ಪದಾರ್ಥಗಳಲ್ಲಿರುವ ಸಂಬಂಧ.

**ಸಮಾಖ್ಯಾ-** ಪ್ರಸಕ್ತ ವಾದದ ಸಂವಾದಿಯಾದ ಶಾಸ್ತ್ರಪ್ರಸಂಗಾಂತರ.

**ಸಮಾಧಿ-** ಪ್ರಸಕ್ತ ವಾದದ ತಿರುಳು .'ಇಯಮತ್ರ ಸಮಾಧಿಃ' ಇತ್ಯಾದಿ ಪ್ರಯೋಗಗಳನ್ನು ಕಾಣಬಹುದು.

ಸಮಾಸ- ಸಂಸ್ಕೃತಭಾಷಾದಲ್ಲಿ ಭೂಯುಷ್ಠವಾಗಿರುವ ವ್ಯವಸ್ಥೆಗಳಲ್ಲಿ ಒಂದು. ಎರಡು ಅಥವಾ ಹೆಚ್ಚಿನ ಶಬ್ದಗಳನ್ನು ಒಟ್ಟು ಕೂಡಿಸಿ ಹೇಳುವ ಬಗೆಯನ್ನು ಸಮಾಸ ಎನ್ನುವರು. ಒಟ್ಟುಕೂಡಿದ

ಪದವನ್ನು ಸಮಸ್ತಪದ ಎನ್ನುವರು. ಈ ಸಮಾಸಗಳಲ್ಲಿ ತತ್ಪುರುಷ, ಕರ್ಮಧಾರಯ ಬಹುವ್ರೀಹಿ ದ್ವಂದ ಇತ್ಯಾದಿ ಅನೇಕ ಬಗೆಗಳು ಇವೆ. ಈ ಸಮಾಸಗಳಿಂದ ಸಮಸ್ತಪದದ ಅರ್ಥವು ಸ್ಫುಟಗೊಳ್ಳುವುದು.

**ಸಪಕ್ಷ**- ಸಾಧ್ಯಹೇತುಗಳ ಸಾಹಚರ್ಯವು ಉಭಯವಾದಿಗಳಿಗೆ ನಿಶ್ಚಿತವಾದ ಸ್ಥಳ.

**ಸರ್ವನಾಮ**- ಸಃ (ಅವನು), ಅಹಂ (ನಾನು), ತ್ವಂ (ನೀನು) ಈ ಮುಂತಾದ ಶಬ್ದಗಳನ್ನು ಸರ್ವನಾಮಶಬ್ದಗಳು ಎಂದು ವ್ಯವಹರಿಸುವರು. ಪದಾರ್ಥವಿಶೇಷವನ್ನು ಸೂಚಿಸದೇ ಪದಾರ್ಥಸಾಮಾನ್ಯವನ್ನು ಬೋಧಿಸುವ ಶಬ್ದವಿಶೇಷ. ತತ್, ಇದಮ್, ಅಸ್ಮದ್, ಯುಷ್ಮದ್‌ಇತ್ಯಾದಿಶಬ್ದಗಳನ್ನು ಸರ್ವನಾಮ ಶಬ್ದ ಎಂದು ತಿಳಿಯುವುದು.

**ಸಾಧ್ಯಾಸಿದ್ಧಿ**- ನೋಡಿ ಅಸಿದ್ಧಿ.

**ಸಾಪೇಕ್ಷ**- ತನ್ನ ಅರಿವಿಗೆ ಅಥವಾ ಅಸ್ತಿತ್ವದಲ್ಲಿ ಮತ್ತೊಂದು ವಸ್ತುವನ್ನು ಬಯಸಿದಲ್ಲಿ ಸಾಪೇಕ್ಷ ಎನ್ನುವರು. ಉದಾ- 'ರಾಮನು ತಂದೆ' ಎಂದಲ್ಲಿ 'ರಾಮನು ಯಾರ ತಂದೆ?' ಎಂದು ಪ್ರಶ್ನೆಯು ಪ್ರಾಪ್ತವಾಗುವುದು. ಈ ತಂದೆಯ ಅರಿವು ಮತ್ತೊಂದರ ಅರಿವನ್ನು ಬಯಸುತ್ತದೆ. ಮತ್ತು 'ಹಿಮಾಲಯವು ಉತ್ತರದಲ್ಲಿದೆ' ಇದು ಭಾರತೀಯರ ಅಪೇಕ್ಷದಿಂದ, ಚೀನೀಯರ ಅಪೇಕ್ಷೆಯಿಂದ ಹಿಮಾಲಯವು ದಕ್ಷಿಣದಲ್ಲಿದೆ. ಅನುಮಾನವು ಅನುಮಿತಿಯನ್ನು ಉಂಟುಮಾಡಾಲು ಪ್ರತ್ಯಕ್ಷವನ್ನು ಅಪೇಕ್ಷಿಸುವುದು.

**ಸಾಕ್ಷಿ**- ಜೀವಸ್ವರೂಪ. ಇದನ್ನು ಇಂದ್ರಿಯ ಎಂದೂ ಪರಿಗಣಿಸಲಾಗಿದೆ. ಈ ಇಂದ್ರಿಯದಿಂದ ಪ್ರಾಪ್ತವಾದ ಅರಿವು ಯಥಾರ್ಥವೇ ಆಗಿರುವುದು. ಸುಖ, ದುಃಖ, ಜ್ಞಾನದ ಜ್ಞಾನ, ಜ್ಞಾನದಲ್ಲಿನ ಪ್ರಾಮಾಣ್ಯ ಈ ಮುಂತಾದವು ಸಾಕ್ಷಿಯ ಮುಖ್ಯವಿಷಯಗಳು.

**ಸಿದ್ಧ**- ಪದಾರ್ಥ ಎಂಬ ತಿರುಳಿನಲ್ಲಿದೆ. ಆನಯನ ಮುಂತಾದ ಕ್ರಿಯೆಗಳು ಅಸಿದ್ಧ, ಘಟಪಟಾದಿಗಳು ಸಿದ್ಧ ಎಂಬ ಭಾವದಲ್ಲಿ ಈ ವ್ಯವಹಾರ. 'ಶಬ್ದಗಳಿಗೆ ಸಿದ್ಧದಲ್ಲಿ-ಸಿದ್ಧವಾದ ಪದಾರ್ಥಗಳಲ್ಲಿ ವ್ಯುತ್ಪತ್ತಿ, ಕಾರ್ಯದಲ್ಲಿ-ಅನಯನಾದಿಕ್ರಿಯೆಗಳಲ್ಲಿ ವ್ಯುತ್ಪತ್ತಿ' ಇತ್ಯಾದಿ ವ್ಯವಹಾರಗಳನ್ನು ಕಾಣಬಹುದು.

**ಸ್ವಾರ್ಥಾನುಮಾನ**- ನೋಡಿ ಪರಾರ್ಥಾನುಮಾನ.

**ಸ್ಫೋಟ**- ವ್ಯಾಕರಣಶಾಸ್ತ್ರದ ಪಾರಿಭಾಷಿಕ ಶಬ್ದ. ವರ್ಣಗಳಿಂದ ಅಭಿವ್ಯಕ್ತವಾಗುವ, ಪದಾರ್ಥವನ್ನು ತಿಳಿಸುವ, ವರ್ಣಾತಿರಿಕ್ತವಾದ ದ್ರವ್ಯವಿಶೇಷ. 'ಗಚ್ಛತಿ' ಎಂದು ಪ್ರಯೋಗಿಸಿದಾಗ 'ಹೋಗುತ್ತಿದೆ' ಎಂಬ ಅರ್ಥವು ಪ್ರಾಪ್ತವಾಗುವುದು. ಆದರೆ ಇಲ್ಲಿರುವ ಗ, ಚ್ಛ, ತಿ ಈ ಯಾವ ಅಕ್ಷರಗಳಿಂದಲೂ 'ಹೋಗುತ್ತಿದೆ' ಎಂಬ ಅರ್ಥವು ಭಾಸವಾಗುವದಿಲ್ಲ. ಶಾಸ್ತ್ರದ ನಿಯಮದಂತೆ ಈ ಎಲ್ಲ ಅಕ್ಷರಗಳೂ ಉಚ್ಚಾರಣದ ನಂತರ ಪ್ರಕಟವಾಗಿ ಆ ಕೂಡಲೇ ನಷ್ಟವಾಗುವವು. ಹಾಗಾಗಿ ಏಕಕಾಲದಲ್ಲಿರದ ಈ ಅಕ್ಷರಗಳು ಅಭಿಮತಾರ್ಥವನ್ನು ಹೇಗೆ ಬೋಧಿಸುವವು? ಎಂಬ

ಸಂದೇಹದ ಪರಿಹಾರವನ್ನು ವೈಯಾಕರಣಿಗಳು 'ಪದಸ್ಫೋಟ' ಎಂಬುವದನ್ನು ಒಪ್ಪಿ ಪರಿಹರಿಸುವರು. ಪದೋಚ್ಚಾರಣದ ನಂತರದಲ್ಲಿ ಸ್ಫೋಟವು ವ್ಯಂಗವಾಗುವುದು ಎಂದು. ಇದರಂತೆ ವಾಕ್ಯಸ್ಫೋಟವನ್ನೂ ಒಪ್ಪಿರುವರು.

**ಹೇತು-** ಅನುಮಾನದ ಅಂಗಗಳಲ್ಲಿ ಒಂದು. ಜ್ಞಾಪಕ, ಕಾರಣ, ಲಿಂಗ, ಉಪಪತ್ತಿ, ಯುಕ್ತಿ, ಸಾಧ್ಯದಿಂದ ವ್ಯಾಪ್ಯವಾದದ್ದು ಎಂದು ವ್ಯವಹೃತವಾಗುವುದು. ಸಾಧ್ಯಸೂಚಕ.

**ಹೇತ್ವಸಿದ್ಧಿ-** ಹೇತುವಿನ ಸ್ವರೂಪವೇ ಅಸಿದ್ಧವಾಗಿರುವುದು, ಹೇತುವು ಯೋಗ್ಯವಾದ ಸ್ಥಳದಲ್ಲಿ ಸಿದ್ಧಿಯಾಗದಿರುವುದು.

**ಹೇತುಗರ್ಭವಿಶೇಷಣ-** 'ಕಾರಣದಿಂದ ಕೂಡಿದ ವಿಶೇಷಣ' ಎಂಬ ತಿರುಳಿನಲ್ಲಿದೆ. 'ದುರ್ಬಲನಾದ ಈತನು ಆತನನ್ನು ಸಂಹರಿಸಲಾರ' ಈ ವಾಕ್ಯದಲ್ಲಿ ದುರ್ಬಲನಾದ ಎನ್ನುವದು ವಿಶೇಷಣ. ಈ ವಿಶೇಷಣವು 'ಆತನನ್ನು ಸಂಹಾರಕನಲ್ಲ ' ಎನ್ನುವದನ್ನು ಪುಷ್ಟೀಕರಿಸುವುದು. ಇಂತಹ ವಿಶೇಷಣವನ್ನು ಈ ರೀತಿಯಲ್ಲಿ ವ್ಯವಹರಿಸಲಾಗುವುದು.

**ಜ್ಞಾತತಾ-** ಜ್ಞಾನಕ್ಕೆ ವಿಷಯವಾದದ್ದು.

**ಜ್ಞಪ್ತಿ-** ಜ್ಞಾನ.

**ಜ್ಞಾನಲಕ್ಷಣಪ್ರತ್ಯಾಸತ್ತಿ-** ಲಕ್ಷಣ- ಸ್ವರೂಪ. ಪ್ರತ್ಯಾಸತ್ತಿ- ಸನ್ನಿಕರ್ಷ ಎಂದು ಅರ್ಥ. ಒಟ್ಟಿನಲ್ಲಿ ಜ್ಞಾನವೆಂಬ ಸನ್ನಿಕರ್ಷ ಎಂದು. ಯಾವುದೇ ವಸ್ತುವಿನ ಅರಿವು ಪ್ರಾಪ್ತವಾಗಲು ವಸ್ತುವಿಗೂ ಇಂದ್ರಿಯಕ್ಕೂ ಸನ್ನಿಕರ್ಷಾದಿಗಳು ಅವಶ್ಯಕ. ಆದರೆ ಕೆಲವು ಸಂದರ್ಭದಲ್ಲಿ ಹಾಗಾಗದೆ ಅರಿವು ಪ್ರಾಪ್ತವಾದದ್ದು ಕಂಡಿದೆ. ಗಂಗೆಯನ್ನು ಕಂಡೊಡನೆ 'ಗಂಗೆಯ ನೀರು ಅತಿತಂಪು' ಎಂಬ ಅರಿವು ಪ್ರಾಪ್ತವಾಗುವುದು ಎಲ್ಲರ ಅನುಭವದಲ್ಲಿದೆ. ಆದರೆ ನೀರಿಗೂ ಕಣ್ಣಿಗೂ ಸಂಪರ್ಕವಿದೆ ನೀರು ಎಂಬ ಅರಿವು ಬರಲು ಸಾಮಗ್ರಿಗಳು ಇವೆ. ಆದರೆ ಅದರಲ್ಲಿನ ತಂಪಿನ ಅರಿವಿಗೆ ಕಾರಣವಾದ ತ್ವಗಿಂದ್ರಿಯದ ಸಂಪರ್ಕವಿಲ್ಲ. ಆದರೂ ಪ್ರಾಪ್ತವಾಗಿದೆ. ಆದುದರಿಂದ ಇಲ್ಲಿ ಪ್ರತಿಭಾತವಾದ ತಂಪಿನ ಅರಿವು ಜ್ಞಾನಲಕ್ಷಣಪ್ರತ್ಯಾಸತ್ತಿಯಿಂದ ಪ್ರಾಪ್ತ ಎನ್ನುವರು. ಅಂದರೆ, ಈ ಹಿಂದೆ ಅನುಭೂತವಾದ ಪದಾರ್ಥದ ಸಂಸ್ಕಾರವು ಮನಸ್ಸಿನಲ್ಲಿದ್ದು, ಅದು ಪ್ರಕೃತದಲ್ಲಿ ಉದ್ಭೂತವಾಗಿ, ಸ್ಮರಣೆಯು ಪ್ರಾಪ್ತವಾಗುವುದು. ಪ್ರಾಪ್ತವಾದ ಸ್ಮರಣೆಯು ಪ್ರಸಕ್ತವಾದ ಅನುಭವಜನಕ ಸಾಮಗ್ರಿಗೆ ವಿಶೇಷತೆಯನ್ನು ಒದಗಿಸಿ, ಅಸನ್ನಿಕೃಷ್ಟ ಪದಾರ್ಥದ ಅರಿವಿಗೂ ಕಾರಣವಾಗುವ ಬಗೆ ಎಂಬ ಭಾವ.

★ ★ ★